

# ಋಗ್ವೇದಸಂಹಿತಾ

ಭಾಗ—೪

ಪ್ರಥಮಾಷ್ಟಕದಲ್ಲಿ ಮೂರನೆಯ ಅಧ್ಯಾಯವು

**ಪ್ರಥಮ ಮಂಡಲದ ಸೂಕ್ತಗಳು ೩೩-೪೬**

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೪

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದ ಸಂಹಿತಾ.

( ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ )

ಭಾಗ—೪

## ಪ್ರಥಮಾಷ್ಟಕದಲ್ಲಿ ಮೂರನೆಯ ಅಧ್ಯಾಯವು.

ಪ್ರಥಮ ಮಂಡಲದ ಸೂಕ್ತಗಳು—೩೩ . ೪೬

---

*Translated with Exhaustive Critical Notes*
*by*

ASTHANA MAHAVIDWAN

H. P. VENKATA RAO.
*Editor.*

---

*Printed at*
SREE VINAYAK PRINTING WORKS, MYSORE.
1949

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು.**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

ಅಧ್ಯಕ್ಷರು :

ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಿಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು.**

Tranlastor & Editor :

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್**

**ಸಹಾಯಕ ವಿದ್ವನ್ಮಂಡಲಿ**

1. **ಆಸ್ಥಾನ್ ವಿದ್ವಾನ್ ಬ್ರಾ॥ ಶ್ರೀ॥ ಲಕ್ಷ್ಮಣಾಚಾರ್ಯರು,** ವ್ಯಾಕರಣ ವಿದ್ವಾನ್.
2. **ಆಸ್ಥಾನ್ ವಿದ್ವಾನ್ ಬ್ರಾ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು,** ಜ್ಯೋತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು,
3. **ಬ್ರಾ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು,** ಋಗ್ವೇದ ಘನಪಾಠಿಗಳು.
4. **ಬ್ರಾ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು,** ಶ್ರೌತ ವಿದ್ವಾನ್.
5. **ಬ್ರಾ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು,** ಮೀಮಾಂಸಾದರ್ಶನ ಪಂಡಿತರು
6. **ಬ್ರಾ॥ ಶ್ರೀ॥ G. N. ಚಕ್ರವರ್ತಿ M. A.**
   Professor of Sanskrit. St. Philomina's College, Mysore.
7. **ಬ್ರಾ॥ ಶ್ರೀ॥ ವೆಂಕಟರಮಣಾಚಾರ್, M. A., B. T.,** ಸಾಹಿತ್ಯ ವಿದ್ವಾನ್.
8. **ಬ್ರಾ॥ ಶ್ರೀ॥ S. ರಂಗನಾಥನ್,** ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀ ಭಂಡಾರ.
9. **ಬ್ರಾ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್,** ಸಾಹಿತ್ಯ ವಿದ್ವಾನ್,
   Govt Oriental Research Institute, Mysore.
10. **ಬ್ರಾ॥ ಶ್ರೀ॥ S ಸೀತಾರಾಮಶಾಸ್ತ್ರಿಗಳು,** ರಿಟೈರ್ಡ್ ಪಂಡಿತರು.
    Govt. Oriental Research Institute, Mysore.



ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು**

ವೇದವಿಮರ್ಶನ ವಿದ್ವನ್ಮಂಡಲಿಯ ಅಧ್ಯಕ್ಷರು

# ಪೀ ಠಿ ಕೆ.

ಋಗ್ವೇದಸಂಹಿತೆಯ ಭಾಗ ೧. ಪೀಠಿಕಾಪ್ರಕರಣದಲ್ಲಿ ಋಗ್ವೇದದ ಋಷಿಗಳ ವಿಷಯವನ್ನು ನಾವು ಪ್ರಸ್ತಾಪಮಾಡಿದ್ದರೂ ಇಲ್ಲಿ ಆ ಸಂಬಂಧವಾಗಿ ಕೆಲವು ವಿಷಯಗಳನ್ನು ಹೇಳಬಯಸುವೆವು.

' ಯಸ್ಯ ವಾಕ್ಯಂ ಸ ಋಷಿಃ ' ಎಂಬುದಾಗಿ ಕಾತ್ಯಾಯನರು ತಮ್ಮ ಸರ್ವಾನುಕ್ರಮಣಿಯಲ್ಲಿ ಋಷಿಶಬ್ದದ ನಿರ್ವಚನವನ್ನು ಹೇಳಿರುತ್ತಾರೆ. ಅಂದರೆ ಸೂಕ್ತರೂಪವಾದ ವಾಕ್ಯವು ಯಾರ ಉಕ್ತಿಯೋ ಅವರು ಅದರ ಋಷಿಗಳೆಂದರ್ಥ. ಆದರೆ ಈ ಋಷಿಗಳ ಮತ್ತು ಅವರ ಉಕ್ತಿಗಳ ನಿಸ್ಸಂಶಯವಾದ ಜ್ಞಾನವು ವೇದಕಾಲದ ಎಲ್ಲಾ ಜನರಿಗೂ ವಂಶಾನುಗವಾಗಿ ಇದ್ದೇ ಇದ್ದುದರಿಂದ ಮೇಲಿನ ನಿರ್ವಚನದ ಪ್ರಕಾರ ಯಾವ ವಾಕ್ಯದಲ್ಲೂ ಸಹ ಅದರ ಉಕ್ತಿಕಾರರ ಹೆಸರು ಸೂಚಿತವಾಗಿಯೇ ಇಲ್ಲ. ಆದುದರಿಂದಲೇ ಋಗ್ವೇದದ ಸಂಗ್ರಹಕಾರರಿಗೂ ಸಹ ಕಾತ್ಯಾಯನರ ಸರ್ವಾನುಕ್ರಮಣಿಯಂತೆ ಈ ಋಷಿಗಳ ಪಟ್ಟಿಯನ್ನೂ ಅವರ ಕೃತಿಗಳನ್ನೂ ವಿಶದವಾಗಿ ಹೇಳುವ ಆವಶ್ಯಕತೆ ಇರಲಿಲ್ಲ. ಆದರೆ ಅನೇಕ ಶತಮಾನಗಳನಂತರ ಈ ಎಲ್ಲಾ ಸೂಕ್ತಗಳ ದೇವತೆಗಳು, ವಿನಿಯೋಗ, ಛಂದಸ್ಸು ಇವುಗಳೊಡನೆ ಈ ಋಷಿಗಳ ಅನುಕ್ರಮಣಿಯ ಆವಶ್ಯಕತೆಯೂ ಕಂಡುಬಂದಿತು.

ಆಶ್ವಲಾಯನರು ತಮ್ಮ ಗೃಹ್ಯಸೂತ್ರದ ತರ್ಪಣಾಧ್ಯಾಯದಲ್ಲಿ (೩-೪) ಸಂಕ್ಷೇಪವಾಗಿ ಋಗ್ವೇದದ ಮುಖ್ಯ ಋಷಿಗಳ ಪಟ್ಟಿಯೊಂದನ್ನು ಕೊಡುತ್ತಾರೆ. ಅದರಲ್ಲಿ—

**' ಅಥ ಋಷಯಃ '** (೧) **ಶತರ್ಚಿನಃ,** **(೨) ಮಾಧ್ಯಮಾಃ** **(೩) ಗೃತ್ಸಮದಃ** **(೪) ವಿಶ್ವಾಮಿತ್ರಃ** **(೫) ವಾಮದೇವಃ** **(೬) ಅತ್ರಿಃ** **(೭) ಭರದ್ವಾಜಃ** **(೮) ವಸಿಷ್ಠಃ** **(೯) ಪ್ರಗಾಥಾಃ** **(೧೦) ಪಾವಮಾನ್ಯಃ** **(೧೧) ಕ್ಷುದ್ರಸೂಕ್ತಾಃ** **(೧೨) ಮಹಾಸೂಕ್ತಾಃ**

ಎಂಬ ವಿಭಾಗಗಳಿರುವುವು. ಈ ಪಟ್ಟಿಯನ್ನೇ ತೆಗೆದುಕೊಂಡು ಕಾತ್ಯಾಯನರ ವ್ಯಾಖ್ಯಾಕಾರರಾದ ಷಡ್ಗುರು ಶಿಷ್ಯರು ವಿಮರ್ಶಿಸುತ್ತಾರೆ. ಅವರ ವಿಮರ್ಶೆಯ ಪ್ರಕಾರ ಮೊದಲನೆಯ ಮಂಡಲದ ಋಷಿಗಳೆಲ್ಲಾ ಶತರ್ಚಿನರೆಂದೂ, ೨ ರಿಂದ ೯ ನೆಯ ಮಂಡಲದ ಋಷಿಗಳು ಮಾಧ್ಯಮರೆಂದೂ ೧೦ ನೆಯ ಮಂಡಲದ ಋಷಿಗಳು ಕ್ಷುದ್ರ ಸೂಕ್ತರು ಮತ್ತು ಮಹಾಸೂಕ್ತರೆಂದೂ ಹೇಳಬೇಕಾಗುತ್ತದೆ. ಶತರ್ಚಿನರೆಂದರೆ ಸ್ವಲ್ಪ ಹೆಚ್ಚುಕಡಿಮೆ ನೂರು ಋಕ್ಕುಗಳಿಗೆ ಋಷಿಯಾದವರೆಂದರ್ಥವು. ಎರಡನೆ ಮಂಡಲದಿಂದ ಏಳನೆಯದರವರೆಗಿನ ಋಷಿಗಳು ಗೃತ್ಸಮದ, ವಿಶ್ವಾಮಿತ್ರ, ವಾಮದೇವ, ಅತ್ರಿ, ಭರದ್ವಾಜ, ವಸಿಷ್ಠ ಎಂಬುವರು ಅಥವಾ ಅವರ ವಂಶದವರು. ಇವರನ್ನು ಮಾಧ್ಯಮರೆಂದು ಹೇಳುವರು.

ಎಂಟನೆಯ ಮಂಡಲವೆಲ್ಲಾ ಒಂದೇ ವಂಶದವರ ಕೃತಿಯಲ್ಲ ಎಂಬುದಾಗಿ ಪಾಶ್ಚಾತ್ಯ ಸಿದ್ಧಾಂತಿಗಳ ಅಭಿಪ್ರಾಯ. ಆಶ್ವಲಾಯನರ ಅಭಿಪ್ರಾಯದಲ್ಲಿ ಈ ಮಂಡಲವೆಲ್ಲವೂ ಕಾಣ್ವ ಸಂತತಿಯವರದು ಎಂದು ತಿಳಿಯಬರುತ್ತದೆ. ಈ ಎರಡು ಅಭಿಪ್ರಾಯಗಳಿಗೂ ಸರಿಯಾದ ಕಾರಣವೇನೋ ಇದೆ. ಆಶ್ವಲಾಯನರು ಈ ಮಂಡಲಕಾರರನ್ನು ಪ್ರಗಾಥರೆಂದೇ ಕರೆಯುತ್ತಾರೆ. ಈ ಮಂಡಲದ ಒಟ್ಟು ೧೦೩ ಸೂಕ್ತಗಳಲ್ಲಿ ೧೧ ವಾಲಖಿಲ್ಯ ಸೂಕ್ತಗಳು ಉಳಿದ ೫೦ ಇತರ ಸೂಕ್ತಗಳೂ ಸಹ ಕಾಣ್ವ ಸೂಕ್ತಗಳು. ಆದುದರಿಂದ ಒಟ್ಟಿನಲ್ಲಿ ಈ ಮಂಡಲವನ್ನು ಕಾಣ್ವಮಂಡಲವೆಂದು

ಕರೆಯಬಹುದು. ಪ್ರಗಾಥರೇ ಕಾಣ್ವವಂಶದವರೂ, ಪ್ರಥಮ ಸೂಕ್ತದ ಕರ್ತರೂ ಆಗಿರುವುದರಿಂದ ಆಶ್ವಲಾಯನರು ಎಲ್ಲರನ್ನೂ ಒಟ್ಟಿಗೆ ಪ್ರಗಾಥರೆಂದು ಕರೆದಿರುವುದು ಸಹಜವಾಗಿದೆ.

ಒಂಭತ್ತನೆಯ ಮಂಡಲದ ಋಷಿಗಳೆಲ್ಲರೂ ಪಾವಮಾನಸೂಕ್ತಗಳ ಕರ್ತೃಗಳಾದುದರಿಂದ ಅವರೆಲ್ಲಾ ಒಟ್ಟಿಗೆ ಪಾವಮಾನಿಗಳೆಂದು ಪ್ರಸಿದ್ಧರಾಗಿದ್ದಾರೆ ಇವರೆಲ್ಲರೂ ಇತರ ಮಂಡಲದ ಋಷಿಗಳೇ ಆಗಿರುವರು. ಬೇರೆ ಹೊಸಬರು ಯಾರೂ ಇಲ್ಲ. ಸೋಮದೇವತಾಕವಾದ ಈ ಋಷಿಗಳ ಸೂಕ್ತಗಳೆಲ್ಲವನ್ನೂ ಒಂದುಕಡೆ ಸೇರಿಸಿ ಇದನ್ನು ಒಂಭತ್ತನೆಯ ಮಂಡಲವೆಂದು ಕರೆದಿದ್ದಾರೆ. ಹತ್ತನೆಯಮಂಡಲದ ಸೂಕ್ತಗಳೆಲ್ಲವೂ ಬೇರೆ ಬೇರೆ ವಿಷಯಗಳನ್ನೊಳಗೊಂಡು ಕೆಲವು ಬಹು ಮುಖ್ಯವಾದುವೂ ಇನ್ನ ಕೆಲವು ಸಾಧಾರಣವಾದುವೂ ಆಗಿವೆ. ಆಶ್ವಲಾಯನರು ಈ ಸೂಕ್ತದ ಋಷಿಗಳನ್ನು ಮಹಾಸೂಕ್ತರೆಂದೂ ಕ್ಷುದ್ರಸೂಕ್ತರೆಂದೂ ಕರೆಯುತ್ತಾರೆ. ವ್ಯಾಖ್ಯಾಕಾರರಾದ ಷಡ್ಗುರುಶಿಷ್ಯರು ಋ. ಸಂ. ೧೦–೧೨೯ನೆಯ ನಾಸದಾಸೀತ್ ಎಂಬ ಸೂಕ್ತದವರೆಗಿನ ಎಲ್ಲಾ ಸೂಕ್ತಗಳೂ ಮಹಾಸೂಕ್ತಗಳೆಂದೂ ಉಳಿದವೆಲ್ಲವೂ ಕ್ಷುದ್ರಸೂಕ್ತಗಳೆಂದೂ ವಿಭಾಗಿಸುತ್ತಾರೆ. ಈ ೧೨೯ನೇಯ ಸೂಕ್ತದ ದೈರ್ಘ್ಯವನ್ನೂ ಅದರ ವಿಷಯ ಮಹತ್ತ್ವವನ್ನು ನೋಡಿದರೆ ಅದನ್ನೂ ಮತ್ತು ಅದರಂತೆಯೇ ಇರುವ ಇತರ ದೊಡ್ಡ ಸೂಕ್ತಗಳನ್ನೂ ಸಹ ಮಹಾ ಸೂಕ್ತಗಳೆಂದು ಕರೆಯಬಹುದು. ವ್ಯಾಖ್ಯಾಕಾರರ ಈ ವಿಭಾಗವು ಬಹಳ ಸಮಂಜಸವಾಗಿರುತ್ತದೆ.

ಹೀಗೆ ಮಾಡುವ ವಿಭಾಗವು ಸ್ಥೂಲವಾದ ದೃಷ್ಟಿಯಿಂದ ನೋಡಬಹುದೇ . ಹೊರತು ಪ್ರತಿಮಂಡಲವನ್ನು ಆಯಾ ವಂಶದವರಿಗೇ ಸೇರಿಸುವುದರಲ್ಲಿ ಅಷ್ಟು ನಿಖರವಾದ ನಿಯಮವಿಲ್ಲ. ಉದಾಹರಣೆಗೆ ಮೂರನೆಯ ಮಂಡಲಕ್ಕೆ ಸೇರಬಹುದಾದ ಮಧುಚ್ಛಂದ ವೈಶ್ವಾಮಿತ್ರರ ಸೂಕ್ತಗಳೂ ಎಂಟನೆಯ ಮಂಡಲಕ್ಕೆ ಸೇರಬಹುದಾದ ಮೇಧಾತಿಥಿಃ ಕಾಣ್ವರ ಸೂಕ್ತಗಳೂ ಸಹ ಮೊದಲನೆಯ ಮಂಡಲದಲ್ಲೇ ಅಡಕವಾಗಿವೆ. ಏಳನೆಯ ಮಂಡಲಕ್ಕೆ ಸೇರಬೇಕಾದ ವಸಿಷ್ಠರ ಪೌತ್ರರಾದ ಪರಾಶರರ ಸೂಕ್ತಗಳೂ ಸಹ ಮೊದಲನೆಯ ಮಂಡಲದಲ್ಲೇ ಸೇರಿವೆ. (ಋ. ಸಂ. ೧, ೬೫-೭೩ ) ಆದುದರಿಂದ ಆ ನಿಯಮವು ಅಷ್ಟು ನಿಖರವಾದುದಲ್ಲ. ಪ್ರಾಯಶಃ ಸಂಗ್ರಹಕಾರರು ಆಯಾ, ಋಷಿಗಳಿಗೆ ಸೇರಿದ ಋಕ್ಕುಗಳ ಪರಿಮಾಣವನ್ನನುಸರಿಸಿ ವಿಭಾಗಮಾಡುವುದಕ್ಕೆ ಪ್ರಾರಂಭಿಸಿ ೧೦೦ ಋಕ್ಕುಗಳಿಗೆ ಋಷಿಯಾದವರನ್ನು ಪ್ರಥಮದಲ್ಲಿ ಸೇರಿಸಿರಬಹುದು. ಬಳಿಕ ಈ ಕ್ರಮವು ಸಾಧ್ಯವಲ್ಲವೆಂದು ಅವರಿಗೆ ಕಂಡುಬಂದಿರಬಹುದು. ಆದುದರಿಂದ ಎರಡನೆಯ ಮಂಡಲದಿಂದ ಒಬ್ಬ ಮುಖ್ಯ ಋಷಿ ಮತ್ತು ಅವನ ವಂಶೋತ್ಪನ್ನರ ಸೂಕ್ತಗಳನ್ನು ಒಟ್ಟು ಸೇರಿಸಿ ಒಂದೊಂದು ಮಂಡಲವನ್ನಾಗಿ ವಿಂಗಡಿಸಿರುವರು. ಇದೆಲ್ಲಾ ಆಗಿ ಉಳಿದ ಸಾಧಾರಣ ಸೂಕ್ತಗಳನ್ನೂ, ಸಣ್ಣ ಸಣ್ಣ ಸೂಕ್ತಗಳನ್ನು ಸೇರಿಸಿ ಹತ್ತನೆಯ ಮಂಡಲವು ಸಂಗ್ರಹವಾಗಿರಬಹುದು.

ಹತ್ತನೆಯ ಮಂಡಲದ ಋಷಿಗಳ ಗುಂಪಿನಲ್ಲಿ ಕವಷ ಐಲೂಷರಾದಿಯಾಗಿ ಅನೇಕ ರಾಜರ್ಷಿಗಳೂ, ವತ್ಸಪ್ರಿ, ಭಲಂದನರೆಂಬ ವೈಶ್ಯರೂ ಅತ್ರಿಪುತ್ರಿಯಾದ ಅಪಾಲಗಳೆಂಬ ಸ್ತ್ರೀಯೂ, ಊರ್ಧ್ವಗ್ರಾವರೆಂಬ ಆರ್ಯರ ಗುಂಪಿಗೆ ಸೇರದಿರುವ ಋಷಿಯೂ ಸಹ ಇದ್ದಾರೆ.

ಕೆಲವು ಸೂಕ್ತಗಳಿಗೆ ಕರ್ತೃಗಳ ನಾಮಧೇಯವು ಪ್ರಾಯಶಃ ಮರೆತುಹೋಗಿರಬಹುದು. ಅಂತಹ ಸಂದರ್ಭಗಳಲ್ಲಿ ಕೆಲವು ಕಲ್ಪನಾಕರ್ತೃಗಳನ್ನೂ ನೋಡಬಹುದು. ಉದಾಹರಣೆಗೆ ಪುರುಷಸೂಕ್ತಕ್ಕೆ ನಾರಾಯಣ ಕರ್ತೃತ್ವವೂ, ಋ. ಸಂ. ೧೦–೧೨೩ ನೆಯ ಸೂಕ್ತಕ್ಕೆ ವೇನಕರ್ತೃತ್ವವೂ ಹೀಗೆಯೇ ಉಳಿದ ಕೆಲವು ಸೂಕ್ತಗಳಿಗೆ ಆಯಾ ಸೂಕ್ತಗಳಲ್ಲಿಯೇ ಬರುವ ಮುಖ್ಯವಾದ ಹೆಸರುಗಳೂ ಸೂಚಿತವಾಗಿವೆ. “ ಯಸ್ಯ ವಾಕ್ಯಂ ಸ ಋಷಿಃ ”

ಎಂಬ ನಿಯಮವನ್ನೇ ಅನುಸರಿಸಬೇಕಾದರೆ ಊರ್ವಶೀ ಪುರೂರವಸ್ಸಿನ ಸಂವಾದವಿರತಕ್ಕ ಸೂಕ್ತವೂ ಸಹ ಅವರ ಕೃತಿಯೇ ಎನ್ನಬೇಕಾಗುತ್ತದೆ. ಆದರೆ ಅವರು ಆ ಸೂಕ್ತದ ಕರ್ತೃಗಳೆಂದು ಹೇಳುವುದು ಪಾಶ್ಚಾತ್ಯರ ದೃಷ್ಟಿಯಿಂದ ಸರಿಯಲ್ಲ.

ಅನೇಕ ಸಂದರ್ಭಗಳಲ್ಲಿ ಆಯಾ ಸೂಕ್ತಗಳಲ್ಲಿ ಕಂಡುಬರುವ ಋಷಿಗಳ ಹೆಸರಿನಿಂದ ಆ ಸೂಕ್ತಗಳು ಆ ಋಷಿಗಳ ವಂಶೋತ್ಪನ್ನರ ಕೃತಿಗಳೆಂದು ಹೇಳಬೇಕಾಗುತ್ತದೆ. ಕೆಲವು ಗ್ರಂಥಗಳ ಆಧಾರದ ಪ್ರಕಾರ (೧) ಭೃಗು (೨) ಅಂಗಿರಸ (೩) ವಸಿಷ್ಠ (೪) ಕಾಶ್ಯಪ ಎಂಬ ನಾಲ್ಕು ಗೋತ್ರವು ಮಾತ್ರ ಅತ್ಯಂತ ಪ್ರಾಚೀನವಾದವೆಂದೂ, ಪ್ರಾಯಶಃ ಈ ನಾಲ್ಕೇ ಭಾರತವರ್ಷದ ಪ್ರಥಮವೂ ಮೂಲವೂ ಆದ ಆರ್ಯ ಸಂತತಿಗಳೆಂದೂ ಉಳಿದ ಋಷಿಗಳೆಲ್ಲರೂ ಈ ಗೋತ್ರೋತ್ಪನ್ನರೆಂದೂ ಕೆಲವರ ಅಭಿಪ್ರಾಯವಿರುವುದು.

ವ್ಯಾಖ್ಯಾಕಾರರಾದ ಷಡ್ಗುರು ಶಿಷ್ಯರು ಪುರಾಣಗಳಿಂದಲೂ ಬೃಹದ್ದೇವತೆಯಿಂದಲೂ ಕೆಲವು ಋಷಿಗಳ ಚರಿತ್ರೆಯನ್ನು ಉದಹರಿಸಿ ಅವುಗಳ ಸ್ವಾರಸ್ಯವನ್ನು ವರ್ಣಿಸಿರುತ್ತಾರೆ. ಋಗ್ವೇದದಲ್ಲೇ ವರ್ಣಿತವಾಗಿರುವಂತೆ ವಸಿಷ್ಠ ಮತ್ತು ಅಗಸ್ತ್ಯ ಋಷಿಗಳು ಮಿತ್ರ ಮತ್ತು ವರುಣರಿಂದ ಉತ್ಪನ್ನರಾದರೆಂದೂ ಅವರ ಉತ್ಪತ್ತಿಕ್ರಮವು ಕೆಲವು ವಿಶೇಷಗಳಿಂದ ಕೂಡಿದೆಯೆಂದೂ ತಿಳಿದು ಬರುತ್ತದೆ. ಹೀಗೆಯೇ, ಅತ್ರಿಋಷಿಯ ಪೌತ್ರನಾದ ಶ್ಯಾವಾಶ್ವನು ತನ್ನ ಪ್ರಣಯಿನಿಯಿಂದ ತಿರಸ್ಕೃತನಾದ ಮೇಲೆ ಅದೇ ಕಾರಣದಿಂದ ಹೇಗೆ ಋಷಿಯಾದನೆಂಬ ಅಂಶವೂ, ಹೀಗೆಯೇ ಗೃತ್ಸಮದ ಮುಂತಾದ ಇತರ ಋಷಿಗಳ ವಿಷಯವೂ ಸ್ವಾರಸ್ಯವಾಗಿ ವರ್ಣಿತವಾಗಿದೆ

ಋ ಸಂಹಿತೆಯ ೯-೬೭ ನೆಯ ಸೂಕ್ತದಲ್ಲಿ ಒಂದು ವಿಶೇಷವಿದೆ. ಇದರಲ್ಲಿ ೩೨ ಋಕ್ಕುಗಳಿವೆ. ಮೊದಲನೆಯ ಮೂರೂ ಭರದ್ವಾಜರ ಕೃತಿಗಳೆಂದೂ ಅನಂತರ ಮೂರು ಕಾಶ್ಯಪರದೆಂದೂ ಹೀಗೆಯೇ, ಮುಂದು ಮುಂದಿನ ಮೂರು ಮೂರು ಋಕ್ಕುಗಳು ಗೌತಮ, ಅತ್ರಿ, ವಿಶ್ವಾಮಿತ್ರ ಜಮದಗ್ನಿ ಮತ್ತು ವಸಿಷ್ಠರ ಕೃತಿಗಳೆಂದೂ ಗೊತ್ತಾಗುತ್ತದೆ. ಇವರೇ ಮುಂದೆ ಸಪ್ತರ್ಷಿಗಳೆಂದು ಪ್ರಸಿದ್ಧವಾಗಿರುವ ಋಷಿಗಳು. ಕೊನೆಯ ಹನ್ನೊಂದೂ ಪವಿತ್ರ ವಸಿಷ್ಠರವೆಂದು ಸೂಚಿತವಾಗಿದೆ. ಈ ಸೂಕ್ತದ ಕೊನೆಯ ಎರಡು ಋಕ್ಕುಗಳೂ ಸಹ ಫಲಶ್ರುತಿಯಂತಿವೆ ಸಂಗ್ರಹಕಾರರು ಈ ಋಷಿಗಳ ಋಕ್ಕುಗಳನ್ನೆಲ್ಲಾ ಸೇರಿಸಿ ಒಂದು ಪ್ರತ್ಯೇಕ ಸೂಕ್ತವನ್ನಾಗಿ ಮಾಡಿರಬಹುದೆಂದು ಪಾಶ್ಚಾತ್ಯ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಅತಿ ಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ, ಕರ್ನಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.** ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹ ಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು ಇಂತಹ ಉದಾರಮತಿಗಳಾದ ನಮ್ಮ

ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ ಗಾಯತ್ರೀ ಎಂಬ ಮಂತ್ರನಾಮಾಂಕಿತರಾದ) ರಾಜಕುಮಾರಿಗೂ, ಸಮಸ್ತ ಪ್ರಜಾಕೋಟಿಗೂ, ವೇದಪುರುಷನಾದ ಸರ್ವೇಶ್ವರನು ಐಹಿಕಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮ ಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು,
ವಿರೋಧಿನಾಮ ಸಂ॥ ಆಶ್ವಯುಜ ಶುದ್ಧಪೂರ್ಣಿಮಾ ಗುರುವಾರ
6—10—1949

ಅನುವಾದಕ
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್



॥ ಶ್ರೀಃ ॥

# ವಿಷಯಾನುಕ್ರಮಣಿಕೆ

## ಪ್ರಥಮಾಷ್ಟಕ ತೃತೀಯೋಧ್ಯಾಯ

ಪುಟಸಂಖ್ಯೆ

———:o:———

ಕೆ. ವೆಂಕಟಸುಬ್ಬಯ್ಯ, ಪ್ರಿಂಟರ್, ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್, ಮೈಸೂರು.



॥ ಶ್ರೀಃ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದ ಸಂಹಿತಾ

## ಭಾಗ—೪

## ॥ ಪ್ರಥಮಾಷ್ಟಕೇ ತೃತೀಯೋಽಧ್ಯಾಯಃ ॥

### ಮೊದಲನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು

**ಅಥ ತೃತೀಯಾಧ್ಯಾಯ ಆರಭ್ಯತೇ। ತ್ವಮಗ್ನೇ ಪ್ರಥಮ ಇತಿ ಸಪ್ತಮಾನುವಾಕೇ ಪಂಚ ಸೂಕ್ತಾನಿ। ತತ್ರೈತಾಯಾಮೇತಿ ತೃತೀಯಂ ಸೂಕ್ತಂ ಪಂಚದಶರ್ಚಂ। ಋಷಿಶ್ಚಾನ್ಯಸ್ಮಾದಿತಿ ಪರಿಭಾಷಯಾಂಗಿರಸೋ ಹಿರಣ್ಯಸ್ತೂಪ ಋಷಿಃ। ಅನುಕ್ತತ್ವಾದಿಂದ್ರೋ ದೇವತಾ। ತ್ರಿಷ್ಟುಪ್ ಛಂದಃ। ಏತೇತ್ಯನುಕ್ರಮಣಿಕಾ। ಗೋಸವವೀವಧಯೋರ್ನಿಷ್ಕೇವಲ್ಯ ಏತಾಯಾಮೇತಿ ಸೂಕ್ತಂ ವಿನಿಯುಕ್ತಂ। ತಥಾ ಚ ಸೂತ್ರಿತಮತಿಮೂರ್ತಿನಾ ಯಕ್ಷ್ಯಮಾಣ ಇತಿ ಖಂಡೇ। ಗೋಸವವೀವಧೌ ಪಶುಕಾಮ ಇಂದ್ರ ಸೋಮಮೇತಾಯಾಮೇತಿ ಮಧ್ಯಂದಿನಃ। ಆ. ೯–೮. ॥ ಇತಿ ॥**

**ಅನುವಾದವು**— ಹಿಂದಿನ ಭಾಗದಲ್ಲಿ ಎರಡನೆಯ ಅಧ್ಯಾಯವನ್ನು ಮುಗಿಸಿ ಈಗ ಮೂರನೆಯ ಅಧ್ಯಾಯದ ಅರ್ಥಾನುವಾದವನ್ನು ಪ್ರಾರಂಭಿಸುವೆವು. **ತ್ವಮಗ್ನೇ ಪ್ರಥಮೋ ಅಂಗಿರಾ ಋಷಿಃ** ಎಂದು ಪ್ರಾರಂಭವಾಗುವ ಏಳನೆಯ ಅನುವಾಕದಲ್ಲಿ **ಏತಾಯಾಮ** ಎಂಬ ಸೂಕ್ತವು ಮೂರನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕು

ಗಳಿರುವುವು. ಈ ಅನುವಾಕದಲ್ಲಿರುವ ೩೧-೩೫ ರ ವರೆಗಿನ ಐದು ಸೂಕ್ತಗಳಿಗೂ ಹಿರಣ್ಯಸ್ತೂಪ ಆಂಗಿರಸಃ ಎಂಬುವನೇ ಋಷಿಯೆಂದು ಹೇಳಿರುವುದರಿಂದ ಈ ಸೂಕ್ತಕ್ಕೆ ಹಿರಣ್ಯಸ್ತೂಪ ಆಂಗಿರಸ ಎಂಬುವನೇ ಋಷಿಯು. ಇಂದ್ರನೇ ದೇವತೆಯು. ತ್ರಿಷ್ಟುಪ್ ಛಂದಸ್ಸು ಎಂದು ಅನುಕ್ರಮಣಿಕೆಯಲ್ಲಿ ಹೇಳಿರುವುದು. ಗೋಸವವೀವಧ ಯಾಗಗಳಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರವನ್ನು ಪಠಿಸುವಾಗ ಏತಾಯಾಂ ಎಂಬ ಈ ಸೂಕ್ತದ ವಿನಿಯೋಗವಿರುವುದು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ಅತಿಮೂರ್ತಿನಾ ಯಕ್ಷ್ಯಮಾಣಃ**ಎಂಬ ಖಂಡದಲ್ಲಿ **ಗೋಸವವೀವಧೌ. ಪಶುಕಾಮ ಇಂದ್ರಸೋಮಮೇತಾಯಾಮಿತಿ ಮಧ್ಯಂದಿನಃ** ಎಂಬ ಸೂತ್ರದಿಂದ ಹೇಳಲ್ಪಟ್ಟಿರುವುದು. (೮. ೯-೮)



॥ ಓಂ ॥

## ಸೂಕ್ತ—೩೩

॥ ಮಂಡಲ—೧ ॥ ಅನುವಾಕ—೭ ॥ ಸೂಕ್ತ—೩೩ ॥

॥ಅಷ್ಟಕ—೧ ॥ ಅಧ್ಯಾಯ—೩ ॥ ವರ್ಗ, ೧—೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧—೧೫ ॥

॥ ಋಷಿಃ — ಹಿರಣ್ಯಸ್ತೂಪ ಆಂಗಿರಸಃ ॥

॥ ದೇವತಾ— ಇಂದ್ರಃ ॥

॥ ಛಂದಃ — ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಏತಾಯಾಮೋಪ ಗವ್ಯಂತ ಇಂದ್ರಮಸ್ಮಾಕಂ ಸುಪ್ರಮತಿಂ ವಾವೃಧಾತಿ ।
ಅನಾಮೃಣಃ ಕುವಿದಾದಸ್ಯ ರಾಯೋ ಗವಾಂ ಕೇತಂ ಪರಮಾವರ್ಜತೇ ನಃ ॥ ೧ ॥

॥ ಪದಪಾಠಃ ॥

ಆ । ಇತ । ಅಯಾಮ । ಉಪ । ಗವ್ಯಂತಃ । ಇಂದ್ರಂ । ಅಸ್ಮಾಕಂ ।
ಸು । ಪ್ರಮತಿಂ । ವವೃಧಾತಿ ॥
ಅನಾನೃಣಃ । ಕುವಿತ್ । ಆತ್ । ಅಸ್ಯ । ರಾಯಃ । ಗವಾಂ । ಕೇತಂ ।
ಪರಂ । ಆಽವರ್ಜತೇ । ನಃ ॥ ೧ ॥

॥ ಸಾಯಣಭಾಷ್ಯಂ ॥

ದೇವಾಃ ಪರಸ್ಪರಮೇವಂ ಕಥಯಂತಿ । ಹೇ ದೇವಾ ಗವ್ಯಂತಃ ಪಣಿನಾಮಕೇನಾಸುರೇಣಾಪಹೃತಾ ಅಸ್ಮದೀಯಾ ಗಾಃ ಪ್ರಾಪ್ತುಮಿಚ್ಛಂತೋ ಯೂಯಮೇತ । ಆಗಚ್ಛತ । ಯುಷ್ಮಾಭಿಃ ಸಹಿತಾ ವಯಮಿಂದ್ರಂ ಗವಾನಯನಕ್ಷಮಮುಪಾಯಾಮ । ಪ್ರಾಪ್ನವಾಮ । ಸ ಚೇಂದ್ರೋಽನಾನೃಣೋ ಹಿಂಸಕರಹಿತಃ ಸನ್ನಸ್ಮಾಕಂ ದೇವಾನಾಂ ಪ್ರಮತಿಂ ಗೋಲಾಭೇನ ಹರ್ಷಯಿತ್ವಾ ಪ್ರಕೃಷ್ಟಾಂ ಬುದ್ಧಿಂ ಸು ವವೃಧಾತಿ । ಸುಷ್ಠು ವರ್ಧಯತಿ । ಆದನಂತರಂ ಸ ಇಂದ್ರೋಽಸ್ಯ ರಾಯೋ ಧನಸ್ಯ ಗವಾಂ ಗೋರೂಪಸ್ಯ ಸಂಬಂಧಿ ಪರಂ ಕೇತಮುತ್ಕೃಷ್ಟಂ ಜ್ಞಾನಂ ನೋಽಸ್ಮಾಕಂ ಕುವಿದಾವರ್ಜತೇ । ಅಧಿಕಂ ಪ್ರಾಪಯತಿ॥ ಇತ । ಇಣ್ ಗತೌ । ಅದಾದಿತ್ವಾಚ್ಛಪೋ ಲುಕ್ । ಅಯಾಮ । ಏತೇರ್ಲೋಡುತ್ತಮಬಹುವಚನ ಆಡುತ್ತಮಸ್ಯ ಪಿಚ್ಚೇತ್ಯಾಡಾಗಮಃ । ಪಿದ್ವದ್ಭಾವಾತ್ಸಾರ್ವಧಾತುಕಲಕ್ಷಣೇ ಗುಣೇಽಯಾದೇಶಃ । ನ ಚೇಣೋ ಯಣ್ । ಪಾ ೬-೪-೮೧ । ಇತಿ ಯಣಾದೇಶಃ । ಮಧ್ಯೇಽಪವಾದಾಃ ಪೂರ್ವಾನ್ವಿಧೀನ್ಬಾಧಂತೇ । ಪರಿ. ೬೦. । ಇತಿ ವಚನಾತ್ತಸ್ಯೇಯಙಾದೇಶಾಪವಾದತ್ವಾತ್ । ಅತಃ ಪರತ್ವಾದ್ಗುಣೇನ ಯಣಾದೇಶೋ ಬಾಧ್ಯತೇ । ಪಿದ್ವದ್ಭಾವಾತ್ಪ್ರತ್ಯಯಸ್ಯಾನುದಾತ್ತತ್ವೇ ಧಾತುಸ್ವರೇಣಾದ್ಯುದಾತ್ತತ್ವಂ । ಗವ್ಯಂತಃ। ಗಾ ಆತ್ಮನ ಇಚ್ಛಂತಃ । ಸುಪ ಆತ್ಮನಃ ಕ್ಯಜಿತಿ ಗೋಶಬ್ದಾತ್ಕರ್ಮಣಃ ಕ್ಯಚ್ । ವಾಂತೋ ಯಿ ಪ್ರತ್ಯಯೇ । ಪಾ. ೬-೧-೭೯. । ಇತ್ಯವಾದೇಶಃ । ಪ್ರತ್ಯಯಾಂತಾದ್ಧಾತೋರ್ಲಟಃ ಶತೃ । ತಸ್ಯಾದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಪ್ರಮತಿಂ । ಮನ್ಯತೇಃ ಕ್ತಿನ್ಯನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ । ವವೃಧಾತಿ । ವೃಧು ವೃದ್ಧೌ । ಲೇಟ್ಯಾಡಾಗಮಃ । ಬಹುಲಂ ಛಂದಸೀತಿ ಶಪಃ ಶ್ಲುಃ । ಸಂಹಿತಾಯಾಮಭ್ಯಾಸಸ್ಯ ದೀರ್ಘಶ್ಛಾಂದಸಃ । ಅನಾನೃಣಃ । ನೃಣ ಹಿಂಸಾಯಾಂ । ನೃಣಂತಿ ಹಿಂಸಂತೀತಿ ನೃಣಾಃ । ಇಗುಪಧಲಕ್ಷಣಃ ಕಃ । ನ ಸಂತ್ಯಾನೃಣಾ ಅಸ್ಯೇತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ।

**ಅಸ್ಯ ರಾಯಃ । ಊಡಿದಮಿತ್ಯುಭಯತ್ರ ವಿಭಕ್ತೇರುದಾತ್ತತ್ವಂ । ಗವಾಂ । ಸಾವೇಕಾಚ ಇತಿ ಪ್ರಾಪ್ತಸ್ಯ ವಿಭಕ್ತ್ಯುದಾತ್ತಸ್ಯ ನ ಗೋಶ್ವನ್ಸಾವವರ್ಣೇತಿ ಪ್ರತಿಷೇಧಃ । ಕೇತಂ । ಕಿತ ಜ್ಞಾನೇ । ಘಞಂತ ಆದ್ಯುದಾತ್ತಃ । ಆವರ್ಜತೇ । ವೃಜೀ ವರ್ಜನೇ । ಅದಾದಿತ್ವಾಚ್ಛಪೋ ಲುಕಿ ಪ್ರಾಪ್ತೇ ಬಹುಲಂ ಛಂದಸೀತಿ ತದಭಾವಃ । ಶಪಃ ಪಿತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕತ್ವೇನ ಧಾತುಸ್ವರಃ । ತಿಙಿ ಚೋದಾತ್ತವತೀತಿ ಗತೇರನುದಾತ್ತತ್ವಂ । ಕುವಿದ್ಯೋಗಾನ್ನಿಪಾತೈರ್ಯದ್ಯದಿಹಂತೇತ್ಯಾದಿನಾ ನಿಘಾತಪ್ರತಿಷೇಧಃ ॥**

॥ ಪ್ರತಿಪದಾರ್ಥ ॥

**ಗವ್ಯಂತಃ**— ( ರಾಕ್ಷಸನಾದ ಪಣಿಯು ಅಪಹರಿಸಿದ ) ಗೋವುಗಳನ್ನು ಪಡೆಯಲಿಚ್ಛೆಯುಳ್ಳ ಎಲೈ ದೇವತೆಗಳೇ, । **ಆ ಇತ**— ( ನೀವೆಲ್ಲರೂ ) ಬನ್ನಿ (ಎಲ್ಲರೂ ಸೇರಿ) । **ಇಂದ್ರಂ** –( ಹಸುಗಳನ್ನು ತರಲು ಸಮರ್ಥನಾದ ) ಇಂದ್ರನಲ್ಲಿಗೆ । **ಉಪಾಯಾಮ**—ಹೋಗೋಣ. । (ಆ ಇಂದ್ರನು) **ಅನಾಮೃಣಃ**—ಅಹಿಂಸಾತ್ಮಕನು । **ಅಸ್ಮಾಕಂ**—ನಮ್ಮ । **ಪ್ರಮತಿಂ**—( ಗೋಲಾಭದಿಂದಾಗುವ) ಹರ್ಷಪೂರಿತ ಬುದ್ಧಿಯನ್ನು । **ವವೃಧಾತಿ**–ಬೆಳೆಸುತ್ತಾನೆ. । **ಆತ್**— ಅನಂತರ । **ಸ ಇಂದ್ರಃ**—ಆ ಇಂದ್ರನು । **ಅಸ್ಯ ರಾಯಃ**—( ನಮ್ಮ ) ಈ ಐಶ್ವರ್ಯವಾದ । **ಗವಾಂ**—ಗೋವಿಷಯಕವಾದ । **ಪರಂ ಕೇತಂ**—ಉತ್ಕೃಷ್ಟಜ್ಞಾನವನ್ನು । **ನಃ**– ನಮಗೆ । **ಕುವಿತ್**—ಹೆಚ್ಚಾಗಿ । **ಆವರ್ಜತೇ**—ಹೊಂದಿಸುತ್ತಾನೆ.

॥ ಭಾವಾರ್ಥ ॥

ಎಲೈ ದೇವತೆಗಳೇ, ಪಣಿ ಎಂಬ ಅಸುರನು ನಿಮ್ಮ ಗೋವುಗಳನ್ನು ಅಪಹರಿಸಿರುವನಷ್ಟೆ. ಅವುಗಳನ್ನು ಹಿಂದಕ್ಕೆ ಪಡೆಯಬೇಕೆಂಬ ಇಚ್ಛೆಯು ನಿಮಗಿದ್ದೇ ಇರುವುದು. ಆದುದರಿಂದ ಬನ್ನಿ, ನಾವೆಲ್ಲರೂ ಸೇರಿ ಇಂದ್ರನಲ್ಲಿಗೆ ಹೋಗೋಣ. ಅವನು ಅಹಿಂಸಾತ್ಮಕನು. ನಮ್ಮ ನಮ್ಮ ಹಸುಗಳನ್ನು ನಮಗೆ ಕೊಡಿಸುವುದರಿಂದ ನಮ್ಮ ಸಂತೋಷವನ್ನು ಹೆಚ್ಚುಮಾಡಿ ನಮ್ಮ ಸಕಲೈಶ್ವರ್ಯವಾದ ಗೋವಿನ ವಿಷಯದಲ್ಲಿ ನಮಗೆ ಶ್ರೇಷ್ಠವಾದ ತಿಳಿವಳಿಕೆಯನ್ನು ಕೊಡುತ್ತಾನೆ.

English Translation

Come, let us approach Indra to recover our stolen cattle; He being without malice exhilarates our minds; he will bestow upon us perfect knowledge of this wealth consisting of cows.

॥ ವಿಶೇಷವಿಷಯಗಳು ॥

ಪಣಿ ಎಂಬ ಅಸುರನು ದೇವತೆಗಳ ಗೋವುಗಳನ್ನು ಅಪಹರಿಸಿ ಒಂದು ಗುಹೆಯಲ್ಲಿ ಬಚ್ಚಿಟ್ಟಿದ್ದನು. ಅವುಗಳನ್ನು ಪುನಃ ಪಡೆಯುವುದಕ್ಕಾಗಿ ಇಂದ್ರನ ಬಳಿಗೆ ಹೋಗಬೇಕೆಂದು ದೇವತೆಗಳು ಪರಸ್ಪರ ಮಾತನಾಡಿ ಕೊಳ್ಳುತ್ತಿರುವುದನ್ನು ಈ ಋಕ್ಕಿನಲ್ಲಿ ವರ್ಣಿಸಿವೆ.

**ಗವ್ಯಂತಃ — ಗಾ ಆತ್ಮನ ಇಚ್ಛಂತಃ** ॥ ಗೋವುಗಳನ್ನು ಪಡೆಯಲು ಇಚ್ಛೆಯುಳ್ಳವರು.

**ಸು ಪ್ರಮತಿಂ ವಾವೃಧಾತಿ** — ಉತ್ಕೃಷ್ಟವಾದ ಜ್ಞಾನವನ್ನು ಕೊಡುವನು ; ನಮ್ಮ ತಿಳುವಳಿಕೆಯನ್ನು ಹೆಚ್ಚಿಸುವನು

**ಅನಾಮೃಣ :— ಹಿಂಸಕರಹಿತಃ । ಮೃಣ ಹಿಂಸಾಯಾಂ । ಮೃಣಂತಿ ಹಿಂಸಂತೀತಿ ಮೃಣಾಃ । ನ ಸಂತ್ಯಾಮೃಣಾ ಅಸ್ಯೇತಿ ಬಹುವ್ರೀಹಿಃ** ॥ ಮೃಣಧಾತುವಿಗೆ ಹಿಂಸಿಸು ಎಂದರ್ಥವು. ಹಿಂಸಿಸುವವನಲ್ಲ ವಾದ್ದರಿಂದ ಅನಾಮೃಣಃ ಎಂದು ಹೆಸರು. ಎಂದರೆ ಇಂದ್ರನು ತನ್ನನ್ನು ಸ್ತೋತ್ರಮಾಡುವವರನ್ನು ಹಿಂಸಿಸುವವನಲ್ಲ. ಅಥವಾ ಇಂದ್ರನನ್ನು ಯಾರೂ ಹಿಂಸಿಸಲು ಸಮರ್ಥರಲ್ಲವಾದ್ದರಿಂದ ಇಂದ್ರನು ಹಿಂಸಕರಹಿತನು ಎಂದಭಿಪ್ರಾಯವು.

**ಕುವಿತ್‌-ಅಧಿಕಂ ।** ಹೆಚ್ಚಾಗಿ, ಬಹಳವಾಗಿ ಉರು ತುವಿ ಮೊದಲಾದ ಹನ್ನೆರಡು ಬಹ್ವರ್ಥಕನಾಮಗಳ ಮಧ್ಯದಲ್ಲಿ ಕುವಿತ್ ಶಬ್ದವು ಪಠಿತವಾಗಿದೆ. (ನಿ. ೩-೧೩)

**ರಾಯಃ—ಧನಸ್ಯ ।** ಧನದ.

**ಕೇತಂ—ಉತ್ಕೃಷ್ಟಂ ಜ್ಞಾನಂ ।** ಉತ್ತಮವಾದ ಜ್ಞಾನವನ್ನು. ಕೇತಃ ಕೇತುಃ ಮೊದಲಾದ ಹನ್ನೊಂದು ಪ್ರಜ್ಞಾವಾಚಕ ಶಬ್ದಗಳ ಮಧ್ಯದಲ್ಲಿ ಕೇತಶಬ್ದವು ಪಠಿತವಾಗಿರುವುದರಿಂದ (ನಿ. ೩-೧೩) ಕೇತಂ ಎಂದರೆ ಒಳ್ಳೆಯ ಜ್ಞಾನವನ್ನು, ತಿಳಿವಳಿಕೆಯನ್ನು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಇತ**- ಇಣ್ ಗತೌ ಧಾತು. ಲೋಟ್ ಮಧ್ಯಮ ಪುರುಷ ಬಹುವಚನ ಥ ಪ್ರತ್ಯಯ. **ತಸ್ಥಸ್ಥಮಿಪಾಂ-,** (ಪಾ. ಸೂ. ೧೩-೪-೧೦) ಎಂದು ತ ಆದೇಶ. ಅದಾದಿಯಾದ್ದರಿಂದ ಶಪ್ ಗೆ ಲುಕ್ ಗುಣ ನಿಷೇಧ.

**ಅಯಾಮ**— ಇಣ್ ಧಾತು ಲೋಟ್ ಉತ್ತಮ ಪುರುಷ ಬಹುವಚನ. ಮಸ್, ಇ+ಮಸ್. ಶಪ್ ಗೆ. ಲುಕ್. **ಲೋಟೋ ಲಙ್ವತ್** (ಪಾ. ಸೂ. ೩-೪-೮೫) ಎಂದು ಲಙ್ವದ್ಭಾವ. **ನಿತ್ಯಂಙಿತಃ** (ಪಾ. ಸೂ. ೩-೪-೯೯) ಸಕಾರಾಂತವಾದ ಙಿದುತ್ತಮ ಪುರುಷದ ಸಕಾರಕ್ಕೆ ನಿತ್ಯವಾಗಿ ಲೋಪ ಬರುತ್ತೆ. ಎಂಬುದರಿಂದ ಮಸ್‌ನ ಸ್‌ಗೆ ಲೋಪ. **ಆಡುತ್ತಮಸ್ಯಪಿಚ್ಚ** (ಪಾ. ಸೂ. ೩-೪-೯೨) ಲೋಡುತ್ತಮಪುರುಷಕ್ಕೆ ಆಟ್ ಆಗಮ ಬರುತ್ತೆ. ಅದು ಪಿತ್ತೂ ಆಗುತ್ತೆ ಎಂದು

ಮಸ್‌ಗೆ ಆಟ್ ಆಗಮ, ಇ+ಆಮ. ಪ್ರತ್ಯಯ ಪಿತ್ತಾದ್ದರಿಂದ **ಸಾರ್ವಧಾತುಕಮಪಿತ್** ಎಂದು ಕಿತ್ತಾಗುವುದಿಲ್ಲ. ಆದ್ದರಿಂದ ಗುಣ ನಿಷೇಧಕ್ಕೆ ಅವಕಾಶವಿಲ್ಲ. ಗುಣ ಬಂದರೆ ಏ+ಆಮ, ಆಯ್ ಆದೇಶ. ಆಯಾಮ ಎಂದಾಗುತ್ತೆ. ಇಲ್ಲಿ ಇ+ಆಮ. ಎಂದಿರುವಾಗ ಇಣೋಯಣ್ (ಪ್ಯಾ. ಸೂ. ೬-೪-೮೧) ಅಜಾದಿ ಪ್ರತ್ಯಯ ಪರದಲ್ಲಿರುವಾಗ ಇಣ್ ಧಾತುವಿಗೆ ಯಣ್ ಆದೇಶ ಬರುತ್ತೆ ಎಂದು ಯಣ್ ಬರಲಿ ಎಂದು ಕೇಳಬಹುದು. ಹಿಗೆಯೇ **ಅಚಿಶ್ನು ಧಾತು** (ಪಾ. ಸೂ. ೧೬-೪-೭೭) ಎಂದು ಇಯಙ್ ಆದೇಶಕ್ಕೂ ಪ್ರಾಪ್ತಿ ಇದೆ. 'ಇಣೋಯಣ್' ಎಂಬ ಯಣ್ ವಿಧಿಯು ಇಯಙ್ ಗುಣವಿಧಿಗಳ ಮಧ್ಯೆ ಪತಿತವಾಗಿದೆ. '**ಮಧ್ಯೇಪವಾದಾಃ ಪೂರ್ವಾನ್ವಿಧೀನ್ಬಾಧಂತೇ,** (ಪರಿಭಾ. ೬೦) ಮಧ್ಯದಲ್ಲಿ ಪತಿತವಾಗಿರುವ ಅಪವಾದವು ಪೂರ್ವದಲ್ಲಿರುವ ವಿಧಿಯನ್ನೇ ಬಾಧಿಸುವುದು ಎಂದು ಇಯಙ್ ವಿಧಿಗೆ ಮಾತ್ರವೇ ಯಣ್ ವಿಧಿಯು ಬಾಧಕವಾಗುವುದು. ಗುಣವಿಧಿಗೆ ಬಾಧಕವಾಗದು. ಆದ್ದರಿಂದ ಯಣ್ ಗುಣವಿಧಿಗಳು ಒಟ್ಟಿಗೆ ಪ್ರಾಪ್ತವಾದರೂ **ವಿಪ್ರತಿಷೇಧೇ ಪರಂಕಾರ್ಯಂ** (ಪಾ. ಸೂ. ೧-೪-೨) ಎಂದು ಪರವಾದ ಗುಣವಿಧಿಯೇ ಬರುತ್ತೆ. ಹೀಗೆ ಯಣ್‌ಗೆ ಅಪವಾದತ್ವವನ್ನು ಒಪ್ಪಿಕೊಂಡು ಸಮಾಧಾನವನ್ನು ವೇದಭಾಷ್ಯದಲ್ಲಿ ನಿರೂಪಿಸಿರುವರು. ವಸ್ತುತಃ ಗುಣವಿಧಿಗೆ ಯಣ್ ವಿಧಿಯು ಅಪವಾದವೇ ಆಗುವುದಿಲ್ಲ. ಒಂದು ವಿಧಿಯು ಪ್ರವರ್ತಿಸುವ ಲಕ್ಷ್ಯದಲ್ಲಿ ಯಾವ ಶಾಸ್ತ್ರಕ್ಕೆ ನಿಯತವಾಗಿ ಪ್ರವೃತ್ತಿ ಇದೆಯೋ ಅದಕ್ಕೆ ಆ ವಿಧಿಯು ಅಪವಾದ ಎನ್ನುತ್ತಾರೆ. ಯನ್ತಿ-ಇಣ್‌ಧಾತು ಲಟ್ ಪ್ರಥಮ ಪುರುಷ ಬಹುವಚನ. ಇಲ್ಲಿ ಇ+ಅನ್ತಿ ಎಂದಿರುವಾಗ **ಕ್ಙಿತಿಚ** (ಪಾ. ೧-೧-೫) ಎಂದು ನಿಷೇಧವಿರುವುದರಿಂದ ಗುಣಕ್ಕೆ ಪ್ರಾಪ್ತಿಯೇ ಇಲ್ಲ. **ಇಣೋಯಣ್** ಎಂಬ ಯಣ್ ವಿಧಿಗೆ ಪ್ರಾಪ್ತಿ ಇದೆ. ಏವಂಚ ಯಣ್ ವಿಧಿಯು ಗುಣವಿಧಿ ಬರದೇ ಇರುವ ಲಕ್ಷ್ಯದಲ್ಲಿ ಸಾವಕಾಶವಾಗುವುದರಿಂದ ಗುಣಕ್ಕೆ ಬಾಧಕವೇ ಆಗುವುದಿಲ್ಲ. ಆದ್ದರಿಂದ **ಮಧ್ಯೇಪವಾದಾಃ** ಎಂಬ ಪರಿಭಾಷಾಸಂಚಾರವು ಇಲ್ಲಿ ಅನವಶ್ಯಕವಾದುದು. ಪ್ರತ್ಯಯವು ಪಿತ್ ಆದ್ದರಿಂದ **ಅನುದಾತ್ತೌ ಸುಪ್ಪಿತೌ** ಎಂದು ಅನುದಾತ್ತ, ಧಾತುಸ್ವರವೇ ನಿಲ್ಲುತ್ತೆ.

**ಗವ್ಯನ್ತಃ**-ಗಾಃ ಆತ್ಮನಃ ಇಚ್ಛಂತಃ-ಹಸುಗಳನ್ನು ತಮಗೆ ಇಚ್ಛಿಸತಕ್ಕವರು, ಎಂದು ವಿಗ್ರಹ. ಕರ್ಮವಾಚಕವಾದ ಗೋಶಬ್ದದಮುಂದೆ **ಸುಪ ಆತ್ಮನಃಕ್ಯಚ್** ಎಂಬುವರಿಂದ ಕ್ಯಚ್ ಗೋ+ಅಸ್+ಕ್ಯ-**ಸನಾದ್ಯಂತಾ ಧಾತವಃ** ಎಂದು ಧಾತು ಸಂಜ್ಞೆ ಇರುವುದು. **ಸುಪೋಧಾತುಪ್ರಾತಿಪದಿಕಯೋಃ** ಎಂದು ಧಾತ್ವವಯವವಾದ ಶಸ್‌ಗೆ ಲುಕ್, ಗೋ+ಯ **ವಾನ್ತೋಯಿಪ್ರತ್ಯಯೇ** (ವಾ. ಸೂ. ೬-೧-೭೯) ಯಕಾರಾದಿ ಪ್ರತ್ಯಯ ಪರದಲ್ಲಿರುವಾಗ ಓ ಔ ಗಳಿಗೆ ಅವ್ ಆವ್ ಆದೇಶಗಳು ಕ್ರಮವಾಗಿ ಬರುತ್ತವೆ ಎಂದು ಅವ್ ಆದೇಶ, ಗವ್ಯ ಎಂದಾಯಿತು ಇದು ಧಾತುವಾದ್ದರಿಂದ ಇದರ ಮುಂದೆ ಲಟ್. ಅದಕ್ಕೆ ಶತೃ. ಗವ್ಯ+ಅತ್ ಶಪ್ ವಿಕರಣ. ಪರರೂಪ ಗವ್ಯತ್ ಎಂದಾಯಿತು. ಜಸ್ಸನ್ನು ಹಚ್ಚಿದರೆ ನುಮಾಗಮ ಬಂದು ರುತ್ವ ವಿಸರ್ಗಗಳು ಬಂದು ಗವ್ಯಂತಃ ಎಂದಾಗುತ್ತದೆ. ಅದುಪದೇಶದ ಮುಂದಿರುವುದರಿಂದ ಶತೃಗೆ **ತಾಸ್ಯನುದಾತ್ತೇತ್**- ಎಂದು ಅನುದಾತ್ತ ಬಂದರೆ ಧಾತು ಸ್ವರವೇ ನಿಲ್ಲುವುದು.

**ಪ್ರಮತಿಂ**-ಮನ ಜ್ಞಾನೇ-**ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂದು ಕ್ತಿನ್, **ಅನು ದಾತ್ತೋಪದೇಶವನತಿತನೋತ್ಯಾದೀನಾಮನುನಾಸಿಕಲೋಪೋ ಝಲಿಕ್ಙಿತಿ** (೬-೪-೩೭) ಎಂದು ನಕಾರಕ್ಕೆ

ಲೋಪ. **ತಾದೌಚನಿತಿಕೃತ್ಯತೌ** ( ಪಾ. ಸೂ. ೬-೨-೫೦ ) ತಕಾರಾದಿಯೂ ನಕಾರೇತ್ಸಂಜ್ಞೆಯುಳ್ಳದ್ದೂ ಆದ ತುಶಬ್ದವನ್ನುಳಿದ ಕೃತ್ಪ್ರತ್ಯಯ ಪರದಲ್ಲಿರುವಾಗ ಅನಂತರವಾದ ಗತಿಯು ಪ್ರಕೃತಿಸ್ವರವನ್ನು ಹೊಂದುವುದು ಎಂದು ಪ್ರ ಎಂಬ ಗತಿಗೆ ಪ್ರಕೃತಿಸ್ವರ ಬರುವುದು.

**ವಾವೃಧಾತಿ**—ವೃಧು ವರ್ಧನೇ-ಲೇಟ್-**ಲೇಟೋಡಾಟೌ** ( ಪಾ. ಸೂ. ೩-೪-೯೪ ) ಎಂದು ಆಡಾಗಮ-ತಿಪ್-ಶಪ್--**ಬಹುಲಂ ಛಂದಸಿ** (ಪಾ. ಸೂ ೨-೪-೭೬ ) **ಶ್ಲು** ಶಪ್‌ಗೆ-( ಲೋಪ ) ಬರುತ್ತೆ. ಶ್ಲೌ ( ಪಾ ಸೂ. ೬-೧-೧೦. ) ಧಾತುವಿಗೆ ದ್ವಿತ್ವ. ವೃಧ್ ವೃಧ್ ಅತಿ. ಅಭ್ಯಾಸಕ್ಕೆ ಅತ್ವ ರಪರತ್ವ, **ಹಲಾದಿಃ ಶೇಷಃ** ಎಂದು ಲೋಪ-ವವೃಧಾತಿ ಎಂದಾಗುತ್ತೆ. ಸಂಹಿತಾಕಾಲದಲ್ಲಿ ಅಭ್ಯಾಸಕ್ಕೆ ಛಾಂದಸವಾಗಿ ದೀರ್ಘ.

**ಅನಾಮೃಣಃ**— ಮೃಣ ಹಿಂಸಾಯಾಂ, ಮೃಣನ್ತಿ ಹಿಸಂತಿ ಇತಿ ಮೃಣಾಃ ಋಕಾರವು ಇಕ್‌ಪ್ರತ್ಯಾಹಾರದಲ್ಲಿ ಸೇರಿದೆ. ಆದ್ದರಿಂದ ಮೃಣ್ ಎಂಬುದು ಇಗುಪಧ, **ಇಗುಪಧಜ್ಞಾಪ್ರೀಕಿರಃಕಃ** ( ಪಾ. ಸೂ. ೩-೧-೧೩೫.) ಎಂಬುದರಿಂದ ಇಗುಪಧ ನಿಮಿತ್ತಕವಾಗಿ ಕ ಪ್ರತ್ಯಯ. ಮೃಣ್+ಅ. ನ ಸನ್ತಿ ಮೃಣಾಃ ಅಸ್ಯ ಸಃ ಎಂದು ಬಹುವ್ರೀಹಿ. **ನಲೋಪೋನಞಃ** ( ಪಾ. ಸೂ. ೬-೩-೭೩. ) ಉತ್ತರಪದ ಪರದಲ್ಲಿರುವಾಗ ನಞನ ನಕಾರಕ್ಕೆ ಲೋಪ. **ತಸ್ಮಾನ್ನುಡಚಿ** ( ಪಾ. ಸೂ. ೬-೩-೭೪. ) ಎಂದು ನುಡಾಗಮ. **ನಞ್‌ಸುಭ್ಯಾಂ** ಎಂದು ಉತ್ತರ ಪದವು ಅಂತೋದಾತ್ತ,

**ಕೇತಂ**— ಕಿತ ಜ್ಞಾನೇ ಧಾತು. ಘಞ್ ಪ್ರತ್ಯಯಾಂತ. ‖ ೧ ‖

---

‖ ಸಂಹಿತಾಪಾಠಃ ‖

ಉಪೇದಹಂ ಧನದಾಮಪ್ರತೀತಂ ಜುಷ್ಟಾಂ ನ ಶ್ಯೇನೋ ವಸತಿಂ ಪತಾಮಿ ‖
ಇಂದ್ರಂ ನಮಸ್ಯನ್ನುಪಮೇಭಿರರ್ಕೈರ್ಯಃ ಸ್ತೋತೃಭ್ಯೋ ಹವ್ಯೋ ಅಸ್ತಿ ಯಾಮನ್ ‖ ೨ ‖

॥ ಪದಪಾಠಃ ॥

ಉಪ । ಇತ್ । ಅಹಂ । ಧನಽದಾಂ । ಅಪ್ರತಿಽಇತಂ । ಜುಷ್ಟಾಂ । ನ ।
ಶ್ಯೇನಃ । ವಸತಿಂ । ಪತಾಮಿ ॥
ಇಂದ್ರಂ । ನಮಸ್ಯನ್ । ಉಪಽಮೇಭಿಃ । ಅರ್ಕೈಃ । ಯಃ । ಸ್ತೋತೃಽಭ್ಯಃ ।
ಹವ್ಯಃ । ಅಸ್ತಿ । ಯಾಮನ್ ॥ ೨ ॥

॥ ಸಾಯಣಭಾಷ್ಯಂ ॥

ಯ ಇಂದ್ರಃ ಸ್ತೋತೃಭ್ಯಃ ಸ್ತೋತೄಣಾ ಮನುಷ್ಠಾತೄಣಾಮನುಗ್ರಹಾರ್ಥಂ ಯಾಮನ್ ತದೀಯಶತ್ರುಭಿಃ ಸಹ ಪ್ರವೃತ್ತೇ ಯುದ್ಧೇ ಹವ್ಯೋಽಸ್ತಿ ತೈರಾಹ್ವಾತವ್ಯೋ ಭವತಿ ತಮಿಂದ್ರಮಹಮನುಷ್ಠಾತೋಪೇತ್ಪತಾಮಿ । ಉಪಾಪ್ನೋಮ್ಯೇವ । ಕಿಂ ಕುರ್ವನ್ । ಉಪಮೇಭಿರುಪಮಾನಸ್ಥಾನೀಯೈರುತ್ತಮೈರರ್ಕೈಃ ಸ್ತೋತ್ರೈಃ ಸಹ ನಮಸ್ಯನ್ ಪೂಜಯನ್ । ಕೀದೃಶಮಿಂದ್ರಂ । ಧನದಾಂ ಧನಪ್ರದಂ ಅಪ್ರತೀತಮಪ್ರತಿಗತಂ । ಬಲಿಭಿರತಿರಸ್ಕೃತಮಿತ್ಯರ್ಥಃ । ಇಂದ್ರಪ್ರಾಪ್ತೌ ದೃಷ್ಟಾಂತಃ । ಜುಷ್ಟಾಂ ಪೂರ್ವೈಃ ಸೇವಿತಾಂ ವಸತಿಂ ಸ್ವಕೀಯನೀಡರೂಪಾಂ ನಿವಾಸಭೂಮಿಂ ಶ್ಯೆನೋ ನ । ಯಥಾ ಶ್ಯೇನನಾಮಕೋ ವೇಗವಾನ್ಪಕ್ಷೀ ಸ್ವಕೀಯಸ್ಥಾನಂ ಪ್ರತ್ಯಾದರೇಣ ಧಾವತಿತ ದ್ವದಹಮಿಂದ್ರಂ ತ್ವರಯಾ ಪ್ರಾಪ್ನೋಮಿ ॥ ಧನದಾಂ । ಧನಂ ದದಾತೀತಿ ಧನದಾಃ । ಆತೋ ಮನಿನ್ನಿತ್ಯಾದಿನಾ ವಿಚ್ । ಅಪ್ರತೀತಂ । ಶತ್ರುಭಿರ್ನ ಪ್ರತಿಗತಂ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಜುಷ್ಟಾಂ । ಜುಷೀ ಪ್ರೀತಿಸೇವನಯೋಃ । ಶ್ವೀದಿತೋ ನಿಷ್ಠಾಯಾಂ । ಪಾ. ೭-೨-೧೪. । ಇತೀಟ್ಪ್ರತಿಷೇಧಃ । ನಿತ್ಯಂ ಮಂತ್ರೇ । ಪಾ. ೬-೧-೨೧೦. । ಇತ್ಯಾದ್ಯುದಾತ್ತತ್ವಂ । ಪತಾಮಿ । ಲೇಟ್ಯಾಡಾಗಮಃ । ನಮಸ್ಯನ್ । ನುಮುಸ್ಶಬ್ದಾತ್ಪೂಜಾರ್ಥೇ । ನಮೋವರಿವಃ । ಪಾ. ೩-೧-೧೯. । ಇತಿ ಕ್ಯಚ್ । ಪ್ರತ್ಯಯಸ್ವರಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತಸ್ಯೈಕಾದೇಶಸ್ವರೇಣೋದಾತ್ತತ್ವಂ । ಉಪಮೀಯಂತ ಏಭಿರಿತ್ಯುಪಮಾಃ । ಮಾಙ್ ಮಾನೇ । ಘಞರ್ಥೇ ಕವಿಧಾನಂ । ಪಾ. ೩-೩-೫೮-೪. । ಇತಿ ಕಃ । ಬಹುಲಂ ಛಂದಸೀತಿ ಭಿಸ ಐಸಾದೇಶಾಭಾವಃ । ಕೃದುತ್ತರಪದಪ್ರಕೃತಿಸ್ವರತ್ವಂ । ಹವ್ಯಃ ಹ್ವೇಞಃ ಬಹುಲಂ ಛಂದಸೀತಿ ಸಂಪ್ರಸಾರಣಂ । ಅಚೋ ಯದಿತಿ ಯತ್ । ಗುಣೋ ಧಾತೋಸ್ತನ್ನಿಮಿತ್ತಸ್ಯೈವ । ಪಾ. ೬-೧-೮೦. । ಇತ್ಯವಾದೇಶಃ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಯಾಮನ್ । ಯಾ ಪ್ರಾಪಣೇ । ಮನಿನೋ ನಿತ್ತ್ವಾದಾದ್ಯುದಾತ್ತತ್ವಂ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ ॥

॥ ಪ್ರತಿಪದಾರ್ಥ ॥

**ಯಃ**— ಯಾವ ಇಂದ್ರನು । **ಸ್ತೋತೃಭ್ಯಃ**—ಭಕ್ತರಿಂದ । **ಯಾಮನ್**-ಯುದ್ಧ ಕಾಲದಲ್ಲಿ ( ಸಹಾಯಕ್ಕಾಗಿ ) । **ಹವ್ಯಃ ಅಸ್ತಿ**— ( ಪ್ರಾರ್ಥನಾಪೂರ್ವಕವಾಗಿ ) ಕರೆಯಲ್ಪಡುತ್ತಾನೋ । **ಧನದಾಂ**— (ಆ) ಐಶ್ವರ್ಯ ದಾತನಾದ । **ಅಪ್ರತೀತಂ**— ( ಶತ್ರುಗಳಿಂದ ) ಅಪ್ರತಿಹತನಾದ । **ಇಂದ್ರಂ**— ಇಂದ್ರನನ್ನು । **ಅಹಂ**—ನಾನು **ಉಪಮೇಭಿಃ**— ಉಪಮಾನಕ್ಕೆ ಯೋಗ್ಯಗಳಾದ । ( ಶ್ರೇಷ್ಠಗುಣಗಳಿಂದ ಕೂಡಿದ ) । **ಅರ್ಕೈಃ**— ಸ್ತೋತ್ರಗಳಿಂದ । **ನಮಸ್ಯನ್**— ಪೂಜಿಸುತ್ತ । **ಜುಷ್ಟಾಂ**—ಪ್ರಿಯವಾದ (ವಾಸಮಾಡುತ್ತಿರುವ) । **ವಸತಿಂ**—ಗೂಡನ್ನು । **ಶ್ಯೇನಃ ನ**— ಗಿಡುಗನು ಸೇರಿಕೊಳ್ಳುವಂತೆ । **ಉಪೇತ್ ಪತಾಮಿ**— ವೇಗವಾಗಿ ಹೋಗಿ ಸೇರಿಕೊಳ್ಳುವೆನು.

॥ ಭಾವಾರ್ಥ ॥

ಇಂದ್ರನು ಶತ್ರುಗಳಿಂದ ಅಪ್ರತಿಹತನಾದ ಮಹಾಪರಾಕ್ರಮಿಯು. ಅವನ ಭಕ್ತರೆಲ್ಲರೂ ಯುದ್ಧ ಕಾಲದಲ್ಲಿ ಅವನನ್ನು ಸಹಾಯಕ್ಕೋಸ್ಕರ ಪ್ರಾರ್ಥಿಸಿ ಕರೆಯುತ್ತಾರೆ. ಅವನು ಐಶ್ವರ್ಯದಾತನು. ಗಿಡುಗನು ತನ್ನ ಪ್ರೀತಿಪಾತ್ರವಾದ ಗೂಡನ್ನು ಹಾರಿಹೋಗಿ ಸೇರಿಕೊಳ್ಳುವಂತೆ ನಾನೂ ಸಹ ಆ ಇಂದ್ರನನ್ನು ಅತ್ಯುತ್ತಮವಾದ ಸ್ತೋತ್ರಗಳಿಂದ ಪೂಜಿಸುತ್ತಾ ಶೀಘ್ರವಾಗಿ ಅವನ ಬಳಿಗೆ ಹೋಗುವೆನು.

## English Translation

Indra is to be inovked by his worshippers in battle; Indra who is invincible and true giver of wealth is to be glorified with excellent hymns; I approach Indra like a hawk to its cherished nest·

॥ ವಿಶೇಷ ವಿಷಯಗಳು ॥

**ಧನದಾಂ— ಧನಂ ದದಾತೀತಿ ಧನದಾಃ । ಧನಪ್ರದಂ ।** ಧನಾದ್ಯೈಶ್ವರ್ಯವನ್ನು ಕೊಡುವ

**ಅಪ್ರತೀತಂ— ಶತ್ರುಭಿರ್ನ ಪ್ರತಿಗತಂ ।** ಶತ್ರುಗಳಿಂದ ಜಯಿಸಲಸಾಧ್ಯನಾದ

**ಜುಷ್ಟಂ— ಜುಷೀ ಪ್ರೀತಿಸೇವನಯೋಃ । ಸೇವಿತಾಂ ।** ಪ್ರೀತಿಪಾತ್ರವಾದ, ಇಷ್ಟವಾದ

**ಶ್ಯೇನಃ**— ಗಿಡುಗ, ಪಕ್ಷಿವಿಶೇಷ. ಈ ಪಕ್ಷಿಯು ವೇಗವಾಗಿ ಹಾರಬಲ್ಲುದೆಂದು ಪ್ರಸಿದ್ಧಿಯು. ಇಂತಹ ಪಕ್ಷಿಯು ವೇಗವಾಗಿ ಹಾರಿಹೋಗಿ ತನಗೆ ಪ್ರೀತಿಪಾತ್ರವಾದ ಗೂಡನ್ನು ಸೇರಿಕೊಳ್ಳುವಂತೆ ನಾನು ಸಹ ಬೇಗನೆ ನನಗೆ ಇಷ್ಟಾರ್ಥಗಳನ್ನು ಕೊಡುವವನಾದುದರಿಂದ ನನಗೆ ಅತ್ಯಂತ ಪ್ರೀತಿಪಾತ್ರನಾದ ಇಂದ್ರನ ಬಳಿಗೆ ಹೋಗುವೆನೆಂದು ದೃಷ್ಟಾಂತಾಭಿಪ್ರಾಯವು.

**ಉಪಮೇಭಿಃ— ಉಪಮಾನಸ್ಥಾನೀಯೈಃ, ಉತ್ತಮೈಃ ||** ಉಪಮಾನಕ್ಕೆ ಯೋಗ್ಯವಾದ, ಶ್ರೇಷ್ಠವಾದ, ಅತ್ಯುತ್ತಮವಾದ.

**ಅರ್ಕೈಃ—** ಮಂತ್ರಗಳಿಂದ. **ಅರ್ಕೋ ಮಂತ್ರೋ ಭವತಿ** ಎಂದು ನಿರುಕ್ತ ವಚನವಿರುವುದು. (ನಿ-೫-೪)

**ಹವ್ಯಃ— ಆಹ್ವಾತವ್ಯಃ |** ಯುದ್ಧಕಾಲದಲ್ಲಿ ಸಹಾಯಾರ್ಥವಾಗಿ ಕರೆಯಲ್ಪಡುವವನು. ಜನರು ಯುದ್ಧ ಮೊದಲಾದ ಕಷ್ಟಗಳು ಪ್ರಾಪ್ತವಾದಾಗ ಇಂದ್ರನನ್ನು ಮರೆಹೋಗುವರು. ಸಹಾಯಾರ್ಥವಾಗಿ ಇಂದ್ರನನ್ನು ಆಹ್ವಾನ ಮಾಡುವರು.

|| ವ್ಯಾಕರಣಪ್ರಕ್ರಿಯಾ ||

**ಧನದಾಂ** — ಧನಂ ದದಾತಿ ಇತಿ ಧನದಾಃ ಎಂದು ವಿಗ್ರಹವು. ಆತೋಮನಿನ್ ಕ್ವನಿಬ್ವನಿಪಶ್ಚ (ಪಾ. ಸೂ. ೩-೨-೭೪) ಎಂದು ವಿಚ್ ಪ್ರತ್ಯಯ. ವಿಚ್‌ನ ಎಲ್ಲಾ ವರ್ಣಗಳಿಗೂ ಲೋಪ. ಸಮಾಸಾವಯವವಾದ ಸುಬ್ವಿಭಕ್ತಿಗೆ ಲುಕ್ ದ್ವಿತೀಯೈಕವಚನಾಂತ.

**ಜುಷ್ಟಾಂ ಜುಷೀಪ್ರೀತಿಸೇವನಯೋಃ** — ಈದಿತ್ ಅಂದರೆ ಈ ಕಾರಕ್ಕೆ ಇತ್ಸಂಜ್ಞೆ ಬಂದಿದೆ. **ಶ್ವೀದಿತೋನಿಷ್ಠಾಯಾಂ** (ಪಾ. ಸೂ. ೭-೨-೧೪) ಟುಓಶ್ವಿಗತಿವೃದ್ಧ್ಯೋಃ— ಈದಿತ್ತಾದ ಧಾತುಗಳು ಅವುಗಳ ಮುಂದಿರುವ ಕ್ತ ಕ್ತವತು ಪ್ರತ್ಯಯಗಳಿಗೆ ಇಟ್ ಬರುವುದಿಲ್ಲ ಎಂದು ಇಡಾಗಮಕ್ಕೆ ನಿಷೇಧ. **ನಿತ್ಯಂ ಮನ್ತ್ರೇ—** (ಪಾ. ಸೂ. ೬-೧-೨೧೦) ಜುಷ್ಟಾರ್ಪಿತೇ ಎಂಬ ಪದವು ಹಿಂದಿನ ಸೂತ್ರದಿಂದ ಅನುವೃತ್ತವಾಗುವುದು. ಜುಷ್ಟ-ಅರ್ಪಿತ ಈ ಎರಡು ಶಬ್ದಗಳು ಮಂತ್ರದಲ್ಲಿ ನಿತ್ಯವಾಗಿ ಆದ್ಯುದಾತ್ತವಾಗುವುವು ಎಂದು ಆದ್ಯುದಾತ್ತ. **ಜುಷ್ಟಾರ್ಪಿತೇಚ ಛಂದಸಿ** — (ಪಾ. ಸೂ. ೬-೧-೨೦೯) ಎಂಬ ಹಿಂದಿನ ಸೂತ್ರದಿಂದ ಈ ಸೂತ್ರವನ್ನು ಮಾಡಬೇಕಾದ್ದಿಲ್ಲ ಎಂದು ಕೌಮುದೀಕಾರರು ನಿರೂಪಿಸಿರುವರು.

**ಪತಾಮಿ–ಲಿಙರ್ಥೇ ಲೇಟ್** — (ಪಾ. ಸೂ. ೩-೪-೭) ಎಂದು ಲೇಟ್. ಉತ್ತಮಪುರುಷ ಏಕವಚನ ಮಿಪ್. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂದು ಆಡಾಗಮ. ಶಪ್. ಸವರ್ಣದೀರ್ಘ.

**ನಮಸ್ಯನ್— ನಮೋವರಿವಶ್ಚಿತ್ರಙಃಕ್ಯಚ್—** (ಪಾ. ಸೂ. ೩-೨-೧೯) **ಶಬ್ದವೈರ ಕರಣೇ—** ಎಂಬ ಸೂತ್ರದಿಂದ ಕರಣೇ ಎಂದು ಅನುವೃತ್ತವಾಗುತ್ತೆ. **ಕರಣಂ–ಕ್ರಿಯಾ, ನಮಸಃಪೂಜಾಯಾಂ, ವರಿವಸಃ–ಪರಿಚರ್ಯಾಯಾಂ, ಚಿತ್ರಙ ಆಶ್ಚರ್ಯೇ—** ಎಂದು ವಾರ್ತಿಕಗಳಿಂದ, ಪೂಜಾದಿಯಾದ ಕ್ರಿಯಾವಿಶೇಷವೇ ವಿವಕ್ಷಿತ. ಏವಂಚ, ಪೂಜೆ- ಪರಿಚರ್ಯೆ- ಆಶ್ಚರ್ಯ ಇವು ತೋರುವಾಗ ಕ್ರಮವಾಗಿ ನಮಸ್ ಮೊದಲಾದ ಶಬ್ದಗಳ ಮುಂದೆ ಕ್ಯಚ್ ಬರುತ್ತೆ ಎಂದು. ಕ್ಯಚ್- ನಮಸ್+ಯ. ಕ್ಯ ವು ಪ್ರತ್ಯಯ ಸ್ವರದಿಂದ ಉದಾತ್ತ. ಇದರ ಮುಂದೆ ಲಟ್ ಶತೃ. **ತಾಸ್ಯನುದಾತ್ತೇತ್—** ( ಪಾ. ಸೂ. ೬-೧-೧೮೬) ಎಂದು ಅದುಪದೇಶವಾದ ಶಪ್‌ನ ಮುಂದಿರುವುದರಿಂದ ಶತೃ ಅನುದಾತ್ತ ಪಿತ್ತಾದ್ದರಿಂದ ಶಪ್ ಅನುದಾತ್ತ. ಪರರೂಪವು ಸ್ಥಾನಸಾಮ್ಯದಿಂದ ಅನುದಾತ್ತ. ಕ್ಯಚ್‌ನ ಉದಾತ್ತಾಕಾರದೊಂದಿಗೆ ಪರರೂಪ. ಅದು **ಏಕಾದೇಶಉದಾತ್ತೇನ** ಎಂದು ಉದಾತ್ತ.

**ಉಪಮೇಭಿಃ**— ಉಪಮೀಯನ್ತೆ ಏಭಿರಿತ್ಯುಪಮಾಃ ಎಂದು ವಿಗ್ರಹ. ಮಾಙ್ ಮಾನೇ ಧಾತು. **ಘಞರ್ಥೇಕವಿಧಾನಂ**— ( ಪಾ. ಸೂ. ೩-೩-೫೮. ವಾ. ೪ ) ಕರ್ತೃಭಿನ್ನವಾದ ಕಾರಕವು **ಘಞರ್ಥ.** ಈ ಅರ್ಥದಲ್ಲಿ ಕ ಪ್ರತ್ಯಯ ಬರುವುದು ಎಂದು ಅರ್ಥ. ಇಲ್ಲಿ ಯದ್ಯಪಿ ವಾರ್ತ್ತಿಕದಲ್ಲಿ **ಸ್ಥಾಸ್ನಾಪಾವ್ಯಧಿಹನಿಯುಧ್ಯರ್ಥಂ**—ಎಂದು ಪರಿಗಣಿತವಾಗಿದೆ. ಆದರೂ ಬೇರೆ ಕಡೆಯಲ್ಲಿಯೂ ಇದು ಬರುವುದು ಎಂದು ಸಾಯಣರ ಅಭಿಪ್ರಾಯ. **ಅತೋಲೋಪ ಇಟಿಚ**— (ಪಾ. ಸಾ. ೬-೪-೬೪) ಎಂದು ಆಲೋಪ- ಉಪಮ+ಭಿಸ್— ಏತ್ವರುತ್ವ ವಿಸರ್ಗಗಳು. **ಬಹುಲಂಛಂದಸೀ** ಎಂದು ಐಸ್ ಬರುವುದಿಲ್ಲ. **ಗತಿಕಾರಕೋಪಪದಾತ್ಕೃತ್** (ಪಾ. ಸಾ. ೬-೨-೧೩೯) ಎಂದು ಕೃದುತ್ತರಪದ ಪ್ರಕೃತಿ ಸ್ವರ ಬರುತ್ತೆ ಪ್ರತ್ಯಯ ಸ್ವರದಿಂದ ಉತ್ತರಪದವು ಅಂತೋದಾತ್ತ.

**ಹವ್ಯಃ**—ಹ್ವೇಞ್ ಶಬ್ದೇ— **ಬಹುಲಂಛಂದಸಿ** (ಪಾ. ಸೂ. ೬-೧-೩೪) ಎಂಬುದರಿಂದ ಸಂಪ್ರಸಾರಣ-ವಕಾರಕ್ಕೆ ಉಕಾರ-ಪೂರ್ವರೂಪ. **ಅಚೋಯತ್** (ಪಾ. ಸೂ. ೩-೧-೯೭) ಅಚ್ಚನ್ನು ಕೊನೆಯಲ್ಲಿ ಹೊಂದಿರುವ ಶಬ್ದದ ಮುಂದೆ ಯತ್ ಬರುತ್ತೆ ಎಂದು ಯತ್. ಹು+ಯ— **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂದು ಗುಣ, ಹೋ+ಯ, **ಧಾತೋಸ್ತನ್ನಿಮಿತ್ತಸ್ಯೈವ** (ಪಾ. ಸೂ. ೬-೧-೮೦) ಸಃ — ಯಾದಿಪ್ರತ್ಯಯಃ ನಿಮಿತ್ತಂ ಯಸ್ಯ ಸಃ ಎಂದು ವಿಗ್ರಹ. ಯಕಾರಾದಿ ಪ್ರತ್ಯಯ ಪರದಲ್ಲಿದ್ದರೆ ಯಾದಿಪ್ರತ್ಯಯ ನಿಮಿತ್ತಕವಾಗ ಧಾತ್ವವಯವವಾದ ಓ ಔಗಳಿಗೆ ಕ್ರಮವಾಗಿ ಅವ್ ಆವ್ ಬರುತ್ತವೆ ಎಂದು ಅವ್ ಆದೇಶ-ಯದ್ಯಪಿ **ವಾನ್ತೋಯಿಪ್ರತ್ಯಯೇ**— ಎಂದು ಅವಾದೇಶವನ್ನು ಹೇಳಬಹುದು. ಆದರೂ ಧಾತ್ವವಯವಗಳಾದ ಓ ಔಗಳಿಗೆ ವಾಂತಾದೇಶ ಬರುವ ಪಕ್ಷಕ್ಕೆಯಾದಿಪ್ರತ್ಯಯ ನಿಮಿತ್ತಕಗಳಾದ ಓ ಔಗಳಿಗೇ ಬರುವುದೆಂದು ನಿಯಮಕ್ಕಾಗಿ ಈಸೂತ್ರವು ಅವಶ್ಯಕವು. **ಯತೋಽನಾವಃ**- (ಪಾ. ಸೂ. ೬-೧-೨೧೩) ಯತ್ ಪ್ರತ್ಯಯಾಂತವು ಎರಡು ಸ್ವರಗಳನ್ನು ಹೊಂದಿದ್ದರೆ ಅದರ ಆದಿಯು ಉದಾತ್ತವಾಗುತ್ತೆ. ಆದರೆ ನೌ ಶಬ್ದದ ಮುಂದೆ ಯತ್ ಬಂದಾಗ ನಾವ್ಯ ಎಂಬದು ಆದ್ಯುದಾತ್ತವಾಗುವುದಿಲ್ಲ ಎಂಬುದರಿಂದ ಹವ್ಯ ಎಂಬುದು ಆದ್ಯುದಾತ್ತ. ॥ ೨ ॥



॥ ಸಂಹಿತಾಪಾಠ ॥

ನಿ ಸರ್ವಸೇನ ಇಷುಧೀಁರಸಕ್ತ ಸಮರ್ಯೋ ಗಾ ಅಜತಿ ಯಸ್ಯ ವಷ್ಟಿ ॥
ಚೋಷ್ಕೂಯಮಾಣ ಇಂದ್ರ ಭೂರಿ ವಾಮಂ ಮಾ ಪಣಿರ್ಭೂರಸ್ಮದಧಿ ಪ್ರವೃದ್ಧ ॥ ೩ ॥

॥ ಪದಪಾಠಃ ॥

ನಿ । ಸರ್ವ॑ಽಸೇನಃ । ಇ॒ಷು॒ಽಧೀನ್ । ಅ॒ಸ॒ಕ್ತ॒ । ಸಂ । ಅ॒ರ್ಯಃ । ಗಾಃ ।
ಅ॒ಜ॒ತಿ॒ । ಯಸ್ಯ॑ । ವಷ್ಟಿ॑ ॥
ಚೋ॒ಷ್ಕೂ॒ಯಮಾ॑ಣಃ । ಇ॒ಂದ್ರ॒ । ಭೂರಿ॑ । ವಾ॒ಮಂ । ಮಾ । ಪ॒ಣಿಃ ।
ಭೂ॒ಃ । ಅ॒ಸ್ಮತ್ । ಅಧಿ॑ । ಪ್ರ॒ಽವೃ॒ದ್ಧ॒ ॥ ೩ ॥

॥ ಸಾಯಣಭಾಷ್ಯಂ ॥

ಸರ್ವಸೇನಃ ಕೃತ್ಸ್ನಸೇನಾಯುಕ್ತ ಇಷುಧೀನ್ಬಾಣಾನಾಮಾಧಾರಭೂತಾನ್ನಿಷಂಗಾನ್ನ್ಯಸಕ್ತ । ನಿತರಾಂ ಪೃಷ್ಠಭಾಗೇ ಸಂಯೋಜಿತವಾನ್ । ಅರ್ಯಃ ಸ್ವಾಮಿರೂಪ ಇಂದ್ರೋ ಯಸ್ಯ ದೇವಸ್ಯ ವಷ್ಟಿ ಅಸುರೇಣಾಪಹೃತಾ ಗಾಃ ಪ್ರದಾತುಂ ಕಾಮಯತೇ ತಸ್ಯ ದೇವಸ್ಯ ಗೃಹೇ ತಾ ಗಾಃ ಸಮಜತಿ । ಸಮ್ಯಕ್ ಪ್ರಾಪಯತಿ । ಹೇ ಪ್ರವೃದ್ಧ ಪ್ರಕೃಷ್ಟವೃದ್ಧಿಯುಕ್ತೇಂದ್ರ ಭೂರಿ ವಾಮಂ ಪ್ರಭೂತಂ ಗೋರೂಪಂ ಧನಂ ಚೋಷ್ಕೂಯಮಾಣೋಽಸ್ಮಭ್ಯಂ ಪ್ರಯಚ್ಛನ್ ಅಸ್ಮದಧ್ಯಸ್ಮಾಸು ಪಣಿರ್ಮಾ ಭೂಃ । ವ್ಯವಹಾರೀ ಮಾ ಭೂಯಾಃ ಗವಾಂ ಮೂಲ್ಯಂ ಮಾ ಯಾಚಸ್ವೇತ್ಯರ್ಥಃ ॥ ಸರ್ವಸೇನಃ । ಇನೇನ ಸಹ ವರ್ತತ ಇತಿ ಸೇನಾ । ವೋಪಸರ್ಜನಸ್ಯೇತಿ ಸಭಾವಃ । ಸರ್ವಾ ಸರಣಶೀಲಾ ಸೇನಾ ಯಸ್ಯೇತಿ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಪ್ರತ್ಯಯಲಕ್ಷಣೇನಾಪ್ಯಯಂ । ಸ್ವರ ಇಷ್ಯತೇ । ಕಾ. ೬-೧-೧೯೧. । ಇತಿ ವಚನಾತ್ಪ್ರತ್ಯಯಲಕ್ಷಣೇನ ಸರ್ವಸ್ಯ ಸುಪಿ । ಪಾ. ೬-೧-೧೯೧. । ಇತಿ ಸರ್ವಶಬ್ದ ಆದ್ಯುದಾತ್ತಃ । ಇಷುಧೀನ್ । ಇಷವ ಏಷು ಧೀಯಂತ ಇತೀಷುಧಯಃ । ಕರ್ಮಣ್ಯಧಿಕರಣೇ ಚ । ಪಾ. ೩-೩-೯೩. । ಇತಿ ಕಿಪ್ರತ್ಯಯಃ । ಸಂಹಿತಾಯಾಂ ದೀರ್ಘಾದಟೀತ್ಯಾದಿನಾ ನಕಾರಸ್ಯ ರುತ್ವಂ । ಅತ್ರಾನುನಾಸಿಕಃ ಪೂರ್ವಸ್ಯ ತು ವಾ । ಪಾ. ೮-೩-೨. । ಇತಿ ಪೂರ್ವಸ್ವರೋಽನುನಾಸಿಕಃ । ಅಸಕ್ತ । ಷಚ ಸಮವಾಯೇ । ಬಹುಲಂ ಛಂದಸೀತಿ ಶಪೋ ಲುಕ್ । ಅರ್ಯಃ । ಅರ್ಯಃ ಸ್ವಾಮಿವೈಶ್ಯಯೋಃ । ಪಾ. ೩-೧-೧೦೩. । ಇತಿ ಯತ್ಪ್ರತ್ಯಯಾಂತೋ ನಿಪಾತಿತಃ । ಅರ್ಯಸ್ಯ ಸ್ವಾಮ್ಯಾಖ್ಯಾ ಚೇತ್ । ಫಿ. ೧-೧೮. । ಇತ್ಯಂತೋದಾತ್ತತ್ವಂ । ಅಜತಿ । ಅಜ ಗತಿಕ್ಷೇಪಣಯೋಃ । ವಷ್ಟಿ । ವಶ ಕಾಂತೌ । ಅದಾದಿತ್ವಾಚ್ಛಪೋ ಲುಕ್ । ವ್ರಶ್ಚಾದಿಷತ್ವೇ ಷ್ಟುತ್ವಂ । ಚೋಷ್ಕೂಯಮಾಣಃ । ಸ್ಕುಞ್ ಆಪ್ರವಣೇ । ಧಾತೋರೇಕಾಚ ಇತಿ ಯಙ್ । ಅಕೃತ್ಸಾರ್ವಧಾತುಕಯೋರ್ದೀರ್ಘಃ । ದ್ವಿರ್ವಚನೇ ಶರ್ಪೂರ್ವಾಃ

**ಋಯಃ । ಪಾ. ೭-೪-೬೧. । ಇತಿ ಕಕಾರಃ ಶಿಷ್ಯತೇ । ಸಕಾರೋ ಲುಪ್ಯತೇ । ಕುಹೋಶ್ಚುರಿತಿ ಚುತ್ವೇ ಗುಣೋ ಯಙ್‌ಲುಕೋರಿತಿ ಗುಣಃ । ಸುಷಾಮಾದಿತ್ವಾತ್ ಷತ್ವಂ । ಯಙಂತಾಲ್ಲಟಃ ಶಾನಚ್ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಭೂಃ । ಗಾತಿಸ್ಥೇತಿ ಸಿಚೋ ಲುಕ್ ॥**

॥ ಪ್ರತಿಪದಾರ್ಥ ॥

**ಸರ್ವಸೇನಃ**— ಸಕಲ ಸೇನೆಗಳುಳ್ಳ ಇಂದ್ರನು । **ಇಷುಧೀನ್**— ಬಾಣಗಳನ್ನು ಇಡುವ ಬತ್ತಳಿಕೆಗಳನ್ನು । **ನಿ ಅಸಕ್ತ**— (ಹಿಂಭಾಗಕ್ಕೆ) ಬಲವಾಗಿ ಕಟ್ಟಿದ್ದಾನೆ. । **ಅರ್ಯಃ**—ಸ್ವಾಮಿಯಾದ ಇಂದ್ರನು । **ಯಸ್ಯ**— ಯಾವ ದೇವತೆಯ ( ವಿಷಯದಲ್ಲಿ ) । **ವಷ್ಟಿ**— ಇಷ್ಟಪಡುತ್ತಾನೋ । ( ಅಂತಹ ದೇವತೆಯ ಮನೆಗೆ ) । **ಗಾಃ**— ಗೋವುಗಳನ್ನು । **ಸಂ ಅಜತಿ**—ಸರಿಯಾಗಿ ಸೇರಿಸುತ್ತಾನೆ. । **( ಹೇ ) ಪ್ರವೃದ್ಧ**— ( ಎಲೈ ) ಶ್ರೇಷ್ಠ ಸಿರಿಯಿಂದ ಕೂಡಿದ । **ಇಂದ್ರ**—ಇಂದ್ರನೇ । **ಭೂರಿ**— ಅಧಿಕವಾಗಿ । **ವಾಮಂ**— ಹೆಚ್ಚು ( ಗೋರೂಪವಾದ ) ಐಶ್ವರ್ಯವನ್ನು । **ಚೋಷ್ಕೂಯಮಾಣಃ**— ಒದಗಿಸಿ ಕೊಡುತ್ತ । **ಅಸ್ಮದಧಿ**— ನಮ್ಮ ವಿಷಯದಲ್ಲಿ । **ಪಣಿಃ**—ಬೆಲೆ ಮಾಡುವವನಾಗಿ — (ಚೌಕಾಸಿಮಾಡುವವನಾಗಿ) । **ಮಾ ಭೂಃ**— ಆಗಬೇಡ. ।

॥ ಭಾವಾರ್ಥ ॥

ದೇವತೆಗಳಿಗೆಲ್ಲ ಸ್ವಾಮಿಯಾದ ಇಂದ್ರನು ಸಕಲ ಸೇನೆಗಳಿಂದ ಕೂಡಿ, ಬತ್ತಳಿಕೆಗಳನ್ನು ಭುಜಕ್ಕೆ ಬಲವಾಗಿ ಕಟ್ಟಿದ್ದಾನೆ. ತನ್ನ ಆಪ್ತರಾದ ದೇವತೆಗಳ ಮನೆಗೆ ಕಳೆದುಹೋದ ಗೋವುಗಳನ್ನು ಸೇರಿಸುತ್ತಾನೆ. ಎಲೈ ಶ್ರೇಷ್ಠ ಸಿರಿವಂತನಾದ ಇಂದ್ರನೇ, ನಮಗೆ ಇಷ್ಟವಾದ ಗೋರೂಪವಾದ ಐಶ್ವರ್ಯವನ್ನು ಹೆಚ್ಚು ಹೆಚ್ಚಾಗಿ ಒದಗಿಸಿ ಕೊಡುತ್ತ ಇರು. ಆದರೆ ಅವುಗಳ ಬೆಲೆಯನ್ನು ಮಾತ್ರ ನಮ್ಮಿಂದ ಅಪೇಕ್ಷಿಸಿ, ನಮ್ಮಲ್ಲಿ ವ್ಯಾಪಾರಿಯಂತೆ ವರ್ತಿಸಬೇಡ.

English Translation

Indra, the leader of the whole army ties the quivers on his back ; the lord drives the cattle to the dwelling of whom he pleases ; O, mighty Indra, the giver of abundant wealth, do not take advantage of us like a dealer.

॥ ವಿಶೇಷ ವಿಷಯಗಳು ॥

**ಸರ್ವಸೇನಃ— ಕೃತ್ಸ್ನಸೇನಾಯುಕ್ತಃ**— The leader of all armies, ಸಮಸ್ತ ಸೇನೆಗಳಿಗೂ ಅಧಿಪತಿಯು, ಸರ್ವಸೇನಾಯುಕ್ತನು.

**ಇಷುಧೀನ್— ಇಷವ ಏಷು ಧೀಯಂತ ಇತೀಷುಧಯಃ ।** ಬಾಣಗಳನ್ನು ಇಡುವ ಬತ್ತಳಿಕೆಗಳು.

**ಅರ್ಯಃ— ಸ್ವಾಮಿವೈಶ್ಯಯೋಃ—** ( ಪಾ. ೩-೧-೧೦೩. ) ಸ್ವಾಮಿ, ಯಜಮಾನ, Lord.

**ಚೋಷ್ಕೂಯಮಾಣಃ— ಅಸ್ಮಭ್ಯಂ ಪ್ರಯಚ್ಛನ್ ।** ( ಗೋವುಗಳನ್ನು ) ಕೊಡುವವನು.

**ಮಾ ಫಣಿರ್ಭೂಃ—ವ್ಯವಹಾರೀ ಮಾ ಭೂಯಾಃ ।** ವ್ಯಾಪಾರ ಮಾಡುವವನಂತೆ ಚೌಕಾಶಿ ಮಾಡ ಬೇಡ. ಎಂದರೆ ನಮಗೆ ಧನವನ್ನು ಕೊಡುವ ವಿಷಯದಲ್ಲಿ ಸ್ವಲ್ಪ ಕೊಡಬೇಕೇ ಅಥವಾ ಎಷ್ಟು ಕೊಡಬೇಕು ಎಂದು ಚೌಕಾಶಿ ಮಾಡದೆ ಯಥೇಚ್ಛವಾಗಿ ಧನವನ್ನು ಕೊಡಬೇಕೆಂದರ್ಥವು. Do not make a hard bargain, dont haggle, do not demand too much from worshippers etc.

|| ವ್ಯಾಕರಣಪ್ರಕ್ರಿಯ ||

**ಸರ್ವಸೇನಃ—** ಸರ್ವಶಬ್ದವು ಉಣ್ವಾದಿಗಣದಲ್ಲಿದೆ. **ಉಣ್ವಾದೀನಾಂಚ** (ಪಾ. ಸೂ. ೬-೧-೧೬೦) ಎಂಬುದರಿಂದ ಇದು ಯದ್ಯಪಿ ಅಂತೋದಾತ್ತ- ಇನಃ ಎಂದರೆ ಸ್ವಾಮಿ. ಇನೇನ ಸಹ ವರ್ತತೇ ಇತಿ ಸೇನಾ ಎಂದು ಬಹುವ್ರೀಹಿ. ಈ ಸಮಾಸದಲ್ಲಿರುವ ಪದಗಳು ಅನ್ಯಪದಾರ್ಥಕ್ಕೆ ವಿಶೇಷಣಗಳಾದ್ದರಿಂದ ಉಪಸರ್ಜನ ಗಳಾಗುತ್ತವೆ. **ವೋಪಸರ್ಜನಸ್ಯ** (ಪಾ. ಸೂ. ೬-೩-೮೨) ಉಪಸರ್ಜನಸರ್ವಾವಯವಕ ಎಂದರೆ ಬಹುವ್ರೀಹಿ ಸಮಾಸ ದಲ್ಲಿ ಇರುವ **ಸಹ** ಶಬ್ದಕ್ಕೆ **ಸ** ಆದೇಶ ಬರುತ್ತೆ ಎಂದು ಸಹ ಶಬ್ದಕ್ಕೆ ಸ ಆದೇಶ. ಸ+ಇನ, ಗುಣ, ಸೇನ, ಟಾಪ್, ಸೇನಾ ಎಂದಾಯಿತು. ಈಗ ಸರ್ವಾ ಸೇನಾ ಯಸ್ಯ ಸಃ ಎಂದು ಪುನಃ ಬಹುವ್ರೀಹಿ. ಸಮಾಸದಲ್ಲಿರುವ ಪ್ರಥಮಾಏಕವಚನ ಸುಪ್ರತ್ಯಯಗಳಿಗೆ **ಸುಪೋಧಾತುಪ್ರಾತಿಪದಿಕಯೋಃ** (ಪಾ. ಸೂ. ೨-೪-೭೧) ಎಂದು ಲೋಪ. ಆದ್ದರಿಂದ ಸರ್ವ ಶಬ್ದವು ಸುಪ್ ಪ್ರತ್ಯಯದ ಹಿಂದೆ ಇರತಕ್ಕದ್ದಾಗುವುದಿಲ್ಲ **ಸರ್ವಸ್ಯಸುಪಿ** (ಪಾ. ಸೂ. ೬-೧-೧೯೧) ಸುಪ್ ಎಂದರೆ ಸ್ ಮೊದಲಾದ ಇಪ್ಪತ್ತೊಂದು ಪ್ರತ್ಯಯಗಳು. ಇವು ಪರಲ್ಲಿದ್ದರೆ ಸರ್ವ ಶಬ್ದದ ಆದಿಯು ಉದಾತ್ತವಾಗುತ್ತೆ ಎಂದರ್ಥ. ಇಲ್ಲಿ ಸ್ ಪ್ರತ್ಯಯವು ಲುಪ್ತವಾಗಿರುವುದರಿಂದ ಈ ಸೂತ್ರವು ಇಲ್ಲಿ ಪ್ರವೃತ್ತಿಸುವುದಿಲ್ಲ ಎಂದು ಶಂಕೆ ಬರಬಹುದು. ಕಾಶಿಕಾಕಾರರು **ಪ್ರತ್ಯಯಲಕ್ಷಣೇನಾಪ್ಯಯಂಸ್ವರ ಇಷ್ಯತೇ** (ಪಾ. ಸೂ. ೬-೧-೧೯೧) ಪ್ರತ್ಯಯಕ್ಕೆ ಲೋಪಬಂದಿದ್ದರೂ **ಪ್ರತ್ಯಯಲೋಪೇ ಪ್ರತ್ಯಯಲಕ್ಷಣಂ** (ಪಾ. ಸೂ. ೧-೧-೬೨) ಪ್ರತ್ಯಯಕ್ಕೆ ಲೋಪ ಬಂದಿದ್ದ ಲುಪ್ರತ್ಯಯ ನಿಮಿತ್ತಕವಾದ ಕಾರ್ಯವು ಬರುವುದು ಎಂಬುದರಿಂದ ಪ್ರತ್ಯಯಲಕ್ಷಣಂದಿಂದಲೂ ಈ ಸ್ವರ ಬರುವುದು ಎಂದಿರುವರು. **ನಲುಮತಾಂಗಸ್ಯ** (ಪಾ. ಸೂ. ೧-೧-೬೩) ಎಂಬ ನಿಷೇಧವು **ಇಕೋಽಚಿವಿಭಕ್ತೌ-** (ಪಾ. ಸೂ. ೭-೧-೭೩) ಎಂಬಲ್ಲಿ ಅಜ್ಗ್ರಹಣದಿಂದ ಅನಿತ್ಯವಾದ ಕಾರಣಬರುವುದಿಲ್ಲ ಎಂದು ಅವರ ಅಭಿಪ್ರಾಯ. ಇವರ ಮತದಲ್ಲಿ ಪ್ರತ್ಯಯಲಕ್ಷಣದಿಂದ ಸು ಪರದಲ್ಲಿರುವುದರಿಂದ ಆದ್ಯುದಾತ್ತವು ಸರ್ವಶಬ್ದಕ್ಕೆ ಬರುವುದು. **ಸೌವರ್ಯಃಸಪ್ತಮ್ಯಸ್ತದಂತಸಪ್ತಮ್ಯಃ—** ಸ್ವರವಿಧಾಯಕ ಸೂತ್ರಗಳಲ್ಲಿರುವ ಸಪ್ತಮಿಗಳು ತದಂತಸಪ್ತಮಿಗಳು ಎಂದರೆ ಸುಬಂತ ವಿಷಯದಲ್ಲಿ ಸರ್ವಶಬ್ದದ ಆದಿಯು ಉದಾತ್ತವಾಗುವುದು ಎಂದು ಸರ್ವಸ್ಯಸುಪಿ ಎಂಬುದಕ್ಕೆ ಅರ್ಥ. ಈಗ ಸುಗೆ ಲೋಪ ಬಂದಿದ್ದರೂ ಸುಬಂತವಿಷಯತ್ವವಿದೆ. ಆದ್ದರಿಂದ ಆದ್ಯುದಾತ್ತವು ಸುಕರವಾಗಿ ಬರುವುದು. ಇನ್ನು ಬಹುವ್ರೀಹಿ ಬಂದ ಮೇಲೂ ಪೂರ್ವಪದಪ್ರಕೃತಿಸ್ವರ ಬಂದು ಅದೇ ಸ್ವರ ನಿಲ್ಲುತ್ತೆ.

**ಇಷುಧೀನ್** ಇಷವ ಏಷು ಧೀಯನ್ತೇ ಎಂದರೆ ಬಾಣಗಳು ಇವುಗಳಲ್ಲಿ ಇಡಲ್ಪಡುತ್ತವೆ ಎಂದು ವಿಗ್ರಹ. ಬತ್ತಳಿಕೆ ಎಂದು ಕನ್ನಡದಲ್ಲಿ ಹೇಳುವರು. **ಕರ್ಮಣ್ಯಧಿಕರಣೇ ಚ** (ಪಾ. ಸೂ. ೩-೩-೯೩) ಕರ್ಮವಾಚಕವಾದ ಪದವು ಉಪಪದವಾಗಿರುವಾಗ ಘು ಸಂಜ್ಞಕವಾದ ಅಂದರೆ **ದಾ** ಅಥವಾ **ಧಾ** ರೂಪವಾದ ಧಾತುಗಳ ಮುಂದೆ ಕಿ ಪ್ರತ್ಯಯು ಬರುತ್ತೆ ಎಂದು ಧಾ ಧಾತುವಿನ ಮುಂದೆ ಕಿ ಪ್ರತ್ಯಯ. ಪ್ರತ್ಯಯವಲ್ಲಿ ಇಕಾರ ಮಾತ್ರ ಉಳಿಯುತ್ತೆ. ಇಷು ಎಂಬುದು ಕರ್ಮವಾಚಕ. ಇಷು ಜಸ್+ಧಾ+ಇ. ಜಸ್ ಗೆ ಲುಕ್. **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರ ಲೋಪ ಇಷುಧಿ ಇದರ ಮುಂದೆ ದ್ವಿತಿಯಾಬಹುವಚನ ಶಸ್. ಇಷುಧೀನ್ ಎಂದಾಗುತ್ತೆ. ಸಂಹಿತಾಕಾಲದಲ್ಲಿ **ದೀರ್ಘಾದಟಿಸಮಾನಪಾದೆ** (ಪಾ. ಸೂ. ೮-೩-೯) ಒಂದೇ ಪಾದದಲ್ಲಿ ದೀರ್ಘವೂ ಅಟ್ಪ್ರತ್ಯಾಹಾರಕ್ಕೆ ಸೇರಿದ ವರ್ಣಗಳೂ ಇದ್ದರೆ ದೀರ್ಘದ ಮುಂದೆ ಇರುವ ನ್ ಗೆ ರು ಆದೇಶ ಬರುತ್ತೆ ಎಂದು ನಕಾರಕ್ಕೆ ರು ಅದೇಶ. **ಅತ್ರಾನುನಾಸಿಕಃಪೂರ್ವಸ್ಯತುವಾ** (ಪಾ. ಸೂ. ೮-೩-೨) ರು ಪ್ರಕರಣದಲ್ಲಿ ರುವಿಗಿಂತಲೂ ಹಿಂದೆ ಇರುವುದಕ್ಕೆ ವಿಕಲ್ಪವಾಗಿ ಅನುನಾಸಿಕವು ಬರುತ್ತೆ ಎಂದು ಅನುನಾಸಿಕವು ಬರುವುದು.

**ಅಸಕ್ತ**— ಷಚ ಸಮವಾಯೇ ಧಾತು, ೧ನೇ ಗಣ, ಉಭಯಪದಿ, ಆತ್ಮನೇಪದವನ್ನು ವಿವಕ್ಷೆ ಮಾಡಿದರೆ ಲಙ್ ಪ್ರ. ಪು. ಏ. ವ. ಪ್ರತ್ಯಯ ಸಚ್+ತ ಶಪ್ ವಿರಣಕ್ಕೆ **ಬಹುಲಂಛಂದಸಿ** (ಪಾ.ಸೂ. ೨-೪-೭೩) ಎಂದು ಲುಕ್. **ಚೋಃ ಕುಃ** (ಪಾ. ಸೂ. ೮-೨-೩೦) ಎಂದು ಚ ಕಾರಕ್ಕೆ ಕಕಾರ. ಅಡಾಗಮ.

**ಅರ್ಯಃ**— **ಅರ್ಯಃ ಸ್ವಾಮಿವೈಶ್ಯಯೋಃ** (ಪಾ ಸೂ.೩-೧-೧೦೩) ಋ ಗತೌ ಧಾತುವಿನ ಮುಂದೆ ಸ್ವಾಮಿ ಅಥವಾ ವೈಶ್ಯ ಎಂಬ ಅರ್ಥಗಳು ತೋರುವಾಗ ಣ್ಯತ್ ಪ್ರತ್ಯಯಕ್ಕೆ ಅಪವಾದವಾಗಿ ಯತ್ ಪ್ರತ್ಯಯವು ನಿಪಾತಿ ಸಲ್ಪಡುವುದು ಎಂದು ಯತ್ ಪ್ರತ್ಯಯ. ಋಕಾರಕ್ಕೆ ಗುಣವು ರಪರವಾಗಿ ಬಂದರೆ ಅರ್ಯ ಎಂದಾಗುತ್ತೆ. **ಅರ್ಯಸ್ಯ ಸ್ವಾಮ್ಯಾಖ್ಯಾಚೇತ್** (ಫಿ. ಸೂ. ೧೭) **ಅಂಗುಷ್ಠೋದಕಬಕವಶಾನಾಂ ಛಂದಸ್ಯನ್ತಃ** ( ಫಿ. ಸೂ. ೧೪ ) ಎಂಬುದರಿಂದ ಛಂದಸಿ, ಅನ್ತಃ ಎಂಬ ಪದಗಳು ಅನುವೃತ್ತಗಳಾಗುತ್ತವೆ. ಸ್ವಾಮಿ ಎಂಬ ಅರ್ಥ ವನ್ನು ಬೋಧಿಸುವ ಅರ್ಯ ಶಬ್ದಕ್ಕೆ ಅಂತೋದಾತ್ತವು ಛಂದಸ್ಸಿನಲ್ಲಿ ಬರುತ್ತದೆ. ಎಂಬುದರಿಂದ **ಯತೋನಾವಃ** ಎಂಬುದರಿಂದಲೋ ಅಥವಾ **ಯೊನ್ತಸ್ಯಾನ್ತ್ಯಾತ್ಪೂರ್ವಂ** ಎಂಬುದರಿಂದಲೋ ಬರುವ ಆದ್ಯುದಾತ್ತವನ್ನು ಬಾಧಿಸಿ ಅಂತೋದಾತ್ತವು ಬರುವುದು.

**ಅಜತಿ**— ಅಜ ಗತಿಕ್ಷೇಪಣಯೋಃ, ಲಟ್, ತಿಪ್-ಶಪ್,

**ವಷ್ಟಿ**—ವಶ ಕಾನ್ತೌ ಧಾತು. ಅದಾದಿ ಅಂದರೆ ಎರಡನೇ ಗಣ. ಶಪ್‌ಗೆ ಲೋಪಬರುತ್ತೆ. ವಶ್+ತಿ. ವ್ರಶ್ಚ ಸೃಜ ಮೃಜ ಯಜರಾಜಭ್ರಾಜಛಶಾಂ ಷಃ (ಪಾ. ಸೂ. ೮-೨-೩೬.) ಝಲ್ ಪರದಲ್ಲಿದ್ದರೂ ಪದಾನ್ತವಿಷಯದಲ್ಲಿಯೂ ವ್ರಶ್ಚ ಮೊದಲಾದ ಏಳು ಧಾತುಗಳಿಗೂ ಛಕಾರಾಂತ ಶಕಾರಾಂತ ಧಾತುಗಳಿಗೂ ಸಹ ಷತ್ವಬರುವುದು ಎಂದು ಶ್‌ಗೆ ಷತ್ವ. **ವಷ್+ತಿ ಷ್ಟುನಾಷ್ಟುಃ** (ಪಾ.ಸೂ.೮-೪-೪೧) ಷಕಾರ ಟವರ್ಗಗಳ ಯೋಗವಿದ್ದರೆ ಸಕಾರ ತವರ್ಗಗಳಿಗೆ ಕ್ರಮವಾಗಿ ಷಕಾರ ಟವರ್ಗಗಳು ಬರುವುವು ಎಂದು ಷಕಾರಕ್ಕೆ ಟಕಾರ, ವಷ್ಟಿ ಎಂದಾಯಿತು.

**ಚೋಷ್ಕೂಯಮಾಣಃ**— ಸ್ಕು ಞ್ ಆಪ್ರವಣೇ ಧಾತು. **ಧಾತೋರೇಕಾಚೋ ಹಲಾದೇಃ ಕ್ರಿಯಾಸಮಭಿಹಾರೇಯಙ್** ( ಪಾ. ಸೂ ೩-೧-೨೨. ) ಪುನಃ ಪುನಃ ಅಥವಾ ಹೆಚ್ಚು ಎಂದು ಕ್ರಿಯಾಸಮಭಿಹಾರ ಎಂಬುದಕ್ಕೆ ಅರ್ಥ. ಈ ಅರ್ಥವು ತೋರುವಾಗ ಹಲಾದಿಯೂ ಒಂದು ಸ್ವರವನ್ನೊಳಗೊಂಡುದೂ ಆದ ಧಾತುವಿನ ಮುಂದೆ ಯಙ್ ಬರುತ್ತೆ. ಸ್ಕು+ಯ, **ಅಕೃತ್ಸಾರ್ವಧಾತುಕಯೋಃ** ( ಪಾ. ಸೂ. ೭-೪-೨೫. ) ಕೃತ್ತು, ಸಾರ್ವಧಾತುಕ ಇವುಗಳನ್ನುಳಿದು ಯಕಾರಾದಿಯಾದ ಅಂದರೆ ಮೊದಲಿನಲ್ಲಿ ಯಕಾರವನ್ನು ಹೊಂದಿರುವ ಪ್ರತ್ಯಯವು ಪರದಲ್ಲಿರುವಾಗ ಅಚ್ಚನ್ನು ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ದೀರ್ಘ ಬರುತ್ತೆ. ಎಂದು ಧಾತುವಿಗೆ ದೀರ್ಘ-ಸ್ಕೂ+ಯ, **ಸನ್ಯಙೋಃ**, (ಪಾ.ಸೂ. ೬-೧-೯.) ಲಿಟಿಧಾತೋರನಭ್ಯಾಸಸ್ಯ ಎಂದು ದ್ವಿತ್ವ. ಸ್ಕೂ+ಸ್ಕೂ+ಯ, **ಹ್ರಸ್ವಃ** (ಪಾ.ಸೂ.೭-೪-೫೯) ಅಭ್ಯಾಸಕ್ಕೆ ಹ್ರಸ್ವ ಬರುತ್ತೆ ಎಂದು ಮೊದಲನೆಯದಕ್ಕೆ ಹ್ರಸ್ವ. ಸ್ಕು+ಸ್ಕೂ+ಯ **ಶರ್ಪೂರ್ವಾಃ ಖಯಃ** (ಪಾ. ಸೂ. ೭-೪-೬೧.) ಶರ್-ಎಂದರೆ ಶ-ಷ-ಸ-ಹ. ಇವುಗಳನ್ನು ಪೂರ್ವದಲ್ಲಿ ಹೊಂದಿರುವ ಖಯ್ ವರ್ಣಗಳು ಉಳಿಯುವುವು. ಪೂರ್ವದಲ್ಲಿರುವ ವರ್ಣಗಳಿಗೆ ಲೋಪ ಬರುತ್ತೆ ಎಂದು ಮೊದಲಿನ ಸಕಾರಕ್ಕೆ ಲೋಪ. ಕು+ಸ್ಕೂ+ಯ. **ಕುಹೋಶ್ಚುಃ** ( ಪಾ. ಸೂ. ೭-೪-೬೨. ) ಅಭ್ಯಾಸದಲ್ಲಿರುವ ಕವರ್ಗ ಹಕಾರಗಳಿಗೆ ಚ ವರ್ಗ ಬರುತ್ತೆ ಎಂದು ಕಕಾರಕ್ಕೆ ಚಕಾರ. ಚು+ಸ್ಕೂ+ಯ. **ಗುಣೋಯಙ್ಲುಕೋಃ** (ಪಾ. ಸೂ. ೭-೪-೮೨) ಯಙ್ ಪರದಲ್ಲಿದ್ದರೂ ಯಙ್ಗೆ ಲುಕ್ ಬಂದಿದ್ದರೂ ಸಹ ಅಭ್ಯಾಸಕ್ಕೆ ಗುಣ ಬರುತ್ತೆ ಎಂದು ಅಭ್ಯಾಸದಲ್ಲಿರುವ ಉಕಾರಕ್ಕೆ ಓಕಾರ, ಚೋಸ್ಕೂ+ಯ. **ಸುಷಾಮಾದಿಷುಚ** ( ಪಾ. ಸೂ. ೮-೩-೯೮. ) ಈ ಗಣದಲ್ಲಿರುವ ಶಬ್ದಗಳ ಸಕಾರವು ಇಣ್ ಕವರ್ಗಗಳ ಮುಂದೆ ಇದ್ದರೆ ಅದಕ್ಕೆ ಷಕಾರ ಬರುತ್ತೆ ಎಂದು ಸಕಾರಕ್ಕೆ ಷಕಾರ, ಚೋಷ್ಕೂಯ, ಇದರ ಮುಂದೆ ಲಟ್ ಅದಕ್ಕೆ **ಲಟಶ್ಶತೃ** (ಪಾ. ಸೂ. ೩-೨-೧೨೪.) ಎಂಬುದರಿಂದ ಶಾನಚ್, ಶಪ್-**ಅತೋಗುಣೇ** ( ಪಾ. ಸೂ.೬-೧-೯೭) ಎಂದು ಪರರೂಪ. **ಆನೇಮುಕ್** ( ಪಾ. ಸೂ. ೭-೨-೮೨) ಎಂದು ಯಕಾರದ ಮುಂದೆ **ಮ್** ಆಗಮ, **ಅಟ್ಕುಪ್ವಾಙ್ನುಮ್ವ್ಯವಾಯೇಽಪಿ**, (ಪಾ.ಸೂ.೮-೪-೨) ಎಂದು ನಕಾರಕ್ಕೆ ಣಕಾರ, ಚೋಷ್ಕೂಯಮಾಣ ಎಂದಾಗುತ್ತದೆ. ಇಲ್ಲಿ ಶಾನಚ್ಚು ಅದುಪದೇಶವಾದ ಶಪ್‌ನ ಮುಂದೆ ಇದೆ. **ತಾಸ್ಯನುದಾತ್ತೇತ್** (ಪಾ. ಸ. ೧-೬-೧೮೬) ಎಂಬುದರಿಂದ ಅನುದಾತ್ತ ಬರುವುದು ಧಾತುಸ್ವರವೇ ನಿಲ್ಲುವುದು.

**ಭೂಃ**— ಭೂಸತ್ತಾಯಾಂ, ಲುಙ್,ಸಿಪ್-ಭೂ+ಸಿ. **ನಮಾಙ್ಯೋಗೇ** ಎಂದು ಅಡಾಗಮಕ್ಕೆ ನಿಷೇಧ. ಚ್ಲಿ-ಅದಕ್ಕೆ ಸಿಚ್, ಇದಕ್ಕೆ **ಗಾತಿಸ್ಥಾಘುಪಾಭೂಭ್ಯಃ ಸಿಚಃಪರಸ್ಮೈಪದೇಷು** ( ಪಾ. ಸೂ. ೨-೪-೭೭. ) ಇಣ್ ಧಾತುವಿಗೆ ಬಂದ **ಗಾ** ಆದೇಶ, ಪಾ ಪಾನೇ, ಷ್ಠಾ ಗತಿನಿವೃತ್ತೌ, ದಾ-ಧಾರೂಪಧಾತುಗಳು, ಭೂಧಾತು ಇವುಗಳ ಮುಂದೆ ಇರುವ ಸಿಚ್ಚಿಗೆ ಪರಸ್ಮೈಪದಪ್ರತ್ಯಯ ಪರದಲ್ಲಿದ್ದರೆ ಲುಕ್ ಬರುತ್ತೆ ಎಂದು ಸಿಚ್‌ಗೆ ಲುಕ್. **ಇತಶ್ಚ** ( ಪಾ. ಸೂ. ೩-೪-೧೦೦) ಎಂದು ಇಕಾರಕ್ಕೆ ಲೋಪ, ರುತ್ವವಿಸರ್ಗಗಳು. ॥ ೩ ॥

॥ ಸಂಹಿತಾಪಾಠಃ ॥

ವಧೀರ್ಹಿ ದಸ್ಯುಂ ಧನಿನಂ ಘನೇನಂ ಏಕಶ್ಚರನ್ನುಪಶಾಕೇಭಿರಿಂದ್ರ ।
ಧನೋರಧಿ ವಿಷುಣಕ್ತೇ ವ್ಯಾಯನ್ನಯಜ್ವಾನಃ ಸನಕಾಃ ಪ್ರೇತಿ-
ಮೀಯುಃ ॥ ೪ ॥

|| ಪದಪಾಠಃ ||

ವಧೀಃ । ಹಿ । ದಸ್ಯುಂ । ಧನಿನಂ । ಘನೇನ । ಏಕಃ । ಚರನ್ ।
ಉಪಽಶಾಕೇಭಿಃ । ಇಂದ್ರ ॥
ಧನೋಃ । ಅಧಿ । ವಿಷುಣಕ್ । ತೇ । ವಿ । ಆಯನ್ । ಅಯಜ್ವಾನಃ ।
ಸನಕಾಃ । ಪ್ರಽಇತಿಂ । ಈಯುಃ ॥ ೪ ॥

|| ಸಾಯಣಭಾಷ್ಯಂ ||

ಹೇ ಇಂದ್ರ ಧನಿನಂ ಬಹುಧನೋಪೇತಂ ದಸ್ಯುಂ ಚೋರಂ ವೃತ್ರಂ ಘನೇನ ಕಠಿನೇನ ವಜ್ರೇಣ ವಧೀರ್ಹಿ । ತ್ವಂ ಹತವಾನ್ಖಲು । ಧನಿತ್ವಂ ವಾಜಸನೇಯಿನೋऽಪಿ ಸ್ಪಷ್ಟಮಾಮನಂತಿ । ವೃತ್ರಸ್ಯಾಂತಃ ಸರ್ವೇ ದೇವಾಃ ಸರ್ವಾಶ್ಚ ವಿದ್ಯಾಃ ಸರ್ವಾಣಿ ಹವೀಂಷಿ ಚಾಸನ್ನಿತಿ । ಉಪಶಾಕೇಭಿಃ ಸಮೀಪವರ್ತಿಭಿಃ ಶಕ್ತಿಯುಕ್ತೈರ್ಮರುದ್ಭಿಃ ಸಹಿತೋ ಭೂತ್ವೈಕಶ್ಚರನ್ । ಪ್ರಹರ್ತುಂ ಸ್ವಯಮೇಕ ಏವ ಗಚ್ಛನ್ । ಯದ್ಯಪಿ ಮರುತಃ ಸಮೀಪೇ ವರ್ತಂತೇ ತಥಾಪಿ ತೇ ಪ್ರೋತ್ಸಾಹಯಂತ್ಯೇವ ನ ತು ವೃತ್ರಂ ಪ್ರಹರಂತಿ । ಪ್ರಹರ್ತಾ ತು ಸ್ವಯಮೇಕ ಏವ । ತಥಾ ಚ ಬ್ರಾಹ್ಮಣೇ ಸಮಾಮ್ನಾತಂ । ಮರುತೋ ಹೈನಂ ನಾಜಹುಃ ಪ್ರಹರ ಭಗವೋ ವೀರಯಸ್ವೇತ್ಯೇವೈನಮೇತಾಂ ವಾಚಂ ವದಂತ ಉಪಾತಿಷ್ಠಂತ । ಐ. ಬ್ರಾ. ೩-೨೦ । ಇತಿ । ಧನೋರಧಿ ಇಂದ್ರಸಂಬಂಧಿನೋ ಧನುಷ ಉಪರಿ ವಿಷುಣಕ್ ವಿವಿಧಂ ನಾಶಮುದ್ದಿಶ್ಯ ಯದ್ವಾ ವಿಷ್ವಕ್ ಸರ್ವತಸ್ತೇ ವೃತ್ರಾನುಚರಾ ವ್ಯಾಯನ್ । ವಿವಿಧಮಾಗಚ್ಛನ್ । ಆಗತ್ಯ ಚಾಯಜ್ವಾನೋ ಯಜ್ವವಿರೋಧಿನಃ ಸಂತಃ ಸನಕಾ ಏತನ್ನಾಮಕಾ ವೃತ್ರಾನುಚರಾಃ ಪ್ರೇತಿಮೀಯುಃ । ಮರಣಂ ಪ್ರಾಪ್ತಾಃ ॥ ವಧೀಃ । ಹನ ಹಿಂಸಾಗತ್ಯೋಃ । ಲುಙಿ ಚ । ಪಾ. ೨-೪-೪೩ । ಇತಿ ವಧಾದೇಶಃ । ಸ ಚಾದಂತಃ । ತಸ್ಯಾತೋ ಲೋಪ ಇತಿ ಲೋಪೇ ಸತಿ ಸ್ಥಾನಿವದ್ಭಾವಾದತೋ ಹಲಾದೇಃ । ಪಾ. ೭-೨-೭. । ಇತಿ ವೃದ್ಧ್ಯಭಾವಃ । ಇಟ ಈಟಿ । ಪಾ. ೮-೨-೨೮. । ಇತಿ ಸಿಚೋ ಲೋಪಃ । ಆಗಮಾನುದಾತ್ತತ್ವೇ ಧಾತ್ವಕಾರಸ್ಯೋದಾತ್ತತ್ವಂ । ಘನೇನ ಏಕಃ । ಈಷಾ ಅಕ್ಷಾದಿಷು ಚ್ಛಂದಸಿ ಪ್ರಕೃತಿಭಾವಮಾತ್ರಂ ವಕ್ತವ್ಯಂ । ಪಾ. ೬-೧-೧೨೭-೨. । ಇತಿ ಸಂಹಿತಾಯಾಂ ಪ್ರಕೃತಿಭಾವಃ । ಅನುನಾಸಿಕಶ್ಛಾಂದಸಃ । ಉಪಶಾಕೇಭಿಃ । ಉಪಶಕ್ತಂ ಕುರ್ವಂತೀತ್ಯುಪಶಾಕಾಃ । ಶಕ್ಲೃ ಶಕ್ತೌ । ಅಸ್ಮಾದ್ಧೇತುಮಣ್ಯಂತಾತ್ಪಚಾದ್ಯಚ್ । ಥಾಥಾದಿಸ್ವರೇಣೋತ್ತರಪದಾಂತೋದಾತ್ತತ್ವಂ । ವಿಷುಣಕ್ । ವಿಷುಪೂರ್ವಾನ್ನಶೇಃ ಸಂಪದಾದಿಲಕ್ಷಣಃ ಕ್ವಿಪ್ । ನಶೇರ್ವಾ । ಪಾ. ೮-೨-೬೩. । ಇತಿ

**ಕುತ್ವಂ । ಯದ್ವಾ । ವಿಷುಪೂರ್ವಸ್ಯಾಂಚತೇರ್ನುಡಾಗಮಃ । ಸನಕಾ ಇತ್ಯಸುರಾಣಾಂ ನಾಮ । ಷಣು ದಾನೇ । ಸನ್ವಂತಿ ದದಾತೀತಿ ಸನಾ ದಾತಾರಃ । ಪಚಾದ್ಯಚ್ । ಸನಾನ್ಕಾಯಂತಿ ಶಬ್ದಯಂತೀತಿ ಸನಕಾಃ । ಆತೋಽನುಪಸರ್ಗೇ ಕಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಕೃದುತ್ತರಪದ-ಪ್ರಕೃತಿಸ್ವರತ್ವಂ । ಪ್ರೇತಿಂ । ತಾದೌ ಚ ನಿತೀತಿ ಗತೇಃ ಪ್ರಕೃತಿಸ್ವರತ್ವಂ । ಈಯುಃ । ಏತೇ-ರುಸಿಪರತ್ವಾದಿಣೋ ಯಣಿತಿ ಯಣಾದೇಶೇ ದ್ವಿರ್ವಚನೇಽಚೀತಿ ಸ್ಥಾನಿವದ್ಭಾವಾದಿಕಾರಸ್ಯ ದ್ವಿರ್ವಚನಂ । ದೀರ್ಘ ಇಣಃ ಕಿತಿ । ಪಾ. ೭-೪-೬೯. । ಇತ್ಯಭ್ಯಾಸಸ್ಯ ದೀರ್ಘತ್ವಂ ॥**

॥ ಪ್ರತಿಪದಾರ್ಥ ॥

( **ಹೇ** ) **ಇಂದ್ರ**— ಎಲೈ ಇಂದ್ರನೇ ( ನೀನು ) । **ಉಪಶಾಕೇಭಿಃ**— ನಿನ್ನ ಸಮೀಪದಲ್ಲಿರುವ ಸಶಕ್ತರಾದ ಮರುತ್ತುಗಳು ನಿನ್ನ ನೆರವಿಗಿದ್ದರೂ ಕೂಡ । **ಏಕಃ**—ನೀನೊಬ್ಬನೇ । **ಚರನ್**—ಸಂಚರಿಸುತ್ತ ( ನಿನ್ನೊಬ್ಬನ ಶಕ್ತಿಯಿಂದಲೇ ) । **ಧನಿನಂ**— ಸಿರಿವಂತನಾದ । **ದಸ್ಯುಂ**— ಚೋರನಾದ ವೃತ್ರನನ್ನು । **ಘನೇನ**— ಕಠಿಣವಾದ ವಜ್ರಾಯುಧದಿಂದ । **ವಧೀಃ**— ಕೊಂದೆಯಷ್ಟೆ । ( ಮತ್ತು ) **ಅಯಜ್ವಾನಃ**— ಯಾಗವಿರೋಧಿಗಳಾದ । **ತೇ**— ಆ ವೃತ್ರಾನುಚರರಾದ । **ಸನಕಾಃ**— ಸನಕಾದಿ ರಾಕ್ಷಸರು । **ಧನೋ-ರಧಿ**— ( ನಿನ್ನ ) ಧನುಸ್ಸಿಗೆದುರಾಗಿ । **ವಿಷುಣಕ್**— ನಾನಾ ದಿಕ್ಕುಗಳಿಂದ । **ಆಯನ್**— ಬಂದರು. । ( ಮತ್ತು ) **ಪ್ರೇತಿಂ**— ಮರಣವನ್ನು । **ಈಯುಃ**— ಹೊಂದಿದರು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಅತ್ಯಂತ ಶೂರನು. ನಿನ್ನ ಸಹಾಯಕ್ಕೋಸ್ಕರ ಶಕ್ತಿವಂತರಾದ ಮರುತ್ತುಗಳು ನಿನ್ನ ಸಮೀಪವರ್ತಿಗಳಾಗಿದ್ದರೂ ಸಹ ಅವರ ಸಹಾಯವನ್ನಪೇಕ್ಷಿಸದೆ ನಿನ್ನ ವಜ್ರಾಯುಧದಿಂದ ನೀನೊಬ್ಬನೇ ವೃತ್ರಾಸುರನನ್ನು ಕೊಂದೆ. ಅಷ್ಟೇ ಅಲ್ಲದೆ ನಿನ್ನ ಆಯುಧಕ್ಕೆ ಎದುರಾಗಿ ಅಂತರಿಕ್ಷದಲ್ಲಿ ನಾನಾ ದಿಕ್ಕುಗಳಿಂದ ಬಂದ ಯಾಗವಿರೋಧಿಗಳೂ, ವೃತ್ರಾನುಚರರೂ ಆದ ಸನಕಾದಿ ರಾಕ್ಷಸರೂ ಸಹ ಮೃತಿಹೊಂದಿದರು.

English Translation

O Indra, though you are accompanied by your powerful allies Maruths, you alone did slay the rich demon Vritra with your thunderbolt ; those unsacrificing Sanakas coming against your bow from all sides met with their death.

॥ ವಿಶೇಷ ವಿಷಯಗಳು ॥

**ದಸ್ಯುಂ ಧನಿನಂ**— ಚೋರನಾದ ವೃತ್ರಾಸುರನು ಬಹು ಧನವಂತನೆಂದು ಪ್ರಸಿದ್ಧಿಯು. । **" ವೃತ್ರಸ್ಯಾಂತಃ ಸರ್ವೇ ದೇವಾಃ ಸರ್ವಾಶ್ಚ ವಿದ್ಯಾಃ ಸರ್ವಾಣಿ ಹವೀಂಷಿ ।** ವೃತ್ರಾಸುರನಲ್ಲಿ ಸಮಸ್ತ ದೇವತೆಗಳೂ, ಸರ್ವ ವಿದ್ಯಗಳೂ, ಸಮಸ್ತ ಹವಿಸ್ಸುಗಳೂ ಇರುವುವು ಎಂದು ಶುಕ್ಲಯಜುರ್ವೇದದಿಂದ ತಿಳಿಯಬರುವುದು. ಇಲ್ಲಿ **ದಸ್ಯುಂ** ಎಂದರೆ ಚೋರನನ್ನು ಎಂಬ ಪದ ಮಾತ್ರವಿದ್ದರೂ ಇದಕ್ಕೆ ವೃತ್ರಾಸುರನೆಂದೇ ಅರ್ಥವನ್ನು ಹೇಳಬೇಕು. ಏಕೆಂದರೆ ಇವನನ್ನು ಇಂದ್ರನು ತನ್ನ ವಜ್ರಾಯುಧದಿಂದ ಪ್ರಹರಿಸಿದನೆಂದು ಇಲ್ಲಿಯೇ ಹೇಳಿರುವುದರಿಂದಲೂ, ವೃತ್ರಾಸುರನನ್ನು ವಜ್ರಾಯುಧದಿಂದಲೇ ಪ್ರಹರಿಸಿ ಸಂಹಾರ ಮಾಡಿದುದಾಗಿ ಅನೇಕ ಕಡೆ ಹೇಳಿರುವುದರಿಂದಲೂ ದಸ್ಯುಂ ಎಂದರೆ ದಸ್ಯುವಾದ ವೃತ್ರಾಸುರನನ್ನೇ ಉದ್ದೇಶಿಸಿ ಹೇಳಿರುವುದೆಂದು ತಿಳಿಯಬೇಕು. ಚೋರವೃತ್ತಿಯಿಂದ ಇವನು ಧನವನ್ನು ಸಂಪಾದಿಸಿ ಧನವಂತನೆಂದು ಪ್ರಸಿದ್ಧಿಯಾಗಿರುವನೆಂದು ಅಭಿಪ್ರಾಯವು.

**ಏಕಶ್ಚರನ್ನುಪಶಾಕೇಭಿಃ** – ಇಂದ್ರನಿಗೆ ಮಿತ್ರರಾದ ಮರುತ್ತುಗಳು ಪ್ರೋತ್ಸಾಹವನ್ನುಂಟುಮಾಡುತ್ತಾ ಸಮೀಪದಲ್ಲಿದ್ದರೂ ಇಂದ್ರನು ಅವರ ಸಹಾಯವನ್ನಪೇಕ್ಷಿಸದೆ ತಾನೊಬ್ಬನೇ ಶತ್ರುವಿನ ಮೇಲೆ ನುಗ್ಗಿ ಅವನನ್ನು ವಜ್ರಾಯುಧದಿಂದ ಪ್ರಹರಿಸಿದನು. ಆದುದರಿಂದ ಇಂದ್ರನಿಗೆ ಇತರರ ಸಹಾಯವು ಆವಶ್ಯಕವಿಲ್ಲ. ತಾನೇ ಅಪಾರವಾದ ಶಕ್ತಿಸಾಮರ್ಥ್ಯಗಳುಳ್ಳವನು ಎಂದರ್ಥವು. ಈ ವಿಷಯದಲ್ಲಿ ಭಾಷ್ಯಕಾರರು— **ಮರುತೋ ಹೈನಂ ನಾಜಹುಃ ಪ್ರಹರ ಭಗವೋ ವೀರಯಸ್ವೇತ್ಯೇವೈನಮೇತಾಂ ವಾಚಂ ವದಂತ ಉಪಾತಿಷ್ಠಂತ** ( ಐ. ಬ್ರಾ. ೩-೨೦. ) ಎಂಬ ಐತರೇಯ ಬ್ರಾಹ್ಮಣ ವಾಕ್ಯವನ್ನು ಉದಹರಿಸಿರುವರು.

**ಉಪಶಾಕೇಭಿಃ— ಉಪಶಕ್ತಂ ಕುರ್ವಂತೀತ್ಯುಪಶಾಕಾಃ । ಉಪಶಾಕೇಭಿಃ ಸಮೀಪವರ್ತಿಭಿಃ ಶಕ್ತಿಯುಕ್ತೈರ್ಮರುದ್ಭಿಃ ॥** ಸಮೀಪದಲ್ಲಿರುವ ಶಕ್ತಿಯುಕ್ತರಾದ ಮರುದ್ದೇವತೆಗಳಿಂದ ಎಂದರ್ಥವು.

**ಅಯಜ್ವಾನಃ— ಯಜ್ವವಿರೋಧಿನಃ ।** ಯಜ್ಞ ಮಾಡುವವರಿಗೆ ವಿರೋಧಿಗಳಾದವರು ಅಥವಾ ಯಜ್ಞ ಮಾಡದಿರುವವರು.

**ಸನಕಾಃ— ಏತನ್ನಾಮಕಾ ವೃತ್ರಾನುಚರಾಃ ।** ಸನಕರೆಂಬುವರು ವೃತ್ರಾಸುರನ ಅನುಚರರು. ಸನಕ ಶಬ್ದವು ( ಸನಕಾತ್ ) ಋಗ್ವೇದದಲ್ಲಿ ಎರಡು ಋಕ್ಕುಗಳಲ್ಲಿ ಮಾತ್ರವಿರುವುದು.

೧. **ಪ್ರ ಸಪ್ತಹೋತಾ ಸನಕಾದರೋಚತ ಮಾತುರುಪಸ್ಥೇ ಯದಶೋಚದೂಧನಿ ।**
**ನ ನಿ ಮಿಷತಿ ಸುರಣೋ ದಿವೇದಿವೇ ಯದಸುರಸ್ಯ ಜಠರಾದಜಾಯತ ॥**

( ಋ. ಸಂ. ೩-೨೯-೧೪. )

೨. **ಅಯಮುಗ್ನಿರ್ವಧ್ರ್ಯಶ್ವಸ್ಯ ವೃತ್ರಹಾ ಸನಕಾತ್ ಪ್ರೇದ್ಧೋ ನಮಸೋಪವಾಕ್ಯಃ ।**
**ಸನೋ ಅಜಾಮೀರುತ ವಾ ವಿಜಾಮೀನಭಿ ತಿಷ್ಠ ಶರ್ಧತೋ ವಾಧ್ರ್ಯಶ್ವ ॥**
( ಋ. ಸಂ. ೧೦-೬೯-೧೨. )

ಈ ಎರಡು ಋಕ್ಕುಗಳಲ್ಲಿಯೂ ಇರುವ ಸನಕಾತ್ ಎಂಬ ಶಬ್ದವು ಅಗ್ನಿಪರವಾಗಿರುವುದು. ವೃತ್ರನ ಅನುಚರರೆಂಬ ಅರ್ಥವನ್ನು ಸೂಚಿಸುವುದಿಲ್ಲ.

ವ್ಯಾಕರಣಪ್ರಕ್ರಿಯ

**ವಧೀಃ**—ಹನ ಹಿಂಸಾಗತ್ಯೋಃ ಧಾತು. ಲುಙ್-ಹನ್+ಲುಙ್. ಸಿಪ್. **ಇತಶ್ಚ** ( ಪಾ. ಸೂ.೩-೪-೧೦೦. ) ಙ್ ಗೆ ಇತ್ಸಂಜ್ಞೆಯನ್ನು ಹೊಂದಿರುವ ಲ ಕಾರದ ಸ್ಥಾನದಲ್ಲಿ ಬಂದ ಇಕಾರಾಂತಪರಸ್ಮೈಪದ ಪ್ರತ್ಯಯದ ಇಕಾರಕ್ಕೆ ಲೋಪ ಬರುತ್ತೆ ಎಂದು ಇಕಾರ ಲೋಪ. **ಚ್ಲಿಲುಙಿ** ( ಪಾ ಸೂ. ೩-೧-೪೩. ) ಎಂದು ಶಪ್‌ಗೆ ಅಪವಾದವಾಗಿ ಚ್ಲಿ ಬರುತ್ತೆ. ಅದಕ್ಕೆ **ಚ್ಲೇಸ್ಸಿಚ್** ( ಪಾ. ಸೂ. ೩-೧-೪೪. ) ಎಂದು ಸಿಚ್ ಆದೇಶ. ಹನ್+ಸ್+ಸ್ **ಲುಙಿಚ** ( ಪಾ. ಸೂ. ೨-೪-೪೩. ) ಲುಙ್ ಪರದಲ್ಲಿ ಬರುವಾಗಲೂ ಹನ್ ಧಾತುವಿಗೆ ವಧ ಎಂಬ ಅಕಾರಾಂತ ಆದೇಶ ಬರುತ್ತೆ ಎಂದು ಮೊದಲೇ ಹನ್ ಧಾತುವಿಗೆ ವಧ ಆದೇಶ. ಈಗ ವಧ+ಸ್+ಸ್ **ಅತೋಲೋಪಃ** ( ಪಾ. ಸೂ. ೬-೪-೪೮. ) ಆರ್ಧಧಾತುಕ ಪ್ರತ್ಯಯವು ಪರದಲ್ಲಿ ಉತ್ಪನ್ನವಾಗುವಾಗ ಹ್ರಸ್ವಾಕಾರಾಂತವಾದ ಶಬ್ದದ ಅಕಾರಕ್ಕೆ ಆರ್ಧಧಾತುಕಪ್ರತ್ಯಯ ಪರದಲ್ಲಿರುವಾಗ ಲೋಪ ಬರುತ್ತೆ. ಇಲ್ಲಿ ಸಿಚ್ ಎಂಬ ಆರ್ಧಧಾತುಕವು ಉತ್ಪನ್ನವಾಗುವಾಗಲೇ ವಧ ಎಂದು ಅಕಾರಾಂತ ಇದೆ. ಆದ್ದರಿಂದ ಅದರ ಅಕಾರಕ್ಕೆ ಲೋಪ. ಇಲ್ಲಿ ಅತೋಲೋಪಃ ಎಂಬುದಕ್ಕೆ ಬದಲಾಗಿ **ಆತೋಲೋಪಃ**— ( ಪಾ. ಸೂ. ೬-೪-೬೪ ) ಎಂದು ಪ್ರಾಮಾದಿಕವಾಗಿ ವೇದಭಾಷ್ಯದಲ್ಲಿ ಇರುವುದು. ಸಿಚ್‌ಗೆ ಇಡಾಗಮ **ಅತೋಹಲಾದೇರ್ಲಘೋಃ** ( ಪಾ. ಸೂ. ೭-೨-೭. ) ಪರಸ್ಮೈಪದ ಪ್ರತ್ಯಯವನ್ನು ಪರದಲ್ಲಿ ಹೊಂದಿ ಇಡಾದಿಯೂ ಆಗಿರುವ ಸಿಚ್ ಪರದಲ್ಲಿದ್ದರೆ ವ್ಯಂಜನದ ಮುಂದಿರುವ ಹ್ರಸ್ವಾಕಾರಕ್ಕೆ ವಿಕಲ್ಪವಾಗಿ ವೃದ್ಧಿ ಬರುತ್ತೆ ಎಂದು ವೃದ್ಧಿಯು ಯದ್ಯಪಿ ಪ್ರಾಪ್ತವಾಗುತ್ತೆ. ಇಲ್ಲಿ **ಅಚಃ ಪರಸ್ಮಿನ್ಪೂರ್ವವಿಧೌ** ( ಪಾ. ಸೂ. ೧-೧ ೫೭ ) ಪರ ನಿಮಿತ್ತಕವು ಅಚ್ ಸ್ಥಾನದಲ್ಲಿ ಬಂದುದೂ ಆದ ಆದೇಶ ಸ್ಥಾನಿಭೂತವಾದ ಅಚ್ಚಿಗಿಂತಲೂ ಪೂರ್ವದಲ್ಲಿ ದೃಷ್ಟವಾದುದಕ್ಕೆ ಕಾರ್ಯವನ್ನು ಮಾಡುವಾಗ ಸ್ಥಾನಿವದ್ಭಾವವನ್ನು ಹೊಂದುವುದು. ಎಂದು ಸಿಚ್ಚನ್ನು ನಿಮಿತ್ತಮಾಡಿಕೊಂಡು ಬಂದ ಅಲೋಪಕ್ಕೆ ವೃದ್ಧಿಯನ್ನುಮಾಡುವಾಗ ಸ್ಥಾನಿವದ್ಭಾವ ಬರುತ್ತೆ. ಈಗ ವಧ ಎಂದು ಇದ್ದಂತೆ ಆಗುತ್ತೆ. ಆದ್ದರಿಂದ ವ. ಎಂಬಲ್ಲಿಯ ಅಕಾರಕ್ಕೆ ಸಿಚ್ ಪರವಾಗುವುದಿಲ್ಲ. ಏವಂಚ ವೃದ್ಧಿ ಬರುವುದಿಲ್ಲ. **ಅಸ್ತಿಸಿಚೋಽಪೃಕ್ತೇ** ( ಪಾ. ಸೂ. ೭-೩-೯೬ ) ಎಂದು ಎರಡನೆ ಸ್‌ಗೆ ಈಡಾಗಮ. ವಧ್+ಇಸ್+ಈಸ್ **ಇಟ ಈಟಿ** (ಪಾ. ಸೂ. ೮-೨-೨೮. ) ಈಟ್ ಪರದಲ್ಲಿದ್ದರೆ ಇಟ್‌ನ ಮುಂದೆ ಇರುವ ಸಿಚ್‌ಗೆ ಲೋಪ ಬರುತ್ತೆ. ಎಂದು ಇ ಈ ಗಳ ಮಧ್ಯೆ ಇರುವ ಸಿಚ್‌ಗೆ ಲೋಪ. **ಸಿಜ್ಲೋಪಏಕಾದೇಶೇಸಿದ್ಧೋವಾಚ್ಯಃ** ಎಂದು ಹೇಳಿರುವುದರಿಂದ **ಪೂರ್ವತ್ರಾಸಿದ್ಧಮ್** (ಪಾ. ಸೂ. ೮-೨-೧. ) ಎಂದು ಸ್ ಲೋಪ ಅಸಿದ್ಧವಾಗುವದಿಲ್ಲ. ಸವರ್ಣದೀರ್ಘ. ವಧೀತ್. ಇಲ್ಲಿ ಅಡಾಗಮವು ಛಾಂದಸವಾಗಿ ಬರುವುದಿಲ್ಲ. ಇ+ಈ ಎಂಬ ಆಗಮುಗಳು **ಆಗಮಾ ಅನುದಾತ್ತಾಃ** ಎಂದು ಅನುದಾತ್ತಗಳು, ಅದಕ್ಕೆ ಬಂದ ಏಕಾದೇಶವೂ ಸ್ಥಾನಸಾಮ್ಯದಿಂದ ಅನುದಾತ್ತ. ಧಾತುಸ್ವರವೇ ನಿಲ್ಲುತ್ತೆ

**ಘನೇನ ಏಕಃ— ಈಷಾ ಅಕ್ಷಾದಿಷು ಛಂದಸಿ ಪ್ರಕೃತಿಭಾವಮಾತ್ರಂ** (ಪಾ. ಸೂ. ೬-೧-೧೨೭-೨) ಈರ್ಷ್ಯಾ+ಅಷಾ ಮೊದಲಾದುವುಗಳಲ್ಲಿ ಪ್ರಕೃತಿಭಾವ ಮಾತ್ರ ವೇದದಲ್ಲಿ ಬರುತ್ತೆ ಎಂದು ಸಂಹಿತಾಕಾಲದಲ್ಲಿ ಪ್ರಕೃತಿ ಭಾವ ಬರುತ್ತೆ. ಅಂದರೆ ಇದ್ದದ್ದು ಇದ್ದಹಾಗೆಯೇ ಇರುತ್ತೆ ಗುಣ ಬರುವುದಿಲ್ಲ ಎಂದು ಅರ್ಥ. ಇಲ್ಲಿ ಮಾತ್ರಂ ಎಂದಿರುವುದರಿಂದ ದೀರ್ಘವಿರುವ ಲಕ್ಷ್ಯಗಳಲ್ಲಿ ಹ್ರಸ್ವವೂ ಬರುವುದಿಲ್ಲ. ಘನೇನ ಎಂಬಲ್ಲಿ ಅನುನಾಸಿಕವು ಛಾಂದಸವು. ಅಂದರೆ ಪಾಣಿನಿ ಸೂತ್ರದಿಂದ ಸಿದ್ಧವಾಗುವುದಿಲ್ಲ. ಪ್ರಾತಿಶಾಖ್ಯಪ್ರಕ್ರಿಯೆಯಿಂದ ಬರುವುದು. ಎಂದು ಅರ್ಥ.

**ಉಪಶಾಕೇಭಿಃ**—ಉಪಶಕ್ತಂ ಕುರ್ವಂತಿ. ಸಮೀಪದಲ್ಲಿರುವ ಶಕ್ತರನ್ನಾಗಿ ಮಾಡುತ್ತವೆ, ಎಂದು ವಿಗ್ರಹ ಶಕ್ಲೃ ಶಕ್ತೌ ಧಾತು **ಹೇತುಮತಿಚ** ( ಪಾ. ಸೂ. ೩-೧-೨೬ ) ಎಂದು ಣಿಚ್ ಪ್ರತ್ಯಯ ಉಪಶಕ್+ಇ **ಅತ-ಉಪಧಾಯಾಃ** ( ಪಾ. ಸೂ.೭-೨-೧೧೬ ) ಎಂದು ಉಪಧಾವೃದ್ಧಿ. **ನನ್ದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ** ( ಪಾ. ಸೂ. ೩-೧-೧೩೪ ) ಎಂದು ಪಚಾದಿಲಕ್ಷಣವಾದ ಅಚ್ ಪ್ರತ್ಯಯ. **ಣೇರನಿಟಿ** ( ಪಾ. ಸೂ. ೬ ೪-೫೧ ) ಎಂದು ಣಿ ಲೋಪ, ಉಪಶಾಕ ಎಂದಾಯಿತು ಇದು **ಥಾಥಘಞ್ಕ್ತಾಜಬಿತ್ರಕಾಣಾಮ್** (ಪಾ. ಸೂ. ೬-೨-೧೪೪ ) ಎಂಬುದರಿಂದ ಅಂತೋದಾತ್ತ.

**ವಿಷುಣಕ್—ಸಂಪದಾದಿಭ್ಯಃಕ್ವಿಪ್** ಎಂದು ಕ್ವಿಪ್ ಪ್ರತ್ಯಯ ವಿಷುಶಬ್ದಪೂರ್ವಕವಾದ ಣಶ ಅದರ್ಶನೇ ಧಾತುವಿನ ಮುಂದೆ ಬರುತ್ತೆ. **ನಶೇರ್ವಾ** ( ಪಾ.ಸೂ. ೮-೨-೬೩ ) ನಶ್ ಧಾತುವಿಗೆ ಕವರ್ಗವು ಪದಾಂತ ವಿಷಯದಲ್ಲಿ ವಿಕಲ್ಪವಾಗಿ ಬರುತ್ತೆ ಎಂದು ಕುತ್ವ ಬರುತ್ತೆ. ಇದು ಬರುವುದಕ್ಕೆ ಮುಂಚೆ **ವ್ರಶ್ಚಭ್ರಸ್ಜ**- (ಪಾ. ಸೂ. ೮-೨-೩೬) ಎಂಬುದರಿಂದ ಶಾಂತ ಲಕ್ಷಣ ಷಕಾರ. ಇದಕ್ಕೆ **ಝಲಾಂಜಶೋನ್ತೇ** ( ಪಾ. ಸೂ.೮-೨ ೩೯ ) ಎಂದು ಜಶ್ತ್ವದಿಂದ ಡಕಾರ. ಇದಕ್ಕೆ **ನಶೇರ್ವಾ** ಎಂದು ಕುತ್ವದಿಂದಿಕಾರ. ವಿಷುನಗ್. ಈಗ **ಖರಿಚ** (ಪಾ. ಸೂ. ೮-೪-೫೫) ಎಂದು ಚರ್ತ್ವದಿಂದ ಕಕಾರ. ವಿಷುಣಕ್. ನಕಾರಕ್ಕೆ ಣಕಾರ, ಇದೊಂದು ವಿಧ. ವಿಷುಶಬ್ದ ಪೂರ್ವಕವಾದ ಅಞ್ಚು ಗತಿಪೂಜನಯೋಃ ಎಂಬ ಧಾತುವಿನ ಮುಂದೆ ಕಿಪ್, ಧಾತುವಿನ ಆದಿಗೆ ನಕಾರಾಗಮ ವಿಷುನಚ್ **ಚೋಃಕುಃ** ( ಪಾ. ಸೂ ೮-೨-೩೦ ) ಎಂಬುದರಿಂದ ಕುತ್ವ.

**ಸನಕಾಃ**— ಇದು ಅಸುರರಿಗೆ ಹೆಸರು. ಷಣು ದಾನೇ ಧಾತು. ಸನ್ವಂತ್ತಿ ಇತಿ ಸನಾಃ. ಕೊಡುವವರು ಎಂದರ್ಥ. ಕೈ ಶಬ್ದೇ ಧಾತು **ಆದೇಚ ಉಪದೇಶೇಽಶಿತಿ** (ಪಾ ಸೂ. ೬ ೧-೪೫) ಎಂದು ಏಕಾರಕ್ಕೆ ಆತ್ವ-ಸನಾನ್ ಕಾಯತಿ ಎಂದು ವಿಗ್ರಹವಾದಾಗ ಸನಶಬ್ದೋಪಪದಕವಾದ ಕಾ ಧಾತುವಿನ ಮುಂದೆ **ಆತೋನುಪಸರ್ಗೇಕಃ** ( ಪಾ. ಸೂ ೩-೨-೩ ) ಉಪಸರ್ಗವಲ್ಲದ ಸುಬಂತವು ಉಪಪದವಾಗಿರುವಾಗ ಆಕಾರಾಂತ ಧಾತುವಿನ ಮುಂದೆ ಕ ಪ್ರತ್ಯಯ ಬರುತ್ತೆ ಎಂದು ಕ ಪ್ರತ್ಯಯ. **ಆತೋಲೋಪ ಇಟಿಚ** ( ಪಾ. ಸೂ. ೬-೪-೬೪. ) ಕಿತ್ ಅಥವಾ ಙಿತ್ ಆದ ಅಜಾದ್ಯಾರ್ಧಧಾತುಕ ಪರವಾಗಿರುವಾಗಲೂ ಇಟ್ ಪರದಲ್ಲಿರುವಾಗಲೂ ಆಕಾರಕ್ಕೆ ಲೋಪ ಬರುತ್ತೆ ಎಂದು ಆಗೆ ಲೋಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತೆ.

**ಪ್ರೇತಿಂ**— ಪ್ರಉಪಸರ್ಗಪೂರ್ವಕವಾದ ಇಣ್ ಧಾತುವಿನ ಮುಂದೆ ಕ್ತಿನ್ ಪ್ರತ್ಯಯ ಪ್ರ+ಇ+ತಿ. ಗುಣ. **ತಾದೌಚನಿತಿಕೃತ್ಯತೌ** (ಪಾ. ಸೂ. ೬-೨-೫೦.) ತು ಎಂಬುದನ್ನು ಬಿಟ್ಟು ತಕಾರಾದಿಯಾಗ ನಕಾರೇತ್ಸಂಜ್ಞ

ಕೃತ್ಪ್ರತ್ಯಯ ಪರದಲ್ಲಿರುವಾಗ ಅವ್ಯವಹಿತವಾದ ಗತಿಯು ಪ್ರಕೃತಿಸ್ವರವನ್ನು ಹೊಂದುವುದು ಎಂದು ಪ್ರಕೃತಿ ಸ್ವರ ಬರುತ್ತೆ.

**ಈಯುಃ**—ಇಣ್ ಗತೌ ಧಾತು. ಲಿಟ್ ಝಿ ಪ್ರತ್ಯಯ. **ಪರಸ್ಮೈಪದಾನಾಂಣಲತುಸುಸ್ಥಲಥುಸಣಲ್ವಮಾಃ** (ಪಾ. ಸೂ.೩-೪-೮೨) ಎಂದು ಝಿಗೆ ಉಸ್ ಆದೇಶ. **ಲಿಟಿಧಾತೋರನಭ್ಯಾಸಸ್ಯ** (ಪಾ. ಸೂ.೬-೧-೮ ಎಂದು ದ್ವಿತ್ವ- ಇ+ಇ+ಉಸ್. **ಇಣೋಯಣ್** (ಪಾ. ಸೂ. ೬-೪-೮೧.) ಅಜಾದಿಯಾದ ಪ್ರತ್ಯಯ ಪರದಲ್ಲಿರುವಾಗ ಇಣ್ ಧಾತುವಿಗೆ ಯಣ್ ಆದೇಶ ಬರುತ್ತೆ ಅಂದರೆ ಇಕಾರದ ಸ್ಥಾನದಲ್ಲಿ ಯಕಾರ ಬರುತ್ತೆ. ಎಂದು ಎರಡನೇ ಇಕಾರಕ್ಕೆ ಯಕಾರಾದೇಶ. ಈ ಉಪಪಾದನೆಯು **ದ್ವಿರ್ವಚನೇಽಚಿ** ಎಂಬುದಕ್ಕೆ ದ್ವಿತ್ವನಿಮಿತ್ತವಾದ ಅಚ್ ಪರದಲ್ಲಿರುವಾಗ ಅಚ್‌ಗೆ ಆದೇಶ ಬರುವುದಿಲ್ಲ ಎಂದು ಅರ್ಥವಾದಾಗ. ಇನ್ನು **ದ್ವಿರ್ವಚನೇಽಚಿ** (ಪಾ. ಸೂ.೧-೧-೫೯) ದ್ವಿತ್ವನಿಮಿತ್ತವಾದ ಅಚ್ಚು ಪರದಲ್ಲಿದ್ದರೆ ಅಚ್ಚಿನ ಸ್ಥಾನದಲ್ಲಿ ಬಂದ ಆದೇಶವು ದ್ವಿತ್ವವನ್ನು ಮಾಡುವಾಗ ಸ್ಥಾನಿವದ್ಭಾವವನ್ನು ಹೊಂದುವುದು ಎಂದು ಅರ್ಥವನ್ನು ಹೇಳೋಣ. ಈ ಪಕ್ಷದಲ್ಲಿ ಮೊದಲು ಯಣ್ ಅದೇಶ- ಯ+ಉಸ್ ಈಗ ಸ್ಥಾನಿವದ್ಭಾವದಿಂದ ಇಕಾರ ಇದ್ದಂತೆ ಆಗುತ್ತೆ. ಆದ್ದರಿಂದ ದ್ವಿತ್ವ ಬರುತ್ತೆ. ಇ+ಯ್+ಉಸ್, ಈಗ **ದೀರ್ಘಇಣಃಕಿತಿ** (ಪಾ. ಸೂ. ೭-೪-೬೯) ಕಿತ್ ಆದ ಲಿಟ್ಟು ಪರದಲ್ಲಿರುವಾಗ ಇಣ್ ಧಾತುವಿನ ಅಭ್ಯಾಸಕ್ಕೆ ದೀರ್ಘ ಬರುತ್ತೆ ಎಂದು ಮೊದಲನೇ ಇಕಾರಕ್ಕೆ ದೀರ್ಘ. ಈ+ಯ್+ಉಸ್ = ಈಯುಸ್ ರುತ್ವವಿಸರ್ಗಗಳು. ಈಯುಃ ಎಂದಾಗುತ್ತೆ. || ೪ ||

---

॥ ಸಂಹಿತಾಪಾಠಃ ॥

ಪರಾ ಚಿಚ್ಛೀರ್ಷಾ ವವೃಜುಸ್ತ ಇಂದ್ರಾಯಜ್ವಾನೋ ಯಜ್ವಭಿಃ
ಸ್ಪರ್ಧಮಾನಾಃ ।
ಪ್ರ ಯದ್ದಿವೋ ಹರಿವಃ ಸ್ಥಾತರುಗ್ರ ನಿರವ್ರತಾँ ಅಧಮೋರೋ-
ದಸ್ಯೋಃ ॥ ೫ ॥

॥ ಪದಪಾಠಃ ॥

**ಪರಾ । ಚಿತ್ । ಶೀರ್ಷಾ । ವವೃಜುಃ । ತೇ । ಇಂದ್ರ । ಅಯಜ್ವಾನಃ । ಯಜ್ವಽಭಿಃ । ಸ್ಪರ್ಧಮಾನಾಃ ॥**

ಪ್ರ । ಯತ್ । ದಿವಃ । ಹರಿಽವಃ । ಸ್ಥಾತಃ । ಉಗ್ರ । ನಿಃ । ಅವ್ರತಾನ್ ।

ಅಧಮಃ । ರೋದಸ್ಯೋಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ವೃತ್ರಾನುಚರಾಃ ಶೀರ್ಷಾ ಸ್ವಕೀಯಾನಿ ಶಿರಾಂಸಿ ಪರಾ ಚಿತ್ ಪರಾಙ್ಮುಖಾನ್ಯೇವ ಕೃತ್ವಾ ವವೃಜುಃ । ಗತವಂತಃ । ಕೀದೃಶಾಸ್ತೇ । ಅಯಜ್ವಾನಃ ಸ್ವಯಂ ಯಾಗರಹಿತಾಃ ಪ್ರತ್ಯುತ ಯಜ್ವಭಿರ್ಯಾಗಾನುಷ್ಠಾತೃಭಿಃ ಸಹ ಸ್ಪರ್ಧಮಾನಾಃ । ಹೇ ಹರಿವೋ ಹರಿನಾಮಕಾಶ್ವಯುಕ್ತ ಸ್ಥಾತಃ ಸ್ಥಿತಿಯುಕ್ತ ಯುದ್ಧೇ ಪಲಾಯನರಹಿತ ಉಗ್ರ ಶೌರ್ಯಯುಕ್ತೇಂದ್ರ ಯದ್ಯದಾ ದಿವೋಽಂತರಿಕ್ಷಾದ್ರೋದಸ್ಯೋರ್ದ್ಯಾವಾಪೃಥಿವ್ಯೋಃ ಸಕಾಶಾಚ್ಚಾವ್ರತಾನ್ವ್ರತರಹಿತಾನ್ವೃತ್ರಾನುಚರಾನ್ನಿಷ್ಪ್ರಾಧಮೋ ನಿಃಶೇಷೇಣ ಧಮನಂ ಕೃತವಾನಸಿ । ತದಾನೀಂ ತ್ವದೀಯಮುಖವಾಯುನಾ ನುನ್ನಾಃ ಸಂತೋ ವವೃಜುರಿತಿ ಪೂರ್ವತ್ರಾನ್ವಯಃ ॥ ಶಿರ್ಷಾ । ಶೀರ್ಷಂಛಂದಸಿ ಬಹುಲಮಿತಿ ಶೇರ್ಲೋಪಃ । ವವೃಜುಃ । ವೃಜೀ ವರ್ಜನೇ । ಅಸಂಯೋಗಾಲ್ಲಿಟ್ ಕಿತ್ । ಪಾ. ೧-೨-೫. । ಇತಿ ಕಿತ್ತ್ವಾದ್ಗುಣಾಭಾವಃ । ಅಯಜ್ವಾನಃ । ಯಜತೇಃ ಸುಯಜೋರ್ಙ್ವನಿಪ್ । ಪಾ. ೩-೨-೧೦೩. । ಇತಿ ಭೂತೇ ಙ್ವನಿಪ್ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರೇಣಾದ್ಯುದಾತ್ತತ್ವಂ । ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ದಿವಃ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಹರಿವಃ । ಹರೀ ಅಸ್ಯ ಸ್ತ ಇತಿ ಹರಿವಾನ್ । ಛಂದಸೀರ ಇತಿ ಮತುಪೋ ವತ್ವಂ । ಸಂಬುದ್ಧೌ ಮತುವಸೋರಿತಿ ರುತ್ವಂ । ಅವ್ರತಾನ್ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ದೀರ್ಘಾದಟೀತಿ ಸಂಹಿತಾಯಾಂ ನಕಾರಸ್ಯ ರುತ್ವಂ । ಆತೋಽಟಿ ನಿತ್ಯಮಿತಿ ಸಾನುನಾಸಿಕ ಆಕಾರಃ । ಅಧಮಃ । ಧ್ಮಾ ಶಬ್ದಾಗ್ನಿಸಂಯೋಗಯೋಃ । ಲಙ ಸಿಪಿ ಶಪಿ ಪಾಘ್ರೇತ್ಯಾದಿನಾ ಧಮಾದೇಶಃ ॥ ॥ ೧ ॥

॥ ಪ್ರತಿಪದಾರ್ಥ ॥

**ಹರಿವಃ**— ಹರಿನಾಮಕವಾದ ಕುದುರೆಗಳುಳ್ಳ । **ಸ್ಥಾತಃ**— (ಯುದ್ಧದಲ್ಲಿ) ಸ್ಥಿರನಾದ । **ಉಗ್ರ**— ಭಯಂಕರನಾದ । **ಇಂದ್ರ**— ಇಂದ್ರನೇ । **ಯತ್**— ಯಾವಾಗ । **ದಿವಃ**— ದೇವಲೋಕದಿಂದಲೂ । **ರೋದಸ್ಯೋಃ**— ಪೃಥಿವ್ಯಂತರಿಕ್ಷಗಳಿಂದಲೂ (ಬಂದ) । **ಅವ್ರತಾನ್**— ವೈದಿಕವ್ರತಾಚರಣೆಯಿಲ್ಲದಿರುವ (ವೃತ್ರಾನುಚರರನ್ನು) । **ನಿಃ ಪ್ರ ಅಧಮಃ**—ನಿಶ್ಶೇಷವಾಗಿ ಮುಖವಾತದಿಂದ ತಳ್ಳಿದೆಯೋ (ಆಗ) । **ಅಯಜ್ವಾನಃ**— ಯಾಗಾನುಷ್ಠಾತೃಗಳಲ್ಲದ । **ಯಜ್ವಭಿಃಸ್ಪರ್ಧಮಾನಾಃ**— ಯಜ್ಞಮಾಡುವವರೊಂದಿಗೆ ಹೋರಾಡತಕ್ಕ । **ತೇ**— ಅವರು । **ಶೀರ್ಷಾ**— ತಲೆಗಳನ್ನು । **ಪರಾ ಚಿತ್**— ಹಿಂತಿರುಗಿಸಿಕೊಂಡೇ । **ವವೃಜುಃ**— ಓಡಿಹೋದರು.

॥ ಭಾವಾರ್ಥ ॥

ಎಲೈ ಇಂದ್ರನೇ, ಹರೀ ಎಂಬ ಎರಡು ಕುದುರೆಗಳು ನಿನಗೆ ಶ್ರೇಷ್ಠವಾದ ವಾಹನಗಳು. ನೀನು ಯುದ್ಧದಲ್ಲಿ ಶತ್ರುಗಳಿಗೆ ಬೆನ್ನುತೋರಿಸಿ ಓಡದೆ ಸ್ಥಿರನಾಗಿ ಹೊಡೆದಾಡುವವನು. ಶತ್ರುಗಳಿಗೆ ಭಯಂಕರನು. ವೈದಿಕವ್ರತಾಚರಣೆಯಿಲ್ಲದೆ ಯಾಗಭ್ರಷ್ಟರಾಗಿ ಯಜ್ಞಕರ್ತರೊಡನೆ ಹೋರಾಡುವ ಸಲುವಾಗಿ ಯಾವಾಗ ದೇವಲೋಕದಿಂದಲೂ ಪೃಥಿವ್ಯಂತರಿಕ್ಷಗಳಿಂದಲೂ ವೃತ್ರಾನುಚರರು ಹಿಂಸೆಗಾಗಿ ಬರುವರೋ ಆಗ ನೀನು ಅವರನ್ನು ನಿಶ್ಶೇಷವಾಗಿ ಮುಖ ವಾಯುವಿನಿಂದಲೇ ತಳ್ಳಿಬಿಡುವೆ. ಅವರು ಮುಖವನ್ನು ತೋರಿಸದೆ ಹಿಂತಿರುಗಿ ಓಡಿಹೋದರು.

## English Translation

O Indra, the neglecters of sacrifices striving hard with the sacrificers fled with their faces turned back ; O mighty Indra, lord of horses, when you blew the unreligious they disappeared from the heaven, earth and sky.

॥ ವಿಶೇಷವಿಷಯಗಳು ॥

**ಪರಾಚಿತ್ ಶೀರ್ಷಾ—ಪರಾಙ್ಮುಖಾ** । ತಲೆಯನ್ನು ತಿರುಗಿಸಿ (ತಗ್ಗಿಸಿ) ಕೊಂಡು, ಹಿಂದಕ್ಕೆ ತಿರಗಿ ನೋಡದೆ ಓಡಿಹೋದರು ಎಂದಭಿಪ್ರಾಯವು

**ಅಯಜ್ವಾನಃ ಯಜ್ವಭಿಃ ಸ್ಪರ್ಧಮಾನಾಃ—** ಯಜ್ಞವನ್ನು ಮಾಡದಿರುವರರು (ಎಂದರೆ ದಸ್ಯುಗಳು, ರಾಕ್ಷಸರು ಇತ್ಯಾದಿ) ಯಜ್ಞಮಾಡುವವರೊಡನೆ (ಇಂದ್ರಾದಿ ದೇವತೆಗಳನ್ನು ಯಜ್ಞದಲ್ಲಿ ಆವಾಹನೆ ಮಾಡಿ ಆರಾಧಿಸುವವರೊಡನೆ) ಹೋರಾಡುತ್ತಿರುವಾಗ.

**ಅಧಮಃ—ಧ್ಮಾ ಶಬ್ದಾಗ್ನಿಸಂಯೋಗಯೋಃ** । ಧ್ಮಾ ಎಂಬ ದಾತುವಿಗೆ ಬೆಂಕಿಯನ್ನು ಹೊತ್ತಿಸುವುದಕ್ಕಾಗಿ ಊದುವುದು ಎಂದರ್ಥ ಅಥವಾ ಶಬ್ದವಾಗುವಂತೆ (ಶಂಖಾದಿಗಳಿಂದ) ಘಟ್ಟಿಯಾಗಿ ಊದುವುದು. ಆದುದರಿಂದ ಅಧಮಃ ಎಂದರೆ ಘಟ್ಟಿಯಾಗಿ ಗರ್ಜನಾದಿ ಶಬ್ದಗಳಿಂದ ಅವರನ್ನು ಮುಖವಾಯುವಿನಿಂದ ತಳ್ಳಿ ಓಡಿಸಿದೆ ಎಂದಭಿಪ್ರಾಯ.

**ಹರಿವಃ—ಹರೀ ಅಸ್ಯ ಸ್ತ ಇತಿ ಹರಿವಾನ್** । ಹರೀ ಎಂಬ ಹೆಸರಿನ ಎರಡು ಕುದುರೆಗಳುಳ್ಳ ಇಂದ್ರನು.

**ಅವ್ರತಾನ್—** ಯಜ್ಞಾನುಷ್ಠಾನಾದಿವ್ರತಗಳನ್ನು ಮಾಡದಿರುವವರನ್ನು, ದಸ್ಯುಗಳೇ ಮೊದಲಾದವರನ್ನು

**ರೊದಸ್ಯೋಃ—ದ್ಯಾವಾಪೃಥಿವ್ಯೋಃ** । ಭೂಮ್ಯಂತರಿಕ್ಷಗಳಿಂದ

॥ ವ್ಯಾಕರಣಪ್ರಕ್ರಿಯಾ ॥

**ಶೀರ್ಷಾ**—ಶಿರಸ್ ಶಬ್ದದ ಮುಂದೆ ಶಸ್. **ಜಶ್ಶಸೋಃಶಿಃ** ( ಪಾ. ಸೂ. ೭-೧-೨೦) ಎಂದು ಶಸ್ಸಿಗೆ ಶಿ ಆದೇಶ. ಇದಕ್ಕೆ **ಶಿಸರ್ವನಾಮಸ್ಥಾನಂ** ( ಪಾ. ಸೂ. ೬-೧-೪೨) ಎಂದು ಸರ್ವನಾಮಸ್ಥಾನ ಸಂಜ್ಞೆ ಇದೆ. ಶಿರಸ್ ಶಬ್ದಕ್ಕೆ **ಶೀರ್ಷಂಶ್ಛಂದಸಿ** ( ಪಾ. ಸೂ-೬-೧-೬೦) ಛಂದಸ್ಸಿನಲ್ಲಿ ಶಿರಸ್ ಶಬ್ದಕ್ಕೆ ಶೀರ್ಷನ್ ಆದೇಶ ಬರುತ್ತೆ ಎಂದು ಶೀರ್ಷನ್ ಆದೇಶ. **ಶೇಶ್ಛಂದಸಿಬಹುಲಮ್** (ಪಾ. ಸೂ. ೬-೧-೭೦) ಛಂದಸ್ಸಿನಲ್ಲಿ ಶಿಗೆ ಬಹುಲವಾಗಿ ಲೋಪಬರುವುದು ಎಂದು ಶಿಗೆ ಲೋಪ. **ಸರ್ವನಾಮಸ್ಥಾನೇಚಾಸಂಬುದ್ಧೌ** (ಪಾ. ಸೂ. ೬-೪-೮) ಎಂದು ಉಪಧಾದೀರ್ಘ. **ನಲೋಪಃಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಪ್ರಾತಿಪದಿಕಸಂಜ್ಞೆ ಇರುವ ಪದದ ಕಡೆಯಲ್ಲಿರುವ ನಕಾರಕ್ಕೆ ಲೋಪ ಬರುತ್ತೆ ಎಂದು ನಕಾರ ಲೋಪ. ಶೀರ್ಷಾ ಎಂದಾಗುತ್ತೆ.

**ವವೃಜುಃ**— **ವೃಜೀ ವರ್ಜನೇ** ಧಾತು. ಲಿಟ್—ಝಿ—ಉಸ್ ದ್ವಿತ್ವ. ಅಭ್ಯಾಸದ ಋಕಾರಕ್ಕೆ **ಉರತ್** (ಪಾ. ಸೂ. ೭-೪-೬೬) ಎಂದು ಅಕಾರ ಅದು ರೇಫಶಿರಸ್ಕವಾಗಿ ಬರುತ್ತೆ. **ಹಲಾದಿಃಶೇಷಃ** ಎಂದು ಅಭ್ಯಾಸದಲ್ಲಿರುವ ರೇಫ ಜಕಾರಗಳಿಗೆ ಲೋಪ. ವವೃಜ್+ಉಸ್. ಈಗ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಇ ಉ ಋ ಗಳನ್ನು ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ಈ ಪ್ರತ್ಯಯಗಳು ಪರದಲ್ಲಿರು ವಾಗ ಗುಣ ಬರುತ್ತೆ ಎಂದು ಋಗೆ ಅರ್ ಎಂಬ ಗುಣವು ಪ್ರಾಪ್ತವಾಗುವುದು. **ಕ್ಙಿತಿಚ** ಎಂದು ನಿಷೇಧ ಬರುವುದ ರಿಂದ ಅದು ಬರುವುದಿಲ್ಲ. ಉಸ್ ಪ್ರತ್ಯಯದಲ್ಲಿ ಕಕಾರಕ್ಕೆ ಇತ್ಸಂಜ್ಞೆ ಬಂದಿಲ್ಲ. ಇದುಹೇಗೆ ಕಿತ್ ? ಎಂದು ಸಂಶಯ ಬರಬಹುದು. ಇಲ್ಲಿ ಕಕಾರಕ್ಕೆ ಇತ್ಸಂಜ್ಞೆ ಇಲ್ಲದಿದ್ದರೂ **ಅಸಂಯೋಗಾಲ್ಲಿಟ್ಕಿತ್** (ಪಾ. ಸೂ.೧-೨-೫) ಸಂಯೋಗದ ಮುಂದೆ ಇಲ್ಲದ ಪಿತ್ತಲ್ಲದ ಲಿಟ್ಟು ಕಿತ್ತಿನಂತೆ ಆಗುತ್ತೆ ಎಂಬ ಅತಿದೇಶದಿಂದ ಇದು ಕಿತ್ ಆಗುತ್ತೆ. ಆದ್ದರಿಂದ ಹಿಂದೆ ಹೇಳಿದಂತೆ ಸಂಶಯಕ್ಕೆ ಅವಕಾಶವಿಲ್ಲ.

**ಅಯಜ್ವಾನಃ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. **ಸುಯಜೋರ್ಙ್ವನಿಪ್** (ಪಾ.ಸೂ. ೩-೨-೧೦೩) ಷುಞ್ ಅಭಿಷವೇ ಯಜ ದೇವಪೂಜಾದೌ, ಈ ಧಾತುಗಳ ಮುಂದೆ ಭೂತಾರ್ಥದಲ್ಲಿ ಙ್ವನಿಪ್ ಬರುತ್ತೆ ಎಂದು ಙ್ವನಿಪ್, ಯಜ್+ವನ್=ಯಜ್ವನ್. ಪ್ರತ್ಯಯವು ಪಿತ್. ಆದ್ದರಿಂದ ಅನುದಾತ್ತ. ನ ಯಜ್ವಾ ಎಂದು ನಞ್ ಸಮಾಸ. **ತತ್ಪುರುಷೇ....ಅವ್ಯಯದ್ವಿತೀಯಾಕೃತ್ಯಾಃ** (ಪಾ.ಸೂ. ೬-೨-೨.) ಎಂದು ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತೆ. ನಞ್ನಿಪಾತ. ಆದ್ದರಿಂದ **ನಿಪಾತಾ ಆದ್ಯುದಾತ್ತಾಃ** (ಫಿ. ಸೂ. ೮೦. ) ಎಂದು ಆದ್ಯು ದಾತ್ತ. ಸಮಾಸ ಬಂದಮೇಲೆಯೂ ಅವ್ಯಯ ಪೂರ್ವಪದ ಪ್ರಕೃತಿಸ್ವರ ಬರುವುದರಿಂದ ಅದೇ ಸ್ವರ ನಿಲ್ಲುತ್ತೆ.

**ದಿವಃ**—ಪಂಚಮಿಾ ಏಕವಚನ. ಇದು ಸುಪ್ಪಾದ್ದರಿಂದ ನ್ಯಾಯವಾಗಿ **ಅನುದಾತ್ತೌಸುಪ್ಪಿತೌ** ಎಂದು ಅನುದಾತ್ತವಾಗಬೇಕು ಆದರೂ ಇದಕ್ಕೆ **ಊಡಿದಂ ಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಎಂದು ಅಪವಾದವಿರುವುದರಿಂದ ವಿಭಕ್ತಿಯು ಉದಾತ್ತವಾಗುತ್ತೆ.

**ಹರಿವಃ**—ಹರೀ ಅಸ್ಯ ಸ್ತಃ= ಕುದುರೆಗಳು ಇವನಿಗೆ ಇವೆ. ಎಂದು ವಿಗ್ರಹ. **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್** (ಪಾ. ಸೂ ೫-೨-೯೪) ಎಂದು ಮತುಪ್ ಪ್ರತ್ಯಯ. ಹರಿ+ಮತ್. **ಛಂದಸೀರಃ** (ಪಾ. ಸೂ. ೮-೨-೧೮.)

ಇಕಾರ ಅಥವಾ ರೇಫವನ್ನು ಕೊನೆಯಲ್ಲಿ ಹೊಂದಿರುವ ಶಬ್ದದ ಮುಂದೆ ಇರುವ ಮತುಪ್ಪಿನ ಮಕಾರಕ್ಕೆ ವಕಾರ ಬರುತ್ತೆ ಎಂಬುದರಿಂದ ಇಕಾರದ ಮುಂದಿರುವ ಮಕಾರಕ್ಕೆ ವಕಾರ. ಹರಿವತ್ ಎಂದಾಯಿತು. ಇದರ ಮುಂದೆ ಸಂಬೋಧನ ಏಕವಚನ ಸು ಪ್ರತ್ಯಯ. ಹರಿವತ್+ಸು. **ಉಗಿದಚಾಂ** ಎಂದು ನುಮ್. ಸುಲೋಪ, ಸಂಯೋಗಾಂತಲೋಪ. **ಮತುವಸೋರು ಸಂಬುದ್ಧೌ ಛಂದಸಿ** (ಪಾ. ಸೂ. ೮-೩-೧) ಸಂಬುದ್ಧಿ ಪರದಲ್ಲಿದ್ದರೆ ಮತುಪ್ ಪ್ರತ್ಯಯಾಂತ ಅಥವಾ ವಸುಪ್ರತ್ಯಯಾಂತವಾದ ಶಬ್ದದ ಕಡೆಯ ವರ್ಣಕ್ಕೆ ರು ಆದೇಶವು ಛಂದಸ್ಸಿನಲ್ಲಿ ಬರುತ್ತೆ ಎಂದು ಸ್‌ಗೆ ರು ಆದೇಶ. ಹರಿವರ್. ರೇಫಕ್ಕೆ ವಿಸರ್ಗ.

**ಅವ್ರತಾನ್**—ನ ವಿದ್ಯತೇ ವ್ರತಂ ಯೇಷಾಂ ತೇ. ತಾನ್ ಎಂದು ವಿಗ್ರಹ. **ನಞ್‌ಸುಭ್ಯಾಮ್** (ಪಾ.ಸೂ. ೬-೨ ೧೭೨) ಬಹುವ್ರೀಹಿ ಸಮಾಸದಲ್ಲಿ ನಞ್-ಸುಗಳ ಮುಂದೆ ಇರುವ ಉತ್ತರಪದಕ್ಕೆ ಅಂತೋದಾತ್ತಸ್ವರ ಬರುತ್ತೆ ಎಂದು ಅ ಎಂಬ ನಞ್‌ನ ಮುಂದಿರುವ ವ್ರತಶಬ್ದಕ್ಕೆ ಅಂತೋದಾತ್ತ ಬರುತ್ತೆ. ಸಂಹಿತಾಕಾಲದಲ್ಲಿ **ದೀರ್ಘಾದಟಿಸಮಾನಪಾದೇ** ಎಂದು ಅವ್ರತಾನ್ ಶಬ್ದದ ನಕಾರಕ್ಕೆ ರು ಆದೇಶ. ಅವ್ರತಾರ್+ಅಧಮಃ, **ಆತೋಽಟಿನಿತ್ಯಮ್** (ಪಾ. ಸೂ. ೮ ೩-೩) ಅಜ್ವರ್ಣ ಪರದಲ್ಲಿರುವಾಗ ರುವಿನ ಹಿಂದೆ ಇರುವ ದೀರ್ಘಾಕಾರಕ್ಕೆ ಅನುನಾಸಿಕವು ನಿತ್ಯವಾಗಿ ಬರುತ್ತೆ ಎಂದು ಅನುನಾಸಿಕ ಬರುವುದು.

**ಅಧಮಃ**—ಧ್ಮಾ ಶಬ್ದಾಗ್ನಿಸಂಯೋಗಯೋಃ ಧಾತು ಲಜ್ ಮಧ್ಯಮಪುರುಷ ಏಕವಚನ ಸಿಪ್. ಧ್ಮಾ+ಸಿ ಶಪ್. ಧ್ಮಾ+ಅ+ಸಿ. **ಪಾಘ್ರಾಧ್ಮಾಸ್ಥಾಮ್ನಾದಾಣ್ದೃಶ್ಯರ್ತಿಸರ್ತಿಶದಸದಾಂಪಿಬಜಿಘ್ರಧಮತಿಷ್ಠಮನಯಚ್ಛಪಶ್ಯರ್ಚ್ಛಧೌಶೀಯಸೀದಾಃ** (ಪಾ ಸೂ.೭-೩-೭೮) ಇತ್ಸಂಜ್ಞಕ ಶಕಾರಾದಿ ಪ್ರತ್ಯಯ ಪರದಲ್ಲಿರುವಾಗ ಪಾ ಮೊದಲಾದವುಗಳಿಗೆ ಕ್ರಮವಾಗಿ ಪಿಬ ಮೊದಲಾದ ಆದೇಶಗಳು ಬರುವುವು ಎಂದು ಧ್ಮಾ ಗೆ ಧಮ ಆದೇಶ. ರುತ್ವ ವಿಸರ್ಗಗಳು. ॥ ೫ ॥



॥ ಸಂಹಿತಾಪಾಠ ॥

ಅಯುಯುತ್ಸನ್ನನವದ್ಯಸ್ಯ ಸೇನಾಮಯಾತಯಂತ ಕ್ಷಿತಯೋ ನವಗ್ವಾಃ ।
ವೃಷಾಯುಧೋ ನ ವಧ್ರಯೋ ನಿರಷ್ಟಾಃ ಪ್ರವದ್ಭಿರಿಂದ್ರಾಚ್ಚಿತ-ಯಂತ ಆಯನ್ ॥ ೬ ॥

॥ ಪದಪಾಠಃ ॥

ಅಯುಯುತ್ಸನ್ । ಅನವದ್ಯಸ್ಯ । ಸೇನಾಂ । ಅಯಾತಯಂತ । ಕ್ಷಿತಯಃ ।
ನವಽಗ್ವಾಃ ।
ವೃಷಽಯುಧಃ । ನ । ವಧ್ರಯಃ । ನಿಃಽಅಷ್ಟಾಃ । ಪ್ರವತ್ಽಭಿಃ । ಇಂ-
ದ್ರಾತ್ । ಚಿತಯಂತಃ । ಆಯನ್ ॥ ೬ ॥

॥ ಸಾಯಣಭಾಷ್ಯಂ ॥

ಅನವದ್ಯಸ್ಯ ಗರ್ಹಣೀಯದೋಷರಹಿತಸ್ಯೇಂದ್ರಸ್ಯ ಸೇನಾಂ ಪ್ರತ್ಯಯುಯುತ್ಸನ್ । ವೃತ್ರಸ್ಯಾ-ನುಚರಾ ಯೋದ್ಧುಮೈಚ್ಛನ್ । ತದಾನೀಂ ನವಗ್ವಾ ನವನೀಯಗತಯಃ ಸ್ತೋತವ್ಯಚರಿತ್ರಾಃ । ಯದ್ವಾ । ಅಂಗಿರಸಾಂ ಸತ್ರಮಾಸೀನಾನಾಂ ಮಧ್ಯೇ ಯೇ ನವಭಿರ್ಮಾಸೈರವಾಪ್ತಫಲಾ ಉತ್ಥಿತಾಸ್ತೇಷಾಂ ನವಗ್ವಾ ಇತಿ ಸಂಜ್ಞಾ । ನವಗ್ವಾಸಃ ಸುತಸೋಮಾಸ ಇದ್ರಂ । ಋಗ್ವೇ ೫-೨೯-೧೨ । ಇತ್ಯಾದಿಷು ತಥಾಭಿಹಿತ-ತ್ವಾತ್ । ಕ್ಷಿತಯೋ ಮನುಷ್ಯಾ ಅಂಗಿರಃಪ್ರಭೃತಯಃ । ಕ್ಷಿತಯಃ ಕೃಷ್ಟಯ ಇತಿ ತನ್ನಾಮಸು ಪಾಠಾತ್ । ಅಯಾತಯಂತ । ಯುಧ್ಯಾರ್ಥಮಿಂದ್ರಂ ನಾನಾವಿಧೈರ್ಮಂತ್ರೈಃ ಪ್ರೋತ್ಸಾಹಿತವಂತಃ । ಇಂದ್ರೇ ಯೋದ್ಧುಂ ಗತೇ ಸತಿ ನಿರಷ್ಟಾಸ್ತೇನೇಂದ್ರೇಣ ನಿರಾಕೃತಾ ವೃತ್ರಾನುಚರಾಶ್ಚಿತಯಂತಃ ಸ್ವಕೀ-ಯಾಮಶಕ್ತಿಂ ಜ್ಞಾಪಯಂತ ಇಂದ್ರಾದಿಂದ್ರಸ್ಯ ಸಕಾಶಾತ್ಪ್ರವದ್ಭಿಃ ಪ್ರವಣೈಃ ಪಲಾಯಿತುಂ ಸುಶಕೈ-ರ್ಮಾರ್ಗೈರಾಯನ್ । ದೂರೇ ಗತವಂತಃ । ತತ್ರ ದೃಷ್ಟಾಂತಃ । ವೃಷಾಯುಧೋ ವೃಷೇಣ ಸೇಚನ-ಸಮರ್ಥೇನ ಪುಂಸ್ತ್ವಯುಕ್ತೇನ ಶೂರೇಣ ಸಹ ಯುದ್ಧಂ ಕುರ್ವಂತೋ ವಧ್ರಯೋ ನ ನಪುಂಸಕಾ ಇವ । ನಿಸರ್ಗಪಂಡೋ ವಧ್ರಿಶ್ಚೇತ್ಯಾದಿಸ್ಮೃತಿಷು ಪ್ರಯೋಗಾತ್ । ತೇ ಯಥಾ ಪ್ರಬಲೇನ ದೂರೇ ನಿರಾಕೃತಾ ಭವಂತಿ ತದ್ವತ್ ॥ ಅಯುಯುತ್ಸನ್ । ಯುಧ ಸಂಪ್ರಹಾರೇ । ಸನಿ ಹಲಂತಾಚ್ಚ । ಪಾ. ೧-೨-೧೦. । ಇತಿ ಸನಃ ಕಿತ್ತ್ವಾದ್ಗುಣಾಭಾವಃ । ಏಕಾಚ ಉಪದೇಶೇಽನುದಾತ್ತಾತ್ । ಪಾ. ೭-೨-೧೦. । ಇತೀಟ್ಪ್ರತಿಷೇಧಃ । ವ್ಯತ್ಯಯೇನ ಪರಸ್ಮೈಪದಂ । ಸೇನಾಂ । ಇನೇನ ಸಹ ವರ್ತತ ಇತಿ ಸೇನಾ ವೋಪಸರ್ಜನಸ್ಯೇತಿ ಸಹಶಬ್ದಸ್ಯ ಸಭಾವಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಅಯಾತಯಂತ । ಯತೀ ಪ್ರಯತ್ನೇ । ಹೇತುಮತಿ ಚೇತಿ ಣಿಚ್ । ಕ್ಷಿತಯಃ । ಕ್ಷಿ ನಿವಾಸಗತ್ಯೋಃ । ಕ್ಷಿಯಂತಿ ಗಚ್ಛಂತೀತಿ ಕ್ಷಿತಯೋ ಮನುಷ್ಯಾಃ । ಕ್ತಿಚ್ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ । ನವಗ್ವಾಃ । ನವಭಿರ್ಮಾಸೈರ್ಗಚ್ಛಂತೀತಿ ನವಗ್ವಾಃ । ಗಮೇರೌಣಾದಿಕೋ ಡ್ವಪ್ರತ್ಯಯಃ । ಯದ್ವಾ । ಕ್ವಿಪಿ ಗಮಃ ಕ್ವೌ । ಪಾ. ೬-೪-೪೦. । ಇತ್ಯನುನಾಸಿಕಲೋಪೇ ಊ ಚ ಗಮಾದೀನಾಮಿತಿ ವಕ್ತವ್ಯಂ । ಪಾ. ೬-೪-೪೦-೨. । ಇತ್ಯಕಾರಸ್ಯ ಊಕಾರಃ । ಜಸ್ಯೋಃ ಸುಪಿ । ಪಾ. ೬-೪-೮೩. । ಇತಿ

**ಯಣಾದೇಶಃ । ದೀರ್ಘಶ್ಛಾಂದಸಃ । ವೃಷಾಯುಧಃ । ಕ್ವಿಷ್ಟೇತಿ ಕ್ವಿಸ್ । ಕ್ವಿಷ್ಟೇತ್ಯತ್ರ ಸೋಪಪದೇಭ್ಯೋ ನಿರುಪಪದೇಭ್ಯಃ । ಕಾ. ೩-೨-೭೬. । ಇತ್ಯುಕ್ತತ್ವಾದತ್ರ ಸೋಪಪದೇಭ್ಯಃ ಕ್ವಿಪ್ । ಅನ್ಯೇಷಾಮಪಿ ದೃಶ್ಯತೆ ಇತಿ ಪೂರ್ವಪದಸ್ಯ ಸಂಹಿತಾಯಾಂ ದೀರ್ಘಃ । ನಿರಷ್ಟಾಃ । ಅಶೂ ವ್ಯಾಪ್ತೌ । ಭಾವೇ ನಿಷ್ಠಾ । ಯಸ್ಯ ವಿಭಾಷೇತೀಟ್ಪ್ರತಿಷೇಧಃ । ವ್ರಶ್ಚಾದಿನಾ ಷತ್ವೇ ಷ್ಟುತ್ವಂ । ನಿಸಾ ಚ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಯದ್ವಾ । ನಿರಸ್ತಾ ಇತ್ಯತ್ರ ಸಕಾರಸ್ಯ ಷತ್ವಂ ಛಾಂದಸಂ । ತದಾನೀಮಸ್ತಾ ಇತ್ಯೇತತ್ಕರ್ಮಣಿ ನಿಷ್ಠೇತಿ ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಪ್ರವದ್ಭಿಃ । ವನ ಷಣ ಸಂಭಕ್ತೌ । ಅಸ್ಮಾತ್ಪ್ರಪೂರ್ವಾತ್ ಕ್ವಿಪ್ । ಗಮಾದೀನಾಮಿತಿ ವಕ್ತವ್ಯಂ । ಪಾ. ೬-೪-೪೦-೧. । ಇತ್ಯನುನಾಸಿಕಲೋಪಃ । ತತಸ್ತುಕ್ । ಕೃದುತ್ತರಪದಪ್ರಕೃತಿಸ್ವರತ್ವಂ । ಚಿತಯಂತಃ । ಚಿತೀ ಸಂಜ್ಞಾನೇ । ಅಸ್ಮಾಣ್ಣ್ಯಂತಾಲ್ಲಟಃ ಶತೃ । ಶಪ್ ಅನಿತ್ಯಮಾಗಮಶಾಸನಮಿತಿ ವಚನಾಲ್ಲಘೂಪಧಗುಣಾಭಾವಃ ।**

॥ ಪ್ರತಿಪದಾರ್ಥ ॥

**ಅನವದ್ಯಸ್ಯ**— (ಯಾವಾಗ ವೃತ್ರಾನುಚರರು) ನಿರ್ದುಷ್ಟನಾದ ಇಂದ್ರನ । **ಸೇನಾಂ**—ಸೇನೆಯೊಡನೆ । **ಅಯುಯುತ್ಸನ್**—ಪ್ರತಿಭಟಿಸಲಿಷ್ಟಪಟ್ಟರೋ (ಆಗ) । **ನವಗ್ವಾಃ**—ಪ್ರಶಸ್ಯಚರಿತರಾದ (ಅಥವಾ ಒಂಭತ್ತು ತಿಂಗಳಲ್ಲೇ ಸಮಸ್ತ ಯಜ್ಞಫಲವನ್ನು ಹೊಂದಿದ) । **ಕ್ಷಿತಯಃ**—(ಅಂಗಿರಃ ಪ್ರಭೃತಿಗಳಾದ) ಮಾನವರು । **ಆಯಾತಯನ್ತ**—(ವಿಧವಿಧವಾದ ಮಂತ್ರಗಳಿಂದ ಇಂದ್ರನನ್ನು) ಪ್ರೋತ್ಸಾಹಿಸಿದರು । (**ತೇ**—ಇಂದ್ರನೊಡನೆ ಯುದ್ಧಕ್ಕೆ ಬಂದ ಆ ರಾಕ್ಷಸರು) । **ನಿರಷ್ಟಾಃ**—(ಇಂದ್ರನಿಂದ) ನಿರ್ವೀರ್ಯರಾಗಿ ಮಾಡಲ್ಪಟ್ಟವರಾಗಿ । **ಚಿತಯಂತಃ**—ತಮ್ಮ ಅಶಕ್ತಿಯನ್ನು ತೋರ್ಪಡಿಸುತ್ತಾ । **ವೃಷಾಯುಧಃ**—ಶಕ್ತಿವಂತನೊಂದಿಗೆ ಹೋರಾಡುವ । **ವಧ್ರಯಃ ನ**—ನಪುಂಸಕರಂತೆ । **ಪ್ರವದ್ಭಿಃ**—(ಓಡಲನುಕೂಲವಾದ) ಕಡಿದು ಮಾರ್ಗಗಳ ಮೂಲಕ । **ಇಂದ್ರಾತ್**—ಇಂದ್ರನಿಂದ । **ಆಯನ್**—ದೂರಸರಿದರು. (ಪಲಾಯನ ಮಾಡಿದರು.)

॥ ಭಾವಾರ್ಥ ॥

ಇಂದ್ರನು ನಿರ್ದುಷ್ಟನು. ದುಷ್ಟರಾದ ವೃತ್ರಾನುಚರರು ಅವನ ಸೇನೆಯೊಡನೆ ಹೋರಾಡಲು ಬಯಸಿದರು ಶ್ಲಾಘ್ಯಚರಿತರಾದ ಅಂಗಿರಸ್ ಮುಂತಾದ ಮಾನವಶ್ರೇಷ್ಠರು ಇಂದ್ರನನ್ನು ನಾನಾ ಮಂತ್ರಗಳಿಂದ ಪ್ರೋತ್ಸಾಹಿಸಿದರು. ಅನಂತರ ಇಂದ್ರನು ಯುದ್ಧಕ್ಕೆ ಹೋಗಲು ಆ ರಾಕ್ಷಸರು ನಿರ್ವೀರ್ಯರಾದರು. ಅವರು ತಮ್ಮ ಅಶಕ್ತಿಯನ್ನು ತೋರ್ಪಡಿಸಿ ಶಕ್ತಿವಂತನೊಂದಿಗೆ ನಪುಂಸಕರಂತೆ ಅವರು ಇಂದ್ರನೊಡನೆ ಹೋರಾಡಲಾಗದೆ ಸಿಕ್ಕಿದ ದಾರಿಯಲ್ಲಿ ನಾನಾ ದಿಕ್ಕುಗಳಿಗೆ ಓಡಿಹೋದರು.

## English Translation

They ( followers of Vritra ) desired to fight with the army of irreproachable Indra. Men (Angirasas) engaged in offering libations to Indra for nine months encouraged Indra to give them fight; like eunuchs fighting with a hero they fled by precipitous paths exposing their backs away from Indra.

|| ವಿಶೇಷ ವಿಷಯಗಳು ||

**ಅನವದ್ಯಸ್ಯ—ಗರ್ಹಣೀಯ ದೋಷರಹಿತಸ್ಯ** | ಯಾವ ಕೆಟ್ಟ ದೋಷಗಳೂ ಇಲ್ಲದ.

**ಕ್ಷಿತಯಃ—ಕ್ಷಿ ನಿವಾಸಗತ್ಯೋಃ | ಕ್ಷಿಯಂತಿ ಗಚ್ಛಂತೀತಿ ಕ್ಷಿತಯೋ ಮನುಷ್ಯಾಃ** | ಕ್ಷಿ ಧಾತುವಿಗೆ ನಿವಾಸಗತಿಗಳೆಂಬ ಅರ್ಥವಿರುವುದರಿಂದ ಕ್ಷಿತಯಃ ಎಂದರೆ ಗಮನಶೀಲರಾದ, ಸಂಚರಿಸಲು ಸಮರ್ಥರಾದ ಮನುಷ್ಯರು ಎಂದು ಹೆಸರು. ಮನುಷ್ಯಾ ನರಃ ಮೊದಲಾದ ಇಪ್ಪತ್ತೈದು ಮನುಷ್ಯನಾಮಗಳ ಮಧ್ಯದಲ್ಲಿ ಕ್ಷಿತಯಃ ಎಂಬ ಶಬ್ದವು ಪಠಿತವಾಗಿರುವುದರಿಂದ ( ನಿ ೩-೭ ) ಕ್ಷಿತಯಃ ಎಂದರೆ ಮನುಷ್ಯರು.

**ನವಗ್ವಾಃ—ನವಭಿರ್ಮಾಸೈರ್ಗಚ್ಛಂತೀತಿ ನವಗ್ವಾಃ | ಅಂಗಿರಸಾಂ ಸತ್ರಮಾಸೀನಾನಾಂ ಮಧ್ಯೇ ಯೇ ನವಭಿರ್ಮಾಸೈರವಾಪ್ತಫಲಾ ಉತ್ಥಿತಾಸ್ತೇಷಾಂ ನವಗ್ವಾ ಇತಿ ಸಂಜ್ಞಾ** || ಅಂಗಿರಾ ಋಷಿಯ ವಂಶದಲ್ಲಿ ಕೆಲವರು ಸಂವತ್ಸರ ಕಾಲ ಮಾಡುವ ಸತ್ರಯಾಗದಲ್ಲಿ ಒಂಭತ್ತು ತಿಂಗಳುಗಳಲ್ಲಿಯೇ ಯಜ್ಞಾನುಷ್ಠಾನದಿಂದ ಇಷ್ಟಸಿದ್ಧಿಯನ್ನು ಪಡೆದಿರುವರು. ಅವರನ್ನು ಅಂಗಿರಸ್ತಮಾಃ ನವಗ್ವಾಃ—ಒಂಭತ್ತು ತಿಂಗಳಲ್ಲಿಯೇ ಇಷ್ಟಸಿದ್ಧಿಯನ್ನು ಪಡೆದ ಅಂಗಿರಾಋಷಿವಂಶಸ್ಥರಲ್ಲಿ ಶ್ರೇಷ್ಠರಾದವರು ಎಂದು ಹೇಳುವ ರೂಢಿ ಇದೆ. ಕೆಲವು ಸಂದರ್ಭಗಳಲ್ಲಿ ಹತ್ತು ತಿಂಗಳಲ್ಲಿ ಇಷ್ಟಫಲ ಪ್ರಾಪ್ತಿಯನ್ನು ಹೊಂದಿದವರನ್ನು **ದಶಗ್ವ** ಎಂದೂ ಹೇಳುವರು. ಈ ವಿಷಯದಲ್ಲಿ ಪಾಶ್ಚಾತ್ಯ ಪಂಡಿತರು ಈ ಶಬ್ದದ ಅರ್ಥವಿವರಣೆ ಮಾಡುವಾಗ the term Navagva is applied to a man, generally an Angiras in the highest degree (Angirastama-ಅಂಗಿರಸ್ತಮ) who appear as a mystic race of olden times coupled with, and conceived probably as related to the Angirases. they are often associated with the Dasagvas (ದಶಗ್ವ) ಈ ಶಬ್ದಪ್ರಯೋಗವು ಋಗ್ವೇದದ ಅನೇಕ ಋಕ್ಕುಗಳಲ್ಲಿರುವವು. ಕೆಲವು ಉದಾಹರಣೆಗಳನ್ನು ಕೊಡುವೆವು—

**ಯೇನಾ ನವಗ್ವೇ ದಧ್ಯಙ್ಙಪೋರ್ಣುತೇ ಯೇನ ವಿಪ್ರಾಸ ಆಪಿರೇ** ||

( ಋ. ಸಂ. ೯-೧೦೮-೪ )

**ನವಗ್ವೋ ನು ದಶಗ್ವೋ ಅಂಗಿರಸ್ತಮಃ ಸಚಾ ದೇವೇಷು ಮಂಹತೇ** ||

( ಋ. ಸಂ. ೧೦-೬೨-೬ )

**ಸರಣ್ಯುಭಿಃ ಫಲಿಗಮಿಂದ್ರ ಶಕ್ರ ಬಲಂ ರವೇಣ ದರಯೋ ದಶಗ್ವೈಃ ॥**
(ಋ, ಸಂ. ೧-೬೨-೪)

**ಸಖಾ ಹ ಯತ್ರ ಸಖಿಭಿರ್ನವಗ್ವೈರಭಿಜ್ಞ್ವಾ ಸತ್ವಭಿರ್ಗಾ ಅನುಗ್ಮನ್ ॥**
(ಋ. ಸಂ. ೩-೩೯-೫)

**ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ ॥**
(ಋ.ಸಂ. ೧೦-೧೪-೬)

**ಯೇನಾ ನವಗ್ವೇ ಅಂಗಿರೇ ದಶಗ್ವೇ ಸಪ್ತಾಸ್ಯೇ ರೇವತೀ ರೇವದೂಷ ॥**
(ಋ. ಸಂ. ೪-೫೧-೪)

ಇತ್ಯಾದಿ ಅನೇಕ ಋಗ್ವೇದದ ಋಕ್ಕುಗಳಲ್ಲಿಯೂ, ಅಥರ್ವವೇದದ ಅಥ. ಸಂ. ೧೯-೧-೫೬ ; ೧೮-೩-೨೦ ಮೊದಲಾದ ಮಂತ್ರಗಳಲ್ಲಿಯೂ ನವಗ್ವ ಎಂಬ ಶಬ್ದದ ಪ್ರಯೋಗವಿದೆ. ಇವುಗಳಲ್ಲಿ ಎರಡನೆಯ ಉದಾಹರಣೆಯಲ್ಲಿ ಹೇಳಿರುವ ನವಗ್ವ ಮತ್ತು ದಶಗ್ವ ಎಂಬ ಪ್ರಖ್ಯಾತಿನಾಮವನ್ನು ಪಡೆದ ಅಂಗಿರಾಋಷಿವಂಶದಲ್ಲಿ ಶ್ರೇಷ್ಠನಾದವನು ದೇವತೆಗಳಿಂದಲೂ ಗೌರವಿಸಲ್ಪಡುತ್ತಾನೆ—ಎಂಬುದು ಗಮನಾರ್ಹವಾಗಿದೆ.

**ವೃಷಾಯುಧಃ—ವೃಷೇನ ಸೇಚನಸಮರ್ಥೇನ ಪುಂಸ್ತ್ವಯುಕ್ತೇನ ಶೂರೇಣ ॥** ವೀರ್ಯಸೇಚನ ಸಮರ್ಥನಾದ ಪುರುಷ ಎಂದರೆ ಶೂರನಿಂದ

**ವಧ್ರಯಃ—ನಪುಂಸಕಾಃ ವಿರ್ಯೋರಹಿತಪುರುಷಾಃ ॥** ನಪುಂಸಕರು, ಹೇಡಿಗಳು.

**ಪ್ರವದ್ಭಿಃ—ಪ್ರವಣೈಃ ಸುಕರೈರ್ಮಾರ್ಗೈಃ ।** ಅನುಕೂಲವಾದ ಮಾರ್ಗಗಳಿಂದ.

**ಚಿತಯಂತಃ—ಚಿತೀ ಸಂಜ್ಞಾನೇ । ಸ್ವಕೀಯಾಮಶಕ್ತಿಂ ಜ್ಞಾಪಯಂತಃ ॥** ತಮ್ಮ ಅಶಕ್ತತೆಯನ್ನು ತೋರ್ಪಡಿಸುತ್ತಾ.

॥ ವ್ಯಾಕರಣಪ್ರಕ್ರಿಯಾ ॥

**ಅಯುಯುತ್ಸನ್**—ಯುಧ ಸಂಪ್ರಹಾರೇ ಧಾತು. ಯೋದ್ಧುಮೈಚ್ಛನ್ ಎಂದು ವಿಗ್ರಹ. ಯುದ್ಧ ಮಾಡಲು ಇಚ್ಛಿಸಿದರು ಎಂದರ್ಥ. ಇಚ್ಛಿಸಿದವರು ವೃತ್ರಾಸುರನ ಅನುಚರರು. ಅವರೇ ಇಷ್ ಧಾತುವಿನ ಕರ್ತೃಗಳು. ಯುದ್ಧ ಮಾಡುವವರೂ ಇವರೇ. ಯುಧ್ ಧಾತುವಿಗೂ ಇವರೇ ಕರ್ತೃಗಳು. ಏವಂಚ ಇಷ್ ಧಾತೂಪಸ್ಥಾಪ್ಯಕ್ರಿಯಾನಿರೂಪಿತವ್ಯಾಪಾರಾಶ್ರಯಾಭಿನ್ನವ್ಯಾಪಾರಾಶ್ರಯತ್ವರೂಪ ಸಮಾನ ಕರ್ತೃಕತ್ವವು ಯುಧ್ ಧಾತುವಿಗೆ ಇದೆ. ಇಷುಧಾವಿನಲ್ಲಿ ಯುಧ್ ಧಾತ್ವರ್ಥವೇ ಕರ್ಮ-ಆದ್ದರಿಂದ ಇಷ್ ಧಾತೂಪಸ್ಥಾಪ್ಯಕ್ರಿಯಾನಿರೂಪಿತಕರ್ಮವಾಚಕತ್ವವೂ ಯುಧ್ ಧಾತುವಿಗೆ ಇದೆ. ಆದ್ದರಿಂದ **ಧಾತೋಃಕರ್ಮಣಃಸಮಾನಕರ್ತೃಕಾದಿಚ್ಛಾಯಾಂವಾ** (ಪಾ. ಸೂ. ೩-೧-೭) ಇಷ್‌ಧಾತೂಪಸ್ಥಾಪ್ಯಕ್ರಿಯಾನಿರೂಪಿತಕರ್ಮವಾಚಕವೂ, ಇಷ್ ಧಾತು ಕರ್ತೃಸಮಾನಕರ್ತೃಕವೂ ಆದ ಧಾತುವಿನ ಮುಂದೆ ಇಚ್ಛತಿ ಎಂಬ ಅರ್ಥದಲ್ಲಿ ಸನ್ ಬರುತ್ತೆ. ಎಂಬುದರಿಂದ ಇಚ್ಛತಿ ಎಂಬ ಅರ್ಥದಲ್ಲಿ ಯುಧ್ ಧಾತುವಿನ ಮುಂದೆ ಸನ್ ಬಂದರೆ ಯುಧ್+ಸ, **ಸನ್ಯಜಿಕೋಃ** (ಪಾ.ಸೂ

೬-೧-೯) ಎಂದು ದ್ವಿತ್ವ-ಯುಧ್+ಯುಧ್+ಸ. **ಹಲಾದಿಶ್ಶೇಷಃ** ಎಂದು ಅಭ್ಯಾಸದಲ್ಲಿರುವ ಧ್‌ಗೆ ಲೋಪ. **ಹಲನ್ತಾಚ್ಚ** (ಪಾಸೂ ೧-೨-೧೦) ಇಕ್ ನ ಸಮೀಪದಲ್ಲಿರುವ ವ್ಯಂಜನದ ಮುಂದಿರುವ ಝಲಾದಿಯಾದ ಸನ್ ಕಿತ್ತಿ ನಂತೆ ಆಗುತ್ತೆ, ಎಂದು ಸನ್ ಕಿತ್ ಆಗುತ್ತೆ. **ಏವಂಚ ಕ್ಞಿತಿಚ** (ಪಾ.ಸೂ-೧-೧-೫) ಎಂದು ನಿಷೇಧ ಬರುವುದರಿಂದ **ಲಘೂಪಧ** ಗುಣ ಬರುವುದಿಲ್ಲ. **ಏಕಾಚ ಉಪದೇಶೇಽನುದಾತ್ತಾತ್** (ಪಾ.ಸೂ. ೭-೨-೧) ಉಪದೇಶೇ ಎಂಬುದು ಮಧ್ಯಮಣಿ ನ್ಯಾಯದಿಂದ ಪೂರ್ವೋತ್ತರ ಪದಗಳೆರಡರಲ್ಲೂ ಸಂಬಂಧಿಸುವುದು. ಉಪದೇಶದಲ್ಲಿ ಒಂದು ಅಚ್ಚನ್ನು ಹೊಂದಿರುವುದೂ ಉಪದೇಶದಲ್ಲಿ ಅನುದಾತ್ತವೂ ಆದ ಧಾತುವಿನ ಮುಂದಿರುವ ವಲಾದಿಯಾದ ಆರ್ಧಧಾತುಕಕ್ಕೆ ಇಟ್ ಬರುವುದಿಲ್ಲ ಎಂದು ಸೂತ್ರಾರ್ಥ. **ಬನ್ಧಿರ್-ಯುಧಿ ರುಧೀ** ಎಂದು ಅನುದಾತ್ತ ಸಂಗ್ರಹಕಾರಿಕೆಯಲ್ಲಿ ಯುಧಧಾತುವು ಪಠಿತವಾಗಿದೆ. ಆದ್ದರಿಂದ ಇಟ್‌ಗೆ ನಿಷೇಧ ಬರುತ್ತೆ. ಯುಧಧಾತು ಆತ್ಮನೇ ಪದಿ. ನಾಲ್ಕನೇ ಗಣ. **ಪೂರ್ವವತ್ಸನಃ** (ಪಾ. ಸೂ. ೧-೩-೬೨) ಸನ್‌ಗೆ ಪೂರ್ವದಲ್ಲಿರುವ ಧಾತುವಿನಂತೆಯೇ ಸನ್ನಂತದ ಮುಂದೆಯೂ ಆತ್ಮನೇಪದ ಬರುವುದು ಎಂಬುದರಿಂದ ಇಲ್ಲಿ ಆತ್ಮನೇಪದಸಂಜ್ಞಕವಾದ ಶಾನಚ್ ಬರಬೇಕು. ಆದರೂ ವ್ಯತ್ಯಯದಿಂದ ಪರಸ್ಮೈಪದ ಬರುತ್ತೆ. ಆದ್ದರಿಂದ ಇದರ ಮುಂದೆ ಲಟ್+ಅದಕ್ಕೆ **ಲಟಶ್ಶತೃ**—(ಪಾಸೂ ३-२-೧೨४) ಎಂದು ಶತೃ ಬರುತ್ತೆ. ಅಯುಯುತ್ಸನ್ ಎಂದಾಗುತ್ತೆ.

**ಸೇನಾಂ**—ಇನೇನ ಸಹ ವರ್ತತೇ ಇತಿ ಸೇನಾ, **ತೇನ ಸಹೇತಿ ತುಲ್ಯಯೋಗೇ**- (ಪಾ.ಸೂ ೨-೨-೨೮) ತುಲ್ಯಯೋಗಃ ಎಂದರೆ ಯುಗಪತ್ಕಾಲಿಕ ಕ್ರಿಯಾಯೋಗ, ಈ ಅರ್ಥದಲ್ಲಿ ಸಹ ಶಬ್ದವು ತೃತೀಯಾಂತದೊಂದಿಗೆ ಸಮಾಸವನ್ನು ಹೊಂದುತ್ತೆ, ಅದು ಬಹುವ್ರೀಹಿಯಾಗುತ್ತೆ ಎಂದು ಬಹುವ್ರೀಹಿಸಮಾಸ. **ವೋಪಸರ್ಜನಸ್ಯ** (ಪಾ.ಸೂ ೬-೩-೮೨) ಬಹುವ್ರೀಹಿಸಮಾಸಕ್ಕೆ ಅವಯವವಾದ ಸಹ ಶಬ್ದಕ್ಕೆ ಸ ಆದೇಶ ಬರುತ್ತೆ ಎಂದು ಸಹ ಶಬ್ದಕ್ಕೆ ಸ ಆದೇಶ. **ಬಹುವ್ರೀಹೌ**, (ಪಾ. ಸೂ. ೬-೨-೧) ಎಂದು ಪೂರ್ವಪದಪ್ರಕೃತಿಸ್ವರ ಬರುತ್ತೆ.

**ಅಯಾತಯನ್ತ—ಯತೀ ಪ್ರಯತ್ನೇ**-ಧಾತು. **ಹೇತುಮತಿಚ** (ಪಾ. ಸೂ ३-೧-೨೬) ಕರ್ತೃವನ್ನು ಪ್ರೇರಣೆಮಾಡುವವನಿಗೆ ಹೇತು ಎಂದು ಸಂಕೇತವು. ಇದು **ತತ್ಪ್ರಯೋಜಕೋ ಹೇತುಶ್ಚ** (ಪಾ. ಸೂ. ೧-४-೫೫) ಎಂಬ ಸೂತ್ರದಿಂದ ಏರ್ಪಡುತ್ತೆ. ಹೇತುಃ=ಪ್ರಯೋಜಕನು, ಆಧಾರತಯಾ ಅಸ್ಯ ಅಸ್ತೀತಿ ಹೇತುಮಾನ್, ತಸ್ಮಿನ್ ಎಂದು ವಿಗ್ರಹ. ಏವಂಚ ಪ್ರಯೋಜಕನಲ್ಲಿರುವ ಪ್ರೇಷಣಾದಿವ್ಯಾಪಾರವು ವಾಚ್ಯವಾದಾಗ ಣಿಚ್ ಬರುತ್ತೆ ಎಂದು ಸೂತ್ರಾರ್ಥ. ಇದರಿಂದ ಣಿಚ್. ಯತ್+ಇ-ಲಙ್-ಅಡಾಗಮ, ಉಪಧಾವೃದ್ಧಿ, ಆತ್ಮನೇಪದ, ಶಪ್, ಗುಣ ಝ, ಅಯಾದೇಶ, ಅನ್ತ ಆದೇಶ, ಇವು ಬಂದು ಅಯಾತಯನ್ತ ಎಂದಾಗುವುದು.

**ಕ್ಷಿತಯಃ**—ಕ್ಷಿ ನಿವಾಸಗತ್ಯೋಃ ಧಾತು, ಕ್ಷಿಯನ್ತಿ-ಗಚ್ಛನ್ತಿ= ಹೋಗುವರು, ಅಥವಾ ತಿಳಿಯುವರು ಎಂದು ವಿಗ್ರಹ, ಮನುಷ್ಯರು ಎಂದರ್ಥ. **ಕ್ತಿಚ್‌ಕ್ತೌಚಸಂಜ್ಞಾಯಾಂ** (ಪಾ. ಸೂ. ३-३-೧೭४) ಆಶೀರರ್ಥ; ಸಂಜ್ಞೆ ಇವು ತೋರುವಾಗ ಧಾತುವಿನ ಮುಂದೆ ಕ್ತಿಚ್‌ಕ್ತ ಎಂಬ ಪ್ರತ್ಯಯಗಳು ಬರುವುವು. ಎಂದು ಕ್ತಿಚ್‌ಪ್ರತ್ಯಯ.

**ನವಗ್ವಾಃ**—ನವಭಿಃ ಮಾಸೈಃ ಗಚ್ಛಂತೀತಿ ನವಗ್ವಾಃ ಎಂದು ವಿಗ್ರಹ. ಒಂಭತ್ತು ತಿಂಗಳಲ್ಲಿ ಫಲವನ್ನು ಪಡೆದ ಋಷಿಗಳು ಎಂದರ್ಥ. ಗಮ್ಲೃ ಗತೌ ಧಾತು. ಇದರ ಮುಂದೆ ಔಣಾದಿಕ ಡ್ವಪ್ರತ್ಯಯ. ಡಿತ್ಕರಣ ಸಾಮರ್ಥ್ಯದಿಂದ ಅಮ್ ಗೆ ಲೋಪ ಗ್ವ ಎಂದಾಗುತ್ತೆ. ಇನ್ನೊಂದು ರೀತಿಯಲ್ಲಿ ಪ್ರಕ್ರಿಯೆ ಹೇಳಬಹುದು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂದು ಗಮ್ ಧಾತುವಿನ ಮುಂದೆ ಕ್ವಿಪ್ ಪ್ರತ್ಯಯ. **ಗಮಃಕ್ವೌ** (ಪಾ. ಸೂ. ೬-೪-೪೦) ಕ್ವಿಪ್ ಪರದಲ್ಲಿದ್ದರೆ ಗಮ್ ಧಾತುವಿನ ಅನುನಾಸಿಕಕ್ಕೆ ಅಂದರೆ ಮಕಾರಕ್ಕೆ ಲೋಪಬರುತ್ತೆ ಎಂದು ಮಕಾರ ಲೋಪ. **ಊಙ್ ಚ ಗಮಾದೀನಾಮಿತಿವಕ್ತವ್ಯಂ** (ಪಾ. ಸೂ.೬-೪-೪೦-೨) ಗಮ್ ಮೊದಲಾದ ಧಾತುಗಳಿಗೆ ಊಙ್ ಬರುತ್ತೆ ಎಂದರ್ಥ. ಊಙ್ ಙಿತ್, ಆದ್ದರಿಂದ ಙಿಚ್ಚ (ಪಾ. ಸೂ. ೧-೧-೫೩) ಎಂದು ಗ ಎಂಬುವರ ಕೊನೆಯ ವರ್ಣವಾದ ಅಕಾರಕ್ಕೆ ಊಕಾರ. ನವಗೂ ಶಬ್ದದ ಮುಂದೆ ಜಸ್ ನವಗೂ+ಅಸ್, **ಓಸ್ಸುಪಿ** (ಪಾ. ಸೂ. ೧೬-೪-೮೩) ಧಾತ್ವವಯವ ಮಾತ್ರಾರಬ್ಧವಾದ ಯಾವ ಸಂಯೋಗವಿದೆಯೋ, ಅಂತಹ ಸಂಯೋಗ ಪೂರ್ವಕವಲ್ಲದ ಉಕಾರವನ್ನು ಕೊನೆಯಲ್ಲಿ ಹೊಂದಿರುವ ಧಾತುವನ್ನು ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ಯಣ್ ಬರುತ್ತೆ ಎಂದು ಊಕಾರಕ್ಕೆ ವಕಾರ, ಏವಂಚ ನವಗ್ವಃ ಎಂದಾಗಬೇಕಾಯಿತು. ಛಾಂದಸವಾಗಿ ದೀರ್ಘ ಬಂದರೆ ನವಗ್ವಾಃ ಎಂದಾಗುತ್ತೆ.

**ವೃಷಾಯುಧಃ**—ವೃಷೇಣ ಸಹ ಯುಧ್ಯತಿ ಇತಿ ವೃಷಾಯುಧಃ ಎಂದು ವಿಗ್ರಹ. ಶೂರರೊಂದಿಗೆ ಯುದ್ಧ ಮಾಡುವ ಎಂದರ್ಥ. **ಕ್ವಿಪ್ ಚ** (ಪಾ. ಸೂ. ೩-೨-೭೯) ಎಲ್ಲಾ ಧಾತುಗಳ ಮುಂದೆಯೂ ಉಪಪದವಿದ್ದರೂ ಇಲ್ಲದಿದ್ದರೂ ಛಂದಸ್ಸಿನಲ್ಲಿಯೂ ಲೋಕದಲ್ಲಿಯೂ ಸಹ ಕ್ವಿಪ್ ಬರುತ್ತೆ ಎಂದು ಅರ್ಥ. ಈ ಅರ್ಥವು **ಸೋಪಪದೇಭ್ಯೋನಿರುಪಪದೇಭ್ಯಃ** (ಪಾ. ಸೂ. ೩-೨-೭೬) ನೇ ಸೂತ್ರದಲ್ಲಿರುವ ಕಾಶಿಕಾಗ್ರಂಥದಿಂದ ವ್ಯಕ್ತವಾಗುವುದು. ವೃಷಶಬ್ದವು ಉಪಪದವಾಗಿರುವಾಗ ಯುಧ್ ಧಾತುವಿನ ಮುಂದೆ ಕ್ವಿಪ್ ಬರುತ್ತೆ. ಸಂಹಿತಾಕಾಲದಲ್ಲಿ **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಅಷ್ಟಾಧ್ಯಾಯಿಯಲ್ಲಿ ಈ ಸೂತ್ರಕ್ಕಿಂತ ಹಿಂದಿನ ಸೂತ್ರಗಳಲ್ಲಿ ಯಾವುಗಳಿಗೆ ದೀರ್ಘವು ಹೇಳಿದೆಯೋ ಅವುಗಳಿಗಿಂತ ಬೇರೆಯವುಗಳಾದ ಪೂರ್ವಪದಗಳಿಗೂ ದೀರ್ಘ ಬರುತ್ತೆ ಎಂಬುದರಿಂದ ದೀರ್ಘ.

**ನಿರಷ್ಟಾಃ**—ಅಶೂ ವ್ಯಾಪ್ತೌ ಧಾತು ಊದಿತ್ತು. **ಸ್ವರತಿಸೂತಿ—,**(ಪಾ. ಸೂ. ೭-೨-೪೪) ವಿಕಲ್ಪವಾಗಿ ಇಟ್ ವಿಹಿತವಾಗಿದೆ. **ನಿಷ್ಠಾ** (ಪಾ. ಸೂ. ೩-೨-೧೦೨) ಭೂತಾರ್ಥದಲ್ಲಿರುವ ಧಾತುಗಳ ಮುಂದೆ ಭಾವಾರ್ಥ ದಲ್ಲಿಯೂ ಕರ್ಮಾರ್ಥದಲ್ಲಿಯೂ ಕ್ತ ಮತ್ತು ಕ್ತವತು ಪ್ರತ್ಯಯಗಳು ಬರುವುವು ಎಂಬುದರಿಂದ ಭಾವಾರ್ಥದಲ್ಲಿ ಕ್ತಪ್ರತ್ಯಯ. ಅಶ್+ತ. **ಯಸ್ಯವಿಭಾಷಾ** (ಪಾ. ಸೂ. ೭-೨-೧೫) ಯಾವ ಧಾತುವಿನ ಮುಂದಿರುವ ಆರ್ಧಧಾತುಕಕ್ಕೆ ಇಟ್ ಆಗಮ ವಿಕಲ್ಪವಾಗಿ. ಎಲ್ಲಾದರೂ ಒಂದು ಲಕ್ಷ್ಯದಲ್ಲಿ ವಿಹಿತವಾಗಿದೆಯೋ ಆ ಧಾತುವಿನ ಮುಂದಿರುವ ವಲಾದಿಯಾದ ಆರ್ಧಧಾತುಕಕ್ಕೆ ಇಟ್ ಬರುವುದಿಲ್ಲ ಎಂದು ನಿಷೇಧವಿರುವುದರಿಂದ ಕ್ತಗೆ ಇಟ್ ಬರುವುದಿಲ್ಲ. ವ್ರಶ್ಚಭ್ರಸ್ಜ....ಚ್ಛಶಾಂಷಃ (ಪಾ. ಸೂ. ೮-೨-೩೬) ಎಂದು ಶಕಾರಕ್ಕೆ ಷಕಾರ, ಷ್ಟುತ್ವದಿಂದ ತಕಾರಕ್ಕೆ ಟಕಾರ. ಅಷ್ಟ ಎಂದಾಯಿತು ನಿರಾಕೃತಾಃ ಅಷ್ಟಾಃ ವ್ಯಾಪ್ತಯಃ ಯೇಷಾಂ ಎಂದು ಬಹುವ್ರೀಹಿ, ಪೂರ್ವಪದ

ಪ್ರಕೃತಿಸ್ವರ ಬರುತ್ತೆ. ಇದಕ್ಕೆ ಇನ್ನೊಂದು ವಿಧವಾಗಿಯೂ ಪ್ರಕ್ರಿಯೆ ಹೇಳಬಹುದು. ನಿರಸ್ತಾ ಎಂಬ ಪದದ ಸಕಾರಕ್ಕೆ ಛಾಂದಸವಾಗಿ ಷಕಾರ, ಷ್ಟುತ್ವದಿಂದ ತಕಾರ, ಈ ಪಕ್ಷದಲ್ಲಿ ಅಸ್ತ ಎಂಬುದು ಕರ್ಮಣಿ ಕ್ತ ಪ್ರತ್ಯಯಾತ. ಅಸ್ತಾನ್ನಿರ್ಗತಾಃ ಎಂದು ತತ್ಪುರುಷ. **ಗತಿರನಂತರಃ** (ಪಾ. ಸೂ. ೬-೨-೪೯) ಎಂದು ಪೂರ್ವಪದಪ್ರಕೃತಿಸ್ವರ ಬರುತ್ತೆ.

**ಪ್ರವದ್ಭಿಃ**—ವನ ಷಣ ಸಂಭಕ್ತೌ ಪ್ರಉಪಸರ್ಗಪೂರ್ವಕವಾದ ವನಧಾತುವಿನ ಮುಂದೆ ಕ್ವಿಪ್, **ಗಮಃಕ್ವೌ** (ಪಾ. ಸೂ. ೬-೪-೪೦) ಕ್ವಿಪ್ಪ್ರತ್ಯಯ ಪರದಲ್ಲಿದ್ದರೆ ಗಮ್ ಧಾತುವಿನ ಅನುನಾಸಿಕಕ್ಕೆ ಲೋಪ ಬರುತ್ತೆ ಎಂದರ್ಥ. ಇಲ್ಲಿ **ಗಮಾದೀನಾಮಿತಿವಕ್ತವ್ಯಂ** ಎಂದು ವಾರ್ತಿಕವಿದೆ, ಗಮ್ ಮೊದಲಾದ ಧಾತುಗಳ ಅನುನಾಸಿಕಕ್ಕೆ ಲೋಪ ಬರುತ್ತೆ ಎಂದು ವಾರ್ತಿಕಾರ್ಥ. ಇದರಿಂದ ವನ್‌ನ ಸಕಾರಕ್ಕೆ ಲೋಪ **ಹ್ರಸ್ವಸ್ಯಪಿತಿಕೃತಿತುಕ್** (ಪಾ. ಸೂ. ೬-೧-೭೧) ಎಂದು ತುಕ್ ಆಗಮ. ಪ್ರವತ್, ಎಂದಾಯಿತು. ಭಿಸ್= ಪ್ರವದ್ಭಿಃ, **ಗತಿಕಾರಕೋ—,** ಎಂದು ಕೃದಂತವಾದ ಉತ್ತರಪದಕ್ಕೆ ಪ್ರಕೃತಿಸ್ವರ ಬರುತ್ತೆ.

**ಚಿತಯಂತಃ**—ಚಿತೀ ಸಂಜ್ಞಾನೇ ಧಾತು, ಇದರ ಮುಂದೆ **ಹೇತುಮತಿಚ** (ಪಾ. ಸೂ. ೩-೧-೨೬) ಎಂದು ಣಿಚ್, ಈ ಣಿಚ್ ಎಂಬ ಆರ್ಧಧಾತುಕವನ್ನು ನಿಮಿತ್ತ ಮಾಡಿಕೊಂಡು **ಪುಗಂತಲಘೂಪಧಸ್ಯಚ** (ಪಾ. ಸೂ. ೭-೩-೮೬.) ಎಂದು ಲಘೂಪಧ ಗುಣವು ಎಂದರೆ ಇಕಾರಕ್ಕೆ ಏಕಾರವು ಪ್ರಾಪ್ತವಾಗುತ್ತೆ. **ಸರ್ವೇವಿಧಯ-ಶ್ಛಂದಸಿವಿಕಲ್ಪ್ಯಂತೇ** ಎಂಬುದರಿಂದ ಅದು ಇಲ್ಲಿ ಬರುವುದಿಲ್ಲ. ಗುಣವು ಆದೇಶವೇ ವಿನಾ ಆಗಮ ಅಲ್ಲ. ಆದುದರಿಂದ **ಅನಿತ್ಯಮಾಗಮಶಾಸನಂ** ಎಂಬ ಪರಿಭಾಷೆಯಿಂದ ಇಲ್ಲಿ ಸಮಾಧಾನ ಹೇಳಲಾಗುವುದಿಲ್ಲ ಇದರ ಮುಂದೆ ಲಟ್, ಶತೃ-ಶಪ್, ಶಪ್ಪನ್ನು ನಿಮಿತ್ತಮಾಡಿಕೊಂಡು ಇಕಾರಕ್ಕೆ ಗುಣ ಚಿತೇ+ಅ+ಅತ್ ಅಯಾ ದೇಶ. ಚಿತಯತ್ ಜಸ್, **ಉಗಿದಚಾಂ** (ಪಾ. ಸೂ. ೭-೧-೭೦.) ಎಂದು ನುಮಾಗಮ, ರುತ್ವ ವಿಸರ್ಗಗಳು. ॥ ೬ ॥

॥ ಸಂಹಿತಾಪಾಠಃ ॥

ತ್ವಮೇತಾನ್ರುದತೋ ಜಕ್ಷತಶ್ಚಾಯೋಧಯೋ ರಜಸ ಇಂದ್ರ ಪಾರೇ ।

ಅವಾದಹೋ ದಿವ ಆ ದಸ್ಯುಮುಚ್ಚಾ ಪ್ರ ಸುನ್ವತಃ ಸ್ತುವತಃ ಶಂಸ-ಮಾವಃ ॥ ೭ ॥

॥ ಪದಪಾಠಃ ॥

ತ್ವಂ । ಏತಾನ್ । ರುದತಃ । ಜಕ್ಷತಃ । ಚ । ಅಯೋಧಯಃ । ರಜಸಃ ।
ಇಂದ್ರ । ಪಾರೇ ।

ಅವ । ಅದಹಃ । ದಿವಃ । ಆ । ದಸ್ಯುಂ । ಉಚ್ಚಾ । ಪ್ರ । ಸುನ್ವತಃ ।
ಸ್ತುವತಃ । ಶಂಸಂ । ಆವಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ರುದತೋ ರೋದನಂ ಕುರ್ವತೋ ಜಕ್ಷತೋ ಭಕ್ಷಣಂ ಹಸನಂ ವಾ ಕುರ್ವತಶ್ಚೈತಾನ್ ದ್ವಿವಿಧಾನಪಿ ವೃತ್ರಾನುಚರಾನ್ರಜಸಃ ಪಾರೇಽಂತರಿಕ್ಷಸ್ಯ ಪರಭಾಗೇ । ರಜಃ ಶಬ್ದೋಽಂತರಿಕ್ಷವಾಚೀ ಲೋಕಾ ರಜಾಂಸ್ಯುಚ್ಯಂತೇ । ನಿ. ೪. ೧೯ । ಇತ್ಯುಕ್ತತ್ವಾತ್ । ಅಯೋಧಯಃ ಯುದ್ಧಮಕರೋಃ । ಯುದ್ಧೇನ ಮಾರಿತವಾನಿತ್ಯರ್ಥಃ । ದಸ್ಯುಮುಪಕ್ಷಯಿತಾರಂ ವೃತ್ರಂ ದಿವ ಆ ದ್ಯುಲೋಕಾದಾನೀಯೋಚ್ಚೋತ್ಕರ್ಷೇಣಾವಾದಹಃ । ದಗ್ಧವಾನಸಿ । ವೃತ್ರಂ ಸಪರಿವಾರಂ ವಿನಾಶ್ಯ ತತ ಊರ್ಧ್ವಂ ಸುನ್ವತಃ ಸೋಮಾಭಿಷವಂ ಕುರ್ವತಃ ಸ್ತುವತಃ ಸ್ತೋತ್ರಂ ಕುರ್ವತೋ ಯಜಮಾನಸ್ಯ ಶಂಸಂ ಸ್ತುತಿಂ ಪ್ರಾವಃ । ಪ್ರಕರ್ಷೇಣ ರಕ್ಷಿತವಾನಸಿ ॥ ರುದತಃ । ರುದಿರ್ ಅಶ್ರುವಿಮೋಚನೇ । ಲಟಃ ಶತೃ । ಅದಾದಿತ್ವಾಚ್ಛಪೋ ಲುಕ್ । ಪ್ರತ್ಯಯಸ್ವರೇಣಾಂತೋದಾತ್ತತ್ವಂ । ಶತುರನುಮ ಇತಿ ಶಸ ಉದಾತ್ತತ್ವಂ । ಜಕ್ಷತಃ । ಜಕ್ಷ ಭಕ್ಷಹಸನಯೋಃ । ಪೂರ್ವವಚ್ಛಪೋ ಲುಕ್ । ಜಕ್ಷಿತ್ಯಾದಯಃ ಷಟ್ । ಪಾ. ೬-೧-೬ । ಇತ್ಯಭ್ಯಸ್ತಸಂಜ್ಞಾ । ಅತೋಽಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂಸುನ್ವತಃ । ಷುನೋತೇಃ ಶತರಿ ಸ್ವಾದಿಭ್ಯಃ ಶ್ನುಃ । ಹುಶ್ನುವೋರಿತ್ಯಾದಿನಾ ಯಣಾದೇಶಃ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಸ್ತುವತಃ । ಷ್ಟುಞ್ ಸ್ತುತೌ । ಅದಾದಿತ್ವಾಚ್ಛಪೋ ಲುಕ್ । ಉವಙಾದೇಶಃ । ಪೂರ್ವವತ್ಸ್ವರಃ ॥ ॥ ೭ ॥

॥ ಪ್ರತಿಪದಾರ್ಥ ॥

**ಹೇ ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ರುದತಃ**—ಅಳುವ (ಅಳುತ್ತಿರಲಿ) । **ಜಕ್ಷತಶ್ಚ**—ಅಥವಾ ನಗುವ (ನಗುತ್ತಿರಲಿ) । **ಏತಾನ್**—ಈ ವೃತ್ರಾನುಚರರಾದ ರಾಕ್ಷಸರನ್ನು । **ರಜಸಃ ಪಾರೇ**—ಅಂತರಿಕ್ಷದಗಡಿಯಲ್ಲಿ । **ಅಯೋಧಯಃ**—ಯುದ್ಧಮಾಡಿ ಕೊಂದಿರುವೆ. । **ದಸ್ಯುಂ**—(ಮತ್ತು) ಚೋರನಾದ ವೃತ್ರನನ್ನು । **ದಿವಃ ಆ**—ಅಂತರಿಕ್ಷದಿಂದ ಎಳೆದು ತಂದು । **ಉಚ್ಚಾ**—ಸಂಪೂರ್ಣವಾಗಿ । **ಅವಾದಹಃ**—ಭಸ್ಮ ಮಾಡಿರುವೆ. (ಅನಂತರ)

**ಸುನ್ವತಃ**—ಸೋಮರಸವನ್ನು ಹಿಂಡುವ । **ಸ್ತುವತಃ**—ಸ್ತೋತ್ರ ಮಾಡುವ (ಯಜಮಾನನ) । **ಶಂಸಂ**—ಸ್ತೋತ್ರವನ್ನು । **ಪ್ರ ಆವಃ**—ಚೆನ್ನಾಗಿ ರಕ್ಷಿಸಿರುವೆ (ಯಥಾರ್ಥವನ್ನಾಗಿ ಮಾಡಿರುವೆ.)

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ದುಷ್ಟಶಿಕ್ಷಕನು ಮತ್ತು ಶಿಷ್ಟರಕ್ಷಕನು. ವೃತ್ರಾನುಚರರಾದ ರಾಕ್ಷಸರು ಅಳಲಿ ಅಥವಾ ನಗಲಿ ಅವರನ್ನು ಅಂತರಿಕ್ಷದ ಅಂಚಿನಲ್ಲಿಯೇ ಸದೆಬಡಿದು ಕೊಂದಿರುವೆ. ಚೋರನಾದ ವೃತ್ರನನ್ನು ನಾಶ ಮಾಡಿ ಯಜ್ಞದಲ್ಲಿ ಯಜಮಾನನಿಂದ ಮಾಡಲ್ಪಡುವ ನಿನ್ನ ಸ್ತೋತ್ರವನ್ನು ಯಥಾರ್ಥವನ್ನಾಗಿ ಮಾಡಿರುವೆ.

## English Translation

O Indra, you have destroyed them whether weeping or laughing off the other end of the sky; you have burned the demon (or robber) having dragged him from heaven and have received the praises of him who pressed the Soma juice for you and sang your glories.

॥ ವಿಶೇಷವಿಷಯಗಳು ॥

**ಜಕ್ಷತಃ— ಜಕ್ಷ ಭಕ್ಷಹಸನಯೋಃ । ಭಕ್ಷಣಂ ಹಸನಂ ವಾ ಕುರ್ವಂತಃ ॥** ಜಕ್ಷಧಾತುವಿಗೆ ಭಕ್ಷಿಸು ಅಥವಾ ನಗು ಎಂದರ್ಥ. ಆದುದರಿಂದ ಜಕ್ಷತಃ ಎಂದರೆ ಭಕ್ಷಿಸುತ್ತಿರುವ ಅಥವಾ ನಗುತ್ತಿರುವ ಎಂದರ್ಥವು.

**ರಜಸಃ ಪಾರೇ** ರಜಃ ಎಂದರೆ ಇಲ್ಲಿ ಅಂತರಿಕ್ಷವು. (ನಿ. ೪-೧೯.) ಆದುದರಿಂದ ರಜಸಃಪಾರೇ ಎಂದರೆ ಅಂತರಿಕ್ಷದ ತುದಿಯಲ್ಲಿ ಅಂತರಿಕ್ಷದಲ್ಲಿ, ಬಹಳ ಎತ್ತರದಲ್ಲಿ.

**ಉಚ್ಚಾ** ಹೆಚ್ಚಾಗಿ ವಿಶೇಷವಾಗಿ.

॥ ವ್ಯಾಕರಣಪ್ರಕ್ರಿಯಾ ॥

**ರುದತಃ**—ರುದಿರ್ ಅಶ್ರುವಿಮೋಚನೇ, ಧಾತು, ಲಟ್, ಅದಕ್ಕೆ ಶತೃ ಆದೇಶ, ಶಪ್, **ಅದಿಪ್ರಭೃತಿಭ್ಯಃಶಪಃ** (ಪಾ. ಸೂ. ೨-೪-೭೨) ಎಂದು ಶಪ್‌ಗೆ ಲುಕ್, ಏವಂಚ **ತಾಸ್ಯನುದಾತ್ತೇತ್**—,ಎಂದು ಲಸ್ಥಾನಿಕಸಾರ್ವಧಾತುಕ ವಾದ ಶತೃಗೆ ಅನುದಾತ್ತ ಬರುವುದಿಲ್ಲ, ಪ್ರತ್ಯಯಸ್ವರ ಬರುತ್ತೆ. ಆದ್ದರಿಂದ ರುದತ್ ಎಂಬುದು ಅಂತೋದಾತ್ತ ಇದರ ಮುಂದೆ ದ್ವಿತೀಯಾಬಹುವಚನ ಶಸ್ **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ನುಮ್

ಆಗಮವನ್ನು ಹೊಂದದೇ ಇರುವ ಶತೃಪ್ರತ್ಯಯವನ್ನು ಕೊನೆಯಲ್ಲಿ ಹೊಂದಿರುವ ಶಬ್ದವು ಅಂತೋದಾತ್ತವಾಗಿದ್ದರೆ ಅದರ ಮುಂದಿರುವ ನದೀಸಂಜ್ಞಕವರ್ಣಗಳೂ ಅಜಾದಿಶಸಾದಿ ವಿಭಕ್ತಿಯೂ ಸಹ ಉದಾತ್ತವಾಗುವುದು ಎಂದು ಶಸ್ ಉದಾತ್ತ.

**ಜಕ್ಷತಃ**— ಜಕ್ಷ ಭಕ್ಷಹಸನಯೋಃ ಧಾತು, ಲಟ್ ಶತೃ ಹಿಂದಿನಂತೆಯೇ ಶಪ್‌ಗೆ ಲುಕ್, **ಜಕ್ಷಿತ್ಯಾದಯಃ ಷಟ್** (ಪಾ. ಸೂ. ೬-೧-೬) ಜಕ್ಷ್-ಇತ್ಯಾದಯಃ ಷಟ್ ಇತಿ ಆದಿರ್ಯೇಷಾಂತೇ ಇತ್ಯಾದಯಃ ಎಂದು ಪದವಿಭಾಗ ಅತದ್ಗುಣಸಂವಿಜ್ಞಾನ ಇತಿಶಬ್ದದಿಂದ ಪೂರ್ವದಲ್ಲಿರುವ ಜಕ್ಷ್‌ಧಾತುವು ಬಹುವ್ರೀಹಿ ಪರಾಮರ್ಶಿಸಲ್ಪಡುತ್ತೆ ಏವಂಚ ಜಾಗೃಧಾತು ಮೊದಲುಗೊಂಡು ಆರು ಧಾತುಗಳೂ ಜಕ್ಷ್‌ಧಾತುವೂ ಅಭ್ಯಸ್ತಸಂಜ್ಞೆಯನ್ನು ಹೊಂದುವುವು ಎಂದು ಸೂತ್ರಾರ್ಥ. ಇಗರಿಂದ ಇಲ್ಲಿ ಅಭ್ಯಸ್ತಸಂಜ್ಞೆ ಇದೆ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಇಡ್ಭಿನ್ನವಾದ ಅಜಾದಿಯಾದ ಲಸಾರ್ವಧಾತುಕ ಪರದಲ್ಲಿದ್ದರೆ ಅಭ್ಯಸ್ತಗಳ ಆದಿಯು ಉದಾತ್ತವಾಗುತ್ತೆ ಎಂದು ಆದ್ಯುದಾತ್ತ ಬರುತ್ತೆ.

**ಸುನ್ವತಃ**—ಷುಞ್ ಅಭಿಷವೇ **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂದು ಷಕಾರಕ್ಕೆ ಸಕಾರ ಲಟ್-ಶತೃ, ಸು+ಅತ್ **ಸ್ವಾದಿಭ್ಯಃಶ್ನುಃ** (ಪಾ. ಸೂ. ೩-೧-೭೩) ಸ್ವಾದಿಗಣದ ಧಾತುಗಳ ಮುಂದೆ ಶ್ನು ವಿಕರಣ ಬರುತ್ತೆ ಎಂದು ಶ್ನು ವಿಕರಣ ಸು+ನು+ಅತ್ **ಹುಶ್ನುವೋಸ್ಸಾರ್ವಧಾತುಕೇ** (ಪಾ. ಸೂ. ೬-೪-೮೭) ಅಜಾದಿ ಸಾರ್ವಧಾತುಕ ಪರದಲ್ಲಿರುವಾಗ ಹುಧಾತುವಿನ ಅನೇಕಾಚ್ಕಾಂಗಾವಯವವಾದ ಅಥವಾ ಶ್ನುಪ್ರತ್ಯಯಾಂತಾನೇಕಾಚ್ಕಾಂಗಾವಯವವಾದ ಸಂಯೋಗಪೂರ್ವಕವಲ್ಲದ ಉಕಾರಕ್ಕೆ ಯಣ್ ಬರುತ್ತೆ ಎಂದು ಉಕಾರಕ್ಕೆ ವಕಾರ, ಷಷ್ಠ್ಯೇಕವಚನ ಙಸ್. **ಶತುರನುಮಃ**—, ಎಂದು ವಿಭಕ್ತಿಯು ಉದಾತ್ತ.

**ಸ್ತುವತಃ**—ಷ್ಟುಞ್ ಸ್ತುತೌ-ಧಾತು, ಷಕಾರಕ್ಕೆ ಸಕಾರ, **ನಿಮಿತ್ತಾಪಾಯೇ ನೈಮಿತ್ತಿಕಸ್ಯಾಪ್ಯಪಾಯಃ** ಎಂದು ಷ್ಟುತ್ವದಿಂದ ಟಕಾರಕ್ಕೆ ನಿವೃತ್ತಿ, ಸ್ತು ಎಂದಿದೆ. ಲಟ್-ಶತೃ, ಅದಾದಿಯಾದ್ದರಿಂದ ಶಪ್‌ಗೆ ಲುಕ್. **ಅಚಿಶ್ನುಧಾತುಭ್ರುವಾಂಯ್ವೋರಿಯಙುವಙೌ** (ಪಾ. ಸೂ. ೬-೪-೭೭) ಶ್ನುಪ್ರತ್ಯಯಾಂತಾಂತವೂ, ಇ ಉಗಳನ್ನು ಕೊನೆಯಲ್ಲಿ ಹೊಂದಿರುವ ಧಾತ್ವಂತವೂ ಅಥವಾ ಭ್ರೂಶಬ್ದಾಂತವೂ ಆದ ಅಂಗದ ಇ-ಉಗಳಿಗೆ ಕ್ರಮವಾಗಿ ಇಯಙ್-ಉವಙ್‌ಗಳು ಬರುವುವು ಎಂದು ಉಕಾರಕ್ಕೆ ಉವಙ್, ಸ್ತುವತ್ ಎಂದಾಯಿತು. ಇದರ ಮುಂದೆ ಙಸ್. ಇದು ಹಿಂದಿನಂತೆಯೇ ಉದಾತ್ತವಾಗುತ್ತೆ. ॥ ೭ ॥

॥ ಸಂಹಿತಾಪಾಠಃ ॥

ಚಕ್ರಾಣಾಸಃ ಪರೀಣಹಂ ಪೃಥಿವ್ಯಾ ಹಿರಣ್ಯೇನ ಮಣಿನಾ-

ಶುಂಭಮಾನಾಃ ।

ನ ಹಿನ್ವಾನಾಸಸ್ತಿತಿರುಸ್ತ ಇಂದ್ರಂ ಪರಿ ಸ್ಪಶೋ ಅದಧಾತ್ಸೂ-
ರ್ಯೇಣ ॥ ೮ ॥

॥ ಪದಪಾಠಃ ॥

ಚಕ್ರಾಣಾಸಃ । ಪರಿಽನಹಂ । ಪೃಥಿವ್ಯಾಃ । ಹಿರಣ್ಯೇನ । ಮಣಿನಾ ।
ಶುಂಭಮಾನಾಃ ॥

ನ । ಹಿನ್ವಾನಾಸಃ । ತಿತಿರುಃ । ತೇ । ಇಂದ್ರಂ । ಪರಿ । ಸ್ಪಶಃ । ಅದಧಾತ್ ।
ಸೂರ್ಯೇಣ ॥ ೮ ॥

॥ ಸಾಯಣಭಾಷ್ಯಂ ॥

ಯೇ ವೃತ್ರಾನುಚರಾಃ ಪೃಥಿವ್ಯಾ ಭೂಮೇಃ ಪರೀಣಹಮಾಚ್ಛಾದನಂ ಸರ್ವತೋ ವ್ಯಾಪ್ತಿಂ ಚಕ್ರಾಣಾಸಃ ಕುರ್ವಾಣಾ ಹಿರಣ್ಯೇನ ಹಿರಣ್ಯಯುಕ್ತೇನ ಮಣಿನಾ ಕಂಠಬಾಹ್ವಾದಿಗತೇನ ಮಣ್ಯಾದ್ಯಾಭರಣೇನ ಶುಂಭಮಾನಾಃ ಶೋಭಮಾನಾ ಹಿನ್ವಾನಾಸೋ ವರ್ಧಮಾನಾಃ ಸಂತೋ ವರ್ತಂತೇ ತೇ ತಥಾವಿಧಾ ವೃತ್ರಾನುಚರಾ ಇಂದ್ರಂ ಯುದ್ಧಾಯೋದ್ಯಂತಂ ನ ತಿತಿರುಃ । ಜೇತುಂ ನ ಸಮರ್ಥಾ ಆಸನ್ । ತದಾನೀಂ ಸ ಇಂದ್ರಃ ಸ್ಪಶೋ ಬಾಧಕಾನ್ವೃತ್ರಾನುಚರಾನ್ ಸೂರ್ಯೇಣಾದಿತ್ಯೇನ ಪರ್ಯದಧಾತ್ । ಪರಿಹಿತಾನ್ ವ್ಯವಹಿತಾನಕರೋತ್ । ತಥಾ ಚ ಬ್ರಾಹ್ಮಣಂ । ಆದಿತ್ಯೋ ಹ್ಯೇವೋದ್ಯನ್ ಪುರಸ್ತಾದ್ರಕ್ಷಾಂಸ್ಯಪಹಂತೀತಿ ॥ ಚಕ್ರಾಣಾಸಃ । ಕರೋತೇಶ್ಛಂದಸಿ ಲಿಡಿತಿ ವರ್ತಮಾನೇ ಲಿಟಃ ಕಾನಚ್ । ತತೋಽಸುಕ್ । ಚಿತ ಇತ್ಯಂತೋದಾತ್ತತ್ವಂ । ಪರೀಣಹಂ । ಪರಿಣಹನಂ ಪರೀಣತ್ । ಪರಿಪೂರ್ವಾನ್ನಹ್ಯತೇರ್ಭಾವೇ ಕ್ವಿಪಿ ನಹಿವೃತೀತ್ಯಾದಿನಾ । ಪಾ. ೬-೩-೧೧೬ । ಪೂರ್ವಪದಸ್ಯ ದೀರ್ಘಃ । ಪೃಥಿವ್ಯಾಃ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ಹಿನ್ವಾನಾಸಃ । ಹಿ ಗತೌ ವೃದ್ಧೌ ಚ । ತಾಚ್ಛೀಲಿಕಶ್ಚಾನಶ್ । ತಿತಿರುಃ । ತಿರತಿರ್ಗತ್ಯರ್ಥಃ ॥ ॥ ೮ ॥

॥ ಪ್ರತಿಪದಾರ್ಥ ॥

(**ಯೇ**—ಯಾವ ವೃತ್ರಾನುಚರರು) **ಪೃಥಿವ್ಯಾಃ**—ಭೂಮಿಗೆ । **ಪರೀಣಹಂ**—ಸುತ್ತಲೂ ಮುಸುಕನ್ನು । **ಚಕ್ರಾಣಾಸಃ**—ಮಾಡುವವರಾಗಿ । **ಹಿರಣ್ಯೇನ**—ಚಿನ್ನದ ಆಭರಣದಿಂದಲೂ । **ಮಣಿನಾ**— ರತ್ನಖಚಿತವಾದ

ಆಭರಣಗಳಿಂದಲೂ । **ಶುಂಭಮಾನಾಃ**—ಶೋಭಿಸುತ್ತ । **ಹಿನ್ವಾನಾಸಃ**—ಬೆಳೆಯುತ್ತಿದ್ದರೋ । **ತೇ**—ಆ ರಾಕ್ಷಸರು । **ಇಂದ್ರಂ**—ಇಂದ್ರನನ್ನು । **ನ ತಿತಿರುಃ**—ಗೆಲ್ಲಲಾಗಲಿಲ್ಲ । **ಸ್ಪಶಃ**—ಹಿಂಸೆಮಾಡುವ ಆ ರಾಕ್ಷಸರನ್ನು । **ಸೂರ್ಯೇಣ**—ಸೂರ್ಯನಿಂದ । **ಪರಿ ಅದಧಾತ್** (ಇಂದ್ರನು) ಚದುರಿಸಿ ನಾಶಮಾಡಿದನು.

॥ ಭಾವಾರ್ಥ ॥

ವೃತ್ರಾಸುರನ ಅನುಚರರಾದ ರಾಕ್ಷಸರು ಭೂಮಿಯನ್ನೆಲ್ಲ ಆವರಿಸಿಕೊಂಡರು. ಚಿನ್ನ ಮತ್ತು ರತ್ನ ಖಚಿತಗಳಾದ ಒಡವೆಗಳಿಂದ ಶೋಭಿಸುತ್ತಿದ್ದರು. ಮತ್ತು ವೃದ್ಧಿ ಹೊಂದುತ್ತಿದ್ದರು. ಆದರೂ ಅವರು ಇಂದ್ರನನ್ನು ಗೆಲ್ಲಲಾಗಲಿಲ್ಲ. ತೊಂದರೆಕೊಡುತ್ತಿದ್ದ ಅಂತಹ ರಾಕ್ಷಸರನ್ನು ಇಂದ್ರನು ಸೂರ್ಯನ ಸಹಾಯದಿಂದ ಚದುರಿಸಿದನು.

## English Translation

Decorated with gold and jewels they (demons) were spreading over (round) the earth ; but though they were mighty they could not vanquish Indra ; he (Indra) dispersed them (with the light of the Sun) at Sunrise

॥ ವಿಶೇಷ ವಿಷಯಗಳು ॥

**ಪರೀಣಹಂ—ಆಚ್ಛಾದನಂ ಸರ್ವತೋ ವ್ಯಾಪ್ತಿಂ** ॥ ವ್ಯಾಪ್ಯತ್ವ, ಆವರಣ. ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ (ತೈ. ಸಂ. ೬-೨ ೧-೧) ಪಾರೀಣ್ಯಹ್ಯಸ್ಯೈಶೇ ಪತ್ನಿಯೈವಾನುಮತಂ ನಿರ್ವಪತಿ ಎಂಬ ವಾಕ್ಯದಲ್ಲಿ ಗೃಹಕೃತ್ಯಕ್ಕೆ ಉಪಯೋಗಿಸುವ ಪಾತ್ರೆಗಳು ಎಂಬರ್ಥದಲ್ಲಿ ಪಾರೀಣಹ್ಯ ಶಬ್ದದ ಪ್ರಯೋಗವಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಚಕ್ರಾಣಾಸಃ**—(ಡು)ಕೃಞ್ ಕರಣೇ ಧಾತು **ಛಂದಸಿಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬). ಎಂದು ವರ್ತಮಾನಕಾಲ ತೋರುವಾಗಲೂ ಲಿಟ್ **ಲಿಟಃಕಾನಜ್ವಾ** (ಪಾ. ಸೂ. ೩-೨-೧೦೬) ಎಂದು ಲಿಟ್‌ಗೆ ಕಾನಚ್, **ಲಿಟಿಧಾತೋರನಭ್ಯಾಸಸ್ಯ** (ಪಾ. ಸೂ. ೬-೧-೮) ಎಂದು ದ್ವಿತ್ವ ಕೃ+ಕೃ+ಆನ **ಉರತ್** (ಪಾ. ಸೂ ೭-೪-೬೬) ಅಭ್ಯಾಸಕ್ಕೆ ಅಕಾರ ರಪರವಾಗಿ ಬರುತ್ತೆ. **ಹಲಾದಿಃಶೇಷಃ** ಎಂದು ರೇಫಕ್ಕೆ ಲೋಪ, ಶ್ಚುತ್ವ-ಚಕೃ+ಆನ ಯಣಾದೇಶ, ಚಕ್ರಾನ, ನಕಾರಕ್ಕೆ ಣಕಾರ, ಜಸ್, **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂದು ಜಸ್‌ಗೆ ಅಸುಕ್ ಆಗಮ ಚಕ್ರಾಣ+ಅಸ್+ಅಸ್, ಚಕ್ರಾಣಾಸಸ್, ರುತ್ವವಿಸರ್ಗಗಳು. ಕಾನಚ್ ಚಿತ್, **ಚಿತಃ** (ಪಾ. ಸೂ. ೬-೧-೧೬೩) ಎಂದು ಕಾನಜಂತವು ಅಂತೋದಾತ್ತ.

**ಪರೀಣಹಮ್**— ಪರಿ ಎಂಬ ಉಪಸರ್ಗಪೂರ್ವಕವಾದ ಣಹ ಬಂಧನೇ ಧಾತುವಿನ ಮುಂದೆ ಕ್ವಿಪ್ ಪ್ರತ್ಯಯ. **ನಹಿವೃತಿವೃಷಿವ್ಯಧಿರುಚಿಸಹಿತನಿಷುಕ್ವೌ** (ಪಾ. ಸೂ. ೬-೩-೧೧೬) ಕ್ವಿಪ್ ಪ್ರತ್ಯಯಾಂತವಾದ ಈ ಧಾತುಗಳು ಪರದಲ್ಲಿದ್ದರೆ ಪೂರ್ವಪದಕ್ಕೆ ದೀರ್ಘ ಬರುತ್ತೆ ಎಂದು ಪರಿ ಎಂಬುದಕ್ಕೆ ದೀರ್ಘ **ಅಟ್ಕುಪ್ವಾಙ್**—, (ಪಾ. ಸೂ. ೮-೪-೨) ಎಂದು ನಕಾರಕ್ಕೆ ಣಕಾರ, ದ್ವಿತೀಯಾ ಏಕವಚನ ಅಮ್.

**ಪೃಥಿವ್ಯಾಃ — ಪ್ರಥೇಃ ಷಿವನ್ ಸಂಪ್ರಸಾರಣಂ ಚ** (ಉ. ಸೂ. ೫ - ೨ - ೧೪೮) ಪ್ರಥ ಪ್ರಖ್ಯಾನೇ ಧಾತುವಿನ ಮುಂದೆ ಷಿವನ್ ಪ್ರತ್ಯಯವೂ, ಧಾತುವಿನ ರೇಫಕ್ಕೆ ಸಂಪ್ರಸಾರಣವೂ ಬರುತ್ತೆ ಎಂದು ಪ್ರಥ ಧಾತುವಿನ ಮುಂದೆ ಇವನ್ ಪ್ರತ್ಯಯವೂ ರೇಫಕ್ಕೆ ಋಕಾರವೂ ಬಂದರೆ ಪೃಥಿವ, ಷಿತ್ತಾದ್ದರಿಂದ **ಷಿದ್ಗೌರಾದಿಭ್ಯಶ್ಚ** (ಪಾ. ಸೂ. ೪-೧-೪೧) ಎಂದು ಙೀಷ್, **ಯಸ್ಯೇತಿ ಚ** (ಪಾ.ಸೂ.) ಎಂದು ಙೀಷಿನ ಹಿಂದಿರುವ ಅಕಾರಕ್ಕೆ ಲೋಪ, ಪ್ರತ್ಯಯಸ್ವರದಿಂದ ಙೀಷ್‌ನ ಈಕಾರ ಉದಾತ್ತ ಙಸ್., **ಆಣ್ನದ್ಯಾಃ** (ಪಾ. ಸೂ. ೭-೩-೧೧೨) ಎಂದು ಆಡಾಗಮ ಪೃಥಿವೀ+ಆ–ಅಸ್., **ಆಟಶ್ಚ** (ಪಾ. ಸೂ) ಎಂದು ವೃದ್ಧಿ. ಯಣಾದೇಶವು ಉದಾತ್ತವಾದ ಈಕಾರದ ಸ್ಥಾನದಲ್ಲಿ ಬರುತ್ತೆ. **ಉದಾತ್ತಯಣೋಹಲ್ಪೂರ್ವಾತ್** (ಪಾ. ಸೂ. ೬-೧-೧೭೪) ಉದಾತ್ತಸ್ಥಾನದಲ್ಲಿ ಬಂದ ಯ, ವ, ರ, ಲ ಗಳ ಹಿಂದೆ ವ್ಯಂಜನವಿದ್ದರೆ ಆ ಯ ವ ರ ಲಗಳ ಮುಂದಿರುವ ನದೀ ಸಂಜ್ಞಕವರ್ಣವೂ ಅಜಾದಿ ಶಸಾದಿ ವಿಭಕ್ತಿಯೂ ಸಹ ಉದಾತ್ತವಾಗುತ್ತೆ ಎಂದು ವಿಭಕ್ತಿಯು ಉದಾತ್ತ.

**ಹಿನ್ವಾನಾಸಃ**—ಹಿ ಗತೌ ವೃದ್ಧೌ ಚ ಧಾತು **ತಾಚ್ಛೀಲ್ಯವಯೋವಚನಶಕ್ತಿಷು ಚಾನಶ್** (ಪಾ. ಸೂ. ೩-೨-೧೨೯) ತಾಚ್ಛೀಲ್ಯ ಅದೇ ಸ್ವಭಾವವಾಗಿ ಇರುವಿಕೆ, ವಯಸ್ಸು, ಶಕ್ತಿ ಈ ಅರ್ಥಗಳು ತೋರುವಾಗ ಧಾತುವಿನ ಮುಂದೆ ಕರ್ತ್ರರ್ಥದಲ್ಲಿ ಚಾನಶ್ ಬರುತ್ತೆ ಎಂದು ವೃದ್ಧ್ಯರ್ಥಕವಾದ ಹಿ ಧಾತುವಿನ ಮುಂದೆ ಚಾನಶ್ ಪ್ರತ್ಯಯ. ಬೆಳೆಯುವುದೇ ಸ್ವಭಾವವಾಗಿ ಉಳ್ಳವರು ಎಂದು ಅರ್ಥ. ಹಿ+ಆನ **ಸ್ವಾದಿಭ್ಯಃ ಶ್ನುಃ** (ಪಾ ಸೂ. ೩-೧-೭೩) ಎಂದು ಶ್ನು ವಿಕರಣ, **ಹುಶ್ನುವೋ**—, ಎಂದು ಯಣ್, ಜಸ್-ಅಸುಕ್, ರುತ್ವವಿಸರ್ಗಗಳು. ‖ ೮ ‖



ಸಂಹಿತಾಪಾಠಃ

ಪರಿ ಯದಿಂದ್ರ ರೋದಸೀ ಉಭೇ ಅಬುಭೋಜೀರ್ಮಹಿನಾ
ವಿಶ್ವತಃ ಸೀಂ ‖
ಅಮನ್ಯಮಾನಾಁ ಅಭಿ ಮನ್ಯಮಾನೈರ್ನಿರ್ಬ್ರಹ್ಮಭಿರಧಮೋ
ದಸ್ಯುಮಿಂದ್ರ ‖ ೯ ‖

॥ ಪದಪಾಠಃ ॥

**ಪರಿ । ಯತ್ । ಇಂದ್ರ । ರೋದಸೀ ಇತಿ । ಉಭೇ ಇತಿ । ಅಬು-ಭೋಜೀಃ । ಮಹಿನಾ । ವಿಶ್ವತಃ । ಸೀಂ ॥**

**ಅಮನ್ಯಮಾನಾನ್ । ಅಭಿ । ಮನ್ಯಮಾನೈಃ । ನಿಃ । ಬ್ರಹ್ಮಽಭಿಃ । ಅಧಮಃ । ದಸ್ಯುಂ । ಇಂದ್ರ ॥ ೯ ॥**

॥ ಸಾಯಣಭಾಷ್ಯಂ ॥

ಹೇ ಇಂದ್ರ ಯದ್ಯದಾ ರೋದಸೀ ಉಭೇ ದ್ಯುಲೋಕಭೂಲೋಕಾವುಭೌ ಮಹಿನಾ ತ್ವದೀಯೇನ ಮಹಿಮ್ನಾ ವಿಶ್ವತಃ ಸೀಂ ಸರ್ವತಃ ಪರಿಗೃಹ್ಯ ಪರ್ಯಬುಭೋಜೀಃ ಪರಿತೋ ಭುಕ್ತವಾನಸಿ । ತದಾನೀಂ ತ್ವಮಮನ್ಯಮಾನಾನ್ ಮಂತ್ರಾರ್ಥಮನುಧ್ಯಾತುಮಶಕ್ತಾನಪಿ ಕೇವಲಪಾಠಕಾನ್ಯಜಮಾನಾನಭಿ ಮನ್ಯ-ಮಾನೈರಸ್ಮದೀಯಾ ಏತೇ ಯಜಮಾನಾ ರಕ್ಷಣೀಯಾ ಇತ್ಯಭಿಮಾನಂ ಕುರ್ವದ್ಭಿರ್ಬ್ರಹ್ಮಭಿರ್ಮಂತ್ರೈ-ರ್ದಸ್ಯುಂ ಚೋರಂ ವೃತ್ರಾದಿರೂಪಮಸುರಂ ನಿರಧಮಃ । ನಿಃಸಾರಿತವಾನಸಿ । ಧಮತಿರ್ಗತಿಕರ್ಮಾ । ನಿ. ೭-೩ । ಇತಿ ಯಾಸ್ಕಃ । ಅಬುಭೋಜೀಃ । ಭುಜ ಪಾಲನಾಭ್ಯವಹಾರಯೋಃ । ಲಙಿ ಸಿಪಿ ಬಹುಲಂ ಛಂದಸಿ । ಪಾ. ೨-೪-೭೬ । ಇತಿ ವಿಕರಣಸ್ಯ ಶ್ಲುಃ । ಬಹುಲಂ ಛಂದಸಿ । ಪಾ. ೭-೩-೯೭. । ಇತೀ-ಡಾಗಮಃ । ಅಡುದಾತ್ತಃ । ಯದ್ವೃತ್ತಯೋಗಾದನಿಘಾತಃ । ಮಹಿನಾ । ಮಹಿಮ್ನಾ । ಮಹಚ್ಛಬ್ದಾ-ತ್ಪೃಥ್ವಾದಿಲಕ್ಷಣೋ ಭಾವೇ ಇಮನಿಚ್ । ಟೇರಿತಿ ಟಿಲೋಪಃ । ತೃತೀಯೈಕವಚನೇಽಲ್ಲೋಪೇ ಸತ್ಯುದಾತ್ತನಿವೃತ್ತಿಸ್ವರೇಣೋದಾತ್ತತ್ವಂ । ಮಲೋಪಶ್ಛಾಂದಸಃ । ಅಮನ್ಯಮಾನಾನ್ । ಮನ್ಯಂತೇ ಜಾನಂತೀತಿ ಮನ್ಯಮಾನಾಃ । ಮನ ಜ್ಞಾನೇ । ದಿವಾದಿಭ್ಯಃ ಶ್ಯನ್ । ಶ್ಯನೋ ನಿತ್ತ್ವಾದಾದ್ಯುದಾತ್ತತ್ವಂ । ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ಸಂಹಿತಾಯಾಂ ರುತ್ವಾನುನಾಸಿಕಾವುಕ್ತೌ ॥ ॥ ೯ ॥

॥ ಪ್ರತಿಪದಾರ್ಥ ॥

**ಇಂದ್ರ**— ಎಲೈ ಇಂದ್ರನೇ । **ಯತ್**— ಯಾವಾಗ (ತ್ವಂ—ನೀನು) । **ಉಭೇ ರೋದಸೀ**— ಭೂಮ್ಯಂತರಿಕ್ಷಗಳೆರಡನ್ನೂ । **ಮಹಿನಾ**— ನಿನ್ನ ಪ್ರಭಾವದಿಂದ । **ವಿಶ್ವತಃ ಸೀಂ**— ಸುತ್ತಲೂ ವ್ಯಾಪಿಸಿ । **ಪರಿ ಅಬುಭೋಜೀಃ**— ಸಕಲವನ್ನೂ ಅನುಭವಿಸಿದೆಯೋ (ಆಗ) । **ಅಮನ್ಯಮಾನಾನ್**— (ಮಂತ್ರಾರ್ಥವನ್ನು) ತಿಳಿಯದೆ ಕೇವಲ ಮಂತ್ರಪಾಠಕರಾದ ಯಜಮಾನರನ್ನು । **ಅಭಿಮನ್ಯಮಾನೈಃ**— (ನನಗೆ ಸೇರಿದ ಯಜ್ಞಕರ್ತನನ್ನು ರಕ್ಷಿಸಬೇಕು ಎಂದು, ಅಭಿಮಾನ ಹೊಂದಿರುವ ಮಂತ್ರಗಳಿಂದ । **ದಸ್ಯುಂ**—ವೃತ್ರರೂಪನಾದ ಚೋರನನ್ನು । **ನಿಃ ಅಧಮಃ**— ಓಡಿಸಿದೆ. ।

॥ ಭಾವಾರ್ಥ ॥

ಎಲೈ ಇಂದ್ರನೇ ನೀನು ಸರ್ವಶಕ್ತನು, ಮತ್ತು ಆಶ್ರಿತರಕ್ಷಕನು. ಭೂಮ್ಯಂತರಿಕ್ಷಗಳೆರಡನ್ನೂ ನೀನು ಮಹಿಮೆಯಿಂದ ವ್ಯಾಪಿಸಿರುವೆ. ಎರಡು ಲೋಕಗಳ ಐಶ್ವರ್ಯವನ್ನೂ ಅನುಭವಿಸಿರುವೆ. ಮಂತ್ರಾರ್ಥವನ್ನೂ ಅರಿಯದೆ ಕೇವಲ ಮಂತ್ರಪಾಠಕರಾದರೂ ಸಹ ಆ ಯಜ್ಞಕರ್ತರನ್ನು "ಇವರು ನಮ್ಮವರು-ಇವರನ್ನು ಕಾಪಾಡಬೇಕು" ಎಂದು ಸ್ತೋತ್ರಮಾಡುವ ಮಂತ್ರಗಳಿಂದ ಸಂತುಷ್ಟನಾಗಿ ಚೋರನಾದ ವೃತ್ರನನ್ನು ಹೊಡೆದೋಡಿಸಿದೆ.

English Translation

Indra, when you surrounded heaven and earth with your greatness simultaneously on all sides, you have blown away the robber ( Vritra ) being pleased with the prayers of those who know how to worship on behalf of those who do not worship.

॥ ವಿಶೇಷ ವಿಷಯಗಳು ॥

**ಸೀಂ—ಸೀಮಿತಿ ಪರಿಗ್ರಹಾರ್ಥೀಯೋ ವಾ ಪದಪೂರಣೋ ವಾ** (ನಿ. ೧-೭.) ಎಂದು ಯಾಸ್ಕರು ಹೇಳಿರುವರು. ಎಂದರೆ ಪರಿಗ್ರಹಾರ್ಥವನ್ನು ಸೂಚಿಸುವಾಗ ಅಥವಾ ಪಾದಪೂರಣಕ್ಕಾಗಿ ಸೀಂ ಎಂಬ ಪದವನ್ನು ಉಪಯೋಗಿಸುವರು. ಇಲ್ಲಿ ಭಾಷ್ಯಕಾರರು ಪರಿಗ್ರಹಾರ್ಥವೆಂಬ ಅರ್ಥವನ್ನೇ ಹೇಳಿರುವರು.

ವ್ಯಾಕರಣಪ್ರಕ್ರಿಯಾ

**ಅಬುಭೋಜೀಃ**—ಭುಜ ಪಾಲನಾಭ್ಯವಹಾರಯೋಃ ಧಾತು, ಪಾಲನ-ಕಾಪಾಡುವಿಕೆ, ಅಭ್ಯವಹಾರ-ತಿನ್ನುವುದು. ಲಙ್-ಸಿಪ್ **ಬಹುಲಂಛಂದಸಿ** (ಪಾ. ಸೂ. ೨-೪-೭೬) ಛಂದಸ್ಸಿನಲ್ಲಿ ವಿಕರಣಕ್ಕೆ ಬಹುಲವಾಗಿ ಶ್ಲು (ಲೋಪ) ಬರುತ್ತೆ. ಬಹುಲಗ್ರಹಣದಿಂದ ಜುಹೋತ್ಯಾದಿಯಲ್ಲಿ ಸೇರದೆ ಇರುವ ಧಾತುಗಳ ಮುಂದೆ ಇರುವ ವಿಕರಣಗಳಿಗೂ ಶ್ಲು ಬರುತ್ತೆ. ಆದ್ದರಿಂದ ಶ್ನಮ್‌ಗೆ ಇಲ್ಲಿ ಶ್ಲು ಬರುತ್ತೆ. **ಶ್ಲೌ** ಎಂದು ದ್ವಿತ್ವ-ಅಭ್ಯಾಸಕಾರ್ಯಗಳು. ಲಘೂಪಧಗುಣ. ಬುಭೋಜ್+ಸ್ **ಬಹುಲಂಛಂದಸಿ** (ಪಾ. ಸೂ. ೭-೩-೯೭) ಛಂದಸ್ಸಿನಲ್ಲಿ ಈಡಾಗಮವು ಬಹುಲವಾಗಿ ಬರುತ್ತೆ ಎಂದು ಈಡಾಗಮ, ಅಡಾಗಮ, ರುತ್ವ ವಿಸರ್ಗ ಯದ್ವೃತ= ಯತ್‌ಶಬ್ದವನ್ನೊಳಗೊಂಡ ಪದ, ಅದರ ಯೋಗ ಇದೆ. ಆದ್ದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಮಹಿನಾ**—ಮಹಿಮ್ನಾ ಎಂದರ್ಥ. **ಪೃಥ್ವಾದಿಭ್ಯ ಇಮನಿಜ್ವಾ** (ಪಾ. ಸೂ. ೫-೧-೧೨೨) ಪೃಥ್ವಾದಿ ಗಣಕ್ಕೆ ಸೇದ ಶಬ್ದಗಳ ಮುಂದೆ ಭಾವಾರ್ಥದಲ್ಲಿಯೂ ಕರ್ಮಾರ್ಥದಲ್ಲಿಯೂ ಇಮನಿಚ್ ವಿಕಲ್ಪವಾಗಿ ಬರುತ್ತೆ ಎಂದು ಮಹತ್ ಶಬ್ದ ಮುಂದೆ ಭಾವಾರ್ಥದಲ್ಲಿ ಇಮನಿಚ್ **ಟೇಃ** (ಪಾ. ಸೂ. ೬-೪-೧೫೫) ಇಷ್ಠನ್, ಇಮನಿಚ್

ಈಯಸುನ್‌ಗಳು ಪರದಲ್ಲಿರುವಾಗ ಭಸಂಜ್ಞಕಾಂಗಾವಯುವವಾದ ಟಿಗೆ ಲೋಪ ಬರುತ್ತೆ ಎಂದು ಅರ್‌ಗೆ ಲೋಪ. ಮಹ್+ಇಮನ್= ಮಹಿಮನ್, ಟಾಪ್ರತ್ಯಯ **ಅಲ್ಲೋಪೋಽನಃ** (ಪಾ. ಸೂ. ೬-೪-೧೩೪) **ಪ್ರಾಗಿವಾತ್ಕಃ** (ಪಾ. ಸೂ. ೫-३-೭೦) ಎಂದು ಕಪ್ರತ್ಯಯ ವಿಹಿತವಾಗಿದೆ. ಆ ಕಪ್ರತ್ಯಯ ವಿಧಾಯಕಸೂತ್ರದವರೆಗೆ ಇರುವ ಯಾದಿ ಅಥವಾ ಅಜಾದಿ ಪ್ರತ್ಯಯಗಳ ಹಿಂದೆ ಇರುವ ಅನ್‌ನ ಅಕಾರಕ್ಕೆ ಲೋಪ ಬರುತ್ತೆ ಎಂದು ಅಕಾರಲೋಪ. ಮಹಿಮ್ನಾ ಎಂದಾಯಿತು, ಇನುನಿಚ್ ಪ್ರತ್ಯಯದ ಅಕಾರ ಪ್ರತ್ಯಯಸ್ವರದಿಂದ ಉದಾತ್ತ ಅದಕ್ಕೆ ಲೋಪ ಬಂದಿದೆ **ಅನುದಾತ್ತಸ್ಯಚಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಯಾವ ಅನುದಾತ್ತನನ್ನು ನಿಮಿತ್ತಮಾಡಿ ಕೊಂಡು ಉದಾತ್ತಕ್ಕೆ ಲೋಪಬರುತ್ತದೆಯೋ ಅಂತಹ ಅನುದಾತ್ತಕ್ಕೆ ಉದಾತ್ತ ಬರುವುದು ಎಂದು ಟಾಪ್ರತ್ಯಯ ಉದಾತ್ತ. ಮಕಾರಕ್ಕೆ ಛಾಂದಸವಾಗಿ ಲೋಪ.

**ಅಮನ್ಯಮಾನಾನ್**—ಮನ್ಯಂತೇ= ಜಾನನ್ತಿ ಇತಿ ಮನ್ಯಮಾನಾಃ ತಿಳಿದುಕೊಳ್ಳುವರು ಎಂದರ್ಥ ಮನ-ಜ್ಞಾನೇ ಧಾತುವಿನ ಮುಂದೆ ಲಟ್. **ಲಟಃಶತೃಶಾನಚೌ** ಎಂದು ಶಾನಚ್), **ದಿವಾದಿಭ್ಯಃಶ್ಯನ್** (ಪಾ.ಸೂ. ३-೧-೬೯) ಎಂದು ಶ್ಯನ್, ಮನ್+ಯ+ಆನ **ಆನೇಮುಕ್** ಎಂದು ಮುಗಾಗಮ, ಮನ್ಯಮಾನ ಎಂದಾಯಿತು ದ್ವಿತೀಯಾ ಬಹುವಚನದಲ್ಲಿ ಮನ್ಯಮಾನಾನ್ ಎಂದಾಗುತ್ತೆ. ಸಂಹಿತಾಕಾಲದಲ್ಲಿ **ದೀರ್ಘಾದಟಿ ಸಮಾನಪಾದೇ** ಎಂದು ನಕಾರಕ್ಕೆ ರುತ್ವವೂ **ಅತ್ರಾನುನಾಸಿಕಃ—**, ಎಂದು ರೋಃ ಪೂರ್ವಕ್ಕೆ ಅನುನಾಸಿಕವೂ ಬರುತ್ತೆ. ॥ ೯ ॥



ಸಂಹಿತಾಪಾಠಃ

ನ ಯೇ ದಿವಃ ಪೃಥಿವ್ಯಾ ಅಂತಮಾಪುರ್ನ ಮಾಯಾಭಿರ್ಧನದಾಂ
ಪರ್ಯಭೂವನ್ ।
ಯುಜಂ ವಜ್ರಂ ವೃಷಭಶ್ಚಕ್ರ ಇಂದ್ರೋ ನಿರ್ಜ್ಯೋತಿಷಾ ತಮ-
ಸೋ ಗಾ ಅದುಕ್ಷತ್ ॥ ೧೦ ॥

॥ ಪದಪಾಠಃ ॥

ನ । ಯೇ । ದಿವಃ । ಪೃಥಿವ್ಯಾಃ । ಅಂತಂ । ಆಪುಃ । ನ । ಮಾಯಾಭಿಃ ।
ಧನಽದಾಂ । ಪರಿಽಅಭೂವನ್ ।

ಯುಜಂ । ವಜ್ರಂ । ವೃಷಭಃ । ಚಕ್ರೇ । ಇಂದ್ರಃ । ನಿಃ । ಜ್ಯೋತಿಷಾ ।
ತಮಸಃ । ಗಾಃ । ಅಧುಕ್ಷತ್ ॥ ೧೦ ॥

ಸಾಯಣಭಾಷ್ಯ

ಯೇ ಜಲವಿಶೇಷಾ ದಿವೋ ದ್ಯುಲೋಕಾತ್ಪೃಥಿವ್ಯಾ ಅಂತಂ ಭೂಮೇಃ ಸ್ಥಾನಂ ನಾಪುರ್ನ ಪ್ರಾಪ್ತಾಃ । ಮೇಘರೂಪಮಾಪನ್ನೇನ ವೃತ್ರೇಣ ನಿರುದ್ಧತ್ವಾತ್ । ಅತ ಏವ ಭೂಮಿಪ್ರಾಪ್ತ್ಯಭಾವಾದ್ಧನದಾಂ ಧನಪ್ರದಾಂ ಭೂಮಿಂ ಮಾಯಾಭಿಃ ಸಸ್ಯೋಪಕಾರಾದಿಭಿಃ ಕರ್ಮಭಿರ್ನ ಪರ್ಯಭೂವನ್ । ಪರಿತೋ ನ ವ್ಯಾಪ್ತಾಃ । ಜಲಪಾನಸಸ್ಯಾಭಿವೃದ್ಧ್ಯಾದ್ಯುಪಕಾರಂ ನ ಚಕ್ರುರಿತ್ಯರ್ಥಃ । ತದಾನೀಮಯುಮಿಂದ್ರೋ ಮೇಘಭೇದನಾಯ ವಜ್ರಂ ಯುಜಂ ಸ್ವಹಸ್ತಯುಕ್ತಂ ಚಕ್ರೇ । ತತೋ ಜ್ಯೋತಿಷಾ ದ್ಯೋತಮಾನೇನ ವಜ್ರೇಣ ತಮಸ ಅಂಧಕಾರರೂಪಾನ್ಮೇಘಾದ್ಗಾ ಗಮನಶೀಲಾನ್ಯುದಕಾನಿ ನಿರಧುಕ್ಷತ್ । ನಿಃಶೇಷೇಣ ದುಗ್ಧವಾನ್ । ಮೇಘಂ ಭಿತ್ವಾ ಜಲಂ ವೃಷ್ಟವಾನಿತ್ಯರ್ಥಃ ॥ ದಿವಃ । ಊಡಿದಮಿತಿ ಷಷ್ಠ್ಯಾ ಉದಾತ್ತತ್ವಂ । ಆಪುಃ । ಆಪ್ಲೃ ವ್ಯಾಪ್ತೌ । ಲಿಟ್ಯುಸಿ ರೂಪಂ । ಯದ್ವೃತ್ತಯೋಗಾದನಿಘಾತಃ । ಪರ್ಯಭೂವನ್ । ಅತ್ರಾಪಿ ಯಚ್ಛಬ್ದಸ್ಯಾನುಷಂಗಾನ್ನಿಘಾತಾಭಾವಃ । ಯುಜಂ । ಯುಜಿರ್ ಯೋಗೇ । ಋತ್ವಿಗಿತ್ಯಾದಿನಾ ಕ್ವಿನ್ । ಅನಿತ್ಯಮಾಗಮಶಾಸನಮಿತಿ ವಚನಾನ್ನುಮಭಾವಃ । ಅಧುಕ್ಷತ್ । ದುಹ ಪ್ರಪೂರಣೇ । ಲುಙಿ ಶಲಇಗುಪಧಾದನಿಟಃ ಕ್ಸಃ । ಪಾ. ೩-೧-೪೫ । ಇತಿ ಚ್ಲೇಃ ಕ್ಸಾದೇಶಃ । ದಾದೇರ್ಧಾತೋರ್ಘಃ । ಪಾ. ೮-೨-೩೨ । ಇತಿ ಘತ್ವಂ । ಏಕಾಚೋ ಬಶ ಇತ್ಯಾದಿನಾ । ಪಾ. ೮-೩-೩೭ । ಭಷ್ಭಾವಃ । ಸಂಹಿತಾಯಾಂ ಭಷ್ಭಾವಾಭಾವಶ್ಛಾಂದಸಃ ॥ ॥ ೨ ॥

ಪ್ರತಿಪದಾರ್ಥ

**ಯೇ**— (ವೃತ್ರನು ಮೇಘರೂಪದಿಂದ ಅಂತರಿಕ್ಷವನ್ನು ಮುಚ್ಚಿಕೊಂಡಾಗ) ಯಾವ ಜಲಪ್ರವಾಹಗಳು । **ದಿವಃ**— ಅಂತರಿಕ್ಷದಿಂದ । **ಪೃಥಿವ್ಯಾಃ**— ಭೂಮಿಯ । **ಅಂತಂ**—ಸ್ಥಾನವನ್ನು । **ನ ಆಪುಃ**— ಸೇರಲಿಲ್ಲವೋ (ಮತ್ತು) । **ಧನದಾಂ**— ಸಿರಿಯನ್ನು ಕೊಡತಕ್ಕ ಭೂಮಿಯನ್ನು । **ಮಾಯಾಭಿಃ**— ಬೆಳೆಯನ್ನು ವೃದ್ಧಿಪಡಿಸುವ ಕೆಲಸಗಳಿಂದ । **ನ ಪರ್ಯಭೂವನ್**— ವ್ಯಾಪಿಸಿ ಹರಡಲಿಲ್ಲವೋ (ಆಗ) । **ವೃಷಭಃ**— ಮಳೆಯನ್ನು ಸುರಿಸತಕ್ಕ । **ಇಂದ್ರಃ**— ಇಂದ್ರನು । **ವಜ್ರಂ**— ವಜ್ರಾಯುಧವನ್ನು । **ಯುಜಂ ಚಕ್ರೇ**— ಕೈಗೆತ್ತಿಕೊಂಡನು. (ಅನಂತರ) । **ಜ್ಯೋತಿಷಾ**—ಪ್ರಕಾಶಮಾನವಾದ ವಜ್ರದಿಂದ । **ತಮಸಃ**—ಕತ್ತಲಂತಿರುವ ಮೋಡದಿಂದ । **ಗಾಃ**— (ಆ) ಜಲಪ್ರವಾಹಗಳನ್ನು । **ನಿಃ ಅಧುಕ್ಷತ್**-ನಿಶ್ಶೇಷವಾಗಿ ಕರೆದನು. (ಹೊರಡಿಸಿದನು.)

॥ಭಾವಾರ್ಥ॥

(ಎಲೈ ಇಂದ್ರನೇ, ನೀನು ಜನರ ಕಷ್ಟವನ್ನು ಪರಿಹರಿಸುವವನು) ಹಿಂದೆ ವೃತ್ರಾಸುರನು ಮೇಘರೂಪ ದಿಂದ ಅಂತರಿಕ್ಷವನ್ನೆಲ್ಲಾ ಮುಚ್ಚಿಬಿಟ್ಟನು. ಅಂತರಿಕ್ಷದಿಂದ ಭೂಮಿಗೆ ಬರತಕ್ಕ ಜಲಪ್ರವಾಹಗಳನ್ನೆಲ್ಲಾ ತಡೆದು ಬಿಟ್ಟನು. ಜನರಿಗೆ ಸಂಪತ್ತನ್ನು ಕೊಡತಕ್ಕ ಬೆಳೆಗಳೆಲ್ಲ ನಾಶವಾದವು. ಕುಡಿಯಲೂ ನೀರಿನ ಅಭಾವವಾಯಿತು ಆಗ ನೀನು ನಿನ್ನ ವಜ್ರಾಯುಧವನ್ನು ಕೈಗೆತ್ತಿಕೊಂಡೆ. ಅದರ ಪ್ರಭೆಯು ಅಂತರಿಕ್ಷವನ್ನೂ ವ್ಯಾಪಿಸಲು ಕತ್ತಲಂತಿದ್ದ ಮೇಘದಿಂದ ಜಲಪ್ರವಾಹವು ಬೀಳುವಂತೆ ಮಾಡಿದೆ.

## English Translation

When the waters did not descend upon the ends of the earth and did not overspread, with its productions. the wealth-giver (Indra) the showerer, grasped his bolt and with its brightness milked out the waters from the darkness.

॥ ವಿಶೇಷ ವಿಷಯಗಳು ॥

ಹಿಂದೆ ಮೇಘರೂಪದಿಂದಿದ್ದ ವೃತ್ರಾಸುರನು ಸ್ವರ್ಗಲೋಕ (ಅಂತರಿಕ್ಷ) ದಿಂದ ಭೂಮಿಯ ಮೇಲೆ ಬೀಳಬೇಕಾದ ಮಳೆಯನ್ನು ತಡೆದನು, ಅದರಿಂದ ಭೂಮಿಯಲ್ಲಿ ನೀರಿಲ್ಲದೆ, ಸಸ್ಯಗಳೂ ಇಲ್ಲದೆ ಧನ ಅಥವಾ ಆಹಾರ ಮೊದಲಾದವುಗಳ ಉತ್ಪತ್ತಿಯು ಆಗಲಿಲ್ಲ. ಆದುದರಿಂದ ಇಂದ್ರನು ತನ್ನ ಪ್ರಕಾಶಮಾನವಾದ ವಜ್ರಾಯುಧವನ್ನು ತೆಗೆದುಕೊಂಡು ವೃತ್ರಾಸುರನನ್ನು ಪ್ರಹರಿಸಿ ಭೂಮಿಯ ಮೇಲೆ ಮಳೆ ಬರುವಂತೆ ಮಾಡಿದನು ಎಂದು ಮುಖ್ಯಾಭಿಪ್ರಾಯವು.

**ಮಾಯಾಭಿಃ—ಸಸ್ಯೋಪಕಾರಿಭಿಃ ಕರ್ಮಭಿಃ।** ಸಸ್ಯೋತ್ಪತ್ತಿಗೆ ಸಹಾಯಕವಾದ ಕರ್ಮಗಳಿಂದ ಮಾಯಾಶಬ್ದಕ್ಕೆ ಅನೇಕಾರ್ಥಗಳಿರುವುವು. ಅವುಗಳನ್ನು ನಾವು ಹಿಂದೆಯೇ ವಿವರಿಸಿದ್ದೇವೆ. ಇಲ್ಲಿ ಮಾಯಾಭಿಃ ಎಂದರೆ ಸಾಸಹಕೃತ್ಯಗಳಿಂದ ಎಂದರ್ಥವು.

**ಗಾಃ— ಗಮನಶೀಲಾನ್ಯುದಕಾನಿ** ಉದಕಗಳು, ನೀರು.

ವ್ಯಾಕರಣಪ್ರಕ್ರಿಯಾ

**ದಿವಃ**—ದಿವ್‌ಶಬ್ದದ ಮುಂದೆ ಷಷ್ಠೀಏಕವಚನ ಙಸ್, **ಊಡಿದಮ್ಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಊಠ್, ಇದಮ್, **ಪದ್ದನ್ನೋಮಾಸ್** ಎಂಬ ಸೂತ್ರದಿಂದ ವಿಹಿತವಾದ ಪದಾದ್ಯಾದೇಶಗಳು, ಅಪ್-ಪುಮ್, ರೈ-ದಿವ್, ಏಕಾಚ್ಕಗಳೂ ಅನ್ತೋದಾತ್ತಗಳೂ ಆದ ಈ ಶಬ್ದಗಳ ಮುಂದೆ ಇರುವ ಅಸರ್ವನಾಮಸ್ಥಾನವಿಭಕ್ತಿಯು ಉದಾತ್ತವಾಗುವುದು ಎಂದು ವಿಭಕ್ತಿಯು ಉದಾತ್ತ.

**ಆಪುಃ**—ಆಪ್ಲೃ ವ್ಯಾಪ್ತೌ. ಧಾತು, ಲಿಟ್-ಝಿ **ಪರಸ್ಮೈಪದಾನಾಂ ಣಲತುಸುಸ್**—,(ಪಾ. ಸೂ. ೩-೪-೮೨) ಎಂದು ಝಿಗೆ ಉಸ್, ದ್ವಿತ್ವ, ಜಾತಿಪಕ್ಷಾಶ್ರಯಣದಿಂದಲೋ ಯೋಗವಿಭಾಗವನ್ನವಲಂಬಿಸಿಯೋ **ಹಲಾದಿಃ ಶೇಷಃ** ಎಂಬುದರಿಂದ ಅಭ್ಯಾಸದ ಪಕಾರಕ್ಕೆ ಲೋಪ, ಸವರ್ಣದೀರ್ಘ, ರುತ್ವವಿಸರ್ಗಗಳು. ಯದ್ವೃತ್ತ ಯೋಗವಿರುವುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಪರ್ಯಭೂವನ್**—ಭೂ ಸತ್ತಾಯಾಂ, ಪರಿ ಉಪಸರ್ಗ, ಲುಙ್ ಪ್ರಥಮಪುರುಷ ಬಹುವಚನ, ಇಲ್ಲಿ, ಪ್ರಥಮಪಾದದಲ್ಲಿರುವ ಯೇ ಎಂಬ ಪದಕ್ಕೆ ಎರಡನೇ ಪಾದದ ಪರ್ಯಭೂವನ್ ಪದದ ಸಂಬಂಧ ಉಂಟು. ಪೂರ್ವ ಪಾದೋಕ್ತಹೇತುನೈವ ಧನದಾಂ ಮಾಯಾಭಿಃ ಯೇನ ಪರ್ಯಭೂವನ್ ಎಂದು ಅನ್ವಯವಾಗುತ್ತೆ. ಏವಂಚ ಯದ್ವೃತ್ತಯೋಗವಿರುವುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಯುಜಂ**— ಯುಜಿರ್ ಯೋಗೇ ಧಾತು, **ಋತ್ವಿಗ್ದಧೃಕ್ಸ್ರಗ್ದಿಗುಷ್ಣಿಗಞ್ಚುಯುಜಿಕ್ರುಞ್ಚಾಂಚ** (ಪಾ.ಸೂ.೩-೨-೫೯) ಈ ಧಾತುಗಳ ಮುಂದೆ ಕ್ವಿನ್ ಬರುತ್ತೆ ಎಂದರ್ಥ, ಇಲ್ಲಿ ನಿಪಾತನದಿಂದ ಕೆಲವು ಕಾರ್ಯಗಳು ಬರುತ್ತವೆ. ಋತುಶಬ್ದವು ಉಪಪದವಾಗಿರುವಾಗ ಯುಜ್‌ಧಾತುವಿನ ಮುಂದೆ ಕ್ವಿನ್, ಧೃಷಧಾತುವಿಗೆ ದ್ವಿತ್ವವೂ ಅಂತೋದಾತ್ತವೂ, ಸೃಜ್ ಧಾತುವಿನ ಮುಂದೆ ಕರ್ಮಾರ್ಥದಲ್ಲಿ ಕ್ವಿನ್ ಪ್ರತ್ಯಯವೂ, ಅಮಾಗವೂ, ದಿಶ್ ಧಾತುಮುಂದೆ ಕರ್ಮಾರ್ಥದಲ್ಲಿ ಕ್ವಿನ್‌ಪ್ರತ್ಯಯವೂ ಉತ್ ಉಪಸರ್ಗಪೂರ್ವಕವಾದ ಷ್ಣಿಹ ಧಾತುವಿನ ಮುಂದೆ ಕ್ವಿನ್, ಉಪ ಸರ್ಗದ ಕಡೆಯ ವರ್ಣಕ್ಕೆ ಲೋಪವೂ, ಸಕಾರಕ್ಕೆ ಷಕಾರವೂ, ಸುಬಂತವು ಉಪಪದವಾಗಿರುವಾಗ ಅಞ್ಚುಧಾತುವಿನ ಮುಂದೆ ಕ್ವಿನ್, ನಿರುಪಪದವಾದ ಯುಜ್‌ಧಾತುವಿನ ಮುಂದೆ ಕ್ವಿನ್ ಪ್ರತ್ಯಯವೂ ಸಹ ನಿಪಾತನದಿಂದ ಸಿದ್ಧ ವಾಗುವುವು. ದ್ವಿತೀಯೈಕವಚನ-ಅಮ್, ಯುಜ್+ಅಮ್ ಈಗ **ಯುಜೇರಸಮಾಸೇ** (ಪಾ. ಸೂ. ೭-೧ ೭೧) ಸಮಾಸದಲ್ಲಿ ಸೇರದೆ ಇರುವ ಯುಜ್ ಧಾತುವಿಗೆ ಸರ್ವನಾಮಸ್ಥಾನಪ್ರತ್ಯಯ ಪರದಲ್ಲಿರುವಾಗ ನುಮ್ ಬರುತ್ತೆ ಎಂದು ನುಮಾಗಮಕ್ಕೆ ಪ್ರಾಪ್ತಿ ಇದೆ. **ಅನಿತ್ಯಮಾಗಮಶಾಸನಮ್** (ಪರಿಭಾ) ಎಂಬುದರಿಂದ ನುಮಾಗಮ ಬರುವುದಿಲ್ಲ.

**ಅಧುಕ್ಷತ್**—ದುಹ ಪ್ರಪೂರಣೇ ಧಾತು, ಲುಙ್-ತಿಪ್ **ಚ್ಲಿಲುಙಿ** (ಪಾ.ಸೂ. ೩-೧-೪೩) ಎಂದು ಚ್ಲಿ, ಅದಕ್ಕೆ **ಶಲಇಗುಪಧಾದನಿಟಃ ಕ್ಸಃ** (ಪಾ. ಸೂ. ೩-೧-೪೫) ಶ ಷ ಸ ಹ ಇವು ಶಲ್‌ಪ್ರತ್ಯಾಹಾರಕ್ಕೆ ಸೇರಿದ ವರ್ಣಗಳು, ಇಗುಪಧವೂ ಶಲಂತವೂ ಅನಿಟ್ಕವೂ ಆದ ಧಾತುವಿನ ಮುಂದಿರುವ ಚ್ಲಿಗೆ ಕ್ಸ ಆದೇಶ ಬರುತ್ತೆ ಎಂದು ಸೂತ್ರಾರ್ಥ, ಕ್ಸ ಆದೇಶವು ಅಕಾರಾಂತ ಅಡಾಗಮ, ಅದುಹ್+ಸ+ತ್ **ದಾದೇರ್ಧಾತೋರ್ಘಃ** (ಪಾ. ಸೂ. ೮-೨-೩೨) ದಾದೇಃ ಧಾತೋಃ ಘಃ ಎಂದು ಪದವಿಭಾಗ, **ಹೋಢಃ** ಎಂಬುದರಿಂದ ಹಃ ಎಂಬ ಪದವು ಅನುವೃತ್ತ ವಾಗುತ್ತೆ. ಝಲಿ, ಪದಸ್ಯ-ಅನ್ತೇ ಎಂಬ ಪದಗಳು ಅನುವೃತ್ತವಾಗುತ್ತವೆ. ದಾದೇಃ ಎಂಬುದಕ್ಕೆ ಆವೃತ್ತಿ, ಆವೃತ್ತಿ ಎಂದರೆ ಸಕೃದುಚ್ಚರಿತಸ್ಯ ದ್ವಿರುಚ್ಚಾರಣಮ್, ಕಮಲಾನಿ ಕಮಲಾನಿ ಎಂದು ಹೇಳಿದರೆ ಪ್ರಶಸ್ತಕಮಲ ಎಂದು ಅರ್ಥ, ದಾದೇಃ ದಾದೇಃ ಪ್ರಶಸ್ತದಾದೇಃ ದಾದಿಯಲ್ಲಿ ಪ್ರಾಶಸ್ತ್ಯ ಔಪದೇಶಕಾಲಿಕತ್ವರೂಪವಾದುದು, ಇಲ್ಲಿ ಧಾತೋಃ ಎಂಬುದಕ್ಕೆ ಆವೃತ್ತಿಯನ್ನು ಕೆಲವರು ಹೇಳುವರು, ಏವಂಚ ಝಲ್‌ಪರದಲ್ಲಿರುವಾಗಲೂ ಪದಾಂತ ವಿಷಯದಲ್ಲಿಯೂ ಉಪದೇಶಕಾಲದಲ್ಲಿ ದಕಾರಾದಿಯಾದ ಧಾತುವಿನ ಸಂಬಂಧಿಯಾದ ಹಕಾರಕ್ಕೆ ಘಕಾರಾದೇಶ

ಬರುತ್ತೆ ಎಂದು ಸೂತ್ರಾರ್ಥ, ಇದರಿಂದ ಘ ಬಂದರೆ, ಅದು ಘ್+ಸ+ತ್ **ಏಕಾಚೋಬಶೋ ಭಷ್ ಝಷನ್ತಸ್ಯಸ್ಧ್ವೋಃ** (ಪಾ. ಸೂ. ೮-೨-೩೭) ಸಕಾರ, ಧ್ವಶಬ್ದ ಪರದಲ್ಲಿದ್ದರೂ ಪದಾಂತ ವಿಷಯದಲ್ಲಿಯೂ ಧಾತುವಿಗೆ ಅವಯವವಾದ ಯಾವ ಏಕಾಚ್ಕವಾದ ಝಷಂತವಿದೆಯೋ ಅದರ ಅವಯವವಾದ ಬಶ್‌ನ ಸ್ಥಾನದಲ್ಲಿ ಭಷ್ ಬರುತ್ತೆ ಎಂದು ಸೂತ್ರಾರ್ಥ. ಬಗಡದ -- ಇವು ಬಶ್ಕು, ಭ ಘ ಢ ಧ ಇವು ಭಷ್, ಇಲ್ಲಿ ಸಕಾರವು ಪರದಲ್ಲಿದೆ, ಧಾತು, ದುಘ್, ತದವಯವವಾದ ಏಕಾಚ್ಕೂ ವ್ಯವದೇಶಿವದ್ಭಾವದಿಂದ ಅದೇ ಆಗುತ್ತೆ. ಇದು ಝಷನ್ತವಾಗಿದೆ. ಇದರ ಅವಯವವಾದ ಬಶ್ ದಕಾರ, ಅದಕ್ಕೆ ಭಷ್ ಎಂದರೆ ಧಕಾರ ಬರುತ್ತೆ. ಅಧು ಘ್-ಸ-ತ್ ಘಕಾರಕ್ಕೆ ಚರ್ತ್ವದಿಂದ ಕಕಾರ **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೯) ಎಂದು ಸಕಾರಕ್ಕೆ ಷಕಾರ, ಅಧುಕ್ಷತ್ ಎಂದಾಗುತ್ತೆ. ಸಂಹಿತಾಕಾಲದಲ್ಲಿ ಛಾಂದಸವಾಗಿ ಭಷ್ಭಾವ ಬರುವುದಿಲ್ಲ, ಅಂದರೆ ಧಕಾರ ಬರುವುದಿಲ್ಲ ॥ ೧೦ ॥

---

॥ ಸಂಹಿತಾಪಾಠಃ ॥

ಅನು ಸ್ವಧಾಮಕ್ಷರನ್ನಾಪೋ ಅಸ್ಯಾವರ್ಧತ ಮಧ್ಯ ಆ ನಾವ್ಯಾನಾಂ ।
ಸಧ್ರೀಚೀನೇನ ಮನಸಾ ತಮಿಂದ್ರ ಓಜಿಷ್ಠೇನ ಹನ್ಮನಾಹನ್ನಭಿ ದ್ಯೂನ್ ॥ ೧೧ ॥

॥ ಪದಪಾಠಃ ॥

ಅನು । ಸ್ವಧಾಂ । ಅಕ್ಷರನ್ । ಆಪಃ । ಅಸ್ಯ । ಅವರ್ಧತ । ಮಧ್ಯೇ । ಆ । ನಾವ್ಯಾನಾಂ ।
ಸಧ್ರೀಚೀನೇನ । ಮನಸಾ । ತಂ । ಇಂದ್ರಃ । ಓಜಿಷ್ಠೇನ । ಹನ್ಮನಾ । ಅಹನ್ । ಅಭಿ । ದ್ಯೂನ್ ॥ ೧೧ ॥

॥ ಸಾಯಣಭಾಷ್ಯಂ ॥

ಆಪೋ ಜಲಾನ್ಯಸ್ಯೇಂದ್ರಸ್ಯ ಸ್ವಧಾಮನ್ನಂ ವ್ರೀಹ್ಯಾದಿರೂಪಮನುಲಕ್ಷ್ಯಾಕ್ಷರನ್ । ಮೇಘಾದ್ವೃಷ್ಟಾ ಅಭವನ್ । ತದಾನೀಮಯಂ ವೃತ್ರೋ ನಾವ್ಯಾನಾಂ ನಾವಾ ತರಣಯೋಗ್ಯಾನಾಂ ಬಹ್ವೀನಾಮಪಾಂ ಮಧ್ಯೇ ಆ ಸಮಂತಾದವರ್ಧತ । ವೃದ್ಧಿಂ ಪ್ರಾಪ್ತಃ । ಪ್ರಭೂತಜಲೇ ವರ್ತಮಾನೋಽಪಿ ನ ಮಮಾರ । ಕಿಂತ್ವಭಿವೃದ್ಧ ಏವ । ತದಾನೀಮಿಂದ್ರಃ ಸಧ್ರೀಚೀನೇನ ಸಹಗಚ್ಛತಾ ಮನಸಾ ಯುಕ್ತಂ ತಂ ವೃತ್ರಮೋಜಿಷ್ಠೇನಾತಿಬಲಯುಕ್ತೇನ ಹನ್ಮನಾ ಹನನಸಾಧನೇನ ವಜ್ರೇಣಾಭಿ ದ್ಯೂನ್ ಕತಿಚಿದ್ದಿವಸಾನಭಿಲಕ್ಷ್ಯಾಹನ್ । ತೇಷು ದಿವಸೇಷು ಹತವಾನ್ । ಜಲಮಧ್ಯೇ ಪತಿತಸ್ಯಾಪಿ ವೃತ್ರಸ್ಯ ಮನೋ ಯತ್ರೇಂದ್ರಸ್ತಿಷ್ಠತಿ ತತ್ರೈವ ಸಹ ಗಚ್ಛತಿ ತಾದೃಶಮಭಿಜ್ಞಾಯ ಸ ಹತವಾನಿತ್ಯರ್ಥಃ ॥ ಅಕ್ಷರನ್ । ಕ್ಷರ ಸಂಚಲನೇ । ನಾವ್ಯಾನಾಂ । ನಾವಾ ತಾರ್ಯೋಣಾಂ । ನೌವಯೋಧರ್ಮೇತ್ಯಾದಿನಾ । ಪಾ. ೪-೪-೯೧ । ಯತ್ । ವಾಂತೋ ಯಿ ಪ್ರತ್ಯಯೇ । ಪಾ. ೬-೧-೭೯ । ಇತ್ಯಾವಾದೇಶಃ । ಅನಾವ ಇತಿ ಪರ್ಯುದಾಸಾತ್ । ಪಾ. ೬-೧-೨೧೩ । ತಿತ್ಸ್ವರಿತಮಿತಿ ಪ್ರತ್ಯಯಸ್ವರಿತತ್ವಂ । ಸಧ್ರೀಚೀನೇನ ಸಹಾಂಚತೀತಿ ಸಧ್ರ್ಯಙ್ । ಸಹಸ್ಯ ಸಧ್ರಿಃ । ಪಾ. ೬-೩-೯೫ । ಇತಿ ಸಧ್ರ್ಯಾದೇಶಃ । ವಿಭಾಷಾಂಚೇರದಿಕ್ಸ್ತ್ರಿಯಾಂ । ಪಾ. ೫-೪-೮ । ಇತಿ ಸ್ವಾರ್ಥೇ ಖಪ್ರತ್ಯಯಃ । ತಸ್ಯಾಯನ್ನಿತ್ಯಾದಿನಾ ಈನಾದೇಶಃ । ಅಚ ಇತ್ಯಕಾರಲೋಪೇ ಚಾವಿತಿ ದೀರ್ಘತ್ವಂ । ಆದೇಶಸ್ಯೋಪದೇಶಿವದ್ವಚನಾದೀಕಾರ ಉದಾತ್ತಃ । ಓಜಿಷ್ಠೇನ । ಓಜೋಽಸ್ಯಾಸ್ತೀತ್ಯೋಜಸ್ವೀ । ಅಸ್ಮಾಯಾಮೇಧೇತಿ ವಿನಿಃ । ತತ ಆತಿಶಾಯನಿಕ ಇಷ್ಠನ್ । ವಿನ್ಮತೋರ್ಲುಗಿತಿ ವಿನೋ ಲುಕ್ । ಟೇರಿತಿ ಟಿಲೋಪಃ । ನಿತ್ತ್ವಾದಾದ್ಯುದಾತ್ತತ್ವಂ । ಹನ್ಮನಾ । ಹನ್ಯತೇಽನೇನೇತಿ ಹನ್ಮ । ಅನ್ಯೇಭ್ಯೋಽಪಿ ದೃಶ್ಯಂತೆ ಇತಿ ದೃಶಿಗ್ರಹಣಾತ್ಕರಣೇಽಪಿ ಮನಿನ್ । ನಿತ್ತ್ವಾದಾದ್ಯುದಾತ್ತತ್ವಂ । ತೃತೀಯೈಕವಚನೇಽಲ್ಲೋಪೇ ಪ್ರಾಪ್ತೇ ನ ಸಂಯೋಗಾದ್ವಮಂತಾತ್ । ಪಾ. ೬-೪-೧೩೭ । ಇತಿ ಪ್ರತಿಷೇಧಃ ॥ ॥ ೧೧ ॥

ಪ್ರತಿಪದಾರ್ಥ

**ಆಪಃ**— ನೀರು । **ಅಸ್ಯ**— ಇಂದ್ರನ । **ಸ್ವಧಾಂ ಅನು**—ಅನ್ನಾರ್ಥವಾದ ವ್ರೀಹ್ಯಾದಿಗಳಿಗೋಸ್ಕರ । **ಅಕ್ಷರನ್**— ಹರಿದವು (ಆಗ) । **ನಾವ್ಯಾನಾಂ**— ದೋಣಿಯಿಂದ ಸಂಚಾರ ಮಾಡುವಷ್ಟು (ತುಂಬಿ ಹರಿಯುವ) ಪ್ರವಾಹಗಳ । **ಮಧ್ಯೇ**—ನಡುವೆ । **ಅವರ್ಧತ**—(ವೃತ್ರನು) ಎಲ್ಲಕಡೆಯೂ ಬೆಳೆದನು. । (ಆಗ) **ಇಂದ್ರಃ**— ಇಂದ್ರನು । **ಸಧ್ರೀಚೀನೇನ**— ದ್ವೇಷದಿಂದ ಇಂದ್ರನನ್ನೇ ಅನುಸರಿಸಿ ಬರುವ । **ಮನಸಾ**— ಮನಸ್ಸಿನಿಂದ ಕೂಡಿದ । **ತಂ**— ಆ ವೃತ್ರನನ್ನು । **ಓಜಿಷ್ಠೇನ**— ಬಹಳ ಬಲವುಳ್ಳ । **ಹನ್ಮನಾ**— ಕೊಲ್ಲಲು ಸಾಧನವಾದ ವಜ್ರಾಯುಧದಿಂದ । **ಅಭಿ ದ್ಯೂನ್**— ಕೆಲವು ದಿನ ಗಮನಿಸಿ । **ಅಹನ್**— ಕೊಂದನು. ।

ಭಾವಾರ್ಥ

ಯಜ್ಞದಲ್ಲಿ ಇಂದ್ರತೃಪ್ತಿಜನಕವಾದ ವ್ರೀಹ್ಯಾದಿಗಳ ಅಭಿವೃದ್ಧಿಗಾಗಿ ದೋಣಿಯಿಂದ ಮಾತ್ರ ಸಂಚರಿಸಲು ಸಾಧ್ಯವಾಗುವಷ್ಟು ಅಧಿಕವಾಗಿ ನದಿಗಳ ಪ್ರವಾಹಗಳು ಹರಿಯುತ್ತಿರುವಾಗಲೂ ವೃತ್ರನು ಆ ಪ್ರವಾಹಗಳ

ಮಧ್ಯದಲ್ಲಿ ಬೆಳೆದನು. ಆಗ ಇಂದ್ರನು ತನ್ನನ್ನೇ ಹಿಂಬಾಲಿಸುವ ಆತನ ಮನಸ್ಸನ್ನು ಗಮನಿಸಿ ತನ್ನ ಬಲವಾದ ಮತ್ತು ನಾಶಕರವಾದ ವಜ್ರಾಯುಧದಿಂದ ಆ ವೃತ್ರನನ್ನು ಕೊಂದನು.

## English Translation

According to his (Indra's) wish the waters flowed to provide food, but the demon (Vritra) grew in strength in the midst of waters so deep as to be navigable. Indra, with his collected wisdom and with his most mighty thunderbolt slew him in the course of time.

### ವಿಶೇಷವಿಷಯಗಳು

**ಸ್ವಧಾಂ**—ಸ್ವಧಾಶಬ್ದಕ್ಕೆ ಉದಕವೆಂದೂ (ನಿ. ೨ ೨೪) ಅನ್ನವೆಂದೂ (ನಿ ೩-೯) ಎರಡು ವಿಧವಾದ ಅರ್ಥಗಳನ್ನು ಯಾಸ್ಕರು ಹೇಳಿದ್ದರೂ ಭಾಷ್ಯಕಾರರು ಇಲ್ಲಿ ಅನ್ನವೆಂಬ ಅರ್ಥವನ್ನೇ ಸ್ವೀಕರಿಸಿದಾರೆ.

**ಅಕ್ಷರನ್— ಕ್ಷರ ಸಂಚಲನೇ ।** ಚಲನ ಎಂದರೆ ಇಲ್ಲಿ ಪ್ರವಾಹರೂಪವಾಗಿ ಹರಿಯುವುದು ಎಂದರ್ಥವು.

**ಅವರ್ಧತ**—ವೃತ್ರನು ನೀರಿನ ಮಧ್ಯದಲ್ಲಿ (ಮೇಘಮಂಡಲದಲ್ಲಿ) ಇದ್ದರೂ ಸಾಯಲಿಲ್ಲ, ಮತ್ತು ಹೆಚ್ಚು ಹೆಚ್ಚಾಗಿ ಬೆಳೆದು ಅಭಿವೃದ್ಧಿಯನ್ನೇ ಹೊಂದಿದನೆಂದಭಿಪ್ರಾಯವು.

**ನಾವ್ಯಾನಾಂ— ನಾವಾ ತರಣಯೋಗ್ಯಾನಾಂ ।** ನಾವೆ ಅಥವಾ ದೋಣಿಯಿಂದ ಮಾತ್ರವೇ ದಾಟಲು ಸಾಧ್ಯವಾಗುವಷ್ಟು ಪ್ರವಾಹ ಎಂದರೆ ಬಹಳವಾಗಿ ಇರುವ ನೀರಿನ ಮಧ್ಯದಲ್ಲಿ ಎಂದರ್ಥವು.

**ಸಧ್ರೀಚಿನೇನ—ಸಹ ಗಚ್ಛತಾ ಮನಸಾ । ಸಮಸ್ತೇನ ಬುದ್ಧಿಚಾತುರ್ಯೇಣ ।** ಮನಸ್ಸಿನ. ಏಕಾಗ್ರತೆಯಿಂದ, ಸ್ಥಿರೀಕೃತವಾದ ಎಂದರಲ್ಲಿ ಅದರಲ್ಲಿಯೇ ನೆಟ್ಟ ಮನಸ್ಸಿನಿಂದ, ವೃತ್ರಾಸುರನ ಸಂಹಾರದಲ್ಲಿಯೇ ಮನಸ್ಸನ್ನಿಟ್ಟು, with his collected wisdom &c. ಭಾಷ್ಯಕಾರರು ಈ ಶಬ್ದಕ್ಕೆ **ಯುಕ್ತಂ** ಎಂಬ ಶಬ್ದವನ್ನು ಸೇರಿಸಿ ವೃತ್ರಾಸುರನಿಗೆ ವಿಶೇಷಣಪದವನ್ನಾಗಿ ಉಪಯೋಗಿಸಿರುವರು. ಇದು ಅಷ್ಟು ಸಮಂಜಸವಾಗಿಲ್ಲ. ಈ ಶಬ್ದಪ್ರಯೋಗವಿರುವ ಕೆಲವು ಋಕ್ಕುಗಳನ್ನು ಉದಾಹರಣೆಯಾಗಿ ಕೊಟ್ಟಿರುವೆವು—

**ಸಧ್ರೀಚೀನೇನ ಮನಸಾವಿವೇನನ್ ತಮಿತ್ಸಖಾಯಂ ಕೃಣುತೇ ಸಮತ್ಸು ॥**
(ಋ. ಸಂ. ೪-೨೪-೬)

**ಅಸ್ಮಾಭಿರಿಂದ್ರ ಸಖಿಭಿರ್ಹುವಾನಃ ಸಧ್ರೀಚೀನೋ ಮಾದಯಸ್ವಾ ನಿಷದ್ಯ ॥**
(ಋ. ಸಂ. ೧೦-೧೧೨-೩)

**ಚಕ್ರಾಥೇ ಹಿ ಸಧ್ರ್ಯ೧ಙ್ನಾಮ ಭದ್ರಂ ಸಧ್ರೀಚೀನಾ ವೃತ್ರಹಣಾ ಉತ ಸ್ಥಃ ॥**
(ಋ. ಸ. ೧-೧೦೮-೩)

**ಸಧ್ರೀಚೀನಾ ಪಥ್ಯಾ ೩ ಸಾ ವಿಷೂಚೀ ಮಹದ್ದೇವಾನಾಮಸುರತ್ವಮೇಕಂ ॥**
(ಋ. ಸಂ. ೩-೫೫-೧೫)

**ಸಧ್ರೀಚೀನಾ ಯೋತವೇ ಪ್ರೇಮಜೀಗಃ ಸುದಿನೇವ ಪೃಕ್ಷ ಆತಂಸಯೇಥೇ ||**

(ಋ. ಸ. ೧೦-೧೦೬-೧)

ಇತ್ಯಾದಿ

**ಓಜಿಷ್ಠೇನ—ಓಜೋऽಸ್ಯಾಸ್ತೀತ್ಯೋಜಸ್ವೀ |** ಅತಿಬಲಯುಕ್ತವಾದ

**ಹನ್ಮನಾ— ಹನನಸಾಧನೇನ ವಜ್ರೇಣ |** ಸಂಹಾರಮಾಡುವುದಕ್ಕೆ ಸಾಧನಭೂತವಾದ ವಜ್ರಾಯುಧದಿಂದ

**ಅಭಿ ದ್ಯೂನ್**—ಕೆಲವು ದಿವಸಗಳನ್ನ ನಿರೀಕ್ಷಿಸಿ, ಸಮಯ ಕಾದು ಇತ್ಯಾದ್ಯರ್ಥಗಳನ್ನು ಹೇಳಬಹುದು.

|| ವ್ಯಾಕರಣಪ್ರಕ್ರಿಯಾ ||

**ನಾವ್ಯಾನಾಮ್**—ನಾವಾ ತಾರ್ಯಾಃ ನಾವ್ಯಾಃ ತೇಷಾಂ ಎಂದು ವಿಗ್ರಹ. ಹಡಗಿನಿಂದ ದಾಟಲು ಯೋಗ್ಯವಾದ ಎಂದರ್ಥ, **ನೌವಯೋಧರ್ಮವಿಷಮೂಲಮೂಲಸೀತಾತುಲಾಭ್ಯ ಸ್ತಾರ್ಯತುಲ್ಯಪ್ರಾಪ್ಯವಧ್ಯಾನಾಮ್ಯಸಮಸಮಿತಸಂಮ್ಮಿತೇಷು** (ಪಾ. ಸೂ. ೪-೪-೯೧) ನೌಶಬ್ದಪ್ರಕೃತಿಕ ತೃತೀಯಾಂತದ ಮುಂದೆ ತಾರ್ಯಂ=ದಾಟಲು ಶಕ್ಯವಾದುದು ಎಂಬ ಅರ್ಥದಲ್ಲಿ ಯತ್ ಬರುತ್ತೆ. ವಯಸ್‌ಶಬ್ದಪ್ರಕೃತಿಕ ತೃತೀಯಾಂತದ ಮುಂದೆ ಸಮಾನ ಎಂಬ ಅರ್ಥದಲ್ಲಿ ಯತ್ ಬರುತ್ತೆ. ಈ ಶಬ್ದಕ್ಕೆ ಮಿತ್ರನಲ್ಲಿ ಮಾತ್ರವೇ ಪ್ರಯೋಗ. ಶತ್ರುವಿನಲ್ಲಿ ಪ್ರಯೋಗ ಇಲ್ಲ, ಹೀಗೆಯೇ ತೃತೀಯಾಂತಗಳಾದ ಧರ್ಮ, ವಿಷ, ಮೂಲ, ಮೂಲ್ಯ, ಸೀತಾ, ತುಲಾ ಶಬ್ದಗಳ ಮುಂದೆ ಕ್ರಮವಾಗಿ ಪ್ರಾಪ್ಯ, ವಧ್ಯ, ಆನಾಮ್ಯ, ಸಮ, ಸಮಿತ, ಸಂಮಿತ ಎಂಬ ಅರ್ಥಗಳಲ್ಲಿ ಯತ್ ಬರುತ್ತೆ ಎಂದು ಸೂತ್ರಾರ್ಥ. ಮೂಲ ಎಂದರೆ ವರ್ತಕರು ಹಾಕುವ ಬಂಡವಾಳ. ಆನಾಮ್ಯ ಎಂದರೆ ತನಗಾಗಿ ವರ್ತಕನು ಉಳಿಸಿಕೊಳ್ಳುವ ಭಾಗ ಎಂದರೆ ಲಾಭ. ಲೋಕದಲ್ಲಿ ಎಷ್ಟು ದ್ರವ್ಯವನ್ನು ಕೊಟ್ಟು ಕೊಳ್ಳುವರೋ ಅಷ್ಟಕ್ಕೂ ಮೂಲ್ಯ ಎಂದು ವ್ಯವಹಾರವು ಲಾಕ್ಷಣಿಕವು. ಸೀತಾ ಎಂದರೆ ನೇಗಿಲು ತುದಿ, ಆದರಿಂದ ಸಂಗತ ಎಂದರೆ ಹಳ್ಳದಿಣ್ಣೆಗಳಿಲ್ಲದೆ ಸರಿಪಡಿಸಲ್ಪಟ್ಟದ್ದು. ಸಂಮಿತ=ಚೆನ್ನಾಗಿ ತೂಕಮಾಡಿದ್ದು. ಪ್ರಕೃತ ನೌಶಬ್ದದ ಮುಂದೆ ಯತ್ ಬಂದರೆ ನೌ+ಯ **ವಾನ್ತೋ ಯಿ ಪ್ರತ್ಯಯೇ** (ಪಾ. ಸೂ. ೬-೧-೭೯) ಯಕಾರಾದಿ ಪ್ರತ್ಯಯ ಪರದಲ್ಲಿದ್ದರೆ ಓ ಔಗಳಿಗೆ ಕ್ರಮವಾಗಿ ಅವ್ ಆವ್‌ಗಳು ಬರುವುವು ಎಂದು ಆವ್ ಆದೇಶ. **ಯತೋ ನಾವಃ** (ಪಾ. ಸೂ. ೬-೧-೨೧೩) ಅನಾವಃ=ನೌಶಬ್ದಭಿನ್ನವಾದ ಶಬ್ದದ ಮುಂದೆ ಇರುವ ಯಾವ ಯತ್ ಇದೆಯೋ ಅಂತಹ ಯತ್ ಪ್ರತ್ಯಯವನ್ನು ಕೊನೆಯಲ್ಲಿ ಹೊಂದಿರುವ ಶಬ್ದವು ಎರಡು ಅಚ್ಚುಗಳನ್ನು ಹೊಂದಿದ್ದರೆ ಅದಕ್ಕೆ ಆದ್ಯುದಾತ್ತ ಬರುತ್ತೆ ಎಂದು ಅರ್ಥ. ಸಮಾಸದಲ್ಲಿ ನಞ್‌ಗೆ ಕ್ರಿಯಾಪದದಲ್ಲಿ ಅನ್ವಯ ಬಂದರೆ ಪ್ರಸಜ್ಯಪ್ರತಿಷೇಧ, ಉತ್ತರಪದದಲ್ಲಿ ಅನ್ವಯ ಬಂದರೆ ಪರ್ಯುದಾಸ. ನೌಶಬ್ದಭಿನ್ನವಾದ ಎಂದು ಪರ್ಯುದಾಸಮಾಡಿರುವುದರಿಂದ ಇಲ್ಲಿ ಆದ್ಯುದಾತ್ತ ಬರುವುದಿಲ್ಲ. **ತಿತ್ಸ್ವರಿತಮ್** ಎಂಬುದರಿಂದ ಸ್ವರಿತ ಬರುತ್ತೆ.

**ಸಧ್ರೀಚೀನೇನ**—ಸಹ ಅಞ್ಚತಿ ಇತಿ ಸಧ್ರ್ಯಙ್ **ಋತ್ವಿಗ್ದಧೃಕ್**—, ಇತ್ಯಾದಿ ಸೂತ್ರದಿಂದ ಸುಬಂತವು ಉಪಪದವಾಗಿರುವಾಗ ಅಞ್ಚು ಧಾತುವಿನ ಮುಂದೆ ಕ್ವಿನ್ **ಸಹಸ್ಯಸಧ್ರಿಃ** (ಪಾ. ಸೂ. ೬-೩-೯೫) ವಪ್ರತ್ಯಯಾಂತ

ವಾದ ಅಥವಾ ಅಶ್ರೂಯಮಾಣಪ್ರತ್ಯಯಾಂತವಾದ ಅಞ್ಚುಧಾತು ಪರದಲ್ಲಿದ್ದರೆ ಸಹಶಬ್ದಕ್ಕೆ ಸಧ್ರಿ ಆದೇಶ ಬರುತ್ತೆ ಎಂದು ಸಹ ಎಂಬುದಕ್ಕೆ ಸಧ್ರಿ ಆದೇಶ, ಸಧ್ರಿ+ಅನ್‌ಚ್. ಯಣ್ ಸಧ್ರ್ಯನ್‌ಚ್, **ಅನಿದಿತಾಂಹಲ ಉಪಧಾಯಾಃ ಕ್ಙಿತಿ** (ಪಾ. ಸೂ. ೬-೪-೨೪) ಕಿತ್ ಅಥವಾ ಙಿತ್ ಆದ ಪ್ರತ್ಯಯಪರದಲ್ಲಿರುವಾಗ ಇದಿತ್ತಲ್ಲದ ಹಲಂತಾಂಗದಉಪಧಾಭೂತವಾದ ನಕಾರಕ್ಕೆ ಲೋಪ ಬರುತ್ತೆ ಎಂದು ನಕಾರ ಲೋಪ. **ವಿಭಾಷಾಞ್ಚೇರದಿಕ್ಸ್ತ್ರಿಯಾಂ** (ಪಾ. ಸೂ. ೫-೪-೮) ದಿಗ್ವೃತ್ತಿಯಲ್ಲದ ಮತ್ತು ಸ್ತ್ರೀಲಿಂಗವೃತ್ತಿಯಲ್ಲದ ಅಞ್ಚತ್ಯಂತವಾದ ಪ್ರಾತಿಪದಿಕದ ಮುಂದೆ ಸ್ವಾರ್ಥದಲ್ಲಿ ವಿಕಲ್ಪವಾಗಿ ಖಪ್ರತ್ಯಯ ಬರುತ್ತೆ ಎಂದು ಖಪ್ರತ್ಯಯ, ಅದಕ್ಕೆ **ಆಯನೇಯೀನೀಯ** (ಪಾ. ಸೂ. ೭-೧-೨) ಎಂದು ಈನ್ ಆದೇಶ. ಸಧ್ರ್ಯಚ್+ಈನ, **ಅಚಃ** (ಪಾ. ಸೂ. ೬-೪-೧೩೮) ನಕಾರಕ್ಕೆ ಲೋಪವನ್ನು ಹೊಂದಿರುವ ಅಞ್ಚುಧಾತುವಿನ ಭಸಂಜ್ಞಕಾಂಗಾವಯವವಾಗ ಅಕಾರಕ್ಕೆ ಲೋಪ ಬರುತ್ತೆ ಎಂದು ಅಕಾರಲೋಪ, **ಚೌ** (ಪಾ. ಸೂ. ೬ ೩-೧೩೮) ನಕಾರ ಅಕಾರಗಳಿಗೆ ಲೋಪವನ್ನು ಹೊಂದಿರುವ ಅಞ್ಚುಧಾತು ಪರದಲ್ಲಿರುವಾಗ ಪೂರ್ವದಲ್ಲಿರುವ ಅಕ್‌ಗೆ ದೀರ್ಘಬರುತ್ತೆ ಎಂದು ದೀರ್ಘ, ಸಧ್ರೀಚೀನ ಎಂದಾಯಿತು, **ಆಯನ್ನಾದಿಷೂಪದೇಶಿವದ್ಭಾವೋ ವಕ್ತವ್ಯಃ** (ಪಾ.ಸೂ. ೭-೧-೨-೧) ಎಂಬ ವಾರ್ತಿಕದಿಂದ ಉಪದೇಶಕಾಲದಲ್ಲಿ ಈನಾದೇಶ ಬರುವುದರಿಂದ ಈಕಾರವು ಪ್ರತ್ಯಯಸ್ವರದಿಂದ ಉದಾತ್ತ. ಉಪದೇಶಿವದ್ಭಾವವನ್ನು ಹೇಳದೆ ಇದ್ದರೆ ಪ್ರತ್ಯಯಸಂಜ್ಞಾಸಂನ್ನಿಯೋಗದಿಂದ ಆದ್ಯುದಾತ್ತ ಬಂದ ಮೇಲೆ ಖ್ ಮೊದಲಾದ ಅಸ್ವರಕ ವ್ಯಂಜನಸ್ಥಾನದಲ್ಲಿ ಬರುವ ಆದೇಶವು ಆಂತರ್ಯತಃ ಅಸ್ವರಕವಾಗಿಯೇ ಬರುತ್ತೆ. ಇದು ಪ್ರವೃತ್ತಿಕಾಲದಲ್ಲಿ, ಪ್ರಯೋಗಕಾಲದಲ್ಲಿ ಸ್ವರವಿಲ್ಲದ ಅಚ್ಚಿಗೆ ಉಚ್ಚಾರಣೆ ಇಲ್ಲ. ಆದ್ದರಿಂದ **ಅನುದಾತ್ತಂ ಪದಮೇಕವರ್ಜಂ** ಎಂದು ಅನಿಷ್ಟಸ್ವರ ಬರಬೇಕಾಗುತ್ತೆ

**ಓಜಿಷ್ಠೇನ**—ಓಜಸ್‌ಶಬ್ದವು ಅಸಂತ, ತೇಜಃ ಅಸ್ಯ ಅಸ್ತಿ ಎಂಗು ವಿಗ್ರಹ. **ಅಸ್ಮಾಯಾಮೇಧಾಸ್ರಜೋ-ವಿನಿಃ** (ಪಾ. ಸೂ. ೫-೨-೧೨೧) ಅಸ್ ಎಂಬುಗರಿಂದ ಅಸಂತವು ವಿವಕ್ಷಿತವು, ಮಾಯಾ ಮೇಧಾ, ಸ್ರಜ್ ಈ ಶಬ್ದಗಳ ಮುಂದೆ ಅಸ್ಯಾಸ್ತಿ ಎಂಬ ಅರ್ಥದಲ್ಲಿ ವಿನ್ ಬರುತ್ತೆ ಎಂದು ವಿನ್ ಪ್ರತ್ಯಯ ಓಜಸ್ವಿನ್, ಇದರ ಮುಂದೆ **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂದು ಅತಿಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ. ಓಜಸ್ವಿನ್+ ಇಷ್ಠ **ವಿನ್ಮತೋರ್ಲುಕ್** (ಪಾ. ಸೂ. ೫-೩-೬೫) ಇಷ್ಠನ್, ಈಯಸುನ್ ಇವು ಪರದಲ್ಲಿದ್ದರೆ ವಿನ್-ಮತುಪ್ ಇವುಗಳಿಗೆ ಲುಕ್ (ಲೋಪ) ಬರುತ್ತೆ ಎಂದು ವಿನ್‌ಗೆ ಲೋಪ, ಓಜಸ್+ಇಷ್ಠ **ಟೇಃ** (ಪಾ. ಸೂ. ೬-೪-೧೫೫) ಇಷ್ಠನ್, ಇಮನಿಚ್, ಈಯಸುನ್ ಇವು ಪರದಲ್ಲಿದ್ದರೆ ಭಸಂಜ್ಞಕವಾದ ಅಂಗದ ಟಿಗೆ ಲೋಪ ಬರುತ್ತೆ ಎಂದು ಅಸ್‌ಗೆ ಲೋಪ, ಓಜ್+ಇಷ್ಠ=ಓಜಿಷ್ಠ, ಇಷ್ಠನ್ ಪ್ರತ್ಯಯ ನಿತ್, **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂದು ಆದ್ಯುದಾತ್ತ ಬರುತ್ತೆ.

**ಹನ್ಮನಾ**—ಹನ ಹಿಂಸಾಗತ್ಯೋಃ ಹನ್ಯತೇ ಅನೇನ ಇತಿ ಹನ್ಮ, **ಅನ್ಯೇಭ್ಯೋಽಪಿದೃಶ್ಯನ್ತೇ** (ಪಾ. ಸೂ. ೩-೨-೭೫) ಮನಿನ್, ಕ್ವನಿಪ್, ವನಿಪ್, ವಿಚ್ ಈ ಪ್ರತ್ಯಯಗಳು ಬೇರೆ ಧಾತುಗಳ ಮುಂದೆಯೂ ಬರುತ್ತವೆ, ಎಂದು ಹನ್ ಧಾತುವಿನ ಮುಂದೆ ಮನಿನ್ ಪ್ರತ್ಯಯ ನಿತ್, ಆದ್ದರಿಂದ ನಿತ್ಪ್ರತ್ಯಯಾಂತದ ಆದಿಯು ಉದಾತ್ತ. ಇಲ್ಲಿ ಕರಣಾರ್ಥದಲ್ಲಿ ಮನಿನ್, ತೃತೀಯಾ ಏಕವಚನ ಟಾ, ಹನ್ಮನ್+ಆ ಹನ್ಮ್ ಎಂಬಲ್ಲಿ ನ್ಮ್ ಎಂಬುದು ಮಕಾರಾಂತ ಸಂಯೋಗ, ಇದರ ಮುಂದೆ ಅನ್ ಇದೆ. **ನ ಸಂಯೋಗಾದ್ವಮಂತಾತ್** (ಪಾ. ಸೂ. ೬-೪-೧೩೭) ವಕಾರಾಂತ

ಅಥವಾ ಮಕಾರಾಂತವಾದ ಸಂಯೋಗಕ್ಕಿಂತಲೂ ಪರದಲ್ಲಿರುವ ಅನ್‌ನ ಅಕಾರಕ್ಕೆ ಲೋಪ ಬರುವುದಿಲ್ಲ ಎಂದು ನಿಷೇಧ ಇದೆ. ಆದ್ದರಿಂದ **ಅಲ್ಲೋಪೋऽನಃ** (ಪಾ. ಸೂ. ೬-೪-೧೩೪) ಎಂಬುದರಿಂದ ಅಕಾರಕ್ಕೆ ಲೋಪ ಬರುವುದಿಲ್ಲ. ॥ ೧೧ ॥



॥ ಸಂಹಿತಾಪಾಠಃ ॥

ನ್ಯಾವಿಧ್ಯದಿಲೀಬಿಶಸ್ಯ ದೃಳ್ಹಾ ವಿ ಶೃಙ್ಗಿಣಮಭಿನಚ್ಛುಷ್ಣಮಿಂದ್ರಃ ।
ಯಾವತ್ತರೋಮಘವನ್ಯಾವದೋಜೋ ವಜ್ರೇಣ ಶತ್ರುಮವಧೀಃ ಪೃತನ್ಯುಂ ॥ ೧೨ ॥

॥ ಪದಪಾಠಃ ॥

ನಿ । ಅವಿಧ್ಯತ್ । ಇಲೀಬಿಶಸ್ಯ । ದೃಳ್ಹಾ । ವಿ । ಶೃಙ್ಗಿಣಂ । ಅಭಿನತ್ । ಶುಷ್ಣಂ । ಇಂದ್ರಃ ।
ಯಾವತ್ । ತರಃ । ಮಘಽವನ್ । ಯಾವತ್ । ಓಜಃ । ವಜ್ರೇಣ । ಶತ್ರುಂ । ಅವಧೀಃ । ಪೃತನ್ಯುಂ ॥ ೧೨ ॥

॥ ಸಾಯಣಭಾಷ್ಯಂ ॥

ಇಲೀಬಿಶಸ್ಯ ಇಲಾಯಾ ಭೂಮೇರ್ಬಿಲೇ ಶಯಾನಸ್ಯ ವೃತ್ರಸ್ಯ ಸಂಬಂಧೀನಿ । ಇಲಾಬಿಲಶಯಸ್ಯೇತಿ ಯಾಸ್ಕಃ । ನಿ. ೬. ೧೯ । ದೃಳ್ಹಾ ದೃಂಹಿತಾನ್ಯಸುರೇಣ ನಿರುದ್ಧಾನಿ ಪ್ರಭೂತಾನ್ಯುದಕಾನೀಂದ್ರೋ ನ್ಯವಿಧ್ಯತ್ । ನಿತರಾಂ ವಿದ್ಧವಾನ್ । ಯದ್ವಾ । ದೃಳ್ಹಾನಿ ಪ್ರಬಲಾನಿ ಸೈನ್ಯಾನಿ ನಿತರಾಂ ವಿದ್ಧವಾನ್ ।

ತತ ಊರ್ಧ್ವಂ ಶೃಂಗಿಣಂ ಗೋಮಹಿಷಾದಿಶೃಂಗಸಮಾನೈರಾಯುಧೈರುಪೇತಂ ಶುಷ್ಣಂ ಜಗತಃ ಶೋಷಕಂ ವೃತ್ರಂ ವ್ಯಭಿನತ್ । ವಿವಿಧಂ ತಾಡಿತವಾನ್ । ಹೇ ಮಘವನ್ ಧನಯುಕ್ತೇಂದ್ರ ತವ ಯಾವತ್ತರೋ ಯಾವಾನ್ವೇಗೋಽಸ್ತಿ ಯಾವದೋಜೋ ಯಾವದ್ಬಲಮಸ್ತಿ ತೇನ ಸರ್ವೇಣ ಯುಕ್ತಸ್ತ್ವಂ ಪೃತನ್ಯುಂ ಪೃತನಾಂ ಯುದ್ಧಮಿಚ್ಛಂತಂ ಶತ್ರುಂ ವೃತ್ರಂ ವಜ್ರೇಣಾವಧೀಃ । ಹತವಾನಸಿ ॥ ಅವಿಧ್ಯತ್ । ವ್ಯಧ ತಾಡನೇ । ಗ್ರಹಿಜ್ಯೇತ್ಯಾದಿನಾ ಸಂಪ್ರಸಾರಣಂ । ತಿಙ್ಙತಿಙ ಇತಿ ನಿಘಾತ ಉದಾತ್ತಸ್ವರಿತಯೋರ್ಯಣ ಇತಿ ಸಂಹಿತಾಯಾಮಡಾಗಮಸ್ಯ ಸ್ವರಿತತ್ವಂ । ಇಲೀಬಿಶಸ್ಯ । ಪೃಷೋದರಾದಿತ್ವಾದಭಿಮತರೂಪಸ್ವರಸಿದ್ಧಿಃ । ದೃಳ್ಹಾ । ದೃಂಹೇರ್ನಿಷ್ಠಾಯಾಂ ದೃಢಃ ಸ್ಥೂಲಬಲಯೋಃ । ಪಾ. ೭-೨-೨೦ । ಇತಿ ನಿಪಾತ್ಯತೇ । ಶೇಶ್ಛಂದಸಿ ಬಹುಳಮಿತಿ ಶೇರ್ಲೋಪಃ । ಅಭಿನತ್ । ಭಿದಿರ್ ವಿದಾರಣೇ । ಲಙ ರುಧಾದಿಭ್ಯಃ ಶ್ನಮ್ । ಇತಶ್ಚೇತೀಕಾರಲೋಪೇ ಹಲ್ಙ್ಯಾಬ್ಭ್ಯ ಇತಿ ತಿಲೋಪಃ । ಶುಷ್ಣಂ । ಶುಷ ಶೋಷಣೇ । ಶೋಷಯತೀತಿ ಶುಷ್ಣಃ । ತೃಷಿಶುಷಿರಸಿಭ್ಯಃ ಕಿಚ್ಚ । ಉ. ೩-೧೨ । ಇತಿ ನ ಪ್ರತ್ಯಯಃ । ನಿದಿತ್ಯನುವೃತ್ತೇರಾದ್ಯುದಾತ್ತತ್ವಂ । ಅವಧೀಃ । ಲುಙಿ ಚೇತಿ ಹಂತೇರ್ವಧಾದೇಶಃ । ಪೃತನ್ಯುಂ । ಪೃತನಾಶಬ್ದಾತ್ಕ್ಯಚಿ ಕವ್ಯಧ್ವರಪೃತನಸ್ಯೇತ್ಯಂತ್ಯಲೋಪಃ । ಕ್ಯಾಚ್ಛಂದಸೀತ್ಯುಪ್ರತ್ಯಯಃ ॥ ॥ ೧೨ ॥

॥ ಪ್ರತಿಪದಾರ್ಥ ॥

**ಇಲೀಬಿಶಸ್ಯ**— (ಗುಹೆಗಳಂತಿರುವ) ಭೂಮಿಯ ಬಿಲಗಳಲ್ಲಿ ಮಲಗಿರುವ ವೃತ್ರನ । **ದೃಳ್ಹಾ**— ಪ್ರಬಲ ವಾದ ಸೈನ್ಯಗಳನ್ನು (ಅಥವಾ ತಡೆದು ನಿಲ್ಲಿಸಲ್ಪಟ್ಟ ಜಲಪ್ರವಾಹಗಳನ್ನು ) । **ಇಂದ್ರಃ**— ಇಂದ್ರನು । **ನ್ಯವಿಧ್ಯತ್**— ನಾಶಪಡಿಸಿದನು (ಬಿಡಿಸಿ ಹರಿಯುವಂತೆ ಮಾಡಿದನು.) । **ಶೃಂಗಿಣಂ**— ಪಶುಗಳ ಕೊಂಬಂತಿರುವ ಆಯುಧಗಳಿಂದ ಕೂಡಿದ । **ಶುಷ್ಣಂ**— ಭೂಮಿಯನ್ನು ಒಣಗುವಂತೆ ಮಾಡುವ ವೃತ್ರನನ್ನು । **ವಿ ಅಭಿನತ್**— ಚನ್ನಾಗಿ ಹೊಡೆದನು. । **ಮಘವನ್**— ಎಲೈ ಐಶ್ವರ್ಯಶಾಲಿಯಾದ ಇಂದ್ರನೇ । **ಯಾವತ್ತರಃ**— ಎಷ್ಟು ವೇಗವು । **ಯಾವದೋಜಃ**—ಎಷ್ಟು ಬಲವು (ಇರುತ್ತದೆಯೋ ಅಷ್ಟು ವೇಗ ಬಲಗಳಿಂದ ಕೂಡಿದವನಾಗಿ) । **ಪೃತನ್ಯುಂ**—ಯುದ್ಧಕ್ಕೆ ಬಯಸಿ ಎದುರುಬಿದ್ದ । **ಶತ್ರುಂ**— ವೃತ್ರನನ್ನು । **ವಜ್ರೇಣ**— ವಜ್ರಾಯುಧದಿಂದ । **ಅವಧೀಃ**—ಕೊಂದೆ. ।

॥ ಭಾವಾರ್ಥ ॥

ಆಳವಾದ ಭೂಮಿಯ ಬಿಲದಲ್ಲಿ ಮಲಗಿ ಶತ್ರುಗಳಿಗೆ ದುಸ್ಸಾಧ್ಯನಾದ ವೃತ್ರಾಸುರನಿಂದ ತಡೆಯಲ್ಪಟ್ಟ ನೀರನ್ನು (ಮೇಘಮಂಡಲವನ್ನು) ಇಂದ್ರನು ಭೇದಿಸಿ ನೀರು ಸುರಿಯುವಂತೆ ಮಾಡಿದನು. ವೃತ್ರಾಸುರನ ಪ್ರಬಲ ವಾದ ಸೈನ್ಯಗಳನ್ನು ಇಂದ್ರನು ಸಂಹರಿಸಿದನು. (ಭೂಮಿಯ ಆಳವಾದ ಗುಹೆಗಳಲ್ಲಿ ವೃತ್ರನು ಮಲಗಿದುದರಿಂದ ಅಲ್ಲಿನ ನೀರಿನ ಪ್ರವಾಹಗಳು ತಡೆಯಲ್ಪಟ್ಟವು. ಆಗ ಇಂದ್ರನು ಅವನನ್ನು ಚನ್ನಾಗಿ ಹೊಡೆದು ಆ ನೀರನ್ನು ಸರಾಗ ವಾಗಿ ಹರಿಯುವಂತೆ ಮಾಡಿದನು.) ಎಲೈ ಇಂದ್ರನೇ, ಪ್ರಪಂಚವನ್ನೇ ಒಣಗುವಂತೆ ಮಾಡುವ ತೇಜಸ್ಸುಳ್ಳ ಮತ್ತು

ಪಶುಗಳ ಕೊಂಬಿನಂತಿರುವ ತೀಕ್ಷ್ಣಾಯುಧಗಳನ್ನು ಹೊಂದಿ ನಿನ್ನನ್ನು ಯುದ್ಧಕ್ಕೆ ಕರೆದು ಎದುರುಬಿದ್ದ ವೃತ್ರನನ್ನು ನೀನು ನಿನ್ನ ಸಂಪೂರ್ಣ ವೇಗ ಮತ್ತು ಶಕ್ತಿಗಳನ್ನು ತೋರಿಸಿ ವಜ್ರಾಯುಧದಿಂದ ಕೊಂದಿರುವೆ.

## English translation

Indra set free the waters obstructed by Vritra, when sleeping in the caverns of the earth and slew the horned dryer up of the world. O Maghavan, you with equal swiftness and strength, killed the enemy defying you in battle with your thunderbolt.

### ॥ ವಿಶೇಷ ವಿಷಯಗಳು ॥

**ಇಲೀಬಿಶಸ್ಯ—** ಈ ಶಬ್ದಪ್ರಯೋಗವು ಈ ಋಕ್ಕಿನಲ್ಲಲ್ಲದೆ ಋಗ್ವೇದದಲ್ಲಿ ಮತ್ತೆಲ್ಲಿಯೂ ಇಲ್ಲ. ಈ ಶಬ್ದಕ್ಕೆ ಯಾಸ್ಕಮಹರ್ಷಿಗಳು ತಮ್ಮ ನಿರುಕ್ತಗಲ್ಲಿ (ನಿ. ೬-೨೦.) **ಇಲೀವಿಶಃ। ಇಲಾಬಿಲಶಯಸ್ಯ** ಎಂದರೆ, **ಮೇಘಃ ಅಭಿಧೇಯಃ। ಸ ಹಿ ಇಲಾಹೇತೋರುದಕಸ್ಯ ಆತ್ಮೀಯಾನಿ ನಿರ್ಗಮನಬಿಲಾನಿ ಸಂರುಧ್ಯ ಶೇತೇ। ತಸ್ಯೈವ ವಾ ಬಿಲೇಷು ಇಲಾಹೇತುರುದಕಂ ಶೇತೇ ಇತಿ ಇಲೀವಿಶಃ॥** ನೀರು ಯಾವಾಗಲೂ ಹಳ್ಳದಲ್ಲಿ ನಿಲ್ಲುವುದರಿಂದ ಇಲೀವಿಶ ಎಂದರೆ ನೀರು ಅಥವಾ ಮೇಘ ಎಂದು ಹೆಸರು ಆ ಮೇಘವು ಮಳೆಯನ್ನು ಸುಯ್ಯದಂತೆ ಅಡ್ಡಿಪಡಿಸಿ ವೃತ್ರನು ಮಲಗಿರುವನು ಎಂದರ್ಥವು.

**ದೃಳ್ಹಾ— ದೃಢಾ, ದೃಢಾನಿ। ದುರ್ಭೇದ್ಯಾನಿ॥** ದೃಢವಾದ, ದುರ್ಭೇದ್ಯವಾದ,

**ಶೃಂಗಿಣಂ— ಗೋಮಹಿಷಾದಿಶೃಂಗಸಮಾನೈರಾಯುಧೈರುಪೇತಂ।** ಗೋವುಗಳು ಎಮ್ಮೆಗಳು ಮೊದಲಾದ ಪ್ರಾಣಿಗಳ ಕೊಂಬಿನಂತೆ ಇರುವ ಆಯುಧಗಳುಳ್ಳ ವೃತ್ರನು. ಮೇಘಪರವಾಗಿ ಅರ್ಥ ಮಾಡುವುದಾದರೆ, **ಶೃಂಗಿಣಂ— ಶಿಖರವಂತಂ ದೀಪ್ತಿಮಂತಂ ವಾ।** ಬೆಟ್ಟದ ಶಿಖರದ ಮೇಲೆ ಎಂದರೆ ಅಂತರಿಕ್ಷದಲ್ಲಿ ಬಹಳ ಎತ್ತರದಲ್ಲಿರುವ ಮೇಘವು ಅಥವಾ ಪ್ರಕಾಶಮಾನವಾದ ಮಿಂಚಿನಿಂದ ಕೂಡಿದ ಮೇಘವು ಎಂದರ್ಥವು.

**ಶುಷ್ಣಂ— ಜಗತಃ ಶೋಷಕಂ। ಶುಷ ಶೋಷಣೇ। ಶೋಷಯತೀತಿ ಶುಷ್ಣಃ।** ಜಗತ್ತನ್ನು ಒಣಗಿಸುವವನು ಎಂದರೆ ಮಳೆಯನ್ನು ಬರದಂತೆ ತಡೆದು ಜಗತ್ತೆಲ್ಲಾ ಒಣಗುವಂತೆ ಮಾಡುವವನು.

**ತರಃ, ಓಜಃ—** ವೇಗವುಳ್ಳವನು ಮತ್ತು ಶಕ್ತಿಯುಳ್ಳವನು.

**ಮಘವನ್—ಮಘಮಿತಿ ಧನನಾಮಧೇಯಂ ಮಂಹತೇರ್ದಾನಕರ್ಮಣಃ।** (ನಿ. ೧-೭.) ಮಘವೆಂದರೆ ಧನವು. ಧನವುಳ್ಳವನಾದುದರಿಂದ ಇಂದ್ರನಿಗೆ ಮಘವನ್ ಎಂದು ಹೆಸರು. ಋಗ್ವೇದದಲ್ಲಿ ಸಾಧಾರಣವಾಗಿ ಈ ಶಬ್ದದ ಪ್ರಯೋಗವು ಇಂದ್ರನ ಪರವಾಗಿಯೇ ಇರುವುದು.

**ಪೃತನ್ಯುಂ**— ರಣಃ ವಿವಾಕ್ ಮೊದಲಾದ ನಲವತ್ತಾರು ಸಂಗ್ರಾಮನಾಮಕ ಶಬ್ದಗಳ ಮಧ್ಯದಲ್ಲಿ ಪೃತನಾಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೨-೯) ಪೃತನಾಃ ಎಂದರೆ ಯುದ್ಧವು. ಪೃತನ್ಯುಂ ಎಂದರೆ ಯುದ್ಧಮಾಡಲು ಬಯಸುವ, ಯುದ್ಧಕ್ಕಾಗಿ ಸಿದ್ಧನಾಗಿ ಎದುರಿಗೆ ನಿಂತಿರುವ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಅವಿಧ್ಯತ್**—ವ್ಯಧ ತಾಡನೇ ಧಾತು, ಲಙ್, ತಿಪ್, ಇಕಾರಲೋಪ, **ದಿವಾದಿಭ್ಯಃ ಶ್ಯನ್** (ಪಾ. ಸೂ. ೩-೧-೬೯) ಎಂದು ಶ್ಯನ್, **ಸಾರ್ವಧಾತುಕಮಪಿತ್** ಎಂದು ಶ್ಯನ್ ಕಿತ್ತಾಗುತ್ತದೆ, **ಗ್ರಹಿಜ್ಯಾ ವಯಿ ವ್ಯಧಿ ವಷ್ಟಿ ವಿಚತಿವೃಶ್ಚತಿ ಭೃಜ್ಜತೀನಾಂ ಙಿತಿಚ** (ಪಾ. ಸೂ. ೬-೧-೧೬) ಕಿತ್ ಅಥವಾ ಙಿತ್ ಆದ ಪ್ರತ್ಯಯಪರದಲ್ಲಿರುವಾಗ ಈ ಧಾತುಗಳಿಗೆ ಸಂಪ್ರಸಾರಣ ಬರುತ್ತೆ ಎಂದು ಯಕಾರಕ್ಕೆ ಇಕಾರ, ಪೂರ್ವರೂಪ, ವಿಧ್+ಯ+ತ್, ಅಡಾಗಮ ಅವಿಧ್ಯತ್, **ತಿಙ್ಙತಿಙಃ** ಎಂದು ಸರ್ವಾನುದಾತ್ತ. **ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** (ಪಾ. ಸೂ. ೮-೨-೪) ಉದಾತ್ತ ಅಥವಾ ಅನುದಾತ್ತಗಳ ಸ್ಥಾನದಲ್ಲಿ ಯಾವ ಯ, ವ, ರ, ಲಗಳು ಬಂದಿವೆಯೋ ಅವುಗಳ ಪರದಲ್ಲಿರುವ ಅನುದಾತ್ತವು ಸ್ವರಿತವಾಗುವುದು, ಉದಾಹರಣೆ ಅಭ್ಯಭಿಹಿ ಅಭಿ ಎಂಬುದು ಅಂತೋದಾತ್ತ ಇಕಾರಸ್ಥಾನದಲ್ಲಿ ಯ್ ಬಂದಿದೆ. **ಅನುದಾತ್ತಂಚ** (ಪಾ. ಸೂ. ೮-೧-೩) ದ್ವಿತ್ವಹೊಂದಿದ ಶಬ್ದದ ಎರಡನೆಯದು ಅನುದಾತ್ತವಾಗುತ್ತೆ ಎಂದು ಎರಡನೆಯ ಅಭಿ ಅನುದಾತ್ತ. ಏವಂಚ ಉದಾತ್ತಸ್ಥಾನಿಕವಾದ ಯಣ್‌ನ ಮುಂದೆ ಅನುದಾತ್ತ ಇರುವುದರಿಂದ ಸ್ವರಿತ ಬರುತ್ತೆ ಪ್ರಕೃತದಲ್ಲಿ ನಿ ಎಂಬುದು **ಉಪಸರ್ಗಶ್ಚಾಭಿವರ್ಜಂ** (ಫಿ. ಸೂ.) ಎಂಬುದರಿಂದ ಸ್ವರಿತಬರುವುದು ಎಂದು ಆದ್ಯುದಾತ್ತ. ಅದರ ಇಕಾರಕ್ಕೆ **ಇಕೋ ಯಣಚಿ** ಎಂದು ಯಣ್ ಬಂದಿದೆ, ಆದ್ದರಿಂದ ಅದು ಉದಾತ್ತಸ್ಥಾನಿಕವಾದ ಯಣ್ ಆಗುತ್ತೆ. ಅದರ ಮುಂದೆ ಇರುವ ಅಡಾಗಮದ ಅಕಾರಕ್ಕೆ ಈ ಸೂತ್ರದಿಂದ ಸ್ವರಿತ ಬರುವುದು.

**ಇಲೀಬಿಶಸ್ಯ— ಪೃಷೋದರಾದೀನಿ ಯಥೋಪದಿಷ್ಟಮ್** (ಪಾ. ಸೂ. ೬-೩-೧೦೯) ಪೃಷೋದರ ಶಬ್ದಕ್ಕೆ ಸಮಾನವಾದ ಶಬ್ದಗಳು ಶಿಷ್ಟರು ಹೇಗೆ ಉಚ್ಚರಿಸುವರೋ ಹಾಗೆಯೇ ಸಾಧುಗಳಾಗುವುವು ಎಂಬುದರಿಂದ ಇಲೀಬಿಶಸ್ಯ ಎಂಬುದು ಸಿದ್ಧವಾಗುತ್ತೆ.

**ದೃಳ್ಹಾ**—ದೃಹ ದೃಹಿ ವೃದ್ಧೌ ೧ನೇ ಗಣ, ಇದಿತ್-**ಇದಿತೋ ನುಮ್‌ಧಾತೋಃ** (ಪಾ. ಸೂ. ೭-೧-೫೮) ಎಂದು ನುಮ್ ಆಗಮ, **ನಶ್ಚಾಪದಾನ್ತಸ್ಯಝಲಿ** (ಪಾ. ಸೂ. ೮-೩-೨೪) ಎಂದು ನ್‌ಗೆ ಅನುಸ್ವಾರ. ಇದರ ಮುಂದೆ ಕ್ತ ಪ್ರತ್ಯಯ. **ದೃಢಃ ಸ್ಥೂಲಬಲಯೋಃ** (ಪಾ. ಸೂ, ೭-೨-೨೦) ದಪ್ಪವಾದ, ಅಥವಾ ಶಕ್ತಿಯುಳ್ಳ ಎಂಬ ಅರ್ಥಗಳಲ್ಲಿ ದೃ ಎಂದು ನಿಪಾತಿತವಾಗುತ್ತದೆ, ಕ್ತಪ್ರತ್ಯಯಕ್ಕೆ ಇಡಾಗಮವಿಲ್ಲದೆ ಇರುವಿಕೆ, ತಕಾರಕ್ಕೆ ಢಕಾರಾದೇಶ, ಹಕಾರಕ್ಕೆ ಲೋಪ ಇದಿತ್ತಾದ ಧಾತುವಿನಲ್ಲಿ ನಕಾರಕ್ಕೂ ಲೋಪ, ಇವು ನಿಪಾತಿಸಲ್ಪಡುವುವು. ಶಸ್, ಅದಕ್ಕೆ **ಜಶ್ಶಸೋಃಶಿಃ** ಎಂದು ಶಿ ಆದೇಶ, ಸರ್ವನಾಮಸ್ಥಾನಸಂಜ್ಞೆ ಇದೆ, **ನಪುಂಸಕಸ್ಯಝಲಚಃ** (ಪಾ. ಸೂ. ೭-೧-೭೨) ಎಂದು ನುಮಾಗಮ, ದೃಢನ್+ಶಿ **ಸರ್ವನಾಮಸ್ಥಾನೇ ಚಾಸಂಬುದ್ಧೌ** (ಪಾ. ಸೂ. ೬-೪-೮) ಎಂದು ಉಪಧಾದೀರ್ಘ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಛಂದಸ್ಸಿನಲ್ಲಿ ಶಿಗೆ ಬಹುಲವಾಗಿ ಲೋಪ

ಬರುವುದು ಎಂದು ಶಿಗೆ ಲೋಪ, **ನಲೋಪಃ ಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂದು ನಕಾರಕ್ಕೆ ಲೋಪ, ದೃಳ್ಹಾ ಎಂದಾಯಿತು. "ಅಜ್ಮಧ್ಯಸ್ಥಡಕಾರಸ್ಯ ಳಕಾರಂ ಬಹ್ವೃಚಾ ಜಗುಃ । ಅಜ್ಮಧ್ಯಸ್ಥಢಕಾರಸ್ಯ ಳ್ಹಕಾರಂ ವೈ ಯಥಾಕ್ರಮಮ್" ಎಂಬುದರಿಂದ ಢಕಾರಕ್ಕೆ ಳ್ಹಕಾರ.

**ಅಭಿನತ್**—ಭಿದಿರ್ ವಿದಾರಣೇ, ಲಙ್ ತಿಪ್, **ರುಧಾದಿಭ್ಯಃ ಶ್ನಮ್** (ಪಾ. ಸೂ. ೩-೧-೭೮) ಎಂದು ಶ್ನಮ್, ಇದು ಮಿತ್, ಕೊನೆಯ ಸ್ವರದ ಮುಂದೆ ಬರುತ್ತೆ. **ಇತಶ್ಚ** (ಪಾ. ಸೂ. ೩-೪-೧೦೦) ಙಿತ್ ಆದ ಲಕಾರದ ಸ್ಥಾನದಲ್ಲಿ ಬಂದ ಪರಸ್ಮೈಪದಪ್ರತ್ಯಯದ ಇಕಾರಕ್ಕೆ ಲೋಪ ಬರುತ್ತೆ ಎಂದು ಇಕಾರಕ್ಕೆ ಲೋಪ, ಅಡಾಗಮ. ಅಭಿನದ್+ತ್ **ಹಲ್ಙ್ಯಾಭ್ಯಃ—,** (ಪಾ. ಸೂ. ೬-೧-೬೮) ಎಂದು ಏಕಾಲ್ಪ್ರತ್ಯಯವಾದ ತ್‌ಗೆ ಲೋಪ. **ವಾವಸಾನೇ** (ಪಾ. ಸೂ. ೮-೪-೫೬) ಎಂದು ದಕಾರಕ್ಕೆ ತಕಾರ.

**ಶುಷ್ಣಮ್**—ಶುಷ ಶೋಷಣೇ ದಿವಾದಿಧಾತು. **ತೃಷಿಶುಷಿರಸಿಭ್ಯಃಕಿಚ್ಚ** (ಉ. ಸೂ. ೩-೨೯೨) **ಕೃವೃಜೃ+ನಿತ್** ಎಂಬುದರಿಂದ ನಿತ್ ಎಂದು ಅನುವೃತ್ತಿ, ಞಿತೃಷಾ ಪಿಪಾಸಾಯಾಂ, ಶುಷ ಶೋಷಣೇ, ರಸ ಶಬ್ದೇ ಈ ಧಾತುಗಳ ಮುಂದೆ ನಪ್ರತ್ಯಯ ಬರುತ್ತೆ ಅದು ಕಿತ್ ಆಗುತ್ತೆ ನಿತ್ತೂ ಆಗುತ್ತೆ ಎಂದು ನಪ್ರತ್ಯಯ ಶುಷ್+ನ ಪ್ರತ್ಯಯವು ಕಿತ್ತಾದ್ದರಿಂದ ಲಘೂಪಧಗುಣ ಬರುವುದಿಲ್ಲ. **ರಷಾಭ್ಯಾಂ ನೋಣಸ್ಸಮಾನಪದೇ** (ಪಾ. ಸೂ. ೮-೪-೧) ಎಂದು ನಕಾರಕ್ಕೆ ಣಕಾರ, ನಿತ್ಸ್ವರ ಆದ್ಯುದಾತ್ತ ಬರುತ್ತೆ.

**ಅವಧೀಃ**—ಹನ ಹಿಂಸಾಗತ್ಯೋಃ ಅದಾದಿಧಾತು, ಲಙ್, ಸಿಪ್, ಅಡಾಗಮ, **ಇತಶ್ಚ** ಎಂದು ಇಕಾರ ಲೋಪ. ಚ್ಲಿ, ಅದಕ್ಕೆ ಸಿಚ್ ಅಹನ್+ಸ್+ಸ್ **ಲುಙಿಚ** (ಪಾ. ಸೂ. ೨-೪-೪೩) ಲುಙ್ ಪರದಲ್ಲಿರುವಾಗ ಹನ್ ಧಾತುವಿಗೆ ವಧ ಎಂಬ ಅಕಾರಾಂತವಾದ ಆದೇಶ ಬರುತ್ತೆ ಎಂದು ವಧ ಆದೇಶ, ಅವಧ+ಸ್+ಸ್+ಅಕಾರಲೋಪ ಇಟ್, ಈಟ್, ಸಿಚ್ಚಿಗೆ ಲೋಪ, **ಸಿಜ್ಲೋಪ—,** ಎಂದು ಅದು ಸಿದ್ಧವಾಗುವುದರಿಂದ ಸವರ್ಣದೀರ್ಘ, **ಹಲ್ಙ್ಯಾಭಃ—,** ಎಂದು ಸ್‌ಗೆ ಲೋಪ, ರುತ್ವವಿಸರ್ಗಗಳು.

**ಪೃತನ್ಯುಮ್**—ಪೃತನಾಮಾತ್ಮನಃ ಇಚ್ಛತಿ ಇತಿ-ಪೃತನ್ಯುಃ ತಮ್, **ಸುಪಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂದು ಕ್ಯಚ್‌ಪ್ರತ್ಯಯ. **ಕವ್ಯಧ್ವರ ಪೃತನಸರ್ಚಿಲೋಪಃ** (ಪಾ. ಸೂ. ೭-೪-೩೯) ಋಕ್ಕಿನ ವಿಷಯದಲ್ಲಿ ಕ್ಯಚ್ ಪರದಲ್ಲಿದ್ದರೆ ಕವಿ, ಅಧ್ವರ, ಪೃತನಾ ಶಬ್ದಗಳ ಅನ್ತ್ಯಕ್ಕೆ ಲೋಪಬರುತ್ತೆ ಎಂದು ಆಕಾರಕ್ಕೆ ಲೋಪ, ಪೃತನ್ಯ. ಈಗ **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಕ್ಯ ಪ್ರತ್ಯಯಾಂತದ ಮುಂದೆ ತಾಚ್ಛೀಲ್ಯಾದ್ಯರ್ಥಗಳು ತೋರುವಾಗ ಛಂದಸ್ಸಿನಲ್ಲಿ ಉಪ್ರತ್ಯಯ ಬರುತ್ತೆ ಎಂದು ಉಪ್ರತ್ಯಯ **ಅತೋಲೋಪಃ** ಎಂದು ಅಕಾರಕ್ಕೆ ಲೋಪ. ॥ ೧೨ ॥

ಸಂಹಿತಾಪಾಠಃ

## ಅ॒ಭಿ ಸಿ॒ಧ್ಮೋ ಅ॑ಜಿಗಾದಸ್ಯ ಶತ್ರೂ॒ನ್ವಿ ತಿ॒ಗ್ಮೇನ॑ ವೃಷ॒ಭೇಣಾ॒ ಪುರೋ॑ಽಭೇತ್ ।

ಸಂ ವಜ್ರೇಣಾಸೃಜದ್ವೃತ್ರಮಿಂದ್ರಃ ಪ್ರ ಸ್ವಾಂ ಮತಿಮತಿರಚ್ಛಾಶ-
ದಾನಃ ॥ ೧೩ ॥

ಪದಪಾಠಃ

ಅಭಿ । ಸಿಧ್ಮಃ । ಅಜಿಗಾತ್ । ಅಸ್ಯ । ಶತ್ರೂನ್ । ವಿ । ತಿಗ್ಮೇನ । ವೃಷ-
ಭೇಣ । ಪುರಃ । ಅಭೇತ್ ।

ಸಂ । ವಜ್ರೇಣ । ಅಸೃಜತ್ । ವೃತ್ರಂ । ಇಂದ್ರಃ । ಪ್ರ । ಸ್ವಾಂ । ಮತಿಂ ।
ಅತಿರತ್ । ಶಾಶದಾನಃ ॥ ೧೩ ॥

ಸಾಯ ಭಾಷ್ಯಂ

ಅಸ್ಯೇಂದ್ರಸ್ಯ ಸಿಧ್ಮಃ ಸಾಧಕೋ ವಜ್ರಃ ಶತ್ರೂನಭಿ ಇಂದ್ರವೈರಿಣೋಽಭಿಲಕ್ಷ್ಯಾಜಿಗಾತ್ । ಗತವಾನ್ । ಜಿಗಾತಿರ್ಗತಿಕರ್ಮಾ । ಗಾತಿ ಜಿಗಾತೀತಿ ಗತಿಕರ್ಮಸು ಪಾಠಾತ್ । ಸ ಚೇಂದ್ರಸ್ತಿಗ್ಮೇನ ತೀಕ್ಷ್ಣೇನ ವೃಷಭೇಣ ಶ್ರೇಷ್ಠೇನಾಯುಧೇನ ತೇನ ವಜ್ರೇಣ ಪುರೋ ವೃತ್ರಸ್ಯ ಪುರಾಣಿ ವ್ಯಭೇತ್ । ವಿವಿಧಂ ಭಿನ್ನವಾನ್ । ತತಃ ಸ ಇಂದ್ರೋ ವಜ್ರೇನ ಸ್ವಕೀಯೇನ ವೃತ್ರಂ ಸಮಸೃಜತ್ । ಸಂಯೋಜಿತ-ವಾನ್ । ಸಂಯೋಜ್ಯ ಚ ಶಾಶದಾನೋ ವೃತ್ರಂ ಹಿಂಸನ್ ಸ್ವಾಂ ಮತಿಂ ಸ್ವಕೀಯಾಂ ಹರ್ಷೋಪೇತಾಂ ಬುದ್ಧಿಂ ಪ್ರಾತಿರತ್ । ಪ್ರಕರ್ಷೇಣ ವರ್ಧಿತವಾನ್ ॥ ಸಿಧ್ಮಃ । ಷಿಧು ಸಂರಾದ್ಧೌ । ಅಸ್ಮಾದೌಣಾದಿಕೋ ಮಕ್ । ಕಿತ್ತ್ವಾದಗುಣಃ । ಪ್ರತ್ಯಯಸ್ವರಃ । ಅಜಿಗಾತ್ । ಗಾ ಸ್ತುತೌ । ಅತ್ರ ತು ಗತ್ಯರ್ಥಃ । ಜುಹೋತ್ಯಾದಿತ್ವಾತ್ ಶ್ಲುಃ । ದ್ವಿರ್ಭಾವೇ ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ತಿಗ್ಮೇನ । ಯುಜಿರುಚಿ-ತಿಜಾಂ ಕುಶ್ಚ । ಉ. ೧-೧೪೫ । ಇತಿ ಮಕ್ । ಕುತ್ವಂ । ವೃಷಭೇಣ । ಋಷಿವೃಷಿಭ್ಯಾಂ ಕಿತ್ । ಉ. ೩-೧೨೩ । ಇತ್ಯನೇನಾಭಚ್ । ಅಭೇತ್ । ಭಿದಿರ್ ವಿದಾರಣೇ । ಶ್ನಮಿ ಪ್ರಾಪ್ತೇ ವ್ಯತ್ಯಯೇನ ಶಪ್ । ತಸ್ಯ ಬಹುಲಂ ಛಂದಸೀತಿ ಲುಕ್ । ಲಘೂಪಧಗುಣೇ ಹಲ್ಙ್ಯಾಬ್ಭ್ಯ ಇತಿ ಲೋಪಃ । ಯದ್ವಾ । ಲುಙಿ ಚ್ಲೇರ್ಲುಕ್ । ಅತಿರತ್ । ಪ್ರಪೂರ್ವಸ್ತಿರತಿವರ್ಧನಾರ್ಥಃ । ಯದ್ವಾ । ತರತೇರ್ವ್ಯತ್ಯಯೇನ ಶಃ । ಋತ ಇದ್ಧಾತೋರಿತೀತ್ವಂ । ಶಾಶದಾನಃ । ಶದ್ಲೃ ಶಾತನೇ । ಅಸ್ಮಾದ್ಯಙಂತಾಚ್ಛಾನಚ್ । ತಸ್ಯ ಛಂದಸ್ಯುಭಯಥೇತ್ಯಾರ್ಧಧಾತುಕತ್ವಾದತೋಲೋಪಯಲೋಪೌ । ಸಾರ್ವಧಾತುಕತ್ವಾದಭ್ಯಸ್ತಾನಾ-ಮಾದಿರಿತ್ಯಾದ್ಯುದಾತ್ತತ್ವಂ ॥ ॥ ೧೩ ॥

॥ ಪ್ರತಿಪದಾರ್ಥ ॥

**ಅಸ್ಯ**— ಇಂದ್ರನ । **ಸಿಧ್ಮಃ**— ಕಾರ್ಯಸಾಧಕವಾದ ವಜ್ರಾಯುಧವು । **ಶತ್ರೂ್ನ್ ಅಭಿ**— ಶತ್ರುಗಳನ್ನು ಗುರಿಯಿಟ್ಟು । **ಅಜಿಗಾತ್**—ಹೋಗಿ ನುಗ್ಗಿತು. । **ಸ ಇಂದ್ರಃ**— ಆ ಇಂದ್ರನು । **ತಿಗ್ಮೇನ**—ಹರಿತವಾದ (ಮತ್ತು) । **ವೃಷಭೇಣ**— ಶ್ರೇಷ್ಠವಾದ ವಜ್ರಾಯುಧದಿಂದ । **ಪುರಃ**— ವೃತ್ರಾಸುರನ ಪಟ್ಟಣಗಳನ್ನು **ವಿ ಅಭೇತ್**— ಪುಡಿಪುಡಿ ಮಾಡಿದನು. । **ವಜ್ರೇಣ**— ವಜ್ರಾಯುಧದಿಂದ । **ವೃತ್ರಂ**— ವೃತ್ರನನ್ನು । **ಸಮಸೃಜತ್**— ಸೇರಿಸಿದನು. (ಪ್ರಹರಿಸಿದನು) । **ಶಾಶದಾನಃ**— ಈ ರೀತಿಯಾಗಿ ವೃತ್ರಾಸುರನನ್ನು ನಾಶಪಡಿಸಿ (ಹಿಂಸಿಸಿ) । **ಸ್ವಾಂ ಮತಿಂ**— ತನ್ನ ಹರ್ಷಯುಕ್ತವಾದ ಬುದ್ಧಿಯನ್ನು । **ಪ್ರ ಅತಿರತ್**— ವೃದ್ಧಿಪಡಿಸಿದನು (ಎಂದರೆ ಸಂತೋಷಪಟ್ಟನು.)

॥ ಭಾವಾರ್ಥ ॥

ಇಂದ್ರನ ವಜ್ರಾಯುಧವು ಅತ್ಯಂತ ಹರಿತವಾದುದು, ಮತ್ತು ಶ್ರೇಷ್ಠವಾದುದು. ಶತ್ರುಗಳ ನಾಶಕ್ಕೆಲ್ಲ ಇಂದ್ರನಿಗೆ ಅದೊಂದೇ ಮುಖ್ಯವಾದ ಸಾಧನವು ಅದರ ಪ್ರಯೋಗದಿಂದ ಸಕಲ ಶತ್ರುಗಳನ್ನೂ ನಾಶಮಾಡಿದನು. ಅದರಿಂದಲೇ ವೃತ್ರಾಸುರನ ಪಟ್ಟಣಗಳನ್ನೆಲ್ಲ ಧ್ವಂಸಮಾಡಿದನು. ವೃತ್ರಾಸುರನ ಮೇಲೆ ಪ್ರಯೋಗಿಸಿ ಅವನನ್ನು ಹಿಂಸಿಸಿ ನಾಶಮಾಡಿದನು. ಅದರಿಂದುಂಟಾದ ಹರ್ಷದಿಂದ ಆತ್ಮತೃಪ್ತಿಯನ್ನು ಪಡೆದನು.

English Translation

The weapon of Indra fell upon his adversaries; with his sharp and excellent bolt he destroyed their cities ; he then getting his thunderbolt slew him and was pleased with his success

॥ ವಿಶೇಷ ವಿಷಯಗಳು ॥

**ಸಿಧ್ಮಃ**— **ಷಿಧು ಸಂರಾದ್ಧೌ । ಸಾಧಕಃ** । ಸಾಧನಭೂತವಾದ; ಯುದ್ಧದಲ್ಲಿ ಶತ್ರುಗಳನ್ನು ನಾಶಪಡಿಸಲು ಸಾಧನಭೂತವಾದ

**ಅಜಿಗಾತ್— ಗತವಾನ್ । ಜಿಗಾತಿರ್ಗತಿಕರ್ಮಾ । ಗಾತಿ ಜಿಗಾತೀತಿ ಗತಿಕರ್ಮಸು ಪಾಠಾತ್ ।** ಇಲ್ಲಿ ಅಜಿಗಾತ್ ಎಂದರೆ ಹೋಯಿತು, ನುಗ್ಗಿತು ಇತ್ಯಾದಿ. ಜಿಗಾತಿಧಾತುವಿಗೆ ಗತ್ಯರ್ಥವನ್ನು ಹೇಳಬಹುದೆಂದು ವಚನವಿರುವುದು.

**ತಿಗ್ಮೇನ— ತೀಕ್ಷ್ಣೇನ ।** ತಿಗ್ಮಂ ತೇಜತೇರುತ್ಸಾಹಕರ್ಮಣಃ (ನಿ. ೧೦-೬.) ಹರಿತವಾದ. ತಿಗ್ಮ ಶಬ್ದಕ್ಕೆ ಪ್ರಕಾಶಮಾನವಾದ ಅಥವಾ ಉತ್ಸಾಹಯುಕ್ತವಾದ ಎಂಬ ಅರ್ಥವನ್ನು ಯಾಸ್ಕರು ಹೇಳಿರುವರು. ಮತ್ತು

ವಿದಿದ್ಯುತ್ ನೇಮಿಃ ಮೊದಲಾದ ಹದಿನೆಂಟು ವಜ್ರನಾಮಗಳ ಮಧ್ಯದಲ್ಲಿ ತಿಗ್ಮಂ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೧) ತಿಗ್ಮಶಬ್ದಕ್ಕೆ ವಜ್ರಾಯುಧವೆಂದರ್ಥವು.

**ಅಷಾಳ್ಹಾಯ ಸಹಮಾನಾಯ ವೇಧಸೇ ತಿಗ್ಮಾಯುಧಾಯ ಭರತಾ ಶೃಣೋತು ನಃ ||**
(ಋ. ಸಂ. ೭-೪೬-೧)

ಎಂಬ ಋಕ್ಕಿನಲ್ಲಿ ತಿಗ್ಮ ಎಂಬ ಶಬ್ದಕ್ಕೆ ಥಳಥಳನೆ ಹೊಳೆಯುತ್ತಿರುವ ಹರಿತವಾದ ವಜ್ರಾಯುಧವೆಂಬ ಅರ್ಥವು ಸೂಚಿತವಾಗಿರುವುದು (ನಿ. ೧೦-೭) ಪ್ರಸಕ್ತವಾದ ಋಕ್ಕಿನಲ್ಲಿ ವಜ್ರೇಣ ಎಂಬ ಪ್ರತ್ಯೇಕ ಶಬ್ದವಿರುವುದರಿಂದ ತಿಗ್ಮಶಬ್ದಕ್ಕೆ ವಜ್ರಾಯುಧವೆಂಬ ಅರ್ಥವನ್ನು ಹೇಳಿದೆ. ಪ್ರಕಾಶಮಾನವಾದ, ಹರಿತವಾದ ಎಂಬ ಅರ್ಥವನ್ನು ಭಾಷ್ಯಕಾರರು ಹೇಳಿ ವಜ್ರೇಣ ಎಂಬ ಶಬ್ದಕ್ಕೆ ವಿಶೇಷಣಪದವನ್ನಾಗಿ ಉಪಯೋಗಿಸಿರುವರು.

**ವೃಷಭೇಣ—ಶ್ರೇಷ್ಠೇನ |** ವೃಷಭ ಶಬ್ದಕ್ಕೆ ಯಾಸ್ಕರು—**ವೃಷಭಃ ಪ್ರಜಾಂ ವರ್ಷತೀತಿ ವಾತಿಬೃಹತಿ-ರೇತ ಇತಿ ವಾ ತದ್ವೃಷಕರ್ಮಾ ವರ್ಷಣಾದ್ವೃಷಭಃ |** ಎಂದು ವೃಷ್ಟಿಕರ್ಮಾರ್ಥವನ್ನು ಹೇಳಿದ್ದರೂ ಇಲ್ಲಿ ಭಾಷ್ಯಕಾರರು ಆಧುನಿಕ ಸಂಸ್ಕೃತದ ಅರ್ಥವಾದ ಶ್ರೇಷ್ಠವೆಂಬ ಅರ್ಥವನ್ನೇ ಹೇಳಿರುವರು.

**ಪುರಃ— ವೃತ್ರಸ್ಯ ಪುರಾಣಿ |** ವೃತ್ರಾಸುರನ ಪಟ್ಟಣಗಳು.

**ವಜ್ರೇಣ ಸಂ ಅಸೃಜತ್—** ವಜ್ರಾಯುಧವನ್ನು ಉಪಯೋಗಿಸಿ ಪ್ರಹರಿಸಿದನು ಎಂದಭಿಪ್ರಾಯವು.

**ಮತಿಂ ಪ್ರ ಅತಿರತ್—** ತನ್ನ ಬುದ್ಧಿಯನ್ನು ವಿಶೇಷವಾಗಿ ವೃದ್ಧಿಪಡಿಸಿದನು ಎಂದರೆ ಹರ್ಷಗೊಂಡನು. ಶತ್ರುವನ್ನು ನಾಶಮಾಡಿದುದರಿಂದ ಇಂದ್ರನ ಮನಸ್ಸಿಗೆ ಸಂತೋಷವಾಯಿತೆಂದಭಿಪ್ರಾಯವು.

**ಶಾಶದಾನಃ— ಶದ್ಲೃ ಶಾತನೇ | ವೃತ್ರಂ ಹಿಂಸನ್ |** ವೃತ್ರಾಸುರನನ್ನು ಹಿಂಸೆಮಾಡುವವನು ಅಥವಾ ನಾಶಮಾಡುವವನು.

|| ವ್ಯಾಕರಣಪ್ರಕ್ರಿಯಾ |

**ಸಿಧ್ಮಃ—**ಷಿಧು ಸಂರಾದ್ಧೌ ದಿವಾದಿ ಧಾತು ಇದರ ಮುಂದೆ ಔಣಾದಿಕವಾದ ಮಕ್ ಪ್ರತ್ಯಯ. ಷಕಾರಕ್ಕೆ ಸಕಾರ, ಪ್ರತ್ಯಯವು ಕಿತ್ತಾದ್ದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರ ಬರುತ್ತೆ.

**ಅಜಿಗಾತ್—**ಗಾ ಸ್ತುತೌ ಧಾತು. ಈ ಧಾತುವುಸ್ತುತ್ಯರ್ಥದಲ್ಲಿ ಜುಹೋತ್ಯಾದಿಗಣದಲ್ಲಿ ಪಠಿತವಾಗಿದೆ ಆದರೂ ಧಾತುಗಳಿಗೆ ಅನೇಕಾರ್ಥಗಳಿರುವುದರಿಂದ ಇಲ್ಲಿ ಗತಿ ಎಂಬ ಅರ್ಥವನ್ನು ಈ ಧಾತುವು ಬೋಧಿಸುತ್ತೆ. ಇದರ ಮುಂದೆ ಲಙ್, ತಿಪ್, ಇಕಾರಲೋಪ, ಶಪ್, **ಜುಹೋತ್ಯಾದಿಭ್ಯಃ ಶ್ಲುಃ** (ಪಾ. ಸೂ. ೨-೪-೭೫) ಎಂದು ಶ್ಲು. **ಶ್ಲೌ** (ಪಾ. ಸೂ. ೬-೧-೧೦) ಎಂದು ದ್ವಿತ್ವ. ಗಾ-ಗಾ+ತ್ **ಹ್ರಸ್ವಃ** ಎಂದು ಅಭ್ಯಾಸಕ್ಕೆ ಹ್ರಸ್ವ, **ಕುಹೋಶ್ಚುಃ** ಎಂದು ಗಕಾರಕ್ಕೆ ಜಕಾರ. **ಭೃಞಾಮಿತ್** (ಪಾ. ಸೂ. ೭-೪-೭೬) ಇದರ ಮುಂದೆ **ಬಹುಲಂ ಛಂದಸಿ** (ಪಾ. ಸೂ. ೭-೪-೭೮) ಎಂದು ಪಠಿತವಾಗಿದೆ. ಈ ಸೂತ್ರದಿಂದ ಅಭ್ಯಾಸಕ್ಕೆ ಇಕಾರಾದೇಶ, ಅಡಾಗಮ, ಅಜಿಗಾತ್ ಎಂದಾಗುತ್ತೆ.

**ತಿಗ್ಮೇನ-ಯುಜಿ ರುಚಿ ತಿಜಾಂ ಕುಶ್ಚ** (ಉ.ಸೂ. ೧-೧೪೩) ಯುಜಿರ್ ಯೋಗೇ, ರುಚ ದೀಪ್ತೌ, ತಿಜ ನಿಶಾನೇ ಈ ಧಾತುಗಳ ಮುಂದೆ ಮಕ್ ಪ್ರತ್ಯಯವೂ, ಈ ಧಾತುಗಳ ಕೊನೆಯ ವರ್ಣಗಳಿಗೆ ಸದೃಶವಾದ ಕವರ್ಗವೂ ಆದೇಶವಾಗಿ ಬರುತ್ತೆ ಎಂದು ತಿಜ್‌ಧಾತುವಿನ ಮುಂದೆ ಮಕ್, ಜಕಾರಕ್ಕೆ ವರ್ಗತೃತೀಯವಾದ ಗಕಾರ, ಕಿತ್ತಾದ್ದರಿಂದ ಗುಣನಿಷೇಧ, ತಿಗ್ಮ ಎಂದಾಯ್ತು, ತೃತೀಯೈಕವಚನ.

**ವೃಷಭೇಣ—ಋಷಿ ವೃಷಿಭ್ಯಾಂ ಕಿತ್** (ಉ. ಸೂ. ೩-೪೦೩) ಋಷೀ ಗತೌ,ವೃಷ ಸೇಚನೇ ಈ ಧಾತುಗಳ ಮುಂದೆ ಅಭಚ್ ಬರುತ್ತೆ ಅದು ಕಿತ್ ಆಗುತ್ತೆ ಎಂದು ವೃಷಧಾತುವಿನ ಮುಂದೆ ಅಭಚ್, ಅದು ಕಿತ್ತಾದ್ದ ರಿಂದ ಲಘೂಪಧಗುಣ ಬರುವುದಿಲ್ಲ.

**ಅಭೇತ್**—ಭಿದಿರ್ ವಿದಾರಣೇ ರುಧಾದಿಧಾತು. ಆದ್ದರಿಂದ ನ್ಯಾಯವಾಗಿ ಶ್ನಮ್ ಬರಬೇಕು. ಆದರೂ ಇಲ್ಲಿ ವ್ಯತ್ಯಯದಿಂದ ಶಪ್ ಬರುತ್ತೆ. ಲಙ್, ತಿಪ್, ಇಕಾರಲೋಪ. ಶಪ್‌ಗೆ ಲುಕ್, ಅಡಾಗಮ. ಅಭಿದ್+ತ್, ಲಘೂಪಧಗುಣ, **ಹಲ್‌ಙ್ಯಾಭ್ಯೋ ದೀರ್ಘಾತ್ಸುತಿಸ್ಯಪೃಕ್ತಂ ಹಲ್** (ಪಾ. ಸೂ. ೬-೧-೬೮) ಹಲಂತಶಬ್ದದ ಮುಂದೆ, ಅಥವಾ ದೀರ್ಘಗಳಾದ ಙೀ ಆಪ್‌ಗಳನ್ನು ಕೊನೆಯಲ್ಲಿ ಹೊಂದಿರುವ ಶಬ್ದದ ಮುಂದೆ ಇರುವ ಸುತಿಸಿ ರೂಪವಾದ ಅಪೃಕ್ತ ವ್ಯಂಜನಕ್ಕೆ ಲೋಪ ಬರುತ್ತೆ. ಇಕಾರಕ್ಕೆ ಲೋಪ ಬಂದಿದ್ದರೂ ಭೂತಪೂರ್ವಗತಿಯಿಂದ ತಿರೂಪತ್ವವನ್ನು ಉಪಪಾದಿಸಬೇಕು. ಒಂದೇ ವರ್ಣ ಇರುವ ಪ್ರತ್ಯಯಕ್ಕೆ ಅಪೃಕ್ತ ಎಂದು ಹೆಸರು. ಇದರಿಂದ ತ್‌ಗೆ ಲೋಪ, ಚರ್ತ್ವ, ಅಭೇತ್ ಎಂದಾಗುತ್ತೆ. ಇದು ಛಂದಸ್ಸಿನಲ್ಲಿ ಮಾತ್ರ ಸಾಧು, ಲೋಕದಲ್ಲಿ ಅಭಿನತ್ ಎಂದಾಗುತ್ತೆ. ಇದು ಒಂದು ವಿಧ. ಇದೇ ಧಾತುವಿನ ಮುಂದೆ ಲುಙ್, ತಿಪ್, ಇಕಾರ ಲೋಪ, ಅಡಾಗಮ, **ಚ್ಲಿ ಲುಙಿ** ಎಂದು ಚ್ಲಿಪ್ರತ್ಯಯ, ಅದಕ್ಕೆ ಛಾಂದಸವಾಗಿ ಲುಕ್ ಬರುವುದು. ಲಘೂಪಧಗುಣ ಬಂದರೆ ಅಭೇತ್, ಎಂದಾಗುತ್ತೆ. ಪೂರ್ವಕಲ್ಪದಲ್ಲಿ ವ್ಯತ್ಯಯದಿಂದ ಶಪ್ಪನ್ನೂ, ಛಾಂದಸವಾಗಿ ಶಪ್ ಲುಕ್ಕನ್ನೂ ಹೇಳ ಬೇಕು. ಎರಡನೆಯದರಲ್ಲಿ ಲುಕ್ಕನ್ನು ಮಾತ್ರ ಹೇಳಿದರೆ ಸಾಕು ಎಂದು ಲಾಘವ ಇದೆ. ಇದಕ್ಕಾಗಿ ಯದ್ವಾ ಎಂದು ಮತ್ತೊಂದು ವ್ಯಾಖ್ಯಾನವು ವೇದಭಾಷ್ಯದಲ್ಲಿದೆ.

**ಅತಿರತ್—ತಿರ ವೃದ್ಧೌ**—ಈ ಧಾತುವು ಈಗ ಇರುವ ಧಾತುಪಾಠದಲ್ಲಿಲ್ಲ. ಆದರೂ ಭ್ವಾದಿಯಂತೆ ತುದಾದಿಯು ಆಕೃತಿಗಣವಾದ್ದರಿಂದ ಅಲ್ಲಿ ಇದನ್ನು ಸೇರಿಸಬೇಕು. ಇದರ ಮುಂದೆ ಲಙ್, ತಿಪ್, ಶವಿಕರಣ, ಅಡಾಗಮ, ಗುಣನಿಷೇಧ, ಭ್ವಾದಿಯು ಆಕೃತಿಗಣ ಎಂದು ಸರ್ವಸಮ್ಮತ. ಹೀಗೆ ತುದಾದಿಯು ಆಕೃತಿಗಣವೆಂದು ಸರ್ವಸಮ್ಮತವಲ್ಲ, ಅದನ್ನು ಆಕೃತಿಗಣ ಎಂದು ಇಟ್ಟುಕೊಂಡು ಹೊಸದಾಗಿ ಧಾತುವನ್ನು ಕಲ್ಪನೆಮಾಡುವುದಕ್ಕಿಂತಲೂ ಕ್ಲೃಪ್ತವಾದ ಧಾತುವಿನ ಮುಂದೆ ವಿಕರಣವ್ಯತ್ಯಯಕಲ್ಪನೆಯು ಯುಕ್ತ ಎಂದು ಇಟ್ಟುಕೊಂಡು ಮತ್ತೊಂದು ರೀತಿಯಲ್ಲಿ ಪ್ರಕ್ರಿಯೆಯನ್ನು ವೇದಭಾಷ್ಯದಲ್ಲಿ ತೋರಿರುವುದು. ತೄ ಪ್ಲವನತರಣಯೋಃ ಭ್ವಾದಿ. ಇದರ ಮುಂದೆ ಲಙ್, ತಿಪ್, ಇಕಾರಲೋಪ, ಅಡಾಗಮ, ಶಪ್‌ಗೆ ಬದಲಾಗಿ ವ್ಯತ್ಯಯದಿಂದ ಶಪ್, ಅತೄ+ಅ+ತ್, **ಋತ ಇದ್ಧಾತೋಃ** (ಪಾ. ಸೂ. ೭-೧-೧೦೦) ಋಕಾರಾಂತವೂ ಅಂಗಸಂಜ್ಞಕವೂ ಆದ ಧಾತುವಿನ ಋಕಾರಕ್ಕೆ ಇಕಾರ ಬರುತ್ತೆ ಎಂದು ಇತ್ವ, ಅದು ರಪರವಾಗಿ ಬರುತ್ತೆ. ಅತಿರತ್ ಎಂದಾಗುವುದು.

**ಶಾಶದಾನಃ**—ಶದ್ಲೃ ಶಾತನೇ ತುದಾದಿ ಧಾತು, **ಧಾತೋರೇಕಾಚಃ**—, ಎಂದು ಇದರ ಮುಂದೆ ಯಙ್, **ಸನ್ಯಙೋಃ** (ಪಾ.ಸೂ. ೬-೧-೯) ಎಂದು ದ್ವಿತ್ವ, **ಹಲಾದಿಃ ಶೇಷಃ** ಎಂದು ಅಭ್ಯಾಸಲೋಪ. ಶಶದ್+ಯ **ದೀರ್ಘೋಽಕಿತಃ** (ಪಾ- ಸೂ. ೭-೪-೮೩) ಯಙ್‌ಪರದಲ್ಲಿದ್ದರೆ ಕಿತ್ತಲ್ಲದ ಅಭ್ಯಾಸಕ್ಕೆ ದೀರ್ಘ ಬರುತ್ತೆ ಎಂದು ಅಭ್ಯಾಸಕ್ಕೆ ದೀರ್ಘ, ಶಾಶದ್+ಯ ಇದರ ಮುಂದೆ ಲಟ್, **ಲಟಶ್ಶತೃಶಾನಚೌ** , ಎಂದು ಶಾನಚ್ ಇದಕ್ಕೆ **ಛಂದಸ್ಯುಭಯಥಾ** (ಪಾ. ಸೂ. ೬-೪-೧೧೭) ಧಾತ್ವಧಿಕಾರದಲ್ಲಿ ವಿಹಿತವಾದ ಪ್ರತ್ಯಯವು ಛಂದಸ್ಸಿನಲ್ಲಿ ಸಾರ್ವಧಾತುಕಸಂಜ್ಞೆಯನ್ನೂ ಆರ್ಧಧಾತುಕ ಸಂಜ್ಞೆಯನ್ನೂ ಹೊಂದುತ್ತೆ ಎಂದು ಆರ್ಧಧಾತುಕಸಂಜ್ಞೆ ಇದೆ. **ಯಸ್ಯಹಲಃ** (ಪಾ. ಸೂ. ೬-೪-೪೯) ಯಸ್ಯ ಎಂದು ಸಂಘಾತಕ್ಕೆ ಗ್ರಹಣ. ಆರ್ಧಧಾತುಕ ಪರದಲ್ಲಿದ್ದರೆ ವ್ಯಂಜನಕ್ಕಿಂತಲೂ ಪರದಲ್ಲಿ ಇರುವ ಯಶಬ್ದಕ್ಕೆ ಲೋಪ ಬರುತ್ತೆ. ಇದರಿಂದ ಬರುವ ಲೋಪವು **ಆದೇಃ ಪರಸ್ಯ** (ಪಾ. ಸೂ. ೧-೧-೫೪) ಪರಕ್ಕೆ ವಿಹಿತವಾದ ಕಾರ್ಯವು ಉದ್ದೇಶ್ಯದ ಆದಿಗೆ ಬರುವುದು ಎಂಬ ಪರಿಭಾಷಾನುಸಾರ ಯ್‌ಗೆ ಬರುತ್ತೆ, ನಂತರ **ಅತೋ ಲೋಪಃ** (ಪಾ. ಸೂ. ೬-೪-೪೮) ಎಂದು ಅಕಾರಲೋಪ, ಆರ್ಧಧಾತುಕವಾದ್ದರಿಂದ ಶಪ್ ಬರುವುದಿಲ್ಲ. ಇದಕ್ಕೆ ಸಾರ್ವಧಾತುಕಸಂಜ್ಞೆಯೂ ಇದೆ. ಆದ್ದರಿಂದ **ಅಭ್ಯಸ್ತಾನಾಮಾದಿಃ** ,(ಪಾ. ಸೂ. ೬-೧-೧೮೯) ಇಡ್ಭಿನ್ನಾಜಾದಿಲಸ್ಥಾನಿಕಸಾರ್ವಧಾತುಕ ಪರದಲ್ಲಿದ್ದರೆ ಅಭ್ಯಸ್ತ ಆದಿಯು ಉದಾತ್ತವಾಗುತ್ತೆ ಎಂದು ಶಾಶದ್ ಎಂಬುದರ ಆದಿಗೆ ಉದಾತ್ತಬರುತ್ತೆ



|| ಸಂಹಿತಾಪಾಠಃ ||

ಆವಃ ಕುತ್ಸಮಿಂದ್ರ ಯಸ್ಮಿಞ್ಚಾಕನ್ಪ್ರಾವೋ ಯುಧ್ಯಂತಂ ವೃಷಭಂ ದಶದ್ಯುಂ ।
ಶಫಚ್ಯುತೋ ರೇಣುರ್ನಕ್ಷತ ದ್ಯಾಮುಚ್ಛ್ವೈತ್ರೇಯೋ ನೃಷಾಹ್ಯಾಯ ತಸ್ಥೌ ॥೧೪॥

॥ ಪದಪಾಠಃ ॥

**ಆವಃ । ಕುತ್ಸಂ । ಇಂದ್ರ । ಯಸ್ಮಿನ್ । ಚಾಕನ್ । ಪ್ರ । ಆವಃ । ಯುಧ್ಯಂತಂ । ವೃಷಭಂ । ದಶಽದ್ಯುಂ ।**

ಶಫಽಚ್ಯುತಃ । ರೇಣುಃ । ನಕ್ಷತ । ದ್ಯಾಂ । ಉತ್ । ಶ್ವೈತ್ರೇಯಃ ।
ನೃಽಸಹ್ಯಾಯ । ತಸ್ಥೌ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಕುತ್ಸಮೇತನ್ನಾಮಕಂ ಗೋತ್ರಪ್ರವರ್ತಕಮೃಷಿಮಾವಃ । ರಕ್ಷಿತವಾನಸಿ । ಯಸ್ಮಿನ್ಕುತ್ಸೇ ಚಾಕನ್ ಸ್ತುತಿಂ ಕಾಮಯಮಾನೋ ವರ್ತಸೇ । ತಂ ಕುತ್ಸಮಿತಿ ಪೂರ್ವತ್ರಾನ್ವಯಃ । ತಥಾ ದಶದ್ಯುಮೇತನ್ನಾಮಕಂ ದಶಸು ದಿಕ್ಷು ದೀಪ್ಯಮಾನಮೃಷಿಂ ಪ್ರಾವಃ । ಪ್ರಕರ್ಷೇಣ ರಕ್ಷಿತವಾನಸಿ ॥ ಕೀದೃಶಂ । ಯುಧ್ಯಂತಂ ಸ್ವಕೀಯೈಃ ಶತ್ರುಭಿಃ ಸಹ ಯುದ್ಧಂ ಕುರ್ವಂತಂ ವೃಷಭಂ ಗುಣೈಃ ಶ್ರೇಷ್ಠಂ । ಶಫಚ್ಯುತಸ್ತ್ವದೀಯಾಶ್ವಸ್ಯ ಶಫಾತ್ಪತಿತೋ ರೇಣುರ್ಧೂಲಿರ್ದ್ಯಾಂ ದ್ಯುಲೋಕಂ ನಕ್ಷತ । ಪ್ರಾಪ್ನೋತಿ । ಶ್ವೈತ್ರೇಯಃ । ಶ್ವಿತ್ರಾಖ್ಯಾಯಾ ಯೋಷಿತಃ ಪುತ್ರಃ ಪುರಾ ಶತ್ರುಭಯಾಜ್ಜಲೇ ಮಗ್ನಃ ಸನ್ ತ್ವದನುಗ್ರಹಾನ್ನೃಸಹ್ಯಾಯ ನೃಭಿಃ ಪುರುಷೈಃ ಸೋಢವ್ಯಾಯೋತ್ತಸ್ಥೌ । ಜಲಾದುತ್ಥಿತವಾನ್ ॥ ಚಾಕನ್ । ಚಕ ತೃಪ್ತೌ । ಅಸ್ಮಾಣ್ಣ್ಯಂತಾಚ್ಛಿತ್ರೇ । ಛಂದಸ್ಯುಭಯಥೇತ್ಯಾರ್ಧಧಾತುಕತ್ವಾಣ್ಣಿಲೋಪಃ ಶಬಭಾವಶ್ಚ । ಪ್ರತ್ಯಯಸ್ವರೇಣಾಂತೋದಾತ್ತತ್ವಂ । ಯದ್ವಾ । ಕಮು ಕಾಂತಾವಿತ್ಯಸ್ಮಾದ್ಯಙ್ಲುಗಂತಾಲ್ಲಙಿ ಸಿಪ್ಯಭ್ಯಾಸಸ್ಯ ನುಮಭಾವಶ್ಛಾಂದಸಃ । ದೀರ್ಘೋಽಕಿತ ಇತಿ ದೀರ್ಘತ್ವಂ । ಸಿಲೋಪೇ ಮೋ ನೋ ಧಾತೋಃ । ಪಾ. ೮-೨-೬೪ । ಇತಿ ಮಕಾರಸ್ಯ ನಕಾರಃ । ಧಾತುಸ್ವರಃ । ಯದ್ವೃತ್ತಯೋಗಾದನಿಘಾತಃ । ಯುಧ್ಯಂತಂ । ವ್ಯತ್ಯಯೇನ ಪರಸ್ಮೈಪದಂ । ದಶದ್ಯುಂ । ದೀವ್ಯತೇಃ ಪ್ರಕಾಶಾರ್ಥಾತ್ಸಂಪದಾದಿಲಕ್ಷಣಃ ಕ್ವಿಪ್ । ಚ್ಛ್ವೋಃ ಶೂಡಿತ್ಯೂಟ್ । ದಶಸು ದಿಕ್ಷು ದ್ಯುರ್ಯಸ್ಯಾಸೌ ದಶದ್ಯುಃ । ಛಾಂದಸಂ ಹ್ರಸ್ವತ್ವಂ । ಯದ್ವಾ । ದ್ಯುಶಬ್ದೋಽಹರ್ನಾಮಸು ಪಠಿತಃ । ತೇನ ಪ್ರವೃತ್ತಿನಿಮಿತ್ತಭೂತಃ ಪ್ರಕಾಶೋ ಲಕ್ಷ್ಯತೇ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಶಫಚ್ಯುತಃ ಶಫೇನ ಚ್ಯುತಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ನಕ್ಷತ । ನಕ್ಷ ಗತೌ । ವ್ಯತ್ಯಯೇನಾತ್ಮನೇಪದಂ । ಶ್ವೈತ್ರೇಯಃ । ಶ್ವಿತ್ರಾಯಾ ಅಪತ್ಯಂ । ಸ್ತ್ರೀಭ್ಯೋ ಢಕ್ । ಪಾ. ೪-೧-೧೨೦ । ನೃಸಹ್ಯಾಯ ಶಕ್ತಿಸಹೋಶ್ಚ । ಪಾ. ೩-೧-೯೯ । ಇತಿ ಕರ್ಮಣಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ । ಪೂರ್ವಪದಾತ್ । ಪಾ. ೮-೩-೧೦೬ । ಇತಿ ಷತ್ವಂ । ಸಂಹಿತಾಯಾಂ ದೀರ್ಘಶ್ಛಾಂದಸಃ

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಯಸ್ಮಿನ್**—ಯಾವ ಕುತ್ಸನೆಂಬ ಋಷಿಯಲ್ಲಿ (ಋಷಿಯಿಂದ) । **ಚಾಕನ್**—(ಸ್ತೋತ್ರಗಳನ್ನು ಕೇಳಲು) ಪ್ರೀತಿಯುಳ್ಳವನಾಗಿದ್ದೀಯೋ (ಆ) । **ಕುತ್ಸಂ**—ಕುತ್ಸನನ್ನು । **ಆವಃ**—ಕಾಪಾಡಿದೆ. **ಯುಧ್ಯನ್ತಂ**—ಶತ್ರುಗಳೊಡನೆ ಯುದ್ಧಮಾಡುತ್ತಿದ್ದ । **ವೃಷಭಂ**—ಶ್ರೇಷ್ಠಗುಣಗಳಿಂದ ಕೂಡಿದ ।

**ದಶದ್ಯುಂ**—ದಶದ್ಯುಂ ಎಂಬ ಹೆಸರಿನ ಋಷಿಯನ್ನು । **ಪ್ರಾವಃ**—ಚೆನ್ನಾಗಿ ಕಾಪಾಡಿದೆ । **ಶಫಚ್ಯುತಃ**—(ನಿನ್ನ ಕುದುರೆ) ಗೊರಸುಗಳಿಂದ ಮೇಲಕ್ಕೆದ್ದ । **ರೇಣುಃ**—ಧೂಳು । **ದ್ಯಾಂ**—ಅಂತರಿಕ್ಷವನ್ನು । **ನಕ್ಷತ**—ಮುಟ್ಟುತ್ತದೆ । (ಶತ್ರುಭಯದಿಂದ ಜಲದಲ್ಲಿ ಮುಳುಗಿದ್ದ) **ಶ್ವೈತ್ರೇಯಃ**—ಶ್ವಿತ್ರ್ಯೆಯೆಂಬುವಳ ಮಗನು (ನಿನ್ನ ಅನುಗ್ರಹದಿಂದ) । **ನೃಷಹ್ಯಾಯ**—ಜನರಿಂದ ಆದರದಿಂದ ಎತ್ತಿ ಹಿಡಿಯಲ್ಪಡಲು । **ಉತ್ತಸ್ಥೌ**—ಜಲದಿಂದ ಮೇಲಕ್ಕೆದ್ದನು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನಿನ್ನ ಆಶ್ರಿತರನ್ನೆಲ್ಲ ರಕ್ಷಿಸುವೆ. ಸ್ತೋತ್ರ ಮಾಡುವುದರಲ್ಲಿ ನಿಪುಣನಾದ ಕುತ್ಸನನ್ನು ಅವನ ಸ್ತೋತ್ರದಿಂದ ಸಂತುಷ್ಟನಾಗಿ ಅಭಿಮಾನದಿಂದ ಕಾಪಾಡಿದೆ. ಶ್ರೇಷ್ಠವಾದ ಗುಣಗಳಿಂದ ಕೂಡಿ ಶತ್ರುಗಳೊಡನೆ ಯುದ್ಧದಲ್ಲಿ ನಿರತನಾದ ದಶದ್ಯುವನ್ನೂ ಕಾಪಾಡಿದೆ. ನಿನ್ನ ಕುದುರೆ ಗೊರಸುಗಳಿಂದ ಮೇಲಕ್ಕೆದ್ದ ಧೂಳು ಅಂತರಿಕ್ಷವನ್ನೂ ವ್ಯಾಪಿಸುತ್ತದೆ. ಶತ್ರುಗಳ ಭಯದಿಂದ ಜಲದಲ್ಲಿ ಮುಳುಗಿದ್ದ ಶ್ವಿತ್ರ್ಯೆಯ ಮಗನು ನಿನ್ನ ಸಹಾಯದಿಂದ ನಿರ್ಭಯನಾಗಿ ಮೇಲಕ್ಕೆದ್ದನು. ಜನರಿಂದ ಗೌರವಿಸಲ್ಪಟ್ಟನು.

English Translation

O Indra, you have protected Kutsa grateful for his praises; you have defended the excellent Dasadyu engaged in battle; the dust of your horses' hoofs ascended to heaven; the Son of Swithra through your favour rose up (from the waters) to be again borne by men.

॥ ವಿಶೇಷವಿಷಯಗಳು ॥

**ಕುತ್ಸಂ**—ಕುತ್ಸನೆಂಬುವನು ಒಬ್ಬ ಪ್ರಸಿದ್ಧನಾದ ಋಷಿಯು ಮತ್ತು ಕುತ್ಸವೆಂಬ ಗೋತ್ರಕ್ಕೆ ಮೂಲ ಪುರುಷನು. ಈ ಋಷಿಯು ಇಂದ್ರನಿಗೆ ಮುಖ್ಯನಾದ ಸ್ನೇಹಿತನೆಂದು ಋಗ್ವೇದದ ಅನೇಕ ಕಡೆಗಳಲ್ಲಿ ಹೇಳಿದೆ. ಈ ಋಷಿಯು ಋಗ್ವೇದದ ಪ್ರಥಮ ಮಂಡಲದ ೯೪-೯೮ ಮತ್ತು ೧೦೧-೧೧೫ ಸೂಕ್ತಗಳಿಗೂ ಒಂಭತ್ತನೆಯ ಮಂಡಲದ ೯೭ ನೆಯ ಸೂಕ್ತದಲ್ಲಿ ೪೫-೫೮ ಋಕ್ಕುಗಳಿಗೂ ಒಟ್ಟು ೨೨೭ ಋಕ್ಕುಗಳಿಗೂ ದ್ರಷ್ಟೃವಾಗಿದಾನೆ. ಋಗ್ವೇದದಲ್ಲಿ-

**ಕುತ್ಸಾ ಏತೇ ಹರ್ಯಶ್ವಾಯ ಶೂಷಮಿಂದ್ರೇ ಸಹೋ ದೇವಜೂತಮಿಯಾನಾಃ ॥**

(ಋ. ಸಂ. ೭-೨೫-೫)

ಎಂದು ಕುತ್ಸಋಷಿಯ ವಂಶಸ್ಥರ ವಿವರಣೆ ಇದೆ. ಈ ಋಷಿಯ ವಿಷಯವಾಗಿ ಋಗ್ವೇದದಲ್ಲಿ ನಮಗೆ ಹೆಚ್ಚು ವಿಷಯ ತಿಳಿದುಬಂದಿಲ್ಲ. ಆದರೂ ಋಗ್ವೇದದಲ್ಲಿ-

**ಅಹಂ ಕುತ್ಸಮಾರ್ಜುನೇಯಂ ನ್ಯೃಂಜೇಽಹಂ ಕವಿರುಶನಾ ಪಶ್ಯ ಮಾ ॥**

(ಋ. ಸಂ. ೪-೨೬-೧)

**ತ್ವಂ ಹ ತ್ಯದಿಂದ್ರ ಕುತ್ಸಮಾವಃ ಶುಶ್ರೂಷಮಾಣಸ್ತನ್ವಾ ಸಮರ್ಯೇ ।**
**ದಾಸಂ ಯಚ್ಛುಷ್ಣಂ ಕುಯವಂ ನ್ಯಸ್ಮಾ ಅರಂಧಯ ಆರ್ಜುನೇಯಾಯ ಶಿಕ್ಷನ್ ॥**

(ಋ. ಸಂ. ೭-೧೯-೨)

**ವಹತ್ಕುತ್ಸಮಾರ್ಜುನೇಯಂ ಶತಕ್ರತುಃ ತ್ಸರದ್ಗಂಧರ್ವಮಸ್ತೃತಂ ॥**

(ಋ. ಸಂ. ೮-೧-೧೧)

ಎಂಬ ಋಕ್ಕುಗಳಲ್ಲಿ **ಕುತ್ಸಂ ಆರ್ಜುನೇಯಂ** ಎಂದರೆ ಅರ್ಜುನನ ಮಗನೆಂದು ಹೇಳಿದೆ. ಆದರೆ ಅನುಕ್ರಮಣಿಕೆಯಲ್ಲಿ ಮೇಲೆ ಹೇಳಿದ ಸೂಕ್ತ ಗಳಿಗೆ ಋಷಿಯನ್ನು ಹೇಳುವಾಗ **ಕುತ್ಸ ಆಂಗಿರಸಃ** ಎಂದರೆ ಅಂಗಿರಾಋಷಿಯ ಪುತ್ರನಾದ ಕುತ್ಸನೆಂದು ಹೇಳಿದೆ. ಪ್ರಾಯಶಃ ಕುತ್ಸ ಆಂಗಿರಸಃ ಎಂದರೆ ಅರ್ಜುನನು ಅಂಗಿರಾಋಷಿಯ ವಂಶಸ್ಥನು ಎಂದಿರಬಹುದು ಮತ್ತು—

**ಅಹಂ ಪಿತೇವ ವೇತಸೂಂ ರಭಿಷ್ಟಯೇ ತುಗ್ರಂ ಕುತ್ಸಾಯ ಸ್ಮದಿಭಂ ಚ ರಂಧಯಂ ॥**

(ಋ. ಸಂ. ೧೦-೪೯ ೪)

ಎಂಬ ಋಕ್ಕಿನಲ್ಲಿ ಕುತ್ಸನು ವೇತಸುಗಳು, ತುಗ್ರ, ಸ್ಮದಿಭ ಎಂಬವರನ್ನು ಯುದ್ಧದಲ್ಲಿ ಸೋಲಿಸಿದುದಾಗಿ ಹೇಳಿದೆ.

(೧) **ತ್ವಮಾವಿಥ ಸುಶ್ರವಸಂ ತವೋತಿಭಿಸ್ತವ ತ್ರಾಮಭಿರಿಂದ್ರ ತೂರ್ವಯಾಣಂ ।**
**ತ್ವಮಸ್ಮೈ ಕುತ್ಸಮತಿಥಿಗ್ವಮಾಯುಂ ಮಹೇ ರಾಜ್ಞೇ ಯೂನೇ ಅರಂಧನಾಯ ॥**

(ಋ. ಸಂ. ೧-೫೩-೧೦)

(೨) **ಕುತ್ಸಸ್ಯಾಯೋರತಿಥಿಗ್ವಸ್ಯ ವೀರಾನ್ ನ್ಯಾವೃಣಗ್ಭರತಾ ಸೋಮಮಸ್ಮೈ ।**

(ಋ. ಸಂ. ೨-೧೪-೭)

(೩) **ಯ ಆಯುಂ ಕುತ್ಸಮತಿಥಿಗ್ವಮರ್ದಯೋ ವಾವೃಧಾನೋ ದಿವೇದಿವೇ ।**

(ಋ. ಸಂ. ೮-೫೩-೨)

ಎಂಬ ಋಕ್ಕಿನಲ್ಲಿ ಇಂದ್ರನು ಕುತ್ಸ, ಅತಿಥಿಗ್ವ, ಆಯು ಎಂಬ ರಾಜರನ್ನು ಸೋಲಿಸಿ ಸುಶ್ರವಸ್ಸು, ತೂರ್ವಯಾಣ ಎಂಬ ರಾಜರ ವಶಮಾಡಿ ರಕ್ಷಿಸಿದೆ ಎಂದು ಹೇಳಿರುವುದು. ಆದುದರಿಂದ ಇಲ್ಲಿ ಹೇಳಿರುವ ಕುತ್ಸನೆಂಬುವನು ಒಬ್ಬ ರಾಜನ ಹೆಸರಾಗಿರಬಹುದು ಈ ರಾಜನಿಗೂ ಮೇಲೆ ಹೇಳಿದ ಋಷಿಯಾದ ಕುತ್ಸನಿಗೂ ಏನೂ ಸಂಬಂಧವಿಲ್ಲವೆಂದೂ ಇವರಿಬ್ಬರೂ ಬೇರೆ ಬೇರೆ ವ್ಯಕ್ತಿಗಳೆಂದೂ ಹೇಳಬೇಕಾಗುವುದು. ಮತ್ತು—

**ತ್ವಂ ಕುತ್ಸಂ ಶುಷ್ಣಹತ್ಯೇಷ್ವಾವಿಥಾರಂಧಯೋಽತಿಥಿಗ್ವಾಯ ಶಂಬರಂ ।**

(ಋ. ಸಂ. ೧-೫೧-೬.)

**ತ್ವಂ ಕವಿಂ ಚೋದಯೋಽರ್ಕಸಾತೌ ತ್ವಂ ಕುತ್ಸಾಯ ಶುಷ್ಣಂ ದಾಶುಷೇವರ್ಕ್ ।**

(ಋ. ಸಂ. ೬-೫೬-೩ )

ಎಂಬ ಋಕ್ಕುಗಳಲ್ಲಿ ಶುಷ್ಣನೆಂಬ ಅಸುರನ ಕೂಡ ಯುದ್ಧ ಮಾಡಿ ಕುತ್ಸನನ್ನು ರಕ್ಷಿಸಿದೆ ಎಂದು ಇಂದ್ರನನ್ನು ಪ್ರಶಂಸೆಮಾಡಲಾಗಿರುವುದು.

**ಚಾಕನ್—ಚಕ ತೃಪ್ತೌ । ಸ್ತುತಿಂ ಕಾಮಯಮಾನಃ ।** ಸ್ತೋತ್ರಗಳನ್ನು ಕೇಳಲು ಅಪೇಕ್ಷೆಯುಳ್ಳ.

**ದಶದ್ಯುಂ—ದಶಸು ದಿಕ್ಷು ದೀಪ್ಯಮಾನಮೇತನ್ನಾಮಕಮೃಷಿಂ** । ಹತ್ತು ದಿಕ್ಕುಗಳಲ್ಲಿಯೂ ವರ್ಚಸ್ಸಿನಿಂದ ಬೆಳಗುವ ದಶದ್ಯು ಎಂಬ ಋಷಿಯು ಎಂದು ಈ ಶಬ್ದಕ್ಕೆ ಭಾಷ್ಯಕಾರರು ಅರ್ಥ ಮಾಡಿರುವರು. ಈ ಶಬ್ದವು ಋಗ್ವೇದದಲ್ಲಿ ಈ ಋಕ್ಕಿನಲ್ಲಲ್ಲದೆ—

**ತ್ವಂ ರಥ ಪ್ರಂ ಭರೋ ಯೋಧಮೃಷ್ವಮಾವೋ ಯುಧ್ಯಂತಂ ವೃಷಭಂ ದಶದ್ಯುಂ ॥**
(ಋ. ಸಂ. ೬-೨೬-೪.)

ಎಂಬ ಋಕ್ಕಿನಲ್ಲಿ ಮಾತ್ರವಿರುವುದು. ಅಲ್ಲಿಯೂ ಸಹ ಈ ಋಷಿಯನ್ನು ನೀನು ರಕ್ಷಿಸಿದೆ ಎಂದು ಇಂದ್ರನ ಪ್ರಶಂಸೆ ಇರುವುದು. ಈ ಋಷಿಯ ವಿಷಯವಾಗಿ ವಿಶೇಷ ಸಂಗತಿಗಳು ತಿಳಿದುಬಂದಿಲ್ಲ.

**ಶ್ವೈತ್ರೇಯಃ**— ಈ ಶಬ್ದವು ಈ ಋಕ್ಕಿನಲ್ಲಲ್ಲದೆ ಋಗ್ವೇದದಲ್ಲಿ—

**ಆ ಶ್ವೈತ್ರೇಯಸ್ಯ ಜಂತವೋ ದ್ಯುಮ ದ್ವರ್ಧಂತ ಕೃಷ್ಟಯಃ ॥** (ಋ. ಸಂ. ೫-೧೯-೩.)
ಎಂಬ ಋಕ್ಕಿನಲ್ಲಿ ಮಾತ್ರ ಇರುವುದು. **ಶ್ವೈತ್ರೇಯಃ** ಎಂದರೆ **ಶ್ವಿತ್ರಾಖ್ಯಾಯಾ ಯೋಷಿತಃ ಪುತ್ರಃ-ಶ್ವಿತ್ರೀ** ಎಂಬ ಸ್ತ್ರೀಯ ಪುತ್ರನು ಎಂದು ಭಾಷ್ಯಕಾರರು ಹೇಳಿರುವರು. ಮೇಲೆ ಹೇಳಿದ

**ತ್ವಂ ರಥಂ ಪ್ರ ಭರೋ ಯೋಧಮೃಷ್ವಮಾವೋ ಯುಧ್ಯಂತಂ ವೃಷಭಂ ದಶದ್ಯುಂ ॥**
(ಋ. ಸಂ. ೬-೨೬-೪.)

ಎಂಬ ಋಕ್ಕಿನಲ್ಲಿಯೂ ಸಹ ಈ ಋಕ್ಕಿನಲ್ಲಿರುವಂತೆ **ಆವೋ ಯುಧ್ಯಂತಂ ವೃಷಭಂ ದಶದ್ಯುಂ** ಎಂಬ ಒಂದು ಪಾದ ಪೂರ್ತಿಯಾಗಿ ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ ಇರುವುದರಿಂದ ಪಾಶ್ಚಾತ್ಯ ಪಂಡಿತರಲ್ಲಿ Ludwig ಮೊದಲಾದವರು ಈ ಶ್ವೈತ್ರೇಯನೂ, ದಶದ್ಯು ಎಂಬುವನೂ ಒಂದೇ ವ್ಯಕ್ತಿಯೆಂದೂ, ಒಂದು ಋಕ್ಕಿನಲ್ಲಿ ಶ್ವೈತ್ರೇಯ ಎಂಬ ಹೆಸರನ್ನು ಸೂಚಿಸಿ ಮತ್ತೊಂದು ಋಕ್ಕಿನಲ್ಲಿ ಅದನ್ನು ಸೂಚಿಸಿಲ್ಲದಿದ್ದರೂ ಎರಡು ಹೆಸರುಗಳೂ ಒಂದೇ ವ್ಯಕ್ತಿಯನ್ನು ಉದ್ದೇಶಿಸಿ ಹೇಳಿರುವುದೆಂದು ಅಭಿಪ್ರಾಯಪಡುತ್ತಾರೆ. ಈ ಎರಡು ಋಕ್ಕುಗಳಿಗೂ ಬೇರೆ ಬೇರೆ ಋಷಿಗಳು ; ಒಂದಕ್ಕೆ ಹಿರಣ್ಯಸ್ತೂಪ ಆಂಗಿರಸಃ ಎಂದೂ ಮತ್ತೊಂದಕ್ಕೆ ಭರದ್ವಾಜೋ-ಬಾರ್ಹಸ್ಪತ್ಯಃ ಎಂದು ಬೇರೆ ಬೇರೆ ಗೋತ್ರದ ಋಷಿಗಳಿರುವರು. ಆದರೂ **ಆವೋ ಯುಧ್ಯಂತಂ ವೃಷಭಂ ದಶದ್ಯುಂ** ಎಂಬ ಪಾದವು ಮಾತ್ರ ಏನೂ ವ್ಯತ್ಯಾಸವಿಲ್ಲದೆ ಒಂದೇ ರೀತಿಯಲ್ಲಿರುವುದು. ಆದುದರಿಂದ ಪ್ರಸಕ್ತ ಋಕ್ಕಿನಲ್ಲಿ ಹೇಳಿರುವ ಶ್ವೈತ್ರೇಯ ಮತ್ತು ದ್ಯುಮತ್ ಎಂಬ ಹೆಸರುಗಳು ಒಂದೇ ವ್ಯಕ್ತಿಗೆ ಸಂಬಂಧಪಟ್ಟಿರುವುದೇ ಅಥವಾ ಬೇರೆ ಬೇರೆ ಎರಡು ವ್ಯಕ್ತಿಗಳೇ ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯವಿದೆ.

ಶ್ವಿತ್ರ್ಯ ಅಥವಾ ಶ್ವೈತ್ರೇಯ ಎಂಬ ಶಬ್ದವು ಮುಂದಿನ ಋಕ್ಕಿನಲ್ಲಿಯೂ ಇರುವುದು. ಈ ಶ್ವೈತ್ರೇಯನು ಹಿಂದೆ ಶತ್ರುಭಯದಿಂದ ನೀರಿನಲ್ಲಿ ಅಡಗಿಕೊಂಡಿದ್ದನೆಂದೂ ಇಂದ್ರನು ಶತ್ರುಭಯವನ್ನು ಹೋಗಲಾಡಿಸಿ ಅವನನ್ನು ನೀರಿನಿಂದ ಮೇಲಕ್ಕೆದ್ದುಬರುವುದಕ್ಕೆ ಸಹಾಯಮಾಡಿದನೆಂದೂ ಪ್ರತೀತಿ ಇದೆ.

**ನೃಷಾಹ್ಯಾಯ—ನೃಭಿಃ ಪುರುಷೈಃ ಸೋಢವ್ಯಾಯ** । ಪುರುಷರಿಂದ ಎತ್ತಲ್ಪಟ್ಟು, ಎಂದರೆ ನೀರಿನಲ್ಲಿ ಮುಳಿಗಿದ್ದ ಅವನನ್ನು ಸಹಾಯಕ್ಕಾಗಿ ಬಂದ ಪುರುಷರು ನೀರಿನಿಂದ ಮೇಲಕ್ಕೆ ಎತ್ತಿದರೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಚಾಕನ್—ಚಕ ತೃಪ್ತೌ**- ಒಂದನೇಗಣ. ಇದಕ್ಕೆ ಘಟಾದಿಯಲ್ಲಿ ಮಿತತ್ಕರಣಕ್ಕಾಗಿ ಅನುವಾದವಿದೆ. ಇದರ ಮುಂದೆ ಣಿಚ್, ಉಪಧಾವೃದ್ಧಿ, ಲಟ್, ಶತೃ, **ಛಂದಸ್ಯುಭಯಥಾ** (ಪಾ. ಸೂ. ೬-೪-೧೧೭) ಎಂದು ಶತೃಗೆ ಆರ್ಧಧಾತುಕಸಂಜ್ಞೆ ಇದೆ, **ಣೇರನಿಟಿ** (ಪಾ. ಸೂ. ೬-೪-೫೧) ಇಡಾದಿಯಲ್ಲದ ಆರ್ಧಧಾತುಕ ಪರದಲ್ಲಿದ್ದರೆ ಣಿಗೆ ಲೋಪ ಬರುತ್ತೆ ಎಂದು ಣಿಲೋಪ, ಇದು ಆರ್ಧಧಾತುಕವಾದ್ದರಿಂದ ಸಾರ್ವಧಾತುಕಪರಕತ್ವವಿಲ್ಲದಿರುವುದರಿಂದ **ಕರ್ತರಿ ಶಪ್** ಎಂದು ಶಪ್ ವಿಕರಣ ಬರುವುದಿಲ್ಲ. **ಆದ್ಯುದಾತ್ತಶ್ಚ** ಎಂದು ಪ್ರತ್ಯಯಸ್ವರದಿಂದ ಶತೃ ಉದಾತ್ತ. ಚಾಕತ್ ಶಬ್ದದ ಮುಂದೆ ಸುಪ್ರತ್ಯಯ, **ಉಗಿದಚಾಂ** ಎಂದು ನುಮಾಗನು. **ಹಲ್‌ಙ್ಯಾಭ್ಯಃ** ಎಂದು ಸುಲೋಪ. **ಸಂಯೋಗಾಂತಸ್ಯ ಲೋಪಃ** ಎಂದು ತಗೆ ಲೋಪ. ಇದು **ಪೂರ್ವತ್ರಾಸಿದ್ಧಮ್** ಎಂದು ಅಸಿದ್ಧವಾಗುತ್ತೆ. ಆದ್ದರಿಂದ **ನಲೋಪಃ ಪ್ರಾತಿಪದಿಕಾಂತಸ್ಯ** ಎಂದು ನಕಾರಕ್ಕೆ ಲೋಪ ಬರುವುದಿಲ್ಲ. ಹೀಗೆ ಕೃದಂತವಾಗಿ ರೂಪನಿಷ್ಪತ್ತಿಮಾಡಿದರೆ ವರ್ತಸೇ ಎಂಬ ಕ್ರಿಯಾಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು, ಈ ಪಕ್ಷದಲ್ಲಿ ಯುಷ್ಮನ್, ಯಾನ ಕುತ್ಸನ ವಿಷಯದಲ್ಲಿ, ಚಾಕನ್ ವರ್ತಸೆ-ತೃಪ್ತನಾಗಿ ಇರುವೆಯೋ ಎಂದು ಅರ್ಥವು ಏರ್ಪಡುವುದು. ಸ್ತುತಿ ಯನ್ನು ಆಶಿಸುವವನಾಗಿ ಎಂದು ವಿವಕ್ಷಿತಾರ್ಥ ಸಿದ್ಧಿಸುವುದಿಲ್ಲ. ಆದುದರಿಂದ ತಿಙಂತನಾಗಿ ಇದಕ್ಕೆ ನಿಷ್ಪತ್ತಿಯನ್ನು ಹೇಳಿರುವರು. ಕಮು ಕಾನ್ತೌ, ಕಾನ್ತಿ ಎಂದರೆ ಇಚ್ಛೆ, ಯಙ್ **ಯಙೋಽಚಿಚ** ಎಂದು ಅದಕ್ಕೆ ಲುಕ್, **ಸನ್ಯಙೋಃ** ಎಂದು ದ್ವಿತ್ವ ಕಮ್-ಕಮ್ **ನುಗತೋಽನುನಾಸಿಕಾಂತಸ್ಯ** (ಪಾ. ಸೂ. ೭-೪-೮೫) ಅನುನಾಸಿ ಕಾಂತವಾದ ಅಂಗದ ಅಭ್ಯಾಸವು ಹ್ರಸ್ವಾಕಾರಾಂತವಾಗಿದ್ದರೆ ಅದಕ್ಕೆ ನುಕ್ ಆಗಮ ಬರುತ್ತೆ ಎಂದು ಪ್ರಾಪ್ತವಾಗುವ ನುಮಾಗಮವು ಛಾಂದಸವಾಗಿ ಇಲ್ಲಿ ಬರುವುದಿಲ್ಲ. **ದೀರ್ಘೋಽಕಿತಃ** (ಪಾ. ಸೂ. ೭-೪-೮೩) ಯಙಂನಲ್ಲಿಯೂ ಯಙ್‌ಲುಕ್‌ನಲ್ಲಿಯೂ ಕಿತ್ತಲ್ಲದ ಅಭ್ಯಾಸಕ್ಕೆ ದೀರ್ಘಬರುತ್ತೆ ಎಂದು ಅಭ್ಯಾಸಕ್ಕೆ ದೀರ್ಘ. **ಕುಹೋಶ್ಚುಃ** (ಪಾ. ಸೂ. ೭-೪-೬೨) ಅಭ್ಯಾಸದ ಕವರ್ಗ ಹಕಾರಗಳಿಗೆ ಚವರ್ಗಬರುತ್ತೆ ಎಂದು ಹೇಳಿರುವ ಪ್ರಕಾರ ಕಕಾರಕ್ಕೆ ಚಕಾರ, ಪ್ರತ್ಯಯದ ಸಿಚ್‌ಸಕಾರಕ್ಕೆ ಲೋಪ. **ಮೋ ನೋ ಧಾತೋಃ** (ಪಾ.ಸೂ. ೮-೨-೬೪) ಎಂಬ ಸೂತ್ರ ದಿಂದ ಧಾತುವಿನ ಮಕಾರಕ್ಕೆ ನಕಾರವು ಬಂದಿರುವುದರಿಂದ ಚಾಕನ್ ಎಂದು ರೂಪವಾಗಿರುತ್ತದೆ.

**ಯುಧ್ಯಂತಂ**—ಯುಧ ಸಂಪ್ರಹಾರೇ ಧಾತು. ಇದು ನಾಲ್ಕನೇ ಗಣದಲ್ಲಿ ಪಠಿತವಾಗಿರುವುದು, ಶ್ಯನ್ ಎಂಬ ವಿಕರಣ ಪ್ರತ್ಯಯವು ಬರುವುದು, ಇದರಲ್ಲಿ ನಕಾರವೂ ಶಕಾರವೂ ಇತ್ಸಂಜ್ಞೆಯಿಂದ ಲೋಪವನ್ನು ಹೊಂದು ವುದು, ಶತೃಪ್ರತ್ಯಯವು ಬಂದಿರುತ್ತದೆ. ಅನುದಾತ್ತೇತ್ತ್ವಲಕ್ಷಣಮಾತ್ಮನೇಪದಮನಿತ್ಯಂ ಎಂದು ಆತ್ಮನೇಪದವು ಬರದಿರುವಕಾರಣ ಪರಸ್ಮೈಪದವು ಬಂದಿರುವುದು. ಧಾತುಪಠಿತವಾದ ಪ್ರಕೃತಿಸ್ವರವು ಬಂದಿರುತ್ತದೆ.

**ದಶದ್ಯುಂ**—ಇಲ್ಲಿ ಅನೇಕಾರ್ಥಕವಾದ ದಿವ್ ಧಾತುವಿಗೆ ಪ್ರಕಾಶರೂಪವಾದ ಅರ್ಥವನ್ನು ಅಂಗೀಕರಿಸಿರು ವುದು. ಪ್ರಕಾಶಾರ್ಥವಾದ ದಿವ್ ಧಾತುವಿನ ಮೇಲೆ ಸಂಪದಾದ್ಯರ್ಥದಲ್ಲಿ ಕ್ವಿಪ್ ಪ್ರತ್ಯಯವು ಬಂದಿರುವುದು. **ಚ್ಛ್ವೋಃ ಶೂಠ್** (ಪಾ. ಸೂ. ೬-೪-೧೯) ಎಂಬುದರಿಂದ ಊಠ್ ಎಂದು ಆಗಮವು ಬಂದು ದ್ಯುಃ ಎಂದು ರೂಪ ವಾಗಿರುವುದು. ಛಂದಸ್ಸಿನ ಸಂಬಂಧವಾಗಿ ಹ್ರಸ್ವವು ಬಂದು ದ್ಯುಃ ಎಂದು ರೂಪಸಿದ್ಧಿಕ್ರಮವು. ಅಹಸ್ಸಿನ ವಾಚಕವಾದ

ದ್ಯುಃಶಬ್ದವು ನಿರುಕ್ತದಲ್ಲಿ (ಪಾ. ಸೂ. ೧-೯-೨) ಪಠಿತವಾಗಿರುತ್ತದೆ. ಈ ಕಾರಣದಿಂದ ದ್ಯುಶಬ್ದವು ಪ್ರಕಾಶವನ್ನು ಬೋಧಿಸುತ್ತದೆ ದಶಸು ದಿಕ್ಷು ದ್ಯುಃ ಯಸ್ಯ ಎಂದು ಬಹುವ್ರೀಹಿಸಮಾಸವನ್ನು ಹೇಳುವ ಕಾರಣ ಪೂರ್ವಪದ ಪ್ರಕೃತಿಸ್ವರವು ಸಿದ್ಧವಾಗಿರುತ್ತದೆ.

**ಶಫಚ್ಯುತಃ**—ಶಫೇನ ಚ್ಯುತಃ ಎಂದು ತೃತೀಯಾ ಸಮಾಸವನ್ನು ಮಾಡಿರುವುದರಿಂದ **ತೃತೀಯಾ ಕರ್ಮಣಿ** (ಪಾ. ಸೂ. ೬-೨-೪೮) ಎಂಬ ಸೂತ್ರದಿಂದ ಪೂರ್ವಪದಪ್ರಕೃತಿಸ್ವರವು ಬಂದಿರುವುದು.

**ನಕ್ಷತ**—ನಕ್ಷ ಗತೌ ಎಂಬ ಧಾತುವನ್ನು ಆತ್ಮನೇಪದದಲ್ಲಿ ಇಲ್ಲಿ ಉಪಯೋಗಿಸಿರುತ್ತದೆ.

**ಶ್ವೈತ್ರೇಯಃ**—ಶ್ವಿತ್ರ್ಯಾಯಾಃ ಅಪತ್ಯಂ ಎಂದು ಅಪತ್ಯಾರ್ಥದಲ್ಲಿ **ಸ್ತ್ರೀಭ್ಯೋ ಢಕ್** (ಪಾ. ಸೂ. ೪-೧-೧೨೦) ಢಕ್ ಪ್ರತ್ಯಯವು ಬಂದಿರುವುದು. ಇದರಿಂದ ಆದಿವೃದ್ಧಿಯೂ ಏಯ ಆದೇಶವೂ ಬಂದಿರುತ್ತದೆ.

**ನೃಸಹ್ಯಾಯ**—ಷಹ ಮರ್ಷಣೇ ಧಾತು. **ಶಕಿಸಹೋಶ್ಚ** (ಪಾ. ಸೂ. ೩-೧-೯೯) ಎಂಬ ಸೂತ್ರದಿಂದ ಕರ್ಮಾರ್ಥದಲ್ಲಿ ಯತ್‌ಪ್ರತ್ಯಯವು ಬಂದಿರುತ್ತದೆ. **ಯತೋಽನಾವಃ** (ಪಾ. ಸೂ. ೬-೧-೨೧೩) ಈ ಸೂತ್ರದಿಂದ ಈ ಶಬ್ದವು ಆದ್ಯುದಾತ್ತವಾಗಿರುವುದು. ಇಲ್ಲಿ ಸಮಾಸಗತವಾಗಿ ಇರುವ ಕಾರಣ ಕೃತ್‌ಪ್ರತ್ಯಯವು ಉತ್ತರಪದವಾಗಿರುವುದರಿಂದ ಪ್ರಕೃತಿಸ್ವರವು ಬಂದಿರುತ್ತದೆ. **ಪೂರ್ವಪದಾತ್** (ಪಾ. ಸೂ. ೮-೩-೧೦೬) ಎಂಬ ಸೂತ್ರದಿಂದ ಷತ್ವ. ಸಂಹಿತಾಪಾಠದಲ್ಲಿ ಛಂದಸ್ಸಿನ ಅನುಕೂಲಕ್ಕಾಗಿ ದೀರ್ಘ. ॥ ೧೪ ॥



॥ ಸಾಯಣಭಾಷ್ಯಂ ॥

ಆವಃ ಶಮಂ ವೃಷಭಂ ತುಗ್ರ್ಯಾಸು ಕ್ಷೇತ್ರಜೇಷೇ ಮಘವಞ್ಛ್ವಿತ್ರ್ಯಂ ಗಾಂ ।

ಜ್ಯೋಕ್ ಚಿದತ್ರ ತಸ್ಥಿವಾಂಸೋ ಅಕ್ರಞ್ಛತ್ರೂಯತಾಮಧರಾ ವೇದನಾಕಃ ॥ ೧೫ ॥

॥ ಪದಪಾಠಃ ॥

ಆವಃ । ಶಮುಂ । ವೃಷಭಂ । ತುಗ್ರ್ಯಾಸು । ಕ್ಷೇತ್ರಽಜೇಷೇ । ಮಘಽವನ್ ।
ಶ್ವಿತ್ರ್ಯಂ । ಗಾಂ ।
ಜ್ಯೋಕ್ । ಚಿತ್ । ಅತ್ರ । ತಸ್ಥಿಽವಾಂಸಃ । ಅಕ್ರನ್ । ಶತ್ರುಽಯತಾಂ ।
ಅಧರಾ । ವೇದನಾ । ಅಕರಿತ್ಯಕಃ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಮಘವನ್ ಧನವನ್ನಿಂದ್ರ ಶ್ವಿತ್ರ್ಯಂ ಶ್ವಿತ್ರಾಯಾಃ ಪುತ್ರಂ ಪೂರ್ವೋಕ್ತಂ ಪುರುಷಮಾವಃ। ರಕ್ಷಿತವಾನಸಿ । ಕಿಮರ್ಥಂ । ಕ್ಷೇತ್ರಜೇಷೇ ಶತ್ರುಭಿಃ ಸಹ ಯುದ್ಧವೇಲಾಯಾಂ ಕ್ಷೇತ್ರಪ್ರಾಪ್ತ್ಯರ್ಥಂ । ಕೀದೃಶಂ । ಶಮುಂ ತ್ವದೀಯಪರಿಪಾಲನೇನ ಚಿತ್ತವ್ಯಾಕುಲತಾಂ ಪರಿತ್ಯಜ್ಯ ಶಾಂತಂ ವೃಷಭಂ ಗುಣೈಃ ಶ್ರೇಷ್ಠಂ ತುಗ್ರ್ಯಾಸು ಗಾಂ ಜಲೇಷು ಗತಂ । ಮಗ್ನಮಿತ್ಯರ್ಥಃ । ತುಗ್ರ್ಯಾ ಬುರ್ಬುರಮಿತ್ಯುದಕನಾಮಸು ಪಠಿತತ್ವಾತ್ । ಅತ್ರಾಸ್ಮಾಭಿಃ ಸಹ ಯುದ್ಧೇ ಜ್ಯೋಕ್ ಚಿತ್ ಚಿರಕಾಲಮಪಿ ತಸ್ಥಿವಾಂಸೋಽವಸ್ಥಿತಾಃ ಸಂತೋಽಕ್ರನ್ । ಯೇ ವೈರಿಣಃ ಶತ್ರುತ್ವಮಕುರ್ವನ್ ಶತ್ರೂಯತಾಂ ಶತ್ರೂನಾತ್ಮನ ಇಚ್ಛತಾಂ ತೇಷಾಮಧರಾ ವೇದನಾ ನಿಕೃಷ್ಟಾನಿ ದುಃಖಾನಿ ತ್ವಮಕಃ । ಕುರು ॥ ತುಗ್ರಶಬ್ದೋಽಂತರಿಕ್ಷವಚನಃ । ತತ್ರ ಭವಾಸ್ತುಗ್ರಿಯಾಃ ತುಗ್ರಾದ್ಘನ್ । ಪಾ. ೪-೪-೧೧೫ । ಇತಿ ಘನ್ । ತಸ್ಯೇಯಾದೇಶಃ । ಇಕಾರಲೋಪಶ್ಛಾಂದಸಃ । ನಿತ್ತ್ವಾದಾದ್ಯುದಾತ್ತತ್ವಂ । ಕ್ಷೇತ್ರಜೇಷೇ । ಜೇಷೃ ಣೇಷೃ ಏಷೃ ಪ್ರೇಷೃ ಗತೌ । ಅಸ್ಮಾತ್ಸಂಪದಾದಿಲಕ್ಷಣಃ ಕ್ವಿಪ್ । ಕ್ಷೇತ್ರಸ್ಯ ಜೇಟ್ ಕ್ಷೇತ್ರಜೇಟ್ । ಸಮಾಸಾಂತೋದಾತ್ತತ್ವಂ । ಅಂತೋದಾತ್ತಾದುತ್ತರಪದಾದಿತ್ಯಾದಿನಾ । ಪಾ. ೬-೧-೧೬೯ । ವಿಭಕ್ತೇರುದಾತ್ತತ್ವಂ । ಶ್ವಿತ್ರ್ಯಂ । ಶ್ವಿತ್ರಾಯಾಂ ಭವಃ । ಭವೇ ಛಂದಸೀತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ತಸ್ಥಿವಾಂಸಃ । ತಿಷ್ಠತೇಃ ಕ್ವಸುಃ । ವಸ್ವೇಕಾಜಾದ್ಘಸಾಮಿತೀಡಾಗಮಃ । ಅಕ್ರನ್ । ಕರೋತೇರ್ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ । ಶತ್ರೂಯತಾಂ । ಶತ್ರೂನಾತ್ಮನ ಇಚ್ಛಂತೀತಿ ಶತ್ರೂಯಂತಃ । ಸುಪಆತ್ಮನಃ ಕ್ಯಚಿತಿ ಕ್ಯಚ್ । ತದಂತಾಚ್ಛತೃ । ತಸ್ಯ ಲಸಾರ್ವಧಾತುಕಾನುದಾತ್ತತ್ವೆ ಏಕಾದೇಶಸ್ವರೇಣೋದಾತ್ತತ್ವಂ । ತಸ್ಯ ಚ ಪೂರ್ವತ್ರಾಸಿದ್ಧತ್ವಂ ನೇಷ್ಯತೇ । ಪಾ. ೮-೨-೬-೧ । ಇತ್ಯುಕ್ತತ್ವಾಚ್ಛತ್ರಂತಮಂತೋದಾತ್ತತ್ವಮಿತಿ ಶತುರನುಮೋ ನದ್ಯಜಾದೀ ಇತಿ ವಿಭಕ್ತೇರುದಾತ್ತತ್ವಂ । ಅಧರಾ ವೇದನೇತ್ಯುಭಯತ್ರ ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಅಕಃ । ಕರೋತೇರ್ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ ಗುಣಃ ॥ ೩ ॥

॥ ಪ್ರತಿಪದಾರ್ಥ ॥

**ಮಘವನ್**— ಎಲೈ ಇಂದ್ರನೇ । **ತುಗ್ರ್ಯಾಸು ಗಾಂ**—ನೀರಿನಲ್ಲಿ ಮುಳಿಗಿದ್ದ । **ಶಮಂ**— (ರಕ್ಷಣ ದಿಂದ ವ್ಯಾಕುಲತೆಯನ್ನು ಕಳೆದು) ಮನಶ್ಶಾಂತಿಯನ್ನು ಹೊಂದಿದ । **ವೃಷಭಂ**— ಶ್ರೇಷ್ಠಗುಣಗಳಿಂದ ಕೂಡಿದ । **ಶ್ವಿತ್ರ್ಯಂ**— ಶ್ವಿತ್ರೆಯೆಂಬುವಳ ಮಗನನ್ನು । **ಕ್ಷೇತ್ರಜೇಷೇ**—(ತನ್ನ) ರಾಜ್ಯವನ್ನು ಪಡೆಯುವುದಕ್ಕಾಗಿ । **ಆವಃ**- ಕಾಪಾಡಿದೆ । **ಅತ್ರ**— (ನಮ್ಮೊಡನೆ) ಯುದ್ಧದಲ್ಲಿ । **ಜ್ಯೋಕ್ ಚಿತ್**— ಬಹಳ ಕಾಲದಿಂದಲೂ । **ತಸ್ಥಿವಾಂಸಃ**— ನಿಂತುಕೊಂಡು । **ಅಕ್ರನ್**— (ವೈರವನ್ನು) ಬೆಳೆಸಿದರೋ (ಅಂತಹ) । **ಶತ್ರೂಯತಾಂ**— ನಮ್ಮನ್ನು ಶತ್ರುಗಳನ್ನಾಗಿ ಎಣಿಸಿದವರಿಗೆ । **ತ್ವಂ**— ನೀನು । **ಅಧರಾ ವೇದನಾ**— ನಿಕೃಷ್ಟವಾದ ದುಃಖಗಳನ್ನು (ಸಹಿಸಲಾರದ ನೋವನ್ನು) । **ಅಕಃ**—ಉಂಟುಮಾಡು ।

॥ ಭಾವಾರ್ಥ ॥

ಎಲೈ ಇಂದ್ರನೇ, ಶತ್ರುಭಯದಿಂದ ನೀರಿನಲ್ಲಿ ಮುಳಿಗಿದ್ದರೂ ಸಹ ನಿನ್ನ ಅನುಗ್ರಹದಿಂದ ಶ್ವಿತ್ರಿಯ ಮಗನು ಮೇಲಕ್ಕೆದ್ದು ತನ್ನ ವ್ಯಾಕುಲತೆಯನ್ನು ನೀಗಿಕೊಂಡು ಮನಶ್ಶಾಂತಿಯನ್ನು ಹೊಂದಿದನು. ಅವನು ರಾಜ್ಯವನ್ನು ಪುನಃ ಹೊಂದಲು ಸದ್ಗುಣಗಳಿಂದ ಕೂಡಿದ ಅವನನ್ನು ಕಾಪಾಡಿದೆ. ಬಹಳ ಕಾಲದಿಂದ ನಮ್ಮೊಡನೆ ಶತ್ರುತ್ವವನ್ನು ಬೆಳೆಸುವವರಿಗೆ ಸಹಿಸಲಾರದ ಹಿಂಸೆಯನ್ನುಂಟುಮಾಡು

## English Translation

Maghavan, you have protected the excellent son of Switra, when fighting for the sake of land and encouraged by you when immersed in water ; inflict sharp pains on those with hostile minds who have long stood ( in enmity ) against us

॥ ವಿಶೇಷ ವಿಷಯಗಳು ॥

**ಶ್ವಿತ್ರ್ಯಂ— ಶ್ವಿತ್ರ್ಯಾಯಾಃ ಪುತ್ರಂ** । ಶ್ವಿತ್ರಿಯ ಪುತ್ರನು. ಶ್ವೈತ್ರೇಯ, ಶ್ವಿತ್ರ್ಯ ಎಂಬ ಎರಡು ಶಬ್ದಗಳೂ ಶ್ವಿತ್ರಿಯ ಮಗನೆಂಬ ಅರ್ಥವನ್ನೇ ಸೂಚಿಸುವುವು.

**ತುಗ್ರ್ಯಾಸು— ಜಲೇಷು** । ಅರ್ಣಃ ಕ್ಷೋದಃ ಮೊದಲಾದ ನೂರೊಂದು ಉದಕನಾಮಗಳ ಮಧ್ಯದಲ್ಲಿ ತುಗ್ರ್ಯಾ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೨-೨೪.) ತುಗ್ರ್ಯಾ ಎಂದರೆ ನೀರು, ಜಲ ಎಂದರ್ಥವು. ಸಾಧಾರಣವಾಗಿ ನೀರನ್ನು ಸೂಚಿಸುವ ಆಪಃ ಮೊದಲಾದ ಶಬ್ದಗಳಂತೆ ತುಗ್ರ್ಯಾ ಎಂಬ ಶಬ್ದವು ಇಲ್ಲಿ ಬಹುವಚನದಲ್ಲಿ ಪ್ರಯೋಗಿಸಲ್ಪಟ್ಟಿದೆ.

**ಕ್ಷೇತ್ರಜೇಷೇ**— ಜೇಷೃ ಣೇಷೃ ಏಷೃ ಪ್ರೇಷೃ ಗತೌ । ಕ್ಷೇತ್ರಾರ್ಥಂ ಯದ್ಯುದ್ಧಂ ತಸ್ಮಿನ್ । ಕ್ಷೇತ್ರ ಎಂದರೆ ಭೂಮಿಗಾಗಿ ಮಾಡುವ ಯುದ್ಧದಲ್ಲಿ ಎಂದರ್ಥವು. ಭೂಮಿಯನ್ನು ಅಥವಾ ರಾಜ್ಯವನ್ನು ಗೆಲ್ಲುವುದಕ್ಕಾಗಿ ಶತ್ರುಗಳೊಡನೆ ಮಾಡುವ ಯುದ್ಧದಲ್ಲಿ ಎಂದಭಿಪ್ರಾಯವು.

**ಗಾಂ— ತುಗ್ರ್ಯಾಸು ಗಾಂ ಅಪ್ಸು ಕೃತಾಶ್ರಯಂ ।** ನೀರಿನಲ್ಲಿ ರಕ್ಷಣೆಗಾಗಿ ಅಡಗಿಕೊಂಡಿದ್ದ.

**ಜ್ಯೋಕ್ ಚಿತ್— ಚಿರಕಾಲಮಪಿ । ಚಿದಿತ್ಯೇಷೋಽನೇಕಕರ್ಮಾ** (ನಿ. ೧-೪.) ಚಿತ್ ಶಬ್ದಕ್ಕೆ ಅನೇಕಾರ್ಥಗಳಾಗುವುವು ಎಂದಿರುವುದರಿಂದ ಇಲ್ಲಿ ಜ್ಯೋಕ್ ಚಿತ್ ಎಂದರೆ ಬಹಳಕಾಲದವರೆಗೂ ಎಂದು ಭಾಷ್ಯಕಾರರು ಹೇಳಿರುವರು.

**ತಸ್ಥಿವಾಂಸಃ— ಅವಸ್ಥಿತಾಃ ।** ಇರುವ.

**ಶತ್ರೂಯತಾಂ— ಶತ್ರೂನಾಮಾತ್ಮನ ಇಚ್ಛತಾಂ ।** ಶತ್ರುಭಾವವನ್ನು ಅಪೇಕ್ಷಿಸುವವರ, ಶತ್ರುತ್ವದಿಂದಿರುವವರ, ದ್ವೇಷಿಗಳ ಇತ್ಯಾದಿ.

**ಅಧರಾ**— ಕೆಳಗಿರುವ, ನೀಚವಾದ.

**ವೇದನಾ— ದುಃಖಾನಿ ।** ದುಃಖ, ಹಿಂಸೆ ಇತ್ಯಾದಿ.

॥ ವ್ಯಾಕರಣಪ್ರಕ್ರಿಯಾ ॥

**ತುಗ್ರ್ಯಾಸು**—ತುಗ್ರ ಎಂಬ ಶಬ್ದವು ಅಂತರಿಕ್ಷ ಎಂಬ ಅರ್ಥದಲ್ಲಿ ಪ್ರಯುಕ್ತನಾಗಿರುತ್ತದೆ ತುಗ್ರ ಎಂಬ ಶಬ್ದದಮೇಲೆ ತತ್ರ ಭವಃ ಎಂಬ ಅರ್ಥದಲ್ಲಿ **ತುಗ್ರಾದ್ಘನ್** (ಪಾ. ಸೂ. ೪-೪-೧೧೫) ಎಂಬ ಸೂತ್ರದಿಂದ **ಘನ್** ಪ್ರತ್ಯಯವು ಬಂದಿರುವುದು. ಘನ್ ಪ್ರತ್ಯಯದ ನಕಾರಕ್ಕೆ ಲೋಪ ಬಂದು ಉಳಿದಿರುವ ಘಕಾರಕ್ಕೆ **ಆಯನೇಯೀನೀಯಿಯಃ ಫಢಖಛಘಾಂ ಪ್ರತ್ಯಯಾದೀನಾಂ** (ಪಾ. ಸೂ. ೭-೧-೨) ಎಂಬ ಸೂತ್ರದಿಂದ ಇಯಾದೇಶ. ಇದರಿಂದ ತುಗ್ರಿಯ ಎಂಬುದಾಗಿ ಆಗಬೇಕಾಗಿರುವುದು. ಆದರೆ ಛಾಂದಸವಾಗಿ ಇಕಾರಕ್ಕೆ ಲೋಪವು ಬಂದಿರುವ ಕಾರಣ ತುಗ್ರ್ಯ ಎಂದು ರೂಪವು ಸಿದ್ಧವಾಗಿರುತ್ತದೆ. ತುಗ್ರ್ಯಶಬ್ದದ ಮೇಲೆ ಟಾಪ್ ಪ್ರತ್ಯಯವು ಬಂದು ತುಗ್ರ್ಯಾ ಎಂಬ ಶಬ್ದರೂಪವು ಆಗಿರುತ್ತದೆ. ಘನ್ ಪ್ರತ್ಯಯದಲ್ಲಿರುವ ನಕಾರವು ಇತ್ಸಂಜ್ಞೆಯುಳ್ಳದ್ದಾಗಿರುವ ಕಾರಣ ನಿತ್ ಸಂಜ್ಞೆಯನ್ನು ಹೊಂದಿರುವುದರಿಂದ ತುಗ್ರ್ಯಾಶಬ್ದವು ಆದ್ಯುದಾತ್ತವಾಗಿರುತ್ತದೆ.

**ಕ್ಷೇತ್ರಜೇಷೇ**—ಧಾತುಪಾಠದಲ್ಲಿ ಜ್ಯೇಷೃಧಾತುವು ಗತ್ಯರ್ಥಕವಾಗಿ ಪಠಿತವಾಗಿರುತ್ತದೆ. ಈ ಜ್ಯೇಷೃ ಧಾತುವಿಗೆ ಸಂಪದಾದ್ಯರ್ಥದಲ್ಲಿ ಕ್ವಿಪ್ ಪ್ರತ್ಯಯವು ಬಂದಿರುತ್ತದೆ ಇದರಿಂದ ಜೇಟ್ ಎಂಬ ರೂಪವು ಆಗಿರುತ್ತದೆ. ಕ್ಷೇತ್ರಸ್ಯ ಜೇಟ್ ಎಂದು ವಿಗ್ರಹವಾಕ್ಯವು. ಕ್ಷೇತ್ರಜೇಟ್ ಎಂಬುವುದು ಪ್ರಥಮಾವಿಭಕ್ತಿಯು. ಇದರ ಚತುರ್ಥೀ ವಿಭಕ್ತಿಯು ಕ್ಷೇತ್ರಜೇಷೇ ಎಂದು **ಅಂತೋದಾತ್ತಾದುತ್ತರಪದಾದನ್ಯತರಸ್ಯಾಮನಿತ್ಯಸಮಾಸೇ** (ಪಾ. ಸೂ. ೬-೧-೧೬೯) ಎಂಬ ಸೂತ್ರದಿಂದ ಸಮಾಸಾಂತವಾದ ಏಕಾಚ್ ಆಗಿರುವ ಶಬ್ದರೂಪವು ತೃತೀಯಾ ವಿಭಕ್ತಿಯಲ್ಲಿ ಅಂತೋದಾತ್ತವಾಗಿರುತ್ತದೆ, ಆದಕಾರಣ ಕ್ಷೇತ್ರಜೇಷೇ ಎಂಬುವುದು ಅಂತೋದಾತ್ತ

**ಶ್ವಿತ್ರ್ಯಂ**—ಶ್ವಿತ್ರಾಶಬ್ದದ ಮೇಲೆ (ಶ್ವಿತ್ರಾಯಾಂ ಭವಂ) ಭವಾರ್ಥದಲ್ಲಿ **ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬ ಸೂತ್ರದಿಂದ ಯತ್‌ಪ್ರತ್ಯಯ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬ ಸೂತ್ರದಿಂದ ಯತ್ ಪ್ರತ್ಯಯಾಂತವಾದ ದ್ವ್ಯಚ್ಕವಾದ ಈ ಶಬ್ದವು ಆದ್ಯುದಾತ್ತವಾಗಿರುತ್ತದೆ.

**ತಸ್ಥಿವಾಂಸಃ**—ಷ್ಠಾ ಗತಿನಿವೃತ್ತೌ ಎಂಬದಾಗಿ ಧಾತುಗಣದಲ್ಲಿ ಉಕ್ತವಾಗಿರುತ್ತದೆ. **ಪಾಘ್ರಾ-ಧ್ಮಾಸ್ಥಾಮ್ನಾದಾಣ್ ದೃಶ್ಯರ್ತಿಸರ್ತಿಶದಸದಾಂ ಪಿಬಜಿಘ್ರಧಮತಿಷ್ಠಮನಯಚ್ಛಪಶ್ಯರ್ಛಧೌಶೀಯಸೀದಾಃ** (ಪಾ. ಸೂ. ೭-೩-೭೮) ಎಂಬ ಸೂತ್ರದಿಂದ ಸ್ಥಾ ಧಾತುವಿಗೆ ತಿಷ್ಠ ಎಂಬ ಆದೇಶವು ಬಂದಿರುತ್ತದೆ. ತಿಷ್ಠತಿ ಎಂಬ ಅರ್ಥದಲ್ಲಿ ಕ್ವಸುಪ್ರತ್ಯಯವು ಬಂದಿರುತ್ತದೆ. **ವಸ್ವೇಕಾಜಾದ್ಘಸಾಂ** (ಪಾ. ೭-೨-೬೭) ಎಂಬ ಸೂತ್ರದಿಂದ ಇಡಾಗಮವು ಬಂದು ತಸ್ಥಿ ಎಂದು ರೂಪವಾಗಿರುತ್ತದೆ. ಇದರ ಮೇಲೆ ಸುಪ್‌ಪ್ರತ್ಯಯವು ಬಂದು ತಸ್ಥಿವಾನ್ ಎಂದು ಶಬ್ದವಾಗಿ ಇದರ ಬಹುವಚನವು ತಸ್ಥಿವಾಂಸಃ ಎಂದು ಆಗಿರುತ್ತದೆ.

**ಅಕ್ರ್ರ**—ಡು ಕೃ ಞ್ ಕರಣೇ ಎಂಬ ಧಾತುವಿನಲ್ಲಿ ಡಕಾರವು ಇತ್ಸಂಜ್ಞೆಯಿಂದ ಲೋಪವನ್ನು ಹೊಂದುವುದು. ಕೃಞ್‌ಧಾತುವಿನ ಮೇಲೆ ಭೂತಕಾಲದ ಅರ್ಥವನ್ನು ಬೋಧಿಸುವುದಕ್ಕಾಗಿ ಲುಙ್‌ಪ್ರಯುಕ್ತವಾಗಿರುವುದು. ಇದರಿಂದ ಅಡಾಗಮವು ಬಂದಿರುವುದು. **ಮಂತ್ರೇಘಸಹ್ವರಣಶವೃಹದಹಾದ್ವೃಚ್ ಕೃಗಮಿಜನಿಭ್ಯೋಲೇಃ** (ಪಾ. ಸೂ. ೨-೪-೮೦) ಎಂಬ ಸೂತ್ರದಿಂದ ಚ್ಲಿಪ್ರತ್ಯಯಕ್ಕೆ ಲೋಪವು ಬಂದು ಅಕ್ರ್ರ ಎಂದು ರೂಪವು ಆಗಿರುತ್ತದೆ.

**ಶತ್ರೂಯತಾಂ**—ಶತ್ರು ಶಬ್ದದಮೇಲೆ ಆತ್ಮನ ಇಚ್ಛತಿ ಎಂಬುದಾಗಿ ಇಚ್ಛಾರ್ಥದಲ್ಲಿ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬ ಸೂತ್ರದಿಂದ ಕ್ಯಚ್ ಪ್ರತ್ಯಯವು ಕ್ಯಜಂತವಾದ ಶಬ್ದರೂಪದ ಮೇಲೆ ಶತೃ ಪ್ರತ್ಯಯವು ಬಂದು ಶತ್ರು ಎಂಬ ಶಬ್ದವು ಶತ್ರೂಯ ಎಂದು ಆಗಿರುತ್ತದೆ. ಇದರ ಮುಂದೆ ಸುಬಾದಿ ವಿಭಕ್ತಿ ಪ್ರತ್ಯಯಗಳಿಂದ ಶತ್ರೂಯತಾಂ ಎಂದು ಶಬ್ದರೂಪವಾಗಿರುವುದು. ಈ ಶಬ್ದವು ಅನುದಾತ್ತವಾಗಿರಬೇಕು. ಆದರೆ ಏಕಾದೇಶಸ್ವರವು ವಿಹಿತವಾಗಿರುವ ಕಾರಣ ಉದಾತ್ತವಾಗಿರುತ್ತದೆ. ಈ ಉದಾತ್ತಸ್ವರವಿಧಾನವು **ಪೂರ್ವತ್ರಾ-ಸಿದ್ಧಂ** (ಪಾ. ಸೂ. ೮-೨-೧) ಎಂಬ ಸೂತ್ರದಿಂದ ಹೇಳುವ ಅಸಿದ್ಧತ್ವಾಧಿಕಾರಕ್ಕೆ ಒಳಪಟ್ಟಿರುವುದಿಲ್ಲವೆಂದು ಹೇಳಿರುವುದರಿಂದ, ಶತ್ರಂತವಾದ ಶಬ್ದರೂಪವು ಅಂತೋದಾತ್ತವಾಗಿರುವುದು. **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬ ಸೂತ್ರವು ಈ ಅರ್ಥವನ್ನು ಬೋಧಿಸುವುದು.

**ಅಧರಾ-ವೇದನಾ**—ಈ ಶಬ್ದಗಳೆರಡರಲ್ಲಿಯೂ, **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬ ಸೂತ್ರದಿಂದ ಲೋಪವು ಬಂದಿರುವುದು.

**ಅಕಃ**—ಕೃಞ್‌ಧಾತುವಿಗೆ ಭೂತಾರ್ಥದಲ್ಲಿ ಲುಙ್ ಪ್ರಯುಕ್ತವಾಗಿ **ಮನ್ತ್ರೇಘಸಹ್ವರಣ** (ಪಾ. ಸೂ. ೨-೪-೮೦) ಎಂಬ ಸೂತ್ರದಿಂದ ಚ್ಲಿಪ್ರತ್ಯಯಕ್ಕೆ ಲೋಪವು ಬಂದು ಅನಂತರ ಋಕಾರಕ್ಕೆ ಗುಣವು ಬಂದಿರುತ್ತದೆ.

॥ ಓಂ ॥

# ಮೂವತ್ತನಾಲ್ಕನೆಯ ಸೂಕ್ತವು

**ತ್ರಿಶ್ಚಿನ್ನೋ ಅದ್ಯೇತಿ ಚತುರ್ಥಂ ಸೂಕ್ತಂ ದ್ವಾದಶರ್ಚಂ । ಋಷಿಶ್ಚಾನ್ಯಸ್ಮಾದೃಷೇರಿತಿ ಪರಿಭಾಷಯಾಂಗಿರಸೋ ಹಿರಣ್ಯಸ್ತೂಪ ಋಷಿಃ । ಅಶ್ವಿನೌ ದೇವತಾ । ತ್ರೀ ಚಕ್ರೇತಿ ನವಮೀ ಆ ನೋ ಅಶ್ವಿನೇತಿ ದ್ವಾದಶೀ ಚ ತ್ರಿಷ್ಟುಭೌ । ಶಿಷ್ಟಾಸ್ತ್ರಿಷ್ಟುಬಂತಪರಿಭಾಷಯಾ ಜಗತ್ಯಃ । ತ್ರಿಶ್ಚಿದ್ದ್ವಾದಶಾಶ್ವಿನಂ ನವಮ್ಯಂತೇ ತ್ರಿಷ್ಟುಭಾವಿತ್ಯನುಕ್ರಮಣಿಕಾ ॥ ಪ್ರಾತರನುವಾಕ ಆಶ್ವಿನೇ ಕ್ರತೌ ಜಾಗತೇ ಛಂದಸೀದಂ ಸೂಕ್ತಂ। ಅಥಾಶ್ವಿನ ಇತಿ ಖಂಡೇ ಸೂತ್ರಿತಂ । ತ್ರಿಶ್ಚಿನ್ನೋ ಅದ್ಯೇಳೇ ದ್ಯಾವಾಪೃಥಿವೀ ಇತಿ ಜಾಗತಂ । ಆ. ४-೧೫ । ಇತಿ ॥ ಆಶ್ವಿನೇ ಶಸ್ತ್ರೇಽಪ್ಯೇತತ್ಸೂಕ್ತಂ ಪ್ರಾತರನುವಾಕನ್ಯಾಯೇನ । ಆ. ೬-೫ । ಇತ್ಯತಿದಿಷ್ಟತ್ವಾತ್ ॥**

ಅನುವಾದವು— **ತ್ರಿಶ್ಚಿನ್ನೋ ಅದ್ಯ** ಎಂಬುದು ಏಳನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಹಿರಣ್ಯಸ್ತೂಪನು ಋಷಿಯು, ಅಶ್ವಿನೀದೇವತೆಗಳೇ ದೇವತೆಗಳು. **ತ್ರೀ** ಎಂಬ ಒಂಭತ್ತನೆಯ ಋಕ್ಕೂ **ಆನೋ ಅಶ್ವಿನಾ** ಎಂಬ ಹನ್ನೆರಡನೆಯ ಋಕ್ಕೂ ತ್ರಿಷ್ಟುಪ್ ಛಂದಸ್ಸಿನವು ; ಉಳಿದ ಋಕ್ಕುಗಳು ಜಗತೀಛಂದಸ್ಸಿನವು. " **ತ್ರಿಶ್ಚಿದ್ದ್ವಾದಶಾಶ್ವಿನಂ ನವಮ್ಯಂತೇ ತ್ರಿಷ್ಟುಭೌ** -ತ್ರಿಶ್ಚಿತ್ ಎಂಬ ಅಶ್ವಿನೀದೇವತಾಕವಾದ ಹನ್ನೆರಡು ಋಕ್ಕಿನ ಸೂಕ್ತದಲ್ಲಿ ಒಂಭತ್ತು ಮತ್ತು ಹನ್ನೆರಡನೆಯ ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು" ಎಂದು ಅನುಕ್ರಮಣಿಕೆಯಲ್ಲಿ ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಕ್ರತುಸಂಬಂಧವಾದ ಜಗತೀಛಂದಸ್ಸಿನ ಋಕ್ಕುಗಳನ್ನು ಪಠಿಸುವಾಗ ಈ ಸೂಕ್ತವನ್ನು ಪಠಿಸಬೇಕೆಂದು ಇದರ ವಿನಿಯೋಗವಿರುವುದು- ಆಶ್ವಲಾಯನಶ್ರೌತಸೂತ್ರದಲ್ಲಿ **ಅಥಾಶ್ವಿನ** ಎಂಬ ಖಂಡದಲ್ಲಿ **ತ್ರಿಶ್ಚಿನ್ನೋ ಅದ್ಯೇಳೇ ದ್ಯಾವಾಪೃಥಿವೀ ಇತಿ ಜಾಗತಂ** ಎಂಬ ಸೂತ್ರದಿಂದ ಈ ವಿಷಯವು ವಿವರಿಸಲ್ಪಟ್ಟಿರುವುದು. (ಆ. ४-೧೫.) ಪ್ರಾತರನುವಾಕಮಂತ್ರಗಳಲ್ಲಿ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತವನ್ನು ಪಠಿಸಬೇಕೆಂದು ನಿಯಮವಿರುವುದು. (ಆ. ೬-೫.)



॥ ಓಂ ॥

## ಸೂಕ್ತ—೩೪

॥ ಮಂಡಲ—೧ ॥ ಅನುವಾಕ—೭ ॥ ಸೂಕ್ತ—೩೪ ॥

॥ ಅಷ್ಟಕ— ೧ ॥ ಅಧ್ಯಾಯ— ೩ ॥ ವರ್ಗ—೪, ೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧—೧೨ ॥

॥ ಋಷಿಃ— ಹಿರಣ್ಯಸ್ತೂಪ ಆಂಗೀರಸಃ ॥

॥ ದೇವತಾ— ಅಶ್ವಿನೌ ॥

॥ ಛಂದಃ— ೧-೮, ೧೦, ೧೧ ಜಗತೀ । ೯–೧೨ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ತ್ರಿಶ್ಚಿನ್ನೋ ಅದ್ಯಾ ಭವತಂ ನವೇದಸಾ ವಿಭುರ್ವಾಂ ಯಾಮ
ಉತ ರಾತಿರಶ್ವಿನಾ ।
ಯುವೋರ್ಹಿ ಯನ್ತ್ರಂ ಹಿಮ್ಯೇವ ವಾಸಸೋಽಭ್ಯಾಯಂಸೇನ್ಯಾ
ಭವತಂ ಮನೀಷಿಭಿಃ ॥೧॥

॥ ಪದಪಾಠಃ ॥

ತ್ರಿಃ । ಚಿತ್ । ನಃ । ಅದ್ಯ । ಭವತಂ । ನವೇದಸಾ । ವಿಽಭುಃ । ವಾಂ ।
ಯಾಮಃ । ಉತ । ರಾತಿಃ । ಅಶ್ವಿನಾ ।
ಯುವೋಃ । ಹಿ । ಯಂತ್ರಂ । ಹಿಮ್ಯಾಽಇವ । ವಾಸಸಃ । ಅಭಿಽಆಯಂ-
ಸೇನ್ಯಾ । ಭವತಂ । ಮನೀಷಿಽಭಿಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ನವೇದಸಾಶ್ವಿನಾ ಮೇಧಾವಿನಾವಶ್ವಿದೇವೌ । ನವೇದಾ ಇತಿ ಮೇಧಾವಿನಾಮ ನವೇದಾಃ ಕವಿರ್ಮನೀಷೀತಿ ತನ್ನಾಮಸು ಪಠಿತತ್ವಾತ್ । ತಾದೃಶೌ ಯುವಾಂ ತ್ರಿಶ್ಚಿತ್ ತ್ರಿವಾರಮಪ್ಯದ್ಯಾಸ್ಮಿನ್ಕರ್ಮಣಿ ನೋಽಸ್ಮದರ್ಥಂ ಭವತಂ । ಆಗತೌ ಭವತಂ । ಅತ್ರ ತ್ರಿರಿತಿ ವಚನಂ ಸವನತ್ರಯಾಪೇಕ್ಷಂ । ಆದರಾತಿಶಯದ್ಯೋತನಾರ್ಥಂ ವಾ । ತ್ರಿಷತ್ಯಾ ಹಿ ದೇವಾ ಇತಿ ಶ್ರುತ್ಯಂತರಾತ್ । ವಾಂ ಯುವಯೋ-ರ್ಯಾಮೋ ಗಮನಸಾಧನಭೂತೋ ರಥೋ ವಿಭುರ್ವ್ಯಾಪ್ತಃ । ಉತಾಪಿ ಚ ರಾತಿರ್ದಾನಂ ವಿಭುರಿತಿ ಶೇಷಃ । ಯುವೋರ್ಯುವಯೋರುಭಯೋರ್ಯಂತ್ರಂ ಹಿ ಪರಸ್ಪರನಿಯಮರೂಪಃ ಸಂಬಂಧ-ವಿಶೇಷೋಽಸ್ತಿ ಖಲು । ತತ್ರ ದೃಷ್ಟಾಂತಃ । ವಾಸಸಃ ಸೂರ್ಯರಶ್ಮ್ಯಾಚ್ಛಾದನಯುಕ್ತಸ್ಯ ವಾಸರಸ್ಯ ಹಿಮ್ಯೇವ । ಹಿಮಯುಕ್ತಯಾ ರಾತ್ರ್ಯೇವ । ಯಥಾ ರಾತ್ರ್ಯಾ ಸಹ ದಿವಸಸ್ಯ ಸಂಬಂಧಃ ಕದಾಚಿದಪಿ ನಾಪೈತಿ ತದ್ವತ್ । ಯುವಾಮುಭೌ ಮನೀಷಿಭಿರ್ಮೇಧಾವಿಭಿರೃತ್ವಿಗ್ಭಿಃ । ಮನಿಷೀತಿ ಮೇಧಾವಿನಾಮ ಮನೀಷೀ ಮಂಧಾತೇತಿ ತನ್ನಾಮಸು ಪಠಿತತ್ವಾತ್ । ಅಭ್ಯಾಯಂಸೇನ್ಯಾಭಿತೋ ನಿಯಂತವ್ಯಾ ಅನುಗ್ರಹ-ವಶಾತ್ತದಧೀನೌ ಭವತಂ ॥ ಅದ್ಯ । ನಿಪಾತಸ್ಯ ಚೇತಿ ಸಂಹಿತಾಯಾಂ ದೀರ್ಘಃ । ನ ವೇದನಾ । ವಿಪರೀತಂ ನವಿತ್ತ ಇತಿ ನವೇದಸೌ । ವಿದ ಜ್ಞಾನ ಇತ್ಯಸ್ಮಾದೌಣಾದಿಕೋಽಸುನ್ । ನಞ್ಸಮಾಸೇ ನಭ್ರಾಣ್ನಪಾದಿತ್ಯಾದಿನಾ ನಕಾರಸ್ಯ ಪ್ರಕೃತಿಭಾವಃ । ಸುಪಾಂ ಸುಲುಗಿತ್ಯಾಕಾರಃ । ಆಮಂತ್ರಿತನಿಘಾತಃ । ಯಾಮಃ । ಯಾಯತೇ ಗಮ್ಯತೇಽನೇನೇತಿ ಯಾಮೋ ರಥಃ । ಅತಿಸ್ತುಸ್ವಿತ್ಯಾದಿನಾ ಮನ್ । ನಿತ್ತ್ವಾದಾ-ದ್ಯುದಾತ್ತತ್ವಂ । ಯದ್ವಾ । ಯಮ ಉಪರಮ ಇತ್ಯಸ್ಮಾತ್ಕರ್ಮಣಿ ಘಞ್ । ವೃಷಾದಿಷು ಪಾಠಾದಾದ್ಯು-ದಾತ್ತತ್ವಂ । ರಾತಿಃ । ರಾ ದಾನ ಇತ್ಯಸ್ಮಾದ್ಭಾವೇ ಕ್ತಿನ್ । ಮಂತ್ರೇ ವೃಷೇತ್ಯಾದಿನಾ ತಸ್ಯೋದಾತ್ತತ್ವಂ । ಯುವೋಃ । ಸುಪಾಂ ಸುಪೋ ಭವಂತೀತಿ ಷಷ್ಠೀದ್ವಿವಚನಸ್ಯ ಷಷ್ಠೀದ್ವಿವಚನಾದೇಶಃ । ಅತ ಆದೇಶ-ವಿಷಯತ್ವಾದ್ಯೋಽಚಿ । ಪಾ. ೭-೨-೮೯ । ಇತಿ ಯತ್ವಂ ನ ಭವತಿ । ಶೇಷೇ ಲೋಪ ಇತಿ ಟಿಲೋಪ ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ । ಅಂತ್ಯಲೋಪಪಕ್ಷೇ ತ್ವೇಕಾದೇಶಸ್ವರೇಣ । ಹಿಮ್ಯಾ ಇವ । ಹಿಮೇತಿ ರಾತ್ರಿನಾಮ ಊಧಃ ಪಯೋ ಹಿಮೇತಿ ತನ್ನಾಮಸು ಪಠಿತತ್ವಾತ್ । ಹನೇರ್ಹಿ ಚ । ಉ. ೧-೧೪೬ । ಇತಿ ಮಕ್ । ಹಂತಿ ಪದ್ಮಾನೀತಿ ಹಿಮಂ । ಅರ್ಶಆದ್ಯಚ್ । ಹಿಮಾ ರಾತ್ರಿಃ । ತತ ಉತ್ತರಸ್ಯ ತೃತೀಯೈಕವಚನಸ್ಯ ಸುಪಾಂ ಸುಲುಗಿತಿ ಡ್ಯಾದೇಶಃ । ತತಷ್ಟಿಲೋಪ ಉದಾತ್ತನಿವೃತ್ತಿಸ್ವರೇಣ ತಸ್ಯೋದಾತ್ತತ್ವಂ । ವಾಸಸಃ । ವಸ ಆಚ್ಛಾದನೇ ವಾಸಯತಿ ಪ್ರಕಾಶೇನಾಚ್ಛಾದಯತೀತ್ಯಹರ್ವಾಸಃ । ಅಭ್ಯಾಯಂಸೇನ್ಯಾ । ಅಭ್ಯಾಙಿತ್ಯುಪಸರ್ಗದ್ವಯೋಪಸೃಷ್ಟಾದ್ಯಮ ಉಪರಮ ಇತ್ಯಸ್ಮಾದೌಣಾದಿಕಃ ಸೇನ್ಯಪ್ರತ್ಯಯಃ । ಸುಪಾಂ ಸುಲುಗಿತ್ಯಾಕಾರಃ ।

। ಪ್ರತಿಪದಾರ್ಥ ॥

**ನವೇದಸಾ**— ಎಲೈ ಮೇಧಾವಿಗಳಾದ (ಪ್ರಾಜ್ಞರಾದ) । **ಅಶ್ವಿನಾ**— ಅಶ್ವಿನೀದೇವತೆಗಳೇ (ನೀವು) । **ಅದ್ಯ**— ನಮ್ಮ ಯಜ್ಞಕರ್ಮದಲ್ಲಿ । **ನಃ**— ನಮಗೋಸ್ಕರ । **ತ್ರಿಶ್ಚಿತ್**— ಮೂರುಕಾಲಗಳಲ್ಲಿಯೂ (ಸವನ

ತ್ರಯದಲ್ಲೂ) । **ಭವತಂ**— (ಬಂದು) ಇರಿ. । **ಯುವೋಃ**— ನಿಮ್ಮ । **ಯಂತ್ರಂ ಹಿ**—ಪರಸ್ಪರಸಂಬಂಧವಾದರೋ । **ವಾಸಸಃ**— ತೀಕ್ಷ್ಣವಾದ ಸೂರ್ಯರಶ್ಮಿಗಳಿಂದ ಆಚ್ಛಾದಿತವಾದ ಹಗಲಿಗೆ । **ಹಿಮ್ಯೇವ**— ಶೀತಲವಾದ ರಾತ್ರಿಯೊಂದಿಗಿರುವಂತೆ ಇರುವುದು. । **ವಾಂ**— ನಿಮ್ಮ । **ಯಾಮಃ**— ರಥವು । **ವಿಭುಃ**— ಸರ್ವವ್ಯಾಪಕವಾದುದು (ವಿಶಾಲವಾದುದು) । **ಉತ**— ಮತ್ತು (ಅದರಂತೆಯೇ) । **ರಾತಿಃ**— ಔದಾರ್ಯವೂ (ವಿಭುಃ-ವಿಶಾಲವಾದುದು) । **ಮನೀಷಿಭಿಃ**— ಮೇಧಾವಿಗಳಾದ ಋತ್ವಿಕ್ಕುಗಳಿಂದ । **ಅಭ್ಯಾಯಂಸೇನ್ಯಾ**— ನಿಯಮಿಸಲ್ಪಡತಕ್ಕವರಾಗಿ (ಅವರ ಇಚ್ಛಾಧೀನರಾಗಿ) । **ಭವತಂ**— (ನೀವಿಬ್ಬರೂ) ಇರಿ. ।

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮಿಬ್ಬರ ಅನ್ಯೋನ್ಯಸಂಬಂಧವು ಸೂರ್ಯರಶ್ಮಿಯಿಂದ ಆಚ್ಛಾದಿತವಾದ ಹಗಲಿಗೆ ಹಿಮದಿಂದ ತಣ್ಣಗಿರುವ ರಾತ್ರಿಯಸಂಬಂಧದಂತೆ ಪರಸ್ಪರನಿಯತವಾಗಿದೆ. ನಿಮ್ಮ ರಥವು ವಿಶಾಲವಾದುದಾಗಿ ಎಲ್ಲ ಕಡೆಗೂ ವ್ಯಾಪಿಸಿದೆ. ಅದರಂತೆಯೇ ನಿಮ್ಮ ಔದಾರ್ಯವೂ ಉದಾತ್ತವಾದುದು. ದಯವಿಟ್ಟು ನಮಗೋಸ್ಕರ ಇಂದು ನಮ್ಮ ಯಾಗದಲ್ಲಿ ಮೂರುಕಾಲಗಳಲ್ಲಿಯೂ ನಮ್ಮೊಡನೆ ಇರಿ. ಪ್ರಾಜ್ಞರಾದ ಯಾಗಕರ್ತರ ಮೇಲೆ ಅಭಿಮಾನವಿಟ್ಟು ಅವರ ಇಚ್ಛಾಧೀನರಾಗಿರಿ.

English Translation

Wise Aswins, be present with us thrice to day; your chariot is vast and extensive and filled with gifts; and your connection is like that of the shinning day and dewy night; Aswins, be accessible to the pious (priests)

॥ ವಿಶೇಷವಿಷಯಗಳು ॥

ಈ ಸೂಕ್ತವು ತ್ರಿಃ ಎಂಬ ಶಬ್ದದೊಡನೆ ಪ್ರಾರಂಭವಾಗಿರುವುದು. ಪ್ರತಿಯೊಂದು ಋಕ್ಕಿನ ಪ್ರತಿಪಾದದಲ್ಲಿಯೂ ತ್ರಿ ಅಥವಾ ತ್ರಯಃ ಎಂಬ ಸಂಖ್ಯಾವಾಚಕಶಬ್ದವು ಸಾಧಾರಣವಾಗಿ ಇದ್ದೇ ಇರುವುದು. ಈ ರೀತಿ ಇರುವುದು ಛಂದಸ್ಸಿನ ಪ್ರಾಸವನ್ನು ಪ್ರೌಢವನ್ನಾಗಿ ಮಾಡಿರುವುದಲ್ಲದೆ ಈ ಅಶ್ವಿನೀದೇವತೆಗಳಿಗೆ ಸಂಬಂಧವಾದ ವಿಷಯಗಳು ಮೂರು ಮೂರು ಇವೆ ಎಂಬುದನ್ನು ವಿಶೇಷರೀತಿಯಿಂದ ಸ್ಪಷ್ಟಪಡಿಸುವುದಕ್ಕಾಗಿ ಒತ್ತಿ ಹೇಳಿರುವಂತೆ ಇದೆ. ಏಕೆಂದರೆ ಅಶ್ವಿನೀದೇವತೆಗಳ ರಥಕ್ಕೆ ಮೂರು ಚಕ್ರಗಳಿರುವುವು. ರಥದಲ್ಲಿ ಮೂರು ಕಂಭಗಳಿರುವುವು. ಈ ದೇವತೆಗಳನ್ನು ಪ್ರಾತಸ್ಸವನ ಮಾಧ್ಯಂದಿನ ಸವನ, ತೃತೀಯಸವನಗಳೆಂಬ ಮೂರು ಸವನಗಳಲ್ಲಿಯೂ ಆಹ್ವಾನಮಾಡುವರು. ಇವರ ವ್ಯಾಪ್ತಿಯು ಭೂಮಿ, ಅಂತರಿಕ್ಷ, ಸ್ವರ್ಗ ಎಂಬ ಮೂರು ಲೋಕಗಳಲ್ಲಿಯೂ ಇರುವುದು. ಇತ್ಯಾದಿ.

ಅಶ್ವಿನೀದೇವತೆಗಳ ವಿಷಯವಾಗಿ ಯಾಸ್ಕಮಹರ್ಷಿಗಳು ತಮ್ಮ ನಿರುಕ್ತದಲ್ಲಿ ಹೇಳಿರುವುದನ್ನು (ನಿ. ೧೨-೧.) ಇಲ್ಲಿ ಸಂಕ್ಷೇಪವಾಗಿ ವಿವರಿಸುವೆವು.—

(೧) **ಅಶ್ವಿನೌ । ಅಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯಃ**—

ಈ ದೇವತೆಗಳು ಸಮಸ್ತವನ್ನೂ ಉದಕದಿಂದ ಅಥವಾ ಪ್ರಕಾಶದಿಂದ ವ್ಯಾಪಿಸುವವರಾದ್ದರಿಂದ ಇವರಿಗೆ ಅಶ್ವಿನೀದೇವತೆಗಳೆಂದು ಹೆಸರು.

(೨) **ಅಶ್ವೈರಶ್ವಿನಾವಿತ್ಯೌರ್ಣವಾಭಃ ।** ಅಶ್ವೈಃ ಎಂದರೆ ಕುದುರೆಗಳಿಂದ ಯುಕ್ತರಾದ್ದರಿಂದ ಇವರಿಗೆ ಅಶ್ವಿನೀದೇವತೆಗಳೆಂದು ಹೆಸರು ಎಂದು ಔರ್ಣವಾಭ ಎಂಬ ಆಚಾರ್ಯರ ಮತವು.

(೩) **ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇ ॥** ಈ ಅಶ್ವಿನೀದೇವತೆಗಳು ಯಾರು ಎಂದು ಪ್ರಶ್ನೆ ಮಾಡಿದಲ್ಲಿ ಇವರು, ನಮಗೆ ಪ್ರತ್ಯಕ್ಷವಾಗಿ ಕಾಣಿಸುತ್ತಿರುವ ದ್ಯಾವಾಪೃಥಿವೀ ಎಂದರೆ ಭೂಮ್ಯಂತರಿಕ್ಷಗಳು ಎಂದು ಕೆಲವರು ಹೇಳುವರು.

(೪) **ಅಹೋರಾತ್ರಾವಿತ್ಯೇಕೇ ।** ಮತ್ತೆ ಕೆಲವರು ಇವರನ್ನು ಹಗಲು ರಾತ್ರಿಗಳೆಂದು ಹೇಳುವರು.

(೫) **ಸೂರ್ಯಚಂದ್ರಮಸಾವಿತ್ಯೇಕೇ ॥** ಇನ್ನೂ ಕೆಲವರು ಇವರನ್ನು ಸೂರ್ಯಚಂದ್ರರೆಂದು ಹೇಳುವರು.

(೬) **ರಾಜಾನೌ ಪುಣ್ಯಕೃತಾವಿತ್ಯೈತಿಹಾಸಿಕಾಃ ॥** ಪುಣ್ಯಕರ್ತೃಗಳಾದ ಇಬ್ಬರು ರಾಜರುಗಳೇ ಈ ಅಶ್ವಿನೀದೇವತೆಗಳು ಎಂದು ಇತಿಹಾಸಕಾರರ ಅಭಿಪ್ರಾಯವು.

(೭) **ತಯೋಃ ಕಾಲ ಊರ್ಧ್ವಮರ್ಧರಾತ್ರಾತ್ ಪ್ರಕಾಶೀಭಾವಸ್ಯಾನುವಿಷ್ಟಂಭಂ । ಅನುತ್ತಮೋ ಭಾಗೋ ಹಿ ಮಧ್ಯಮಃ ಜ್ಯೋತಿರ್ಭಾಗ ಆದಿತ್ಯಃ ॥** ಈ ಅಶ್ವಿನೀದೇವತೆಗಳ ಕಾಲವು ಎಂದರೆ ಇವರನ್ನು ಸಾಧಾರಣವಾಗಿ ಸ್ತೋತ್ರಮಾಡುವ ಕಾಲವು ಯಾವುದೆಂದರೆ ಅರ್ಧರಾತ್ರಿಯಿಂದ ಸೂರ್ಯೋದಯಪರ್ಯಂತರವಾದ ಕಾಲವು. ಈ ಕಾಲದಲ್ಲಿ ಕತ್ತಲೆಯು ಕ್ರಮವಾಗಿ ಕಮ್ಮಿಯಾಗಿ ಉಷಃಕಾಲವು (ಪ್ರಕಾಶವು) ಪ್ರಾರಂಭವಾಗುವ ಸಮಯವು ಮಧ್ಯಮಕಾಲವೆನ್ನಲ್ಪಡುವುದು. ಈ ಕಾಲದಲ್ಲಿಯೇ ಅಶ್ವಿನೀದೇವತೆಗಳನ್ನು ಪ್ರಾತರನುವಾಕಮಂತ್ರಗಳಿಂದ (ಆಶ್ವಿನಕ್ರತು) ಸ್ತೋತ್ರಮಾಡುವರು. ಇನ್ನು **ಜ್ಯೋತಿರ್ಭಾಗ ಆದಿತ್ಯಃ** ಎಂದರೆ ಚೆನ್ನಾಗಿ ಬೆಳಕಾದ ಮೇಲೆ ಆ ಕಾಲವು ಆದಿತ್ಯನಿಗೆ (ಸೂರ್ಯ) ಸೇರಿದ್ದಾಗಿರುವುದು. ಎಂದರೆ ಕತ್ತಲೆಯು ಹೋಗಿ ಬೆಳಕಾಗಿರುವ ಕಾಲದಲ್ಲಿ (ಆದಿತ್ಯಕ್ರತು) ಮಂತ್ರಗಳಿಂದ ಆದಿತ್ಯನನ್ನು ಪ್ರಾತರನುವಾಕಮಂತ್ರಗಳಿಂದ ಸ್ತೋತ್ರಮಾಡುವರು.

(೮) **ತಯೋಃ ಸಮಾನಕಾಲಯೋಃ ಸಮಾನಕರ್ಮಣೋಃ ಸಂಸ್ತುತಪ್ರಾಯಯೋಃ । ಅಸಂಸ್ತವೇನೈಷೋಽರ್ಧರ್ಚೋ ಭವತಿ ॥** ಅಶ್ವಿನೀದೇವತೆಗಳೆಂಬವರು ಇಬ್ಬರು. ಇವರಿಬ್ಬರನ್ನು ಸಮಾನ ಕಾಲದಲ್ಲಿ ಎಂದರೆ ಒಟ್ಟಿಗೆ ಒಂದೇಕಾಲದಲ್ಲಿ ಸ್ತೋತ್ರ ಮಾಡುವರು. ಇಬ್ಬರನ್ನು ಒಟ್ಟಿಗೆ ಉದ್ದೇಶಿಸಿ ಕರ್ಮ ಮಾಡು

ವರು. ಆದುದರಿಂದ ಈ ರೀತಿ ಇಬ್ಬರನ್ನು ಸ್ತುತಿಸುವ ಮಂತ್ರಗಳಿಗೆ ಸಂಸ್ತವಮಂತ್ರಗಳೆಂದು ಹೆಸರು. ಸಂಸ್ತವ ಮಂತ್ರವಿಲ್ಲದಿರುವ ಋಕ್ಕಿನಲ್ಲಿ ಈ ಇಬ್ಬರಲ್ಲಿ ಪ್ರತಿ ಒಬ್ಬರಿಗೂ ಅರ್ಧಋಕ್ಕಿನಿಂದ ಸ್ತೋತ್ರ ಮಾಡಲ್ಪಟ್ಟಿರುವುದೆಂದು ತಿಳಿಯಬೇಕು.

(೯) **ವಾಸಾತ್ಯೋ ಅನ್ಯ ಉಚ್ಯತ ಉಷಃಪುತ್ರಸ್ತ್ವಾನ್ಯ ಇತಿ ||** ವಸಾತಿಷು ಸ್ಮ ಚರಥಃ ಎಂಬ ಋಕ್ಕಿನಲ್ಲಿ ಹೇಳಿರುವುದನ್ನು ಕೆಲವರು ಈ ರೀತಿ ವಿವರಿಸುವರು— ವಸಾತಯಃ ಎಂಬುವರು ಪ್ರಸಿದ್ಧರಾದ ಜನಾಂಗವು. ಆ ಜನಪದಕ್ಕೆ ಅಧಿಪತಿಗಳಾದ ಪುಣ್ಯಕರ್ತಗಳಾದ ಅಶ್ವಿನೌ ಎಂಬ ಇಬ್ಬರು ರಾಜರ ವಿಷಯವನ್ನು ಈ ಋಕ್ಕಿನಲ್ಲಿ ಹೇಳಿರುವುದು ಎಂದು. ಆದರೆ ಈ ವಿಧವಾದ ಅರ್ಥವು ಸರಿಯಲ್ಲ ಎಂಬುದನ್ನು ಸ್ಪಷ್ಟಪಡಿಸುವುದಕ್ಕಾಗಿ ಮೇಲೆ ಹೇಳಿದ **ವಾಸಾತ್ಯೋ ಅನ್ಯ ಉಚ್ಯತ ಉಷಃಪುತ್ರಸ್ತ್ವಾನ್ಯ ಇತಿ |** ಎಂಬ ವಾಕ್ಯವನ್ನು ಹೇಳಿರುವರು. ಎಂದರೆ ಈ ಅಶ್ವಿನೀದೇವತೆಗಳಲ್ಲಿ ಒಬ್ಬನು ವಸಾತಿಯ ಪುತ್ರನು. ವಸಾತಿ ಎಂದರೆ ರಾತ್ರಿಯು, ವಾಸಾತ್ಯ ಎಂದರೆ ರಾತ್ರಿಯ ಪುತ್ರನು, ಮತ್ತೊಬ್ಬನು ಉಷಃಪುತ್ರನು ಎಂದು ಈ ಋಕ್ಕಿನ ಅರ್ಥವು. ಈ ಅಶ್ವಿನೀದೇವತೆಗಳಿಗೆ ರಾತ್ರಿ ಹಗಲು ಎಂಬ ಎರಡು ಕಾಲಗಳ ಸಂಬಂಧವೂ ಇರುವುದರಿಂದ ಒಬ್ಬನು ರಾತ್ರಿಪುತ್ರನೆಂದೂ ಮತ್ತೊಬ್ಬನು ಹಗಲಿನ ಎಂದರೆ ಉಷಃಕಾಲದ ಪುತ್ರನೆಂದೂ ಹೇಳುವುದು ರೂಢಿಯಾಗಿರುವುದು.

ಮೇಲೆ ಹೇಳಿದ ವಿಷಯಗಳನ್ನು ಸಮರ್ಥಿಸುವುದಕ್ಕಾಗಿ ಯಾಸ್ಕರು ಈ ಕೆಳಗಿನ ಋಕ್ಕುಗಳನ್ನು ಉದಾಹರಣೆಯಾಗಿ ಕೊಟ್ಟಿರುವರು—

(೧) **ವಸಾತಿಷು ಸ್ಮ ಚರಥೋಽಸಿತೌ ಪೇತ್ವಾವಿವ |**
**ಕದೇದಮಶ್ವಿನಾ ಯುವಮಭಿ ದೇವಾ ಅಗಚ್ಛತಂ ||**

(೨) **ಇಹೇಹ ಜಾತಾ ಸಮವಾವಶೀತಾಮರೇಪಸಾ ತನ್ವಾ ೩ ನಾಮಭಿಃ ಸ್ವೈಃ |**
**ಜಿಷ್ಣುರ್ವಾಮನ್ಯಃ ಸುಮಖಸ್ಯ ಸೂರಿರ್ದಿವೋ ಅನ್ಯಃ ಸುಭಗಃ ಪುತ್ರ ಊಹೇ ||**

(ಋ. ಸಂ. ೧-೧೮೧-೪)

ಅಶ್ವಿನೀದೇವತೆಗಳನ್ನು ಪ್ರಾತರನುವಾಕಮಂತ್ರಪಠನ ಕಾಲದಲ್ಲಿ ಸಂಸ್ತವಿಕಮಂತ್ರಗಳಿಂದ ಎಂದರೆ ಇಬ್ಬರನ್ನೂ ಒಟ್ಟಾಗಿ ಸೇರಿಸಿ ಸ್ತುತಿಸುವ ಮಂತ್ರಗಳ ಉದಾಹರಣೆಗಾಗಿ ಈ ಕೆಳಗಿನ ಋಕ್ಕುಗಳನ್ನು ಉದಹರಿಸಿರುವರು–

(೧) **ಪ್ರಾತರ್ಯುಜಾ ವಿ ಬೋಧಯಾಶ್ವಿನಾವೇಹ ಗಚ್ಛತಾಂ |**
**ಅಸ್ಯ ಸೋಮಸ್ಯ ಪೀತಯೇ ||**

(ಋ. ಸಂ. ೧-೨೨-೧.)

(೨) **ಪ್ರಾತರ್ಯಜಧ್ವಮಶ್ವಿನಾ ಹಿನೋತ ನ ಸಾಯಮಸ್ತಿ ದೇವಯಾ ಅಜುಷ್ಟಂ |**
**ಉತಾನ್ಯೋ ಅಸ್ಮದ್ಯಜತೇ ವಿ ಚಾವಃ ಪೂರ್ವಃಪೂರ್ವೋ ಯಜಮಾನೋ ವನೀಯಾನ್ ||**

(ಋ. ಸಂ. ೫-೭೭-೨.)

ಗ್ರಂಥವಿಸ್ತರ ಭಯದಿಂದ ಈ ಋಕ್ಕುಗಳ ಅರ್ಥ ವಿವರಣೆಯು ಇಲ್ಲಿ ಅಪ್ರಕೃತವು. ಆಯಾ ಸಂದರ್ಭಗಳಲ್ಲಿ ಅದನ್ನು ವಿವರಿಸಲಾಗುವುದು.

**ನವೇದಸಾ**— ಸಕಾರಾಂತ **ನವೇದಸ್** ಎಂಬ ಶಬ್ದದ (ಸಂಬುದ್ಧಿ) ಪ್ರಥಮಾದ್ವಿವಚನ. ನವೇದಸಾ ಎಂಬ ಶಬ್ದದ ವೈದಿಕರೂಪಾತಂರ **ನವೇದಸಾ**ವಿಪ್ರಃ ವಿಗ್ರಃ ಮೊದಲಾದ ಇಪ್ಪತ್ತುನಾಲ್ಕು ಮೇಧಾವಿನಾಮಗಳ ಮಧ್ಯದಲ್ಲಿ **ನವೇದಾಃ** ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೫.) **ನವೇದಸಾ** ಎಂದರೆ ಮೇಧಾವಿಗಳಾದ, ಬುದ್ಧಿವಂತರಾದ ಎಂದರ್ಥವು.

**ತ್ರಿಷ್ಠಿತ್— ತ್ರಿವಾರಂ ।** ಮೂರಾವರ್ತಿ ಎಂದರೆ ಪ್ರಾತಃಕಾಲ, ಮಧ್ಯಾಹ್ನಕಾಲ, ಸಾಯಂಕಾಲಗಳೆಂಬ ಮೂರು ಕಾಲಗಳು ಅಥವಾ ಸವನತ್ರಯಗಳು.

**ಅದ್ಯ**— ಈಗ ಅಥವಾ ನಾವು ಮಾಡುತ್ತಿರುವ ಈ ಯಜ್ಞಕರ್ಮದಲ್ಲಿ

**ವಿಭುಃ— ವ್ಯಾಪ್ತಃ ।** ವ್ಯಾಪಿಸಿರುವುದು.

**ಯಾಮಃ— ಯಾಯತೇ ಗಮ್ಯತೇऽನೇನೇತಿ ಯಾಮೋ ಗಮನಸಾಧನಭೂತೋ ರಥಃ ।** ಯಾ ಎಂಬ ಧಾತುವಿಗೆ ಗತ್ಯರ್ಥವಿರುವುದು. ಯಾಮಃ ಎಂದರೆ ಇದರಲ್ಲಿ ಕುಳಿತು ಹೋಗುವುದಕ್ಕೆ ಸಾಧನಭೂತವಾಗಿರುವುದರಿಂದ ಯಾಮಃ ಎಂದರೆ ರಥವು

**ರಾತಿಃ— ರಾ ದಾನೇ ।** ರಾ-ಕೊಡು ಎಂಬ ಧಾತುವಿನಿಂದ ಉಂಟಾದ ರಾತಿಃ ಎಂಬ ಈ ಶಬ್ದಕ್ಕೆ ದಾನವೆಂದಭಿಪ್ರಾಯವು.

**ಯಂತ್ರಂ**— ಸಂಬಂಧವಿಶೇಷವು, ಎಂದರೆ ಇಬ್ಬರು ಅಶ್ವಿನೀದೇವತೆಗಳಿಗೆ ಪರಸ್ಪರ ಇರುವ ಸಂಬಂಧವು.

**ಹಿಮ್ಯೇವ ವಾಸಸಃ**—ಶ್ಯಾವೀ ಕ್ಷಪಾ ಮೊದಲಾದ ಇಪ್ಪತ್ತಮೂರು ರಾತ್ರಿ ನಾಮಗಳ ಮಧ್ಯದಲ್ಲಿ ಹಿಮಾ ಎಂಬ ಶಬ್ದವು ಪಠಿತವಾಗಿರುವುದರಿಂದ ಹಿಮಾ ಎಂದರೆ ರಾತ್ರಿಯು ಅಥವಾ ಮಂಜು (ಹಿಮ) ದಿಂದ ಕೂಡಿದ ರಾತ್ರಿಯು. **ವಾಸಸಃ— ಸೂರ್ಯರಶ್ಮ್ಯಾಚ್ಛಾದನಯುಕ್ತಸ್ಯ ವಾಸರಸ್ಯ** ಎಂದರೆ ಸೂರ್ಯರಶ್ಮಿ ಅಥವಾ ಬಿಸಿಲಿನಿಂದ ಕೂಡಿದ ಹಗಲು ಎಂದರ್ಥವು. ಆದುದರಿಂದ ಹಿಮ್ಯೇವವಾಸಸಃ ಎಂಬ ಉಪಮಾನಕ್ಕೆ ಮಂಜಿನಿಂದ ಕೂಡಿದ ರಾತ್ರಿಗೂ ಬಿಸಲಿನಿಂದ ಕೂಡಿದ ಹಗಲಿಗೂ ಇರುವ ಸಂಬಂಧದಂತೆ ನಿಮ್ಮಿಬ್ಬರ ಸಂಬಂಧವಿರುವುದು ಎಂದಭಿಪ್ರಾಯವು. ರಾತ್ರಿಯೂ ಹಗಲೂ ಒಂದಾಗುತ್ತಲೊಂದು ಬರುವುದರಿಂದ ಅವುಗಳಿಗೆ ಪರಸ್ಪರ ಸಂಬಂಧವಿರುವಂತೆ ಅಶ್ವಿನೀದೇವತೆಗಳಾದ ನಿಮ್ಮಿಬ್ಬರಿಗೂ ಸಂಬಂಧವಿರುವುದೆಂದಭಿಪ್ರಾಯವು.

**ಅಭ್ಯಾಯಂಸೇನ್ಯಾ— ಅಭಿತೋ ನಿಯಂತವ್ಯೌ ಅನುಗ್ರಹ ವಶಾತ್ತದಧೀನೌ ।** ಎಂದರೆ ಮುಂದುಗಡೆ ಅಧೀನವಾಗಿರುವವರು, ಯಜ್ಞ ಮಾಡುವವರ ಅನುಗ್ರಹಾರ್ಥವಾಗಿ ಅವರ ಅಧೀನರಾಗಿರುವವರು. ಇತ್ಯಾದಿ.

**ಮನೀಷಿಭಿಃ— ಮೇಧಾವಿಭಿಃ ಋತ್ವಿಗ್ಭಿಃ ।** ಬುದ್ಧಿವಂತರಾದ ಜನರಿಂದ ಅಥವಾ ಋತ್ವಿಗಾದಿ ಜನರಿಂದ.

॥ ವ್ಯಾಕರಣಪ್ರಕ್ರಿಯಾ ॥

**ಅದ್ಯ**—ಅಸ್ಮಿನ್ ಅಹನಿ ಎಂದು ವಿಗ್ರಹ. **ಸದ್ಯಃ ಪರುತ್ಪರಾರ್ಯೈಷಮಃ ಪರೇದ್ಯವ್ಯದ್ಯ—,** (ಪಾ. ಸೂ. ೫-೩-೨೨) ಈ ಸೂತ್ರದಲ್ಲಿರುವ ಶಬ್ದಗಳು ನಿಪಾತಿಸಲ್ಪಡುವುವು ಎಂದರ್ಥ. ಭಾಷ್ಯಕಾರರು ನಿಪಾತನ ಕಾರ್ಯಗಳನ್ನು ಸ್ಪಷ್ಟಪಡಿಸಿರುವರು, **ಇದಮೋಽಶ್ದ್ಯಶ್ಚ** ಸಪ್ತಮ್ಯಂತವಾದ ಇದಮ್ ಶಬ್ದದ ಮುಂದೆ ದ್ಯಪ್ರತ್ಯಯವೂ ಇದಮ್ ಶಬ್ದಕ್ಕೆ ಅಶ್ ಆದೇಶವೂ ಬರುತ್ತೆ ಎಂದು ಅವು ಬಂದರೆ ಅದ್ಯ ಎಂದಾಗುತ್ತೆ. **ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಮಂತ್ರದಲ್ಲಿರುವ ನಿಪಾತಕ್ಕೆ ಸಂಹಿತಾಕಾಲದಲ್ಲಿ ದೀರ್ಘಬರುತ್ತೆ ಎಂದು ಸಂಹಿತಾಕಾಲದಲ್ಲಿ ದೀರ್ಘಬರುತ್ತೆ.

**ನವೇದಸಾ**—ವಿಪರೀತಂ ನ ವಿತ್ತಃ ಇತಿ ನವೇದಸೌ ಎಂದು ವಿಗ್ರಹ, ವಿಪರೀತವಾಗಿ ತಿಳಿಯದವರು ಎಂದರ್ಥ. ವಿದ ಜ್ಞಾನೇ ಧಾತು, **ಸರ್ವಧಾತುಭ್ಯೋಽಸುನ್** (ಉ. ಸೂ. ೪-೬೨೮) ಎಂದು ಅಸುನ್, ನ ವೇದಸೌ ಎಂದು ನಞ್ತತ್ಪುರುಷ, **ನಭ್ರಾಣ್ನಪಾನ್ನವೇದಾ—.** (ಪಾ. ಸೂ. ೬-೩-೭೫) ಎಂದು ಪ್ರಕೃತಿಭಾವವನ್ನು ವಿಧಿಸಿದೆ, ಆದ್ದರಿಂದ **ನಲೋಪೋನಞಃ** (ಪಾ. ಸೂ. ೬-೩-೭೩) ಎಂದು ನಕಾರಕ್ಕೆ ಲೋಪ ಬರುವುದಿಲ್ಲ. ಸಂಬೋಧನ ದ್ವಿವಚನ ಔಪ್ರತ್ಯಯಕ್ಕೆ **ಸುಪಾಂ ಸುಲುಕ್—,**(ಪಾ. ಸೂ. ೭-೧-೩೯) ಎಂದು ಆಕಾರಾದೇಶ, ಇದಕ್ಕೆ **ಸಾಮನ್ತ್ರಿತಮ್** (ಪಾ. ಸೂ. ೨-೩-೪೮) ಸಂಬೋಧನಪ್ರಥಮಾವಿಭಕ್ತ್ಯಂತವು ಆಮನ್ತ್ರಿತಸಂಜ್ಞೆಯನ್ನು ಹೊಂದುವುದು. ಎಂದು ಇದಕ್ಕೆ ಆಮನ್ತ್ರಿತಸಂಜ್ಞೆ ಇದೆ. **ಆಮನ್ತ್ರಿತಸ್ಯ ಚ** (ಪಾ. ಸೂ. ೮-೧-೧೯) ಪದದ ಮುಂದೆ ಇರುವುದೂ ಪಾದದ ಆದಿಯಲ್ಲಿಲ್ಲದುದೂ ಆದ ಆಮನ್ತ್ರಿತಕ್ಕೆ ಸರ್ವಕ್ಕೂ ಅನುದಾತ್ತ ಬರುತ್ತೆ ಎಂದು ಸರ್ವಾನುದಾತ್ತ.

**ಯಾಮಃ**—**ಅರ್ತಿಸ್ತು ಸು ಹು ಸೃ ಧೃ ಕ್ಷಿ ಕ್ಷು ಭಾ ಯಾ ವಾ ಪದಿ ಯಕ್ಷಿ ನೀಭ್ಯೋ ಮನ್** (ಉ. ಸೂ. ೧-೧೩೭) ಈ ಹದಿನಾಲ್ಕು ಧಾತುಗಳ ಮುಂದೆ ಮನ್ ಬರುತ್ತೆ ಎಂದು ಯಾ (ಪ್ರಾಪಣೇ) ಎಂಬ ಧಾತುವಿನ ಮುಂದೆ ಮನ್ ಪ್ರತ್ಯಯ, ಮೇದಿನೀಕೋಶದಲ್ಲಿ-ಯಾಮುಸ್ತು ಪುಂಸಿ ಪ್ರಹರೇ ಸಂಯಮೇಽಪಿ ಪ್ರಕೀರ್ತಿತಃ ಎಂದಿದೆ, ಇಲ್ಲಿ ಅವಯವಾರ್ಥವನ್ನು ಇಟ್ಟುಕೊಂಡು ಯಾಯತೇ ಗಮ್ಯತೇ ಎಂಬ ವ್ಯುತ್ಪತ್ತಿಯಿಂದ ರಥ ಎಂದು ಅರ್ಥವು ಹೇಳಲ್ಪಟ್ಟಿದೆ. ನಿತ್ಸ್ವರ ಆದ್ಯುದಾತ್ತಬರುತ್ತೆ. ಯಮು ಉಪರಮೇ ೧ನೇ ಗಣ. ಯಮ್ಯತೇ ಉಪರಮ್ಯತೇ ಇದಮಿತಿ ಯಾಮಃ, ತನ್ನ ಕೆಲಸವಾದನಂತರ ಒಂದು ಕಡೆಯಲ್ಲಿ ನಿಲ್ಲುವುದರಿಂದ ವಿರಮಣಕ್ರಿಯಾ ಕರ್ಮತ್ವವು ರಥಕ್ಕೆ ಬರುತ್ತೆ. ಕರ್ಮಾರ್ಥದಲ್ಲಿ ಘಞ್, ಉಪಧಾವೃದ್ಧಿ, **ಕರ್ಷಾತ್ವತೋ ಘಞಂತ ಉದಾತ್ತಃ** (ಪಾ. ಸೂ. ೬-೧ ೧೫೯) ಕರ್ಷಧಾತು, ಆಕಾರವನ್ನು ಹೊಂದಿರುವ ಧಾತು, ಇವುಗಳ ಮುಂದೆ ಘಞ್ ಬಂದರೆ, ಆ ಘಞಂತವು ಉದಾತ್ತವಾಗುತ್ತೆ ಎಂದು ಅಂತೋದಾತ್ತ ಪ್ರಾಪ್ತವಾದರೂ ಇದಕ್ಕೆ ಅಪವಾದವಾದ **ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತ ಬರುತ್ತೆ.

**ರಾತಿಃ**—ರಾ ಆದಾನೇ. **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಲ್ಲಾ ಧಾತುಗಳ ಮುಂದೆಯೂ ಸ್ತ್ರೀಲಿಂಗದಲ್ಲಿ ಭಾವಾರ್ಥದಲ್ಲಿಯೂ, ಕರ್ತೃಭಿನ್ನಕಾರಕಾರ್ಥದಲ್ಲಿಯೂ ಕ್ತಿನ್ ಬರುತ್ತೆ ಎಂದು ಕ್ತಿನ್. **ತಿತುತ್ರ—,**

(ಪಾ. ಸೂ. ೭-೨-೯) ಎಂದು ಇಡಾಗಮಕ್ಕೆ ನಿಷೇಧ **ಮನ್ತ್ರೇ ವೃಷೇ ಷ ಪಚಮನವಿದ ಭೂವೀರಾ ಉದಾತ್ತಃ** (ಪಾ. ಸೂ. ೩-೩-೯೬) ಎಂದು ರಾಧಾತು ಮುಂದೆ ಇರುವ ಕ್ತಿನ್ ಉದಾತ್ತ.

**ಯುವೋಃ—ಯುಷ್ಯಸಿಭ್ಯಾಂ ಮದಿಕ್**—(ಉ. ಸೂ. ೧–೧೩೬) ಎಂದು ಯುಷ್ ಎಂಬ ಸೌತ್ರ ಧಾತುವಿನ ಮುಂದೆ ಮದಿಕ್, ಯುಷ್ಮದ್ ಪ್ರತ್ಯಯ ಸ್ವರದಿಂದ ಅಂತೋದಾತ್ತ, ಷಷ್ಠೀದ್ವಿವಚನ ಓಸ್, ಯುಷ್ಮದ್+ ಓಸ್, **ಸುಪಾಂ ಸುಲುಕ್**—(ಪಾ.ಸೂ. ೭-೧-೩೯) ಇಲ್ಲಿ **ಸುಪಾಂ ಚ ಸುಪೋ ಭವಂತಿ** ಎಂದು ಮಹಾಭಾಷ್ಯದಲ್ಲಿ ವಚನವಿದೆ, ಈ ಸೂತ್ರದಲ್ಲಿ ಸುಪ್ಪುಗಳ ಸ್ಥಾನದಲ್ಲಿ ಸು ಆದೇಶ ಬರುತ್ತೆ ಎಂದಿಷ್ಟು ಏರ್ಪಟ್ಟರೂ ಎಲ್ಲಾ ಸುಪ್ಪುಗಳೂ ಆದೇಶವಾಗಿ ಬರಲಾರವು, ಇದಕ್ಕಾಗಿ ವಿಶೇಷವಚನವು ಹೊರಟಿದೆ. ಇದರಂತೆ ಇನ್ನೂ ಅನೇಕ ವಚನಗಳು ಈ ಸೂತ್ರ ಭಾಷ್ಯದಲ್ಲಿವೆ, ಇವೆಲ್ಲವೂ **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರ ವಿವರಣವಾಕ ಗಳೆಂದು ತಿಳಿಯಬೇಕು. ಪ್ರಕೃತ ಸುಪ್ಪುಗಳ ಸ್ಥಾನದಲ್ಲಿ ಸುಪ್ಪುಗಳು ಅಂದರೆ ಸು ಮೊದಲಾದ ಇಪ್ಪತ್ತೊಂದು ಪ್ರತ್ಯಯಗಳು ಆದೇಶವಾಗಿ ಬರುವುವು ಎಂದು ಅರ್ಥವುಳ್ಳ **ಸುಪಾಂ ಸುಪೋ ಭವನ್ತಿ** ಎಂಬುದರಿಂದ ಷಷ್ಠೀದ್ವಿವಚನ ಓಸ್ ಎಂಬ ಸುಪ್ಪಿಗೆ ಅದೇ ಷಷ್ಠೀ ದ್ವಿವಚನ ಓಸ್ ಆದೇಶವಾಗಿ ಬರುತ್ತೆ, ಹೀಗೆ ಆದೇಶ ಬರುವುದರಿಂದ ಓಸ್ ಎಂಬುದು ಆದೇಶವನ್ನು ಹೊಂದಿದ ವಿಭಕ್ತಿಯಾಗುತ್ತೆ, ಏವಂಚ **ಯೋಽಚಿ** (ಪಾ. ಸೂ. ೭–೨-೮೯) ಆದೇಶವನ್ನು ಹೊಂದದ ಅಜಾದಿಯಾದ ವಿಭಕ್ತಿಯು ಪರದಲ್ಲಿದ್ದರೆ ಯುಷ್ಮದಸ್ಮಚ್ಛಬ್ದಗಳ ಅಂತ್ಯಕ್ಕೆ ಯಕಾರಾದೇಶ ಬರುತ್ತೆ ಎಂದು ದಕಾರಕ್ಕೆ ಯಾದೇಶ ಬರುವುದಿಲ್ಲ. **ಶೇಷೇ ಲೋಪಃ** (ಪಾ. ಸೂ. ೭-೨-೯೦) ಸ್ಥಾನಿಯನ್ನು ಅಧಿಕರಣ ಎಂದು ವಿವಕ್ಷಿಸಿ ಶೇಷೇ ಎಂಬಲ್ಲಿ ಸಪ್ತಮಿ ಬಂದಿದೆ. ಶೇಷೇ ಎಂಬುದಕ್ಕೆ ಶಿಷ್ಟಸ್ಯ ಎಂದರ್ಥ, ಏವಂಚ ವಿಭಕ್ತಿ ಪರದಲ್ಲಿದ್ದರೆ ಯುಷ್ಮದಸ್ಮಚ್ಛಬ್ದಗಳ ಮಪರ್ಯಕ್ಕಿಂತಲೂ ಮುಂದೆ ಮಿಕ್ಕಿರುವ ಅದ್ ಎಂಬುದಕ್ಕೆ ಲೋಪ ಬರುತ್ತೆ ಎಂದು ಒಂದು ಅರ್ಥ, ಹೀಗೆ ಅದ್‌ಗೆ ಲೋಪ ಬಂದರೆ ಟಿಲೋಪವಾಯಿತು. ಆದ್ದರಿಂದ ಇದಕ್ಕೆ ಟಿಲೋಪಪಕ್ಷ ಎನ್ನುವರು.

ಶೇಷೇ ಎಂಬುದು ವಿಭಕ್ತೌ ಎಂಬುದಕ್ಕೆ ವಿಶೇಷಣ, ಶೇಷೇ ವಿಭಕ್ತೌ ಎಂದರೆ ಆತ್ವಯತ್ವಗಳಿಗೆ ನಿಮಿತ್ತ ವಾಗದ ವಿಭಕ್ತಿ ಪರದಲ್ಲಿರುವಾಗ ಯುಷ್ಮದಸ್ಮದ್ ಶಬ್ದಗಳಿಗೆ ಲೋಪಬರುತ್ತೆ ಎಂದು ಮತ್ತೊಂದರ್ಥ, ಈ ಪಕ್ಷದಲ್ಲಿ **ಅಲೋಂತ್ಯಸ್ಯ** (ಪಾ. ಸೂ. ೧-೧-೫೨) ಎಂಬ ಪರಿಭಾಷೆಯಿಂದ ಕೊನೆಯಲ್ಲಿರುವ ದಕಾರಕ್ಕೆ ಲೋಪ ಬರುತ್ತೆ. ಇದನ್ನು ಅಂತ್ಯಲೋಪಪಕ್ಷ ಎನ್ನುವರು. ಪ್ರಥಮಪಕ್ಷದಲ್ಲಿ ಆತ್ವಯತ್ವಗಳು ಲೋಪಕ್ಕೆ ಅಪವಾದಗಳು, ಆದ್ದರಿಂದ ಅವು ಬರುವ ಕಡೆ ಲೋಪ ಬರುವುದಿಲ್ಲ, ಯುವದ್+ಓಸ್ ಎಂಬಲ್ಲಿ ಮೊದಲನೇ ಅರ್ಥದಂತೆ ಅದ್‌ಗೆ ಲೋಪಬಂದರೆ **ಅನುದಾತ್ತಸ್ಯ ಚ ಯತ್ರೋ ದಾತ್ತಲೋಪಃ** (ಪಾ.ಸೂ. ೬-೧-೧೬೧) ಯಾವ ಅನುದಾತ್ತವು ಪರ ದಲ್ಲಿರುವಾಗ ಉದಾತ್ತಕ್ಕೆ ಲೋಪಬಂದಿದೆಯೋ ಆ ಅನುದಾತ್ತವು ಉದಾತ್ತವಾಗುತ್ತೆ ಎಂಬ ಉದಾತ್ತನಿವೃತ್ತಿ ಸ್ವರದಿಂದ ಓ ಎಂಬುದು ಉದಾತ್ತ. ಅಂತ್ಯಲೋಪಪಕ್ಷದಲ್ಲಿ ಯುವ+ಓಸ್ ಎಂದಿರುವಾಗ ಛಾಂದಸವಾಗಿ ಪರರೂಪವು ಏಕಾದೇಶವಾಗಿ ಬರುತ್ತೆ, ಹೀಗಲ್ಲದೆ **ಓಸಿಚ** (ಪಾ ಸೂ. ೭-೩-೧–೪) ಎಂದು ಏತ್ವವನ್ನು ಹೇಳಿದರೆ ಟಿಲೋಪಾಂತ್ಯಲೋಪಪಕ್ಷಗಳಿಗೆ ಫಲಭೇದ ಬರುವುದು. **ಏಕಾದೇಶ ಉದಾತ್ತೇನ—,** ಎಂಬುದರಿಂದ ಓ ಎಂಬುದು ಉದಾತ್ತ.

**ಹಿಮ್ಯಾಽಇವ**—ಊಧಃ ಪಯಃ ಹಿಮಾ, (ನಿ. ೧-೭-೨೨) ಎಂಬ ನಿರುಕ್ತದಲ್ಲಿ ರಾತ್ರಿವಾಚಕಪದಗಳ ಮಧ್ಯೆ ಹಿಮ್ಯಾಪದವಿದೆ, ಆದ್ದರಿಂದ ಅದಕ್ಕೆ ರಾತ್ರಿ ಎಂದರ್ಥ. **ಹನೇರ್ಹಿಚ** (ಉ. ಸೂ. ೧-೧೪೪) ಹನ ಹಿಂಸಾಗತ್ಯೋಃ ಎಂಬ ಧಾತುವಿನ ಮುಂದೆ ಮಕ್‌ಪ್ರತ್ಯಯವೂ ಹನ್‌ಗೆ ಹಿ ಆದೇಶವೂ ಬರುತ್ತೆ, ಎಂದು ಅವು ಬಂದರೆ ಹಿಮ ಎಂದಾಗುತ್ತೆ. ಪ್ರತ್ಯಯವು ಕಿತ್ತಾದ್ದರಿಂದ ಗುಣ ಬರುವುದಿಲ್ಲ. ಹಂತಿ ಪದ್ಮಾನಿ ಇತಿ ಹಿಮಂ ಎಂದು ವಿಗ್ರಹ, ಮಂಜು ಎಂದು ಅರ್ಥ. ಹಿಮಂ ಅಸ್ಯಾ ಅಸ್ತಿ ಎಂದು ವಿವಕ್ಷಿಸಿದರೆ **ಅರ್ಶ ಆದಿಭ್ಯೋಽಚ್** (ಪಾ. ಸೂ. ೫-೨-೧೨೭) ಎಂಬುದರಿಂದ ಅಚ್ ಪ್ರತ್ಯಯ, ಟಾಪ್, ಹಿಮಾ ಎಂದಾಗುತ್ತೆ, ಮಂಜುಳ್ಳ ರಾತ್ರಿ ಎಂದರ್ಥ. ಇಲ್ಲಿ ಪ್ರತ್ಯಯಸ್ವರದಿಂದ ಹಿಮಶಬ್ದ ಅಂತೋದಾತ್ತ, ಪಿತ್ತಾದ್ದರಿಂದ ಟಾಪ್ ಅನುದಾತ್ತ, ಸವರ್ಣದೀರ್ಘವು ಏಕಾದೇಶ ಸ್ವರದಿಂದ ಉದಾತ್ತ, ಇದರ ಮುಂದೆ ತೃತೀಯಾಏಕವಚನ ಟಾಪ್ರತ್ಯಯ, ಅದಕ್ಕೆ **ಸುಪಾಂ ಸುಲುಕ್ಪೂರ್ವಸವರ್ಣಾಚ್ಛೇಯಾಡಾಡ್ಯಾಯಾ ಜಾಲಃ** (ಪಾ. ಸೂ. ೭-೧-೩೯) ಎಂದು, ಡ್ಯಾ ಆದೇಶ, ಡಿತ್ಕರಣದಿಂದ ಟಿಲೋಪ, ಹಿಮ್ಯಾ ಎಂದಾಗುತ್ತೆ. ಉದಾತ್ತನಿವೃತ್ತಿಸ್ವರದಿಂದ ಯಾ ಎಂಬುದು ಉದಾತ್ತ. **ಇವೇನ (ಸಮಾಸೋ) ವಿಭಕ್ತ್ಯಲೋಪಃ ಪೂರ್ವಪದಪ್ರಕೃತಿಸ್ವರತ್ವಂ ಚ** (ಪಾ. ಸೂ. ೨-೧-೪-೨) ಎಂದು ಸಮಾಸ ಬರುತ್ತೆ.

**ವಾಸಸಃ**—ವಸ ಆಚ್ಛಾದನೇ ಧಾತು, ಆಚ್ಛಾದನ ಎಂದರೆ ಮುಚ್ಚುವುದು ಅಥವಾ ಹೊದಿಸುವುದು ಎಂದರ್ಥ. ಪ್ರಕಾಶದಿಂದ ಆಚ್ಛಾದನೆಮಾಡುವುದರಿಂದ ವಾಸಃಪದದಿಂದ ಅಹಸ್ಸು ಬೋಧಿತವಾಗುತ್ತೆ. ಣಿಜಂತವಾದ ವಸಧಾತುವಿನ ಮುಂದೆ ಔಣಾದಿಕವಾದ ಅಸುನ್ ಪ್ರತ್ಯಯ, ಉಪಧಾವೃದ್ಧಿ, ಣಿಲೋಪ, ಜಸ್, ರುತ್ವ-ವಿಸರ್ಗ.

**ಅಭ್ಯಾಯಂಸೇನ್ಯಾ**—ಅಭಿ-ಆಙ್ ಎಂಬ ಎರಡು ಉಪಸರ್ಗಗಳ ಮುಂದೆ ಇರುವ ಯಮು ಉಪರಮೇ, ಧಾತುವಿನ ಮುಂದೆ ಔಣಾದಿಕವಾದ ಸೇನ್ಯಪ್ರತ್ಯಯ ಅಭಿ+ಆ+ಯಮ್+ಸೇನ್ಯ ಯಣಾದೇಶ ಅಭ್ಯಾಯಮ್+ಸೇನ್ಯ, **ನಶ್ಚಾಪದಾಂತಸ್ಯ—,** (ಪಾ. ಸೂ. ೮-೩-೨೪) ಎಂದು ಮಕಾರಕ್ಕೆ ಅನುಸ್ವಾರ, ಪ್ರಥಮಾದ್ವಿವಚನಕ್ಕೆ **ಸುಪಾಂ ಸುಲುಕ್** ಎಂದು ಆಕಾರಾದೇಶ ‖ ೧ ‖



‖ ಸಂಹಿತಾಪಾಠಃ ‖

ತ್ರಯಃ ಪವಯೋ ಮಧುವಾಹನೇ ರಥೇ ಸೋಮಸ್ಯ ವೇನಾಮನು ವಿಶ್ವ ಇದ್ವಿದುಃ ।

ತ್ರಯಃ ಸ್ಕಂಭಾಸಃ ಸ್ಕಭಿತಾಸ ಆರಭೇ ತ್ರಿರ್ನಕ್ತಂ ಯಾಥಸ್ತ್ರಿರ್ವ-
ಶ್ವಿನಾ ದಿವಾ ॥ ೨ ॥

॥ ಪದಪಾಠಃ ॥

ತ್ರಯಃ । ಪವಯಃ । ಮಧುಽವಾಹನೇ । ರಥೇ । ಸೋಮಸ್ಯ । ವೇನಾಂ ।
ಅನು । ವಿಶ್ವೇ । ಇತ್ । ವಿದುಃ ॥
ತ್ರಯಃ । ಸ್ಕಂಭಾಸಃ । ಸ್ಕಭಿತಾಸಃ । ಆಽರಭೇ । ತ್ರಿಃ । ನಕ್ತಂ । ಯಾಥಃ ।
ತ್ರಿಃ । ಊಂ ಇತಿ । ಅಶ್ವಿನಾ । ದಿವಾ ॥ ೨ ॥

॥ ಸಾಯಣಭಾಷ್ಯಂ ॥

ಮಧುವಾಹನೇ ಮಧುರದ್ರವ್ಯಾಣಾಂ ನಾನಾವಿಧಖಾದ್ಯಾದೀನಾಂ ವಹನೇನ ಯುಕ್ತೇಽಶ್ವಿನೋಃ ಸಂಬಂಧಿನಿ ರಥೇ ಪವಯೋ ವಜ್ರಸಮಾನಾ ದೃಢಾಶ್ಚಕ್ರವಿಶೇಷಾಸ್ತ್ರಯಸ್ತ್ರಿಸಂಖ್ಯಾಕಾಃ ಸಂತಿ । ಇತ್ ಇತ್ಥಂ ಚಕ್ರತ್ರಯಸದ್ಭಾವಪ್ರಕಾರಂ ವಿಶ್ವೇ ಸರ್ವೇ ದೇವಾಃ ಸೋಮಸ್ಯ ಚಂದ್ರಸ್ಯ ವೇನಾಂ ಕಮನೀಯಾಂ ಭಾರ್ಯಾಮಭಿಲಕ್ಷ್ಯ ಯಾತ್ರಾಯಾಂ ವಿದುಃ । ಜಾನಂತಿ । ಯದಾ ಸೋಮಸ್ಯ ವೇನಯಾ ಸಹ ವಿವಾಹಸ್ತ-ದಾನೀಂ ನಾನಾವಿಧಖಾದ್ಯಯುಕ್ತಂ ಚಕ್ರತ್ರಯೋಪೇತಂ ಪ್ರೌಢಂ ರಥಮಾರುಹ್ಯಾಶ್ವಿನಾ ಗಚ್ಛತ ಇತಿ ಸರ್ವೇ ದೇವಾ ಜಾನಂತೀತ್ಯರ್ಥಃ । ತಸ್ಯ ರಥಸ್ಯೋಪರಿ ಸ್ಕಂಭಾಸಃ ಸ್ತಂಭವಿಶೇಷಾಸ್ತ್ರಯಸ್ತ್ರಿ ಸಂಖ್ಯಾಕಾಃ ಸ್ಕಭಿತಾಸಃ । ಸ್ಥಾಪಿತಾಃ । ಕಿಮರ್ಥಂ । ಆರಭೇ । ಆರಬ್ಧುಂ । ಅವಲಂಬಿತುಂ ಯದಾ ರಥಸ್ತ್ವರಯಾ ಯಾತಿ ತದಾನೀಂ ಪತನಭೀತಿನಿವೃತ್ತ್ಯರ್ಥಂ ಹಸ್ತಾಲಂಬನಭೂತಾಃ ಸ್ತಂಭಾ ಇತ್ಯರ್ಥಃ । ಹೇ ಅಶ್ವಿನಾ ಯುವಾಂ ತಾದೃಶೇನ ರಥೇನ ನಕ್ತಂ ರಾತ್ರೌ ತ್ರಿರ್ಯಾಥಃ । ತ್ರಿವಾರಂ ಗಚ್ಛಥಃ । ತಥಾ ದಿವಾ ದಿವಸೇಽಪಿ ತ್ರಿರ್ಯಾಥಃ । ರಾತ್ರಾವಹನಿ ಚ ರಥಮಾರುಹ್ಯ ಪುನಃಪುನಃ ಕ್ರೀಡಥ ಇತ್ಯರ್ಥಃ ॥
ಮಧುವಾಹನೇ । ಮಧು ವಾಹ್ಯತೇಽನೇನೇತಿ ಮಧುವಾಹನಃ । ಕರಣೇ ಲ್ಯುಟ್ । ವಿದುಃ । ವೇತ್ತೇ-ರ್ಲಟಿ ವಿದೋ ಲಟೋ ವೇತಿ ಝೇರುಸಾದೇಶಃ । ಸ್ಕಂಭಾಸಃ । ಷ್ಟಭಿ ಸ್ಕಭಿ ಗತಿಪ್ರತಿಬಂಧೇ । ಸ್ಕಂಭಂತೇ ಪ್ರತಿಬದ್ಧಾ ಭವಂತೀತಿ ಸ್ಕಂಭಾಃ । ಪಚಾದ್ಯಚ್ । ಸ್ಕಭಿತಾಸಃ । ಸ್ಕಂಭುಃ ಸೌತ್ರೋ ಧಾತುಃ ।

**ಅಸ್ಮಾನ್ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧೇ ಪ್ರಾಪ್ತೇ ಗ್ರಸಿತಸ್ಕಭಿತೇತ್ಯಾದಿನೇಡಾಗಮೋ ನಿಪಾತಿತಃ। ಆರಭೇ। ರಭ ರಾಭಸ್ಯೇ। ಅಸ್ಮಾದಾಙ್ಪೂರ್ವಾತ್ಸಂಪದಾದಿಲಕ್ಷಣೋ ಭಾವೇ ಕ್ವಿಪ್। ಕೃದುತ್ತರಪದಪ್ರಕೃತಿಸ್ವರತ್ವಂ ॥**

॥ ಪ್ರತಿಪದಾರ್ಥ ॥

**ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ (ಯುವಾಂ-ನೀವು) । **ಮಧುವಾಹನೇ**— ರುಚಿಕರವಾದ ಆಹಾರವಸ್ತುಗಳನ್ನು ತುಂಬಿರುವ । **ರಥೇ**— (ನಿಮ್ಮ) ರಥದಲ್ಲಿ। **ತ್ರಯಃ ಪವಯಃ**— ವಜ್ರದಂತೆ ದೃಢವಾದ ಮೂರು ಚಕ್ರಗಳಿವೆ. । **ಇತ್**— ಈ ರೀತಿಯಾಗಿರುವುದನ್ನು । **ಸೋಮಸ್ಯ**—ಚಂದ್ರನಿಗೆ । **ವೇನಾಂ-ಅನು**— ವೇನೆಯೆಂಬ ಭಾರ್ಯೆಯೊಡನೆ ವಿವಾಹೋತ್ಸವಯಾತ್ರೆಯಲ್ಲಿ । **ವಿಶ್ವೇ**— ಸಕಲ ದೇವತೆಗಳೂ । **ವಿದುಃ**- ತಿಳಿಯುತ್ತಾರೆ. । **ಆರಭೇ**— ಆಸರೆಗಾಗಿ (ಹಿಡಿದುಕೊಳ್ಳುವುದಕ್ಕಾಗಿ) । **ಸ್ಕಭಿತಾಸಃ**— ಆಧಾರಗಳಾಗಿರುವ । **ತ್ರಯಃ**— ಮೂರು । **ಸ್ಕಂಭಾಸಃ**— ಕಂಭಗಳೂ (ಆ ರಥದಲ್ಲಿವೆ.) । **ನಕ್ತಂ**— ರಾತ್ರಿಯಲ್ಲಿ । **ತ್ರಿಃ ಯಾಥಃ**— ಮೂರು ಸಲ ಹೋಗುತ್ತೀರಿ. । **ದಿವಾ**— ಹಗಲು । **ತ್ರಿಃ (ಯಾಥಃ)**— ಮೂರು ಸಲ ಹೋಗುತ್ತೀರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಲೋಕರಮ್ಯಳಾದ, ಚಂದ್ರನಿಗೆ ಪ್ರಿಯಳಾದ ವೇನೆ ಎಂಬ ಭಾರ್ಯೆಯೊಡನೆ ಅವರ ವಿವಾಹಕಾಲದಲ್ಲಿ ಅವರನ್ನು ಅನುಸರಿಸಿ ಮಧುರಭಕ್ಷ್ಯಗಳನ್ನೊಳಗೊಂಡ ನಿಮ್ಮ ರಥದಲ್ಲಿ ನೀವು ಹೋಗುವಕಾಲದಲ್ಲಿ ನಿಮ್ಮ ರಥಕ್ಕೆ ಭದ್ರವಾದ ಮೂರು ಚಕ್ರಗಳೂ ಮತ್ತು ವೇಗವಾಗಿ ಸಂಚರಿಸುವಾಗ ಪತನಭೀತಿಯನ್ನು ತಪ್ಪಿಸಲು ಹಿಡಿದುಕೊಳ್ಳಲು ಮೂರು ಆಸರೆ ಕಂಭಗಳೂ ಇವೆ ಎಂಬುದನ್ನು ಸಕಲ ದೇವತೆಗಳೂ ತಿಳಿಯುತ್ತಾರೆ. ನೀವು ನಿಮ್ಮ ರಥದಲ್ಲಿ ಕ್ರೀಡಾರ್ಥವಾಗಿ ಹಗಲು ಮೂರು ಸಲವೂ ರಾತ್ರಿಕಾಲದಲ್ಲಿ ಮೂರು ಸಲವೂ ಹೊರಡುತ್ತೀರಿ. ಯಾವಾಗಲೂ ಈ ರೀತಿ ಆನಂದದಿಂದ ಕಾಲಕಳೆಯುತ್ತೀರಿ

## English Translation

There are three wheels to your honey-bearig (foods!& c) chariot as all the gods have known it to be when attending the marriage of Vena, the beloved of Soma; O Aswins, there are three posts fixed in the chariot for support, and in it thrice you drive by night and thrice by day.

|| ವಿಶೇಷ ವಿಷಯಗಳು ||

ಈ ಋಕ್ಕಿನಲ್ಲಿ—ಅಶ್ವಿನೀದೇವತೆಗಳ ರಥಕ್ಕೆ ಮೂರು ಚಕ್ರಗಳಿರುವುವು, ರಥವು ವೇಗವಾಗಿ ಹೋಗುತ್ತಿರುವಾಗ ಅದರಲ್ಲಿ ಕುಳಿತಿರುವವರು ಬೀಳದಂತೆ ಹಿಡಿದುಕೊಳ್ಳುವುದಕ್ಕಾಗಿ ಮೂರು ಕಂಭಗಳಿರುವವು ಮತ್ತು ಅಶ್ವಿನೀದೇವತೆಗಳು ಇಂತಹ ರಥದಲ್ಲಿ ಕುಳಿತು ಹಗಲು ಮೂರಾವರ್ತಿಯೂ ರಾತ್ರಿಕಾಲದಲ್ಲಿ ಮೂರಾವರ್ತಿಯೂ ಪ್ರಯಾಣ ಮಾಡುವರು ಎಂಬ ವಿಷಯವು ಹೇಳಲ್ಪಟ್ಟಿರುವುದು. ಮತ್ತು ಭಾಷ್ಯಕಾರರು ಹೇಳಿರುವಂತೆ ಸೋಮನೊಡನೆ ವೇನಾ ಎಂಬ ಸ್ತ್ರೀಯ ವಿವಾಹಕಾಲದಲ್ಲಿ ಅಶ್ವಿನೀದೇವತೆಗಳು ತಮ್ಮ ರಥದಲ್ಲಿ ನಾನಾ ವಿಧವಾದ ಮತ್ತು ಮಧುರವಾದ ಆಹಾರ ಪದಾರ್ಥಗಳನ್ನು ತುಂಬಿಕೊಂಡು ಹೋಗುತ್ತಿದ್ದುದು ದೇವತೆಗಳಿಗೆಲ್ಲರಿಗೂ ತಿಳಿದಿತ್ತೆಂಬ ವಿಷಯವು ಸಹ ವಿವರಿಸಲ್ಪಟ್ಟಿರುವುದು. ಇಲ್ಲಿ ಭಾಷ್ಯಕಾರರು **ಸೋಮಸ್ಯ** ಎಂದರೆ ಚಂದ್ರನ ಎಂದು ಅರ್ಥವಿವರಣೆ ಮಾಡಿರುವರು. ಆದರೆ ಸೋಮಸ್ಯ ಎಂಬ ಶಬ್ದಕ್ಕೆ ಸೋಮರಸಾಭಿಮಾನಿಯಾದ ಸೋಮದೇವತೆಯ ಅಥವಾ ರಾಜನಾದ ಸೋಮನ ಎಂದು ಅರ್ಥ ಹೇಳುವುದು ಯುಕ್ತವೆಂದು ತೋರುತ್ತದೆ. ವೇದದಲ್ಲಿ ಸೋಮವನ್ನು (ಸೋಮರಸವನ್ನು) ರಾಜನೆಂದು ಕರೆಯುವ ರೂಢಿಯಿದೆ. ಮತ್ತು ಯಜುರ್ವೇದ ತೈತ್ತಿರೀಯ ಬ್ರಾಹ್ಮಣದಲ್ಲಿ—ಅಥ ಹ ಸೀತಾ ಸಾವಿತ್ರೀ । ಸೋಮಗ್‌ಂ ರಾಜಾನಂ ಚಕಮೇ । ಎಂದಿರುವುದು. ಎಂದರೆ ಸವಿತೃ (ಸೂರ್ಯ) ಪುತ್ರಿಯಾದ ಸೀತೆಯು ಸೋಮರಾಜನನ್ನು (ಪ್ರೀತಿಸಿದಳು) ಇಚ್ಛಿಸಿದಳು ಎಂದು ಹೇಳಿದೆ. ಈ ವಿಷಯಕ್ಕೂ ಈ ಋಕ್ಕಿನಲ್ಲಿ ಹೇಳಿರುವ ವೇನಾ ಮತ್ತು ಸೋಮ ಎಂಬುವರ ವಿಷಯಕ್ಕೂ ಸಂಬಂಧವಿರುವುದೇ ಎಂಬುದು ಗಮನಾರ್ಹವಾದ ವಿಷಯ. ಈ ಸಂದರ್ಭದಲ್ಲಿ—

**ಸೂರ್ಯಾಯಾ ಅಶ್ವಿನಾ ವರಾಗ್ನಿರಾಸೀತ್ಪುರೋಗವಃ ।**
(ಋ. ಸಂ. ೧೦-೮೫-೮)

**ಸೋಮೋ ವಧೂಯುರಭವದಶ್ವಿನಾಸಾಮುಭಾ ವರಾ ।**
**ಸೂರ್ಯಾಂ ಯತ್ಪತ್ಯೇ ಶಂಸಂತೀಂ ಮನಸಾ ಸವಿತಾದದಾತ್ ॥**
(ಋ. ಸಂ. ೧೦-೮೫-೯)

ಎಂಬ ಈ ಎರಡು ಋಕ್ಕುಗಳಲ್ಲಿ ಹೇಳಿರುವ ವಿಷಯವೂ ಗಮನಾರ್ಹವಾಗಿದೆ. ಸವಿತೃಪುತ್ರಿಯಾದ ಸೂರ್ಯಾದೇವಿಯನ್ನು ಸೋಮನು ಪತ್ನಿಗಾಗಿ ಅಪೇಕ್ಷಿಸಿದನು. ಅದರಂತೆ ಅಶ್ವಿನೀದೇವತೆಗಳೂ ಸೂರ್ಯಾದೇವಿಗೆ ತಾವೂ ವರರಾಗಬೇಕೆಂದು ಅಪೇಕ್ಷಿಸಿದರು. ಸವಿತೃವು ಸೋಮನಿಗೆ ಸೂರ್ಯಾದೇವಿಯನ್ನು ಕೊಟ್ಟನು ಎಂದು ಮೊದಲಾದ ವಿಷಯವು ವರ್ಣಿತವಾಗಿದೆ. ಇದಲ್ಲದೆ ಐತರೇಯ ಬ್ರಾಹ್ಮಣದಲ್ಲಿ—

**ಪ್ರಜಾಪತಿರ್ವೈ ಸೋಮಾಯ ರಾಜ್ಞೇ ದುಹಿತರಂ ಪ್ರಾಯಚ್ಛತ್ಸೂರ್ಯಾಂ ಸಾವಿತ್ರೀಂ ತಸ್ಯೈ ಸರ್ವೇ ದೇವಾ ವರಾ ಆಗಚ್ಛನ್** (ಐ. ಬ್ರಾ. ೪-೭)

ಎಂದು ವಿವರಣೆ ಇರುವುದು.

**ಮಧುವಾಹನೇ—ಮಧು ವಾಹ್ಯತೇಽನೇನೇತಿ ಮಧುವಾಹನಃ ।** ಮಧು ಎಂದರೆ ಜೇನುತುಪ್ಪ ಅಥವಾ ಮಧುರವಾದ ಆಹಾರವಸ್ತುಗಳು. ಇವುಗಳನ್ನು ವಹಿಸುವ ಎಂದರೆ ತುಂಬಿರುವ ರಥವು ಎಂದಭಿಪ್ರಾಯವು.

**ಸೋಮಸ್ಯ ವೇನಾಮನು ಇದ್ವಿದುಃ**—ವೇನೆಯೊಡನೆ ನಡೆದ ವಿವಾಹವನ್ನು ಸಮಸ್ತ ದೇವತೆಗಳೂ ತಿಳಿದರು ಎಂದರೆ ಮೇಲೆ ಹೇಳಿದಂತೆ (ಐ. ಬ್ರಾ. ೪–೭) ಸೋಮನು ಸೂರ್ಯಾದೇವಿಯನ್ನು ವಿವಾಹವಾದಾಗ ಅಶ್ವಿನೀದೇವತೆಗಳೂ ಇತರ ಎಲ್ಲಾ ದೇವತೆಗಳೂ ಸಹ ಆ ವಿವಾಹಕರ್ಮಕ್ಕೆ ಬಂದು ಆ ಸ್ತ್ರೀಯನ್ನ ಮದುವೆಯಾಗ ಬೇಕೆಂದು ಅಪೇಕ್ಷಿದರು. ಅದರಂತೆ ಅಶ್ವಿನೀದೇವತೆಗಳೂ ಸಹ ತಾವೂ ಆ ಸ್ತ್ರೀಯನ್ನು ಮದುವೆಯಾಗಲು ಇಚ್ಛಿಸಿದರು. (ಋ. ಸಂ. ೧೦–೮೫–೮ ಮತ್ತು ೯) ಈ ಕಾರಣಕ್ಕಾಗಿಯೇ ಎಂದರೆ ವಧುವನ್ನು ಒಲಿಸಿಕೊಳ್ಳುವುದ ಕ್ಕಾಗಿ ಅಶ್ವಿನೀದೇವತೆಗಳು ತಮ್ಮ ರಥದಲ್ಲಿ ಮಧುರವಾದ (ಸಿಹಿಯಾದ) ಆಹಾರಸಾಮಗ್ರಿಗಳನ್ನು ತುಂಬಿಕೊಂಡು ಸೋಮನ ಮದುವೆಗೆ ಹೋಗಿದ್ದರೆಂದೂ ದೇವತೆಗಳೆಲ್ಲರೂ ಅಲ್ಲಿಗೆ ಬಂದಿದ್ದರಿಂದ ಅವರಿಗೆಲ್ಲಾ ಈ ವಿಷಯವು ತಿಳಿದಿತ್ತೆಂದೂ ಈ ಋಕ್ಕಿನಲ್ಲಿ ವರ್ಣಿಸಿರುವುದಕ್ಕೆ ಮುಖ್ಯಾಭಿಪ್ರಾಯವು.

**ಆರಭೇ—ಆರಬ್ಧುಂ । ಅವಲಂಬಿತುಂ ।** ರಥವು ವೇಗವಾಗಿ ಹೋಗುತ್ತಿರುವಾಗ ಅನು ಅಲುಗಾಡು ವುದು ಸ್ವಭಾವವು. ಆಗ ಒಳಗೆ ಕುಳಿತಿರುವವರು ಬೀಳದಂತೆ ಘಟ್ಟಿಯಾಗಿ ಹಿಡಿದುಕೊಳ್ಳಲು ಆಸರೆಗಾಗಿ ರಥದಲ್ಲಿ ಮೂರು ಕಂಭಗಳಿರುವವೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಮಧುವಾಹನೇ—ಫಲಿಪಾಟಿನಮಿಮನಿಜನಾಂಗುಕ್ಪಟಿನಾಕಿಧತಶ್ಚ** (ಉ. ಸೂ. ೧–೧೮) ಎಂಬುದ ರಿಂದ ಮನಧಾತುವಿನ ಮುಂದೆ ಉ ಪ್ರತ್ಯಯ, ನಕಾರಕ್ಕೆ ಧಕಾರ, ಮಧು, ಇದು ಪ್ರತ್ಯಯಸ್ವರದಿಂದ ಅಂತೋ ದಾತ್ತ. **ಕರಣಾಧಿಕರಣಯೋಶ್ಚ** (ಪಾ. ಸೂ. ೩–೩–೧೧೭) ಕರಣ, ಅಧಿಕರಣ ಎಂಬ ಅರ್ಥಗಳಲ್ಲಿ ಧಾತುವಿನ ಮುಂದೆ ಲ್ಯುಟ್ ಬರುತ್ತೆ ಎಂದು ವಹ್–ಧಾತು ಪ್ರಕೃತಿಕ ಣ್ಯಂತದ ಮುಂದೆ ಲ್ಯುಟ್, ಉಪಧಾವೃದ್ಧಿ, ಣಿಲೋಪ, ಅನಾದೇಶ

**ವಿದುಃ**—ವಿದ ಜ್ಞಾನೇ, ಧಾತು, ಲಟ್, ಝ, **ವಿದೋ ಲಟೋ ವಾ** (ಪಾ.ಸೂ. ೩-೪-೮೩) ವಿದಧಾತುವಿನ ಮುಂದೆ ಇರುವ ಲಟ್ ಸ್ಥಾನದಲ್ಲಿ ಬಂದ ಪರಸ್ಮೈಪದಪ್ರತ್ಯಯಗಳಿಗೆ ಕ್ರಮವಾಗಿ ಣಲ್, ಅತುಸ್, ಉಸ್ ಮೊದಲಾದ ಆದೇಶಗಳು ಬರುತ್ತವೆ ಎಂದು ಝಿಗೆ ಉಸ್ ಆದೇಶ, ಶಪ್, ಅದಾದಿಯಾದ್ದರಿಂದ ಶಪ್‌ಗೆ ಲುಕ್, ವಿದ್+ಉಸ್, ರುತ್ವ-ವಿಸರ್ಗ.

**ಸ್ಕಂಭಾಸಃ**—ಷ್ಟಭಿ ಸ್ಕಭಿ ಗತಿಪ್ರತಿಬಂಧೇ ಧಾತು. ಸ್ಕಂಭತೇ ಎಂದರೆ ಪ್ರತಿಬದ್ಧರಾಗುವುದು ಎಂದರ್ಥ. **ನನ್ದಿಗ್ರಹಿಪಚಾದಿಭ್ಯೋ ಲ್ಯುಣಿನ್ಯಚಃ** (ಪಾ. ಸೂ. ೩-೧–೧೩೪) ಎಂದು ಪಚಾದಿಲಕ್ಷಣವಾದ ಅಚ್ ಪ್ರತ್ಯಯ.

**ಸ್ಕಭಿತಾಸಃ**—ಸ್ಕಭು ಎಂಬುದು ಸೌತ್ರಧಾತು, ಇದು ಉದಿತ್ತು, **ಉದಿತೋ ವಾ** (ಪಾ. ಸೂ. ೭-೨-೫೬) ಉದಿತ್ತಾದ ಧಾತುವಿನ ಮುಂದೆ ಇರುವ ಕ್ತ್ವಾಪ್ರತ್ಯಯಕ್ಕೆ ಇಟ್‌ವಿಕಲ್ಪವಾಗಿ ಬರುತ್ತೆ ಎಂದು ಇಡಾಗಮವು

ವಿಕಲ್ಪಿತವಾಗಿದೆ. **ಯಸ್ಯ ವಿಭಾಷಾ** (ಪಾ. ಸೂ. ೭-೨-೧೫) ಯಾವ ಶಬ್ದದ ಮುಂದೆ ಇರುವ ವಲಾದ್ಯಾರ್ಧ ಧಾತುಕಕ್ಕೆ ಕ್ವಚಿತ್ ಇಟ್‌ವಿಕಲ್ಪಿತವಾಗಿದೆಯೋ ಅದರ ಮುಂದೆ ಇರುವ ಕ್ತ-ಕ್ತವತುಗಳಿಗೆ ಇಟ್ ಬರುವುದಿಲ್ಲ ಎಂದು ಸ್ಕಭ್+ತ ಎಂದಿರುವಾಗ ಇಟ್ಟಿಗೆ ನಿಷೇಧವು ಯದ್ಯಪಿ ಪ್ರಾಪ್ತವಾಗುತ್ತೆ. ಆದರೂ, **ಗ್ರಸಿತ ಸ್ಕಭಿತಸ್ತಭಿತ**— (ಪಾ. ಸೂ. ೭-೨-೩೪) ಎಂಬ ಸೂತ್ರದಲ್ಲಿ ಸ್ಕಭಿತ ಎಂದು ನಿಪಾತಮಾಡಿರುವುದರಿಂದ ಇಟ್‌ಬರುತ್ತೆ, ಜಸ್‌ಗೆ ಅಸುಕ್ ಆಗವು.

**ಆರಭೇ**—ರಭ ರಾಭಸ್ಯೇ ಧಾತು. ಆಙ್‌ಪೂರ್ವಕವಾದ ಇದರ ಮುಂದೆ **ಸಂಪದಾದಿಭ್ಯಃ ಕ್ವಿಪ್** ಎಂದು ಭಾವಾರ್ಥದಲ್ಲಿ ಕ್ವಿಪ್, **ಗತಿಕಾರಕೋ—,** ಎಂದು ಕೃದುತ್ತರಪದಪ್ರಕೃತಿಸ್ವರ ಬರುತ್ತೆ, ವಿಭಕ್ತಿಗೆ ಶೇ ಆದೇಶ ॥೨॥

---

॥ ಸಂಹಿತಾಪಾಠಃ ॥

ಸಮಾನೇ ಅಹನ್ತ್ರಿರವದ್ಯಗೋಹನಾ ತ್ರಿರದ್ಯ ಯಜ್ಞಂ ಮಧುನಾ ಮಿಮಿಕ್ಷತಂ ।
ತ್ರಿರ್ವಾಜವತೀರಿಷೋ ಅಶ್ವಿನಾ ಯುವಂ ದೋಷಾ ಅಸ್ಮಭ್ಯಮು-ಷಸಶ್ಚ ಪಿನ್ವತಂ ॥ ೩ ॥

॥ ಪದಪಾಠಃ ॥

ಸಮಾನೇ । ಅಹನ್ । ತ್ರಿಃ । ಅವದ್ಯ ऽ ಗೋಹನಾ । ತ್ರಿಃ । ಅದ್ಯ । ಯಜ್ಞಂ । ಮಧುನಾ । ಮಿಮಿಕ್ಷತಂ ॥
ತ್ರಿಃ । ವಾಜ ऽ ವತೀಃ । ಇಷಃ । ಅಶ್ವಿನಾ । ಯುವಂ । ದೋಷಾಃ । ಅಸ್ಮ-ಭ್ಯಂ । ಉಷಸಃ । ಚ । ಪಿನ್ವತಂ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾ ಅಶ್ವಿನೌ ದೇವೌ ಯುವಂ ಯುವಾಮುಭೌ ಸಮಾನೇಽಹನ್ನೇಕಸ್ಮಿನ್ನನುಷ್ಠಾನದಿನೇ ತ್ರಿರವದ್ಯಗೋಹನಾ ತ್ರಿವಾರಮನುಷ್ಠಾನಗತಾನಾಂ ದೋಷಾಣಾಂ ಸಂವರಣಕಾರಿಣೌ ಭವತಂ। ಅದ್ಯಾಸ್ಮಿನ್ದಿನೇ ಯಜ್ಞಂ ಯಜ್ಞಗತಂ ಹವಿರ್ಮಧುನಾ ಮಧುರರಸೇನ ತ್ರಿರ್ಮಿಮಿಕ್ಷತಂ। ತ್ರಿವಾರಂ ಸಿಂಚತಂ। ಕಿಂಚ ದೋಷಾ ಉಷಸಶ್ಚ ರಾತ್ರೀರ್ದಿವಸಾಂಶ್ಚ ರಾತ್ರಿಷು ದಿವಸೇಷು ನೈರಂತರ್ಯೇಣ ವಾಜವತೀರ್ಬಲಕಾರಿಣೀರಿಷೋಽನ್ನಾನ್ಯಸ್ಮಭ್ಯಂ ಪಿನ್ವತಂ। ಸಿಂಚತಂ। ಪ್ರಯಚ್ಛತಮಿತ್ಯರ್ಥಃ॥ ಅಹನ್॥ ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್। ಅವದ್ಯಗೋಹನಾ। ಗುಹೂ ಸಂವರಣೇ। ಅವದ್ಯಸ್ಯ ಗೂಹಯಿತಾರೌ ನಂದ್ಯಾದಿತ್ವಾಲ್ಲ್ಯುಃ। ಊದುಪಧಾಯಾ ಗೋಹಃ। ಪಾ. ೬-೪-೮೯। ಇತಿ ಪ್ರಾಪ್ತಸ್ಯ ಊತ್ವಸ್ಯಾಭಾವಶ್ಛಾಂದಸಃ। ಮಿಮಿಕ್ಷತಂ। ಮಿಹ ಸೇಚನೇ। ಸನ್ಯೇಕಾಚ ಉಪದೇಶೇಽನುದಾತ್ತಾದಿತೀಟ್‌ಪ್ರತಿಷೇಧಃ। ಹಲಂತಾಚ್ಚೇತಿ ಸನಃ ಕಿತ್ತ್ವಾಲ್ಲಘೂಪಧಗುಣಾಭಾವಃ। ದ್ವಿರ್ಭಾವಹಲಾದಿಶೇಷೌ। ಢತ್ವಕತ್ವಷತ್ವಾನಿ। ವಾಜವತೀಃ। ಉಗಿತಶ್ಚೇತಿ ಙೀಪ್। ಪಿನ್ವತಂ ಪಿವಿ ಮಿವಿ ಣಿವಿ ಸೇಚನೇ। ಇದಿತ್ತ್ವಾನ್ನುಮ್। ಕರ್ತರಿ ಶಪ್॥

॥ ಪ್ರತಿಪದಾರ್ಥ ॥

**ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ। **ಯುವಂ**— ನೀವು। **ಸಮಾನೇ ಅಹ**— ಒಂದೇ ದಿನದಲ್ಲಿ। **ತ್ರಿಃ ಅವದ್ಯಾಗೋಹನಾ**— ಮೂರಾವೃತ್ತಿ (ನಮ್ಮ) ದೋಷಗಳನ್ನು ಮುಚ್ಚುವವರಾಗಿ। **ಅದ್ಯ**— ಇಂದು। **ಯಜ್ಞಂ**—ಯಜ್ಞಸಂಬಂಧವಾದ ಹವಿಸ್ಸನ್ನು। **ಮಧುನಾ**—ಸೋಮರಸದಿಂದ। **ತ್ರಿಃ ಮಿಮಿಕ್ಷತಂ**— ಮೂರುಸಲ ಸೇವನೆಮಾಡಿ. (ಇಷ್ಟೇ ಅಲ್ಲದೆ)। **ದೋಷಾ**— ರಾತ್ರಿಯಲ್ಲಿಯೂ। **ಉಷಸಶ್ಚ**— ಹಗಲಲ್ಲೂ ಕೂಡ। **ಅಸ್ಮಭ್ಯಂ**— ನಮಗೆ। **ವಾಜವತೀಃ**— ಪುಷ್ಟಿಕರವಾದ। **ಇಷಃ**— ಅನ್ನಗಳನ್ನು। **ಪಿನ್ವತಂ**— ಒದಗಿಸಿಕೊಡಿ।

॥ ಭಾವಾರ್ಥ ॥

ಎಲೈ ದೇವತೆಗಳೇ, ನೀವು ದೊಡ್ಡಮನಸ್ಸುಳ್ಳವರು. ಒಂದೇದಿನ ಮೂರುಸಲ ಮಾಡಿದ ನಮ್ಮ ತಪ್ಪುಗಳನ್ನು ಮುಂದಕ್ಕೆ ತರದೆ ಮರೆಸಿ. ಮತ್ತು ನಮ್ಮ ಯಜ್ಞ ಹವಿಸ್ಸನ್ನು ಮೂರುಸಲ ಮಧುರಸದಿಂದ ಪ್ರೋಕ್ಷಿಸಿ, ಇವುಗಳ ಜೊತೆಯಲ್ಲಿ ನಮಗೆ ರಾತ್ರಿ ಹಗಲೂ ಪುಷ್ಟಿಯನ್ನುಂಟುಮಾಡತಕ್ಕ ಅನ್ನವನ್ನೂ ಸಮೃದ್ಧವಾಗಿ ಕೊಡಿ.

## English translation

Thrice on the same day you forgive the faults of the worshippers; thrice this day you sprinkle our sacrifice with honey; O Aswins, thrice give us nourishing foods every night and every day.

|| ವಿಶೇಷ ವಿಷಯಗಳು ||

**ಸಮಾನೇ ಅಹನ್**—ಪೂರ್ತಾ ದಿನ, whole day ನಾವು ಯಜ್ಞಾನುಷ್ಠಾನಮಾಡುವ ಒಂದು ಪೂರ್ತಾದಿನದಲ್ಲಿ.

**ತ್ರಿಃ ಅವದ್ಯಗೋಹನಾ—ತ್ರಿವಾರಮನುಷ್ಠಾನಗತಾನಾಂದೋಷಾಣಾಂ ಸಂವರಣಕಾರಿಣೌ ಭವತಂ ।** ನಾವು ಮಾಡುವ ಯಜ್ಞದಲ್ಲಿ ಮೂರಾವರ್ತಿ ಎಂದರೆ ಪ್ರಾತಃಕಾಲ, ಮಧ್ಯಾಹ್ನ ಸಾಯಂಕಾಲಗಳಲ್ಲಿಯೂ ಯಜ್ಞದಲ್ಲಿ ಪ್ರಮಾದದಿಂದ ಉಂಟಾಗಬಹುದಾದ ದೋಷಗಳನ್ನೂ, ಲೋಪಗಳನ್ನೂ ಪರಿಹರಿಸಿ ಯಜ್ಞವು ನ್ಯೂನಾತಿರಿಕ್ತಗಳಿಲ್ಲದೆ ಸಾಂಗವಾಗಿ ಪೂರ್ಣವಾಗುವಂತೆ ಮಾಡಬೇಕೆಂದಭಿಪ್ರಾಯವು.

**ಯಜ್ಞಂ ಮಧುನಾ ಮಿಮಿಕ್ಷತಂ**—ಯಜ್ಞವನ್ನು ಮಧುವಿನಿಂದ ಸೇಚನೆಮಾಡಿ ಎಂದರೆ ಯಜ್ಞಕರ್ಮವನ್ನೂ, ಯಜ್ಞದಲ್ಲಿ ಉಪಯೋಗಿಸುವ ಹವಿಸ್ಸನ್ನೂ ಚೆನ್ನಾಗಿ ಸ್ವೀಕಾರಾರ್ಹವಾಗುವಂತೆ ಮಾಡಿರಿ.

**ವಾಜವತೀಃ ಇಷಃ**—ವಾಜವತೀರ್ಬಲಕಾರಿಣೀರಿಷೋಽನ್ನಾನ್. ವಾಜವೆಂದರೆ ಅನ್ನ, ಇಷವೆಂದರೂ ಅನ್ನ, ಆದುದರಿಂದ ಇಲ್ಲಿ ಭಾಷ್ಯಕಾರರು ವಾಜವತೀಃ ಎಂಬ ಶಬ್ದಕ್ಕೆ ಬಲಕಾರಿಣೀ ಎಂದರೆ ಪುಷ್ಟಿಪ್ರದವಾದ nourishing ಎಂಬ ಅರ್ಥವನ್ನು ಹೇಳಿರುವರು.

**ಅಸ್ಮಭ್ಯಂ ಪಿನ್ವತಂ—ಅಸ್ಮಭ್ಯಂ ಸಿಂಚತಂ ।** ನಮಗೆ ಕೊಡಿ ಎಂದರ್ಥವು.

**ದೋಷಾ, ಉಷಸಃ**—ದೋಷಾ ಎಂದರೆ ಕತ್ತಲೆಯಿಂದ ಕೂಡಿದ ರಾತ್ರಿಯು. ಉಷಸಃ-ಬೆಳಕಾಗಿರುವ ಉಷಃಕಾಲ ಎಂದರೆ ಹಗಲು. ಹಗಲಿನಲ್ಲಿಯೂ ರಾತ್ರಿಕಾಲದಲ್ಲಿಯೂ ಎಂದಭಿಪ್ರಾಯವು.

|| ವ್ಯಾಕರಣಪ್ರಕ್ರಿಯಾ ||

**ಅಹನ್**—ಸಪ್ತಮ್ಯೇಕ ವಚನಕ್ಕೆ **ಸುಪಾಂ ಸುಲುಕ್—,** ಎಂದು ಲುಕ್.

**ಅವದ್ಯಗೋಹನಾ**— ಗುಹೂ ಸಂವರಣೇ ಧಾತು. ಸಂವರಣ ಎಂದರೆ ಮುಚ್ಚಿಕೊಳ್ಳುವಿಕೆ, ಅವದ್ಯ ಎಂದರೆ ದೋಷ, ಅವದ್ಯಸ್ಯ ಗೂಹಯಿತಾರೌ ಎಂದು ವಿಗ್ರಹ. **ನನ್ದಿಗ್ರಹಿ—,** ಎಂದು ನನ್ದ್ಯಾದಿಲಕ್ಷಣವಾದ ಲ್ಯುಪ್ರತ್ಯಯ. ಯುಗೆ ಅನಾದೇಶ, ಅವದ್ಯ ಗುಹ್+ಅನ, **ಊದುಪಧಾಯಾ ಗೋಹಃ** (ಪಾ. ಸೂ. ೬-೪-೮೯) ಗುಣಕ್ಕೆ ನಿಮಿತ್ತವಾದ ಅಜಾದಿ ಪ್ರತ್ಯಯಪರದಲ್ಲಿರುವಾಗ ಗುಹ್ ಧಾತುವಿನ ಉಪಧೆಗೆ ಊಕಾರ ಬರುತ್ತೆ ಎಂಬ ಊಕಾರಾದೇಶವು ಛಾಂದಸವಾಗಿ ಇಲ್ಲಿ ಬರುವುದಿಲ್ಲ. ದ್ವಿವಚನಪ್ರತ್ಯಯಕ್ಕೆ ಆಕಾರಾದೇಶ,

**ಮಿಮಿಕ್ಷತಂ**—ಮಿಹ ಸೇಚನೇ ಧಾತು, ಸನ್ ಪ್ರತ್ಯಯ, **ಏಕಾಚ ಉಪದೇಶೇಽನುದಾತ್ತಾತ್** (ಪಾ.ಸೂ. ೭-೨-೧೦) ಉಪದೇಶದಲ್ಲಿ ಏಕಾಚ್ಕವೂ, ಉಪದೇಶದಲ್ಲಿ ಅನುದಾತ್ತವೂ ಆದ ಧಾತುವಿನ ಮುಂದೆ ಇರುವ ವಲಾದಿಯಾದ ಆರ್ಧಧಾತುಕಕ್ಕೆ ಇಟ್ ಬರುವುದಿಲ್ಲ ಎಂದು ಸನ್‌ಗೆ ಇಟ್ ಬರುವುದಿಲ್ಲ. **ಹಲನ್ತಾಚ್ಚ** (ಪಾ. ಸೂ.

೧-೨-೧೦) ಅಂತ ಶಬ್ದ ಸಮೀಪಾರ್ಥಕ, ಹಲ್ ಎಂಬುದು ಲುಪ್ತಪಂಚಮ್ಯಂತ, ಇಕ್ಕಿಗೆ ಸಮೀಪದಲ್ಲಿರುವ ಹಲ್ಲಿಗಿಂತಲೂ ಪರದಲ್ಲಿರುವ ಝಲಾದಿಯಾದ ಸನ್ ಕಿತ್ತಾಗುತ್ತೆ ಎಂದು ಸನ್ ಕಿತ್ ಆಗುವುದು. ಆದ್ದರಿಂದ **ಕ್ಙಿತಿಚ** ಎಂದು ಗುಣಕ್ಕೆ ಪ್ರತಿಷೇಧ. **ಸನ್ಯತಃ** (ಪಾ. ಸೂ. ೭-೪-೮೯) ಎಂದು ದ್ವಿತ್ವ ಮಿಹ್+ಮಿಹ್+ಸ **ಹಲಾದಿಃಶೇಷಃ** ಎಂದು ಪ್ರಥಮ ಹಕಾರಲೋಪ, **ಹೋಢಃ** (ಪಾ.ಸೂ. ೮-೨-೩೧) ಎಂದು ಹಕಾರಕ್ಕೆ ಢಕಾರ, **ಷಢೋಃಕಸ್ಸಿ** (ಪಾ. ಸೂ. ೮-೨-೪೧) ಎಂದು ಢಕಾರಕ್ಕೆ ಕಕಾರ, **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೯) ಎಂದು ಸಕಾರಕ್ಕೆ ಷಕಾರ, ಮಿಮಿಕ್ಷ ಎಂದಾಯಿತು. ಲೋಟ್ ಮಧ್ಯಮಪುರುಷ ದ್ವಿವಚನ, ತಮ್ ಆದೇಶ.

**ವಾಜವತೀಃ**—ವಾಜ ಎಂದರೆ ಬಲ, **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** ಎಂದು ಮತುಪ್, **ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ** (ಪಾ. ಸೂ. ೮-೨-೯) ಮವರ್ಣಾಂತ, ಅವರ್ಣಾಂತ, ಮವರ್ಣೋಪಧಕ, ಅಥವಾ ಅವರ್ಣೋಪಧಕವಾದ ಯವಾದಿಭಿನ್ನಶಬ್ದದ ಮುಂದಿರುವ ಮತುಪ್ಪಿನ ಮಕಾರಕ್ಕೆ ವಕಾರ ಬರುತ್ತೆ ಎಂದು ಮಕಾರಕ್ಕೆ ವಕಾರ. ಮತುಪ್ ಉಗಿತ್, **ಉಗಿತಶ್ಚ** (ಪಾ. ಸೂ. ೪-೧-೬) ಸ್ತ್ರೀಲಿಂಗದಲ್ಲಿ ಉಗಿದನ್ತವಾದ ಪ್ರಾತಿಪದಿಕದ ಮುಂದೆ ಙೀಪ್ ಬರುತ್ತೆ ಎಂದು ಙೀಪ್.

**ಪಿನ್ವತಮ್**—ಪಿವಿ ಸೇಚನೇ ಇದಿತ್, **ಇದಿತೋನುಮ್‌ಧಾತೋಃ** (ಪಾ.ಸೂ. ೭-೧-೫೮) ಇದಿತ್ ಆದ ಧಾತುವಿಗೆ ನುಮ್ ಆಗಮ ಬರುತ್ತೆ ಎಂದು ನುಮಾಗಮ ಲೋಟ್, ಥಸ್, ಲಘ್ವದ್ಭಾವ, ತಮ್ ಆದೇಶ **ಕರ್ತರಿ ಶಪ್** ಎಂದು ಶಪ್ ವಿಕರಣ. ॥ ೩ ॥



॥ ಸಂಹಿತಾಪಾಠಃ ॥

ತ್ರಿರ್ವರ್ತಿರ್ಯಾತಂ ತ್ರಿರನುವ್ರತೇ ಜನೇ ತ್ರಿಃ ಸುಪ್ರಾವ್ಯೇ
ತ್ರೇಧೇವ ಶಿಕ್ಷತಂ ।
ತ್ರಿರ್ನಾನ್ದ್ಯಂ ವಹತಮಶ್ವಿನಾ ಯುವಂ ತ್ರಿಃ ಪೃಕ್ಷೋ ಅಸ್ಮೇ
ಅಕ್ಷರೇವ ಪಿನ್ವತಂ ॥ ೪ ॥

॥ ಪದಪಾಠಃ ॥

ತ್ರಿಃ । ವರ್ತಿಃ ॥ ಯಾತಂ । ತ್ರಿಃ । ಅನು ಽ ವ್ರತೇ । ಜನೇ । ತ್ರಿಃ । ಸುಪ್ರ ಽ-
ಅವ್ಯೇ । ತ್ರೇಧಾ ಽ ಇವ । ಶಿಕ್ಷತಂ ।

ತ್ರಿಃ । ನಾನ್ದ್ಯಂ । ವಹತಂ । ಅಶ್ವಿನಾ । ಯುವಂ । ತ್ರಿಃ । ಪೃಕ್ಷಃ । ಅಸ್ಮೇ
ಇತಿ । ಅಕ್ಷರಾ ಽ ಇವ । ಪಿನ್ವತಂ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾ ಯುವಂ ತ್ರಿರ್ವರ್ತಿರ್ಯಾತಂ । ಅಸ್ಮದೀಯವರ್ತನಸಾಧನಂ ಗೃಹಂ ತ್ರಿರ್ಯಾತಂ । ತ್ರಿವಾರಂ ಪ್ರಾಪ್ನುತಂ । ತಥಾನುವ್ರತೇಽಸ್ಮದನುಕೂಲವ್ಯಾಪಾರಯುಕ್ತೇ ಜನೇ ತ್ರಿರ್ಯಾತಂ । ತ್ರಿವಾರಂ ತದನುಗ್ರಹಾಯ ಗಚ್ಛತಂ । ತ್ರಿಃ ಸುಪ್ರಾವ್ಯೇ ತ್ರಿವಾರಂ ಸುಷ್ಠು ಪ್ರಕರ್ಷೇಣ ಭವದ್ಭ್ಯಾಂ ರಕ್ಷಣೀಯೇ ಪ್ರವರ್ತಮಾನಾನಸ್ಮಾನ್ ತ್ರೇಧೇವ ತ್ರಿಭಿರೇವ ಪ್ರಕಾರೈಃ ಶಿಕ್ಷತಂ । ಪುನಃಪುನರನುಷ್ಠಾನಮುಪದೇಷ್ಟವ್ಯಮಿತ್ಯರ್ಥಃ । ತಥಾ ನಾಂದ್ಯಂ ನಂದನೀಯಂ ಸಂತೋಷಕರಂ ಫಲಂ ತ್ರಿರ್ವಹತಂ । ಪ್ರಾಪಯತಂ । ಅಸ್ಮೇ ಅಸ್ಮಾಸು ಪೃಕ್ಷೋಽನ್ನಂ ತ್ರಿಃ ಪಿನ್ವತಂ । ತ್ರಿವಾರಂ ಪ್ರಯಚ್ಛತಂ । ತತ್ರ ದೃಷ್ಟಾಂತಃ । ಅಕ್ಷರೇವ । ಅಕ್ಷರಾಣ್ಯುದಕಾನಿ ಅಕ್ಷರಾ ಸ್ರೋತಸ್ತೃಪ್ತಿರಿತಿ ತನ್ನಾಮಸು ಪಾಠಾತ್ । ತಾನಿ ಪರ್ಜನ್ಯೋ ಯಥಾ ಪ್ರಯಚ್ಛತಿ ತದ್ವತ್ ॥ ವರ್ತಿಃ । ವರ್ತತೇಽತ್ರೇತಿ ವರ್ತಿರ್ಗೃಹಂ । ಹೃಪಿಷಿರುಹಿವೃತೀತ್ಯಾದಿನಾ । ಉ-೪-೧೧೮ । ಇಪ್ರತ್ಯಯಃ । ಸುಪಾಂ ಸುಲುಗಿತಿ ದ್ವಿತೀಯೈಕವಚನಸ್ಯ ಸುಆದೇಶಃ । ಸುಪ್ರಾವ್ಯೇ । ಉಪಸರ್ಗದ್ವಯೋಪಸೃಷ್ಟಾದವತೇಃ ಕರ್ಮಣಿ ಣ್ಯತ್ । ಸಂಜ್ಞಾಪೂರ್ವಕೋ ವಿಧಿರನಿತ್ಯ ಇತಿ ವೃದ್ಧ್ಯಭಾವಃ । ತಿತ್ಸ್ವರಿತಮಿತಿ ಸ್ವರಿತತ್ವಂ । ಶಿಕ್ಷತಂ । ಶಿಕ್ಷ ವಿದ್ಯೋಪಾದಾನೇ । ನಾಂದ್ಯಂ । ಣ್ಯದಂತಃ । ಪೃಕ್ಷಃ । ಪೃಚೀ ಸಂಪರ್ಕೇ । ಅಸುನಿ ಸುಡಾಗಮಃ । ಅಸ್ಮೇ । ಸುಪಾಂ ಸುಲುಗಿತಿ ಶೇ ಆದೇಶಃ । ಅಕ್ಷರಾ ಇವ । ಅಶ್ನುವತೇ ವ್ಯಾಪ್ನುವಂತೀತ್ಯಕ್ಷರಾಣ್ಯುದಕಾನಿ । ಔಣಾದಿಕಃ ಕ್ಸರಪ್ರತ್ಯಯಃ । ಶೇರ್ಲೋಪಃ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯುವಂ**—ನೀವು । **ತ್ರಿಃ**—ಮೂರು ಸಲ । **ವರ್ತಿಃ**—ನಮ್ಮ ಮನೆಗೆ । **ಯಾತಂ**—ದಯಮಾಡಿ (ಹಾಗೆಯೇ) । **ಅನುವ್ರತೇ**—ನಮಗೆ ಒಳ್ಳೆಯದನ್ನು ಮಾಡುವ । **ಜನೇ**—ಜನರ ವಿಷಯದಲ್ಲಿ (ಅವರ ಮನೆಗೂ) । **ತ್ರಿಃ ಯಾತಂ**—ಮೂರು ಸಲ ದಯಮಾಡಿ । **ತ್ರಿಃ**—ಮೂರು ಸಲ ।

**ಸುಪ್ರಾವ್ಯೇ**—ರಕ್ಷಿಸಲು ಯೋಗ್ಯರಾದ ನಮಗೆ । **ತ್ರೇಧೇವ**—ಮೂರು ಪ್ರಕಾರಗಳಿಂದಲೂ । **ಶಿಕ್ಷತಂ**—(ಜ್ಞಾನವನ್ನು) ಉಪದೇಶಮಾಡಿ । **ನಾಂದ್ಯಂ**—ಸಂತೋಷಕರವಾದ ಫಲವನ್ನು । **ತ್ರಿಃ ವಹತಂ**—ಮೂರು ಸಲ ತಂದುಕೊಡಿ । **ಅಕ್ಷರಾ ಇವ**—(ಪರ್ಜನ್ಯನು) ಉದಕಗಳಂತೆ । **ಅಸ್ಮೇ**—ನಮಗೆ । **ಪೃಕ್ಷಃ**—ಅನ್ನವನ್ನು **ತ್ರಿಃ**—ಮೂರು ಸಲ । **ಪಿನ್ವತಂ**—ಒದಗಿಸಿಕೊಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಪ್ರತಿದಿನವೂ ಮೂರುಸಲ ನಮ್ಮ ಮತ್ತು ನಮಗೆ ಒಳ್ಳೆಯದನ್ನು ಮಾಡುವವರ ಮನೆಗೆ ದಯಮಾಡಿ ಅನುಗ್ರಹಿಸಿ. ನಾವು ರಕ್ಷಣೆಗೆ ಯೋಗ್ಯರು. ಅಂತಹ ನಮಗೆ ಮೂರು ಪ್ರಕಾರಗಳಿಂದ ಜ್ಞಾನವನ್ನು ಉಪದೇಶಮಾಡಿ ನಮಗೆ ಅನ್ನವನ್ನೂ ಸಹ ದಿನಕ್ಕೆ ಮೂರುಸಲ ಕೊಡಿ.

English Translation

O Aswins, thrice visit our house and persons who are well disposed towards us; thrice repair to him who deserves your protection and instruct us in three-fold knowledge; thrice grant us rewards which please us; thrice bestow upon us food as the unceasing streams of water (rain)

॥ ವಿಶೇಷವಿಷಯಗಳು ॥

**ಅನುವ್ರತೇ ಜನೇ**—ಅಸ್ಮದನುಕೂಲವ್ಯಾಪಾರಯುಕ್ತೇ ಜನೇ । ನಮ್ಮ ವಿಷಯದಲ್ಲಿ ಅನುಕೂಲವಾಗಿ ಪ್ರವರ್ತಿಸುವ ಜನರಲ್ಲಿ ; ನಮ್ಮ ಹಿತೈಷಿಗಳಲ್ಲಿ.

**ಸುಪ್ರಾವ್ಯೇ—ಸುಷ್ಠು ಭವದ್ಭ್ಯಾಂ ರಕ್ಷಣೀಯೇ ।** ನಿಮ್ಮನ್ನು ಸ್ತೋತ್ರಾದಿಗಳಿಂದ ಸ್ತುತಿಸಿ ಆಹ್ವಾನಮಾಡುವುದರಿಂದ ನಿಮ್ಮ ರಕ್ಷಣೆಯನ್ನು ಪಡೆಯಲು ಅರ್ಹರಾದ ಜನರೆಂದಭಿಪ್ರಾಯವು.

**ತ್ರೇಧೇವ ಶಿಕ್ಷತಂ**—ಇಲ್ಲಿ ಮೂರು ವಿಧವಾದ ಶಿಕ್ಷಣವೆಂದರೆ ಯಾವುದು ಎಂಬುದು ಸಂದೇಹಾಸ್ಪದವಾಗಿದೆ. ಪ್ರಾಯಶಃ ಕಾಯಾ, ವಾಚಾ, ಮನಸಾ ಎಂಬ ಅರ್ಥಗಳು ಸೂಚಿಸಲ್ಪಟ್ಟಿರಬಹುದು.

**ನಾಂದ್ಯಂ—ನಂದನೀಯಂ, ಹರ್ಷಪ್ರದಂ ।** ಸಂತೋಷವನ್ನುಂಟುಮಾಡುವ, ಹರ್ಷಪ್ರದವಾದ. ನಮಗೆ ಅವಶ್ಯಕವಾಗಿ ಬೇಕಾದ ವಸ್ತುವು ದೊರೆತಲ್ಲಿ ನಮಗೆ ಸಂತೋಷವಾಗುವುದು ಸಹಜವು.

**ವಹತಂ—ಪ್ರಾಪಯತಂ**—ದೊರಕಿಸಿ ಕೊಡಿ.

**ಪೃಕ್ಷಃ**—ಅನ್ನವು, ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನವಾಚಕಶಬ್ದಗಳ ಮಧ್ಯದಲ್ಲಿ ಪೃಕ್ಷಃ ಎಂಬ ಶಬ್ದವು ಪಠಿತವಾಗಿರುವುದರಿಂದ ಪೃಕ್ಷವೆಂದರೆ ಅನ್ನವು, ಆಹಾರವು ಎಂದರ್ಥ.

**ಅಕ್ಷರೇವ ಪಿನ್ವತಂ—ಉದಕಮಿವ ಸಿಂಚತಂ ।** ಅರ್ಣಃ, ಕ್ಷೋದಃ ಮೊದಲಾದ ನೂರೊಂದು ಉದಕ ನಾಮುಗಳ ಮಧ್ಯದಲ್ಲಿ ಅಕ್ಷರಶಬ್ದವು ಪಠಿತವಾಗಿರುವುದರಿಂದ (ನಿ. ೨-೨೪) ಅಕ್ಷರೇವ ಎಂದರೆ ನೀರಿನಂತೆ, ಮಳೆ ಯಂತೆ ಎಂದರ್ಥವು. ಈ ವಿಷಯದಲ್ಲಿ—

**ತಸ್ಯಾಃ ಸಮುದ್ರಾ ಅಧಿ ವಿಕ್ಷರಂತಿ ತೇನ ಜೀವಂತಿ ಪ್ರದಿಶಶ್ಚತಸಃ ।**
**ತತಃ ಕ್ಷರತ್ಯಕ್ಷರಂ ತದ್ವಿಶ್ವಮುಪ ಜೀವತಿ ॥**
(ಋ. ಸಂ. ೧-೧೬೪-೪೨)

ಎಂಬ ಋಕ್ಕು ಅಕ್ಷರಶಬ್ದಾರ್ಥವನ್ನು ಸ್ಪಷ್ಟವಾಗಿ ವಿವರಿಸಿರುವುದು. ಇಲ್ಲಿ ಕ್ಷರತಿ ಅಕ್ಷರಂ ತದ್ವಿಶ್ವಮುಪಜೀವತಿ—(ಮೇಘಾಃ) ·ಉದಕಂ ವರ್ಷಂತಿ ತೇನ ಉದಕೇನ ವಿಶ್ವಂ ಭೂತಜಾತಂ ಉಪಜೀವತಿ ॥ ಎಂದರೆ ಮೇಘಗಳು ಉದಕವನ್ನು ವೃಷ್ಟಿರೂಪದಲ್ಲಿ ಸುರಿಯುವವು—ಆ ಉದಕದಿಂದ ಪ್ರಪಂಚದಲ್ಲಿರುವ ಸಮಸ್ತ ಪ್ರಾಣಿಸಮೂಹವೂ (ಸಸ್ಯವರ್ಗವೂ ಸಹ) ಜೀವಿಸುವುದು ಎಂದು ಮುಖ್ಯಾರ್ಥ. ಆದುದರಿಂದ ಮಳೆಯ ರೂಪದಲ್ಲಿ ಸುರಿಯುವ ಉದಕವು ಪ್ರಾಣಿಸಮೂಹಕ್ಕೆ ಅತ್ಯಾವಶ್ಯಕವೂ, ಸಂತೋಷಪ್ರದವೂ ಆಗಿರುವುದು. ಅದರಂತೆ ನಮಗೆ ಸಂತೋಷ ಪ್ರದವಾದ ಆಹಾರಾದಿಗಳನ್ನು ಕೊಡಬೇಕೆಂದು ಪ್ರಾರ್ಥಿಸಲಾಗಿರುವುದು.

**ಪಿನ್ವತಂ—ಸಿಂಚತಂ, ಯಚ್ಛತಂ**—ಕೊಡಿ, ಅನುಗ್ರಹಿಸಿ ಇತ್ಯಾದಿ.

॥ ವ್ಯಾಕರಣಪ್ರಕ್ರಿಯಾ ॥

**ವರ್ತಿಃ**—ವೃತು ವರ್ತನೇ ಧಾತು, ವರ್ತತೇ ಅಸ್ಮಿನ್ (ಇದರಲ್ಲಿ ಇರುವನು) ಎಂದು ವಿಗ್ರಹ. **ಹೃ ಪಿಷಿ ರುಹಿವೃತಿ ವಿದಿಛಿದಿ ಕೀರ್ತಿಭ್ಯಶ್ಚ** (ಉ. ಸೂ. ೪-೫೨೮) ಹೃಞ್ ಹರಣೇ, ಪಿಸ್ಲೃ ಸಂಚೂರ್ಣನೇ, ರುಹ ಬೀಜ ಜನ್ಮನಿ ಪ್ರಾದುರ್ಭಾವೇ ಚ, ವೃತು ವರ್ತನೇ, ವಿದ ಸತ್ತಾಯಾಂ, ಛಿದಿರ್ ದ್ವೈಧೀಕರಣೇ, ಕೄತ ಸಂಶಬ್ದನೇ ಈ ಏಳು ಧಾತುಗಳ ಮುಂದೆ ಇನ್ ಪ್ರತ್ಯಯ ಬರುತ್ತೆ ಎಂದು ಅರ್ಥ, **ಸರ್ವಧಾತುಭ್ಯ ಇನ್** (ಉ ಸೂ. ೪-೫೫೭) ಎಂಬ ಹಿಂದಿನ ಸೂತ್ರದಿಂದ ಇನ್ ಎಂದು ಅನುವೃತ್ತಿಯಾಗುತ್ತೆ. ಆದ್ದರಿಂದ ಇ ಪ್ರತ್ಯಯ ಬರುತ್ತೆ ಎಂದು ಅರ್ಥ ಹೇಳಲು ಅವಕಾಶವಿಲ್ಲ. ಇನ್‌ಪ್ರತ್ಯಯ ನಿತ್, ಆದ್ದರಿಂದ ನಿತ್ಸ್ವರ ಬರಬೇಕಾಗುತ್ತೆ. ಮನ್ತ್ರದಲ್ಲಿ ವರ್ತಿಃ ಎಂಬುದು ಅಂತೋದಾತ್ತವಾಗಿದೆ. ಏವಂಚ ಇಪ್ರತ್ಯಯವು ಸೂತ್ರದಿಂದ ಬರಲಾರದು. ಇನ್‌ಬಂದರೆ ಸ್ವರ ಸರಿಹೋಗದು. ಹೀಗೆ ಎರಡು ಕಡೆಯಲ್ಲಿಯೂ ಗಂಟುಳ್ಳ ಹಗ್ಗದ ಗತಿ ಬಂತು (ಸೇಯಮುಭಯತಃ ಪಾಶಾರಜ್ಜುಃ) ಇನ್‌ಪ್ರತ್ಯಯವನ್ನು ಒಪ್ಪಿ ವರ್ತಿಶಬ್ದವನ್ನು ಆಕೃತಿಗಣವಾದ ಉಞ್ಛಾದಿಯಲ್ಲಿ ಸೇರಿಸಿ **ಉಞ್ಛಾದೀನಾಂಚ** (ಪಾ. ಸೂ. ೬-೧-೧೬೦) ಎಂದು ಅಂತೋದಾತ್ತವನ್ನು ಹೇಳಬಹುದು. **ಯಸ್ಯ ಸಂಸ್ಥೇನ ವೃಣ್ವತೇ ಹರೀ**—(ಋ. ಸಂ. ೧-೫-೪) ಎಂಬಲ್ಲಿ ಹರೀ ಎಂಬುದರ ಪ್ರಕ್ರಿಯೆಯನ್ನು ಹೇಳುವಾಗ **ಹೃಪಿಷಿರುಹಿ—,** ಎಂಬ ಉಣಾದಿ ಸೂತ್ರದಿಂದ ಇನ್‌ಪ್ರತ್ಯಯವನ್ನು ವೇದಭಾಷ್ಯದಲ್ಲಿ ಹೇಳಿರುವರು. ಏವಂಚ ಇಲ್ಲಿ ಇದೇ ಸೂತ್ರದಿಂದ ಇ ಪ್ರತ್ಯಯ ವನ್ನು ಹೇಳುವುದು ಸರಿಯಲ್ಲ. **ಸುಪಾಂ ಸುಲುಕ್—,** ಎಂಬುದರಿಂದ ದ್ವಿತೀಯೈಕವಚನ ಅಮ್‌ಗೆ ಸು ಆದೇಶ

**ಸುಪ್ರಾವ್ಯೇ**—ಸು, ಪ್ರ, ಎಂಬ ಎರಡು ಉಪಸರ್ಗಗಳಿಂದ ಕೂಡಿದ ಅವ ರಕ್ಷಣೇ ಧಾತು ಮುಂದೆ **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಋವರ್ಣಾಂತ, ಅಥವಾ ವ್ಯಂಜನಾಂತವಾದ ಧಾತುವಿನ ಮುಂದೆ ಭಾವ ಅಥವಾ ಕರ್ಮ ಎಂಬ ಅರ್ಥಗಳಲ್ಲಿ ಣ್ಯತ್ ಬರುತ್ತೆ ಎಂದು ಕರ್ಮಾರ್ಥದಲ್ಲಿ ಣ್ಯತ್ ಪ್ರತ್ಯಯ. ಸುಪ್ರ+ಅವ್+ಯ. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಞಿತ್ ಣಿತ್ ಆದ ಪ್ರತ್ಯಯ ಪರದಲ್ಲಿದ್ದರೆ ಉಪಧಾಭೂತ ವಾದ ಹ್ರಸ್ವಾಕಾರಕ್ಕೆ ವೃದ್ಧಿಬರುತ್ತೆ ಎಂದು ವೃದ್ಧಿಗೆ ಪ್ರಾಪ್ತಿ ಇದೆ. ಆ-ಐ-ಔ ಗಳಿಗೆ ವೃದ್ಧಿಸಂಜ್ಞೆಯು **ವೃದ್ಧಿರಾದೈಚ್** (ಪಾ. ಸೂ. ೧-೧-೧) ಎಂದು ವಿಹಿತವಾಗಿದೆ. ವೃದ್ಧಿಸಂಜ್ಞೆಯನ್ನು ಮುನ್ನಿಟ್ಟುಕೊಂಡು ಬರುವುದರಿಂದ **ಅತ ಉಪಧಾಯಾಃ** ಎಂಬುದು ಸಂಜ್ಞಾಪೂರ್ವಕವಿಧಿಯಾಗುತ್ತೆ. **ಸಂಜ್ಞಾಪೂರ್ವಕೋ ವಿಧಿರನಿತ್ಯಃ** (ಪರಿಭಾ ೯೫) ಎಂದು ಇದು ಅನಿತ್ಯವಾಗುವುದರಿಂದ ಇಲ್ಲಿ ಬರುವುದಿಲ್ಲ. ಏವಂಚ ಬಿಡಿಸುವಾಗ ಅವ್ಯೇ ಎಂದು ಹೇಳಬೇಕು ಆವ್ಯೇ ಎಂದು ಹೇಳಕೂಡದು. ಸವರ್ಣದೀರ್ಘ, ಸುಪ್ರಾವ್ಯ-ಸಪ್ತಮ್ಯೇಕವಚನ. **ತಿತ್ಸ್ವರಿತಮ್** (ಪಾ. ಸೂ. ೬ ೧-೧೮೫) ಎಂದು ಸುಪ್ರಾವ್ಯ ಎಂಬಲ್ಲಿ ಯ ಸ್ವರಿತ.

**ಶಿಕ್ಷತಮ್**—ಶಿಕ್ಷ ವಿದ್ಯೋಪಾದಾನೇ, ಲೋಟ್ ಮಧ್ಯಮಪುರುಷ ದ್ವಿವಚನ ಥಸ್, ಲಙ್ವದ್ಭಾವ ತಮ್ ಆದೇಶ.

**ನಾನ್ದ್ಯಮ್**—ಟು ನದಿಸಮೃದ್ಧೌ, ಇದಿತ್, ನುಮ್ ಆಗಮ, ಹಲಂತವಾದ್ದರಿಂದ ಣ್ಯತ್ ಪ್ರತ್ಯಯವು ಭಾವಾರ್ಥದಲ್ಲಿ ಬರುತ್ತೆ. ಯತ್ ಸ್ವರಿತ, ನಕಾರಕ್ಕೆ ದೀರ್ಘವು ಛಾಂದಸ.

**ಪೃಕ್ಷಃ**—ಪೃಚೀ ಸಂಪರ್ಕೇ ಧಾತು. **ಸರ್ವಧಾತುಭ್ಯೋಽಸುನ್** ಎಂದು ಅಸುನ್, ಇದಕ್ಕೆ ಸುಡಾಗಮವು ಛಾಂದಸ, ಪೃಚ್+ಸಸ್, **ಚೋಃಕುಃ** (ಪಾ. ಸೂ. ೮-೨-೩೦) ಎಂದು ಚಕಾರಕ್ಕೆ ಕಕಾರ. **ಆದೇಶ ಪ್ರತ್ಯಯಯೋಃ** ಎಂದು ಸಕಾರಕ್ಕೆ ಷಕಾರ. ಪೃಕ್ಷಸ್ ದ್ವಿತೀಯೈಕವಚನಕ್ಕೆ ಲುಕ್ ರುತ್ವ-ವಿಸರ್ಗ.

**ಅಸ್ಮೇ**—ಅಸ್ಮದ್ ಶಬ್ದದ ಮುಂದೆ ಸಪ್ತಮಿಾ ಬಹುವಚನ ಸುಪ್. **ಸುಪಾಂ ಸುಲುಕ್—,** (ಪಾ. ಸೂ. ೭-೧-೩೯) ಎಂದು ಸುಪ್‌ಗೆ ಶೇ ಆದೇಶ. ಅಸ್ಮದ್+ಏ, **ಶೇಷೇಲೋಪಃ** (ಪಾ. ಸೂ. ೭-೨-೯೦) ಎಂದು ಟಿಲೋಪ ಉದಾತ್ತನಿವೃತ್ತಿಸ್ವರದಿಂದ ಏ ಉದಾತ್ತ, ಅಂತ್ಯಲೋಪಪಕ್ಷದಲ್ಲಿ ಅಸ್ಮ+ಏ, ಛಾಂದಸವಾಗಿ ಪರರೂಪ, ಏಕಾದೇಶಸ್ವರ.

**ಅಕ್ಷರಾ ಇವ**—ಅಶೂ ವ್ಯಾಪ್ತೌ ಧಾತು, ಅಶ್ನುವನ್ತಿ=ವ್ಯಾಪ್ನುವಂತಿ (ಸಮಸ್ತವನ್ನೂ ವ್ಯಾಪಿಸುವುವು) ಎಂದು ವಿಗ್ರಹ, ಅಕ್ಷರಾಣಿ ಎಂದರೆ ನೀರು. ಅಶ್ ಧಾತು ಮುಂದೆ ಔಣಾದಿಕ ಕ್ಸರ ಪ್ರತ್ಯಯ, ಅಶ್+ಸರ, **ವ್ರಶ್ಚ....ಛಶಾಂಷಃ** (ಪಾ ಸೂ. ೮-೨-೩೬) ಎಂದು ಶಕಾರಕ್ಕೆ ಷಕಾರ, **ಷಢೋಃ ಕಸ್ಸಿ** ಎಂದು ಷಕಾರಕ್ಕೆ ಕಕಾರ, ಷತ್ವ ಅಕ್ಷರ, ಪ್ರಥಮಾಬಹುವಚನ ಜಸ್, **ಜಶ್ಶಸೋಶ್ಶಿಃ** ಎಂದು ಜಸ್‌ಗೆ ಶಿ ಆದೇಶ. **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂದು ಶಿಗೆ **ಲೋಪ, ನಪುಂಸಕಸ್ಯ ಝಲಚಃ** (ಪಾ. ಸೂ. ೭-೧-೭೨) ಎಂದು ನುಮ್ ಆಗಮ **ಸರ್ವನಾಮಸ್ಥಾನೇಚಾಸಂಬುದ್ಧೌ** ಎಂದು ದೀರ್ಘ, ನಕಾರಲೋಪ, ಇವಶಬ್ದಮೊಂದಿಗೆ ನಿತ್ಯಸಮಾಸ. ॥ ೪ ॥

॥ ಸಂಹಿತಾಪಾಠಃ ॥

ತ್ರಿರ್ನೋ ರಯಿಂ ವಹತಮಶ್ವಿನಾ ಯುವಂ ತ್ರಿರ್ದೇವತಾತಾ
ತ್ರಿರುತಾವತಂ ಧಿಯಃ ।
ತ್ರಿಃ ಸೌಭಗತ್ವಂ ತ್ರಿರುತ ಶ್ರವಾಂಸಿ ನಸ್ತ್ರಿಷ್ಠಂ ವಾಂ ಸೂರೇ ದುಹಿ-
ತಾ ರುಹದ್ರಥಂ ॥ ೫ ॥

॥ ಪದಪಾಠಃ ॥

ತ್ರಿಃ । ನಃ । ರಯಿಂ । ವಹತಂ । ಅಶ್ವಿನಾ । ಯುವಂ । ತ್ರಿಃ । ದೇವಽ-
ತಾತಾ । ತ್ರಿಃ । ಉತ । ಅವತಂ । ಧಿಯಃ ।
ತ್ರಿಃ । ಸೌಭಗಽತ್ವಂ । ತ್ರಿಃ । ಉತ । ಶ್ರವಾಂಸಿ । ನಃ । ತ್ರಿಽಸ್ಥಂ ।
ವಾಂ । ಸೂರೇ । ದುಹಿತಾ । ಆ । ರುಹತ್ । ರಥಂ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾ ಯುವಂ ನೋಽಸ್ಮಾಕ್ನ್ರಯಿಂ ಧನಂ ತ್ರಿರ್ವಹತಂ । ತ್ರಿವಾರಂ ಪ್ರಾಪಯತಂ । ದೇವತಾತಾ ದೇವತಾತೌ ದೇವೈರ್ಯುಕ್ತೇ ಕರ್ಮಣಿ ತ್ರಿಸ್ತ್ರಿವಾರಮಾಗಚ್ಛತಮಿತಿ ಶೇಷಃ । ಉತಾಪಿ ಚ ಧಿಯೋಽಸ್ಮದ್ಬುದ್ಧೀಸ್ತ್ರಿಸ್ತ್ರಿವಾರಂ ರಕ್ಷತಂ । ಸೌಭಗತ್ವಂ ಸೌಭಾಗ್ಯಂ ತ್ರಿರ್ವಹತಮಿತಿ ಶೇಷಃ । ಉತಾಪಿ ಚ ಶ್ರವಾಂಸ್ಯನ್ನಾನಿ ನೋಽಸ್ಮಭ್ಯಂ ತ್ರಿರ್ವಹತಂ । ವಾಂ ಯುವಯೋಃ ಸಂಬಂಧಿನಂ ತ್ರಿಷ್ಠಂ ಚಕ್ರತ್ರಯೇಽವಸ್ಥಿತಂ ರಥಂ ಸೂರೇ ಸೂರ್ಯಸ್ಯ ದುಹಿತಾ ಪುತ್ರೀ । ದುಹಿತಾ ದುರ್ಹಿತಾ ದೂರೇ ಹಿತಾ । ನಿ. ೩-೪ । ಇತಿ ಯಾಸ್ಕಃ । ಸಾರೂಢವತೀ ॥ ದೇವತಾತಾ । ಸರ್ವದೇವಾತ್ತಾತಿಲ್ । ಪಾ. ೪-೪-೧೪೨ । ಇತಿ ಸ್ವಾರ್ಥಿಕಸ್ತಾತಿಲ್ಪ್ರತ್ಯಯಃ । ತೇನ ದೇವತಾತಿಶಬ್ದೇನ ದೇವಸಂಬದ್ಧೋ ಯಜ್ಞೋ ಲಕ್ಷ್ಯತೇ । ದೇವತಾತಾ ಮಖ ಇತಿ ತನ್ನಾಮಸು ಪಠಿತತ್ವಾತ್ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಸುಪಾಂ ಸುಲುಗಿತಿ ಸಪ್ತಮ್ಯಾ ಡಾದೇಶಃ । ತ್ರಿಷ್ಠಂ । ತ್ರಿಷು ಚಕ್ರೇಷು ತಿಷ್ಠತೀತಿ ತ್ರಿಷ್ಠಃ । ಸುಪಿ ಸ್ಥಃ ।

**ಪಾ. ೩-೨-೪ । ಇತಿ ಕಃ । ಅಂಬಾಂಬೇತ್ಯಾದಿನಾ । ಪಾ. ೮-೩-೯೭ । ಸಕಾರಸ್ಯ ಷತ್ವಂ । ಸೂರೇ । ಷೂ ಪ್ರೇರಣೇ । ಸುಸೂಧಾಗೃಧಿಭ್ಯಃ ಕ್ರನ್ । ಉ. ೪-೨೫ । ಇತಿ ಕ್ರನ್ । ನಿತ್ತ್ವಾದಾದ್ಯುದಾತ್ತಃ । ವಿಭಕ್ತಿವ್ಯತ್ಯಯಃ । ಆ ರುಹತ್ । ಕೃಮೃದೃರುಹಿಭ್ಯಶ್ಛಂದಸಿ । ಪಾ. ೩-೧-೫೯ । ಇತಿ ಚ್ಲೇರಙಾದೇಶಃ ॥**

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯುವಂ**—ನೀವು । **ನಃ**—ನಮಗೆ । **ರಯಿಂ**—ಐಶ್ವರ್ಯವನ್ನು । **ತ್ರಿಃ ವಹತಂ**—ಮೂರು ಸಲ ಒದಗಿಸಿ । **ದೇವತಾತಾ**—ದೇವತೋದ್ದೇಶಕವಾದ ನಮ್ಮ ಕರ್ಮಕಾಲದಲ್ಲಿ । **ತ್ರಿಃ (ಆಗಚ್ಛತಂ)**—ಮೂರು ಸಲ ದಯಮಾಡಿ । **ಉತ**—ಮತ್ತು । **ಧಿಯಃ**—ನಮ್ಮ ಬುದ್ಧಿಗಳನ್ನು । **ತ್ರಿಃ (ರಕ್ಷತಂ)**—ಮೂರು ಸಲ ಕಾಪಾಡಿ । **ಸೌಭಗತ್ವಂ**—ಅಭ್ಯುದಯವನ್ನು । **ತ್ರಿಃ (ವಹತಂ)**—ಮೂರು ಸಲ ಅನುಗ್ರಹಿಸಿ । **ಉತ**—ಮತ್ತು । **ಶ್ರವಾಂಸಿ**–ಅನ್ನವನ್ನು । **ನಃ**—ನಮಗೆ । **ತ್ರಿಃ (ವಹತಂ)**—ಮೂರು ಸಲ ಒದಗಿಸಿ । **ವಾಂ**—ನಿಮ್ಮ । **ತ್ರಿಷ್ಠಂ**—ಮೂರು ಗಾಲಿಯ ಮೇಲೆ ನಿಂತಿರುವ । **ರಥಂ**—ರಥವನ್ನು । **ಸೂರೇ**—ಸೂರ್ಯನ । **ದುಹಿತಾ**—ಮಗಳು । **ಆ ರುಹತ್**—ಹತ್ತಿದ್ದಾಳೆ ।

॥ ಭಾವಾರ್ಥ ॥

ಎಲೈ ಅಶ್ವಿನೀ ದೇವತೆಗಳೇ, ಮೂರು ಚಕ್ರದ ಆಧಾರದ ಮೇಲೆ ನಿಂತಿರುವ ನಿಮ್ಮ ರಥವನ್ನು ನಿಮ್ಮ ಭಾರ್ಯೆಯಾದ ಸೂರ್ಯನ ಮಗಳು ಹತ್ತಿದ್ದಾಳೆ. (ಆ ಸಂತೋಷದಿಂದ) ನಮಗೆ ಮೂರು ಸಲ ಐಶ್ವರ್ಯವನ್ನೂ, ಅಭ್ಯುದಯವನ್ನೂ ಅನುಗ್ರಹಿಸಿ. ನಾವು ನೆರವೇರಿಸುವ ದೇವತೋದ್ದೇಶವಾದ ಕರ್ಮಗಳಲ್ಲಿ ಮೂರು ಸಲ ದಯಮಾಡಿ, ಮೂರಾವೃತ್ತಿ ನಮ್ಮ ಬುದ್ಧಿಗಳನ್ನು ರಕ್ಷಿಸಿ. ನಮಗೆ ಮೂರು ಸಲ ಅನ್ನವನ್ನು ಒದಗಿಸಿ.

## English Translation

O Aswins, thrice bestow upon us riches; thrice approach our divine rite; thrice protect our intellects; thrice grant us prosperity and thrice food; the daughter of the Sun has ascended your three-wheeled car.

॥ ವಿಶೇಷ ವಿಷಯಗಳು ॥

**ತ್ರಿಷ್ಠಂ—ತ್ರಿಷು ಚಕ್ರೇಷು ತಿಷ್ಠತೀತಿ ತ್ರಿಷ್ಠಃ ।** ಮೂರು ಚಕ್ರಗಳಿರುವ ರಥ.

**ಸೂರೇ ದುಹಿತಾ—ಸೂರ್ಯಸ್ಯ ಪುತ್ರೀ ।** ಸೂರ್ಯನ ಪುತ್ರಿಯಾದ ಸೂರ್ಯಾದೇವಿ ಅಥವಾ ಸಾವಿತ್ರೀ. ಈ ವಿಷಯದಲ್ಲಿ ಯಾಸ್ಕರು—

**ದುಹಿತಾ । ದುರ್ಹಿತಾ ದೂರೇ ಹಿತಾ ದೋಗ್ಧೇರ್ವಾ ॥** (ನಿ. ೩-೪) ಎಂದು ಹೇಳಿರುವರು. ಎಂದರೆ— **ದುರ್ಹಿತಾ, ಸಾ ಹಿ ಯತ್ರೈವ ದೀಯತೇ ತತ್ರೈವ ದುರ್ಹಿತಾ ಭವತಿ । ದೂರೇ ಸತೀ ಸಾ ಪಿತುಃ ಹಿತಾ ಪಥ್ಯಾ ಭವತೀತಿ ದುಹಿತೇತ್ಯುಚ್ಯತೇ । ದೋಗ್ಧೇರ್ವಾ ಸಾ ಹಿ ನಿತ್ಯಮೇವ ಪಿತುಃ ಸಕಾಶಾತ್ ದ್ರವ್ಯಂ ದೋಗ್ಧಿ ಪ್ರಾರ್ಥನಾಪರತ್ವಾತ್**—ದುಹಿತಾ ಎಂದರೆ ಮಗಳು, ಪುತ್ರೀ ಎಂದು. ಕನ್ಯೆಯು ಪತಿಯ ಗೃಹದಲ್ಲಿ ವಾಸಮಾಡುವಾಗ ಹೊಸದರಲ್ಲಿ ಸರಿಯಾಗಿ ಹೊಂದಿಕೊಂಡು ಇರುವುದಿಲ್ಲವಾದ್ದರಿಂದ ದುರ್ಹಿತಾ ಅಥವಾ ದುಹಿತಾ ಎಂದು ಕರೆಯಲ್ಪಡುವಳು. ಅಥವಾ ತನ್ನ ತಂದೆಯ ಮನೆಯಿಂದ ದೂರದಲ್ಲಿರುವ ಪತಿಗೃಹದಲ್ಲಿ ವಾಸಮಾಡುವವಳಾದ್ದರಿಂದ ದೂರೇ+ಹಿತಾ=ದೂರದಲ್ಲಿರುವವಳು ಎಂದು ಪುತ್ರಿಗೆ ಹೆಸರು ಅಥವಾ ತನ್ನ ತಂದೆಯನ್ನು ಅನೇಕವೇಳೆ ಪ್ರಾರ್ಥಿಸಿ (ಅನೇಕವೇಳೆ ಬಲವಂತಪಡಿಸಿ) ದ್ರವ್ಯಾದಿಗಳನ್ನು ತನ್ನ ಪತಿಗಾಗಿ ತೆಗೆದುಕೊಳ್ಳುವವಳಾದ್ದರಿಂದ ಪುತ್ರಿಗೆ ದುಹಿತಾ ಎಂದು ಹೆಸರು—ಎಂದು ತಮ್ಮ ನಿರುಕ್ತದಲ್ಲಿ ದುಹಿತಾಶಬ್ದಕ್ಕೆ ಅರ್ಥವಿವರಣೆಮಾಡಿರುವರು.

**ಸೂರೇ ದುಹಿತಾ ರುಹದ್ರಥಂ**—ಸೂರ್ಯನ ಪುತ್ರಿಯು ಅಶ್ವಿನೀದೇವತೆಗಳ ರಥದಲ್ಲಿ ಹತ್ತಿ ಕುಳಿತಳು ಎಂಬ ವಿಚಾರದಲ್ಲಿ ನಾವು ಈ ಸೂಕ್ತದ ೨ ನೆಯ ಋಕ್ಕಿನ ವಿಶೇಷವಿಷಯದಲ್ಲಿ ಬರೆದಿರುವ ವಿವರಣೆಯನ್ನು ನೋಡಿ. ಮತ್ತು—

**ಯುವೋ ರಥಂ ದುಹಿತಾ ಸೂರ್ಯಸ್ಯ ಸಹ ಶ್ರಿಯಾ ನಾಸತ್ಯಾವೃಣೀತ ।**
(ಋ. ಸಂ. ೧-೧೧೭-೧೩)

**ಆ ವಾಂ ರಥಂ ಯುವತಿಸ್ತಿಷ್ಠದತ್ರ ಜುಷ್ಟ್ವೀ ನರಾ ದುಹಿತಾ ಸೂರ್ಯಸ್ಯ ॥**
(ಋ. ಸಂ. ೧-೧೧೮-೫)

**ಆ ಯದ್ವಾಂ ಸೂರ್ಯಾ ರಥಂ ತಿಷ್ಠದ್ರಘುಷ್ಯದಂ ಸದಾ ।**
(ಋ. ಸಂ. ೫-೭೩-೫)

ಎಂಬ ಋಕ್ಕುಗಳಲ್ಲಿ ಸೂರ್ಯನ ಪುತ್ರಿಯು ಅಶ್ವಿನೀದೇವತೆಗಳ ರಥದಲ್ಲಿ ಕುಳಿತಿರುವ ವಿಷಯವನ್ನು ತಿಳಿಸುತ್ತವೆ. ಏಕೆಂದರೆ ಈ ಅಶ್ವಿನೀದೇವತೆಗಳು ಸೂರ್ಯಪುತ್ರಿಯನ್ನು ವಿವಾಹಮಾಡಿಕೊಂಡರೆಂದು ಕೆಲವು ಕಡೆ ಹೇಳಿರುವುದು. ಆದ್ದರಿಂದ ತಮಗೆ ಪ್ರೀತಿಪಾತ್ರಳಾದ ಸೂರ್ಯಪುತ್ರಿಯನ್ನು ಅಶ್ವಿನೀದೇವತೆಗಳು ತಮ್ಮ ರಥದಲ್ಲಿ ಕುಳ್ಳಿರಿಸಿಕೊಂಡು ತಮ್ಮ ಗೃಹಾಭಿಮುಖವಾಗಿ ಪ್ರಯಾಣಮಾಡುತ್ತಿದ್ದರೆಂಬ ವರ್ಣನೆಗಳು ಅಲ್ಲಲ್ಲಿ ಸೂಚಿತವಾಗಿವೆ.

॥ ವ್ಯಾಕರಣಪ್ರಕ್ರಿಯಾ ॥

**ದೇವತಾತಾ—ಸರ್ವದೇವಾತ್ತಾತಿಲ್** (ಪಾ. ಸೂ. ೪-೪-೧೪೨) ಸರ್ವ-ದೇವ ಈ ಶಬ್ದಗಳ ಮುಂದೆ ಸ್ವಾರ್ಥದಲ್ಲಿ ತಾತಿಲ್ ಬರುತ್ತೆ ಎಂದು ದೇವಶಬ್ದದ ಮುಂದೆ ತಾತಿಲ್ ಪ್ರತ್ಯಯ. ದೇವ+ತಾತಿ, ದೇವತಾತಿಶಬ್ದಕ್ಕೆ ದೇವತೆ ಎಂದೇ ಅರ್ಥ, ಇಲ್ಲಿ ದೇವತೆಯ ಸಂಬಂಧ ಇರುವ ಯಾಗವು ಲಕ್ಷಣಾವೃತ್ತಿಯಿಂದ ಈ ಪದದಿಂದ ಬೋಧಿತವಾಗುತ್ತೆ. ಯಾಸ್ಕರು ನಿರುಕ್ತದಲ್ಲಿ ಯಾಗನಾಮಗಳ ಮಧ್ಯದಲ್ಲಿ **ದೇವತಾತಾ ಮಖಃ** (ನಿ. ೩-೧೭-೧೦) ಎಂದು ಈ ಪದವನ್ನು ಪಠಿಸಿರುವರು **ಲಿತಿ** (ಪಾ. ೬-೧-೧೯೩) ಲಕಾರೇತ್ಕವಾದ ಪ್ರತ್ಯಯ ಪರದಲ್ಲಿದ್ದರೆ ಪೂರ್ವವಣವು

ಉದಾತ್ತವಾಗುತ್ತೆ ಎಂದು ಪ ಉದಾತ್ತ. ದೇವತಾತಿ ಶಬ್ದದ ಮುಂದೆ ಜಃ ಪ್ರತ್ಯಯ, **ಸುಪಾಂಸುಲುಕ್**—ಎಂದು ಜಃಗೆ ಡಾ ಆದೇಶ, ಡಿತ್ಕರಣಸಾಮರ್ಥ್ಯದಿಂದ ಟಿಗೆ ಲೋಪ.

**ತ್ರಿಷ್ಠಮ್**—ತ್ರಿಷು ತಿಷ್ಠತೀತಿ ತ್ರಿಷ್ಠಃ, ಮೂರು ಚಕ್ರಗಳ ಮೇಲೆ ಇರುವ ರಥ, ಷ್ಠಾ ಗತಿ ನಿವೃತ್ತೌ ಧಾತು, ಷಕಾರಕ್ಕೆ ಸಕಾರ. **ನಿಮಿತ್ತಾಪಾಯೇ—,** ಎಂದು ಷ್ಟುತ್ವನಿವೃತ್ತಿ. ಸ್ಥಾ ಎಂದಿದೆ, **ಸುಪಿಸ್ಥಃ** (ಪಾ. ಸೂ. ೩-೨-೪) ಸುಪಿ-ಸ್ಥಃ ಎಂದು ಈ ಸೂತ್ರವನ್ನು ವಿಭಾಗಮಾಡಿರುವರು. **ಕೃತ್ರಿಮಾಕೃತ್ರಿಮಯೋಃ ಕೃತ್ರಿಮಸ್ಯೈವಗ್ರಹಣಂ** ಸ್ವಶಾಸ್ತ್ರಸಂಕೇತಿತವಾದದ್ದು ಕೃತ್ರಿಮ, ತದ್ಭಿನ್ನವಾದದ್ದು ಅಕೃತ್ರಿಮ ಈ ಎರಡಕ್ಕೂ ಗ್ರಹಣ ಸಂಭವಿಸಿದರೆ ಕೃತ್ರಿಮಕ್ಕೆ ಗ್ರಹಣ ಬರುತ್ತೆ ಎಂದು ಪರಿಭಾಷೆಯ ಅರ್ಥ. ಸುಪ್ ಎಂಬುದು ಸಪ್ತಮೀ ಬಹುವಚನ. ಪ್ರಥಮೈಕವಚನ ಸು ಮೊದಲು ಸುಪ್‌ನ ಪಕಾರದೊಂದಿಗೆ **ಆದಿರಂತ್ಯೇನಸಹೇತಾ** (ಪಾ. ಸೂ. ೧-೧-೭೧) ಎಂದು ಪ್ರತ್ಯಾಹಾರಮಾಡಿದರೆ ಸುಪ್ ಎಂಬುದು ಇಪ್ಪತ್ತೊಂದು ಪ್ರತ್ಯಯವನ್ನೂ ಬೋಧಿಸುತ್ತೆ, ಇದು ಪಾಣಿನಿಮಹರ್ಷಿಗಳು ಮಾಡಿರುವ ಸಂಕೇತ, ಈಗ ಸುಪ್‌ಪದದಿಂದ ಹಿಂದೆ ಹೇಳಿದ ಪರಿಭಾಷೆಯಿಂದ ಇಪ್ಪತ್ತೊಂದಕ್ಕೂ ಗ್ರಹಣ. **ಧಾತೋಃ** (ಪಾ. ಸೂ. ೩-೧-೯೧) ಎಂದು ಅಧಿಕಾರ ಇದೆ. **ಕರ್ತರಿ ಕೃತ್** (ಪಾ. ಸೂ. ೩-೪-೬೭) ಎಂಬುದರಿಂದ ಇದು ಕರ್ತ್ರರ್ಥದಲ್ಲಿ ಬರುತ್ತೆ. ಏವಂಚ ಸುಬಂತವು ಉಪಪದವಾಗಿರುವಾಗ ಧಾತುಗಳ ಮುಂದೆ ಕರ್ತೃ ಎಂಬ ಅರ್ಥದಲ್ಲಿ ಕ ಪ್ರತ್ಯಯ ಬರುತ್ತೆ ಎಂದು **ಸುಪಿ** ಎಂಬ ವಿಭಕ್ತಸೂತ್ರದ ಅರ್ಥ, ಎರಡನೆಯದಕ್ಕೆ ಸುಬಂತವು ಉಪಪದವಾದಾಗ ಸ್ಥಾ ಧಾತು ಮುಂದೆ ಭಾವಾರ್ಥದಲ್ಲಿ ಕ ಪ್ರತ್ಯಯ ಬರುತ್ತೆ ಎಂದು ಅರ್ಥ, ಪ್ರಕೃತ ಸುಪಿ ಎಂಬ ಮೊದಲನೆಯದರಿಂದ ಕರ್ತ್ರರ್ಥದಲ್ಲಿ ಸ್ಥಾ ಧಾತು ಮುಂದೆ ಕ ಪ್ರತ್ಯಯ, ಕೃದಂತವಾದ್ದರಿಂದ ಪ್ರಾತಿಪದಿಕಸಂಜ್ಞೆಯೂ, ಅದರ ಸುಪ್‌ಗೆ ಲುಕ್ಕೂ ಬರುತ್ತೆ. ತ್ರಿ+ಸ್ಥಾ+ಅ **ಆತೋಲೋಪಇಟಿಚ** (ಪಾ. ಸೂ. ೬-೪-೬೪) ಎಂದು ಆಕಾರಲೋಪ, ತ್ರಿ+ಸ್ಥ ಈಗ **ಅಮ್ಬಾಮ್ಬ-ಗೋಭೂಮಿ ಸವ್ಯಾಪದ್ವಿತ್ರಿ ಕುಶೇಕುಶಙ್ಕ್ವಂಗು ಮಞ್ಜಿಪುಞ್ಜಿಪರಮೇ ಬರ್ಹಿರ್ದಿವ್ಯಗ್ನಿಭ್ಯಸ್ಥಃ** (ಪಾ. ಸೂ. ೮-೩-೯೭) ಅಮ್ಬ, ಆಮ್ಬ-ಗೋ-ಭೂಮಿ, ಸವ್ಯ, ಅಪ, ದ್ವಿ, ತ್ರಿ, ಕುಶೇ, ಕು, ಶಙ್ಕು, ಅಙ್ಗು, ಮಞ್ಜಿ, ಪುಞ್ಜಿ, ಪರಮೇ, ಬರ್ಹಿಸ್, ದಿವಿ, ಅಗ್ನಿ, ಈ ಹದಿನೆಂಟು ಶಬ್ದಗಳ ಮುಂದೆ ಇರುವ ಕಪ್ರತ್ಯಯಾಂತವಾದ ಸ್ಥಾ ಧಾತುವಿನ ಸಕಾರಕ್ಕೆ ಷಕಾರ ಬರುತ್ತೆ ಎಂದು ಸಕಾರಕ್ಕೆ ಷಕಾರ **ಷ್ಟುನಾ ಷ್ಟುಃ** (ಪಾ. ಸೂ ೮-೪-೪) ಎಂದು ಷ್ಟುತ್ವದಿಂದ ತವರ್ಗದ ಎರಡನೆಯ ವರ್ಣವಾದ ಥಕಾರಕ್ಕೆ ಟವರ್ಗದ ಎರಡನೆಯ ವರ್ಣ ಠಕಾರ. ದ್ವಿತೀಯೈಕವಚನಾಂತ.

**ಸೂರೇ**—ಷೂ ಪ್ರೇರಣೇ, ಧಾತು. **ಧಾತ್ವಾದೇಃ ಷಃ ಸಃ** ಎಂದು ಷಕಾರಕ್ಕೆ ಸಕಾರ, **ಸುಸೂ ಧಾಗೃಧಿಭ್ಯಃ ಕ್ರನ್** (ಉ.ಸೂ ೨-೧೮೨) ಷುಞ್ ಅಭಿಷವೇ, ಷೂ ಪ್ರೇರಣೇ, ಡುಧಾಞ್ ಧಾರಣಪೋಷಣಯೋಃ, ಗೃಧು ಅಭಿಕಾಂಕ್ಷಾಯಾಂ, ಈ ಧಾತುಗಳ ಮುಂದೆ ಕ್ರನ್ ಬರುತ್ತೆ ಎಂದು ಷೂ ಧಾತು ಮುಂದೆ ಕ್ರನ್, ಸೂ+ರ, ಪ್ರತ್ಯಯ ಕಿತ್ತಾದ್ದರಿಂದ ಗುಣ ಬರುವುದಿಲ್ಲ, ನಿತ್ಸ್ವರ ಆದ್ಯುದಾತ್ತ ಬರುತ್ತೆ. ಪ್ರಥಮಾವಿಭಕ್ತಿಗೆ ಬದಲಾಗಿ ಸಪ್ತಮೀ ವಿಭಕ್ತಿಯು ಛಾಂದಸವಾಗಿ ಬಂದಿದೆ.

**ಆರುಹತ್**—ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ ಧಾತು, ಇದರ ಮುಂದೆ ಲುಙ್, ಅಡಾಗಮ, **ಚ್ಲಿ ಲುಙಿ** (ಪಾ. ಸೂ. ೩-೧-೪೩) ಎಂದು ಚ್ಲಿ. ಅರುಹ್+ಚ್ಲಿ ಲುಙ್, ತಿಪ್, ಇಕಾರಲೋಪ, **ಕೃಮೃದೃರುಹಿಭ್ಯಶ್ಛಂದಸಿ** (ಪಾ. ಸೂ. ೩-೧-೫೯) ಡುಕೃಞ್ ಕರಣೇ, ಮೃಙ್ ಪ್ರಾಣತ್ಯಾಗೇ, ದೃ ವಿದಾರಣೇ, ರುಹ ಬೀಜಜನ್ಮಾದೌ, ಈ ಧಾತುಗಳ ಮುಂದೆ ಇರುವ ಚ್ಲಿಗೆ ಅಙ್ ಛಂದಸ್ಸಿನಲ್ಲಿ ವಿಕಲ್ಪವಾಗಿ ಬರುತ್ತೆ ಎಂದು ಚ್ಲಿಗೆ ಅಙ್ ಆದೇಶ, ಆಙ್ ಉಪಸರ್ಗ, ಸವರ್ಣದೀರ್ಘ, ಆರುಹತ್ ಎಂದಾಯಿತು, ಲೋಕದಲ್ಲಿ ಆರುಕ್ಷತ್ ಎಂದಾಗುತ್ತೆ. ॥ ೫ ॥

---

॥ ಸಂಹಿತಾಪಾಠಃ ॥

ತ್ರಿರ್ನೋ॑ ಅಶ್ವಿನಾ ದಿ॒ವ್ಯಾನಿ॑ ಭೇಷ॒ಜಾ ತ್ರಿಃ ಪಾರ್ಥಿ॑ವಾನಿ॒ ತ್ರಿರು॑ ದತ್ತ॒ಮ॒ದ್ಭ್ಯಃ ॥
ಓ॒ಮಾನಂ॑ ಶಂ॒ಯೋರ್ಮಮ॑ಕಾಯ ಸೂ॒ನವೇ॑ ತ್ರಿ॒ಧಾತು॒ ಶರ್ಮ॑ ವಹತಂ ಶುಭಸ್ಪತೀ ॥ ೬ ॥

॥ ಪದಪಾಠಃ ॥

ತ್ರಿಃ । ನ॒ಃ । ಅ॒ಶ್ವಿ॒ನಾ॒ । ದಿ॒ವ್ಯಾನಿ॑ । ಭೇ॒ಷ॒ಜಾ । ತ್ರಿಃ । ಪಾರ್ಥಿ॑ವಾನಿ । ತ್ರಿಃ । ಊಁ ಇತಿ । ದ॒ತ್ತ॒ಂ । ಅ॒ತ್ಽಭ್ಯಃ ।
ಓ॒ಮಾನಂ॑ । ಶ॒ಂಽಯೋಃ । ಮಮ॑ಕಾಯ । ಸೂ॒ನವೇ॑ । ತ್ರಿ॒ಽಧಾತು॑ । ಶರ್ಮ॑ । ವ॒ಹ॒ತ॒ಂ । ಶು॒ಭ॒ಃ । ಪ॒ತೀ॒ ಇತಿ॑ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾ ನೋಽಸ್ಮಭ್ಯಂ ದಿವ್ಯಾನಿ ದ್ಯುಲೋಕವರ್ತೀನಿ ಭೇಷಜಾ ಔಷಧಾನಿ ತ್ರಿರ್ದತ್ತಂ। ತಥಾ ಪಾರ್ಥಿವಾನಿ ಪೃಥಿವ್ಯಾಮುತ್ಪನ್ನಾನ್ಯೌಷಧಾನಿ ತ್ರಿರ್ದತ್ತಂ। ಅದ್ಭ್ಯ ಉ ಅಂತರಿಕ್ಷಸಕಾಶಾದ-ಪ್ಯೌಷಧಾನಿ ತ್ರಿರ್ದತ್ತಂ। ಆಪ ಇತ್ಯಂತರಿಕ್ಷನಾಮ ಆಪಃ ಪೃಥಿವೀ ಭೂರಿತಿ ತನ್ನಾಮಸು ಪಾಠಾತ್। ಶಂಯೋರೇತನ್ನಾಮಕಸ್ಯ ಬೃಹಸ್ಪತಿಪುತ್ರಸ್ಯ। ತೇ ಶಂಯುಂ ಬಾರ್ಹಸ್ಪತ್ಯಮಬ್ರುವನ್। ತೈ. ಸಂ. ೨-೬-೧೦-೧। ಇತಿ ಬ್ರಾಹ್ಮಣಾಂತರಾತ್। ತಸ್ಯ ಸಂಬಂಧಿನಮಿಮಾಮಾನಂ ಸುಖವಿಶೇಷಂ ಮಮಕಾಯ ಸೂನವೇ ಮದೀಯಾಯ ಪುತ್ರಾಯ ದತ್ತಂ। ಹೇ ಶುಭಸ್ಪತೀ ಶೋಭನಸ್ಯೌಷಧಜಾತಸ್ಯ ಪಾಲಕೌ ಯುವಾಂ ತ್ರಿಧಾತು ವಾತಪಿತ್ತಶ್ಲೇಷ್ಮಧಾತುತ್ರಯಶಮನ ವಿಷಯಂ ಸುಖಂ। ವಹತಂ ಪ್ರಾಪಯತಂ॥ ದಿವ್ಯಾನಿ। ದಂಡಾದಿಭ್ಯಾದ್ಯಪ್ರತ್ಯಯಃ। ಪಾ. ೫-೧-೬೬। ಭೇಷಜಾ। ಭಿಷಜ್ ಚಿಕಿತ್ಸಾಯಾಂ। ಪುಂಸಿ ಸಂಜ್ಞಾಯಾಮಿತಿ ಘಃ। ಶಂಯೋಃ। ಶಸುಉಪಶಮೇ। ಕ್ವಿಪ್। ಶಮ್। ಯು ಮಿಶ್ರಣೇ। ಅಸ್ಮಾದ್ವಿಚ್। ಕೃದುತ್ತರಪದಪ್ರಕೃತಿಸ್ವರಃ। ತ್ರಿಧಾತು। ಸಿತನಿಗಮಿಮಸಿಸಚ್ಯವಿಧಾಞ್ಕ್ರುಶಿಭ್ಯಸ್ತುನ್। ಉ. ೧-೭೦। ಅದ್ಭ್ಯಃ। ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ। ಓಮಾನಂ। 'ಅವತೇರನ್ಯೇ-ಭ್ಯೋಽಪಿ ದೃಶ್ಯಂತ ಇತಿ ಮನಿನ್। ಜ್ವರತ್ವರೇತ್ಯಾದಿನಾಕಾರವಕಾರಯೋರೂಠ್। ಸಾರ್ವಧಾತುಕಾರ್ಧ-ಧಾತುಕಲಕ್ಷಣೋ ಗುಣಃ। ಯದಿ ಜ್ವರತ್ವರೇತ್ಯತ್ರಾನುನಾಸಿಕೇ ಚ। ಪಾ. ೬-೪-೨೦। ಇತಿ ನಾನುವರ್ತತೇ ತರ್ಹಿ ಪೂರ್ವೇಣೈವ ಸೂತ್ರೇಣ ವಕಾರಸ್ಯ ಊಡಾದೇಶೋ ಭವಿಷ್ಯತಿ। ಶುಭಸ್ಪತೀ। ಶುಭ ದೀಪ್ತೌ। ಸಂಪದಾದಿಲಕ್ಷಣಃ ಕ್ವಿಪ್। ಷಷ್ಠ್ಯಾಃ ಪತಿಪುತ್ರೇತಿ ಸಂಹಿತಾಯಾಂ ವಿಸರ್ಜನೀಯಸ್ಯ ಸತ್ವಂ। ಸುಬಾ-ಮಂತ್ರಿತ ಇತಿ ಪರಾಂಗವದ್ಭಾವಾತ್ ಷಷ್ಠ್ಯಾಮಂತ್ರಿತಸಮುದಾಯಸ್ಯಾಷ್ಟಮಿಕಂ ಸರ್ವಾನುದಾತ್ತತ್ವಂ॥

॥ ಪ್ರತಿಪದಾರ್ಥ ॥

**ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ। **ನಃ**— ನಮಗೆ। **ದಿವ್ಯಾನಿ**— ದೇವಲೋಕೋತ್ಪನ್ನವಾದ। **ಭೇಷಜಾಂ**— ಔಷಧಿಗಳನ್ನು। **ತ್ರಿಃ**— ಮೂರುಸಲವೂ। **ಪಾರ್ಥಿವಾನಿ**— ಪೃಥಿವಿಯಲ್ಲಿ ಉತ್ಪತ್ನವಾದ (ಔಷಧಿಗಳನ್ನು)। **ತ್ರಿಃ**—ಮೂರುಸಲವೂ। **ಅದ್ಭ್ಯಃ ಉ**— ಅಂತರಿಕ್ಷದಲ್ಲಿ ಉತ್ಪನ್ನವಾದ (ಔಷಧಿಗಳನ್ನು)। **ತ್ರಿಃ**— ಮೂರುಸಲವೂ। **ದತ್ತಂ**— ಕೊಡಿ। **ಶಂಯೋಃ**— (ಬೃಹಸ್ಪತಿಯ ಮಗನಾದ) ಶಂಯುವಿಗೆ ಸೇರಿದ। **ಓಮಾನಂ**— ಅಭ್ಯುದಯವನ್ನು (ಸೌಖ್ಯವನ್ನು)। **ಮಮಕಾಯ**— ನನ್ನ। **ಸೂನವೇ**— ಮಗನಿಗೆ। **ದತ್ತಂ**— ಕೊಡಿ। **ಶುಭಸ್ಪತೀ**— ಮಂಗಳಕರಗಳಾದ ಓಷಧಿಗಳ ಪಾಲಕರಾದ ಅಶ್ವಿನೀದೇವತೆಗಳೇ। **ತ್ರಿಧಾತು**—ವಾತ-ಪಿತ್ತಶ್ಲೇಷ್ಮಗಳೆಂಬ ಧಾತುತ್ರಯಸಂಬಂಧಿಯಾದ। **ಶರ್ಮ**— ಸುಖವನ್ನು। **ವಹತಂ**— ಕೊಡಿ.।

॥ ಭಾವಾರ್ಥ ॥

ಎಲೈ ಮಂಗಳಕಾರಿಗಳಾದ, ಓಷಧಿಗಳಿಗೆ ಪಾಲಕರಾದ ಅಶ್ವಿನೀದೇವತೆಗಳೇ, ನಮಗೆ ದೇವಲೋಕ, ಪೃಥಿವೀಲೋಕ ಮತ್ತು ಅಂತರಿಕ್ಷಗಳಲ್ಲಿ ಉತ್ಪನ್ನವಾಗುವ ಔಷಧಿಗಳನ್ನು ಮೂರುಸಲ ಅನುಗ್ರಹಿಸಿ. ಬೃಹಸ್ಪತಿಯ ಮಗ

ನಾದ ಶಂಯುವಿನ ಸುಖವನ್ನೇ ನನ್ನ ಮಗನಿಗೆ ದಯಪಾಲಿಸಿ. ನಮ್ಮ ನಮ್ಮ ವಾತಪಿತ್ತಶ್ಲೇಷ್ಮ ರೂಪಗಳಾದ ಧಾತು ತ್ರಯ ವೃತ್ತಿಗಳನ್ನು ನಿಯಮದಲ್ಲಿಟ್ಟು ನಮಗೆ ಅದರಿಂದಾಗುವ ದೇಹಸೌಖ್ಯವನ್ನು ಕೊಡಿ.

## English Translation

Aswins, thrice grant us the medicaments of heaven and those of earth and those of sky; give my son the prosperity of Samyu : lords of bliss, preserve the well-being of the three humours of the body.

॥ ವಿಶೇಷ ವಿಷಯಗಳು ॥

**ಭೇಷಜಾ— ಔಷಧಾನಿ ।** ಔಷಧಗಳು. ಈ ಔಷಧಗಳನ್ನು ಸ್ವರ್ಗ, ಅಂತರಿಕ್ಷ, ಭೂಮಿಗಳೆಂಬ ಮೂರ ಲೋಕಗಳಿಂದಲೂ ತಂದು ಕೊಡಬೇಕೆಂದು ಇಲ್ಲಿ ಪ್ರಾರ್ಥಿಸಲಾಗಿದೆ. ಈ ಋಕ್ಕಿನಲ್ಲಿ ಇರುವ ತ್ರಿಃ ಎಂಬ ಶಬ್ದವು ಮೂರಾವರ್ತಿ ಎಂಬ ಅರ್ಥವನ್ನು ಸೂಚಿಸುವುದಕ್ಕಿಂತಲೂ ವಿಷಯವನ್ನು ಒತ್ತಿಹೇಳುವುದಕ್ಕಾಗಿ ( For the sake of emphasis ) ಪ್ರಯೋಗಿಸಲ್ಪಟ್ಟಿರುವುದು.

**ಅದ್ಭ್ಯಃ— ಮೇಘೋದಕಪ್ರದೇಶೇಭ್ಯಃ ಅಂತರಿಕ್ಷಾತ್ ।** ಅಂಬರಂ ವಿಯತ್ ಮೊದಲಾದ ಹದಿ ನಾರು ಅಂತರಿಕ್ಷನಾಮಗಳ ಮಧ್ಯದಲ್ಲಿ ಆಪಃ ಎಂಬ ಶಬ್ದವು ಪಠಿತವಾಗಿರುವುದರಿಂದ ಅದ್ಭ್ಯಃ ಎಂದರೆ ಅಂತರಿಕ್ಷದಿಂದ ಎಂದರ್ಥವು.

**ಓಮಾನಂ— ಅವ ರಕ್ಷಣೇ ।** ಸಂರಕ್ಷಣೆಯನ್ನು. ಋ. ಸಂ. ೧-೩-೭. ನೇ ಋಕ್ಕಿನಲ್ಲಿ ಓಮಾಸಃ ಎಂಬ ಪದಕ್ಕೆ ಅರ್ಥವಿವರಣೆ ಮಾಡುವಾಗ ಯಾಸ್ಕರು ಓಮಾನಃ ಎಂದರೆ ಅವಿತಾರಃ-ರಕ್ಷಣೆಮಾಡತಕ್ಕವರು ಎಂಬ ಅರ್ಥ ವನ್ನು ತಮ್ಮ ನಿರುಕ್ತದಲ್ಲಿ (ನಿ. ೧೨-೪೦.) ಹೇಳಿರುವರು.

**ಶಂಯೋಃ—** ಬೃಹಸ್ಪತಿಯ ಪುತ್ರನು. ಈ ಶಂಯುರ್ಬಾರ್ಹಸ್ಪತ್ಯನೆಂಬುವನು ಋಗ್ವೇದದ ೬ನೇ ಮಂಡ ಲದ ೪೪, ೪೫, ೪೬, ೪೮. ನೇ ಸೂಕ್ತಗಳಿಗೆ ಋಷಿಯಾಗಿರುವನು. ಇವನು ಅಶ್ವಿನೀದೇವತೆಗಳಿಗೆ ಬೇಕಾದವನು ಇವನಿಗೆ ಯಾವವಿಧವಾದ ರಕ್ಷಣೆಯನ್ನು ಕೊಟ್ಟು ಕಾಪಾಡಿದರೋ ಅಂತಹ ಸಂರಕ್ಷಣೆಯನ್ನು ನನ್ನ ಮಗನಿಗೆ ಕೊಡ ಬೇಕೆಂದು ಈ ಸೂಕ್ತದ ಋಷಿಯಾದ ಹಿರಣ್ಯಸ್ತೂಪನು ಪ್ರಾರ್ಥಿಸಿರುವನು.

**ತ್ರಿಧಾತು—** ಈ ಶಬ್ದಕ್ಕೆ ಭಾಷ್ಯಕಾರರು ಈ ಋಕ್ಕಿನಲ್ಲಿ **ವಾತಪಿತ್ತಶ್ಲೇಷ್ಮಧಾತುತ್ರಯಶಮನವಿಷಯಂ** ಎಂದರೆ ವೈದ್ಯಶಾಸ್ತ್ರದಲ್ಲಿ ಹೇಳಿರುವಂತೆ ವಾತಪಿತ್ತಶ್ಲೇಷ್ಮಗಳೆಂಬ ಮೂರು ವಿಧವಾದ ದೇಹಸಂಬಂಧವಾದ ಧಾತು ಗಳನ್ನು ಶಮನಮಾಡಿ ಅದರಿಂದುಂಟಾಗುವ ಸುಖವನ್ನು ಎಂಬರ್ಥವನ್ನು ಹೇಳಿರುವರು. ಈ ಮೂರುವಿಧವಾದ ಧಾತು

ಗಳು ದೇಹದಲ್ಲಿ ಸಮಾನಾವಸ್ಥೆಯಲ್ಲಿದ್ದರೆ ಆರೋಗ್ಯವೆಂದೂ ಸಮಾನಾವಸ್ಥೆಯು ವ್ಯತ್ಯಾಸವಾಗಿ ಹೆಚ್ಚುಕಡಿಮೆಯಾದರೆ ಆರೋಗ್ಯಕ್ಕೆ ಹಾನಿ ಬರುವುದೆಂದೂ ವೈದ್ಯರ ಅಭಿಮತವು. ಆದುದರಿಂದ ದೈಹಿಕ ಆರೋಗ್ಯ ಸಂಬಂಧವಾದ ಸುಖವನ್ನು ಎಂಬರ್ಥವನ್ನೇ ಭಾಷ್ಯಕಾರರು ಇಲ್ಲಿ ಹೇಳಿರುವರು. ಇದಲ್ಲದೆ—

**ಯ ಉ ತ್ರಿಧಾತು ಪೃಥಿವೀಮುತದ್ಯಾಮೇಕೋ ದಾಧಾರ ಭುವನಾನಿ ವಿಶ್ವಾ ।**

(ಋ. ಸ. ೧-೧೫೪-೪)

ಎಂಬ ಋಕ್ಕಿನಲ್ಲಿ ತ್ರಿಧಾತುಶಬ್ದಕ್ಕೆ **ಪೃಥಿವ್ಯಪ್ತೇಜೋರೂಪತ್ರಯವಿಶಿಷ್ಟಂ** ಎಂದೂ,

**ಯೇನೋಪಯಾಥಃ ಸುಕೃತೋದುರೋಣಂ ತ್ರಿಧಾತುನಾ ಪತಥೋ ವಿರ್ನ ಪರ್ಣೈಃ ॥**

(ಋ. ಸಂ. ೧-೧೮೩-೧.)

ಎಂಬ ಋಕ್ಕಿನಲ್ಲಿ ತ್ರಿಧಾತುನಾ ಎಂಬ ಶಬ್ದಕ್ಕೆ **ತ್ರಿಪ್ರಕಾರಸ್ಥಾನೋಪೇತೇನ ಸುವರ್ಣರಜತತಾಮ್ರ-ಧಾತುತ್ರಯೋಪೇತೇನ ವಾ** ಎಂದೂ ಅರ್ಥವಿವರಣೆ ಮಾಡಿರುವರು. ಇದರಂತೆ ತ್ರಿಧಾತುಶಬ್ದಕ್ಕೆ ಬೇರೆ ಬೇರೆ ಋಕ್ಕುಗಳಲ್ಲಿ ವಿಧವಿಧವಾದ ಅರ್ಥಗಳನ್ನು ಸಂದರ್ಭಾನುಸಾರ ಮಾಡಿರುವರು. ಆದುದರಿಂದ ತ್ರಿಧಾತುಶಬ್ದಕ್ಕೆ ಮೂರು ವಿಧವಾದ ಎಂದು ಸಾಮಾನ್ಯಾರ್ಥವನ್ನು ಹೇಳಬಹುದು.

**ಶುಭಸ್ಪತೀ—ಶೋಭನಸ್ಯೌಷಧಜಾತಸ್ಯ ಪಾಲಕೌ ।** ಉತ್ತಮವಾದ ಔಷಧಿಗಳ ಪಾಲಕರು, ಅಧಿಪತಿಗಳು ಇತ್ಯಾದಿ. ಶುಭ ಎಂದರೆ ಶೋಭನಕರವಾದ, ಶ್ರೇಷ್ಠವಾದ ಕರ್ಮಗಳ ಪತೀ ಎಂದರೆ ಪಾಲಕರು ಎಂದು ಈ ಶಬ್ದಗಳ ಸಾಮಾನ್ಯ ಅರ್ಥವು ಇಲ್ಲಿ ಸಮಯೋಚಿತವಾಗಿ ಉತ್ತಮವಾದ ಔಷಧಗಳ ಪಾಲಕರು ಎಂದು ಭಾಷ್ಯಕಾರರು ಹೇಳಿರುವರು.

**॥ ವ್ಯಾಕರಣಪ್ರಕ್ರಿಯಾ ॥**

**ದಿವ್ಯಾನಿ—ದಣ್ಡಾದಿಭ್ಯೋ ಯಃ** (ಪಾ. ಸೂ. ೫-೧-೬೬) ದಣ್ಡಾದಿಗಣಪಠಿತಶಬ್ದಪ್ರಕೃತಿಕ ದ್ವಿತೀಯಾಂತದ ಮುಂದೆ ಅರ್ಹತಿ ಎಂಬ ಅರ್ಥದಲ್ಲಿ ಯ ಬರುತ್ತೆ ಎಂದು ದಿವಮರ್ಹತಿ ಎಂದು ವಿವಕ್ಷಿಸಿದಾಗ ಯ ಪ್ರತ್ಯಯ.

**ಭೇಷಜಾ—**ಭಿಷಜ್ ಚಿಕಿತ್ಸಾಯಾಂ ಎಂಬ ಧಾತುವು ಉಪಲಭ್ಯಮಾನವಾಗಿರುವ ಧಾತುಪಾಠದಲ್ಲಿಲ್ಲ **ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ** (ಪಾ. ಸೂ. ೩-೩-೧೧೮) ಸಂಜ್ಞೆ ತೋರಿದರೆ ಪುಲ್ಲಿಂಗದಲ್ಲಿ ಕರಣ. ಅಧಿಕರಣ ಎಂಬ ಅರ್ಥದಲ್ಲಿ ಧಾತುಗಳ ಮುಂದೆ ಪ್ರಾಯಶಃ ಘ ಪ್ರತ್ಯಯ ಬರುತ್ತೆ ಎಂದು ಘ ಪ್ರತ್ಯಯ, **ಲಶಕ್ವತದ್ಧಿತೇ** (ಪಾ. ಸೂ. ೧-೩-೮) ಎಂದು ಘ್‌ಗೆ ಇತ್ಸಂಜ್ಞೆ, ಲೋಪ, ಭಿಷಜ್+ಅ, ಪ್ರತ್ಯಯ ಘಿತ್, **ಚಜೋಃಕುಘಿಣ್ಣ್ಯತೋಃ** (ಪಾ. ಸೂ. ೭-೩-೫೨) ಘಿತ್ ಆಧ ಪ್ರತ್ಯಯ ಅಥವಾ ಣ್ಯತ್ ಪ್ರತ್ಯಯ ಇವು ಪರದಲ್ಲಿದ್ದರೆ ಚಕಾರಜಕಾರಗಳಿಗೆ ಕವರ್ಗ ಬರುತ್ತೆ ಎಂದು ಜ್‌ಗೆ ಗ್ ಬರಬೇಕಾಗುತ್ತೆ, ಭಿ ಎಂಬಲ್ಲಿ ಇಕಾರಕ್ಕೆ ಏಕಾರ ಬರುವುದೂ ಶ್ರಮಸಾಧ್ಯ. ಇದರಿಂದ ಘ ಪ್ರತ್ಯಯವನ್ನೊಪ್ಪಿದರೆ ಇದು ಪುಲ್ಲಿಂಗವಾಗಬೇಕು. ಇಲ್ಲಿ ಈ ಪದವು

ನಪುಂಸಕಲಿಂಗವಾಗಿದೆ. ಆದುದರಿಂದ ಭೇಷಂ ಜಯತಿ ಇತಿ ಭೇಷಜಂ, ಭೇಷಃ ಎಂದರೆ ರೋಗ. ರೋಗವನ್ನು ಜಯಿಸತಕ್ಕದ್ದು ಎಂದರೆ ನಾಶಮಾಡತಕ್ಕದ್ದು ಎಂದು ಅರ್ಥ. **ಅನ್ಯೇಷ್ವಪಿ ದೃಶ್ಯತೇ** (ಪಾ. ಸೂ. ೩-೨-೧೦) ಇಲ್ಲಿ ಕೌಮುದಿಯಲ್ಲಿ "ಅಪಿ ಶಬ್ದಃ ಸರ್ವೋಪಾಧಿವ್ಯಭಿಚಾರಾರ್ಥಃ ತೇನ ಧಾತ್ವಂತರಾದಪಿ ಕಾರಕಾಂತರೇಷ್ವಪಿ ಕ್ವಚಿತ್" ಎಂದಿದೆ. ಆದ್ದರಿಂದ ಕರ್ಮಕಾರಕವು ಉಪಪದವಾಗಿರುವಾಗ ಜಿ ಜಯೇ ಧಾತು ಮುಂದೆ ಈ ಸೂತ್ರದಿಂದ ಡ ಪ್ರತ್ಯಯ ಬರುತ್ತೆ, ಡಿತ್ಕರಣದಿಂದ ಇಕಾರಕ್ಕೆ ಲೋಪ, ದ್ವಿತೀಯಾ ಬಹುವಚನ ಶಸ್, **ಜಶ್ಶಸೋಶ್ಶಿಃ** (ಪಾ. ಸೂ. ೭-೧-೨೦) ಎಂದು ಶಿಆದೇಶ, **ಭೇಷಜ+ಶಿ**, ನುಮಾಗಮ, ಉಪಧಾದೀರ್ಘ, **ಶೇಶ್ಛಂದಸಿ ಬಹುಲಂ** ಎಂದು ಶಿಲೋಪ, ನಕಾರಕ್ಕೆ ಲೋಪ ಎಂದು ಹೇಳುವುದು ಯುಕ್ತ.

**ಶಂಯೋಃ**—ಶಂಯು ಎಂಬುದು ಒಬ್ಬನ ಹೆಸರು, ಇದು ಅಖಂಡ ಪ್ರಾತಿಪದಿಕ, ಇದಕ್ಕೆ ಪ್ರಕ್ರಿಯೆಯನ್ನು ಹೇಳಬೇಕಾದ್ದಿಲ್ಲ. "ನಾಮ ಚ ಧಾತುಜಮಾಹ ನಿರುಕ್ತೇ ವ್ಯಾಕರಣೇ ಶಕಟಸ್ಯ ಚ ತೋಕಂ। ಯನ್ನ ಪದಾರ್ಥ ವಿಶೇಷಸಮುತ್ಥಂ ಪ್ರತ್ಯಯತಃ ಪ್ರಕೃತೇಶ್ಚ ತದೂಹ್ಯಂ" ಎಂಬ ಶಾಕಟಾಯನರ ಮತದಂತೆ ಪ್ರಕ್ರಿಯೆ ಯನ್ನು ಹೇಳಲೂ ಬಹುದು. ಶಮು ಉಪಶಮೇ ಧಾತು, ಇದರ ಮುಂದೆ ವಿಚ್‌ಪ್ರತ್ಯಯ, ಕ್ವಿಪ್ಪನ್ನು ಹಚ್ಚಿದರೆ **ಅನುನಾಸಿಕಸ್ಯಕ್ವಿಝಲೋಃಕ್ಙಿತಿ** (ಪಾ. ಸೂ. ೬-೪-೧೫) ಕ್ವಿಪ್‌ಪರದಲ್ಲಿದ್ದರೂ ಕಿತ್ ಅಥವಾ ಙಿತ್ ಆದ ಝಲಾದಿಪ್ರತ್ಯಯ ಪರದಲ್ಲಿದ್ದರೂ ಅನುನಾಸಿಕಾಂತವಾದ ಅಂಗದ ಉಪಾಂತ್ಯವರ್ಣಕ್ಕೆ ದೀರ್ಘ ಬರುತ್ತೆ ಎಂದು ದೀರ್ಘ ಬರಬೇಕಾಗುತ್ತದೆ. ಯು ಮಿಶ್ರಣೇ ಧಾತು, ಇದರ ಮುಂದೆ ಕ್ವಿಪ್ ಬಂದರೆ **ಹ್ರಸ್ವಸ್ಯ ಪಿತಿಕೃತಿತುಕ್** (ಪಾ ಸೂ ೬-೧-೭೧) ಎಂದು ತುಗಾಗಮ ಬರಬೇಕಾಗುತ್ತೆ ಆದ್ದರಿಂದ ಇಲ್ಲಿಯೂ ವಿಚ್ಚನ್ನೇ ಹಚ್ಚಬೇಕು. ಶಂ ಯೌತಿ ಇತಿ ಶಂಯುಃ, ಶಾಂತಿಯನ್ನು ಸೇರಿಸುವವನು ಎಂದರ್ಥ, ಇಲ್ಲಿ ಅವಯವಾರ್ಥಕ್ಕೆ ಹೊಂದಿಕೆ ಇದೆ ಕೃದುತ್ತರಪದ ಪ್ರಕೃತಿಸ್ವರ ಬರುತ್ತೆ. ವಿಭಕ್ತಿಯನ್ನು ಹಚ್ಚಿದರೆ ಏಕಾದೇಶಸ್ವರದಿಂದ ಉದಾತ್ತ ಬರುತ್ತೆ.

**ತ್ರಿಧಾತು**—**ಸಿತನಿಗಮಿಮಸಿಸಚ್ಯವಿಧಾಞ್‌ಕ್ರುಶಿಭ್ಯಸ್ತುನ್** (ಉ. ಸೂ. ೧-೬೯) ಷಿಞ್ ಬಂಧನೇ, ತನು ವಿಸ್ತಾರೇ, ಗಮ್ಲೃ ಗತೌ, ಮಸಿ ಪರಿಮಾಣೇ, ಸಚ ಸಮವಾಯೇ, ಅವ ರಕ್ಷಣೇ, ಡುಧಾಞ್ ಧಾರಣ ಪೋಷಣಯೋಃ, ಕ್ರುಶ ಆಹ್ವಾನೇ ರೋದನೇ ಚ ಈ ಧಾತುಗಳ ಮುಂದೆ ತುನ್ ಪ್ರತ್ಯಯ ಬರುತ್ತೆ ಎಂದು ಧಾ ಧಾತು ಮುಂದೆ ತುನ್, **ತಿತುತ್ರ—**,(ಪಾ. ಸೂ. ೭-೨-೯) ಎಂದು ಇಡಾಗಮಕ್ಕೆ ನಿಷೇಧ, ಪ್ರತ್ಯಯ ನಿತ್, ನಿತ್ಸ್ವರದಿಂದ ಧಾತು ಎಂಬುದು ಆದ್ಯುದಾತ್ತ, ತ್ರೇಧಾ ಧೀಯತೇ ಇತಿ ತ್ರಿಧಾತು, ವಾತ-ಪಿತ್ತ-ಶ್ಲೇಷ್ಮ ಎಂದು ಮುಬ್ಬಗೆಯಾಗಿ ಇಡಲ್ಪಡುತ್ತೆ ಎಂದರ್ಥ. ಸಮಾಸಾನಂತರ ಕೃದುತ್ತರಪದ ಪ್ರಕೃತಿಸ್ವರ ಬಂದು ಇದೇ ಸ್ವರ ಉಳಿಯುತ್ತೆ ದ್ವಿತೀಯೈಕವಚನ ಅಮ್ **ಸ್ವಮೋರ್ನಪುಂಸಕಾತ್** (ಪಾ. ಸೂ. ೭-೧-೨೩) ಎಂದು ಇದಕ್ಕೆ ಲೋಪ.

**ಅದ್ಭ್ಯಃ**—**ಊಡಿದಂಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಊಠ್, ಇದಮ್, **ಪದ್ದನ್ನೋಮಾಸ್** ಎಂದು ವಿಹಿತವಾದ ಆರು ಪದಾದಿಗಳು, ಅಪ್, ಪುಮ್, ರೈ, ದಿವ್, ಏಕಾಚ್ಕಗಳೂ ಅಂತೋ ದಾತ್ತಗಳೂ ಆದ ಈ ಶಬ್ದಗಳ ಮುಂದೆ ಇರುವ ಅಸರ್ವನಾಮಸ್ಥಾನವಿಭಕ್ತಿಯು ಉದಾತ್ತವಾಗುತ್ತೆ ಎಂದರ್ಥ.

ಇದರಿಂದ ಅಪ್ ಶಬ್ದದ ಮುಂದೆ ಇರುವ ಪಂಚಮ್ಯೇಕವಚನ ಭ್ಯಸ್ ಉದಾತ್ತ. **ಅಪೋಭಿ** (ಪಾ. ಸೂ. ೭-೪-೪೮) ಭಕಾರಾದಿಪ್ರತ್ಯಯ ಪರದಲ್ಲಿದ್ದರೆ ಅಪ್‌ಶಬ್ದದ ಪಕಾರಕ್ಕೆ ತಕಾರ ಬರುತ್ತೆ ಎಂದು ತಕಾರಾದೇಶ, **ಝಲಾಂ ಜಶೋಽನ್ತೇ** (ಪಾ. ಸೂ. ೮-೨-೩೯) ಎಂದು ತಕಾರಕ್ಕೆ ದಕಾರ.

**ಓಮಾಸಂ**—ಅವ ರಕ್ಷಣೇಧಾತು. **ಅನ್ಯೇಭ್ಯೋಽಪಿ ದೃಶ್ಯನ್ತೇ** (ಪಾ. ಸೂ ೩-೨-೭೫) ಮನಿನ್, ಕ್ವನಿಪ್, ವನಿಪ್, ವಿಚ್ ಇವು ಧಾತುಗಳ ಮುಂದೆ ಬರುವುವು ಎಂದು ಮನಿನ್, ಪ್ರತ್ಯಯ ಅವ್+ಮನ್, **ಜ್ವರ ತ್ವರಸ್ರಿವ್ಯವಿಮವಾಮುಪಧಾಯಾಶ್ಚ** (ಪಾ. ಸೂ. ೬-೪-೨೦) "**ಚ್ಛ್ವೋಃ ಶೂಡನುನಾಸಿಕೇಚ**" (ಪಾ. ಸೂ. ೬-೪-೧೯) ಎಂಬುದರಿಂದ ವಕಾರವೂ, ಊಠ್, ಅನುನಾಸಿಕೇ ಎಂಬಿವೂ ಅನುವರ್ತಿಸುವುವು, ಛ-ಶ ಇವುಗಳಿಗೆ ಅನುವೃತ್ತಿ ಇಲ್ಲ ಏಕೆಂದರೆ ಜ್ವರಾದಿಧಾತುಗಳಲ್ಲಿ ಛಕಾರವಿಲ್ಲಾದುದರಿಂದ ಛಕಾರಕ್ಕೆ ಸಂಭವವೇ ಇಲ್ಲ, ಅವ್ ಧಾತು ಮುಂದೆ ತುನ್‌ಪ್ರತ್ಯಯ ಬಂದಾಗ ಓತುಃ ಎಂದು ರೂಪವು ಪ್ರಾಮಾಣಿಕವಾಗಿದೆ ಆದ್ದರಿಂದ **ಅನುನಾಸಿಕಸ್ಯ ಕ್ವಿಝಲೋಃಕ್ಙಿತಿ** (ಪಾ. ಸೂ. ೬-೪-೧೫) ಎಂಬುದರಿಂದ ಕ್ಙಿತಿ ಎಂಬುದಕ್ಕೆ ಅನುವೃತ್ತಿ ಇಲ್ಲ. ಕ್ವಿಝಲೋಃ ಎಂಬುದಕ್ಕೆ ಅನುವೃತ್ತಿ ಉಂಟು. ಏವಂಚ ಕ್ವಿಪ್ ಪ್ರತ್ಯಯ, ಝಲಾದಿ ಪ್ರತ್ಯಯ ಅಥವಾ ಅನುನಾಸಿಕಾದಿಪ್ರತ್ಯಯ ಇವು ಪರದಲ್ಲಿದ್ದರೆ ಜ್ವರಾದಿಧಾತುಗಳ ಉಪಧಾವಕಾರಗಳೆರಡಕ್ಕೂ ಊಠ್ ಬರುತ್ತೆ ಎಂದು ಸೂತ್ರದ ಅರ್ಥ ಏರ್ಪಡುತ್ತೆ. ಇದರಿಂದ ಅವ್‌ಗೆ ಊಠ್ ಬಂದರೆ ಊ+ಮನ್, **ಸಾರ್ವಧಾತುಕಾರ್ಧಧಾತುಕಯೋಃ** ಎಂದು ಗುಣ ಓ+ಮನ್, **ಜ್ವರತ್ವರ** ಎಂಬಲ್ಲಿ ಅನುನಾಸಿಕೇ ಎಂಬುದನ್ನು ಅನುವರ್ತಿಸದೇ **ಚ್ಛ್ವೋಃಶೂಡನುನಾಸಿಕೇಚ** ಎಂಬ ಹಿಂದಿನ ಸೂತ್ರದಿಂದ ವಕಾರಕ್ಕೆ ಊಠ್ ಬರುತ್ತೆ ಎಂದು ಹೇಳಿದರೆ, ಅ+ಊ+ಮನ್ ಎಂದಿರುವಾಗ **ಏತ್ಯೇಧತ್ಯೂಠ್ಸು** (ಪಾ. ಸೂ. ೬-೧-೮೯) ಏಜಾದಿಯಾದ ಏತಿ ಏಧತಿ ಧಾತುಗಳು, ಊಠ್, ಇವು ಅಕಾರದ ಮುಂದೆ ಇದ್ದರೆ ವೃದ್ಧಿ ಬರುತ್ತೆ ಎಂದು ವೃದ್ಧಿ ಬರಬೇಕಾಗುತ್ತೆ, ಹಾಗೆ ವೃದ್ಧಿ ಬಂದರೆ ಔಮಾಸಂ ಎಂದಾಗುವುದೇ ವಿನಾ ಓಮಾಸಂ ಎಂದು ಆಗಲಾರದು ಆದುದರಿಂದಲೇ "ಅನುನಾಸಿಕಗ್ರಹಣಂ ಚಾನುವರ್ತತೇ ಅವತೇರ್ಮನ್ಪ್ರತ್ಯಯೇ ತಸ್ಯ ಟಿಲೋಪೇ ಓಮಿತಿದರ್ಶನಾತ್" ಎಂಬ ಕೌಮುದೀಗ್ರಂಥವು ಸಂಗತವಾಗುವುದು. ಏವಂಚ ವೇದಭಾಷ್ಯದಲ್ಲಿ **ಯದಿಜ್ವರತ್ವರ** ಇತ್ಯಾದಿ ವಾಕ್ಯವು ಚಿಂತ್ಯೋಪಪತ್ತಿಕವಾದುದು. ಇಲ್ಲಿ ಉಪಧಾವಕಾರಗಳು ಎರಡು ಸ್ಥಾನಿ ಇರುವುದರಿಂದ ಊಠ್ ಎರಡಾವರ್ತಿ ಬರುತ್ತೆ ಎಂದು ಒಂದು ಪಕ್ಷ. ಈ ಪಕ್ಷದಲ್ಲಿ ಎರಡು ಊಕಾರಗಳಿಗೂ ಸವರ್ಣದೀರ್ಘ, ಸ್ಥಾನಷಷ್ಠೀ ನಿರ್ದೇಶದಿಂದ ಎರಡಕ್ಕೂ ಒಂದೇ ಆದೇಶ ಎಂದು ಮತ್ತೊಂದು ಪಕ್ಷ. ಎರಡು ಪಕ್ಷಗಳೂ ಭಾಷ್ಯದಲ್ಲಿ ಸ್ಪಷ್ಟ ವಾಗಿರುವುವು.

**ಶುಭಸ್ಪತೀ**—ಶುಭ ದೀಪ್ತೌ ಧಾತು, **ಸಂಪದಾದಿಭ್ಯಃಕ್ವಿಪ್** ಎಂದು ಕ್ವಿಪ್ ಸಂಹಿತಾಕಾಲದಲ್ಲಿ **ಷಷ್ಠ್ಯಾಃ ಪತಿಪುತ್ರ ಪೃಷ್ಠಪಾರ ಪದಪಯಸ್ಪೋಷೇಷು** (ಪಾ. ಸೂ. ೮-೩-೫೩) ಈ ಶಬ್ದಗಳು ಪರದಲ್ಲಿದ್ದರೆ ಷಷ್ಠೀ ವಿಭಕ್ತಿ ಸಂಬಂಧಿಯಾದ ವಿಸರ್ಗಕ್ಕೆ ಸಕಾರಬರುತ್ತೆ ಎಂದು ವಿಸರ್ಗಕ್ಕೆ ಸಕಾರ, ಪತೀ ಎಂಬುದು ಸಂಬೋಧನ ದ್ವಿವಚನಾಂತ, **ಸಾಮನ್ತ್ರಿತಮ್** (ಪಾ. ಸೂ. ೨-೩-೪೮) ಎಂದು ಇದಕ್ಕೆ ಆಮನ್ತ್ರಿತಸಂಜ್ಞೆ ಇದೆ. ಸ್ವರವನ್ನು ಮಾಡು ವಾಗ ಶುಭಃ ಎಂಬ ಸುಬಂತವು **ಸುಬಾಮನ್ತ್ರಿತೇ ಪರಾಂಗವತ್ಸ್ವರೇ** (ಪಾ. ಸೂ. ೨-೧-೨) ಎಂಬುದರಿಂದ ಪತೀ

ಎಂಬ ಪರಪದಕ್ಕೆ ಅಂಗವಾಗುತ್ತೆ. ಏವಂಚ ಎರಡು ಪದಗಳೂ ಸೇರಿ ಒಂದು ಪದದಂತೆ ಆಗುತ್ತವೆ, **ಆಮನ್ತ್ರಿತಸ್ಯಚ** (ಪಾ. ೮-೧-೧೯) ಎಂಬುದರಿಂದ ಎರಡು ಪದಗಳಿಗೂ ಸರ್ವಾನುದಾತ್ತ ಬರುತ್ತೆ. ॥ ೬ ॥



॥ ಸಂಹಿತಾಪಾಠಃ ॥

ತ್ರಿರ್ನೋ᳚ ಅಶ್ವಿನಾ ಯಜತಾ ದಿವೇದಿ᳚ವೇ ಪರಿ᳚ ತ್ರಿಧಾತು᳚
ಪೃಥಿವೀಮ᳚ಶಾಯತಂ ।
ತ್ರಿಸ್ರೋ᳚ ನಾ᳚ಸತ್ಯಾ ರಥ್ಯಾ ಪರಾವತ ಆತ್ಮೇ᳚ವ ವಾತಃ ಸ್ವಸ᳚ರಾಣಿ
ಗಚ್ಛತಂ ॥ ೭ ॥

॥ ಪದಪಾಠಃ ॥

ತ್ರಿಃ । ನಃ । ಅಶ್ವಿನಾ । ಯಜತಾ । ದಿವೇಽದಿ᳚ವೇ । ಪರಿ᳚ । ತ್ರಿಽಧಾತು᳚ ।
ಪೃಥಿವೀಂ । ಅಶಾಯತಂ ।
ತ್ರಿಸ್ರಃ । ನಾಸತ್ಯಾ । ರಥ್ಯಾ । ಪರಾಽವ᳚ತಃ । ಆತ್ಮಾಽಇ᳚ವ । ವಾತಃ᳚ ।
ಸ್ವಸ᳚ರಾಣಿ । ಗಚ್ಛತಂ ॥ ೭ ॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನಾ ದಿವೇ ದಿವೇ ಪ್ರತಿದಿನಂ । ದಿವೇದಿವೇ ದ್ಯವಿದ್ಯವೀತ್ಯಹರ್ನಾಮಸು ಪಠಿತತ್ವಾತ್ । ಯಜತಾ ಯಷ್ಟವ್ಯೌ ಯುವಾಂ ನೋಽಸ್ಮದೀಯಾಂ ಪೃಥಿವೀಂ ವೇದಿರೂಪಾಂ ಭೂಮಿಂ ಪರಿ ಸರ್ವತಃ**

**ಪ್ರಾಪ್ಯ ತ್ರಿಧಾತು ಕಕ್ಷ್ಯಾತ್ರಯಯುಕ್ತ ಅಸ್ತೀರ್ಣೇ ಬರ್ಹಿಷಿ ತ್ರಿಸ್ತ್ರಿವಾರಮಶಾಯತಂ। ಶಯನಂ ಕುರುತಂ। ಹೇ ರಥ್ಯಾ ರಥ್ಯೌ ರಥಸ್ವಾಮಿನೌ ತಿಸ್ರಸ್ತ್ರಿಸಂಖ್ಯಾಕಾ ಐಷ್ಟಿಕಪಾಶುಕಸೌಮಿಕರೂಪಾ ವೇದೀರ್ಗಚ್ಛತಂ। ತತ್ರ ದೃಷ್ಟಾಂತಃ। ಸ್ವಸರಾಣಿ ಶರೀರಾಣ್ಯಾತ್ಮೇವ ವಾತಃ। ಯಥಾ ಪ್ರಾಣಿನಾಮಾತ್ಮ-ಭೂತಃ ಪ್ರಾಣವಾಯುಸ್ತದೀಯಾನಿ ಶರೀರಾಣಿ ಗಚ್ಛತಿ ತದ್ವತ್॥ ಯಜತಾ। ಯಜತೇರ್ಭೃಮೃದೃಶೀತ್ಯಾ-ದಿನಾ। ಉ. ೩-೧೧೦। ಅತಚ್। ಚಿತ ಇತ್ಯಂತೋದಾತ್ತತ್ವಂ। ತ್ರಿಧಾತು। ತ್ರೇಧಾ ಧೀಯತೇ ನಿಧೀ-ಯತ ಇತಿ ತ್ರಿಧಾತು। ಸಿತನಿಗಮಿಮಾತ್ಯಾದಿನಾ ಧಾಞಸ್ತುನ್। ನಿತ್ತ್ವಾದಾದ್ಯುದಾತ್ತತ್ವಂ। ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವೇನ ತದೇವ ಶಿಷ್ಯತೇ। ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್। ಅಶಾಯತಂ। ಅದಾದಿತ್ವಾಚ್ಛಪೋ ಲುಕ್। ಅಶಯಾತಾಮಿತ್ಯಸ್ಯ ಹ್ರಸ್ವದೀರ್ಘಯೋರ್ವ್ಯತ್ಯಾಸಃ। ನಾಸತ್ಯಾ। ಸತ್ಸು ಸಾಧೂ ಸತ್ಯೌ। ನ ಸತ್ಯಾವಸತ್ಯೌ। ನ ಅಸತ್ಯೌ ನಾಸತ್ಯೌ। ಸತ್ಯಾವೇವ ನಾಸತ್ಯಾವಿತ್ಯೌರ್ಣವಾಭ ಇತಿ ಯಾಸ್ಕಃ। ನಿ. ೬-೧೩। ನಭ್ರಾಣ್ನಪಾದಿತ್ಯಾದಿನಾ ನಞಃ ಪ್ರಕೃತಿಭಾವಃ। ರಥ್ಯಾ ರಥಾ-ರ್ಹೌ ಸ್ವಾಮಿನಾವಿತ್ಯರ್ಥಃ। ಛಂದಸಿ ಚ। ಪಾ. ೫-೧-೬೭। ಇತಿ ಯಪ್ರತ್ಯಯಃ। ಸ್ವಸರಾಣಿ। ಸರಂತಿ ಗಚ್ಛಂತೀತಿ ಸರಾ ಇಂದ್ರಿಯಾಣಿ। ಸ್ವಕೀಯಾಃ ಸರಾ ಯೇಷಾಂ ಶರೀರಾಣಾಂ। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ॥**

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ। **ದಿವೇದಿವೇ**—ಪ್ರತಿ ದಿನವೂ। **ಯಜತಾ**—ಯಜ್ಞಭಾಗಾರ್ಹರಾದ ನೀವು। **ನಃ**-ನಮ್ಮ। **ಪೃಥಿವೀಂ**- ವೇದಿಕಾರೂಪವಾದ ಯಜ್ಞಭೂಮಿಯನ್ನು। **ಪರಿ**—ಎಲ್ಲ ಕಡೆಯಲ್ಲಿಯೂ ವ್ಯಾಪಿಸಿ। **ತ್ರಿಧಾತು**—ಮೂರು ಪದರಗಳುಳ್ಳ ದರ್ಭಾಸನದ ಮೇಲೆ। **ತ್ರಿಃ**—ಮೂರಾವರ್ತಿ। **ಅಶಾಯತಂ**—ಮಲಗಿ (ವಿಶ್ರಾಂತಿ ತೆಗೆದುಕೊಳ್ಳಿ)। **ರಥ್ಯಾ**—ರಥಕ್ಕೆ ಯಜಮಾನರಾದ। **ನಾಸತ್ಯಾ**—ಅಶ್ವಿನೀದೇವತೆಗಳೇ [ಸತ್ಪುರುಷರಲ್ಲಿ ಸಾಧುಗಳಾದವರೇ]। **ಆತ್ಮೇವ ವಾತಃ**—(ಪ್ರಾಣಿಗಳ) ಆತ್ಮನಂತಿರುವ ಪ್ರಾಣವಾಯುವು **ಸ್ವಸರಾಣಿ ಇವ**—ಸ್ವಕೀಯವಾದ ಇಂದ್ರಿಯಗಳುಳ್ಳ ಶರೀರಗಳನ್ನು ಹೋಗಿ ಸೇರುವಂತೆ। **ತಿಸ್ರಃ**—ಐಷ್ಟಿಕ, ಪಾಶುಕ ಮತ್ತು ಸೌಮಿಕ ರೂಪಗಳಾದ ಮೂರು ಯಜ್ಞವೇದಿಕೆಗಳಿಗೆ। **ಗಚ್ಛತಂ**—ಹೋಗಿ ಸೇರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಯಾವಾಗಲೂ ರಥದ ಯಜಮಾನರಾಗಿ ರಥದಲ್ಲಿಯೇ ಸಂಚರಿಸತಕ್ಕವರು. ನಮ್ಮ ಯಜ್ಞದಲ್ಲಿ ಪ್ರತಿದಿನವೂ ಪೂಜೆಗೆ ಯೋಗ್ಯರು. ವೇದಿಕಾರೂಪವಾದ ನಮ್ಮ ಯಜ್ಞಭೂಮಿಯನ್ನು ಸುತ್ತಲೂ ವ್ಯಾಪಿಸಿ ನಮ್ಮಿಂದ ರಚಿತವಾದ ದರ್ಭಾಸನಗಳ ಮೇಲೆ ಮಲಗಿ ವಿಶ್ರಾಂತಿ ತೆಗೆದುಕೊಳ್ಳಿ. ಪ್ರಾಣಿಗಳ

ಆತ್ಮನಂತಿರುವ ಪ್ರಾಣವಾಯುವು ಆಯಾಯ ದೇಹಗಳನ್ನು ಪ್ರವೇಶಿಸುವಂತೆ ನೀವೂ ಸಹ ನಮ್ಮ ಯಜ್ಞಕ್ಕೆ ಆತ್ಮಭೂತರಾಗಿ ಐಷ್ಟಿಕ, ಪಾಶುಕ ಮತ್ತು ಸೌಮಿಕ ರೂಪಗಳಾದ ನಮ್ಮ ಯಜ್ಞವೇದಿಕೆಗೆ ಪ್ರವೇಶಿಸಿ ಆಸನಗಳ ಮೇಲೆ ಕುಳಿತುಕೊಳ್ಳಿ.

## English Translation

O Aswins, you who deserve to be sacrificed to by us surround the earth from all sides; O good charioteers, pervade the three distant worlds as the vital breath enters its habitations ( bodies )

|| ವಿಶೇಷವಿಷಯಗಳು ||

**ಯಜತಾ— ಯಷ್ಟವ್ಯೌ ।** ಯಜ್ಞಾನುಷ್ಠಾನ ಸ್ತೋತ್ರಾದಿಗಳಿಂದ ಆರಾಧಿಸಲ್ಪಡಲು ಅರ್ಹರಾದ.

**ದಿವೇ ದಿವೇ—** ವಸ್ತೋಃ ದ್ಯೌಃ ಮೊದಲಾದ ಹನ್ನೆರಡು ಅಹರ್ನಾಮಗಳ ಮಧ್ಯದಲ್ಲಿ ದಿವೇದಿವೇ ಎಂಬ ಶಬ್ದವು ಪಠಿತವಾಗಿರುವುದರಿಂದ ಈ ಶಬ್ದಕ್ಕೆ ಹಗಲಿನಲ್ಲಿ ಅಥವಾ ಪ್ರತಿದಿನವೂ ಎಂದರ್ಥವು. (ನಿ-೨-೧೧)

**ನಾಸತ್ಯಾ—ಅಶ್ವಿನೌ ನ ಅಸತ್ಯೌ. ನಾಸತ್ಯೌ ಅಥವಾ ನಾಸತ್ಯಾ** || ಯಾಸ್ಕಮಹರ್ಷಿಗಳು ಈ ಶಬ್ದಕ್ಕೆ-

**ಸತ್ಯಾವೇವ ನಾಸತ್ಯಾವಿತ್ಯೌರ್ಣವಾಭಃ । ಸತ್ಯಸ್ಯ ಪ್ರಣೇತಾರಾವಿತ್ಯಾಗ್ರಾಯಣಃ । ನಾಸಿಕಾಪ್ರಭವೌ ಬಭೂವುರಿತಿ ವಾ ||** (ನಿ. ೬-೧೩.)

ಎಂದರೆ ಸತ್ಯವನ್ನೇ ಹೇಳುವವರು । ಅಸತ್ಯವನ್ನು ಯಾವಾಗಲೂ ನುಡಿಯುವವರಲ್ಲವಾದ್ದರಿಂದ ಇವರಿಗೆ ನಾಸತ್ಯಾ ಎಂದು ಹೆಸರು ಎಂದು ಆಚಾರ್ಯ ಔರ್ಣವಾಭರ ಮತವು. **ಸತ್ಯಸ್ಯ-ಉದಕಸ್ಯ ಯಜ್ಞಸ್ಯ ವಾ,** ಉದಕ ಅಥವಾ ಯಜ್ಞಕ್ಕೆ ಪ್ರೇರಕರು ಎಂದು ಆಗ್ರಾಯಣರ ಮತವು. ಇದಲ್ಲದೆ ನಾಸಿಕದಿಂದ ಉತ್ಪನ್ನರಾದುದರಿಂದ ಇವರಿಗೆ ನಾಸತ್ಯಾ ಎಂದು ಐತಿಹಾಸಿಕರ ಮತವು—ಎಂದು ಅರ್ಥವಿವರಣೆ ಮಾಡಿರುವರು. ಹಿಂದೆ ಸೂರ್ಯನ ಪತ್ನಿಯಾದ ಛಾಯಾದೇವಿಯು ಕಾರಣಾಂತರದಿಂದ ಸೂರ್ಯನ ಮೇಲೆ ಕೋಪಗೊಂಡು ಹೆಣ್ಣುಕುದುರೆಯ ರೂಪವನ್ನು ಧರಿಸಿ ಅರಣ್ಯದಲ್ಲಿ ವಾಸಿಸುತ್ತಿದ್ದಳೆಂದೂ ಅದನ್ನು ತಿಳಿದು ಸೂರ್ಯನು ತಾನು ಗಂಡುಕುದುರೆಯ ರೂಪದಿಂದ ಅವಳಿದ್ದ ಪ್ರದೇಶಕ್ಕೆ ಹೋಗಿ ಅವಳೊಡನೆ ಇದ್ದಾಗ ಅವರಿಗೆ ಈ ಅಶ್ವಿನೀದೇವತೆಗಳು ಕುದುರೆಯ ರೂಪದಿಂದಿರುವ ಛಾಯಾದೇವಿಯ ನಾಸಿಕದಿಂದ ಉತ್ಪನ್ನರಾದರೆಂದು ಮುಂತಾದ ಇತಿಹಾಸವು ಬ್ರಹ್ಮಪುರಾಣಾದಿಗಳಲ್ಲಿ ಕಂಡು ಬರುವುದು.

**ರಥ್ಯಾ— ರಥಾರ್ಹೌ ಸ್ವಾಮಿನೌ ।** ರಥದಲ್ಲಿ ಕುಳಿತು ಸಂಚಾರಮಾಡಲು ಯೋಗ್ಯರು, ರಥಿಕರು.

**ಪರಾವತಃ— ದೂರಸ್ಥಿತಾನ್ ತ್ರೀನ್ ಲೋಕಾನ್ ।** ದೂರದಲ್ಲಿರುವ ಭೂಮ್ಯಂತರಿಕ್ಷಗಳೆಂಬ ಮೂರು ಲೋಕಗಳು. ಈ ಶಬ್ದವು—

**ಯೇಭಿಸ್ತಿಸ್ರಃ ಪರಾವತೋ ದಿವೋ ವಿಶ್ವಾನಿ ರೋಚನಾ ।**
(ಋ. ಸಂ ೮ ೫–೮.)

**ಇಹ ತಿಸ್ರಃ ಪರಾವತ ಇಹ ಪಂಚ ಜನಾ॰ ಅತಿ ।**
(ಋ. ಸಂ. ೮–೩೨–೨೨.)

**ಪರಾವತೋ ಯೇ ದಿಧಿಷಂತ ಆಪ್ಯಂ ಮನುಪ್ರೀತಾಸೋ ಜನಿಮಾ ವಿವಸ್ವತಃ ॥**
(ಋ. ಸಂ. ೧೦-೬೩–೧)

ಇತ್ಯಾದಿ ಅನೇಕ ಋಕ್ಕುಗಳಲ್ಲಿ ಈ ಶಬ್ದ ಪ್ರಯೋಗವಿರುವುದು.

**ಅತ್ಮೇವ ವಾತಃ ಸ್ವಸರಾಣಿ— ಪ್ರಾಣವಾಯುಃ ಶರೀರರೂಪಾಣಿ ಸ್ವಗೃಹಾಣಿ ಯಥಾಽವ್ಯಾಪ್ನೋತಿ ತಥೇತ್ಯರ್ಥಃ।** ಪ್ರಾಣವಾಯುವು ತನ್ನ ನಿವಾಸಸ್ಥಾನಭೂತವಾದ ಶರೀರವನ್ನು ಯಾವ ರೀತಿಯಲ್ಲಿ ಬಂದು ಸೇರುವುದೋ ಅದರಂತೆ ನೀವು ಈ ಯಜ್ಞವೇದಿಗೆ ಬನ್ನಿ ಎಂದು ಅಭಿಪ್ರಾಯವು.

**ತಿಸ್ರಃ— ಐಷ್ಟಿಕಪಾಶುಕಸೌಮಿಕರೂಪಾ ವೇದೀಃ ।** ತಿಸ್ರಃ ಎಂದರೆ ಮೂರು ಅಥವಾ ಮೂರು ಪ್ರದೇಶಗಳು. ಇಲ್ಲಿ ಮೂರು ಪ್ರದೇಶಗಳೆಂದರೆ ಇಷ್ಟಿಯಾಗ, ಪಶುಯಾಗ, ಸೋಮಯಾಗವೆಂಬ ಮೂರು ವಿಧವಾದ ಯಜ್ಞಗಳಲ್ಲಿರುವ ವೇದಿ ಅಥವಾ ಯಜ್ಞಭೂಮಿಯು ಎಂದು ಭಾಷ್ಯಕಾರರು ವಿವರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಯಜತಾ—** ಯಜ ದೇವಪೂಜಾದೌ ಧಾತು **ಭೃಮೃದೃಶಿಯಜಿಪರ್ವಿಪಚ್ಯಮಿತಮಿನಮಿದಯಿಭ್ಯೋಽತಚ್** (ಉ.ಸೂ. ೩-೩೯೦) ಭೃಞ್ ಭರಣೇ, ಮೃಙ್ ಪ್ರಾಣ ತ್ಯಾಗೇ, ದೃಶಿರ್ ಪ್ರೇಕ್ಷಣೇ, ಯಜ ದೇವಪೂಜಾದೌ, ಪರ್ವ ಪೂರಣೇ, ಡುಪಚಷ್ ಪಾಕೇ, ಅಮ ಗತ್ಯಾದಿಷು, ತಮು ಕಾಂಕ್ಷಾಯಾಂ, ಣಮ ಪ್ರಹ್ವತ್ವೇ ಶಬ್ದೇ, ಹರ್ಯ ಗತಿಕಾನ್ತ್ಯೋಃ ಈ ಧಾತುಗಳ ಮುಂದೆ ಅತಚ್ ಬರುತ್ತೆ ಎಂದು ಅತಚ್ **ಚಿತಃ** (ಪಾ.ಸೂ. ೬-೧-೧೬೩) **ಚಿತಸ್ಸಪ್ರಕೃತೇರ್ಬಹ್ವಕಜರ್ಥಂ** ಚಕಾರೇತ್ಸಂಜ್ಞಕಪ್ರತ್ಯಯ ಬಂದಿದ್ದರೆ ಪ್ರಕೃತಿಪ್ರತ್ಯಯ ಸಮುದಾಯದ ಕೊನೆಯವರ್ಣವು ಉದಾತ್ತವಾಗುತ್ತೆ ಎಂದು ಯಜತ ಅಂತೋದಾತ್ತ ಪ್ರಥಮಾದ್ವಿವಚನಕ್ಕೆ **ಸುಪಾಂ ಸಲುಕ್** ಎಂದು ಆಕಾರ.

**ತ್ರಿಧಾತು**—ಇದರ ಪ್ರಕ್ರಿಯೆಯು ಹಿಂದಿನ ಮಂತ್ರದಲ್ಲಿದೆ, ಈ ಎರಡು ಪದಗಳಿಗೂ ಅರ್ಥದಲ್ಲಿ ವ್ಯತ್ಯಾಸವಿದೆ, ಇಲ್ಲಿ ಸಪ್ತಮಿ ಏಕವಚನಕ್ಕೆ **ಸುಪಾಂಸುಲುಕ್** ಎಂದು ಲುಕ್ ಬರುತ್ತೆ, ನಕಾರಲೋಪ.

**ಅಶಾಯತಮ್**—ಶೀಙ್ ಸ್ವಪ್ನೇ ಅದಾದಿ, ಲಙ್ ಪ್ರಥಮಪುರುಷ ಆತ್ಮನೇಪದ ದ್ವಿವಚನ ಆತಾಮ್-ಶೀ+ ಆತಾಮ್ ಶಪ್‌ಗೆ **ಅದಿಪ್ರಭೃತಿಭ್ಯಃ ಶಪಃ** ಎಂದು ಲುಕ್, **ಶೀಙಸ್ಸಾರ್ವಧಾತುಕೇಗುಣಃ** (ಪಾ. ಸೂ. ೭-೪-೨೧) ಸಾರ್ವಧಾತುಕಪ್ರತ್ಯಯ ಪರದಲ್ಲಿರುವಾಗ ಶೀಙ್‌ಗೆ ಗುಣ ಬರುತ್ತೆ ಎಂದು ಗುಣ, ಇದು **ಕ್ಙಿತಿಚ** ಎಂಬ ನಿಷೇಧಕ್ಕೆ ಅಪವಾದವಾದುದು. ಅಶೇ+ಆತಾಮ್, ಅಯಾದೇಶ ಅಶಯಾತಾಮ್ ಎಂದಾಗುತ್ತೆ, ಶಕಾರಕ್ಕೆ ದೀರ್ಘವೂ ಯಾಗೆ ಹ್ರಸ್ವವೂ ಛಾಂದಸವಾಗಿ ಬರುತ್ತೆ.

**ನಾಸತ್ಯಾ**—ಸತ್ಸು ಸಾಧೂ ಸತ್ಯೌ **ತತ್ರಸಾಧುಃ** (ಪಾ. ಸೂ. ೪-೪-೯೮) ಎಂದು ಯತ್‌ಪ್ರತ್ಯಯ, ನ ಸತ್ಯೌ ಅಸತ್ಯೌ ಎಂದು ನಞ್ **ಸಮಾಸ, ನ ಲೋಪೋನಞಃ** (ಪಾ. ಸೂ. ೬-೩-೭೩) ಎಂದು ನ್‌ಗೆ ಲೋಪ, ಪುನಃ ನ ಅಸತ್ಯೌ ಎಂದು ನಞ್ ಸಮಾಸ, ಈಗಲೂ ಹಿಂದಿನಂತೆ ನ್‌ಗೆ ಲೋಪವು ಪ್ರಾಪ್ತವಾದರೆ ಅದಕ್ಕೆ ಪ್ರಕೃತಿ ಭಾವವು **ನಭ್ರಾಣ್ನಪಾನ್ನವೇದಾನಾಸತ್ಯಾ—**, (ಪಾ. ಸೂ. ೬-೩-೭೫) ಎಂದು ನಿಪಾತಿತವಾಗಿದೆ, ಸತ್ಪುರುಷರಲ್ಲಿ ಸಾಧುಗಳಲ್ಲದವರಲ್ಲ ಎಂದರೆ ಸಾಧುಗಳೇ ಎಂದು ಏರ್ಪಡುತ್ತೆ **ದ್ವೌ ನಞೌ ಪ್ರಕೃತಮರ್ಥಂ ದ್ರಢಯತಃ** ಎಂಬ ನ್ಯಾಯದಿಂದ ಪ್ರಕೃತಾರ್ಥಕ್ಕೆ ದಾರ್ಢ್ಯವು ಏರ್ಪಡುತ್ತದೆ. **ಸತ್ಯಾವೇವ ನಾಸತ್ಯಾವಿತ್ಯೌರ್ಣನಾಭಃ** (ನಿ. ೬-೧೩) ಎಂಬಲ್ಲಿ ಯಾಸ್ಕರು ಸತ್ಯಾವೇವ ಎಂಬ ಪದದಿಂದ ಹಿಂದೆ ಹೇಳಿದ ಅರ್ಥವು ಔರ್ಣನಾಭರಿಗೆ ಸಮ್ಮತವೆಂದು ಹೇಳಿರುವರು.

**ರಥ್ಯಾ**—ರಮು ಕ್ರೀಡಾಯಾಂ ಧಾತು **ಹನಿಕುಷಿನೀರಮಿಕಾಶಿಭ್ಯಃ ಕ್ಥನ್** (ಉ. ಸೂ. ೨-೧೪೫) ಎಂದು ರಮ್ ಧಾತು ಮುಂದೆ ಕ್ಥನ್ ಪ್ರತ್ಯಯ, ಪ್ರತ್ಯಯ ಕಿತ್, **ಅನುದಾತ್ತೋಪದೇಶವನತಿತನೋತ್ಯಾದೀನಾಮನುನಾಸಿಕಲೋಪೋಝಲಿಕ್ಙಿತಿ** (ಪಾ. ಸೂ. ೬-೪-೩೭) ಅನುನಾಸಿಕ ಎಂಬುದು ಲುಪ್ತಷಷ್ಠ್ಯಂತ. ವನತಿ ಎಂಬುದನ್ನು ಬಿಟ್ಟು ಮಿಕ್ಕವುಗಳಿಗೆ ವಿಶೇಷಣ, ಯಮ್ ರಮ್ ನಮ್ ಗಮ್ ಹನ್ ಮನ್ ಇವು ಅನುದಾತ್ತೋಪದೇಶಗಳು, ಕಿತ್ ಅಥವಾ ಙಿತ್ ಆದ ಝಲಾದಿ ಪ್ರತ್ಯಯ ಪರದಲ್ಲಿದ್ದರೆ ವನಧಾತು, ಅನುನಾಸಿಕಾಂತಗಳಾದ ಅನುದಾತ್ತೋಪದೇಶಗಳು, ಅನುನಾಸಿಕಾಂತಗಳಾದ ತನೋತ್ಯಾದಿಗಳು ಇವುಗಳ ಅನುನಾಸಿಕಕ್ಕೆ ಲೋಪ ಬರುತ್ತೆ ಎಂದು ಮ್‌ಗೆ ಲೋಪ, ರಥ ಎಂದಾಯಿತು. ರಥಮರ್ಹತಃ ಇತಿ ರಥ್ಯೌ **ಛಂದಸಿಚ** (ಪಾ. ಸೂ. ೫-೧-೬೭) ಪ್ರಾತಿಪದಿಕಪ್ರಕೃತಿಕ ದ್ವಿತೀಯಾಂತದ ಮುಂದೆ ಅರ್ಹತಿ ಎಂಬ ಅರ್ಥದಲ್ಲಿ ಯತ್‌ಪ್ರತ್ಯಯವು ಛಂದಸ್ಸಿನಲ್ಲಿ ಬರುತ್ತೆ ಎಂದು ಯತ್, ರಥ+ಯ, **ಯಸ್ಯೇತಿ ಚ** ಎಂದು ಅಕಾರಕ್ಕೆ ಲೋಪ, ರಥ್ಯ, ಸಂಬೋಧನ ದ್ವಿವಚನಕ್ಕೆ ಆಕಾರಾದೇಶ.

**ಸ್ವಸರಾಣಿ**—ಸೃ ಗತೌ, ಸರನ್ತಿ ಗಚ್ಛನ್ತಿ ಇತಿ ಸರಾಃ, ಆಯಾ ವಿಷಯಗಳನ್ನು ಕುರಿತು ಹೋಗುತ್ತವೆ ಎಂದರ್ಥ. ಇಂದ್ರಿಯಗಳೆಂದು ಪರ್ಯವಸಾನ. ಸ್ವೇ ಸರಾಃ ಯೇಷಾಂ ತಾನಿ, ಸ್ವಕೀಯವಾದ ಇಂದ್ರಿಗಳುಳ್ಳವು ಎಂದು ಅರ್ಥ. ಬಹುವ್ರೀಹಿಸಮಾಸ, ಪೂರ್ವಪದಪ್ರಕೃತಿಸ್ವರ ಬರುತ್ತೆ. ಸ್ವ ಎಂಬ ಪೂರ್ವಪದವು ಪ್ರಾತಿಪದಿಕಸ್ವರದಿಂದ ಉದಾತ್ತ. ॥ ೭ ॥

---

॥ ಸಂಹಿತಾಪಾಠಃ ॥

ತ್ರಿರಶ್ವಿನಾ ಸಿಂಧುಭಿಃ ಸಪ್ತಮಾತೃಭಿಸ್ತ್ರಯ ಆಹಾವಾಸ್ತ್ರೇಧಾ
ಹವಿಷ್ಕೃತಂ ।
ತಿಸ್ರಃ ಪೃಥಿವೀರುಪರಿ ಪ್ರವಾ ದಿವೋ ನಾಕಂ ರಕ್ಷೇಥೇ ದ್ಯುಭಿ-
ರಕ್ತುಭಿರ್ಹಿತಂ ॥ ೮ ॥

॥ ಪದಪಾಠಃ ॥

ತ್ರಿಃ । ಅಶ್ವಿನಾ । ಸಿಂಧುಽಭಿಃ । ಸಪ್ತಮಾತೃಽಭಿಃ । ತ್ರಯಃ ।
ಆಽಹಾವಾಃ । ತ್ರೇಧಾ । ಹವಿಃ । ಕೃತಂ ।
ತಿಸ್ರಃ । ಪೃಥಿವೀಃ । ಉಪರಿ । ಪ್ರವಾ । ದಿವಃ । ನಾಕಂ । ರಕ್ಷೇಥೇ
ಇತಿ । ದ್ಯುಽಭಿಃ । ಅಕ್ತುಽಭಿಃ । ಹಿತಂ ॥ ೮ ॥

॥ ಸಾಯಣಭಾಷ್ಯ ॥

ಹೇ ಅಶ್ವಿನಾ ಸಪ್ತಮಾತೃಭಿಃ । ಇಮಂ ಮೇ ಗಂಗೇ । ಋಗ್ವೇ. ೧೦-೭೫-೫ । ಇತ್ಯಾದಿ ಮಂತ್ರೋಕ್ತಾಃ ಸಪ್ತಸಂಖ್ಯಾಕಾ ಗಂಗಾದ್ಯಾ ನದ್ಯೋ ಮಾತರ ಉತ್ಪಾದಿಕಾ ಯೇಷಾಂ ಜಲವಿಶೇಷಾಣಾಂ ತೇ ಸಪ್ತಮಾತರಃ । ತೈಃ ಸಿಂಧುಭಿಃ ಸ್ಯಂದನಸ್ವಭಾವೈರ್ಜಲೈರ್ವಸತೀವರೀನಾಮಭಿಸ್ತ್ರಿಃ ಸೋಮಾಭಿಷವಃ ಕೃತ ಇತಿ ಶೇಷಃ । ತಥಾ ಚಾನ್ಯತ್ರ ಬ್ರಾಹ್ಮಣೇ ಸಮಾಮ್ನಾತಂ । ಅಷ್ಟೌ ಕೃತ್ವೋಽಭಿಷುಣೋತಿ ಏಕಾದಶ ಕೃತ್ವೋ ದ್ವಿತೀಯಂ ದ್ವಾದಶ ಕೃತ್ವಸ್ತೃತೀಯಮಿತಿ । ತೈ ಸಂ. ೬-೪-೫-೧ । ಆಹಾವಾ ಯಥೋಕ್ತಜಲಯುಕ್ತಸ್ಯ ಸೋಮಸ್ಯಾಧಾರಭೂತಾಃ ಕೂಪಸದೃಶಾಸ್ತ್ರಯಸ್ತ್ರಿಸಂಖ್ಯಾಕಾ ದ್ರೋಣಕಲಶಾಧವನೀಯಪೂತಭೃದಾಖ್ಯಾ ನಿಷ್ಪನ್ನಾ ಇತಿ ಶೇಷಃ । ತೇಷು ತ್ರಿಷು ಪಾತ್ರವಿಶೇಷೇಷು ತ್ರೇಧಾ ತ್ರಿಭಿಃ ಪ್ರಕಾರೈಃ ಸವನತ್ರಯಗತೈರ್ಹವಿಷ್ಕೃತಂ । ಸೋಮಾಖ್ಯಂ ಹವಿಃ ಸಂಪಾದಿತಂ ದ್ರವ್ಯಂ ವರ್ತತ ಇತಿ ಶೇಷಃ । ತಿಸ್ರಃ ಪೃಥಿವೀರುಪರಿ ತ್ರಿಭ್ಯಃ ಪೃಥಿವ್ಯಾದಿಲೋಕೇಭ್ಯ ಊರ್ಧ್ವಂ ಪ್ರವಾ ಪ್ರವಂತೌ ಗಚ್ಛಂತೌ ಯುವಾಂ ದಿವೋ

**ನಾಕಂ ದ್ಯುಲೋಕಸಂಬಂಧಿನಮಾದಿತ್ಯಂ ರಕ್ಷೇಥೇ । ಕೀದೃಶಂ ನಾಕಂ । ದ್ಯುಭಿರಹೋಭಿರಕ್ತುಭೀ ರಾತ್ರಿಭಿಶ್ಚ ಹಿತಂ ಸ್ಥಾಪಿತಂ । ಅಹನಿ ಸೂರ್ಯ ಉದೇತಿ ರಾತ್ರಾವಸ್ತಂ ಗಚ್ಛತೀತ್ಯೇವಮಹೋರಾತ್ರಾಭ್ಯಾಂ ಸೂರ್ಯೋ ವ್ಯವಸ್ಥಾಪ್ಯತ ಇತ್ಯರ್ಥಃ ॥ ಸಪ್ತಮಾತೃಭಿಃ ಬಹುವ್ರೀಹಿಸ್ವರಃ । ಆಹಾವಾಃ । ನಿಪಾನಮಾಹಾವಃ । ಪಾ. ೩-೩-೭೪ । ಇತ್ಯಾಙ್ಪೂರ್ವಾದ್ಧ್ವಯತೇರಪ್ಪ್ರತ್ಯಯಃ ಸಂಪ್ರಸಾರಣಂ ವೃದ್ಧಿಶ್ಚ ನಿಪಾತನಾತ್ ।ಥಾಥಾದಿನೋತ್ತರಪದಾಂತೋದಾತ್ತತ್ವಂ । ಪ್ರವಾ । ಚ್ಯುಙ್ ಪ್ರುಙ್ ಗತೌ । ಪ್ರವೇತೇ ಗಚ್ಛತ ಇತಿಪ್ರವೌ । ಪಚಾದ್ಯಚ್ । ಸುಪಾಂ ಸುಲುಗಿತ್ಯಾಕಾರಃ । ನಾಕಂ । ನಾಸ್ಮಿನ್ನಕಮಸ್ತೀತಿ ನಾಕಃ । ನಭ್ರಾಣ್ನ- ಪಾದಿತ್ಯಾದಿನಾ ನಞಃ ಪ್ರಕೃತಿ ಭಾವಃ । ದ್ಯುಭಿಃ । ಊಡಿದಮಿತ್ಯಾದಿನಾ ಪ್ರಾಪ್ತಸ್ಯ ವಿಭಕ್ತ್ಯು- 'ಸ್ಯದಾತ್ತ ದಿವೋ ಝಲ್ । ಪಾ. ೬-೧-೧೮೩ ಇತಿ ಪ್ರತಿಷೇಧಃ ॥**

॥ ಪ್ರತಿಪದಾರ್ಥ ॥

**ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ । **ಸಪ್ತಮಾತೃಭಿಃ**— ಪ್ರವಾಹೋತ್ಪಾದಕಗಳಾದ ಗಂಗಾದಿಸಪ್ತ ಮೂಲನದಿಗಳೆಂಬ । **ಸಿಂಧುಭಿಃ**— (ಅವುಗಳಿಂದ ಶೇಖರಿಸಿಲ್ಪಟ್ಟ) ವಸತೀವರೀ ನಾಮಕಗಳಾದ ಪ್ರವಾಹತೀರ್ಥಗಳಿಂದ । **ತ್ರಿಃ**— ಮೂರುಸಲ (ಸೋಮರಸವು ನಿಷ್ಪೀಡಿತವಾಗಿದೆ) । **ಅಹಾವಾಃ**— (ಸೋಮರಸವನ್ನಿಡತಕ್ಕ) ಕೂಪಕ್ಕೆ ಸಮಾನವಾಗಿರುವ । **ತ್ರಯಃ**— ದ್ರೋಣಕಲಶ ಧನವನೀಯ ಪೂತಭೃನ್ನಾಮಕಗಳಾದ ಪಾತ್ರೆಗಳು (ಸಿದ್ಧವಾಗಿವೆ ಆ ಮೂರು ಪಾತ್ರೆಗಳಲ್ಲೂ) । **ತ್ರೇಧಾ**— ಮೂರು ಪ್ರಕಾರಗಳಿಂದ । **ಹವಿಷ್ಕೃತಂ**— ಸೋಮರಸವೆಂಬ ಹವಿಸ್ಸು ಸಂಪಾದಿತವಾಗಿದೆ. । **ತಿಸ್ರಃ**— ಮೂರಾದ । **ಪೃಥಿವೀರುಪರಿ**— ಪೃಥಿವ್ಯಾದಿ ಲೋಕಗಳ ಮೇಲೂ । **ಪ್ರವಾ**— ಸಂಚರಿಸುವವರಾಗಿ । **ದ್ಯುಭಿಃ**— ಹಗಲುಗಳಿಂದಲೂ । **ಅಕ್ತುಭಿಃ**— ರಾತ್ರಿಗಳಿಂದಲೂ । **ಹಿತಂ**—ವ್ಯವಸ್ಥಾಪಿಸಲ್ಪಟ್ಟ (ನಿಯಮಿಸಲ್ಪಟ್ಟ) । **ದಿವಃ**—ದ್ಯುಲೋಕದ । **ನಾಕಂ**— ಸೂರ್ಯನನ್ನು । **ರಕ್ಷೇಥೇ**— ಕಾಪಾಡುತ್ತೀರಿ. ।

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಮೂರು ಲೋಕಗಳ ಮೇಲೂ ಸಂಚರಿಸುವವರಾಗಿ ಹಗಲು ರಾತ್ರಿಗಳಾಗುವಂತೆ ನಿಯಮಿಸಲ್ಪಟ್ಟ ದ್ಯುಲೋಕದ ಸೂರ್ಯನನ್ನು ಕಾಪಾಡುತ್ತೀರಿ. ನಿಮಗೋಸ್ಕರ ಪವಿತ್ರಗಳಾದ ಗಂಗಾದಿ ಸಪ್ತನದೀಪ್ರವಾಹಗಳಿಂದ ತಂದು ಶೇಖರಿಸಿದ ತೀರ್ಥಗಳ ಸಹಾಯದಿಂದ ಸೋಮರಸನಿಷ್ಪೀಡನವನ್ನು ಮಾಡಿದ್ದೇವೆ. ಕೂಪಕ್ಕೆ ಸದೃಶವಾದ ಆಳವುಳ್ಳ ದ್ರೋಣಕಲಶ, ಧನನೀಯ ಪೂತಭೃತ್ ಎಂಬ ಹೆಸರುಳ್ಳ ಮೂರು ಬಗೆಯ ಹವಿಃಪಾತ್ರೆಗಳಲ್ಲೂ ಸೋಮರಸಾತ್ಮಕವಾದ ಹವಿಸ್ಸು ಸಂಪಾದಿತವಾಗಿದೆ. ಬಂದು ಸೇವಿಸಿ.

English Translation

Aswins, thrice the three jars are filled with the seven mothered streams for you and in three ways the oblations is prepared ; rising above the three worlds you keep the sun steady in the sky, who is established for both night and day.

॥ ವಿಶೇಷವಿಷಯಗಳು ॥

**ಸಪ್ತಮಾತೃಭಿಃ**— ಋ. ಸಂ. ೧೦-೭೫-೫. ರಲ್ಲಿ ಹೇಳಿರುವ ಇಮಂ ಮೇ ಗಂಗೇ ಎಂಬ ಮಂತ್ರದಲ್ಲಿ ಉಕ್ತವಾಗಿರುವ ಗಂಗಾ, ಯಮುನಾ, ಸರಸ್ವತೀ, ಶುತದ್ರಿ, ಪರುಷ್ಣೀ, ಅಸಿಕ್ನಿ, ಮರುದ್ವೃಧಾ ಎಂಬ ಏಳು ನದಿಗಳನ್ನು ಸಪ್ತಮಾತೃಗಳೆಂದು ಇಲ್ಲಿ ಸಂಬೋಧಿಸಲಾಗಿದೆ.

**ಸಿಂಧುಭಿಃ— ಸ್ಯಂದನಸ್ವಭಾವೈರ್ಜಲೈಃ ।** ಉದಕಗಳಿಂದ

**ಆಹಾವಾಃ**— ಸೋಮರಸವನ್ನಿಡುವ ಮೂರು ಪಾತ್ರೆಗಳು. ದ್ರೋಣಕಲಶ, ಧವನೀಯ, ಪೂತಭೃತ್ ಎಂಬ ಮೂರು ಪಾತ್ರೆಗಳು. ಸಾಧಾರಣವಾಗಿ ಇವುಗಳು ಮರದಿಂದ ಮಾಡಲ್ಪಟ್ಟಿರುವುವು.

**ದಿವೋ ನಾಕಂ**— ಸ್ವರ್ಗದ ಶಿಖರ, ಸ್ವರ್ಗದ ತುದಿ, ಅಂತರಿಕ್ಷದಲ್ಲಿ ಬಹು ಎತ್ತರವಾದ ಸ್ಥಳ. ಇಲ್ಲಿ ನಾಕಂ ಎಂಬ ಶಬ್ದಕ್ಕೆ ಭಾಷ್ಯಕಾರರು ಸೂರ್ಯನನ್ನು ಎಂದರ್ಥಮಾಡಿರುವರು. ಯಾಸ್ಕಮಹರ್ಷಿಗಳು ನಾಕಶಬ್ದದ ವಿಷಯದಲ್ಲಿ—

**ಸ್ವಃ । ಪೃಶ್ನಿಃ । ನಾಕಃ । ಗೌಃ । ವಿಷ್ಟಂ । ನಭಃ ॥** ಇತಿ
**ಷಟ್‌ಸಾಧಾರಣಾನಿ ದಿವಶ್ಚಾದಿತ್ಯಸ್ಯ ಚ** ॥ (ನಿ. ೨-೧೩)

ಸ್ವಃ ಮೊದಲಾದ ಆರು ಶಬ್ದಗಳೂ (ಇದರಲ್ಲಿ ನಾಕಶಬ್ದವೂ ಸೇರಿದೆ) ಸ್ವರ್ಗ ಮತ್ತು ಸೂರ್ಯ ಎಂಬ ಸಾಮಾನ್ಯ ಅರ್ಥವನ್ನು ಸೂಚಿಸುವ ಶಬ್ದಗಳು ಎಂದೂ,

**ನಾಕ ಆದಿತ್ಯೋ ಭವತಿ । ನೇತಾ ರಸಾನ್, ನೇತಾ ಭಾಸಾನ್ ಜ್ಯೋತಿಷಾಂ ಪ್ರಣಯಃ ॥**
(ನಿ. ೩-೧೪)

ನಾಕ ಎಂದರೆ ಆದಿತ್ಯನ ಹೆಸರು—ಏಕೆಂದರೆ ಕ ಎಂದರೆ ರಸ ಅಥವಾ ಉದಕವನ್ನು ರಶ್ಮಿಗಳ ಮೂಲಕ ಆಕರ್ಷಿಸಿ ಮಳೆಯ ರೂಪದಲ್ಲಿ ವರ್ಷಿಸುವಂತೆ ಮಾಡುವವನು, ಅಥವಾ ಪ್ರಕಾಶಕ್ಕೆ ನೇತೃವು ಎಂದರೆ ಮುಖ್ಯ ಆಧಾರ ಭೂತನು, ರಶ್ಮಿಗಳ ಮೂಲಕ ಸಮಸ್ತ ಪ್ರಪಂಚವನ್ನೂ ಬೆಳಗುವವನು ಆದುದರಿಂದ ಸೂರ್ಯನಿಗೆ ನಾಕ ಎಂದು ಹೆಸರು ಎಂದು ಹೇಳಿರುವರು. ದಿವಃ ನಾಕಂ ಎಂಬ ಶಬ್ದಗಳು ಈ ಅರ್ಥದಲ್ಲಿ ಋಗ್ವೇದದಲ್ಲಿ ಅನೇಕವಿರುವವು—

**ಸಹಸ್ರಧಾರೇವ ತೇ ಸಮಸ್ವರನ್ ದಿವೋ ನಾಕೇ ಮಧುಜಿಹ್ವಾ ಅಸಶ್ಚತಃ ॥**
(ಋ. ಸಂ. ೯-೭೩-೪)

ಇತ್ಯಾದಿ ಅನೇಕ ಉದಾಹರಣೆಗಳನ್ನು ಕೊಡಬಹುದು.

**ದ್ಯುಭಿಃ ಅಕ್ತುಭಿಃ**—ಹಗಲುಗಳಿಂದ ಮತ್ತು ರಾತ್ರಿಗಳಿಂದ ಈ ಅರ್ಥವನ್ನು ಸೂಚಿಸುವ—

**ದ್ಯುಭಿರಕ್ತುಭಿಃ ಪರಿ ಪಾತಮಸ್ಮಾನರಿಷ್ಟೇಭಿರಶ್ವಿನಾ ಸೌಭಗೇಭಿಃ ॥**
(ಋ. ಸಂ. ೧-೧೧೨-೨೫)

**ವಿ ದ್ಯಾಮೇಷಿ ರಜಸ್ಪೃಥ್ವಹಾ ಮಿಮಾನೋ ಅಕ್ತುಭಿಃ ॥**
(ಋ. ಸಂ. ೧-೫೦-೭)

ಇತ್ಯಾದಿ ಅನೇಕ ಉದಾಹರಣೆಗಳನ್ನು ಕೊಡಬಹುದು

॥ ವ್ಯಾಕರಣಪ್ರಕ್ರಿಯಾ ॥

**ಆಹಾವಾಃ—ನಿಪಾನಮಾಹಾವಃ** (ಪಾ. ಸೂ. ೩-೩-೭೪) ನಿಪಾನ ಎಂಬ ಅರ್ಥವು ವಾಚ್ಯವಾದಾಗ ಆಙ್ ಉಪಸರ್ಗಪೂರ್ವಕವಾದ ಹ್ವೇಞ್‌ಧಾತುವಿನ ಮುಂದೆ ಅಪ್‌ಪ್ರತ್ಯಯವೂ ಸಂಪ್ರಸಾರಣ ಎಂದರೆ ವಕಾರಕ್ಕೆ ಉಕಾರವೂ ವೃದ್ಧಿಯೂ ಸಹ ನಿಪಾತಿಸಲ್ಪಡುತ್ತೆ. ಆ–ಹ್ವೇ–ಅ, ಸಂಪ್ರಸಾರಣ ಬಂದಮೇಲೆ **ಸಂಪ್ರಸಾರಣಾಚ್ಚ** ಎಂದು ಪೂರ್ವರೂಪ ಆ+ಹು+ಅ ವೃದ್ಧಿ **ಏಚೋಽಯವಾಯಾವಃ** ಎಂದು ಆವಾದೇಶ ಆ+ಹಾವ್+ಅ=ಆಹಾವ ಎಂದಾಗುತ್ತೆ, ಇದು ಅಪ್ ಪ್ರತ್ಯಯಾಂತ, **ಥಾಥಘಞ್‌ಕ್ತಾಜಬಿತ್ರಕಾಣಾಂ** (ಪಾ. ಸೂ. ೬-೨-೪೪) ಥ-ಅಥ-ಘಞ್-ಕ್ತ-ಅಚ್-ಅಪ್-ಇತ್ರ-ಈ ಪ್ರತ್ಯಯಗಳನ್ನು ಕೊನೆಯಲ್ಲಿ ಹೊಂದಿರುವ ಶಬ್ದವು ಗತಿ ಅಥವಾ ಕಾರಕದ ಮುಂದೆ ಇದ್ದರೆ ಅದರ ಕೊನೆಯ ವರ್ಣವು ಉದಾತ್ತವಾಗುತ್ತೆ ಎಂದು ಉದಾತ್ತ.

**ಪ್ರವಾ**—ಚ್ಯುಙ್ ಪ್ರುಙ್ ಗತೌ ಧಾತು, ಪ್ರವೇತೇ=ಗಚ್ಛತಃ ಇತಿ ಪ್ರವೌ, ಹೋಗುವವರು ಎಂದರ್ಥ, **ನನ್ದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ** (ಪಾ. ಸೂ. ೩-೧-೧೩೪) ಎಂದು ಪಚಾದಿಲಕ್ಷಣವಾದ ಅಚ್‌ಪ್ರತ್ಯಯು ಗುಣ, ಅವಾದೇಶ, ಪ್ರಥಮಾದ್ವಿವಚನ ಔಪ್ರತ್ಯಯಕ್ಕೆ **ಸುಪಾಂಸುಲುಕ್**—, ಎಂದು ಅಕಾರಾದೇಶ, ಸವರ್ಣದೀರ್ಘ, ಏಕಾದೇಶಸ್ವರ.

**ನಾಕಮ್**—ನ ಅಕಂ ಅಸ್ಮಿನ್ನಿತಿ ನಾಕಂ । ಕ ಎಂದರೆ ಸುಖ, ಅಕ=ದುಃಖ, ದುಃಖವಿಲ್ಲದೇ ಇರುವುದ್ರು ನಾಕ. ಇಲ್ಲಿ ನಞ್‌ನ ನಕಾರಕ್ಕೆ **ನ ಲೋಪೋನಞಃ** ಎಂದು ಲೋಪವು ಪ್ರಾಪ್ತವಾದರೂ **ನಭ್ರಾಣ್ನ....ನಕ ನಾಕೇಷು** ಪ್ರಕೃತ್ಯಾ (ಪಾ. ಸೂ. ೬-೩-೭೫) ಎಂದು ಪ್ರಕೃತಿಭಾವವನ್ನು ವಿಶೇಷವಾಗಿ ವಿಧಿಸಿರುವುದರಿಂದ ನ್‌ಗೆ ಲೋಪ ಬರುವುದಿಲ್ಲ.

**ದ್ಯುಭಿಃ**—ದಿವ್ ಶಬ್ದದ ಮುಂದೆ ಭಿಸ್, **ದಿವಉತ್** (ಪಾ. ಸೂ ೬-೧-೧೩೧) ಪದಾಂತ ವಿಷಯದಲ್ಲಿ ದಿವ್‌ನ ಕೊನೆಯ ವರ್ಣಕ್ಕೆ ಉಕಾರಬರುತ್ತೆ ಎಂದು ವ್‌ಗೆ ಉಕಾರ, ಯಣಾದೇಶ, ಭಿಸ್‌ಸುಪ್, **ಅನುದಾತ್ತೌ ಸುಪ್ಪಿತೌ** ಎಂದು ಅನುದಾತ್ತವು ಪ್ರಾಪ್ತವಾಯಿತು. ಅದನ್ನು ಬಾಧಿಸಿ **ಊಡಿದಂ....ರೈದ್ಯುಭ್ಯಃ** (ಪಾ. ಸೂ. ಎಂದು ದಿವ್ ಶಬ್ದದ ಮುಂದೆ ಇರುವ ವಿಭಕ್ತಿಗೆ ಉದಾತ್ತವು ಪ್ರಾಪ್ತವಾಯಿತು. ಆದರೆ ಇದಕ್ಕೆ **ದಿವೋಝಲ್** (ಪಾ ಸೂ. ೬-೩-೧೮೩) ದಿವ್ ಶಬ್ದದ ಮುಂದೆ ಇರುವ ಝಲಾದಿಯಾದ ವಿಭಕ್ತಿಯು ಉದಾತ್ತವಾಗುವುದಿಲ್ಲ ಎಂದು ನಿಷೇಧ ಬರುತ್ತೆ, ಆದ್ದರಿಂದ, **ಅನುದಾತ್ತೌ**—, ಎಂಬುದರಿಂದ ಅನುದಾತ್ತವೇ ಬರುತ್ತದೆ. ॥ ೮ ॥



॥ ಸಂಹಿತಾಪಾಠಃ ॥

ಕ್ವ೧ ತ್ರೀ ಚಕ್ರಾ ತ್ರಿವೃತೋ ರಥಸ್ಯ ಕ್ವ೧ ತ್ರಯೋ ವಂ-
ಧುರೋ ಯೇ ಸನೀಳಾಃ ।
ಕದಾ ಯೋಗೋ ವಾಜಿನೋ ರಾಸಭಸ್ಯ ಯೇನ ಯಜ್ಞಂ
ನಾಸತ್ಯೋಪಯಾಥಃ ॥ ೯ ॥

॥ ಪದಪಾಠಃ ॥

ಕ್ವ । ತ್ರೀ । ಚಕ್ರಾ । ತ್ರಿಽವೃತಃ । ರಥಸ್ಯ । ಕ್ವ । ತ್ರಯಃ । ವಂ-
ಧುರಃ । ಯೇ । ಸಽನೀಳಾಃ ।
ಕದಾ । ಯೋಗಃ । ವಾಜಿನಃ । ರಾಸಭಸ್ಯ । ಯೇನ । ಯಜ್ಞಂ । ನಾ-
ಸತ್ಯಾ । ಉಪಽಯಾಥಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ನಾಸತ್ಯಾವಶ್ವಿನೌ ತ್ರಿವೃತಸ್ತ್ರಿಸಂಖ್ಯಾಕೈರಶ್ರಿಭಿರುಪೇತಸ್ಯ ಭವದೀಯಸ್ಯ ರಥಸ್ಯ । ಈಷಾ-ದ್ವಯಂ ಪೂರ್ವಭಾಗೇ ಸಂಯುಜ್ಯತೇ । ಸೇಯಮೇಕಾಶ್ರಿಃ । ಪೃಷ್ಠಭಾಗೇ ವಿಯುಜ್ಯತೇ । ತತ್ರ ಕೋಣದ್ವಯಂ ಸಂಪದ್ಯತೇ । ಈದೃಶಸ್ಯ ರಥಸ್ಯ ಸಂಬಂಧೀನಿ ತ್ರೀ ಚಕ್ರಾ ತ್ರೀಣಿ ಚಕ್ರಾಣಿ ಕ್ವ । ಕುತ್ರ ಸ್ಥಿತಾನೀತ್ಯಸ್ಮಾಭಿರ್ನ ದೃಶ್ಯತೇ । ಯೇ ಕಾಷ್ಠವಿಶೇಷಾಃ ಸನೀಳಾಃ । ನೀಳಂ ಗೃಹಸದೃಶಂ ರಥಸ್ಯೋಪ-ರ್ಯುಪವೇಶಸ್ಥಾನಂ । ತೇನ ಸಹ ವರ್ತಂತ ಇತಿ ಸನೀಳಾಸ್ತೇ ಕಾಷ್ಠವಿಶೇಷಾ ವಂಧುರೋ ನೀಡ ಬಂಧನಾ-ಧಾರಭೂತಾಸ್ತ್ರಯೋಽಕ್ಷೇಣ ಸಹಿತೇ ದ್ವೇ ಈಷೇ ಇತ್ಯೇವಂ ತ್ರಿಸಂಖ್ಯಾಕಾಃ ಕ್ವ । ಕುತ್ರ ಸ್ಥಿತಾ ಇತ್ಯಸ್ಮಾಭಿರ್ನ ಜ್ಞಾಯತೇ । ವಾಜಿನೋ ಬಲವತೋ ರಾಸಭಸ್ಯ ಭವದೀಯಾಶ್ವಸ್ಥಾನೀಯಸ್ಯ ಗರ್ದಭಸ್ಯ ಯೋಗೋ ರಥೇ ಯೋಜನಂ ಕದಾ । ಕಸ್ಮಿನ್ಕಾಲೇ ನಿಷ್ಪನ್ನಮಿತ್ಯಸ್ಮಾಭಿರ್ನ ದೃಶ್ಯತೇ । ಯೇನ ಚಕ್ರ-

**ತ್ರಯನೀಡಕಾಷ್ಠತ್ರಯರಾಸಭಯೋಜನಸಹಿತೇನ ರಥೇನ ಯಜ್ಞಮಸ್ಮದೀಯಂ ಯಾಗಸ್ಥಾನಮುಪ-ಯಾಥೋ ಯುವಾಂ ಪ್ರಾಪ್ನುಥಃ । ತಾದೃಶಸ್ಯ ರಥಸ್ಯೇತಿ ಪೂರ್ವತ್ರಾನ್ವಯಃ ॥ ತ್ರೀ ಚಕ್ರಾ । ಉಭಯತ್ರಾಪಿ ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ವಂಧುರಃ । ಬಂಧೇರೌಣಾದಿಕ ಉರಪ್ರತ್ಯಯಃ । ವತ್ವಂ ಛಾಂದಸಂ । ಸ ನೀಳಾಃ । ವೋಪಸರ್ಜನಸ್ಯೇತಿ ಸಭಾವಃ ॥**

॥ ಪ್ರತಿಪದಾರ್ಥ ॥

**ನಾಸತ್ಯಾ**—ಎಲೈ ಅಶ್ವೀದೇವತೆಗಳೇ । **ಯೇನ**—ಯಾವ ರಥದಿಂದ । **ಯಜ್ಞಂ**—ನಮ್ಮಯಾಗ ಪ್ರದೇಶಕ್ಕೆ । **ಉಪಯಾಥಃ**—ಬಂದು ಸೇರುತ್ತೀರೋ (ನಿಮ್ಮ ಆ) । **ತ್ರಿವೃತಃ**—ತ್ರಿಕೋಣಾಕಾರವಾದ ಮೂಕಿ ಮರದಿಂದ ಕೂಡಿದ । **ರಥಸ್ಯ**—ರಥದ । **ತ್ರೀ ಚಕ್ರಾ**—ಮೂರು ಗಾಲಿಗಳು । **ಕ್ವ**—ಎಲ್ಲಿವೆ? । **ಯೇ**—ಯಾವ ಕಾಷ್ಠಗಳು । **ಸನೀಳಾಃ**—ಮನೆಯಂತೆ ಇರುವ ಕುಳಿತುಕೊಳ್ಳುವ ಸ್ಥಾನದೊಡನೆ ಕೂಡಿ । **ವನ್ಧುರಃ**—ಛಾವಣಿ ಕಟ್ಟಲು ಆಧಾರಗಳಾದ । **ತ್ರಯಃ**—ಇರಚಿಯೊಂದು, ಈಚಿಮರಗಳು ಎರಡು । **ಕ್ವ**—ಎಲ್ಲಿವೆ (ಈ ಮೂರೂ ನಮಗೆ ಕಾಣುವುದಿಲ್ಲ) । **ವಾಜಿನಃ**—ಬಲಶಾಲಿಯಾದ । **ರಾಸಭಸ್ಯ**—(ಕುದುರೆಗೆ ಬದಲಾಗಿರತಕ್ಕ) ಕತ್ತೆಯ (ನ್ನು) । **ಕದಾ**—ಯಾವಕಾಲದಲ್ಲಿ । **ಯೋಗಃ**—ನಿಮ್ಮ ರಥಕ್ಕೆ ಕಟ್ಟುವಿರಿ (ಇದೊಂದೂ ನಮಗೆ ತಿಳಿಯದು)

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ ನಿಮ್ಮ ರಥದ ಭಾಗಗಳೊಂದೂ ನಮಗೆ ಕಾಣಿಸುವುದಿಲ್ಲ. ತ್ರಿಕೋಣರೂಪವಾದ ಮೂಕಿಯುಳ್ಳ ನಿಮ್ಮ ರಥದ ಮೂರು ಗಾಲಿಗಳೆಲ್ಲಿ? ರಥದಲ್ಲಿ ಮನೆಯಂತೆ ಕುಳಿತುಕೊಳ್ಳುವ ಸ್ಥಾನವನ್ನು ಕಟ್ಟಲು ಆಧಾರಭೂತಗಳಾದ ಎರಡು ಈಚುಮರಗಳು, ಒಂದು ಇರಚಿ, ಈ ಮೂರೂ ಎಲ್ಲಿವೆಯೋ ಅವುಗಳೂ ನಮಗೆ ಕಾಣಿಸುವುದಿಲ್ಲ. ಮತ್ತು ಕುದುರೆ ಸ್ಥಾನದಲ್ಲಿ ಕಟ್ಟುವ ನಿಮ್ಮ ಬಲಶಾಲಿಯಾದ ಗರ್ದಭವನ್ನು ನಿಮ್ಮ ರಥಕ್ಕೆ ಕಟ್ಟುವುದು ಯಾವಾಗ ? ಅದೂ ನಮಗೆ ತಿಳಿಯುವುದಿಲ್ಲ. ಆ ನಿಮ್ಮ ರಥದಲ್ಲಿ ನೀವು ಕುಳಿತು ನಮ್ಮ ಯಾಗ ಭೂಮಿಗೆ ಬರುವುದನ್ನು ಮಾತ್ರ ನಾವು ತಿಳಿಯುತ್ತೇವೆ.

English Translation

Where are the wheels of the triangular car? Where are the three beams with seats on them? when will you harness your powerful donkey (ass) to that car that you may come to this sacrifice?

॥ ವಿಶೇಷ ವಿಷಯಗಳು ॥

ಈ ಮಂತ್ರದಲ್ಲಿ ಋಷಿಯು ಮೂರು ಪ್ರಶ್ನೆಯನ್ನು ಕೇಳಿರುವನು. ನಿಮ್ಮ ರಥದ ಮೂರು ಚಕ್ರಗಳೆಲ್ಲಿ? ನೊಕಿಗಳೆಲ್ಲಿ? ನಿಮ್ಮ ರಥಕ್ಕೆ (ಕುದುರೆಗೆ ಬದಲಾಗಿ) ಕತ್ತೆಯನ್ನು ಯಾವಾಗ ಹೂಡುವಿರಿ? ಇವ್ಯಾವುದೂ ನಮಗೆ ತಿಳಿಯದಿದ್ದರೂ ನೀವು ನಿಮ್ಮ ರಥದಲ್ಲಿ ಕುಳಿತು ನಮ್ಮ ಯಜ್ಞಭೂಮಿಗೆ ಬರಬೇಕೆಂದು ಪ್ರಾರ್ಥಿಸಿರುವನು.

**ತ್ರಿವೃತಃ—ತ್ರಿಸಂಖ್ಯಾಕೈರಶ್ರಿಭಿರುಪೇತಸ್ಯ ರಥಸ್ಯ ।** ತ್ರಿಕೋಣಾಕಾರವಾದ ಎಂದರೆ ಮೂರು ಮೂಲೆಗಳುಳ್ಳ ರಥವು, trangular cart. ಅಶ್ವಿನೀದೇವತೆಗಳ ರಥವು ಈ ರೀತಿ ಇರುವುದೆಂದು ವೇದದಲ್ಲಿ ಹೇಳಿರುವುದು. ಭಾಷ್ಯಕಾರರು ಈ ಮೂರು ಕೋಣಗಳ ವಿವರಣೆಯನ್ನು ಈ ರೀತಿ ಹೇಳಿರುವರು— **ಈಷಾದ್ವಯಂ ಪೂರ್ವಭಾಗೇ ಸಂಯುಜ್ಯತೇ । ಸೇಯಮೇಕಾಶ್ರಿಃ । ಪೃಷ್ಠಭಾಗೇ ವಿಯುಜ್ಯತೇ । ತತ್ರಕೋಣದ್ವಯಂ ಸಂಪದ್ಯತೇ । ಈದೃಶಸ್ಯ ರಥಸ್ಯ ಸಂಬಂಧೀನಿ ತ್ರೀಣಿ ಚಕ್ರಾಣಿ ಕ್ವ ॥** ಇಲ್ಲಿ ತ್ರಿಕೋಣಾಕಾರವೆಂದರೆ, ಎರಡು ಉದ್ದವಾದ ಮರದ ತುಂಡುಗಳು (beams) ಮುಂದುಗಡೆ ಒಂದಕ್ಕೊಂದು ಸೇರಿರುವುವು. ಅಲ್ಲಿ ಒಂದು ಕೋಣವು ಆಗುವುದು. ಹಿಂದುಗಡೆ ಆ ಎರಡು ಮರಗಳ ತುದಿಗಳಿಗೆ ಸೇರಿಸುವ ಮತ್ತೊಂದು ಮರವಿರುವುದು. ಅಲ್ಲಿ ಎಂದರೆ ಹಿಂಭಾಗದಲ್ಲಿ ಎರಡು ತುದಿಗಳಿಗೂ ಸೇರಿದಂತೆ ಎರಡು ಕೋಣಗಳಿರುವುವು. ಒಟ್ಟು ಮೂರು ಮರಗಳೂ ಸೇರಿ ಮೂರು ಕೋಣಗಳಾಗುವುವು. Three sides (beams) of the triangle form the three angles. ಪ್ರತಿಯೊಂದು ಕೋಣದ (angle) ಸಮೀಪದಲ್ಲಿಯೂ ಅದರ ಕೆಳಭಾಗದಲ್ಲಿ ಅದಕ್ಕೆ ಸೇರಿದಂತೆ ಒಂದೊಂದು ಚಕ್ರದಂತೆ ರಥಕ್ಕೆ ಒಟ್ಟು ಮೂರು ಚಕ್ರಗಳಿರುವುವು ಈ ಮೂರು ಚಕ್ರಗಳ ಮಧ್ಯದಲ್ಲಿ ಕುಳಿತುಕೊಳ್ಳುವ **ನೀಳಂ** ಎಂಬ ಉಪವೇಶಸ್ಥಾನವು ಇರುವುದು. ಅದರ ಮೇಲೆ ಅಶ್ವಿನೀದೇವತೆಗಳು ಕುಳಿತುಕೊಳ್ಳುವರು.

**ವಂಧುರಃ**— ರಥದ ಆಸನವು. ರಥದಲ್ಲಿ ಕುಳಿತುಕೊಳ್ಳುವ ಸ್ಥಾನವು. seat in the chariot. ಸಾಧಾರಣವಾಗಿ ಅಶ್ವಿನೀದೇವತೆಗಳ ರಥದಲ್ಲಿ ಇರುವ ಆಸನಕ್ಕೆ **ತ್ರಿವಂಧುರ** ಎಂದು ಹೆಸರು. ಈ ಋಕ್ಕಿನಲ್ಲಿ ವಂಧುರ ಎಂಬ ಶಬ್ದವಿದ್ದರೂ ತ್ರಿವಂಧುರ ಶಬ್ದದ ಅರ್ಥವನ್ನೇ ಹೇಳಬೇಕು. ಈ ಶಬ್ದ ಅಥವಾ ತ್ರಿವಂಧುರ ಶಬ್ದವಿರುವ ಒಂದೆರಡು ಋಕ್ಕುಗಳನ್ನು ಉದಾಹರಣೆಗಾಗಿ ಇಲ್ಲಿ ಕೊಟ್ಟಿದ್ದೇವೆ.

**ಅಧಿ ವಾಂ ಸ್ಥಾಮ ವಂಧುರೇ ರಥೇ ದಸ್ರಾ ಹಿರಣ್ಯಯೇ ॥**
(ಋ. ಸಂ. ೧-೧೩೯-೪)

**ಯಶ್ಶೀಮಂಜಂತಿ ಪೂರ್ವ್ಯಂ ಹವಿರ್ಭಿರಾ ವಂಧುರೇವ ತಸ್ಥತುರ್ದುರೋಣೇ ॥**
(ಋ. ಸಂ ೩-೧೪-೩)

**ತ್ರಿವಂಧುರೇಣ ತ್ರಿವೃತಾ ಸುಪೇಶಸಾ ರಥೇನಾ ಯಾತಮಶ್ವಿನಾ ॥**
(ಋ. ಸಂ. ೧-೧೪೭-೩)

**ತ್ರಿವಂಧುರೇಣ ತ್ರಿವೃತಾ ರಥೇನ ತ್ರಿಚಕ್ರೇಣ ಸುವೃತಾ ಯಾತಮರ್ವಾಕ್ ॥**
(ಋ. ಸಂ ೧-೧೧೮-೨)

**ತ್ರಿವಂಧುರೋ ಮಘವಾ ವಿಶ್ವಸೌಭಗಃ ಶಂ ನ ಆ ವಕ್ಷದ್ದ್ವಿಪದೇ ಚತುಷ್ಪದೇ ||**
(ಋ. ಸಂ. ೧-೧೫೭-೩)

**ಸ ಪಪ್ರಥಾನೋ ಅಭಿ ಪಂಚ ಭೂಮಾ ತ್ರಿವಂಧುರೋ ಮನಸಾ ಯಾತು ಯುಕ್ತಃ ||**
(ಋ. ಸಂ. ೭-೬೯-೨)

**ರಥೋ ಯೋ ವಾಂ ತ್ರಿವಂಧುರೋ ಹಿರಣ್ಯಾಭೀಶುರಶ್ವಿನಾ ||**
(ಋ. ಸಂ. ೮-೨೨-೫)

ಇತ್ಯಾದಿ ಅನೇಕ ಋಕ್ಕುಗಳಲ್ಲಿ ವಂಧುರ ಮತ್ತೂ ತ್ರಿವಂಧುರ ಎಂಬ ಶಬ್ದಗಳ ಪ್ರಯೋಗವಿರುವುದು. ವಂಧುರ ಶಬ್ದವು ಯಾವ ದೇವತೆಯ ವಿಷಯವಾಗಿ ಉಪಯೋಗಿಸಿದ್ದರೂ ತ್ರಿವಂಧುರ ಶಬ್ದವು ಮಾತ್ರ ಅಶ್ವಿನೀದೇವತೆಗಳ ಪರವಾಗಿಯೇ ಪ್ರಯೋಗಿಸಲ್ಪಟ್ಟಿರುವುದು.

**ಯೋಗಃ**—ಸಂಬಂಧವು, ಸೇರಿಸುವಿಕೆ, ಹೂಡುವಿಕೆ, ಇಲ್ಲಿ ರಥಕ್ಕೆ ಅಶ್ವವನ್ನು (ರಾಸಭವನ್ನು) ಹೂಡುವುದು ಎಂದರ್ಥವು.

**ವಾಜಿನೋ ರಾಸಭಸ್ಯ**— ವಾಜಿ ಎಂದರೆ ಅಶ್ವ, ಕುದುರೆ. ರಾಸಭಸ್ಯ ಎಂದರೆ ಕತ್ತೆ. ಇಲ್ಲಿ ವಾಜಿನೋ ರಾಸಭಸ್ಯ ಎಂಬ ಶಬ್ದಗಳಿಗೆ ರಥಕ್ಕೆ ಅಶ್ವವನ್ನು ಹೂಡುವ ಸ್ಥಾನದಲ್ಲಿ ಕತ್ತೆಯನ್ನು ಹೂಡುವುದೆಂದರ್ಥವು. ಅಶ್ವಿನೀ ದೇವತೆಗಳ ರಥಕ್ಕೆ ಸಾಧಾರಣವಾಗಿ ರಾಸಭವನ್ನೇ ಹೂಡುವುದು ರೂಢಿಯು. ಈ ವಿಷಯದಲ್ಲಿ

**ತದ್ರಾಸಭೋ ನಾಸತ್ಯಾ ಸಹಸ್ರಮಾಜಾ ಯಮಸ್ಯ ಪ್ರಧನೇ ಜಿಗಾಯ ||**
(ಋ. ಸಂ. ೧-೧೧೬-೨)

**ಹರೀ ತೇ ಯುಂಜಾ ಪೃಷತೀ ಅಭೂತಾಮುಪಸ್ಥಾದ್ವಾಜೀ ಧುರಿ ರಾಸಭಸ್ಯ |**
(ಋ. ಸಂ. ೧-೧೬೨-೨೧)

**ಯತ್ರಾ ರಥಸ್ಯ ಬೃಹತೋ ನಿಧಾನಂ ವಿಮೋಚನಂ ವಾಜಿನೋ ರಾಸಭಸ್ಯ ||**
(ಋ. ಸಂ. ೩-೫೩-೫)

**ಯುಂಜಾಥಾಂ ರಾಸಭಂ ರಥೇ ವೀಡ್ವಂಗೇ ವೃಷಣ್ವಸೂ ||**
(ಋ. ಸಂ. ೮-೮೫-೭)

ಇತ್ಯಾದಿ ಋಕ್ಕುಗಳಲ್ಲಿಯೂ ಇನ್ನೂ ತೈತ್ತಿರೀಯಸಂಹಿತಾ ೪-೨-೧; ಕೌಷೀತಕೀ ಬ್ರಾಹ್ಮಣ. ೧೮-೧; ಶತಪಥಬ್ರಾಹ್ಮಣ ೬-೧-೧-೧೧; ೬-೩-೧-೨೩; ೬-೩-೨-೩; ೬-೪-೪ ೩ ಇತ್ಯಾದಿ ಮಂತ್ರಗಳಲ್ಲಿಯೂ ರಾಸಭ ಶಬ್ದವು ಏಕವಚನದಲ್ಲಿ ಪ್ರಯೋಗಿಸಲ್ಪಟ್ಟಿರುವುದರಿಂದ ಅಶ್ವಿನೀ ದೇವತೆಗಳ ರಥಕ್ಕೆ ಕುದುರೆಯಾದ ರಾಸಭವು ಒಂದೇ ಒಂದೆಂದು ಸ್ಪಷ್ಟವಾಗುವುದು.

॥ ವ್ಯಾಕರಣಪ್ರಕ್ರಿಯಾ ॥

**ಕ್ವ—ಕಿಮೋಽತ್** (ಪಾ. ಸೂ. ೫-೩-೧೨) ಕಿಮ್‌ಶಬ್ದ ಪ್ರಕೃತಿಕವಾದ ಸಪ್ತಮ್ಯಂತದ ಮುಂದೆ ಅತ್ ಪ್ರತ್ಯಯ ಬರುತ್ತೆ ಎಂದರ್ಥ. ಇಲ್ಲಿ ಇದು ಪ್ರಾಗ್ದಿಶೀಯಪ್ರತ್ಯಯ, **ಪ್ರಾಗ್ದಿಶೋವಿಭಕ್ತಿಃ** (ಪಾ. ಸೂ. ೫-೩-೧) ಇಲ್ಲಿಂದ ಹಿಡಿದು **ದಿಕ್‌ಶಬ್ದೇಭ್ಯಃ—,** (ಪಾ. ಸೂ. ೫-೩-೨೭) ಎಂಬ ಸೂತ್ರವರೆಗೆ ಇರುವ ಪ್ರತ್ಯಯಗಳು ವಿಭಕ್ತಿ ಸಂಜ್ಞೆಯನ್ನು ಹೊಂದುವುವು ಎಂದು ಅತ್‌ಗೆ ವಿಭಕ್ತಿಸಂಜ್ಞೆ ಇದೆ. ಆದರೂ **ನ ವಿಭಕ್ತೌ ತುಸ್ಮಾಃ** (ಪಾ. ಸೂ. ೧-೩-೪) ವಿಭಕ್ತಿಯಲ್ಲಿರುವ ತವರ್ಗ ಸಕಾರಮಕಾರಗಳು ಇತ್ಸಂಜ್ಞೆಯನ್ನು ಹೊಂದುವುದಿಲ್ಲ ಎಂಬುದರಿಂದ ಇತ್ಸಂಜ್ಞಾ ನಿಷೇಧ ಬರುವುದಿಲ್ಲ. ಏಕೆಂದರೆ **ಇದಮಸ್ಥಮುಃ** (ಪಾ. ಸೂ. ೫-೩-೨೪) ಎಂಬಲ್ಲಿ ಥಮ್ ಎಂದು ಪ್ರತ್ಯಯವನ್ನು ವಿಧಿಸಿದರೂ **ನವಿಭಕ್ತೌ** ಎಂಬ ನಿಷೇಧವಿರುವುದರಿಂದ ಮ್‌ಗೆ ಇತ್ವ ಬರುವುದಿಲ್ಲ, ಹೀಗಿರುವಾಗ ಇತ್ವನಿವಾರಣೆಗಾಗಿ ಥಮು ಎಂದು ಹೇಳಿರುವ ಉಕಾರವು ವ್ಯರ್ಥವಾಗಿ **ನವಿಭಕ್ತೌ** ಎಂಬುದು ಅನಿತ್ಯ ಎಂದು ಜ್ಞಾಪಿಸುವುದು. ಆದ್ದರಿಂದ ಇಲ್ಲಿ ತ್‌ಗೆ ಇತ್ಸಂಜ್ಞೆ ಬಂದು ಲೋಪ ಬಂದರೆ ಅ ನಿಲ್ಲುತ್ತೆ ಕಿಮ್+ಅ, **ಕ್ವಾತಿ** (ಪಾ. ಸೂ. ೭-೨-೧೦೫) ಅತಿ ಪ್ರತ್ಯಯ ಪರದಲ್ಲಿದ್ದರೆ ಕಿಮ್‌ಶಬ್ದಕ್ಕೆ ಕ್ವ ಆದೇಶ ಬರುತ್ತೆ ಎಂದು ಕಿಮ್ ಶಬ್ದಕ್ಕೆ ಕ್ವ ಆದೇಶ, ಕ್ವ+ ಅ, **ತಿತ್ಸ್ವರಿತಮ್** (ಪಾ. ಸೂ. ೬-೧-೧೮೫) ತಕಾರೇತ್ಸಂಜ್ಞಕ ಪ್ರತ್ಯಯವು ಸ್ವರಿತವಾಗುವುದು ಎಂದು ಅ ಸ್ವರಿತ, **ಅತೋಗುಣೇ ಎಂದು ಪರರೂಪ,** ಅದು ಸ್ಥಾನಿವದ್ಭಾವದಿಂದ ಸ್ವರಿತವೇ ಆಗುತ್ತೆ.

**ತ್ರೀ, ಚಕ್ರಾ**—ತ್ರೀ, ಚಕ್ರ ಈ ಶಬ್ದಗಳ ಮುಂದೆ ಜಸ್ **ಜಶ್ಶಸೋಃಶಿಃ** ಎಂದು ಶಿ ಆದೇಶ, **ಶಿಸರ್ವನಾಮ ಸ್ಥಾನಂ** (ಪಾ. ಸೂ. ೧-೧-೪೨) ಎಂದು ಸರ್ವನಾಮಸ್ಥಾನಸಂಜ್ಞೆಯು ಶಿಗೆ ಇದೆ. **ನಪುಂಸಕಸ್ಯಝಲಚಃ** ಎಂದು ನುಮಾಗಮ, **ಸರ್ವನಾಮಸ್ಥಾನೇಚಾ—,** ಎಂದು ಉಪಧಾದೀರ್ಘ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಛಂದಸ್ಸಿನಲ್ಲಿ ಶಿಗೆ ಬಹುಲವಾಗಿ ಲುಕ್ ಬರುತ್ತೆ ಎಂದು ಶಿಗೆ ಲುಕ್, **ನಲೋಪಃಪ್ರಾತಿಪದಿಕಾಂತಸ್ಯ** ಎಂದು ನಕಾರಕ್ಕೆ ಲೋಪ.

**ವಂಧುರಃ**—ಬನ್ಧ ಬನ್ಧನೇ ಕ್ರ್ಯಾದಿ ಧಾತು. ಇದರ ಮುಂದೆ ಔಣಾದಿಕವಾದ ಉರಪ್ರತ್ಯಯ ಬಕಾರಕ್ಕೆ ಛಾಂದಸವಾಗಿ ವಕಾರ.

**ಸನೀಳಾಃ**—ನೀಳೇನ ಸಹವರ್ತಂತೇ, **ತೇನ ಸಹೇತಿತುಲ್ಯಯೋಗೇ** (ಪಾ. ಸೂ. ೨-೨-೨೮) ಎಂದು ಬಹುವ್ರೀಹಿ. ನೀಳ ಎಂದರೆ ರಥದ ಮೇಲೆ ಇರುವ ಪೀಠ, **ವೋಪಸರ್ಜನಸ್ಯ** (ಪಾ. ಸೂ. ೬-೩-೮೨) ಬಹು ವ್ರೀಹಿಸಮಾಸದಲ್ಲಿ ಸಹ ಶಬ್ದಕ್ಕೆ ಸ ಆದೇಶ ಬರುತ್ತೆ ಎಂಬುದರಿಂದ ಸಹ ಶಬ್ದಕ್ಕೆ ಸ ಆದೇಶ.



॥ ಸಂಹಿತಾಪಾಠಃ ॥

ಆ ನಾಸತ್ಯಾ ಗಚ್ಛತಂ ಹೂಯತೇ ಹವಿರ್ಮಧ್ವಃ ಪಿಬತಂ ಮಧು-
ಪೇಭಿರಾಸಭಿಃ ।
ಯುವೋರ್ಹಿ ಪೂರ್ವಂ ಸವಿತೋಷಸೋ ರಥಮೃತಾಯ ಚಿತ್ರಂ
ಘೃತವಂತಮಿಷ್ಯತಿ ॥ ೧೦ ॥

॥ ಪದಪಾಠಃ ॥

ಆ । ನಾಸತ್ಯಾ । ಗಚ್ಛತಂ । ಹೂಯತೇ । ಹವಿಃ । ಮಧ್ವಃ । ಪಿಬತಂ ।
ಮಧುಽಪೇಭಿಃ । ಆಸಽಭಿಃ ।
ಯುವೋಃ । ಹಿ । ಪೂರ್ವಂ । ಸವಿತಾ । ಉಷಸಃ । ರಥಂ । ಋತಾಯ ।
ಚಿತ್ರಂ । ಘೃತಽವಂತಂ । ಇಷ್ಯತಿ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ನಾಸತ್ಯಾವಶ್ವಿನಾವಿಹ ಕರ್ಮಣ್ಯಾ ಗಚ್ಛತಂ । ಅತ್ರಾಸ್ಮಾಭಿರ್ಹವಿರ್ಹೂಯತೇ । ಯುವಾಂ ಚ ಮಧುಪೇಭಿರ್ಮಧುರದ್ರವ್ಯಪಾನಯುಕ್ತೈರಾಸಭಿರ್ಭವದೀಯೈರಾಸ್ಯೈರ್ಮಧ್ವೋ ಮಧುರದ್ರವ್ಯಾಣಿ ಹವೀಂಷಿ ಪಿಬತಂ । ಸವಿತಾ ಸೂರ್ಯ ಉಷಸಃ ಪೂರ್ವಮುಷಃಕಾಲಾತ್ಪುರಾ ಯುವಯೋರಶ್ವಿನೋಃ ಸಂಬಂಧಿನಂ ರಥಮೃತಾಯಾಸ್ಮದ್ಯಜ್ಞಾರ್ಥಮಿಷ್ಯತಿ ಹಿ । ಪ್ರೇರಯತಿ ಖಲು । ಕೀದೃಶಂ । ಚಿತ್ರಂ ಪೂರ್ವೋಕ್ತೈಶ್ಚಕ್ರತ್ರಯಾದಿಭಿರ್ವಿಚಿತ್ರಂ ಘೃತವಂತಮಕ್ಷ್ಣಾಂಜನಸಾಧನೇನ ಘೃತೇನೋಪೇತಂ ॥ ಗಚ್ಛತಂ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಶಪಃ ಪಿತ್ತ್ವಾದನುದಾತ್ತತ್ವಂ । ಧಾತುಸ್ವರಃ । ಅತ್ರ ಗಚ್ಛತಂ ಪಿಬತಂ ಚೇತಿ ಚಾರ್ಥಪ್ರತೀತೇಶ್ಚಾದಿಲೋಪೇ ವಿಭಾಷೇತಿ ಪ್ರಥಮಾಯಾಸ್ತಿಙ್ವಿಭಕ್ತೇರ್ನಿಘಾತಪ್ರತಿಷೇಧಃ । ಹೂಯತೇ । ಲಸಾರ್ವಧಾತುಕಾನುದಾತ್ತತ್ವೇ ಯಕಃ ಸ್ವರಃ । ಮಧ್ವಃ । ಲಿಂಗವ್ಯತ್ಯಯಃ । ಶಸಿ ಯಣಾದೇಶಶ್ಛಾಂದಸಃ । ಮಧುಪೇಭಿಃ । ಮಧು ಪಿಬಂತೀತಿ ಮಧುಪಾನಿ । ಆತೋಽನುಪಸರ್ಗೇ ಕ ಇತಿ ಕಪ್ರತ್ಯಯಃ । ಆಸಭಿಃ । ಪದ್ದನ್ನಿತ್ಯಾದಿನಾಸ್ಯಶಬ್ದಸ್ಯಾಸನಾದೇಶಃ ।

**ಯುವೋಃ । । ಯುವೋರ್ಹಿ ಯಂತ್ರಮಿತ್ಯಕ್ತ್ರೋಕ್ತಂ । ಇಷ್ಯತಿ । ಇಷ ಗತೌ । ಶ್ಯನೋನಿತ್ವಾ ದಾದ್ಯುದಾತ್ತತ್ವಂ । ಹಿ ಚೇತಿ ನಿಘಾತಪ್ರತಿಷೇಧಃ ॥**

॥ ಪ್ರತಿಪದಾರ್ಥ ॥

**ನಾಸತ್ಯಾ**— ಎಲೈ ಅಶ್ವಿನೀ ದೇವತೆಗಳೇ (ನಮ್ಮ ಯಜ್ಞನಿಮಿತ್ತವಾಗಿ ಇಲ್ಲಿಗೆ) । **ಆಗಚ್ಛತಂ**—ದಯ ಮಾಡಿ । **ಹವಿಃ**— ಹವಿಸ್ಸು । **ಹೂಯತೇ**— ಅರ್ಪಿಸಲ್ಪಡುತ್ತದೆ । **ಮಧುಪೇಭಿಃ**— ಮಧುರ ದ್ರವ್ಯವನ್ನು ಪಾನಮಾಡಲು ಯೋಗ್ಯವಾದ (ರುಚಿನೋಡಲು ಸಮರ್ಥವಾದ) । **ಆಸಭಿಃ**— ಬಾಯಿಗಳಿಂದ । **ಮಧ್ವಃ**— ಮಧುರವಾಗಿರುವ ನಮ್ಮ ಹವಿಸ್ಸುಗಳನ್ನು । **ಪಿಬತಂ**— ಕುಡಿಯಿರಿ । **ಸವಿತಾ**— ಸೂರ್ಯನು । **ಉಷಸಃ ಪೂರ್ವಂ**— ಉಷಃಕಾಲಕ್ಕೆ ಮೊದಲೇನೇ । **ಯುವೋಃ**— ನಿಮ್ಮ । **ಚಿತ್ರಂ**—ಮೂರುಚಕ್ರವೇ ಮೊದಲಾದ ಅಸಾಧಾರಣಾವಯವಗಳಿಂದ) ಆಶ್ಚರ್ಯಕರವಾದ । **ಘೃತವಂತಂ**— (ಗಾಲಿಗಳು ಚೆನ್ನಾಗಿ ತಿರುಗುವಂತೆ ಎರಚಿ ಕಂಬಿಯುಳ್ಳ ರಂಧ್ರಕ್ಕೆ ಹಾಕತಕ್ಕ) ಎಣ್ಣೆಯುಳ್ಳ । **ರಥಂ**— ರಥವನ್ನು । **ಋತಾಯ**— ನಮ್ಮ ಯಜ್ಞ ಕ್ಕೋಸ್ಕರ (ನಮ್ಮ ಯಜ್ಞಕ್ಕೆ ನೀವು ಬರುವುದಕ್ಕಾಗಿ) । **ಇಷ್ಯತಿ ಹಿ**— ಕಳುಹುತ್ತಾನಲ್ಲವೇ ।

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಮ್ಮ ಯಜ್ಞಕ್ಕೆ ದಯಮಾಡಿ, ನಾವು ನಿಮಗೆ ಮಧುರವಾದ ಹವಿಸ್ಸುಗಳನ್ನು ಅರ್ಪಿಸುತ್ತೇವೆ. ಯಾವಾಗಲೂ ಮಧುರಸ ಪಾನಮಾಡುವ ನಿಮ್ಮ ಬಾಯಿಂದ ಈ ಹವಿಸ್ಸನ್ನು ಕುಡಿಯಿರಿ. ಇದ ಕ್ಕೋಸ್ಕರವೇ ಸೂರ್ಯನು ಉಷಃಕಾಲಕ್ಕೆ ಮೊದಲೇನೇ ನಿಮ್ಮ ರಥವನ್ನು ನಿಮಗೆ ಕಳುಹಿಸುತ್ತಾನೆ. ಆ ರಥವು ಮೂರು ಚಕ್ರವೇ ಮೊದಲಾದ ವಿಚಿತ್ರವಾದ ಅವಯವಗಳಿಂದಲೂ ಗಾಲಿಯು ಸುಖವಾಗಿ ತಿರುಗುವಂತೆ ಮಾಡುವ ಎರೆ ಎಣ್ಣೆಯಿಂದಲೂ ಕೂಡಿರುತ್ತನೆ.

English Translation

Nasatyas, come to the sacrifice; the oblation is offered; drink the soma juice with your mouths relishing its sweet savour; before the dawn Savitri ( Sun ) sends forth your wonderful and well-oiled chariot to the sacrifice

॥ ವಿಶೇಷ ವಿಷಯಗಳು ॥

**ಪೂರ್ವಂ ಉಷಸಃ**-- ಉಷಃಕಾಲಕ್ಕೆ ಮುಂಚೆಯೇ ಎಂದರೆ ಯಜ್ಞದಲ್ಲಿ ಅರ್ಧರಾತ್ರಿಯ ಅನಂತರ ಉಷಃಕಾಲಪರ್ಯಂತರ ನಡೆಯುವ ಪ್ರಾತರನುವಾಕಮಂತ್ರ ಪಠನದಲ್ಲಿ ಆಶ್ವಿನಕ್ರತುಗಳೆಂಬ ಸ್ತೋತ್ರಗಳನ್ನು ಪಠಿಸುವರು. ಅವುಗಳನ್ನು ಸ್ವೀಕರಿಸುವುದಕ್ಕಾಗಿ ಉಷಃಕಾಲಕ್ಕೆ ಮುಂಚೆಯೇ ಎಂದರೆ ಆ ಮಂತ್ರಗಳನ್ನ ಪಠಿಸುತ್ತಿರುವ ಕಾಲದಲ್ಲಿ ಯಜ್ಞಭೂಮಿಗೆ ಬರಬೇಕೆಂದು ಋಷಿಯು ಪ್ರಾರ್ಥಿಸಿರುವನು.

**ಋತಾಯ—ಯಜ್ಞಾಯ ।** ಋತಶಬ್ದಕ್ಕೆ ಯಾಸ್ಕರು **ಸತ್ಯಂ ವಾ ಯಜ್ಞಂ ವಾ** (ನಿ. ೪-೧೯ ಎಂದರೆ ಋತಶಬ್ದಕ್ಕೆ ಸತ್ಯಂ ಅಥವಾ ಯಜ್ಞವೆಂಬ ಅರ್ಥವಿವರಣೆ ಮಾಡಿರುವುದರಿಂದ ಇಲ್ಲಿ ಯಜ್ಞವೆಂಬ ಅರ್ಥವನ್ನು ಹೇಳಿರುವರು.

**ಚಿತ್ರಂ—ಪೂರ್ವೋಕ್ತೈಶ್ಚಕ್ರತ್ರಯೋದಿಭಿರ್ವಿಚಿತ್ರಂ ।** ಹಿಂದೆ ಹೇಳಿದಂತೆ ಮೂರು ಚಕ್ರಾದಿಗಳಿಂದ ಕೂಡಿರುವ ವಿಚಿತ್ರವಾದ ರಥವು. ಸಾಧಾರಣವಾಗಿ ರಥಕ್ಕೆ ನಾಲ್ಕು ಚಕ್ರಗಳಿರುವವು. ರಥವು ಚೌಕನಾಗಿರುವುದು ಆದರೆ ಅಶ್ವಿನೀದೇವತೆಗಳ ರಥವು ತ್ರಿಕೋಣಾಕಾರವಾಗಿಯೂ, ಮೂರು ಚಕ್ರಗಳಿಂದ ಕೂಡಿರುವುದೂ ಆಗಿರುವುದ ರಿಂದ ಇದು ಸಾಧಾರಣ ರಥವಾಗಿರದೆ ವಿಚಿತ್ರ ರಥವಾಗಿರುವುದೆಂದಭಿಪ್ರಾಯವು.

**ಘೃತವಂತಂ— ಅಕ್ಷಾಂಜನಸಾಧನೇನ ಘೃತೇನೋಪೇತಂ ।** ಚಕ್ರಗಳು ಸರಿಯಾಗಿ ತಿರುಗುವಂತೆ ಆಚ್ಚಿಗೂ ಚಕ್ರಗಳ ಮಧ್ಯದಲ್ಲಿರುವ ರಂಧ್ರಕ್ಕೂ ಕೀಲೆಣ್ಣೆಯನ್ನು ಹಾಕುವುದು ರೂಢಿಯಷ್ಟೆ. ಅದರಂತೆ ಇಲ್ಲಿ ರಥದ ಚಕ್ರಗಳಿಗೆ ಕೀಲೆಣ್ಣೆಗೆ ಬದಲಾಗಿ ತುಪ್ಪವನ್ನು ಹಾಕಿ ಚಕ್ರಗಳು ಸರಾಗವಾಗಿ ತಿರುಗುವಂತೆ ಮಾಡಿರುವ ರಥವೆಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಗಚ್ಛತಮ್**—ಗಮ್ಲೃ ಗತೌ ಧಾತು, ಲೋಟ್, ಮಧ್ಯಮಪುರುಷ ದ್ವಿವಚನ ಥಸ್, **ತಸ್ಥಸ್ಥಮಿಪಾಂತಾಂತಂತಾಮಃ** (ಪಾ. ಸೂ. ೩-೪-೧೦೧) ಎಂದು ತಮ್ ಆದೇಶ. ಗಮ್+ತಮ್ ಶಪ್ ವಿಕರಣ, **ಇಷುಗಮಿಯಮಾಂ ಛಃ** (ಪಾ. ಸೂ. ೭-೩-೭೭) ಎಂದು ಮಕಾರಕ್ಕೆ ಛಕಾರ. **ಛೇ ಚ** (ಪಾ. ಸೂ ೬-೧-೭೩) ಹ್ರಸ್ವದ ಮುಂದೆ ಛಕಾರವಿದ್ದರೆ ತುಕ್ ಬರುತ್ತೆ ಎಂದು ತುಕ್ ಆಗಮ **ಸ್ತೋಃ ಶ್ಚುನಾ ಶ್ಚುಃ** (ಪಾ ಸೂ. ೮-೪-೪೦) ಎಂದು ತಕಾರಕ್ಕೆ ಚಕಾರ, ಲೋಟ್ ಎಂಬ ಲಕಾರದ ಸ್ಥಾನದಲ್ಲಿ ಬಂದ ತಮ್ ಎಂಬುದು ಲಸಾರ್ವಧಾತುಕ, ಅದು ಶಪ್ ಎಂಬ ಅದುಪದೇಶದ ಮುಂದೆ ಇದೆ. **ಏನಂಚ ತಾಸ್ಯನುದಾತ್ತೇನ್ಙಿದದುಪದೇಶಾತ್—,** (ಪಾ. ಸೂ. ೬-೧-೧೮೬) ಎಂದು ತಮ್‌ಗೆ ಅನುದಾತ್ತ ಬರುತ್ತೆ. ಧಾತುಸ್ವರ ಉಳಿಯುತ್ತೆ. ಇಲ್ಲಿ ಅಶ್ವಿನೀದೇವತೆಗಳೇ, ನೀವು ಈ ಯಾಗಕ್ಕೆ ಬನ್ನಿ ಮತ್ತು ಹವಿಸ್ಸನ್ನು ಪಾನಮಾಡಿ ಎಂದು ಅರ್ಥವು ಏರ್ಪಡುತ್ತೆ. ಆದ್ದರಿಂದ ನಾಸತ್ಯಾ ಆಗಚ್ಛತಂ ಪಿಬತಂಚ ಎಂದು ಚ ಶಬ್ದದ ಅರ್ಥವು ತೋರುತ್ತದೆ. ಆದರೆ ಆ ಚ ಶಬ್ದಕ್ಕೆ ಪ್ರಯೋಗವಿಲ್ಲ **ಚಾದಿಲೋಪೇ-ವಿಭಾಷಾ** (ಪಾ. ಸೂ. ೮-೧-೬೩) ಚ-ವಾ-ಹ-ಅಹ, ಏವ ಇವುಗಳಿಗೆ ಲೋಪ ಬಂದಿದ್ದರೆ ಪ್ರಥಮೋಚ್ಚರಿತವಾದ ತಿಙ್ವಿಭಕ್ತ್ಯಂತವು ಅನುದಾತ್ತವಾಗುವುದಿಲ್ಲ ಎಂದು ಸೂತ್ರಾರ್ಥ, ಶಾಸ್ತ್ರದಲ್ಲಿ ಚಾದಿಶಬ್ದಗಳಿಗೆ ಲೋಪವನ್ನು ವಿಧಿಸಿಲ್ಲ. ಅರ್ಥಪ್ರಕರಣಾದಿಗಳಿಂದ ಚಾದ್ಯರ್ಥವು ತೋರುತ್ತಿದ್ದರೂ ಅದಕ್ಕೆ ಪ್ರಯೋಗವಿಲ್ಲದೆ ಇದ್ದರೆ ಚಾದಿಗಳಿಗೆ ಲೋಪ ಬಂದಿದೆ ಎಂದು ತಿಳಿಯಬೇಕು, ಇಂತಹ ಚ ಶಬ್ದಲೋಪವು ಇಲ್ಲಿ ಇರುವುದರಿಂದ ಪ್ರಥಮತಿಙಂತವಾದ ಗಚ್ಛತಂ ಎಂಬುದಕ್ಕೆ ಸರ್ವಾನುದಾತ್ತ ಬರುವುದಿಲ್ಲ

**ಹೂಯತೇ—**ಹ್ವೇಞ್ ಶಬ್ದೇ ಕರ್ಮಣಿ ಲಟ್, ತ. **ಟಿತ ಆತ್ಮನೇಪದಾನಾಂ**—ಎಂದು ಟಿಗೆ ಏತ್ವ. ಹ್ವೇ+ತೇ, **ಸಾರ್ವಧಾತುಕೇ ಯಕ್** (ಪಾ. ಸೂ. ೩-೧-೬೭) ಭಾವಕರ್ಮಾನ್ಯತರಾರ್ಥಕವಾದ ಸಾರ್ವಧಾತುಕ ಪರದಲ್ಲಿದ್ದರೆ

ಧಾತುವಿನ ಮುಂದೆ ಯಕ್ ಬರುತ್ತೆ ಎಂದು ಯಕ್ ಹ್ವೇ+ಯ-ತೇ. **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂದು ಸಂಪ್ರಸಾರಣ, ಪೂರ್ವರೂಪ, **ಹಲಃ** (ಪಾ. ಸೂ. ೩-೪-೨) ಅಂಗಾವಯವವಾದ ವ್ಯಂಜನದ ಮುಂದೆ ಇರುವ ಸಂಪ್ರಸಾರಣವನ್ನು ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ದೀರ್ಘ ಬರುತ್ತೆ ಎಂದು ಹುಗೆ ದೀರ್ಘ ಹೂಯತೇ ಎಂದಾಗುತ್ತೆ, ಯಕ್ ಅದುಪದೇಶ, ಅದರ ಮುಂದೆ ಇರುವ ತೇ ಎಂಬ ಲಸ್ಥಾನಿಕವಾದ ಸಾರ್ವಧಾತುಕವು, **ತಾಸ್ಯನುದಾತ್ತೇತ್—,** ಎಂಬುದರಿಂದ ಅನುದಾತ್ತ, ಯಕ್ ಪ್ರತ್ಯಯಸ್ವರದಿಂದ ಉದಾತ್ತ.

**ಮಧ್ವಃ—ಫಲಿಪಾಟಿ—,** ಎಂಬ ಉಣಾದಿ ಸೂತ್ರದಿಂದ ಮಧುಶಬ್ದ ನಿಷ್ಪನ್ನವಾಗುತ್ತೆ ಎಂದು ಹಿಂದೆಯೇ ಉಪಪಾದಿಸಿರುವೆವು, ಇದು ನಪುಂಸಕಲಿಂಗವಾದ ಶಬ್ದ, ಆದರೂ ಇಲ್ಲಿ ವ್ಯತ್ಯಯದಿಂದ ಪುಲ್ಲಿಂಗವಾಗಿದೆ, ದ್ವಿತೀಯಾ ಬಹುವಚನ ಶಸ್, ಮಧು+ಅಸ್, ಇಲ್ಲಿ ನ್ಯಾಯವಾಗಿ **ಪ್ರಥಮಯೋಃ ಪೂರ್ವಸವರ್ಣಃ** (ಪಾ. ಸೂ. ೬-೧ ೧೦೨) ಎಂದು ಪೂರ್ವಸವರ್ಣದಿ ರ್ಘ ಬರಬೇಕು, ಆದರೂ ಛಾಂದಸವಾಗಿ ಇದು ಬರದೆ ಯಣಾದೇಶ ಬರುವುದು.

**ಮಧುಪೇಭಿಃ**—ಮಧು ಪಿಬನ್ತೀತಿ ಮಧುಪಾಃ, ತೈಃ-ಎಂದು ವಿಗ್ರಹ. ಪಾ-ಪಾನೇ ಧಾತು. ಮಧುಶಬ್ದೋಪಪದಕವಾದ ಪಾ ಧಾತುವಿನ ಮುಂದೆ **ಆತೋಽನುಪಸರ್ಗೇಕಃ** (ಪಾ. ಸೂ. ೩-೨-೩) ಉಪಸರ್ಗಭಿನ್ನವಾದ ಸುಬಂತವು ಉಪಪದವಾಗಿರುವಾಗ ಆದಂತವಾದ ಧಾತುವಿನ ಮುಂದೆ ಕ ಪ್ರತ್ಯಯ ಬರುತ್ತೆ ಎಂದು ಕ ಪ್ರತ್ಯಯ, ಕ್-ಇತ್, **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಎಂದು ಆಕಾರಲೋಪ, ಪ್ರತ್ಯಯಸ್ವರದಿಂದ ಪ ಎಂಬುದು ಉದಾತ್ತ.

**ಆಸಭಿಃ**—ಆಸ್ಯಶಬ್ದದ ಮುಂದೆ ಭಿಸ್, ಆಸ್ಯ+ಭಿಸ್ **ಪದ್ದನ್ನೋಮಾಸ್—ಶಸ್ ಪ್ರಭೃತಿಷು** (ಪಾ.ಸೂ. ೬-೧-೬೩) ಎಂದು ಆಸ್ಯಶಬ್ದಕ್ಕೆ ಆಸನ್ ಆದೇಶ. **ನ ಲೋಪಃ ಪ್ರಾತಿ ಪದಿಕಾಂತಸ್ಯ** (ಪಾ. ಸೂ. ೮-೨ ೭) ಎಂದು ನಕಾರಲೋಪ.

**ಯುವೋಃ—ಯುವೋರ್ಹಿಯನ್ತ್ರಮ್** (ಋ-ಸಂ. ೧-೩೪-೧) ಎಂಬಲ್ಲಿ ವಿವೃತವಾಗಿದೆ.

**ಇಷ್ಯತಿ**—ಇಷ ಗತೌ ದಿವಾದಿಧಾತು, ಲಟ್, ತಿಪ್, **ದಿವಾದಿಭ್ಯಃ ಶ್ಯನ್** ಎಂದು ಶ್ಯನ್ **ಹಿಚ** (ಪಾ. ಸೂ ೮-೧-೩೪) ಹಿ ಶಬ್ದದಿಂದ ಕೂಡಿದ ತಿಙಂತವು ಅನುದಾತ್ತವಾಗುವುದಿಲ್ಲ ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ, ಶ್ಯನ್ ನಿತ್, **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂದು ಆದ್ಯುದಾತ್ತ ಬರುತ್ತೆ. ॥ ೧೦ ॥

॥ ಸಂಹಿತ ಪಾಠಃ ॥

ಆ ನಾ॑ಸತ್ಯಾ ತ್ರಿಭಿರೇ॑ಕಾದ॒ಶೈರಿ॒ಹ ದೇ॒ವೇಭಿ॑ರ್ಯಾತಂ ಮಧು॒ಪೇ-

ಯ॑ಮಶ್ವಿನಾ ।

ಪ್ರಾಯುಸ್ತಾರಿಷ್ಟಂ ನೀ ರಪಾಂಸಿ ಮೃಕ್ಷತಂ ಸೇಧತಂ ದ್ವೇಷೋ
ಭವತಂ ಸಚಾಭುವಾ ॥೧೧॥

॥ ಪದಪಾಠಃ ॥

ಆ । ನಾಸತ್ಯಾ । ತ್ರಿಽಭಿಃ । ಏಕಾದಶೈಃ । ಇಹ । ದೇವೇಭಿಃ । ಯಾತಂ ।
ಮಧುಽಪೇಯಂ । ಅಶ್ವಿನಾ ।

ಪ್ರ । ಆಯುಃ । ತಾರಿಷ್ಟಂ । ನಿಃ । ರಪಾಂಸಿ । ಮೃಕ್ಷತಂ । ಸೇಧತಂ ।
ದ್ವೇಷಃ । ಭವತಂ । ಸಚಾಽಭುವಾ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ನಾಸತ್ಯಾ ಅಸತ್ಯೇನಾನೃತೇನ ರಹಿತಾವಶ್ವಿನಾ ಅಶ್ವಿದೇವೌ ಯುವಾಂ ತ್ರಿಭಿರೇಕಾದಶೈಃ ಯೇ ದೇವಾಸೋ ದಿವ್ಯೇಕಾದಶ ಸ್ಥ । ಋಗ್ವೇ. ೧-೧೩೯-೧೧ । ಇತ್ಯಾದಿಮಂತ್ರಪ್ರತಿಪಾದಿತೈಸ್ತ್ರಿಸಂಖ್ಯಾಕೈರೇಕಾದಶಾತ್ಮಕವರ್ಗತ್ರಯೋಪೇತೈರ್ದೇವೈಃ ಸಹ ಮಧುಪೇಯಂ ಸೋಮಾತ್ಮಕಂ ಮಧುರದ್ರವ್ಯಪಾನಮಭಿಲಕ್ಷ್ಯೇಹಾಸ್ಮಿನ್ನೇವಯಜನದೇಶ ಆ ಯಾತಂ । ಆಗಚ್ಛತಂ । ಆಯುರಸ್ಮದೀಯಮಾಯುಷ್ಯಂ ಪ್ರ ತಾರಿಷ್ಟಂ ! ಪ್ರವರ್ಧಯತಂ । ರಪಾಂಸ್ಯಸ್ಮದೀಯಾನಿ ಪಾಪಾನಿ ನಿರ್ಮೃಕ್ಷತಂ । ನಿಃಶೇಷೇಣ ಶೋಧಯತಂ । ದ್ವೇಷೋ ದ್ವೇಷಕರ್ತೄನ್ ಸೇಧತಂ । ಪ್ರತಿಷೇಧತಂ । ಸಚಾಭುವಾ ಅಸ್ಮಾಭಿಃ । ಸಹಾವಸ್ಥಿತೌ ಭವತಂ ॥ ತ್ರಿಭಿಃ । ಷಟ್ತ್ರಿಚತುರ್ಭ್ಯ ಇತಿ ವಿಭಕ್ತೇರುದಾತ್ತತ್ವಂ । ಏಕಾದಶೈಃ ಏಕಾದಶಾನಾಂ ಪೂರಣೈಃ । ತಸ್ಯ ಪೂರಣೇ । ಪಾ. ೫-೨-೪೮ । ಇತಿ ಡಟ್ । ಮಧುಪೇಯಂ । ಪಾ ಪಾನೇ ಅಚೋ ಯದಿತಿ ಕರ್ಮಣಿ ಯತ್ । ಈದ್ಯತಿ । ಪಾ. ೬-೪-೬೫ । ಇತ್ಯಾಕಾರಸ್ಯ ಈಕಾರಾದೇಶಃ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಮಧು ಚ ತತ್ಪೇಯಮಿತಿ ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ । ತಾರಿಷ್ಟಂ । ತೄ ಪ್ಲವನತರಣಯೋಃ । ಛಾಂದಸೇ ಪ್ರಾರ್ಥನಾಯಾಂ ಲುಚಿ ಚ್ಲೇಃ ಸಿಚ್ । ಇಡಾಗಮಃ । ವೄತೋ ವಾ । ಪಾ. ೭-೨-೩೮ । ಇತಿ ಪ್ರಾಪ್ತಸ್ಯೇಟೋ ದೀರ್ಘಸ್ಯ ಸಿಚಿ ಚ ಪರಸ್ಮೈಪದೇಷು । ಪಾ. ೭-೨-೪೦ । ಇತಿ ಪ್ರತಿಷೇಧಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಅತ್ರ ತಾರಿಷ್ಟಂ ಮೃಕ್ಷತಂ ಚೇತಿ ಚಶಬ್ದಾರ್ಥಪ್ರತೀತೇಸ್ತಸ್ಯ ಚಾಪ್ರಯೋಗಾಚ್ಚಾದಿಲೋಪೇ ವಿಭಾಷೇತಿ ನಿಘಾತಪ್ರತಿಷೇಧಃ । ಆದಿಃ

ಸಿಚೋऽನ್ಯತರಸ್ಯಾಂ । ಪಾ. ೬-೧-೧೮೭ । ಇತ್ಯಾದ್ಯುದಾತ್ತತ್ವಂ । ಮೃಕ್ಷತಂ । ಮೃಶ ಆಮರ್ಶನೇ । ಛಂದಸಿ ಲುಙ್ಲಙ್ಲಿಟ ಇತಿ ಲೋಡರ್ಥೇ ಲುಙ್ । ಶಲ ಇಗುಪಧಾದನಿಟಃ ಕ್ಸಃ । ಪಾ. ೩-೧-೪೫ । ಇತಿ ಕ್ಸಾದೇಶಃ । ಏಕಾಚ ಉಪದೇಶೇऽನುದಾತ್ತಾದಿತೀಟ್ಪ್ರತಿಷೇಧಃ । ಷತ್ವಕುತ್ವೇ । ಪೂರ್ವವದಡಭಾವಃ । ಸೇಧತಂ । ಷಿಧು ಗತ್ಯಾಂ । ಅತ್ರ ಕೇವಲೋऽಪಿ ಷಿಧಿಃ ಪ್ರತಿಪೂರ್ವಸ್ಯಾರ್ಥೇ ವರ್ತತೇ । ಪ್ರಾರ್ಥನಾಯಾಂ ಲೋಟ್ । ಶಪಃ ಪಿತ್ತ್ವಾದನುದಾತ್ತತ್ವಂ ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರಃ । ಪಾದಾದಿತ್ವಾತ್ತಿಙಃ ಪರತ್ವಾದ್ವಾ ನಿಘಾತಾಭಾವಃ । ದ್ವೇಷಃ । ಅನ್ಯೇಭ್ಯೋऽಪಿ ದೃಶ್ಯಂತ ಇತಿ ಕರ್ತರಿ ವಿಚ್ । ಭವತಂ । ದ್ವೇಷ ಇತ್ಯಸ್ಯ ವಾಕ್ಯಾಂತರಗತತ್ವಾತ್ತದಪೇಕ್ಷಯಾಸ್ಯ ನಿಘಾತೋ ನ ಭವತಿ । ಸಮಾನವಾಕ್ಯೇ ಚ ನಿಘಾತಯುಷ್ಮದಸ್ಮದಾದೇಶಾ ವಕ್ತವ್ಯಾಃ । ಪಾ. ೮-೧-೧೮-೫ । ಇತಿ ವಚನಾತ್ । ಸಚಾಭುವಾ । ಸಚೇತ್ಯಯಂ ನಿಪಾತಃ ಸಹಶಬ್ದಸಮಾನಾರ್ಥಃ । ತಥಾ ಚ ಯಾಸ್ಕಃ । ಸಚಾ ಸಹೇತ್ಯರ್ಥ ಇತಿ । ನಿ. ೫-೫ । ಸಚಾ ಭವತ ಇತಿ ಸಚಾಭುವಾ । ಕ್ವಿಪ್ । ಓಃ ಸುಪಿ । ಪಾ. ೬-೪-೮೩ । ಇತಿ ಯಣಾದೇಶಸ್ಯ ನ ಭೂಸುಧಿಯೋಃ । ಪಾ. ೬-೪-೮೫ । ಇತಿ ಪ್ರತಿಷೇಧಃ ಸುಪಾಂ ಸುಲುಗಿತಿ ವಿಭಕ್ತೇರಾಕಾರಃ ॥

॥ ಪ್ರತಿಪದಾರ್ಥ ॥

**ನಾಸತ್ಯಾ**—ಅಸತ್ಯರಹಿತರಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ತ್ರಿಭಿರೇಕಾದಶೈರ್ದೇವೇಭಿಃ** ಮೂವತ್ತುಮೂರು ದೇವತೆಗಳೊಡನೆ । **ಮಧುಪೇಯಂ**—ಮಧುರವಾದ ಮತ್ತು ಪಾನಮಾಡತಕ್ಕ ಸೋಮರಸವನ್ನು ಕುರಿತು (ಕುಡಿಯಲು) । **ಇಹ**—ಈ ನಮ್ಮ ಯಜ್ಞಪ್ರದೇಶಕ್ಕೆ । **ಆಯಾತಂ**—ಬನ್ನಿ । **ಆಯುಃ**—ನಮ್ಮ ಆಯುಸ್ಸನ್ನು । **ಪ್ರತಾರಿಷ್ಟಂ**—ವೃದ್ಧಿಮಾಡಿ । **ರಪಾಂಸಿ**—ನಮ್ಮ ಪಾಪಗಳನ್ನು । **ನಿಃ ಮೃಕ್ಷತಂ**—ಚನ್ನಾಗಿ ತೊಳೆದು ಶುದ್ಧಿಮಾಡಿ । **ದ್ವೇಷಃ**—ನಮ್ಮನ್ನು ದ್ವೇಷಿಸುವ ಶತ್ರುಗಳನ್ನು । **ಸೇಧತಂ**—ತಡೆಯಿರಿ । **ಸಚಾಭುವಾ** ನಮ್ಮ ಜತೆಯಲ್ಲಿರುವವರಾಗಿ । **ಭವತಂ**—ಆಗಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಯಾವಾಗಲೂ ಅಸತ್ಯವನ್ನು ನುಡಿಯುವವರಲ್ಲ. ನೀವು ಮೂವತ್ತುಮೂರು ದೇವತೆಗಳೊಂದಿಗೆ ಮಧುರವಾದ ಸೋಮರಸವನ್ನು ಕುಡಿಯಲು ನಮ್ಮ ಈ ಯಜ್ಞಭೂಮಿಗೆ ದಯಮಾಡಿ. ನಮ್ಮ ಆಯುಸ್ಸನ್ನು ವೃದ್ಧಿಮಾಡಿ ನಮ್ಮ ಪಾಪಗಳನ್ನು ತೊಳೆದು ನಮ್ಮನ್ನು ಶುದ್ಧರನ್ನಾಗಿ ಮಾಡಿ ನಮ್ಮ ಶತ್ರುಗಳನ್ನು ತಡೆಯಿರಿ. ನಮ್ಮ ಜತೆಯಲ್ಲಿಯೇ ಇರಿ.

English Translation

Come hither, O Nasatyas, with the thrice eleven gods to drink the sweet Soma ; prolong our lives, efface our faults ; ward off our enemies and be ever with us.

|| ವಿಶೇಷ ವಿಷಯಗಳು ||

ಈ ಋಕ್ಕಿನ ಅರ್ಥವು ವಿಶದವಾಗಿರುವುದು. ತ್ರಿಭಿರೇಕಾದಶೈಃ ಮೂರಾವರ್ತಿ ಹನ್ನೊಂದು ಅಥವಾ ಮೂವತ್ತಮೂರು ಎಂದರ್ಥವು. ಮೂವತ್ತಮೂರು ದೇವತೆಗಳಿರುವರೆಂದು ಋಗ್ವೇದದಲ್ಲಿಯೂ ಇತರ ವೇದಗಳಲ್ಲಿಯೂ ಅಲ್ಲಲ್ಲಿ ಹೇಳಿದೆ. ಹನ್ನೊಂದು ದೇವತೆಗಳ ಒಂದು ಸಮೂಹವು ಪೃಥ್ವಿಯಲ್ಲಿಯೂ, ಮತ್ತೊಂದು ಹನ್ನೊಂದು ದೇವತೆಗಳ ಸಮೂಹವು ಅಂತರಿಕ್ಷದಲ್ಲಿಯೂ, ಮೂರನೆಯ ಹನ್ನೊಂದು ದೇವತೆಗಳ ಗುಂಪು ಸ್ವರ್ಗದಲ್ಲಿಯೂ ಇರುವುದೆಂದು ಕೆಲವು ಋಕ್ಕುಗಳಲ್ಲಿ ಹೇಳಿರುವುದು.

**ಯೇ ದೇವಾಸೋ ದಿವ್ಯೇಕಾದಶಸ್ಥ ಪೃಥಿವ್ಯಾಮಧ್ಯೇಕಾದಶಸ್ಥ |**
**ಅಪ್ಸುಕ್ಷಿತೋ ಮಹಿನೈಕಾದಶಸ್ಥ ತೇ ದೇವಾಸೋ ಯಜ್ಞಮಿಮಂ ಜುಷಧ್ವಂ ||**

(ಋ. ಸಂ ೧-೧೩೯-೧೧)

ಸ್ವರ್ಗದಲ್ಲಿ ಇರುವ ಹನ್ನೊಂದು ಮಂದಿ ದೇವತೆಗಳೂ, ಭೂಮಿಯಲ್ಲಿರುವ ಹನ್ನೊಂದು ಮಂದಿ ದೇವತೆಗಳೂ, ಅಂತರಿಕ್ಷದಲ್ಲಿರುವ (ಆಪಃ-ಅಂತರಿಕ್ಷ. ನಿ. ೨-೧೦) ಹನ್ನೊಂದು ಮಂದಿ ದೇವತೆಗಳೂ ಈ ಯಜ್ಞಕ್ಕೆ ಬಂದು ಹವಿಸ್ಸನ್ನು ಸ್ವೀಕರಿಸಲಿ ಎಂದಭಿಪ್ರಾಯವು ಇದಲ್ಲದೆ—

**ಶ್ರುಷ್ಟೀವಾನೋ ಹಿ ದಾಶುಷೇ ದೇವಾ ಅಗ್ನೇ ವಿಚೇತಸಃ |**
**ತಾನ್ರೋಹಿದಶ್ವ ಗಿರ್ವಣಸ್ತ್ರಯಸ್ತ್ರಿಂಶತಮಾ ವಹ**

(ಋ. ಸಂ. ೧-೪೫-೨)

**ಪತ್ನೀವತಸ್ತ್ರಿಂಶತಂ ತ್ರೀಂಶ್ಚ ದೇವಾನನುಷ್ವಧಮಾ ವಹ ಮಾದಯಸ್ವ ||**

(ಋ ಸಂ ೩-೬-೯)

**ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಂಶಚ್ಚ ದೇವಾ ನವ ಚಾಸಪರ್ಯನ್ ||**

(ಋ. ಸಂ. ೩-೯-೯)

ಈ ಋಕ್ಕುಗಳಲ್ಲಲ್ಲದೆ ಯಜುರ್ವೇದತೈತ್ತಿರೀಯ ಸಂಹಿತಾ ೧-೪-೧೦-೧ ; ಶತಪಥಬ್ರಾಹ್ಮಣ. ೪-೫-೭-೨ ಮೊದಲಾದ ಇತರ ವೇದಗಳಲ್ಲಿಯೂ ದೇವತೆಗಳ ಸಂಖ್ಯೆಯು ಮೂವತ್ತುಮೂರೆಂದು ಹೇಳಿರುವುದು. ಶತಪಥ ಬ್ರಾಹ್ಮಣದಲ್ಲಿ ಈ ಮೂವತ್ತುಮೂರು ದೇವತೆಗಳು-ವಸುಗಳು. ೮, ರುದ್ರರು. ೧೧, ಆದಿತ್ಯರು ೧೨, ದ್ಯಾವಾಪೃಥಿವೀ. ೨ ಒಟ್ಟು ಮೂವತ್ತುಮೂರೆಂದು ಹೇಳಿದೆ. ಆದರೆ ಆ ವಿಭಾಗವನ್ನು ಬೇರೆ ವಿಷಯವೆಂದು ತಿಳಿಯಬೇಕು. ಪೃಥಿವ್ಯಂತರಿಕ್ಷ ಸ್ವರ್ಗಗಳಲ್ಲಿ ಪ್ರತಿಯೊಂದರಲ್ಲಿಯೂ ಹನ್ನೊಂದು ಮಂದಿಯಂತೆ ಮೂವತ್ತಮೂರು ದೇವತೆಗಳು ಎಂಬ ವಿಚಾರವೇ ಋಗ್ವೇದದಲ್ಲಿ ವಿಶೇಷವಾಗಿ ಕಂಡುಬರುವುದು. ಪುರಾಣಾದಿಗಳಲ್ಲಿ ಮೂವತ್ತಮೂರು ಕೋಟಿ ದೇವತೆಗಳಿರುವರೆಂದು ಹೇಳಿರುವುದು ಋಗ್ವೇದದಲ್ಲಿರುವ ವಿಷಯದ ಆಧಾರದ ಮೇಲೆಯೇ ಇರಬಹುದು. ವಿಷ್ಣುಪುರಾಣದಲ್ಲಿಯೂ ವಸುಗಳು-೮, ರುದ್ರರು-೧೧, ಆದಿತ್ಯರು-೧೨, ಪ್ರಜಾಪತಿ-೧, ವಷಟ್ಕಾರ—೧ ಒಟ್ಟು ಮೂವತ್ತುಮೂರ ಮಂದಿ ದೇವತೆಗಳೆಂದು ಹೇಳಿದೆ.

**ಮಧುಪೇಯಂ**—ಮಧುವಿನಂತೆ ಸಿಹಿಯಾದ ಸೋಮರಸಪಾನವು ಎಂದರ್ಥವು

**ಪ್ರ ತಾರಿಷ್ಟಂ—ತೄ ಪ್ಲವನತರಣಯೋಃ । ಪ್ರವರ್ಧಯತಂ ।** ಅಭಿವೃದ್ಧಿ ಮಾಡಲಿ.

**ರಪಾಂಸಿ—ಅಸ್ಮದೀಯಾನಿ ಪಾಪಾನಿ ।** ನಮ್ಮ ಪಾಪಗಳನ್ನು our sins, our faults or errors & c ಈ ಶಬ್ದದ ಅರ್ಥ ವಿಚಾರದಲ್ಲಿ ಯಾಸ್ಕರು **ರಪೋ ರಿಪ್ರಮಿತಿ ಪಾಪನಾಮನೀ ಭವತಃ ।** ರಪಃ ರಿಪ್ರ ಎಂಬ ಎರಡು ಶಬ್ದಗಳು ಪಾಪದ ಹೆಸರುಗಳು ಎಂದು ಹೇಳಿದ್ದಾರೆ

**ನಿಃ ಮೃಕ್ಷತಂ—ಮೃಶ ಆಮರ್ಶನೇ । ನಿಶ್ಶೇಷೇಣ ಶೋಧಯತಂ ।** ನಿಶ್ಶೇಷವಾಗಿ ಶೋಧನೆಮಾಡಿ, (ಪಾಪಗಳನ್ನು) ಪರಿಹರಿಸಿ ಇತ್ಯಾದಿ. ಸೇಧತಂ **ಷಿಧು ಗತ್ಯಾಂ । ಅತ್ರ ಕೇವಲೋಽಪಿ ಷಿಧಿಃ ಪ್ರತಿಪೂರ್ವಸ್ಯಾರ್ಥೇ ವರ್ತತೇ । ಪ್ರತಿಷೇಧತಂ ।** ತಡೆಯಿರಿ, ಅಡ್ಡಿಪಡಿಸಿ ಷಿಧಿಧಾತುವಿಗೆ ಗತ್ಯರ್ಥವಿದ್ದರೂ ಇಲ್ಲಿ ಪ್ರತಿ ಎಂಬ ಉಪಸರ್ಗದೊಡನೆ ಕೂಡಿರುವ ಷಿಧಿ ಧಾತುವಿಗೆ ಇರುವ ಪ್ರತಿ+ಷಿಧ್=ಪ್ರತಿಷೇಧ ವೆಂಬ ಅರ್ಥವನ್ನೇ ಹೇಳಬೇಕೆಂದು ಭಾಷ್ಯಕಾರರು ಹೇಳಿರುವರು.

**ಸಚಾಭುವಾ—ಸಚೇತ್ಯಯಂ ನಿಪಾತಃ ಸಹಶಬ್ದಸಮಾನಾರ್ಥಃ । ಸಾಹಾಯ್ಯಾರ್ಥಂ ಅಸ್ಮಾಭಿಃ ಸಹಾವಸ್ಥಿತೌ ॥** ಇಲ್ಲಿ ಸಚಾ ಎನ್ನುವುದು ಉಪಸರ್ಗ. ಇದಕ್ಕೆ ಸಹ ಎಂದು ಅರ್ಥ. ಆದುದರಿಂದ ಸಚಾಭುವಾ ಎಂದರೆ ಜೊತೆಯಲ್ಲಿರುವ ಎಂದರ್ಥವು. ನಮ್ಮ ರಕ್ಷಣೆಗಾಗಿ ನಮ್ಮ ಜತೆಯಲ್ಲಿ (ಸಮೀಪದಲ್ಲಿ) ಇರಿ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ತ್ರಿಭಿಃ—ಷಟ್ ತ್ರಿಚತುರ್ಭ್ಯೋ ಹಲಾದಿಃ** (ಪಾ. ಸೂ. ೬-೧ ೧೭೯) ಷಟ್ ತ್ರಿ-ಚತುರ್ ಈ ಶಬ್ದಗಳ ಮುಂದೆ ಇರುವ ವ್ಯಂಜನಾದಿ ವಿಭಕ್ತಿಯು ಉದಾತ್ತವಾಗುತ್ತೆ ಎಂದು ಭಿಸ್ ಉದಾತ್ತ.

**ಏಕಾದಶೈಃ—**ಏಕಾದಶಾನಾಂ ಪೂರಣಾಃ, ತೈಃ ಎಂದು ವಿಗ್ರಹ ಹನ್ನೊಂದನೆ ಸಂಖ್ಯೆಯನ್ನು ಪೂರ್ತಿ ಮಾಡುವ ಅವಯವ (ಭಾಗ) **ತಸ್ಯಪೂರಣೇ ಡಟ್** (ಪಾ. ಸೂ. ೫-೨-೪೮) ಸಂಖ್ಯೇಯಾರ್ಥಕ ಸಂಖ್ಯಾವಾಚಕ ವಾದ ಷಷ್ಠ್ಯಂತದ ಮುಂದೆ ಪ್ರವೃತ್ತಿನಿಮಿತ್ತವಾದ ಸಂಖ್ಯೆಯ ಪೂರಣವು ವಾಚ್ಯವಾದಾಗ ಡಟ್ ಬರುತ್ತೆ ಎಂದು ಡಟ್

**ಮಧುಪೇಯಂ—**ಪಾತುಂ ಯೋಗ್ಯಂ ಪೇಯಂ, **ಅಚೋಯತ್** (ಪಾ. ಸೂ. ३ ೧-೯೭) ಅಜಂತವಾದ ಧಾತುವಿನ ಮುಂದೆ ಯತ್ ಬರುತ್ತೆ ಎಂದು ಯತ್ ಪ್ರತ್ಯಯ, ಪಾ+ಯ, **ಈದ್ಯತಿ** (ಪಾ. ಸೂ. ೬-೪-೬೫) ಯತ್ ಪರವಲ್ಲಿದ್ದರೆ ಆಕಾರಕ್ಕೆ ಈಕಾರಾದೇಶ ಬರುತ್ತೆ ಎಂದು ಪಾ ಎಂಬುವರ ಆಗೆ ಈ ಆದೇಶ. **ಸಾರ್ವಧಾತುಕಾರ್ಧ ಧಾತುಕಯೋಃ** (ಪಾ. ಸೂ. ೭-३-೮४) ಎಂದು ಗುಣ. **ಯತೋಽನಾವಃ** (ಪಾ. ಸೂ. ೬-೧-२१३) ನೌ ಶಬ್ದ ಭಿನ್ನಶಬ್ದದ ಮುಂದೆ ವಿಹಿತವಾದ ಯತ್ಪ್ರತ್ಯಯವನ್ನು ಕೊನೆಯಲ್ಲಿ ಹೊಂದಿರುವ ಶಬ್ದವು ದ್ವ್ಯಚ್ಕವಾಗಿದ್ದರೆ ಅದರ ಆದಿಯು ಉದಾತ್ತವಾಗುತ್ತೆ ಎಂದು ಪೇಯ ಎಂಬುದು ಆದ್ಯುದಾತ್ತ-ಮಧು ಚ ತತ್ಪೇಯಂ ಚ ಎಂದು ಕರ್ಮಧಾರಯ. **ಗತಿಕಾರಕೋ—,** ಎಂದು ಕೃದುತ್ತರಪದ ಪ್ರಕೃತಿಸ್ವರ ಬರುತ್ತೆ.

**ತಾರಿಷ್ಟಂ**—ತೄ ಪ್ಲವನತರಣಯೋಃ ಧಾತು, ಲಿಙ್‌ಲೋಟ್ ಎಂಬ ಎರಡು ಲಕಾರಗಳು ಮಾತ್ರವೇ ಪ್ರಾರ್ಥನಾರ್ಥದಲ್ಲಿ ಬರುವುವು. ಇಲ್ಲಿ ಲುಙ್ ಪ್ರಾರ್ಥನೆ ಎಂಬ ಅರ್ಥದಲ್ಲಿ ಛಾಂದಸವಾಗಿ ಬಂದಿದೆ, ಇದು ಪರಸ್ಮೈಪದಿ. ಮಧ್ಯಮಪುರುಷ ದ್ವಿವಚನ ಥಸ್, **ತಸ್ಥಸ್ಥಮಿಪಾಂ**—, ಎಂದು ತಂ ಆದೇಶ, **ಚ್ಲಿಲುಙಿ** ಎಂದು ಚ್ಲಿಯೂ ಅದಕ್ಕೆ **ಚ್ಲೇಸ್ಸಿಚ್** ಎಂದು ಸಿಚ್ಚೂ ಬರುವುವು. ತೄ+ಸ್+ತಮ್. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ವಲಾದಿಯಾದ ಆರ್ಧಧಾತುಕಕ್ಕೆ ಇಡಾಗಮ ಬರುತ್ತೆ ಎಂದು ಸಿಚ್‌ಗೆ ಆದ್ಯವಯವವಾಗಿ ಇಟ್ ಆಗಮ. **ವೄತೋವಾ** (ಪಾ. ಸೂ. ೭-೨-೩೮) ವೄ, ಋತ್, ಈ ಎರಡಕ್ಕೂ ಸಮಾಹಾರದ್ವಂದ್ವ ಪಂಚಮ್ಯಂತ, ವೄ ಎಂಬುದರಿಂದ ವೃಙ್, ವೃಞ್ ಎರಡು ಧಾತುಗಳಿಗೂ ಗ್ರಹಣ, **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಇಟ್‌ಗೆ ಅನುವೃತ್ತಿ **ಗ್ರಹೋಽಲಿಟಿದೀರ್ಘಃ** ಎಂಬುದರಿಂದ ಅಲಿಟಿ-ದೀರ್ಘಃ ಇವಕ್ಕೆ ಅನುವೃತ್ತಿ, ಏವಂಚ ಲಿಟ್ ಪರದಲ್ಲಿ ಇಲ್ಲದಿದ್ದರೆ ವೃಙ್, ವೃಞ್, ಧಾತುಗಳು ಋಕಾರಾಂತ ಧಾತುಗಳು ಇವುಗಳಿಗಿಂತಲೂ ಪರದಲ್ಲಿರುವ ಇಟ್‌ಗೆ ದೀರ್ಘ ಬರುತ್ತೆ ಎಂದು ಸೂತ್ರಾರ್ಥವಾಗುತ್ತೆ. ಇದರಿಂದ ಇಟ್‌ಗೆ ದೀರ್ಘಪ್ರಾಪ್ತವಾದರೆ ಅದಕ್ಕೆ **ಸಿಚಿಚ ಪರಸ್ಮೈಪದೇಷು** (ಪಾ. ಸೂ. ೭-೨-೪೦) ಪರಸ್ಮೈಪದ ಪ್ರತ್ಯಯಗಳು ಪರದಲ್ಲಿದ್ದರೆ ವೃಙ್, ವೃಞ್, ಋಕಾರಾಂತ ಧಾತುಗಳ ಮುಂದೆ ಇರುವ ಇಟ್‌ಗೆ ದೀರ್ಘ ಬರುವುದಿಲ್ಲ ಎಂದು ಪ್ರತಿಷೇಧ, ಇಲ್ಲಿ ತೄ ಎಂಬ ಋಕಾರಾಂತಧಾತುವಿನ ಮುಂದೆ ಇಟ್ ಇದೆ. **ಬಹುಲಂಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪-೭೫) ಮಾಙ್ ಎಂದರೆ ನಿಷೇಧಾರ್ಥವನ್ನು ಕೊಡುವ ಮಾಶಬ್ದ ಅದರ ಯೋಗ (ಸಂಬಂಧ) ಇಲ್ಲದೇ ಇದ್ದರೂ ಅಪಿಶಬ್ದದಿಂದ ಅದರ ಯೋಗವಿದ್ದರೂ ಛಂದಸ್ಸಿನಲ್ಲಿ ಅಟ್ ಆಟ್ ಎಂಬ ಆಗಮಗಳು ಬಹುಲವಾಗಿ ಬರುವುದಿಲ್ಲ ಎಂದು ಸೂತ್ರಕ್ಕೆ ಅರ್ಥ. ಬಹೂನ್ ಅರ್ಥಾನ್ ಲಾತಿ ಇತಿ ಬಹುಲಂ, ಬಹುಲ ಎಂದರೆ ಬಹುವಿಧವಾದ ಅರ್ಥವನ್ನು ಕೊಡತಕ್ಕದ್ದು ಎಂದರ್ಥ. ಎಂದರೆ ಮಾಙ್ ಯೋಗವಿದ್ದರೂ ಕೆಲವೆಡೆಗಳಲ್ಲಿ ಇವು ಬರುವುವು. ಕೆಲವೆಡೆಗಳಲ್ಲಿ ಮಾಙ್ಯೋಗ ಇಲ್ಲದೇ ಇದ್ದರೂ ಇವು ಬರುವುದಿಲ್ಲ ಎಂದು ಬಹುಲಗ್ರಹಣದಿಂದ ಏರ್ಪಡುತ್ತೆ, ಇಲ್ಲಿ ಮಾಙ್‌ಯೋಗ ಇಲ್ಲದೇ ಇದ್ದರೂ ಅಟ್ ಬರುವುದಿಲ್ಲ. **ಋತ ಇದ್ಧಾತೋಃ** (ಪಾ. ಸೂ. ೭-೧-೧೦೦) ಅಂಗ ಸಂಜ್ಞೆಯನ್ನು ಹೊಂದಿರುವ ಋಕಾರಾಂತ ಧಾತುವಿನ ಋಕಾರಕ್ಕೆ ಇಕಾರ ಬರುತ್ತೆ ಎಂಬುದರಿಂದ ಬರುವ ಇತ್ವವನ್ನು ಬಾಧಿಸಿ **ಸಿಚಿವೃದ್ಧಿಃ ಪರಸ್ಮೈಪದೇಷು** (ಪಾ. ಸೂ. ೭-೨-೧) ಪರಸ್ಮೈಪದ ಪ್ರತ್ಯಯವನ್ನು ಪರದಲ್ಲಿ ಹೊಂದಿರುವ ಸಿಚ್ ಪರದಲ್ಲಿದ್ದರೆ ಇಗಂತವಾದ ಅಂಗಕ್ಕೆ ವೃದ್ಧಿ ಬರುತ್ತೆ ಎಂದು ವೃದ್ಧಿ, ಇದು ಋಕಾರಸ್ಥಾನದಲ್ಲಿ ಬರುವುದರಿಂದ **ಉರಣ್ರಪರಃ** ಎಂದು ರೇಫಶಿರಸ್ಕವಾಗಿ ಬರುತ್ತೆ, ತಾರ್+ಇಸ್+ತಮ್, **ಆದೇಶಪ್ರತ್ಯಯಯೋಃ** ಎಂದು ಷತ್ವ. ತಕಾರಕ್ಕೆ **ಷ್ಟುನಾಷ್ಟುಃ** ಎಂದು ಷ್ಟುತ್ವ, ತಾರಿಷ್ಟಮ್ ಎಂದಾಯಿತು. ಇಲ್ಲಿ ತಾರಿಷ್ಟಂ ವೃಕ್ತತಂಚ ಎಂದು ಚಾರ್ಥಕ್ಕೆ ಪ್ರತೀತಿ ಇದೆ, ಆದರೆ ಅದಕ್ಕೆ ಪ್ರಯೋಗ ಬಂದಿಲ್ಲ ಏವಂಚ ಚ ಲೋಪ ಇರುವುದರಿಂದ **ಚಾದಿಲೋಪೇ ವಿಭಾಷಾ** (ಇದರ ಅರ್ಥ ಹಿಂದಿನ ಮನ್ತ್ರದಲ್ಲಿದೆ) ಎಂಬುದರಿಂದ ಪ್ರಥಮ ತಿಙಂತವಾದ ತಾರಿಷ್ಟಮ್ ಎಂಬುದಕ್ಕೆ ಸರ್ವಾನುದಾತ್ತಸ್ವರಕ್ಕೆ ಪ್ರತಿಷೇಧ ಬರುತ್ತೆ, ಆದರಿಂದ **ತಿಙ್ಙತಿಙಃ** ಎಂಬುದರಿಂದ ಅದು ಸರ್ವಾನುದಾತ್ತವಾಗುವುದಿಲ್ಲ. **ಆದಿಸ್ಸಿಚೋಽನ್ಯತರಸ್ಯಾಂ** (ಪಾ. ಸೂ. ೬-೧-೧೮೭) ಸಿಚ್‌ಪ್ರತ್ಯಯಾಂತದ ಆದಿಯು ವಿಕಲ್ಪವಾಗಿ ಉದಾತ್ತವಾಗುತ್ತೆ ಎಂದು ಆದ್ಯುದಾತ್ತ ಬರುತ್ತೆ.

**ವೃಕ್ತತಮ್**—ವೃಜೀ ಆವರ್ಜನೇ ರುಧಾದಿಧಾತು, ಆವರ್ಜನ ಎಂದರೆ ಮುಟ್ಟುವಿಕೆ ಇಲ್ಲಿ ನಿರ್ ಎಂಬ ಉಪಸರ್ಗಬಲದಿಂದ ಶೋಧನೆ ಎಂಬ ಅರ್ಥದಲ್ಲಿದೆ. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಭೂತ

ಭವಿಷ್ಯಸ್ವರ್ತಮಾನಕಾಲಗಳಲ್ಲಿ ಹತ್ತು ಲಕಾರಾರ್ಥಗಳಲ್ಲಿ ಯಾವ ಅರ್ಥದಲ್ಲಿಯಾದರೂ ಧಾತುಗಳ ಮುಂದೆ ಈ ಪ್ರತ್ಯಯಗಳು ವಿಕಲ್ಪವಾಗಿ ಬರುವುವು ಎಂದು ಲೋಟ್ಟಿನ ಅರ್ಥದಲ್ಲಿ ಲುಙ್, ಚ್ಲಿ, ಥಸ್‌ಗೆ ತಮ್ ಆದೇಶ ಮೃಶ್+ ಚ್ಲಿ-ತಮ್ **ಶಲಇಗುಪಧಾದನಿಟಃ ಕ್ಸಃ** (ಪಾ. ಸೂ. ೩-೧-೪೫) ಶಲ್=ಶಷಸಹ, ಇಕ್=ಇ-ಉ ಋ ಲೃ. ಉಪಧೆ ಎಂದರೆ ಕೊನೆ ಅಕ್ಷರದ ಹಿಂದಿನ ಅಕ್ಷರ, ಇಗುಪಧವೂ, ಶಲಂತವೂ ಆದ ಧಾತುವಿನ ಮುಂದೆ ಇರುವ ಇಡಾಗಮವನ್ನು ಹೊಂದದ ಚ್ಲಿಗೆ ಕ್ಸ ಎಂಬ ಅಕಾರಾಂತ ಆದೇಶ ಬರುತ್ತೆ ಎಂದು ಅರ್ಥ, ಕ್‌ಗೆ ಇತ್ಸಂಜ್ಞೆ. ಕ್ಸ ಬಂದರೆ ಮೃಶ್+ಸ+ ತಮ್, **ಏಕಾಚ ಉಪದೇಶೇನುದಾತ್ತಾತ್** (ಪಾ. ಸೂ. ೭-೨-೧೦) ಉಪದೇಶದಲ್ಲಿ ಏಕಾಚ್ಕವೂ ಅನುದಾತ್ತವೂ ಆದ ಧಾತುವಿನ ಮುಂದಿರುವ ವಲಾದಿಯಾದ ಆರ್ಧಧಾತುಕಕ್ಕೆ ಇಟ್ ಬರುವುದಿಲ್ಲ ಎಂದು ಇಡಾಗಮಕ್ಕೆ ನಿಷೇಧ. ಅನುದಾತ್ತೋಪದೇಶಗಳನ್ನು ಸಂಗ್ರಹಿಸುವಾಗ **ಕ್ರುಶಿರ್-ದಂಶಿ-ದಿಶೀ-ದೃಶ್-ಮೃಶ್** ಎಂದು ಮೃಶ್ ಧಾತುವನ್ನು ಸಠಿಸಿದೆ, ಆದ್ದರಿಂದ ಇದು ಅನುದಾತ್ತೋಪದೇಶ, ಇಲ್ಲಿ **ಬಹುಲಂ ಛಂದಸ್ಯಮಾಙ್—,** ಎಂಬುದರಿಂದ ಅಡಾ ಗಮಕ್ಕೆ ನಿಷೇಧ, ಮೃಶ್ ಶಕಾರಾಂತ, **ವ್ರಶ್ಚಭ್ರಸ್ಜ....ಛಶಾಂಷಃ** (ಪಾ. ಸೂ. ೮-೨-೩೬) ಎಂದು ಶ್‌ಗೆ ಷಕಾರ, ಮೃಷ್+ಸ+ತಮ್ ಷಢೋಃಕಸ್ಸಿ (ಪಾ. ಸೂ. ೮-೨-೪೧) ಸಕಾರ ಪರದಲ್ಲಿದ್ದರೆ ಷಕಾರ ಢಕಾರಗಳಿಗೆ ಕಕಾರ ಬರುತ್ತೆ ಎಂದು ಷ್ ಗೆ ಕ್ ಬರುತ್ತೆ. ಇಲ್ಲಿ ವೇದಭಾಷ್ಯದಲ್ಲಿ 'ಷತ್ವ ಕುತ್ವೇ' ಎಂದಿದೆ. ಷತ್ವ ಕತ್ವೇ, ಎಂದಿರು ವುದು ಉಚಿತವು. **ಆದೇಶಪ್ರತ್ಯಯಯೋಃ** ಎಂದು ಸಕಾರಕ್ಕೆ ಷಕಾರ, ಮೃಕ್ಷತಮ್ ಎಂದಾಯಿತು.

**ಸೇಧತಮ್**—ಷಿಧ ಗತ್ಯಾಂ ಧಾತು. ೧ ನೇ ಗಣದಲ್ಲಿ ಷಿಧು ಎಂದು ಪಾಠವು ಈಗಿರುವ ಧಾತುಪಾಠದಲ್ಲಿ ಕಾಣಬರುವುದಿಲ್ಲ. ಇದರ ಜತೆಗೆ ಪ್ರತಿ ಎಂಬ ಉಪಸರ್ಗ ಸೇರಿದರೆ ಪ್ರತಿಷೇಧ ಎಂಬ ಅರ್ಥವು ಏರ್ಪಡುವುದು ಉಪಸರ್ಗಗಳು ದ್ಯೋತಕಗಳು ಎಂದರೆ ಸ್ವಸಮಭಿವ್ಯಾಹೃತ ಪದ ಶಕ್ತ್ಯುದ್ಬೋಧಕಗಳು. ಏವಂಚ ದ್ಯೋತಕವಿಲ್ಲದೇ ಇದ್ದರೂ ಷಿಧ್ ಧಾತುವಿನಿಂದ ಪ್ರತಿ ಎಂಬುದು ಇದ್ದರೆ ಯಾವ ಅರ್ಥ ತೋರುತ್ತಿತ್ತೋ ಅದೇ ಅರ್ಥವು ಇಲ್ಲಿ ವಿವಕ್ಷಿತವು. **ವಿಧಿನಿಮನ್ತ್ರಣಾಮನ್ತ್ರಣಾಧೀಷ್ಟ ಸಂಪ್ರಶ್ನ ಪ್ರಾರ್ಥನೇಷು ಲಿಙ್** (ಪಾ. ಸೂ.೩ ೩೧೬೧) **ಲೋಟ್ಚ** (ಪಾ. ಸೂ. ೩-೩-೧೬೨) ಎಂಬುದರಿಂದ ಪ್ರಾರ್ಥನೆ ಎಂಬ ಅರ್ಥದಲ್ಲಿ ಲೋಟ್ ಮಧ್ಯಮ ದ್ವಿವಚನ ಥಸ್, ಶಪ್, ಷಕಾರಕ್ಕೆ ಸಕಾರ, ಸಿಧ್+ಅ+ಥಸ್, **ಲೋಟೋಲಙ್ವತ್** ಎಂದು ಲಙ್ವದ್ಭಾವ, **ತಸ್ಥಸ್ಥಮಿಪಾಂ—,** ಎಂದು ತಮ್ ಆದೇಶ. ಇದು ಅದುಪದೇಶವಾದ ಶಪ್ ನ ಮುಂದೆ ಇರುವುದರಿಂದ **ತಾಸ್ಯನುದಾತ್ತೇತ್—,** ಎಂಬ ಲಸಾರ್ವ ಧಾತುಕಸ್ವರದಿಂದ ಅನುದಾತ್ತ. ಶಪ್ ಪಿತ್ತಾದ್ದರಿಂದ ಅನುದಾತ್ತ. **ಅನುದಾತ್ತಂ ಸರ್ವಮಪಾದಾದೌ** (ಪಾ. ಸೂ. ೮-೧-೧೮) ಅನುದಾತ್ತಗಳೆಲ್ಲವೂ ಪಾದಾದಿಯಲ್ಲಿರುವುದಕ್ಕೆ ಬರುವುದಿಲ್ಲ ಎಂದು ಹೇಳಿರುವುದರಿಂದ ನಾಲ್ಕನೇ ಪಾದದ ಆದಿಯಲ್ಲಿರುವುದರಿಂದ ಇದಕ್ಕೆ ಅನುದಾತ್ತ ಬರುವುದಿಲ್ಲ. ಅಥವಾ **ತಿಙ್ಙತಿಙಃ** (ಪಾ. ಸೂ. ೮-೧-೨೮) ತಿಙಂತ ಭಿನ್ನವಾದ ಶಬ್ದದ ಮುಂದೆ ಇರುವ ತಿಙಂತವು ಅನುದಾತ್ತವಾಗುವುದು ಎಂಬಲ್ಲಿ ಅತಿಙಃ ಎಂದು ಇದೆ, ಇಲ್ಲಿ ಮೃಕ್ಷತಂ ಎಂಬ ತಿಙಂತದ ಮುಂದೆ ಸೇಧತಂ ತಿಙಂತವಿರುವುದರಿಂದ ಅನುದಾತ್ತ ಬರುವುದಿಲ್ಲ. ಏವಂಚ ಧಾತೋಃ (ಪಾ. ಸೂ. ೬-೧-೧೬೨) ಎಂದು ಬಂದ ಧಾತು ಸ್ವರ ಉದಾತ್ತವೇ ನಿಲ್ಲುವುದು.

**ದ್ವೇಷಃ**—ದ್ವಿಷ ಅಪ್ರೀತೌ, ಅದಾದಿ **ಅನ್ಯೇಭ್ಯೋಽಪಿದೃಶ್ಯನ್ತೇ** (ಪಾ. ಸೂ. ೩-೨-೭೫) ಮನಿನ್, ಕ್ವನಿಪ್, ವನಿಪ್, ವಿಚ್ ಇವು ಧಾತುಗಳ ಮುಂದೆ ಬರುವುವು ಎಂದು ಕರ್ತ್ರರ್ಥದಲ್ಲಿ ವಿಚ್ ಪ್ರತ್ಯಯ.

**ಭವತಮ್**—ಭೂಧಾತು ಲೋಟ್ ಮಧ್ಯಮ ಪುರುಷ ದ್ವಿವಚನ ' ಸೇಧತಂ ದ್ವೇಷಃ, ದ್ವೇಷ ಮಾಡುವವರನ್ನು ಪ್ರತಿಷೇಧಿಸಿರಿ ಎಂದು ಒಂದು ವಾಕ್ಯ. ' ಸಚಾಭುವಾ ಭವತಮ್, ನಮ್ಮ ಜತೆಯಲ್ಲಿ ಇರುವವರಾಗಿ ಆಗಿ ಎಂದು ಮತ್ತೊಂದು, ಅನುದಾತ್ತವು ಬರಬೇಕಾದರೆ ನಿಮಿತ್ತ ನಿಮಿತ್ತಿಗಳು ಒಂದೇ ವಾಕ್ಯದಲ್ಲಿರಬೇಕು ಎಂದು **ಸಮಾನವಾಕ್ಯೇ ನಿಘಾತ ಯುಷ್ಮದಸ್ಮದಾದೇಶಾವಾವಕ್ತವ್ಯಾಃ** (ಪಾ. ಸೂ. ೮-೧-೧೮-೫) ಎಂಬ ವಚನದಿಂದ ಏರ್ಪಡುತ್ತೆ. ಇಲ್ಲಿ ಭವತಂ ಎಂಬುವಕ್ಕೆ ಅನುದಾತ್ತವು ಬರಬೇಕಾದರೆ ಇದರ ಹಿಂದೆ ಇರುವ ದ್ವೇಷಃ ಎಂಬ ಪದವನ್ನು ನಿಮಿತ್ತ ಮಾಡಿಕೊಂಡು ಬರಬೇಕು. ಅದು ಬೇರೆ ವಾಕ್ಯದಲ್ಲಿದೆ. ಆದ್ದರಿಂದ ಸರ್ವಾನುದಾತ್ತ ಬರುವುದಿಲ್ಲ. ಧಾತುಸ್ವರವೇ ನಿಲ್ಲುತ್ತೆ.

**ಸಚಾಭುವಾ—ಸಚಾಸಹೇತ್ಯರ್ಥಃ** (ನಿ. ೫-೫) ಎಂಬ ನಿರುಕ್ತದಲ್ಲಿ ಯಾಸ್ಕರು ಸಚಾ ಶಬ್ದ ಸಹ ಶಬ್ದ ಸಮಾನಾರ್ಥಕ ಎಂದಿರುವರು. ಸಚಾ ಭವತಃ ಇತಿ ಸಚಾಭುವೌ ಕ್ವಿಪ್ ಪ್ರತ್ಯಯ. ಸಚಾ ಭೂ ಶಬ್ದಗ ಮುಂದೆ ಪ್ರಥಮಾದ್ವಿವಚನ ಔ ಪ್ರತ್ಯಯ. ಸಚಾ ಭೂ+ಔ **ಓಸ್ಸುಪಿ** (ಪಾ. ಸೂ. ೬-೪-೮೩) ಅಜಾದಿ ಸುಪ್ ಪ್ರತ್ಯಯ ಪರದಲ್ಲಿದ್ದರೆ ಧಾತ್ವವಯವ ಮಾತ್ರಾರಬ್ಧವಾದ ಸಂಯೋಗ ಪೂರ್ವಕವಲ್ಲದ ಯಾವ ಉವರ್ಣವಿದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಯಾವ ಧಾತುವಿದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ಯಣ್ ಬರುತ್ತೆ ಎಂದು ಪ್ರಾಪ್ತವಾಗುವ ಯಣಾದೇಶಕ್ಕೆ **ನ ಭೂಸುಧಿಯೋಃ** (ಪಾ. ಸೂ. ೬-೪-೮೫) ಅಜಾದಿಯಾದ ಸುಪ್ ಪರದಲ್ಲಿರುವಾಗ ಭೂ ಸುಧೀ ಶಬ್ದಗಳಿಗೆ ಯಣ್ ಬರುವುದಿಲ್ಲ ಎಂಬುದರಿಂದ ನಿಷೇಧ ಅಂದಮೇಲೆ **ಅಚಿಶ್ನು ಧಾತುಭ್ರುವಾಂ—,** (ಪಾ. ಸೂ. ೬-೪-೭೭) ಅಜಾದಿಪ್ರತ್ಯಯ ಪರದಲ್ಲಿರುವಾಗ ಶ್ನುಪ್ರತ್ಯಯಾಂತವಾದ ಅಂಗ, ಇ ಉ ವರ್ಣಾನ್ಯತರ ಚರಮಾವಯವಕಧಾತ್ವಂತಾಂಗ, ಭ್ರೂ ಶಬ್ದಾಂತವಾದ ಅಂಗ ಇವುಗಳಿಗೆ ಇಯಙ್ ಉವಙ್‌ಗಳು ಬರುವುವು. (ಇಗೆ ಇಯಙ್, ಉ ಗೆ ಉವಙ್ ಎಂದು ತಿಳಿಯಬೇಕು,) ಈ ಸೂತ್ರದಿಂದ ಉವಙ್ ಬರುತ್ತೆ. ಸಚಾಭುವ್+ಔ, **ಸುಪಾಂಸುಲುಕ್—,** ಎಂದು ಔಗೆ ಆಕಾರ. ॥೧೧॥



[ಸಂಹಿತಾಪಾಠಃ ೧]

ಆ ನೋ॑ ಅಶ್ವಿನಾ ತ್ರಿವೃತಾ॒ ರಥೇ॑ನಾ॒ರ್ವಾಂಚಂ॑ ರ॒ಯಿಂ ವ॑ಹತಂ ಸು॒ವೀರಂ॑ ।

ಶೃಣ್ವನ್ತಾ ವಾಮವಸೇ ಜೋಹವೀಮಿ ವೃಧೇ ಚ ನೋ ಭವತಂ

ವಾಜಸಾತೌ ॥೧೨॥

॥ ಪದಪಾಠಃ ॥

ಆ । ನಃ । ಅಶ್ವಿನಾ । ತ್ರಿಽವೃತಾ । ರಥೇನ । ಅರ್ವಾಂಚಂ । ರಯಿಂ ।

ವಹತಂ । ಸುಽವೀರಂ ।

ಶೃಣ್ವಂತಾ । ವಾಂ । ಅವಸೇ । ಜೋಹವೀಮಿ । ವೃಧೇ । ಚ । ನಃ ।

ಭವತಂ । ವಾಜಽಸಾತೌ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾ ತ್ರಿವೃತಾ ರಥೇನ ಅಪ್ರತಿಹತಗತಿತ್ವಾತ್ ತ್ರಿಷು ಲೋಕೇಷು ವರ್ತಮಾನೇನ ರಥೇನ ಸಹ ನೋಽಸ್ಮಾಕಮರ್ವಾಂಚಮಭಿಮುಖಂ ಸುವೀರಂ ಶೋಭನೈರ್ವೀರೈಃ ಪುತ್ರಭೃತ್ಯಾದಿಭಿರುಪೇತಂ ರಯಿಂ ಧನಮಾ ವಹತಂ। ಆನೀಯ ಪ್ರಾಪಯೇತಂ। ಶೃಣ್ವಂತಾಸ್ಮದೀಯಸ್ತುತಿಂ ಶೃಣ್ವಂತೌ ವಾಂ ಯುವಾಮವಸೇಽಸ್ಮದ್ರಕ್ಷಣಾರ್ಥಂ ಜೋಹವೀಮಿ। ಆಹ್ವಯಾಮಿ। ನೋಽಸ್ಮಾಕಂ ವಾಜಸಾತೌ ಸಂಗ್ರಾಮೇ। ವಾಜಸಾತೌ ಮಹಾಧನ ಇತಿ ಸಂಗ್ರಾಮನಾಮಸು ಪಾಠಾತ್। ವೃಧೇ ವರ್ಧನಾಯ ಚ ಭವತಂ॥ ಸುವೀರಂ। ಶೋಭನಾ ವೀರಾ ಯಸ್ಯೇತಿ ಬಹುವ್ರೀಹೌ ವೀರವೀರ್ಯೌ ಚೇತ್ಯುತ್ತರಪದಾದ್ಯುದಾ-ತ್ತತ್ವಂ। ಶೃಣ್ವಂತಾ। ಶ್ರು ಶ್ರವಣೇ। ಶತರಿ ಶ್ರುವಃ ಶೃ ಚ। ಪಾ.೩-೧-೭೪। ಇತಿ ಶ್ನುಃ ಶೃಭಾವಶ್ಚ। ಹುಶ್ನು-ವೋಃ ಸಾರ್ವಧಾತುಕ ಇತಿ ಯಣಾದೇಶಃ। ಸುಪಾಂ ಸುಲುಗಿತ್ಯಾಕಾರಃ। ಜೋಹವೀಮಿ। ಹ್ವೇಞ್ ಸ್ಪರ್ಧಾ-ಯಾಂ ಶಬ್ದೇ ಚ। ಯಙ್ಲುಕ್ಯಭ್ಯಸ್ತಸ್ಯ ಚ। ಪಾ. ೬-೧-೩೩। ಇತಿ ಕೃತಸಂಪ್ರಸಾರಣಾದಸ್ಮಾಲ್ಲಡುತ್ತ-ಮೈಕವಚನೇ ಯಙೋ ವಾ। ಪಾ. ೭-೩-೯೪। ಇತೀಡಾಗಮಃ। ವೃಧೇ। ವೃಧು ವೃದ್ಧಾವಿತ್ಯಸ್ಮಾ-ತ್ಸಂಪದಾದಿಲಕ್ಷಣೋ ಭಾವೇ ಕ್ವಿಪ್। ವಾಜಸಾತೌ। ಷಣು ದಾನೇ। ಕ್ತಿನಿ ತಿತುತ್ರೇತ್ಯಾದಿನಾ ಇಟ್ಪ್ರತಿ-ಷೇಧಃ। ಜನಸನೇತ್ಯಾದಿನಾ ಆತ್ವಂ। ವಾಜಾನಾಂ ಸಾತಿರ್ಯಸ್ಮಿನ್ನಿತಿ ಪೂರ್ವಪದಪ್ರಕೃತಿಸ್ವರತ್ವಂ ॥೫॥

॥ ಪ್ರತಿಪದಾರ್ಥ ॥

**ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ। **ತ್ರಿವೃತಾ**—(ತಡೆಯಿಲ್ಲದೆ) ಮೂರುಲೋಕಗಳಲ್ಲಿಯೂ ಸಂಚರಿಸತಕ್ಕ। **ರಥೇನ**— ರಥದೊಂದಿಗೆ। **ನಃ**— ನಮ್ಮ। **ಅರ್ವಾಂಚಂ**— ಅಭಿಮುಖವಾಗಿ। **ಸುವೀರಂ**—

ವೀರರಾದ ಪುತ್ರಾದಿಗಳಿಂದ ಸಹಿತವಾದ । **ರಯಿಂ**— ಐಶ್ವರ್ಯವನ್ನು । **ಆ ವಹತಂ**—ಉಂಟುಮಾಡಿ । **ಶೃಣ್ವಂತಾ**— ನಮ್ಮ ಸ್ತೋತ್ರವನ್ನು ಕೇಳತಕ್ಕ । **ವಾಂ**— ನಿಮ್ಮನ್ನು । **ಅವಸೇ**— ನಮ್ಮ ರಕ್ಷಣೆಗೋಸ್ಕರ । **ಜೋಹವೀಮಿ**— ಪ್ರಾರ್ಥಿಸಿ ಕರೆಯುತ್ತೇನೆ. । **ನಃ**— ನಮ್ಮ । **ವಾಜಸಾತೌ**— ಯುದ್ಧದಲ್ಲಿ । **ವೃಧೇ ಚ**— ನಮ್ಮ ವೃದ್ಧಿಗೋಸ್ಕರವೂ (ಜಯಕ್ಕಾಗಿ) । **ಭವತಂ**— ಆಗಿ. ।

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮ ರಥವು ಕೊಂಚವೂ ತಡೆಯಿಲ್ಲದೆ ಮೂರುಲೋಕಗಳನ್ನೂ ಸಂಚರಿಸ ಬಲ್ಲನು. ಅದರೊಂದಿಗೆ ಬಂದು ನಮಗೆ ಸತ್ಸಂತಾನಸಹಿತವಾದ ಐಶ್ವರ್ಯವನ್ನು ಒದಗಿಸಿ, ನೀವು ನಮ್ಮ ಸ್ತೋತ್ರ ವನ್ನು ಆದರದಿಂದ ಕೇಳುತ್ತಿರಿ. ಆದುದರಿಂದ ನಿಮ್ಮನ್ನು ನಮ್ಮ ರಕ್ಷಣೆಗೋಸ್ಕರ ಪ್ರಾರ್ಥಿಸಿ ಕರೆಯುತ್ತೇನೆ. ನಮ್ಮ ಯುದ್ಧ ಕಾಲದಲ್ಲಿ ನಮಗೆ ಜಯವನ್ನು ಸಂಪಾದಿಸಿ ಕೊಡುವವರಾಗಿ.

English Translation

Sitting in your chariot that traverses the three worlds, bring us plenty of wealth accompanied by valiant progeny ; I call upon you both for protection, listen to me and give us victory ( encouragement ) in battle.

ವಿಶೇಷವಿಷಯಗಳು

**ತ್ರಿವೃತಾ— ಅಪ್ರತಿಹತಗತಿತ್ವಾತ್ ತ್ರಿಷು ಲೋಕೇಷು ವರ್ತಮಾನೇನ ।** ಈ ದೇವತೆಗಳ ಸಂಚಾ ರಕ್ಕೆ ತಡೆಯಿಲ್ಲ. ಭೂಮ್ಯಂತರಿಕ್ಷಸ್ವರ್ಗಗಳೆಂಬ ಮೂರುಲೋಕಗಳಲ್ಲಿಯೂ ಸಂಚರಿಸಬಲ್ಲ ಎಂದರ್ಥವು.

**ಶೃಣ್ವಂತಾ— ಅಸ್ಮದೀಯಸ್ತುತಿಂ ಶೃಣ್ವಂತೌ ।** ನಾವು ಮಾಡುವ ಸ್ತೋತ್ರಾದಿಗಳನ್ನು ಮನಸ್ಸಿಟ್ಟು ಕೇಳುವವರು

**ಅವಸೇ— ಅಸ್ಮದ್ರಕ್ಷಣಾರ್ಥಂ ।** ನಮ್ಮ ರಕ್ಷಣೆಗಾಗಿ

**ವೃಧೇ ಚ ನೋ ಭವತಂ**— ನಮ್ಮ ಅಭಿವೃದ್ಧಿಗಾಗಿ ಅಥವಾ ನಮ್ಮನ್ನು ಪ್ರೋತ್ಸಾಹಗೊಳಿಸುವುದಕ್ಕಾಗಿ ನೀವು ಪ್ರಯತ್ನಿಸಿ

**ವಾಜಸಾತೌ**— ರಣಃ ವಿವಾಕ್ ಮೊದಲಾದ ನಲವತ್ತಾರು ಸಂಗ್ರಾಮನಾಮಗಳ ಮಧ್ಯದಲ್ಲಿ **ವಾಜ-ಸಾತೌ** ಎಂಬ ಶಬ್ದವು ಪಠಿತವಾಗಿರುವುದರಿಂದ ಈ ಶಬ್ದಕ್ಕೆ ಯುದ್ಧದಲ್ಲಿ, ನಾವು ನಮ್ಮ ಶತ್ರುಗಳೊಡನೆ ಮಾಡುವ ಯುದ್ಧದಲ್ಲಿ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಸುವೀರಮ್**— ಶೋಭನಾಃ ವೀರಾಃ ಯಸ್ಯ ಸಃ, ಎಂದು ಬಹುವ್ರೀಹಿ. ಯಾವ ಧನವು ಒಳ್ಳೆಯ ವೀರರಿಂದ ಕೂಡಿದೆಯೋ ಅದು ಎಂದು ಅವಯವಾರ್ಥ. **ವೀರವೀರ್ಯೌ ಚ** (ಪಾ. ಸೂ. ೬-೨-೧೨೦.) ಬಹುವ್ರೀಹಿ ಯಲ್ಲಿ ಸು ಶಬ್ದದ ಮುಂದೆ ಇರುವ ವೀರ, ವೀರ್ಯ ಎಂಬ ಪದಗಳು ಆದ್ಯುದಾತ್ತಗಳಾಗುವುವು ಎಂದು ವೀರಶಬ್ದ ಆದ್ಯುದಾತ್ತ. ವೀರ ವಿಕ್ರಾನ್ತೌ ಎಂದು ಹತ್ತನೇ ಗಣದ ಧಾತುವಿನ ಮುಂದೆ ಪಚಾದಿಲಕ್ಷಣವಾದ ಅಚ್‌ಪ್ರತ್ಯಯ ಬಂದು ವೀರ ಎಂದಾಗುತ್ತೆ. **ಚಿತಃ** ಎಂಬುದರಿಂದ ಇದು ಸ್ವಾಭಾವಿಕವಾಗಿ ಅಂತೋದಾತ್ತ.

**ಶೃಣ್ವನ್ತಾ**— ಶು ಶ್ರವಣೇ ಧಾತು, ೧ ನೇ ಗಣ, ಲಟ್, **ಲಟಶ್ಶತೃ ಶಾನಚೌ**, ಎಂದು ಶತೃ. **ಶ್ರುವಃ ಶೃಚ** (ಪಾ. ಸೂ ೩-೧-೭೪.) ಶ್ರು ಧಾತುವಿಗೆ ಶೃ ಆದೇಶವೂ, ಶ್ರುಧಾತು ಮುಂದೆ ಶಪ್‌ಗೆ ಬದಲಾಗಿ ಶ್ನುಪ್ರತ್ಯಯವೂ ಬರುತ್ತೆ. ಎಂದು ಶ್ನುಪ್ರತ್ಯಯ, ಶೃಆದೇಶ ಇವು ಬಂದರೆ ಶೃ+ನು+ಅತ್. ಶ್ನುವು ಅತಿದೇಶದಿಂದ ಙಿತ್, ಗುಣಕ್ಕೆ ನಿಷೇಧ. ಅತ್ ಎಂಬ ಅಜಾದಿ ಪ್ರತ್ಯಯವನ್ನು ನಿಮಿತ್ತ ಮಾಡಿಕೊಂಡು **ಅಚಿಶ್ನು ಧಾತು**- (ಪಾ. ಸೂ.೬-೪-೭೭) ಎಂದು ಗುಣಕ್ಕೆ ಪ್ರಾಪ್ತಿ ಇದೆ. **ಹುಶ್ನುವೋಸ್ಸಾರ್ವಧಾತುಕೇ** (ಪಾ. ಸೂ. ೬-೪-೮೭) ಅಜಾದಿ ಪ್ರತ್ಯಯ ಪರದಲ್ಲಿರುವಾಗ ಹುಧಾತುವಿನ ಅಥವಾ ಶ್ನುಪ್ರತ್ಯಯಾಂತದ ಅಂಗವು ಅನೇಕ ಅಚ್ಚುಗಳನ್ನೊಳಗೊಂಡಿದ್ದರೆ ಆ ಅಂಗದ ಸಂಯೋಗಪೂರ್ವಕವಲ್ಲದ ಉಕಾರಕ್ಕೆ ಯಣ್ ಬರುತ್ತೆ. ಎಂಬ ವಿಶೇಷವಿಧಿಯಿಂದ ಉವಙಾದೇಶ ವನ್ನು ಬಾಧಿಸಿ ಯಣ್ ಬರುತ್ತೆ. ದ್ವಿತೀಯಾದ್ವಿವಚನ ಔಟ್‌ಗೆ **ಸುಪಾಂ ಸುಲುಕ್** ಎಂದು ಆಕಾರಾದೇಶ

**ಜೋಹವೀಮಿ**—ಹ್ವೇ ಞ್ ಸ್ಪರ್ಧಾಯಾಂ ಶಬ್ದೇ ಚ ಧಾತು, **ಧಾತೋರೇಕಾಚ** ಎಂದು, ಯಙ್, ಅದಕ್ಕೆ **ಯಙೋಚಿಚ** ಎಂದು ಲುಕ್ **ಅಭ್ಯಸ್ತಸ್ಯಚ** (ಪಾ ಸೂ. ೬-೧-೩೩) ಅಭ್ಯಸ್ತಸಂಜ್ಞೆಗೆ ನಿಮಿತ್ತವಾದ ಪ್ರತ್ಯಯ ಪರದಲ್ಲಿರುವಾಗ ದ್ವಿತ್ವವನ್ನು ಹೊಂದುವುದಕ್ಕೆ ಮುಂಚೆಯೇ ಹ್ವೇಞ್ ಧಾತುವಿಗೆ ಸಂಪ್ರಸಾರಣ ಬರುತ್ತೆ ಎಂದು ಸಂಪ್ರಸಾರಣ. ಪೂರ್ವರೂಪ. ಹು, **ಸನ್ಯಙೋಃ** ಎಂದು ದ್ವಿತ್ವ, ಹು+ಹು ಅಭ್ಯಾಸಕ್ಕೆ ಹ್ರಸ್ವ. **ಕುಹೋಶ್ಚುಃ** ಎಂದು ಹಕಾರಕ್ಕೆ ಜಕಾರ ಜು+ಹು **ಗುಣೋಯಙ್‌ಲುಕೋಃ** (ಪಾ ಸೂ ೭-೪-೮೨) ಯಙ್ ಪರದಲ್ಲಿದ್ದರೂ, ಯಙ್‌ಗೆ ಲುಕ್ ಬಂದಿದ್ದರೂ ಅಭ್ಯಾಸಕ್ಕೆ ಗುಣ ಬರುತ್ತೆ. ಜೋಹು ಇದರ ಮುಂದೆ ಲಟ್ ಉತ್ತಮಪುರುಷ ಏಕ ವಚನ ಮಿಪ್, ಶಪ್ ಅದಕ್ಕೆ ಲುಕ್, ಜೋಹು+ಮಿ **ಯಙೋವಾ** (ಪಾ. ಸೂ. ೭-೩-೯೪) ಯಙ್‌ಪ್ರತ್ಯಯಾಂತದ ಮುಂದೆ ಇರುವ ಹಲಾದಿಯೂ ಪಿತ್ತೂ ಆದ ಸಾರ್ವಧಾತುಕಕ್ಕೆ ಈಟ್ ಆಗಮ ಬರುತ್ತೆ ಎಂದು ಈಡಾಗಮ ಗುಣ. ಅವಾದೇಶ. ಯಙಂತದ ಮುಂದೆ ನಿಯತವಾಗಿ ಆತ್ಮನೇಪದವೇ ಬರುತ್ತೆ, ಆತ್ಮನೇಪದಪ್ರತ್ಯಯಗಳಲ್ಲಿ ಪಿತ್ ಆದ ಪ್ರತ್ಯಯವಿಲ್ಲ. ಯಙ್ಲುಂಗತದ ಮುಂದೆ ಪರಸ್ಮೈಪದವು ನಿಯತ. ಅದರಲ್ಲಿ ಏಕವಚನಪ್ರತ್ಯಯಗಳು ಪಿತ್ ಆಗುವುವು. ಏನಂಚ **ಯಙೋವಾ** ಎಂಬುದು ಯಙ್ಲುಗಂತದಲ್ಲಿಯೇ ಬರುತ್ತೆ.

**ವೃಧೇ**—ವೃಧು ವೃದ್ಧೌ **ಸಂಪದಾದಿಭ್ಯಃ ಕ್ವಿಪ್** ಎಂದು ಕ್ವಿಪ್ ಬಂದರೆ ವೃಧ್ ಎಂದು ಕೃದಂತರೂಪ ವಾಗುತ್ತೆ. ಇದರ ಮುಂದೆ ಚತುರ್ಥೀಏಕವಚನ ಙೇಪ್ರತ್ಯಯ.

**ವಾಜಸಾತೌ**—ಷಣು ದಾನೇ-**ಧಾತ್ವಾದೇಃ ಷಸ್ಸಃ**, ಎಂದು ಸಕಾರ, **ಸ್ತ್ರಿಯಾಂ ಕ್ತಿನ್** ಎಂದು ಕ್ತಿನ್, **ತಿತುತ್ರತಥಸಿಸುಸರಕಸೇಷುಚ** (ಪಾ. ಸೂ. ೬-೨-೯) ಈ ಹತ್ತು ಕೃತ್ಪ್ರತ್ಯಯಗಳಿಗೆ ಇಟ್ ಬರುವುದಿಲ್ಲ. ಎಂದು

ಇಟ್ಟಿಗೆ ನಿಷೇಧ. ಸನ್+ತಿ, **ಜನಸನಖನಾಂ ಸನ್‌ಝಲೋಃ** (ಪಾ. ಸೂ. ೬-೪-೪೨) ಝಲಾದಿಯಾದ ಸನ್ ಅಥವಾ ಝಲಾದಿಯಾಗಿ ಕಿತ್ ವಾ ಜಿತ್ ಆದ ಪ್ರತ್ಯಯ ಪರದಲ್ಲಿದ್ದರೆ ಈ ಮೂರು ಧಾತುಗಳಿಗೂ ಆಕಾರಾದೇಶ ಬರುತ್ತೆ. ಎಂದು ನ್‌ಗೆ ಆಕಾರ. ಸವರ್ಣದೀರ್ಘ, ಸಾತಿ ಎಂದಾಯಿತು. ವಾಜಾನಾಂ= ಬಲದ, ಸಾತಿಃ=ದಾನವು, ಯಸ್ಮಿನ್ ಸಃ=ಯಾವುದರಲ್ಲಿದೆಯೋ ಅದು ಎಂದು ಅನಯವಾರ್ಥ. ಬಹುವ್ರೀಹಿಯಾದ್ದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತೆ. ॥ ೧೨ ॥



॥ ಓಂ ॥

# ಮೂವತ್ತೈದನೆಯ ಸೂಕ್ತವು

**ಹ್ವಯಾಮ್ಯಗ್ನಿಮಿತ್ಯೇಕಾದಶರ್ಚಂ ಪಂಚಮಂ ಸೂಕ್ತಂ । ಹಿರಣ್ಯಸ್ತೂಪ ಋಷಿಃ । ಆದ್ಯಾ ನವಮೀ ಚ ಜಗತೀಚ್ಛಂದಸ್ಕೇ । ಶಿಷ್ಟಸ್ತ್ರಿಷ್ಟುಭಃ । ಕೃತ್ಸ್ನಸ್ಯ ಸೂಕ್ತಸ್ಯ ಸವಿತಾ ದೇವತಾ । ಆದ್ಯಾಯಾ ಹ್ವಯಾಮ್ಯಗ್ನಿಮಿತ್ಯಸ್ಯಾ ಅಗ್ನಿಮಿತ್ರಾವರುಣರಾತ್ರಿಸವಿತ್ರಾಖ್ಯಾ ಲಿಂಗೋಕ್ತದೇವತಾಃ । ತಥಾ ಚಾನುಕ್ರಾಂತಂ । ಹ್ವಯಾಮ್ಯೇಕಾದಶ ಸಾವಿತ್ರಂ ನವಮೀ ಜಗತ್ಯಾದ್ಯಾ ಚ ಲಿಂಗೋಕ್ತದೈವತ-ಪಾದಾಸ್ತ್ರಯ ಇತಿ । ಅಭಿಪ್ಲವಷಡಹಸ್ಯ ಚತುರ್ಥೇಽಹನಿ ವೈಶ್ವದೇವಶಸ್ತ್ರ ಇದಂ ಸೂಕ್ತಂ ಸಾವಿತ್ರಂ ನಿವಿದ್ಧಾನಂ । ತೃತೀಯಸ್ಯ ತ್ರ್ಯರ್ಯಮೇತಿ ಖಂಡೇ ಸೂತ್ರಿತಂ । ಹ್ವಯಾಮ್ಯಗ್ನಿಮಸ್ಯ ಮೇ ದ್ಯಾವಾಪೃಥಿವೀ ಇತಿ ತಿಸ್ರಃ । ಆ. ೭-೭ । ಇತಿ ॥**

ಅನುವಾದವು— **ಹ್ವಯಾಮ್ಯಗ್ನಿಂ** ಎಂದು ಪ್ರಾರಂಭವಾಗುವ ಈ ಮೂವತ್ತೈದನೆಯ ಸೂಕ್ತವು ಏಳನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಹಿರಣ್ಯಸ್ತೂಪಃ ಎಂಬುವನು ಋಷಿಯು. ಈ ಸೂಕ್ತದ ಋಕ್ಕುಗಳಲ್ಲಿ ಮೊದಲನೆಯ ಮತ್ತು ಒಂಭತ್ತನೆಯ ಋಕ್ಕುಗಳು ಜಗತೀಛಂದಸ್ಸಿನವು. ಉಳಿದ ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಈ ಸೂಕ್ತಕ್ಕೆಲ್ಲಾ ಸವಿತೃವೇ ದೇವತೆಯು ಆದರೂ ಮೊದಲನೆಯ ಋಕ್ಕಿಗೆ ಅಗ್ನಿ, ಮಿತ್ರಾವರುಣ, ರಾತ್ರಿ, ಸವಿತೃ ಎಂಬ ಪ್ರಸಕ್ತ ಋಕ್ಕಿನಲ್ಲಿ ಹೇಳಿರುವವರೂ ದೇವತೆಗಳು. ಅನುಕ್ರಮಣಿಕೆಯಲ್ಲಿ-**ಹ್ವಯಾಮ್ಯೇಕಾದಶ ಸಾವಿತ್ರಂ ನವಮೀ ಜಗತ್ಯಾದ್ಯಾ ಚ ಲಿಂಗೋಕ್ತದೈವತಪಾದಾಸ್ತ್ರಯ ಇತಿ** ಎಂದು ಹೇಳಿರುವುದು. ಅಭಿಪ್ಲವಷಡಹವೆಂಬ ಯಾಗದ ನಾಲ್ಕನೆಯ ದಿವಸದಲ್ಲಿ ವೈಶ್ವದೇವಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತವನ್ನು ಪಠಿಸಬೇಕೆಂದು ಹೇಳಿರುವರು. ಆಶ್ವಲಾಯನಶ್ರೌತಸೂತ್ರದ **ತೃತೀಯಸ್ಯ ತ್ರ್ಯರ್ಯಮಾ** ಎಂಬ ಖಂಡದಲ್ಲಿ **ಹ್ವಯಾಮ್ಯಗ್ನಿಮಸ್ಯ ಮೇ ದ್ಯಾವಾಪೃಥಿವೀ** (ಋ.ಸ. ೨-೩೨-೧) **ಇತಿ ತಿಸ್ರಃ** ಎಂಬ ಸೂತ್ರದಲ್ಲಿ (ಆ. ೭-೭) ಈ ವಿಷಯವು ವಿವರಿಸಲ್ಪಟ್ಟಿರುವುದು.

॥ ಓಂ ॥

## ಸೂಕ್ತ—೩೫

॥ ಮಂಡಲ—೧ ॥ ಅನುವಾಕ—೭ ॥ ಸೂಕ್ತ—೩೫ ॥

॥ ಅಷ್ಟಕ— ೧ ॥ ಅಧ್ಯಾಯ— ೩ ॥ ವರ್ಗ—೬, ೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧—೧೧ ॥

॥ ಋಷಿಃ— ಹಿರಣ್ಯಸ್ತೂಪ ಆಂಗಿರಸಃ ॥

॥ ದೇವತಾ— ೧. ಅಗ್ನಿರ್ಮಿತ್ರಾವರುಣೌ ರಾತ್ರೀ ಸವಿತಾ । ೨-೧೧. ಸವಿತಾ ॥

॥ ಛಂದಃ— ೧–೯, ಜಗತೀ । ೨– ೮, ೧೦, ೧೧ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಹ್ವಯಾಮ್ಯಗ್ನಿಂ ಪ್ರಥಮಂ ಸ್ವಸ್ತಯೇ ಹ್ವಯಾಮಿ ಮಿತ್ರಾವರು-
ಣಾವಿಹಾವಸೇ ।
ಹ್ವಯಾಮಿ ರಾತ್ರೀಂ ಜಗತೋ ನಿವೇಶನೀಂ ಹ್ವಯಾಮಿ ದೇವಂ
ಸವಿತಾರಮೂತಯೇ ॥೧॥

॥ ಪದಪಾಠಃ ॥

ಹ್ವಯಾಮಿ । ಅಗ್ನಿಂ । ಪ್ರಥಮಂ । ಸ್ವಸ್ತಯೇ । ಹ್ವಯಾಮಿ । ಮಿತ್ರಾವ-
ರುಣೌ । ಇಹ । ಅವಸೇ ।
ಹ್ವಯಾಮಿ । ರಾತ್ರೀಂ । ಜಗತಃ । ನಿऽವೇಶನೀಂ । ಹ್ವಯಾಮಿ । ದೇವಂ ।
ಸವಿತಾರಂ । ಊತಯೇ ॥ ೧ ॥

॥ ಸಾಯಣಭಾಷ್ಯಂ ॥

**ಸ್ವಸ್ತಯೇಽಸ್ಮಾಕಮವಿನಾಶಾಯ । ಸ್ವಸ್ತೀತ್ಯವಿನಾಶನಾಮ । ನಿ. ೩-೨೧ । ಇತಿ ಯಾಸ್ಕಃ । ಪ್ರಥಮಮಾದಾವಗ್ನಿಂ ಹ್ವಯಾಮಿ । ಇಹಾಸ್ಮಿನ್ಕರ್ಮಣ್ಯವಸೇಽಸ್ಮದ್ರಕ್ಷಣಾಯ ಮಿತ್ರಾವರುಣೌ ಹ್ವಯಾಮಿ । ಜಗತೋ ಜಂಗಮಸ್ಯ ಪ್ರಾಣಿಜಾತಸ್ಯ ನಿವೇಶನೀಮುಪವೇಶನಹೇತುಭೂತಾಂ ರಾತ್ರೀಂ ರಾತ್ರಿದೇವತಾಂ ಹ್ವಯಾಮಿ । ಜಂಗಮಾಃ ಸರ್ವೇ ಪ್ರಾಣಿನೋ ದಿವಸೇ ಸ್ವಸ್ವವ್ಯಾಪಾರಾನ್ಕೃತ್ವಾ ಸ್ವಸ್ವಗೃಹೇ ರಾತ್ರಾವುಪವಿಶಂತೀತಿ ಪ್ರಸಿದ್ಧಂ । ಊತಯೇಽಸ್ಮದ್ರಕ್ಷಣಾರ್ಥಂ ಸವಿತಾರಂ ದೇವಂ ಹ್ವಯಾಮಿ ॥ ಮಿತ್ರಾವರುಣೌ । ದೇವತಾದ್ವಂದ್ವೇ ಚೇತಿ ಪೂರ್ವಪದಸ್ಯಾನಙಾದೇಶಃ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ । ರಾತ್ರೀಂ । ರಾತ್ರೇಶ್ಚಾಜಸೌ । ಪಾ. ೪-೧-೩೧ । ಇತಿ ಙೀಪ್ । ನಿವೇಶನೀಂ । ನಿವಿಶಂತ್ಯಸ್ಯಾಮಿತಿ ನಿವೇಶನೀ । ಕರಣಾಧಿಕರಣಯೋಶ್ಚೇತಿ ಲ್ಯುಟ್ । ಟಿಡ್ಢಾಣಞಿತ್ಯಾದಿನಾ । ಪಾ. ೪-೧-೧೫ । ಙೀಪ್ । ಊತಯೇ ಅವತೇಃ ಕ್ತಿನಿ ಜ್ವರತ್ವರೇತ್ಯಾದಿನಾ ವಕಾರಸ್ಯೋಪಧಾಯಾಶ್ಚ ಊಟ್ । ಊತಿಯೂತೀತ್ಯಾದಿನಾ ಕ್ತಿನ ಉದಾತ್ತತ್ವಂ ॥**

॥ ಪದಾರ್ಥಃ ॥

**ಪ್ರಥಮಂ**—ಮೊದಲು । **ಸ್ವಸ್ತಯೇ**— ತಮಗೆ ನಾಶವಿಲ್ಲದಿರುವಿಕೆಗಾಗಿ (ನಮ್ಮ ಕ್ಷೇಮಕ್ಕಾಗಿ)। **ಅಗ್ನಿಂ**— ಅಗ್ನಿದೇವತೆಯನ್ನು । **ಹ್ವಯಾಮಿ**— (ಪ್ರಾರ್ಥಿಸಿ) ಕರೆಯುತ್ತೇನೆ । **ಇಹ**— ಈ ಯಜ್ಞ ಕರ್ಮದಲ್ಲಿ । **ಅವಸೇ**— ನಮ್ಮ ರಕ್ಷಣೆಗಾಗಿ । **ಮಿತ್ರಾವರುಣೌ**— ಮಿತ್ರಾವರುಣರನ್ನು । **ಹ್ವಯಾಮಿ**— ಕರೆಯುತ್ತೇನೆ । **ಜಗತಃ**—ಚರಾತ್ಮಕವಾದ ಪ್ರಪಂಚಕ್ಕೆ । **ನಿವೇಶನೀಂ**— ವಿಶ್ರಾಂತಿದಾಯಕಳಾದ । **ರಾತ್ರೀಂ**— ರಾತ್ರಿದೇವತೆಯನ್ನು । **ಹ್ವಯಾಮಿ**— ಕರೆಯುತ್ತೇನೆ । **ಊತಯೇ**— ರಕ್ಷಣಾರ್ಥವಾಗಿ । **ಸವಿತಾರಂ ದೇವಂ**— ಸೂರ್ಯದೇವನನ್ನು । **ಹ್ವಯಾಮಿ**— ಕರೆಯುತ್ತೇನೆ.

॥ ಭಾವಾರ್ಥ ॥

ಈ ಯಜ್ಞದಲ್ಲಿ ಮೊದಲು ನಮ್ಮ ಕ್ಷೇಮಪಾಲಕನಾದ ಅಗ್ನಿಯನ್ನೂ, ಅನಂತರ ರಕ್ಷಕರಾದ ಮಿತ್ರಾವರುಣರನ್ನೂ ಕರೆಯುತ್ತೇನೆ. ನಮ್ಮ ಶಾಂತಿಪಾಲನೆಗಾಗಿ ಸಕಲ ಚರಾತ್ಮಕವಾದ ಜಗತ್ತಿಗೆ ವಿಶ್ರಾಂತಿಯನ್ನು ಕೊಡುವ ರಾತ್ರಿದೇವತೆಯನ್ನೂ, ನಮ್ಮ ರಕ್ಷಣೆಗಾಗಿ ಜಗದ್ರಕ್ಷಕನಾದ ಸೂರ್ಯದೇವನನ್ನೂ ಕರೆಯುತ್ತೇನೆ.

English Translation

I invoke Agni first for our welfare ; I invoke Mitra and Varuna in this sacrifice for protection ; I invoke Night whobr ings rest to the world ; I invoke the divine Savitri for my protection.

॥ ವಿಶೇಷವಿಷಯಗಳು ॥

ಈ ಸೂಕ್ತಕ್ಕೆ ಸವಿತೃವೇ ದೇವತೆಯಾಗಿದ್ದರೂ ಮೊದಲನೆಯ ಋಕ್ಕಿನಲ್ಲಿ ಪೀಠಿಕಾರೂಪವಾಗಿ ಅಗ್ನಿ, ಮಿತ್ರಾವರುಣರು, ರಾತ್ರಿ, ಬಳಿಕ ಸವಿತೃ ಎಂಬ ದೇವತೆಗಳನ್ನು ಸ್ತೋತ್ರಮಾಡಲಾಗಿದೆ.

**ಸ್ವಸ್ತಯೇ—ಸ್ವಸ್ತ್ಯಯನಾಯ । ಸ್ವಸ್ತೀತಿ ಅವಿನಾಶಿನಾಮ । ಅವಿನಾಶಿನಃ ಅರ್ಥಸ್ಯ ನಾಮ । ಅಸ್ತಿಃ ಅಯಂ ಅಭಿಪೂಜಿತಃ ಸುಪೂರ್ವಃಸನ್ನುಚ್ಯತೇ ಸು=ಅಸ್ತಿ=ಸ್ವಸ್ತಿ ಇತಿ ॥** ಸ್ವಸ್ತಿ ಎಂದರೆ ವಿನಾಶರಹಿತವಾದದ್ದು, ಶೋಭನಕರವಾದ, ಮಂಗಳಕರವಾದ ಇತ್ಯಾದ್ಯರ್ಥಗಳನ್ನು ಹೇಳಬಹುದು.

**ಮಿತ್ರಾವರುಣೌ—** ಮಿತ್ರಾವರುಣರನ್ನು; ಮಿತ್ರಾವರುಣರಿಗೂ ಅಹೋರಾತ್ರಿಗಳಿಗೂ ಸಂಬಂಧವಿದೆ. ತೈತ್ತಿರೀಯಬ್ರಾಹ್ಮಣದಲ್ಲಿ—ಮೈತ್ರಂ ವಾ ಅಹಃ । ವಾರುಣೀ ರಾತ್ರಿಃ ಎಂದರೆ ಮಿತ್ರನು ಹಗಲಿನ ಸ್ವರೂಪವು, ವರುಣನು ರಾತ್ರಿಯ ಸ್ವರೂಪವು ಎಂದು ಹೇಳಿದೆ.

**ರಾತ್ರೀಂ ಜಗತೋ ನಿವೇಶನೀಂ—** ಹಗಲಿನಲ್ಲಿ ಸಮಸ್ತಪ್ರಾಣಿಗಳೂ ತಮ್ಮ ತಮ್ಮ ವ್ಯಾಪಾರಾದಿಗಳಲ್ಲಿ ತೊಡಗಿರುವವು ರಾತ್ರಿಕಾಲದಲ್ಲಿ ತಮ್ಮ ವ್ಯವಹಾರಾದಿಗಳಿಂದ ಬಳಲಿ ವಿಶ್ರಾಂತಿಯನ್ನು ಅಪೇಕ್ಷಿಸುವವು. ಆದುದರಿಂದ ಇಲ್ಲಿ ಜಗತ್ತಿಗೆ ಎಂದರೆ ಜಗತ್ತಿನಲ್ಲಿರುವ ಪ್ರಾಣಿಗಳಿಗೆ ವಿಶ್ರಾಂತಿಯನ್ನು ನೀಡುವ ರಾತ್ರಿಯೆಂದರ್ಥವು.

**ದೇವಂ ಸವಿತಾರಂ—** ದೇವಂ ಎಂದರೆ ಪ್ರಕಾಶಮಾನನಾದ, ಕಾಂತಿಯಿಂದ ಬೆಳಗುತ್ತಿರುವ, bright, shining & c. ಸವಿತಾರಂ— ಸವಿತೃವನ್ನು (ಸೂರ್ಯನನ್ನು) ಎಂದರ್ಥವು. ಸಾಧಾರಣವಾಗಿ ಸವಿತೃಶಬ್ದದ ಜತೆಯಲ್ಲಿ ಇದಕ್ಕೆ ವಿಶೇಷಣವಾಗಿ ದೇವಶಬ್ದವು ಇದ್ದೇ ಇರುವುದು.

॥ ವ್ಯಾಕರಣಪ್ರಕ್ರಿಯಾ ॥

**ಮಿತ್ರಾವರುಣೌ**—ಮಿತ್ರಶ್ಚ ವರುಣಶ್ಚ ಎಂದು ದ್ವಂದ್ವಸಮಾಸ. ಮಿತ್ರ, ವರುಣ ಎರಡು ಪದಗಳೂ ದೇವತಾವಾಚಗಳು, **ದೇವತಾದ್ವಂದ್ವೇ ಚ** (ಪಾ. ಸೂ. ೬-೩-೨೬) ದೇವತಾವಾಚಕಪದಗಳಿಗೆ ದ್ವಂದ್ವಸಮಾಸ ಬಂದಿದ್ದರೆ ಅಲ್ಲಿ ಉತ್ತರಪದದ ಹಿಂದೆ ಇರುವುದಕ್ಕೆ ಆನಙ್, ಬರುತ್ತೆ ಎಂದು ಆನಙ್ ಮಿತ್ರಾನ್‌ವರುಣಾ **ನಲೋಪಃ ಪ್ರಾತಿಪದಿಕಾಂತಸ್ಯ** ಎಂದು ನಕಾರಕ್ಕೆ ಲೋಪ, **ದೇವತಾದ್ವಂದ್ವೇ ಚ** (ಪಾ. ಸೂ. ೬-೨-೧೪) ದೇವತಾವಾಚಕ ದ್ವಂದ್ವಸಮಾಸದಲ್ಲಿ ಪೂರ್ವೋತ್ತರ ಪದಗಳೆರಡಕ್ಕೂ ಒಟ್ಟಿಗೆ ಪ್ರಕೃತಿಭಾವ ಬರುತ್ತೆ ಎಂದು ಸಮಾಸ ಬಂದ ಮೇಲೂ ಮೊದಲಿದ್ದ ಸ್ವರವೇ ಬರುತ್ತೆ. ಮಿತ್ರಶಬ್ದವು ಪುಲ್ಲಿಂಗ, ಪ್ರಾತಿಪದಿಕಸ್ವರದಿಂದ ಅಂತೋದಾತ್ತ, **ಕೃವೃದಾರಿಭ್ಯ ಉನನ್** (ಉ. ಸೂ. ೩-೫೩) ಎಂದು ಉನನ್ ಪ್ರತ್ಯಯಾಂತವಾದ್ದರಿಂದ ನಿತ್ಸ್ವರದಿಂದ ಆದ್ಯುದಾತ್ತ ವರುಣಶಬ್ದ.

**ರಾತ್ರೀಮ್—ರಾಶದಿಭ್ಯಾಂ ತ್ರಿಪ್** (ಉ. ಸೂ. ೪-೫೦೭) ರಾ ದಾನೇ, ಶದ್ಲೃ ಶಾತನೇ ಇವುಗಳಮುಂದೆ ತ್ರಿಪ್ ಬರುತ್ತೆ ಎಂದು ತ್ರಿಪ್ ಪ್ರತ್ಯಯ. ಪ್ರತ್ಯಯವು ಪಿತ್ತಾದ್ದರಿಂದ **ಅನುದಾತ್ತೌ ಸುಪ್ಪಿತೌ** ಎಂದು ಅನುದಾತ್ತ. **ರಾತ್ರೇಶ್ಚಾಜಸೌ** (ಪಾ. ಸೂ. ೪-೧-೩೧) ನ ಜಸಿಃ-ಅಜಸಿಃ, ತಸ್ಮಿನ್ ಎಂದು ವಿಗ್ರಹ, ಇಲ್ಲಿ ಇಕಾರ

ಉಚ್ಚಾರಣಾರ್ಥ, ಛಂದಸ್ಸಿನಲ್ಲಿ ಜಸ್ ವಿಷಯದಲ್ಲಿಲ್ಲದ ರಾತ್ರಿ ಶಬ್ದದ ಮುಂದೆ ಜೀಪ್ ಬರುತ್ತೆ ಎಂದು ಜೀಪ್, ಇದೂ ಅನುದಾತ್ತ. ರಾತ್ರಿ+ಈ, **ಯಸ್ಯೇತಿಚ** ಎಂದು ಇಕಾರಲೋಪ, ಈ ರೀತಿಯಲ್ಲಿ ಆದ್ಯುದಾತ್ತ ರಾತ್ರೀಶಬ್ದ. ಇದರ ಮುಂದೆ ಅಮ್, **ಅಮಿ ಪೂರ್ವಃ** ಎಂದು ಪೂರ್ವರೂಪ, ಅನುದಾತ್ತಗಳ ಸ್ಥಾನದಲ್ಲಿ ಅಂತರ್ಯತಃ ಅನುದಾತ್ತವಾದ ಏಕಾದೇಶ, **ಉದಾತ್ತಾದನುದಾತ್ತಸ್ಯ—**, ಎಂದು ಈಕಾರ ಸ್ವರಿತ.

**ನಿವೇಶನೀಮ್**—ನಿವಿಶನ್ತಿ ಅಸ್ಯಾಂ ಎಂದು ವಿಗ್ರಹ. **ಕರಣಾಧಿಕರಣಯೋಶ್ಚ** (ಪಾ. ಸೂ. ೩-೩-೧೧೭) ಕರಣ, ಅಧಿಕರಣ ಎಂಬ ಅರ್ಥಗಳಲ್ಲಿ ಧಾತುವಿನ ಮುಂದೆ ಲ್ಯುಟ್ ಬರುತ್ತೆ ಎಂದು ಅಧಿಕರಣಾರ್ಥದಲ್ಲಿ ಲ್ಯುಟ್, ಅಧಿಕರಣ ಎಂದರೆ ಆಧಾರ, ವಿಶ ಪ್ರವೇಶನೇ ಧಾತು, ವಿಶ್+ಯು, **ಯುವೋರನಾಕೌ** (ಪಾ. ಸೂ. ೭-೧-೧) ಎಂದು ಅನ ಆದೇಶ ಯುಗೆ ಬರುತ್ತೆ. ಲಘೂಪಧಗುಣ, ನಿ, ಉಪಸರ್ಗ ನಿವೇಶನ ಎಂದಾಗುತ್ತೆ, ಲ್ಯುಟ್ ಪ್ರತ್ಯಯ ಟಿತ್, **ಟಿಡ್ಢಾಣಞ್ದ್ವಯಸಚ್ದಘ್ನಞ್ ಮಾತ್ರಚ್ತಯಪ್ಠಕ್ ಠಞ್ಕಞ್ಕ್ವರಪಃ** (ಪಾ. ಸೂ. ೪-೧-೧೫) ಉಪಸರ್ಜನವಾಗದೆ ಇರುವ ಯಾವ ಟಿದಾದಿಗಳಿವೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಅಕಾರಾಂತ ಪ್ರಾತಿ ಪದಿಕದ ಮುಂದೆ ಸ್ತ್ರೀತ್ವ ತೋರುವಾಗ ಜೀಪ್ ಬರುತ್ತೆ ಎಂದು ಜೀಪ್ ಬರುವುದು. ಉಪಸರ್ಜನ ಎಂದರೆ ವಿಶೇಷಣ, ನಿವೇಶನ+ಈ. ಅಕಾರಲೋಪ.

**ಊತಯೇ**—ಅವ ರಕ್ಷಣೇ–ಕ್ತಿನ್, **ಜ್ವರತ್ವರ—**, (ಪಾ ಸೂ. ೬-೪-೨೦) ಎಂದು ಉಪಧಾವಕಾರಗಳಿಗೆ ಊಠ್, **ಊತಿಯೂತಿ**—(ಪಾ. ಸೂ. ೩-೩-೯೭) ಎಂದು ಕ್ತಿನ್ ಉದಾತ್ತ. **ಏಕಃಪೂರ್ವಪರಯೋಃ** (ಪಾ ಸೂ. ೬-೧-೮೪) ಎಂಬ ಸೂತ್ರದಲ್ಲಿ **"ವ್ಯಾಕರಣೇಪಿ ಹ್ಯನ್ಯತ್ರ ದ್ವಯೋಃ ಸ್ಥಾನಿನೋರೇಕ ಆದೇಶಃ"** ಎಂಬ ವಾರ್ತಿಕ ವಿವರಣೆಯ ಕಾಲದಲ್ಲಿ "ವ್ಯಾಕರಣೇಽಪಿ ಹ್ಯನ್ಯತ್ರ ದ್ವಯೋಃ ಸ್ಥಾನಿನೋರೇಕ ಆದೇಶೋ ಭವತಿ ಜ್ವರತ್ವರಸ್ರಿವ್ಯವಿಮವಾಮುಪಧಾಯಾಶ್ಚ" ಎಂಬ ಭಾಷ್ಯದಲ್ಲಿ ಎರಡು ಸ್ಥಾನಿಗಳಿಗೆ ಒಂದೇ ಆದೇಶ ಬರುವುದು ಎಂದಿದೆ. "ಇಹ ತಾವತ್ ಜ್ವರತ್ವರಸ್ರಿವ್ಯವಿಮವಾಮುಪಧಾಯಾಶ್ಚೇತಿ। ಸ್ಯಾಂದ್ವಾವೂಠೌ ನಾಸ್ತಿ ದೋಷಃ। ಸವರ್ಣದೀರ್ಘತ್ವೇನ ಸಿದ್ಧಮ್" ಎಂಬ ಭಾಷ್ಯದಲ್ಲಿ ಎರಡು ಸ್ಥಾನಿಗಳಿಗೆ ಎರಡು ಆದೇಶಗಳು ಬರುವುವು ಎಂಬ ಪಕ್ಷವೂ ಸ್ಪಷ್ಟವಾಗಿದೆ. ॥ ೧ ॥

॥ ಸಂಹಿತಾಪಾಠಃ ॥

ಆ ಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ।
ಹಿರಣ್ಯಯೇನ ಸವಿತಾ ರಥೇನಾ ದೇವೋ ಯಾತಿ ಭುವನಾನಿ ಪಶ್ಯನ್ ॥ ೨ ॥

॥ ಪದಪಾಠಃ ॥

ಆ । ಕೃಷ್ಣೇನ । ರಜಸಾ । ವರ್ತಮಾನಃ । ನಿऽವೇಶಯನ್ । ಅಮೃತಂ ।
ಮರ್ತ್ಯಂ । ಚ ।
ಹಿರಣ್ಯಯೇನ । ಸವಿತಾ । ರಥೇನ । ಆ । ದೇವಃ । ಯಾತಿ । ಭುವನಾನಿ ।
ಪಶ್ಯನ್ ॥ ೨ ॥

॥ ಸಾಯಣಭಾಷ್ಯಂ ॥

ಸವಿತಾ ಸೂರ್ಯಃ ಕೃಷ್ಣೇನ ರಜಸಾ ಕೃಷ್ಣವರ್ಣೇನ ಲೋಕೇನ । ಕೃಷ್ಣಂ ಕೃಷ್ಯತೇರ್ನಿಕೃಷ್ಟೋ ವರ್ಣಃ । ನಿ. ೨-೨೦ । ಇತಿ ಯಾಸ್ಕಃ । ಲೋಕಾ ರಜಾಂಸ್ಯುಚ್ಯಂತೇ । ನಿ. ೪-೧೯ । ಇತಿ ಚ । ಅಂತರಿಕ್ಷ-ಲೋಕೋ ಹಿ ಸೂರ್ಯಗಮನಾತ್ಪುರಾ ಕೃಷ್ಣವರ್ಣೋ ಭವತಿ । ತೇನಾಂತರಿಕ್ಷಮಾರ್ಗೇಣಾ ವರ್ತ-ಮಾನಃ ಪುನಃಪುನರಾಗಚ್ಛನ್ ಅಮೃತಂ ದೇವಂ ಮರ್ತ್ಯಂ ಮನುಷ್ಯಂ ಚ ನಿವೇಶಯನ್ ಸ್ವಸ್ವಸ್ಥಾನೇऽವ-ಸ್ಥಾಪಯನ್ । ಯದ್ವಾ । ಅಮೃತಂ ಮರಣರಹಿತಃ ಪ್ರಾಣಂ ಮರಣಸಹಿತಂ ಶರೀರಂ ಚ ನಿವೇಶಯನ್ । ತಥಾ ಚಾರಣ್ಯಕಕಾಂಡೇ ಅಮರ್ತ್ಯೋ ಮರ್ತ್ಯೇನಾ ಸಯೋನಿರಿತ್ಯೇತಸ್ಯ ಮಂತ್ರಭಾಗಸ್ಯ ವ್ಯಾಖ್ಯಾನರೂಪೇ ಬ್ರಾಹ್ಮಣೇ ಯಥೋಕ್ತೋऽರ್ಥೋऽವಗಮ್ಯತೇ । ಮರ್ತ್ಯಾನಿ ಹೀಮಾನಿ ಶರೀರಾಣಿ ಅಮೃತೈಷಾ ದೇವತಾ । ಐ. ಆ. ೨-೧-೮ । ಇತಿ । ಯಥೋಕ್ತಗುಣೋಪೇತಃ ಸವಿತಾ ದೇವೋ ಭುವನಾನಿ ಸರ್ವಾನ್ ಲೋಕಾನ್ಪಶ್ಯನ್ ಅವೇಕ್ಷಮಾಣಃ । ಪ್ರಕಾಶಯನ್ನಿತ್ಯರ್ಥಃ । ಹಿರಣ್ಯಯೇನ ಸುವರ್ಣನಿರ್ಮಿತೇನ ರಥೇನಾ ಯಾತಿ । ಅಸ್ಮತ್ಸಮೀಪಮಾಗಚ್ಛತಿ ॥ ಅಮೃತಂ । ಮೃತಂ ಮರಣಂ ನಾಸ್ತ್ಯಸ್ಯೇತಿ ಬಹುವ್ರೀಹೌ ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ । ಮರ್ತ್ಯಂ । ಮರ್ತೇ ಭವಂ । ಭವೇ ಛಂದಸೀತಿ ಯತ್ । ಯತೋऽನಾವ ಇತ್ಯಾದ್ಯುದಾತ್ತತ್ವಂ । ಹಿರಣ್ಯಯೇನ । ಋತ್ವ್ಯವಾಸ್ತ್ವ್ಯೇತ್ಯಾದಿ-ನಾ। ಪಾ. ೬-೪-೧೭೫ । ಮಯಟೋ ಮಕಾರಲೋಪೋ ನಿಪಾತಿತಃ । ಯಸ್ಯೇತಿ ಲೋಪೇ ಪ್ರತ್ಯಯಸ್ವರಃ। ಭುವನಾನಿ । ಭೂ ಸತ್ತಾಯಾಂ । ಭೂಧೂಸೂಭ್ರಸ್ಜಿಭ್ಯಶ್ಛಂದಸಿ । ಉ. ೨-೮೦ । ಇತಿ ಕ್ಯುನ್ಪ್ರತ್ಯಯಃ । ಯೋರನಾದೇಶ ಉವಙಾದೇಶಃ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ದೇವಃ**—ಪ್ರಕಾಶಮಾನನಾದ । **ಸವಿತಾ**—ಸವಿತೃ ದೇವತೆಯು । **ಕೃಷ್ಣೇನ**—ಅಂಧಕಾರಮಯನಾದ । **ರಜಸಾ**—ಗಗನ ಲೋಕದಿಂದ (ಆಕಾಶಮಾರ್ಗದಿಂದ) । **ಆ ವರ್ತಮಾನಃ**—ಪುನಃ ಪುನಃ ಸಂಚರಿಸುತ್ತ । **ಅಮೃತಂ**—ಮರಣರಹಿತನಾದ ದೇವತೆಯನ್ನೂ । **ಮರ್ತ್ಯಂ**—ಮೃತಿಗೀಡಾದ ಮಾನವನನ್ನೂ । **ನಿವೇಶಯನ್**

–(ಅವನವನ ಕರ್ತವ್ಯದಲ್ಲಿ) ಇರಿಸುತ್ತ । **ಹಿರಣ್ಯಯೇನ**—ಸುವರ್ಣನಿರ್ಮಿತವಾದ । **ರಥೇನ**—ರಥದಲ್ಲಿ । ಕುಳಿತು **ಭುವನಾನಿ**—(ನಾನಾ) ಲೋಕಗಳನ್ನು । **ಪಶ್ಯನ್**—ನೋಡುತ್ತ (ಪ್ರಕಾಶಪಡಿಸುತ್ತ) । **ಆ ಯಾತಿ**—(ನಮ್ಮ) ಸಮೀಪಕ್ಕೆ ಬರುತ್ತಾನೆ.

॥ ಭಾವಾರ್ಥ ॥

ಸಕಲ ಲೋಕಕ್ಕೂ ಬೆಳಕನ್ನು ಕೊಡತಕ್ಕ ಸವಿತೃದೇವತೆಯು ಅಂಧಕಾರಮಯವಾದ ಗಗನಮಂಡಲದಲ್ಲಿ ಪುನಃ ಪುನಃ ಸಂಚರಿಸುತ್ತ ಸಕಲ ದೇವತೆಗಳನ್ನೂ, ಮಾನವರನ್ನೂ ಅವರವರ ಕರ್ತವ್ಯಸ್ಥಾನದಲ್ಲಿ ಇರಿಸುತ್ತಾನೆ. ಚಿನ್ನದಿಂದ ಮಾಡಿದ ರಥದಲ್ಲಿ ಕುಳಿತುಕೊಂಡು ನಾನಾಲೋಕಗಳನ್ನು ವೀಕ್ಷಿಸಿ ಪ್ರಕಾಶಪಡಿಸುತ್ತ ನಮ್ಮ ಸಮೀಪಕ್ಕೆ ಬರುತ್ತಿದ್ದಾನೆ.

English Translation

Travelling through dark space (firmament) arousing martals and immortals, the divine Savitri come in his golden chariot beholding the several worlds

॥ ವಿಶೇಷವಿಷಯಗಳು ॥

ಈ ಋಕ್ಕನ್ನು ಸಂಧ್ಯಾವಂದನ ಕಾಲದಲ್ಲಿ ಸೂರ್ಯನನ್ನುದ್ದೇಶಿಸಿ ಕೊಡುವ ಅರ್ಘ್ಯಪ್ರದಾನಮಂತ್ರವನ್ನಾಗಿ ಉಪಯೋಗಿಸುವುದು ರೂಢಿಯಾಗಿದೆ. ತೈತ್ತಿರೀಯಸಂಹಿತೆಯಲ್ಲಿ ಕೃಷ್ಣೇನ ಎಂಬ ಶಬ್ದಕ್ಕೆ ಬದಲಾಗಿ ಸತ್ಯೇನ ಎಂಬ ಶಬ್ದವಿರುವುದು.

**ಕೃಷ್ಣೇನ ರಜಸಾ—ಕೃಷ್ಣವರ್ಣೇನ ಲೋಕೇನ** । ಸೂರ್ಯೋದಯವಾಗುವುದಕ್ಕೆ ಮುಂಚೆ ಕತ್ತಲೆಯು ವ್ಯಾಪಿಸಿರುವುದು. ಸೂರ್ಯನು ಆ ಕತ್ತಲೆಯಿಂದ ಕೂಡಿದ ಲೋಕಗಳಲ್ಲಿ (ಅಂತರಿಕ್ಷಾದಿಲೋಕಗಳಲ್ಲಿ) ಸಂಚಾರ ಮಾಡಿ ಆ ಕತ್ತಲೆಯನ್ನು ಹೋಗಲಾಡಿಸುವನು. ಕೃಷ್ಣೇನ ಎಂದರೆ ಅಂಧಕಾರದಿಂದ ಆವೃತವಾದ ಎಂದರ್ಥವು. ರಜಸಾ ಎಂದರೆ ಲೋಕದ ಮಾರ್ಗವಾಗಿ (ನಿ. ೪–೧೯)

**ಅಮೃತಂ, ಮರ್ತ್ಯಂ**—ಅಮೃತ ಎಂದರೆ ಮರಣರಹಿತರಾದ ದೇವತೆಗಳು, ಮರ್ತ್ಯ ಎಂದರೆ ಸಾವಿಗೀಡಾಗುವ ಮನುಷ್ಯರು.

**ನಿವೇಶಯನ್**—ರಾತ್ರಿಯಲ್ಲಿದ್ದ ಕತ್ತಲೆಯನ್ನು ಹೋಗಲಾಡಿಸಿ ದೇವತೆಗಳನ್ನೂ, ಮನುಷ್ಯರನ್ನೂ ಅವರವರ ಉದ್ಯಮಗಳಲ್ಲಿ ತೊಡಗುವಂತೆ ಮಾಡುತ್ತಾ ಎಂದರ್ಥವು.

**ಹಿರಣ್ಯಯೇನ**— ಸುವರ್ಣಮಯವಾದ ; ಸೂರ್ಯನ ಅಥವಾ ಸವಿತೃವಿನ ರಥವು ಹಿರಣ್ಯಮಯವಾದು ದೆಂದು ವರ್ಣಿಸುವ ರೂಢಿ ಇದೆ. ಏಕೆಂದರೆ ಸೂರ್ಯೋದಯ ಕಾಲದಲ್ಲಿಯೂ, ಸೂರ್ಯಾಸ್ತಮಯ ಕಾಲದಲ್ಲಿಯೂ ಸೂರ್ಯನು (ಚಿನ್ನದ ಕಾಂತಿಯಂತೆ) ಪ್ರಕಾಶಮಾನವಾದ ಅರುಣಕಿರಣಗಳಿಂದ ಆವೃತನಾಗಿರುವುದರಿಂದ ಸೂರ್ಯನ ರಥವು ಹಿರಣ್ಮಯವೆಂದು ಋಷಿಗಳು ವರ್ಣಿಸುವರು.

॥ ವ್ಯಾಕರಣಪ್ರಕ್ರಿಯಾ ॥

**ಅಮೃತಮ್**—ನ ವಿದ್ಯತೇ ಮೃತಂ ಯಸ್ಯ ಸಃ, ತಂ ಎಂದು ವಿಗ್ರಹ. ಯಾವನಿಗೆ ಮರಣವಿಲ್ಲವೋ ಅವನು ಎಂದರ್ಥ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂಬುದನ್ನು ಬಾಧಿಸಿ **ನಞಸುಭ್ಯಾಂ ಜರಮರಮಿತ್ರಮೃತಾಃ** (ಪಾ. ಸೂ. ೬-೨-೧೧೬) ನಞ್‌ನ ಮುಂದೆ ಇರುವ ಈ ಪದಗಳು ಬಹುವ್ರೀಹಿಯಲ್ಲಿ ಆದ್ಯುದಾತ್ತಗಳಾಗುವುವು ಎಂದು ಆದ್ಯುದಾತ್ತ.

**ಮರ್ತ್ಯಮ್**—**ಹಸಿಮೃಗ್ರಿಣ್ವಾಮಿದಮಿಲೂಪೂಧುರ್ವಿಭ್ಯಸ್ತನ್** (ಉ. ಸೂ. ೩-೩೬೬) ಹಸೇ ಹಸನೇ, ಮೃಜ್ ಪ್ರಾಣತ್ಯಾಗೇ, ಗ್ರಾ ನಿಗರಣೇ, ಇಣ್ ಗತೌ, ವಾ ಗತಿಗಂಧನಯೋಃ, ಅಮ ಗತ್ಯಾದಿಷು, ದಮು ಉಪಶಮೇ, ಲೂಞ್ ಛೇದನೇ, ಪೂಞ್ ಪವನೇ, ಧುರ್ವೀ ಹಿಂಸಾಯಾಂ ಈ ಹತ್ತುಧಾತುಗಳ ಮುಂದೆ ತನ್ ಪ್ರತ್ಯಯ ಬರುತ್ತೆ ಎಂದು ತನ್, **ತಿತುತ್ರತ ....** ಎಂದು ಇಟ್‌ಗೆ ಪ್ರತಿಷೇಧ, ಗುಣ ರಪರತ್ವ, ಮರ್ತ, ಮರ್ತೋ ಭೂಲೋಕಸ್ತತ್ರ ಭವೋ ಮರ್ತ್ಯಃ । ದಿಗಾದೇರಾಕೃತಿಗಣತ್ವಾದ್ಯತ್, ಎಂದು ತತ್ವಬೋಧಿನಿಯಲ್ಲಿದೆ. **ದಿಗಾದಿಭ್ಯೋ ಯತ್** (ಪಾ. ಸೂ ೪-೩-೫೪) ಎಂದು ಯತ್ ಬರುತ್ತೆ. ಇಲ್ಲಿ **ಭವೇ ಛಂದಸಿ** (ಪಾ ಸೂ. ೪-೪-೧೧೦) ಸಪ್ತಮ್ಯಂತ ಸಮರ್ಥದ ಮುಂದೆ ಭವ ಎಂಬ ಅರ್ಥದಲ್ಲಿ ಯತ್ ಬರುತ್ತೆ ಎಂದು ಯತ್‌ಪ್ರತ್ಯಯ, ಭೂಲೋಕದಲ್ಲಿ ಹುಟ್ಟಿದವರು ಎಂದ ಅರ್ಥ. **ಯತೋಽನಾವಃ**, ಎಂಬುದರಿಂದ ಆದ್ಯುದಾತ್ತ ಬರುತ್ತೆ.

**ಹಿರಣ್ಯಯೇನ**—**ಋತ್ವ್ಯವಾಸ್ತ್ವ್ಯವಾಸ್ತ್ವಮಾಧ್ವೀ ಹಿರಣ್ಯಯಾನಿ ಛಂದಸಿ** (ಪಾ. ಸೂ ೬-೪-೧೭೫) ಋತು ಶಬ್ದದ ಮುಂದೆ ಭವಾರ್ಥದಲ್ಲಿ ಯತ್ ಬಂದಾಗ ಯಣಾದೇಶವು ನಿಪಾತಿಸಲ್ಪಡುತ್ತೆ. ವಾಸು ಶಬ್ದದ ಮುಂದೆ ಯತ್ ಮತ್ತು ಅಣ್ ಪ್ರತ್ಯಯಗಳು ಬಂದಾಗ ಯಣ್ ನಿಪಾತಿಸಲ್ಪಡುತ್ತೆ. ಮಧುಶಬ್ದದ ಮುಂದೆ ಅಣ್ ಬಂದಾಗ ಸ್ತ್ರೀಲಿಂಗದಲ್ಲಿ ಯಣಾದೇಶವು ನಿಪಾತಿಸಲ್ಪಡುತ್ತೆ, ಹಿರಣ್ಯಸ್ಯ ವಿಕಾರಃ ಎಂದು ವಿಗ್ರಹವಾದರೆ ಮಯಟ್ ಪ್ರತ್ಯಯ ಬರುತ್ತೆ. ಇಲ್ಲಿ ಮಯಟ್ ಪ್ರತ್ಯಯದ ಮ್‌ಗೆ ಲೋಪವು ನಿಪಾತಿಸಲ್ಪಡುತ್ತೆ. ಹಿರಣ್ಯ। ಅಯ, **ಯಸ್ಯೇತಿ ಚ** (ಪಾ ಸೂ. ೬-೪-೧೪೮) ಈಕಾರತದ್ಧಿತಗಳು ಪರದಲ್ಲಿದ್ದರೆ ಭಸಂಜ್ಞಕಾಂಗಾವಯವವಾದ ಇಕಾರ ಅಕಾರಗಳಿಗೆ ಲೋಪಬರುತ್ತೆ ಎಂದು ಅಕಾರಕ್ಕೆ ಲೋಪ, ಅಯ ಎಂಬುದು **ಆದ್ಯುದಾತ್ತಶ್ಚ** ಎಂಬ ಪ್ರತ್ಯಯಸ್ವರ ದಿಂದ ಆದ್ಯುದಾತ್ತವಾಗುತ್ತೆ, ಇಲ್ಲಿ ಕೌಮುದೀಕಾರರು ಮಶಬ್ದಕ್ಕೆ ಅಂದರೆ ಮ್+ಅ ಎಂಬ ಸಮುದಾಯಕ್ಕೆ ಲೋಪ ವನ್ನು ಹೇಳಿರುವರು ಈ ಪಕ್ಷದಲ್ಲಿ ಹಿರಣ್ಯ+ಯ ಎಂದಿರುವಾಗ, **ಯಸ್ಯೇತಿ ಚ** ಎಂದು ಲೋಪವು ಪ್ರಾಪ್ತವಾದರೆ ಮಲೋಪಕ್ಕೆ ಅಸಿದ್ಧತ್ವ ಬರುವುದರಿಂದ ಅದನ್ನು ವಾರಣೆಮಾಡಬೇಕು. **ಅಂಗವೃತ್ತೇ ಪುನರ್ವೃತ್ತಾವವಿಧಿಃ** ಎಂಬ ಪರಿಭಾಷೆಯಿಂದ **ಅಕೃತ್ಸಾರ್ವಧಾತುಕಯೋರ್ದೀರ್ಘಃ** ಎಂದು ಬರುವ ದೀರ್ಘಕ್ಕೆ ವಾರಣೆಮಾಡಬೇಕು.

ಇಷ್ಟಾಗರೂ ಇಷ್ಟವಾದ ಸ್ವರವು ಸಿದ್ಧಿಸುವುದಿಲ್ಲ. ಈ ಪಕ್ಷದಲ್ಲಿ ಮಲೋಪವು ಅಸಿದ್ಧವಾಗುವುದರಿಂದ **ಯಸ್ಯೇತಿ ಚ** ಲೋಪವು ಹೇಗೆ ಬರುವುದಿಲ್ಲವೋ ಹಾಗೆಯೇ **ಹ್**ಗೆ ಲೋಪ ಬಂದಾಗಲೂ ಅದಕ್ಕೆ ಅಸಿದ್ಧತ್ವ ಬರುವುದರಿಂದ **ಯಸ್ಯೇತಿ ಚ** ಎಂಬುದರಿಂದ ಲೋಪ ಬರಲಾರದು, ಏವಂಚ ಇಲ್ಲಿ ಪರರೂಪವನ್ನು ಹೇಳಿ **ಏಕಾದೇಶ—**, ಎಂಬುದರಿಂದ ಅದು ಉದಾತ್ತ ಎಂದು ಹೇಳುವುದು ಉಚಿತ, (ಋ. ಸಂ. ೧-೭-೨) ರಲ್ಲಿ ವೇದಭಾಷ್ಯದಲ್ಲಿ ಇದೇ ರೀತಿ ಪ್ರಕ್ರಿಯೆಯು ಉಕ್ತವಾಗಿದೆ.

**ಭುವನಾನಿ—**ಭೂ ಸತ್ತಾಯಾಂ ಧಾತು, **ಭೂಸೂಧೂಭ್ರಸ್ಜಿಭ್ಯಶ್ಛಂದಸಿ** (ಉ. ಸೂ. ೨-೩೪) ಭೂ ಸತ್ತಾಯಾಂ, ಷೂಜ್ ಪ್ರಾಣಿಪ್ರಸವೇ, ಧೂಞ್ ಕಂಪನೇ, ಭ್ರಸ್ಜ ಪಾಕೇ ಈ ಧಾತುಗಳ ಮುಂದೆ ಕ್ಯುನ್ ಬರುತ್ತೆ ಎಂದು ಕ್ಯುನ್, ಪ್ರತ್ಯಯದಲ್ಲಿ ಯು ನಿಲ್ಲುತ್ತೆ. ಅದಕ್ಕೆ ಅನಾದೇಶ ಭೂ+ಅನ **ಅಚಿಶ್ನುಧಾತು—** (ಪಾ. ಸೂ. ೬-೪-೭೭) ಎಂದು ಉವಙಾದೇಶ, ಪ್ರತ್ಯಯನಿತ್, ಆದ್ದರಿಂದ ಆದ್ಯುದಾತ್ತ ಬರುತ್ತೆ. ॥ ೨ ॥

॥ ಸಂಹಿತಾಪಾಠಃ ॥

ಯಾತಿ ದೇವಃ ಪ್ರವತಾ ಯಾತ್ಯುದ್ವತಾ ಯಾತಿ ಶುಭ್ರಾಭ್ಯಾಂ ಯಜತೋ ಹರಿಭ್ಯಾಂ।
ಆ ದೇವೋ ಯಾತಿ ಸವಿತಾ ಪರಾವತೋಽಪ ವಿಶ್ವಾ ದುರಿತಾ ಬಾಧಮಾನಃ। ॥ ೩ ॥

॥ ಪದಪಾಠಃ ॥

ಯಾತಿ । ದೇವಃ । ಪ್ರಽವತಾ । ಯಾತಿ । ಉತ್ಽವತಾ । ಯಾತಿ । ಶುಭ್ರಾಭ್ಯಾಂ । ಯಜತಃ । ಹರಿಽಭ್ಯಾಂ ।

ಆ । ದೇವಃ । ಯಾತಿ । ಸವಿತಾ । ಪರಾಽವತಃ । ಅಪ । ವಿಶ್ವಾ । ದುಃಽ-
ಇತಾ । ಬಾಧಮಾನಃ ॥ ೩ ॥

॥ ಸಂಹಿತಾಪಾಠಃ ॥

ದೇವೋ ದೀಪ್ಯಮಾನಃ ಸವಿತಾ ಪ್ರವತಾ ಪ್ರವಣವತಾ ಮಾರ್ಗೇಣ ಯಾತಿ। ಗಚ್ಛತಿ। ತಥೋದ್ವ-ತೋತ್ಕೃಷ್ಟೇನೋರ್ಧ್ವದೇಶಯುಕ್ತೇನ ಮಾರ್ಗೇಣ ಯಾತಿ। ಉದಯಾನಂತರಂ ಆ ಮಧ್ಯಾಹ್ನ-ಮೂರ್ಧ್ವೋ ಮಾರ್ಗಃ। ತತ ಉಪರಿ ಆ ಸಾಯಂ ಪ್ರವಣೋ ಮಾರ್ಗ ಇತಿ ವಿವೇಕಃ। ತಥಾ ಯಜತೋ ಯಷ್ಟವ್ಯಃ ಸ ದೇವಃ ಶುಭ್ರಾಭ್ಯಾಂ ಶ್ವೇತಾಭ್ಯಾಂ ಹರಿಭ್ಯಾಮಶ್ವಾಭ್ಯಾಂ ಯಾತಿ। ದೇವಯಜನದೇಶೇ ಗಚ್ಛತಿ। ಸವಿತಾ ದೇವೋ ವಿಶ್ವಾ ದುರಿತಾ ಸರ್ವಾಣಿ ಪಾಪಾನ್ಯಪ ಬಾಧಮಾನೋ ವಿನಾಶಯನ್ ಪರಾ-ವತೋ ದೂರದೇಶಾತ್। ಪರಾವತ ಇತಿ ದೂರನಾಮಸು ಪಠಿತತ್ವಾತ್। ತಾದೃಶಾದ್ದ್ಯುಲೋಕಾದಾ-ಯಾತಿ। ಯಾಗದೇಶ ಆಗಚ್ಛತಿ॥ ಪ್ರವತಾ। ವನ ಷಣ ಸಂಭಕ್ತೌ। ಅಸ್ಮಾತ್ಪ್ರಪೂರ್ವಾತ್ಕ್ವಿಪ್। ಗಮಾದೀನಾಮಿತಿ ವಕ್ತವ್ಯಂ। ಪಾ. ೬-೪-೪೦-೧। ಇತ್ಯನುನಾಸಿಕಲೋಪಃ। ತತಸ್ತುಕ್। ಕೃದುತ್ತರ-ಪದಪ್ರಕೃತಿಸ್ವರತ್ವಂ। ಉದ್ವತಾ। ಉತ್ಪೂರ್ವಾದ್ವನತೇಃ ಪೂರ್ವವತ್ಪ್ರಕ್ರಿಯಾ। ಯಜತಃ। ಭೃಮೃದೃಶೀ-ತ್ಯಾದಿನಾ। ಉ. ೩-೧೧೦। ಯಜತೇಃ ಕರ್ಮಣ್ಯತಚ್‌ಪ್ರತ್ಯಯಃ। ವಿಶ್ವಾ ದುರಿತಾ। ಉಭಯತ್ರ ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ॥

॥ ಪ್ರತಿಪದಾರ್ಥ ॥

**ದೇವಃ**— ಪ್ರಕಾಶಮಾನನಾದ ಸವಿತೃವು। **ಉದ್ವತಾ**— (ಉದಯದಿಂದ ಮಧ್ಯಾಹ್ನ ಪರ್ಯಂತ-ವಾಗಿ) ಊರ್ಧ್ವಗಮನವುಳ್ಳ ಮಾರ್ಗದಿಂದಲೂ। **ಪ್ರವತಾ**— (ಮಧ್ಯಾಹ್ನಪ್ರಭೃತಿ ಸಾಯಂಕಾಲ ಪರ್ಯಂತ) ಅಧೋಗಮನವುಳ್ಳ ಮಾರ್ಗದಿಂದಲೂ। **ಯಾತಿ**— ಹೋಗುತ್ತಾನೆ (ಸಂಚರಿಸುತ್ತಾನೆ)। **ಯಾತಿ**— ಸಂಚರಿಸು ತ್ತಾನೆ। **ಯಜತಃ**— ಪೂಜಾರ್ಹನಾದ ಅವನು। **ಶುಭ್ರಾಭ್ಯಾಂ**— ಬೆಳ್ಳಗಿರುವ। **ಹರಿಭ್ಯಾಂ**— ಕುದುರೆಗಳಿಂದ। **ಯಾತಿ**— ಸಂಚರಿಸುತ್ತಾನೆ। **ದೇವಃ**— ಪ್ರಕಾಶಮಾನನಾದ। **ಸವಿತಾ**— ಸವಿತೃವು। **ವಿಶ್ವಾ**—ಸಕಲವಾದ **ದುರಿತಾ**— ಪಾಪಗಳನ್ನು। **ಅಪಬಾಧಮಾನಃ**— ನಾಶಪಡಿಸುತ್ತ। **ಪರಾವತಃ**— ದೂರಪ್ರದೇಶದಿಂದ। **ಆ ಯಾತಿ**— (ಈ ಯಜ್ಞಭೂಮಿಗೆ) ದಯಮಾಡಿಸುತ್ತಾನೆ.

ಭಾವಾರ್ಥ

ಪ್ರಕಾಶಮಾನನಾದ ಸವಿತೃವಿನ ಸಂಚಾರವು ಉದಯದಿಂದ ಮಧ್ಯಾಹ್ನಪರ್ಯಂತವಾಗಿ ಊರ್ಧ್ವಗಮನ ದಿಂದಲೂ ಮತ್ತು ಮಧ್ಯಾಹ್ನದಿಂದ ಸಾಯಂಕಾಲ ಪರ್ಯಂತ ಅಧೋಗಮನದಿಂದಲೂ ಆಗುತ್ತಿದೆ. ಅಲ್ಲೆಲ್ಲ ಅವನು

ಶ್ವೇತಾಶ್ವಗಳಿಂದ ಸಂಚರಿಸುತ್ತಾನೆ. ಪೂಜಾರ್ಹನಾದ ಅವನು ಸಕಲ ಪಾಪಗಳನ್ನೂ ನಾಶಪಡಿಸುತ್ತ ದೂರದಿಂದ ನಮ್ಮ ಈ ಯಜ್ಞಭೂಮಿಗೆ ದಯಮಾಡುತ್ತಾನೆ.

English Translation

The divine Savitri travels by an upward path; then he travels by a downward path; deserving worship he journeys with two white horses; he comes hither from a distance removing all sins (of true worshippers)

॥ ವಿಶೇಷವಿಷಯಗಳು ॥

ಸೂರ್ಯನು ಉದಯಿಸುವಾಗ ಪೂರ್ವದಿಕ್ಕಿನಲ್ಲಿ ಅಂತರಿಕ್ಷದ ಕೆಳಭಾಗದಲ್ಲಿ ಉದಯಿಸುವನು ಬಳಿಕ ಮಧ್ಯಾಹ್ನಕಾಲಕ್ಕೆ ಅಂತರಿಕ್ಷದ ಮಧ್ಯಭಾಗಕ್ಕೆ (ಎತ್ತರವಾದ ಪ್ರದೇಶಕ್ಕೆ) ಬಂದು ಬಳಿಕ ಸಾಯಂಕಾಲದ ಹೊತ್ತಿಗೆ ಕೆಳಕ್ಕೆ ಇಳಿಯುತ್ತಾ ಪಶ್ಚಿಮ ದಿಕ್ಕಿನಲ್ಲಿ ಅಸ್ತಂಗತನಾಗುವನು. ಈ ವಿಷಯವನ್ನೇ ಈ ಋಕ್ಕಿನಲ್ಲಿ ಹೇಳಿದೆ.

**ಪ್ರವತಾ—ಪ್ರಕರ್ಷೇಣ ಗಚ್ಛತಾ** ವೇಗವಾಗಿ ಹೋಗುವ ; ಕೆಳಗಿನ ಮಾರ್ಗದಿಂದ

**ಉದ್ವತಾ—ಊರ್ಧ್ವದೇಶಯುಕ್ತೇನ ಮಾರ್ಗೇಣ** ಎತ್ತರವಾದ ಮಾರ್ಗದಿಂದ

**ಶುಭ್ರಾಭ್ಯಾಂ ಹರಿಭ್ಯಾಂ—** ಸ್ವಚ್ಛವಾದ ಅಥವಾ ಬಿಳುಪಾದ ಎರಡು ಕುದುರೆಗಳಿಂದ ಎಂದರೆ ಬಿಳಿಯ ಎರಡು ಕುದುರೆಗಳನ್ನು ಕಟ್ಟಿದ ರಥದಲ್ಲಿ ಕುಳಿತು ಎಂದಭಿಪ್ರಾಯವು.

**ಪರಾವತಃ—** ದೂರದಿಂದ

**ವಿಶ್ವಾ ದುರಿತಾ ಬಾಧಮಾನಃ—** ಸಮಸ್ತ ತೊಂದರೆಗಳನ್ನು ಅಥವಾ ಪಾಪಗಳನ್ನು ಪರಿಹರಿಸುತ್ತಾ.

॥ ವ್ಯಾಕರಣಪ್ರಕ್ರಿಯಾ ॥

**ಪ್ರವತಾ—** ವನ ಷಣ ಸಂಭಕ್ತೌ ಎಂದು ವನ ಧಾತುವು ಪಠಿತವಾಗಿದೆ. **ಗಮಃಕ್ವೌ** (ಪಾ.ಸೂ. ೬-೪-೪೦) ಕ್ವಿಪ್ ಪರದಲ್ಲಿರುವಾಗ ಗಮ್ ಧಾತುವಿನ ಅನುನಾಸಿಕಕ್ಕೆ ಲೋಪಬರುತ್ತೆ ಎಂಬಲ್ಲಿ **ಗಮಾದೀನಾಮಿತಿ ವಕ್ತವ್ಯಂ** ಗಮ್ ಧಾತುವಿನ ಅನುನಾಸಿಕಕ್ಕೆ ಮಾತ್ರ ಲೋಪವನ್ನು ಹೇಳಿದರೆ ಸಾಲದು. ಗಮ್ ಮೊದಲಾದ ಇನ್ನೂ ಅನೇಕ ಧಾತುಗಳ ಅನುನಾಸಿಕಕ್ಕೆ ಕ್ವಿಪ್ ಪರದಲ್ಲಿರುವಾಗ ಲೋಪ ಬರುತ್ತೆ ಎಂದು ಹೇಳಬೇಕು ಎಂದು ವಾರ್ತಿಕ ಇದೆ. **ಉಕ್ತಾನುಕ್ತದುರುಕ್ತಾನಾಂ ಚಿಂತನಂ ವಾರ್ತಿಕಂ ಮತಂ** ಎಂದು ವಾರ್ತಿಕಕ್ಕೆ ಲಕ್ಷಣ, ವನ್ ಧಾತು ಮುಂದೆ ಕ್ವಿಪ್ ಬಂದಾಗ ಈ ವಾರ್ತಿಕದಿಂದ ನ್ ಗೆ ಲೋಪ, **ಹ್ರಸ್ವಸ್ಯಪಿ ಕೃತಿತುಕ್** (ಪಾ. ಸೂ. ೬-೧-೭೧) ಪಾಣಿ ರಕ್ಕೆ ಇತ್ಸಂಜ್ಞೆ ಬಂದಿರುವ ಕೃತ್ ಪರದಲ್ಲಿದ್ದರೆ ಹ್ರಸ್ವಕ್ಕೆ ಅಂತಾವಯವಾಗಿ ತ್ ಆಗಮ ಬರುತ್ತೆ ಎಂದು ನ್

ಆಗಮ ಬಂದರೆ ವತ್ ಎಂದಾಯಿತು, ಪ್ರ ಉಪಸರ್ಗ ತೃತೀಯಾ ಏಕವಚನ ಟಾಪ್ರತ್ಯಯ, ಪ್ರವತ್ ಎಂಬಲ್ಲಿ ಧಾತುಸ್ವರದಿಂದ ವ ಉದಾತ್ತ ಉಪಸರ್ಗದೊಂದಿಗೆ ಸಮಾಸ ಬಂದಮೇಲೆ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬ ಕೃದುತ್ತರಪದಪ್ರಕೃತಿಸ್ವರದಿಂದ ಅದೇ ನಿಲ್ಲುತ್ತೆ.

**ಉದ್ವತಾ**—ಇಲ್ಲಿ ಪ್ರ ಎಂಬುದಕ್ಕೆ ಬದಲು ಉತ್ ಉಪಸರ್ಗ ಬಂದಿದೆ ಮಿಕ್ಕ ಪ್ರಕ್ರಿಯೆಯು ಹಿಂದಿನಂತೆಯೇ ಆಗುತ್ತೆ.

**ಯಜತಃ**—ಯಜ ದೇವಪೂಜಾದೌ, ಧಾತು. **ಭೃಮೃ ದೃಶಿ ಯಜಿ ಪರ್ವಿ ಪಚ್ಯಮಿ ತಮಿ ನಮಿ ಹರ್ಯಿಭ್ಯೋಽತಚ್** (ಉ. ಸೂ. ೩-೩೯೦) ಎಂದು ಯಜ್ ಧಾತು ಮುಂದೆ ಅತಚ್, ಯಜತ ಎಂದಾಯಿತು.

**ವಿಶ್ವಾ ದುರಿತಾ**—ವಿಶ್ವಾನಿ ದುರಿತಾನಿ ಎಂದರ್ಥ, ದ್ವಿತೀಯಾ ಬಹುವಚನಾಂತಗಳು. **ಜಶ್ಶಸೋಃ ಶಿಃ** ಎಂದು ಬಂದ ಶಿಗೆ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂದು ಲುಕ್, ಸರ್ವನಾಮಸ್ಥಾನವಾದ್ದರಿಂದ ನುಮಾಗಮ ಬಂದು ಉಪಧಾದೀರ್ಘ ಬಂದಿದೆ. ಲುಕ್ ಬಂದ ಮೇಲೆ ನ್‌ಗೆ ಲೋಪ. ॥ ೩ ॥



॥ ಸಂಹಿತಾಪಾಠಃ ॥

ಅಭೀವೃತಂ ಕೃಶನೈರ್ವಿಶ್ವರೂಪಂ ಹಿರಣ್ಯಶಮ್ಯಂ ಯಜತೋ ಬೃಹನ್ತಂ ।
ಆ ಸ್ಥಾದ್ರಥಂ ಸವಿತಾ ಚಿತ್ರಭಾನುಃ ಕೃಷ್ಣಾ ರಜಾಂಸಿ ತವಿಷೀಂ ದಧಾನಃ ॥ ೪ ॥

॥ ಪದಪಾಠಃ ॥

ಅಭಿಽವೃತಂ । ಕೃಶನೈಃ । ವಿಶ್ವಽರೂಪಂ । ಹಿರಣ್ಯಽಶಮ್ಯಂ । ಯಜತಃ । ಬೃಹನ್ತಂ ।

ಆ । ಅಸ್ಥಾತ್ । ರಥಂ । ಸವಿತಾ । ಚಿತ್ರಽಭಾನುಃ । ಕೃಷ್ಣಾ । ರಜಾಂಸಿ ।
ತವಿಷೀಂ । ದಧಾನಃ ॥ ೪ ॥

॥ ಸಾಯಣಭಾಷ್ಯಂ ॥

ಸವಿತಾ ರಥಮಾಸ್ಥಾತ್ । ಆಸ್ಥಿತವಾನ್ । ಆರೂಢವಾನಿತ್ಯರ್ಥಃ । ಕೀದೃಶಂ । ಅಭೀವೃತಂ ಅಭಿತೋ ವರ್ತಮಾನಂ । ತಥಾ ಕೃಶನೈರ್ವಿಶ್ವರೂಪಂ ಸುವರ್ಣೇನ ನಾನಾರೂಪಂ । ಕೃಶನಂ ಲೋಹಮಿತಿ ಸುವರ್ಣನಾಮಸು ಪಾಠಾತ್ । ಕ್ವಚಿತ್ಸುವರ್ಣನಿರ್ಮಿತಗಜಪಂಕ್ತಿಃ ಕ್ವಚಿದಶ್ವಪಂಕ್ತಿಃ ಕ್ವಚಿನ್ಮನುಷ್ಯಪಂಕ್ತಿರಿತ್ಯೇವಂ ಬಹುರೂಪತ್ವಂ । ಹಿರಣ್ಯಶಮ್ಯಂ । ಅಶ್ವಾನಾಂ ಸ್ಕಂಧೇಷು ರಥಯೋಜನವೇಲಾಯಾಂ ನಿಯಂತುಂ ಪ್ರಕ್ಷೇಪ್ಯಮಾಣಾಃ ಶಂಕವಃ ಶಮ್ಯಾಃ । ತಾಃ ಸುವರ್ಣಮಯ್ಯೋ ರಥೇ ವರ್ತಂತೇ । ಬೃಹಂತಂ ಪ್ರೌಢಂ । ಕೀದೃಶಃ ಸವಿತಾ । ಯಜತೋ ಯಷ್ಟವ್ಯಃ । ಚಿತ್ರಭಾನುರ್ವಿವಿಧರಶ್ಮಿಯುಕ್ತಃ ಕೃಷ್ಣಾ ರಜಾಂಸ್ಯಂಧಕಾರಯುಕ್ತತಯಾ ಕೃಷ್ಣವರ್ಣಾನ್ ಲೋಕಾನುದ್ದಿಶ್ಯ ತಮೋನಿವಾರಣಾರ್ಥಂ ತವಿಷೀಂ ಬಲಂ ಸ್ವಕೀಯಂ ಪ್ರಕಾಶರೂಪಂ ದಧಾನಃ ॥ ಅಭೀವೃತಂ । ಅಭಿತೋ ವರ್ತತ ಇತ್ಯಭೀವೃತ್ । ವೃತು ವರ್ತನೇ । ಕ್ವಿಪಿ ನಹಿವೃತೀತ್ಯಾದಿನಾ । ಪಾ. ೬-೩-೧೧೬ । ಪೂರ್ವಪದಸ್ಯ ದೀರ್ಘತ್ವಂ । ವಿಶ್ವರೂಪಂ । ವಿಶ್ವಾನಿ ರೂಪಾಣಿ ಯಸ್ಯಾಸೌ ವಿಶ್ವರೂಪಃ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ವ್ಯತ್ಯಯೇನಾಸಂಜ್ಞಾಯಾಮಪಿ ಪೂರ್ವಪದಾಂತೋದಾತ್ತತ್ವಂ । ಹಿರಣ್ಯಶಮ್ಯಂ । ಹರ್ಯ ಗತಿಕಾಂತ್ಯೋಃ । ಹರ್ಯತೇಃ ಕನ್ಯನ್ ಹಿರ ಚ । ಉ. ೫-೪೪ । ಇತಿ ಕನ್ಯನ್ಪ್ರತ್ಯಯೋ ಧಾತೋರ್ಹಿರಾದೇಶಶ್ಚ । ನಿತ್ತ್ವಾದಾದ್ಯುದಾತ್ತತ್ವಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಆಸ್ಥಾತ್ । ತಿಷ್ಠತೇರ್ಲುಙಿ ಗಾತಿಸ್ಥೇತಿ ಸಿಚೋ ಲುಕ್ । ಕೃಷ್ಣಾ । ಕೃಷೇರ್ವರ್ಣೇ । ಉ. ೩-೪ । ಇತಿ ನಕ್ಪ್ರತ್ಯಯಃ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ತವಿಷೀಂ । ತವತಿಃ ಸೌತ್ರೋ ಧಾತುಃ । ತವತೇರ್ಣಿದ್ವಾ । ಉ. ೧-೪೮ । ಇತಿ ಟಿಷಚ್ । ಟಿತ್ತ್ವಾಟ್ಟಿಡ್ಢಾಣಞಿತ್ಯಾದಿನಾ ಙೀಪ್ । ವ್ಯತ್ಯಯೇನಾದ್ಯುದಾತ್ತತ್ವಂ ವೃಷಾದಿತ್ವಾದ್ದ್ರಷ್ಟವ್ಯಂ । ದಧಾನಃ । ಶಾನಚ್ಯಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಯಜತಃ**— ಪೂಜಾರ್ಹನಾದ । **ಚಿತ್ರಭಾನುಃ**— ನಾನಾ ಬಣ್ಣದ ಕಿರಣಗಳಿಂದ ಕೂಡಿದ । **ಸವಿತಾ**— ಸವಿತೃದೇವತೆಯು । **ಕೃಷ್ಣಾ ರಜಾಂಸಿ**— ಅಂಧಕಾರಮಯವಾದ ಲೋಕಗಳನ್ನು ಕುರಿತು (ಅವುಗಳ ಕತ್ತಲನ್ನು ನಾಶಪಡಿಸುವುದಕ್ಕಾಗಿ) । **ತವಿಷೀಂ**—ಪ್ರಕಾಶರೂಪವಾದ ತನ್ನ ಬಲವನ್ನು । **ದಧಾನಃ**—ಹೊಂದಿದವನಾಗಿ । **ಅಭೀವೃತಂ**— ಹತ್ತಿರದಲ್ಲಿರತಕ್ಕ । **ಕೃಶನೈರ್ವಿಶ್ವರೂಪಂ**— ಸುವರ್ಣನಿರ್ಮಿತವಾದ ಗಜಾಶ್ವಾದಿ ಚಿತ್ರಗಳಿಂದ ಬಹುರೂಪವುಳ್ಳ । **ಹಿರಣ್ಯಶಮ್ಯಂ**—ಸ್ವರ್ಣನಿರ್ಮಿತವಾದ ಶಂಕುವಿನಿಂದೊಡಗೂಡಿದ ನೊಗವುಳ್ಳ । **ಬೃಹಂತಂ**— ದೊಡ್ಡದಾದ । **ರಥಂ**— ರಥವನ್ನು । **ಆಸ್ಥಾತ್**— ಹತ್ತಿದ್ದಾನೆ.

॥ಭಾವಾರ್ಥ॥

ಪೂಜಾರ್ಹನಾದ ಸವಿತೃ ದೇವತೆಯು ನಾನಾ ಬಣ್ಣದ ಕಿರಣಗಳಿಂದ ಪ್ರಕಾಶಿಸುತ್ತಾ ತನ್ನ ತೇಜಸ್ಸಿನಿಂದ ಅಂಧಕಾರಮಯವಾದ ಲೋಕಗಳ ತಮಸ್ಸನ್ನು ನಾಶಮಾಡುತ್ತ ಉನ್ನತವಾಗಿಯೂ ಅಶ್ವಸಂಯೋಜನ ಯೋಗ್ಯವಾದ ಚಿನ್ನದ ಶಂಕು ಮತ್ತು ನೊಗಗಳಿಂದ ಕೂಡಿದ್ದಾಗಿಯೂ ಆನೆ, ಕುದುರೆ ಮುಂತಾದ ಸುವರ್ಣನಿರ್ಮಿತವಾದ ನಾನಾಬಗೆಯ ಚಿತ್ರಗಳಿಂದಲಂಕೃತವಾಗಿಯೂ ಇರುವ ತನ್ನ ರಥವನ್ನು ಹತ್ತಿದ್ದಾನೆ.

English Translation

The adorable Savitri of beautiful splendour having power to disperse darkness from the world has mounted his chariot decorated with many kinds of golden ornaments and furnished with great golden yokes.

ವಿಶೇಷ ವಿಷಯಗಳು

ಈ ಋಕ್ಕಿನಲ್ಲಿ ಋಷಿಯು ಸೂರ್ಯನ ರಥವನ್ನು ವರ್ಣಿಸುವನು. ಸೂರ್ಯನ ರಥಕ್ಕೆ ಸುವರ್ಣಮಯವಾದ ಮೂಕೀಮರವಿದೆ. ಮತ್ತೂ ಆ ರಥವನ್ನು ನಾನಾವಿಧ ಸುವರ್ಣಾಲಂಕಾರಗಳಿಂದ ನಿರ್ಮಿಸಿದ್ದಾರೆ ರಥದ ಸುತ್ತಲೂ ಸುವರ್ಣಮಯವಾದ ಗಜಪಂಕ್ತಿ ಅಶ್ವಪಂಕ್ತಿ ಮೊದಲಾದ ಅನೇಕ ಚಿತ್ರದ ಕೆತ್ತನೆಯ ಕೆಲಸಗಳಿಂದ ಮನೋಹರವಾಗಿರುವಂತೆ ನಿರ್ಮಿಸಿದ್ದಾರೆ. ಇಂತಹ ಪ್ರಕಾಶಮಾನವಾದ ರಥವನ್ನು ಸವಿತೃವು ಹತ್ತಿ ಕುಳಿತಿರುವನು.

**ಅಭೀವೃತಂ ಕೃಶನೈಃ ವಿಶ್ವರೂಪಂ**— ಸುವರ್ಣಾದಿಲೋಹಗಳಿಂದ ನಿರ್ಮಿತವಾದ ಅಲಂಕಾರಗಳಿಂದ ಸುತ್ತಲೂ ಆವೃತವಾದ, ಸೂತ್ತಲೂ ಚಿನ್ನದ ಕೆತ್ತನೆಯ ಕೆಲಸಗಳಿಂದ ಕೂಡಿರುವ ಇತ್ಯಾದಿ.

**ಹಿರಣ್ಯಶಮ್ಯಂ— ಅಶ್ವಾನಾಂ ಸ್ಕಂಧೇಷು ರಥಯೋಜನವೇಲಾಯಾಂ ನಿಯಂತುಂ ಪ್ರಕ್ಷೇಪ್ಯಮಾಣಾಃ ಶಂಕವಃ ಶಮ್ಯಾಃ ಸುವರ್ಣಮಯ್ಯೋ ರಥೇ ವರ್ತಂತೇ** ।ಕುದುರೆಗಳನ್ನು ಕಟ್ಟುವುದಕ್ಕಾಗಿ ಇರುವ ಸುವರ್ಣಮಯವಾದ ಮೂಕೀಮರಗಳಿಂದ ಕೂಡಿದ ರಥವು.

**ಚಿತ್ರಭಾನುಃ**—ಅತಿಪ್ರಕಾಶಯುಕ್ತನಾದ, of beautiful spendour.

**ಕೃಷ್ಣಾ ರಜಾಂಸಿ**— ಕತ್ತಲೆಯಿಂದ ಕೂಡಿದ ಲೋಕಗಳು. ಸೂರ್ಯನು ಉದಯಿಸುವುದಕ್ಕೆ ಮುಂಚ ಲೋಕಗಳೆಲ್ಲಾ ಅಂಧಕಾರಮಯವಾಗಿರುವವು. ಸೂಯನು ಉದಯಿಸಿ ಲೋಕಗಳನ್ನು ಪ್ರಕಾಶದಿಂದ ಬೆಳಗುವನು.

**ತವಿಷೀಂ ದಧಾನಃ**— ತನ್ನ ಸಾಮರ್ಥ್ಯದಿಂದ ಪ್ರಕಾಶವನ್ನುಂಟುಮಾಡುತ್ತಾ

### ವ್ಯಾಕರಣಪ್ರಕ್ರಿಯಾ

**ಅಭೀವೃತಮ್**—ಅಭಿತೋ ವರ್ತತೇ ಇತ್ಯಭೀವೃತ್, ಅಭಿ ಉಪಸರ್ಗಪೂರ್ವಕವಾದ ವೃತು ವರ್ತನೇ ಧಾತು ಮುಂದೆ **ಕ್ವಿಪ್ ಚ** ಎಂದು ಕ್ವಿಪ್ ಪ್ರತ್ಯಯ, ತುಗಾಗಮ ಬಂದರೆ ವೃತ್ ಎಂದಾಗುತ್ತೆ. **ನಹಿವೃತಿ ವೃಷಿ ವ್ಯಧಿ ರುಚಿಸಹಿತನಿಷು ಕ್ವೌ** (ಪಾ. ಸೂ. ೬-೩-೧೧೬) ಕ್ವಿಪ್ ಪ್ರತ್ಯಯಾಂತವಾದ ಈ ಧಾತುಗಳು ಪರದಲ್ಲಿದ್ದರೆ ಪೂರ್ವಪದಕ್ಕೆ ದೀರ್ಘಬರುತ್ತೆ ಎಂದು ಅಭಿಗೆ ದೀರ್ಘ ಬರುತ್ತೆ.

**ವಿಶ್ವರೂಪಂ**—ವಿಶ್ವಾನಿ-ಬಹುವಿಧವಾದ, ರೂಪಾಣಿ, ರೂಪಗಳು, ಯಸ್ಯ ಸಃ ಯಾನ ರಥಕ್ಕೆ ಇವೆಯೋ ಅದು ಎಂದು ಅರ್ಥ. **ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ** (ಪಾ. ಸೂ. ೬-೨-೧೦೬) ಬಹುವ್ರೀಹಿಸಮಾದಲ್ಲಿ ಸಂಜ್ಞೆ ತೋರುವಾಗ ಪೂರ್ವಪದವಾದ ವಿಶ್ವಶಬ್ದವು ಅಂತೋದಾತ್ತವಾಗುತ್ತೆ ಎಂದು ವಿಶ್ವಶಬ್ದವು ಅಂತೋದಾತ್ತ ವಾಗುತ್ತದೆ. ಯದ್ಯಪಿ ಇಲ್ಲಿ ಸಂಜ್ಞೆ ತೋರುವುದಿಲ್ಲ. ಆದರೂ ಛಂದಸ್ಸಾದ್ದರಿಂದ ಸಂಜ್ಞೆತೋರದೇ ಇದ್ದರೂ ವ್ಯತ್ಯಸ್ತವಾಗಿ ಈ ಸೂತ್ರ ಪ್ರವರ್ತಿಸುವುದು.

**ಹಿರಣ್ಯಶಮ್ಯಮ್**—ಹರ್ಯ ಗತಿಕಾನ್ತ್ಯೋಃ ಧಾತು, **ಹರ್ಯತೇಃ ಕನ್ಯನ್ ಹಿರಚ್** (ಉ. ಸೂ. ೫-೭೨೨) ಹರ್ಯಧಾತು ಮುಂದೆ ಕನ್ಯನ್ ಪ್ರತ್ಯಯ ಬರುತ್ತೆ. ಪ್ರಕೃತಿಗೆ ಹಿರಚ್ ಆದೇಶ ಬರುತ್ತೆ ಎಂದು ಅರ್ಥ, ಆದೇಶದಲ್ಲಿ ಹಿರ್ ಉಳಿಯುತ್ತೆ, ಚಕಾರಕ್ಕೆ ಇತ್ಸಂಜ್ಞೆ ಬಂದು ಲೋಪ, ಅಕಾರವು ಉಚ್ಚಾರಣಾರ್ಥಕ, ಪ್ರತ್ಯಯದಲ್ಲಿ ಕ್-ನ್‌ಗಳಿಗೆ ಇತ್ಸಂಜ್ಞೆ ಬಂದು ಅನ್ಯ ಎಂದಿಷ್ಟು ನಿಲ್ಲುತ್ತೆ ಹಿರ್+ಅನ್ಯ=ಹಿರನ್ಯ, **ಅಟ್ಕುಪ್ವಾಙ್—**, ಎಂದು ನಕಾರಕ್ಕೆ ಣಕಾರ ಹಿರಣ್ಯ ಎಂದಾಯಿತು, ಇದು ನಿತ್ಸ್ವರದಿಂದ ಆದ್ಯುದಾತ್ತ, ಶಮ್ಯಾಃ ಎಂದರೆ ಕುದುರೆಗಳನ್ನು ಕಟ್ಟುವುದಕ್ಕೆ ಉಪಯೋಗವಾಗುವ ಮೊಳೆಗಳು, ಹಿರಣ್ಯಾಃ ಶಮ್ಯಾಃ ಯಸ್ಮಿನ್ ಸಃ ಎಂದು ಬಹುವ್ರೀಹಿ, ಪೂರ್ವ ಪದ ಪ್ರಕೃತಿಸ್ವರ ಬರುತ್ತೆ.

**ಅಸ್ಥಾತ್**—ಷ್ಠಾ ಗತಿನಿವೃತ್ತೌ ಧಾತು, ಧಾತುವಿನ ಆದಿಯಲ್ಲಿರುವ ಷಕಾರಕ್ಕೆ ಸಕಾರ, ಲುಙ್, ತಿಪ್, ಇಕಾರಲೋಪ, ಚ್ಲಿ, ಸಿಚ್, ಅಡಾಗಮ, ಅಸ್ಥಾ+ಸ್+**ತ್**, **ಗಾತಿಸ್ಥಾ ಘುಪಾಭೂಭ್ಯಃ ಸಿಚಃ ಪರಸ್ಮೈಪದೇಷು** (ಪಾ. ಸೂ. ೨-೪-೭೭) ಇವುಗಳ ಮುಂದೆ ಇರುವ ಸಿಚ್‌ಗೆ ಲುಕ್ ಬರುತ್ತೆ ಎಂದು ಅರ್ಥ. ಗಾ ಎಂಬುದರಿಂದ **ಇಣೋ ಗಾ ಲುಙಿ** (ಪಾ. ಸೂ. ೨-೪-೪೫) ಎಂದು ಇಣ್‌ಧಾತುವಿಗೆ ವಿಹಿತವಾದ ಗಾ ಆದೇಶ ಗ್ರಹಿಸಲ್ಪಡುತ್ತೆ, ಪಾ ಎಂಬುದರಿಂದ ಪಾ ಪಾನೇ ಎಂಬುದಕ್ಕೆ ಗ್ರಹಣ, ಈ ಸೂತ್ರದಿಂದ ಸಿಚ್‌ಗೆ ಲುಕ್, ಆಙ್. ಉಪಸರ್ಗ.

**ಕೃಷ್ಣಾ**—**ಕೃಷೇರ್ವರ್ಣೇ** (ಉ. ಸೂ. ೩-೨೮೪) ವರ್ಣವು ವಾಚ್ಯವಾದಾಗ ಕೃಷ್ ಧಾತು ಮುಂದೆ ನಕ್ ಪ್ರತ್ಯಯ ಬರುತ್ತೆ ಎಂದು ನಕ್, ಕೃಷ್+ನ **ರಷಾಭ್ಯಾಂನೋಣಸ್ಸಮಾನಪದೇ** (ಪಾ. ಸೂ. ೮-೪-೧) ಎಂದು ಎಂದು ನಕಾರಕ್ಕೆ ಣಕಾರ, ನಪುಂಸಕಲಿಂಗವಾದ ಈ ಶಬ್ದದ ಮುಂದೆ ಶಸ್, ಅದಕ್ಕೆ ಶಿ ಆದೇಶ, **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಛಂದಸ್ಸಿನಲ್ಲಿ ಬಹುಲವಾಗಿ ಶಿಗೆ ಲುಕ್ ಬರುತ್ತೆ ಎಂದು ಶಿಗೆ ಲುಕ್, ಇಲ್ಲಿ ನುಮಾಗನು ಉಪಧಾದೀರ್ಘ ನಲೋಪಗಳು ಬರುವುವು.

**ತವಿಷೀಂ**—ತವ ಧಾತುವು ಸೂತ್ರದಲ್ಲಿ ವ್ಯವಹಾರದಿಂದ ಸಿದ್ಧವಾದ ಧಾತು, **ತವತೇರ್ಣಿದ್ವಾ** (ಉ. ಸೂ. ೧-೪೮) ತವ ಧಾತು ಮುಂದೆ ಟಿಷಚ್ ಪ್ರತ್ಯಯ ಬರುತ್ತೆ ಎಂದು ಟಿಷಚ್, ತವ್+ಇಷ, ಪ್ರತ್ಯಯ ಟಿತ್,

**ಟಿಡ್ಢಾಣಞ್**—,(ಪಾ. ಸೂ. ೪-೧-೧೫) ಎಂದು ಙೀಪ್ ಬರುತ್ತೆ. ಪ್ರತ್ಯಯ ಚಿತ್ತಾದ್ದರಿಂದ **ಚಿತಃ** (ಪಾ. ಸೂ. ೬-೧-೧೬೩) **ಚಿತಸ್ಸಪ್ರಕೃತೇರ್ಬಹ್ವಕಜರ್ಥಂ** ಎಂಬುದರಿಂದ ಅಂತೋದಾತ್ತವು ನ್ಯಾಯವಾಗಿ ಬರಬೇಕು. ಆದರೂ ಇದನ್ನು ವೃಷಾದಿಗಣದಲ್ಲಿ ಪಾಠಮಾಡಿಕೊಂಡು **ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ಈ ಗಣ ಪಠಿತ ಶಬ್ದಗಳ ಅಂತವು ಉದಾತ್ತವಾಗುತ್ತೆ ಎಂದು ಅಂತೋದಾತ್ತ ಹೇಳಬೇಕು.

**ದಧಾನಃ**—ಡುಧಾಞ್ ಧಾರಣಪೋಷಣಯೋಃ ಲಟ್, **ಲಟಶ್ಶತೃಶಾನಚೌ**—, ಎಂದು ಶಾನಚ್, **ಜುಹೋತ್ಯಾದಿಭ್ಯಃ ಶ್ಲುಃ** (ಪಾ. ಸೂ. ೨-೪-೭೫) ಎಂದು ಶಪ್‌ಗೆ ಶ್ಲು ಬರುತ್ತೆ. **ಶ್ಲೌ** (ಪಾ. ಸೂ. ೬-೧-೧೦) ಶ್ಲು ಬಂದಿದ್ದರೆ ಧಾತುವಿಗೆ ಎರಡಾವರ್ತಿ ಉಚ್ಚಾರಣೆ ಬರುತ್ತೆ ಎಂದು ದ್ವಿತ್ವ-ಧಾ-ಧಾ+ಆನ, **ಹ್ರಸ್ವಃ** (ಪಾ. ಸೂ. ೭-೪-೫೯) ಅಜಂತವಾದ ಅಭ್ಯಾಸಕ್ಕೆ ಹ್ರಸ್ವಬರುತ್ತೆ ಎಂದು ಹ್ರಸ್ವ. **ಅಭ್ಯಾಸೇಚರ್ಚ** (ಪಾ. ಸೂ. ೮-೪-೫೪) ಪ್ರಕೃತಿಜಶಾಂ ಪ್ರಕೃತಿಜಶಃ, ಪ್ರಕೃತಿಚರಾಂ ಪ್ರಕೃತಿಚರಃ ಎಂದು ಇದೆ, ಇಲ್ಲಿ ಧಕಾರಕ್ಕೆ ಸ್ಥಾನಸಾಮ್ಯದಿಂದ ದಕಾರ ಬರುತ್ತೆ. **ಉಭೇ ಅಭ್ಯಸ್ತಂ** (ಪಾ. ಸೂ. ೬-೧-೫) ಷಾಷ್ಠದ್ವಿತ್ವಪ್ರಕರಣದಲ್ಲಿ ಯಾವುಗಳಿಗೆ ದ್ವಿರುಚ್ಚಾರಣೆಯು ವಿಹಿತವೋ ಅವೆರಡೂ ಸೇರಿ ಅಭ್ಯಸ್ತಸಂಜ್ಞೆಯನ್ನು ಹೊಂದುವುವು ಎಂದು ದಧಾಗೆ ಅಭ್ಯಸ್ತ ಸಂಜ್ಞೆ ಇದೆ, **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಅಭ್ಯಸ್ತಗಳ ಆದಿಯು ಉದಾತ್ತವಾಗುತ್ತೆ ಎಂದು ಆದ್ಯುದಾತ್ತಸ್ವರ ಬರುತ್ತೆ. ॥ ೪ ॥



॥ಸಂಹಿತಾಪಾಠಃ॥

ವಿ ಜನಾಞ್ಛ್ಯಾವಾಃ ಶಿತಿಪಾದೋ ಅಖ್ಯನ್ರಥಂ ಹಿರಣ್ಯಪ್ರಉಗಂ ವಹನ್ತಃ ।
ಶಶ್ವದ್ವಿಶಃ ಸವಿತುರ್ದೈವ್ಯಸ್ಯೋಪಸ್ಥೇ ವಿಶ್ವಾ ಭುವನಾನಿ ತಸ್ಥುಃ ॥

ಪದಪಾಠಃ

ವಿ । ಜನಾನ್ । ಶ್ಯಾವಾಃ । ಶಿತಿಽಪಾದಃ । ಅಖ್ಯನ್ । ರಥಂ । ಹಿರಣ್ಯಽ-ಪ್ರಉಗಂ । ವಹನ್ತಃ ।
ಶಶ್ವತ್ । ವಿಶಃ । ಸವಿತುಃ । ದೈವ್ಯಸ್ಯ । ಉಪಽಸ್ಥೇ । ವಿಶ್ವಾ । ಭುವನಾನಿ । ತಸ್ಥುಃ ॥ ೫ ॥

|| ಸಾಯಣಭಾಷ್ಯಂ ||

**ಶ್ಯಾವಾ ಏತನ್ನಾಮಕಾಃ ಸೂರ್ಯಸ್ಯಾಶ್ವಾಃ । ಶ್ಯಾವಾಃ ಸವಿತುರಿತಿ ನಿಘಂಟಾವುಕ್ತತ್ವಾತ್ । ತೇ ಚ ಶಿತಿಪಾದಃ ಶ್ವೇತೈಃ ಪಾದೈರುಪೇತಾ ಹಿರಣ್ಯಪ್ರಉಗಂ । ರಥಸ್ಯ ಮುಖಮೀಷಯೋರಗ್ರಂ ಯುಗಬಂಧನಸ್ಥಾನಂ ಪ್ರಉಗಮಿತ್ಯುಚ್ಯತೇ । ತಚ್ಚಾತ್ರ ಸುವರ್ಣಮಯಂ । ತದ್ಯುಕ್ತಂ ರಥಂ ವಹಂತೋ ಜನಾನ್ಪ್ರಾಣಿನೋ ವ್ಯಖ್ಯನ್ । ವಿಶೇಷೇಣ ಪ್ರಕಾಶಿತವಂತ ಇತ್ಯರ್ಥಃ । ಶಶ್ವತ್ ಸರ್ವದಾ ವಿಶಃ ಪ್ರಜಾ. ದೈವ್ಯಸ್ಯೇತರದೇವಸಂಬಂಧಿನಃ ಸವಿತುಃ ಪ್ರೇರಕಸ್ಯ ಸೂರ್ಯಸ್ಯೋಪಸ್ಥೇ ಸಮೀಪಸ್ಥಾನೇ ತಸ್ಥುಃ । ಸ್ಥಿತವತ್ಯಃ । ನ ಕೇವಲಂ ಪ್ರಜಾಃ ಕಿಂ ತರ್ಹಿ ವಿಶ್ವಾ ಭುವನಾನಿ ಸರ್ವೇ ಚ ಲೋಕಾಃ ಪ್ರಕಾಶಾಯ ಸೂರ್ಯಸಮೀಪೇ ತಸ್ಥುಃ । ಶಿತಿಪಾದಃ । ಶಿತಯಃ ಶ್ವೇತವರ್ಣಾಃ ಪಾದಾ ಯೇಷಾಂ ತೇ ಶಿತಿಪಾದಾಃ । ಸುಪಾಂ ಸುಲುಗಿತಿ ಜಸಃ ಸುಆದೇಶಃ । ಯದ್ವಾ । ಶಿತಿಃ ಶ್ವೇತವರ್ಣಃ ಸ್ಫಾಟಿಕಾದಿಃ । ಸ ಇವ ಪಾದೋ ಯೇಷಾಂ ತೇ । ಪಾದಸ್ಯ ಲೋಪೋಽಹಸ್ತ್ಯಾದಿಭ್ಯಃ । ಪಾ. ೫-೪-೧೩೮ । ಇತಿ ಸಮಾಸಾಂತಪಾದಶಬ್ದಸ್ಯಾಂತ್ಯಲೋಪಃ । ಉಪಮಾನಾದಿತಿ ಹಿ ತತ್ರಾನುವರ್ತತೇ । ಪಾದಶಬ್ದಸ್ಯ ವೃಷಾದಿತ್ವಾದಾದ್ಯುದಾತ್ತತ್ವಂ । ತಸ್ಯ ಬಹುವ್ರೀಹೌ ಸಮಾಸೇ ಶಿತೇರ್ನಿತ್ಯಾಬಹ್ವಜ್ಬಹುವ್ರೀಹಾವಭಸತ್ । ಪಾ. ೬-೨-೧೩೮ । ಇತ್ಯುತ್ತರಪದಪ್ರಕೃತಿಸ್ವರತ್ವಂ । ಅಖ್ಯನ್ । ಖ್ಯಾತೇರ್ಲುಙ್ಯಸ್ಯತಿವಕ್ತೀತ್ಯಾದಿನಾ ಚ್ಲೇರಙಾದೇಶಃ । ಹಿರಣ್ಯಪ್ರಉಗಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ವಹಂತಃ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರಃ । ದೈವ್ಯಸ್ಯ । ತಸ್ಯೇದಮಿತ್ಯರ್ಥೇ ದೇವಾದ್ಯಞಞೌ । ಪಾ. ೪-೧-೮೫-೩ । ಇತಿ ದೇವಶಬ್ದಾತ್ಪ್ರಾಗ್ದೀವ್ಯತೀಯೋ ಯಞ್ । ತದ್ಧಿತೇಷ್ವಚಾಮಾದೇರಿತ್ಯಾದಿವೃದ್ಧಿಃ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ । ಉಪಸ್ಥೇ । ಆತಶ್ಚೋಪಸರ್ಗ ಇತಿ ಕಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ ||**

|| ಪ್ರತಿಪದಾರ್ಥ ||

**ಶಿತಿಪಾದಃ**— ಬಿಳೀಬಣ್ಣದ ಪಾದಗಳುಳ್ಳ । **ಶ್ಯಾವಾಃ**— ಶ್ಯಾವನಾಮಕಗಳಾದ ಸವಿತೃವಿನ ಕುದುರೆಗಳು । **ಹಿರಣ್ಯಪ್ರಉಗಂ**— ಚಿನ್ನದ ಮೂಕಿಯುಳ್ಳ । **ರಥಂ**— ರಥವನ್ನು । **ವಹಂತಃ**— ಹೊತ್ತುಕೊಂಡು । **ಜನಾನ್**— ಪ್ರಾಣಿಗಳನ್ನು । **ವಿ ಅಖ್ಯನ್**— ಚನ್ನಾಗಿ ಬೆಳಗಿಸಿವೆ. । **ಶಶ್ವತ್**— ಯಾವಾಗಲೂ । **ವಿಶಃ**— ಪ್ರಜೆಗಳೂ (ಮತ್ತು) । **ವಿಶ್ವಾ ಭುವನಾನಿ**— ಸಕಲ ಪ್ರಪಂಚಗಳೂ ಕೂಡ । **ದೈವ್ಯಸ್ಯ**— ಇತರ ದೇವತೆಗಳ ಸಂಬಂಧಿಯಾದ । **ಸವಿತುಃ**— ಜಗತ್ಪ್ರೇರಕನಾದ ಸವಿತೃವಿನ । **ಉಪಸ್ಥೇ**— ಸಮೀಪದಲ್ಲಿ । **ತಸ್ಥುಃ**— ನಿಂತುಕೊಂಡಿವೆ.

ಭಾವಾರ್ಥ

ಶ್ಯಾವನಾಮಕಗಳಾದ ಸೂರ್ಯನ ಕುದುರೆಗಳು ಚಿನ್ನದ ಮೂಕಿಯುಳ್ಳ ರಥವನ್ನು ಹೊತ್ತುಕೊಂಡಿವೆ. ತಮ್ಮ ಕಾಂತಿಯಿಂದ ಪ್ರಾಣಿ ಲೋಕವನ್ನೆಲ್ಲಾ ಬೆಳಗುತ್ತಿವೆ. ಪ್ರಜೆಗಳಾದಿಯಾಗಿ ಸಕಲ ಪ್ರಪಂಚಗಳೂ ಸಹ ಪ್ರಕಾಶಮಾನನಾದ ಮತ್ತು ಜಗತ್ಪ್ರೇರಕನಾದ ಸವಿತೃವಿನ ಸಮೀಪದಲ್ಲಿ ನಿಂತಿವೆ.

## English Translation

Savitri's horses with white legs harnessed to his chariot with a golden yoke have manifested light to mankind for all people and all the worlds are ever in the presence of the divine Savitri.

॥ ವಿಶೇಷ ವಿಷಯಗಳು ॥

**ಶ್ಯಾವಾಃ**— ಸೂರ್ಯನ ಕುದುರೆಗಳಿಗೆ ಶ್ಯಾವಾಶ್ವಗಳೆಂದು ಹೆಸರು. ಶ್ಯಾವಶಬ್ದಕ್ಕೆ ಶ್ಯಾಮವರ್ಣವುಳ್ಳ ಕುದುರೆಗಳೆಂದು ಅರ್ಥವಿದ್ದರೂ ಈ ಸೂಕ್ತದ ಮೂರನೆಯ ಋಕ್ಕಿನಲ್ಲಿ ಸೂರ್ಯನ ಕುದುರೆಗಳು ಶುಭ್ರವಾದ ಬಿಳಿಪಾದ ಬಣ್ಣವುಳ್ಳವುಗಳೆಂದು ಹೇಳಿದೆ. ಇಲ್ಲಿ ಶಿತಿಪಾದಃ ಎಂದರೆ ಬಿಳುಪಾದ ಕಾಲುಗಳು ( with white legs ) ಎಂದು ವರ್ಣಿಸಿರುವುದರಿಂದ ಕುದುರೆಗಳ ಬಣ್ಣವು ಶ್ಯಾಮವರ್ಣ ( brown ) ವುಳ್ಳದ್ದೆಂದು ಹೇಳಬೇಕಾಗುವುದು.

**ಹಿರಣ್ಯಪ್ರಉಗಂ**— ರಥಸ್ಯ ಮುಖಮೀಷಯೋರಗ್ರಂ ಯುಗಬಂಧನಸ್ಥಾನಂ ಪ್ರಉಗಮಿತ್ಯುಚ್ಯತೇ ಪ್ರಉಗವೆಂದರೆ ರಥದ ಮುಂಭಾಗದಲ್ಲಿ ಮೂಕೀಮರವು ರಥವನ್ನು ಸಂಧಿಸುವ ಪ್ರದೇಶ ; ಮೂಕೀಮರದ ಮೂಲಭಾಗ ; ಇದು ಸುವರ್ಣಮಯವಾದುದು- ತೈತ್ತಿರೀಯ ಸಂಹಿತೆಯ ೫-೪-೧೧-೧-೨. ಮತ್ತು ಶತಪತಬ್ರಾಹ್ಮಣ ೧-೧-೨-೯ ; ೩-೫-೩-೪ ಮೊದಲಾದ ಮಂತ್ರಗಳಲ್ಲಿ ಈ ಶಬ್ದಪ್ರಯೋಗವಿದೆ. Pra-uga is apparently equivalent to ಪ್ರಯುಗ, denoting the fore part of the pole of the cart. the part in front of the yoke.

**ಶಿತಿಪಾದಃ—ಶಿತಯಃ ಶ್ವೇತಾವರ್ಣಾಃ ಪಾದಾಃ ಯೇಷಾಂ ತೇ ಶಿತಿಪಾದಾಃ।** ಬಿಳುಪಾದ ಕಾಲುಗಳುಳ್ಳ

**ದೈವ್ಯಸ್ಯ—ಇತರದೇವಸಂಬಂಧಿನಃ ಸವಿತುಃ ; ಪ್ರೇರಕಸ್ಯ ಸೂರ್ಯಸ್ಯ**—ಇತರ ದೇವತೆಗಳ ಸಂಬಂಧವುಳ್ಳ ಅಥವಾ ಇತರ ದೇವತೆಗಳನ್ನು ಪ್ರೇರಿಸುವ ಸೂರ್ಯನ ಎಂದು ಭಾಷ್ಯಕಾರರು ಹೇಳಿರುವರು. ಆದರೆ **ದಿವಿ ಸಂಬಂಧಿನೋ ದೈವ್ಯಃ**—ಸ್ವರ್ಗಸಂಬಂಧವಾದ ಎಂದರೆ ಸ್ವರ್ಗದಲ್ಲಿ (ಅಂತರಿಕ್ಷದಲ್ಲಿ) ಇರುವ ಎಂಬ ಅರ್ಥವು ಚೆನ್ನಾಗಿ ಹೊಂದುವುದು.

ವ್ಯಾಕರಣ ಪ್ರಕ್ರಿಯಾ

**ಶಿತಿಪಾದಃ**—ಶಿತಿಃ ಎಂದರೆ ಬಿಳುಪು, ಶಿತಯಃ=ಬಿಳುಪಾದ, ಪಾದಾಃ=ಕಾಲುಗಳು, ಯೇಷಾಂ ತೇ= ಯಾರಿಗೆ ಇವೆಯೋ ಅವರು, ಎಂದು ಬಹುವ್ರೀಹಿ, ಹೀಗೆ ವಿಗ್ರಹವಾದರೆ ಶಿತಿಪಾದಾಃ ಎಂದಾಗುವುದು ನ್ಯಾಯವಾದುದು. ಇಲ್ಲಿ **ಸುಪಾಂ ಸುಲುಕ್**—, ಎಂಬುದರಿಂದ ಜಸ್‌ಗೆ ಸು ಆದೇಶ ಬರುತ್ತೆ, ಆದ್ದರಿಂದ ಶಿತಿಪಾದಃ ಎಂದು ಏಕವಚನದಂತೆಯೇ ಬಹುವಚನದಲ್ಲಿಯೂ ರೂಪವಾಗುತ್ತೆ, ಇದು ಒಂದು ವಿಧ. **ಸಪ್ತಮ್ಯುಪಮಾನ**

**ಪೂರ್ವಪದಸ್ಯ ಚ ವಾಚ್ಯೋ ವಾ ಚೋತ್ತರಪದಲೋಪಃ** ಎಂದು ಬಹುವ್ರೀಹಿ ಬರುತ್ತೆ. ಶಿತಿಪಾದ ಇವ ಪಾದಃ ಯೇಷಾಂ ತೇ ಎಂದು ವಿಗ್ರಹ. ಸ್ಫಟಿಕಮಯವಾದ ಕಾಲಿನಂತೆ ಇರುವ ಕಾಲುಳ್ಳವರು ಎಂದು ಅರ್ಥ, ಶಿತಿ ಶಬ್ದವು ಬಿಳುಪು ಬಣ್ಣವುಳ್ಳ, ಸ್ಫಟಿಕವಿಕಾರವಾದ ಎಂಬ ಅರ್ಥವನ್ನು ಹೇಳುತ್ತೆ, ಇದರ ಫಲಿತಾರ್ಥವೇ, 'ಶಿತಿಃ ಶ್ವೇತವರ್ಣಃ ಸ್ಫಾಟಿಕಾದಿಃ ಸ ಇವ ಪಾದೋ ಯೇಷಾಂ ತೇ, ಎಂದು ಭಾಷ್ಯದಲ್ಲಿದೆ, **ಪಾದಸ್ಯಲೋಪೋಽಹಸ್ತ್ಯಾದಿಭ್ಯಃ** (ಪಾ. ಸೂ. ೫-೪-೩೮) ಹಸ್ತ್ಯಾದಿಗಣಕ್ಕೆ ಸೇರದೇ ಇರುವ ಉಪಮಾನವಾಚಕದ ಮುಂದೆ ಇರುವ ಪಾದಶಬಕ್ಕೆ ಲೋಪಬರುತ್ತೆ ಅದು ಸಮಾಸಾಂತವಾಗುತ್ತೆ ಎಂಬುದರಿಂದ ಪಾದಶಬ್ದದ ಅಕಾರಕ್ಕೆ ಲೋಪ, ಶಿತಿಪಾದ್ ಎಂದಾಗುತ್ತೆ, ಇದರ ಮುಂದೆ ಜಸ್, **ವೃಷಾದೀನಾಂಚ** (ಪಾ. ಸೂ. ೬೧-೨೦೩) ಎಂಬುದರಿಂದ ಪಾದ ಶಬ್ದವು ಆದ್ಯುದಾತ್ತ. **ಶಿತೇರ್ನಿತ್ಯಾ ಬಹ್ವಜ್ಬಹುವ್ರೀಹಾವಭಸತ್** (ಪಾ. ಸೂ. ೬-೨-೧೩೮) ಬಹುವ್ರೀಹಿ ಸಮಾಸದಲ್ಲಿ ಶಿತಿಶಬ್ದದ ಮುಂದೆ ಇರುವ ನಿತ್ಯವಾಗಿ ಬಹುಸಂಖ್ಯಾಕವಾದ ಅಚ್ಚುಗಳನ್ನು ಹೊಂದದೆ ಇರುವ ಭಸತ್ ಶಬ್ದಭಿನ್ನವಾದ ಉತ್ತರಪದವು ಪ್ರಕೃತಿಸ್ವರವನ್ನು ಹೊಂದುವುದು ಎಂದು ಉತ್ತರಪದಕ್ಕೆ ಪ್ರಕೃತಿಸ್ವರ ಬರುತ್ತೆ.

**ಅಖ್ಯನ್**—ಖ್ಯಾ ಪ್ರಕಥನೇ, ಲುಙ್, ಚ್ಲಿ, **ಅಸ್ಯತಿವಕ್ತಿಖ್ಯಾತಿಭ್ಯೋಽಙ್** (ಪಾ. ಸೂ. ೩-೧-೫೨) ಇವುಗಳ ಮುಂದೆ ಇರುವ ಚ್ಲಿಗೆ ಅಙ್ ಬರುತ್ತೆ ಎಂದು, ಅಙ್, ಅಡಾಗಮ, ಝಿ. ಅನ್ತ್ ಆದೇಶ. ಅಖ್ಯಾ+ಅ+ ಅನ್ತಿ, **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂದು ಅಕಾರಕ್ಕೆ ಲೋಪ, **ಇತಶ್ಚ** (ಪಾ. ಸೂ. ೩-೪-೧೦೦) ಎಂದು ಝಿ ಪ್ರತ್ಯಯದ ಇಕಾರಕ್ಕೆ ಲೋಪ, ಸಂಯೋಗಾಂತಲೋಪ.

**ಹಿರಣ್ಯಪ್ರಉಗಮ್**—ಹಿರಣ್ಯಂ-ಚಿನ್ನದ, ಪ್ರಉಗಂ, ನೊಗ ಕಟ್ಟುವ ಸ್ಥಳವು, ಯಸ್ಯ ಸಃ= ಯಾವು ದಕ್ಕೆ ಇದೆಯೋ ಅದು ಎಂದು ಬಹುವ್ರೀಹಿ **ಹರ್ಯತೇಃ ಕನ್ಯನ್ ಹಿರಚ್** (ಉ ಸೂ. ೫-೭೨) ಎಂದು ಹರ್ಯ ಗತಿ ಕಾನ್ತ್ಯೋಃ ಧಾತು ಮುಂದೆ ಕನ್ಯನ್ ಪ್ರತ್ಯಯ ಬಂದು ಹಿರಣ್ಯ ಶಬ್ದವು ನಿಷ್ಪನ್ನವಾಗಿದೆ. ನಿತ್ಸ್ವರದಿಂದ ಇದು ಆದ್ಯುದಾತ್ತ, ಬಹುವ್ರೀಹಿ ಬಂದಮೇಲೆ ಪೂರ್ವಪದಪ್ರಕೃತಿಸ್ವರ ಬಂದು ಅದೇ ಸ್ವರ ಉಳಿಯುತ್ತೆ.

**ದೈವ್ಯಸ್ಯ**—ದಿವ್ ಧಾತು ಮುಂದೆ ಪಚಾದಿಲಕ್ಷಣವಾದ ಅಚ್‌ಪ್ರತ್ಯಯ ಬಂದು ದೇವ ಎಂದಾಗುತ್ತೆ. **ದೇವಾದ್ಯಞಞೌ** (ಪಾ. ಸೂ. ೪-೧-೮೫-೩) ಪ್ರಾಗ್ದೀವ್ಯತೀಯಾರ್ಥದಲ್ಲಿ ದೇವಶಬ್ದಪ್ರಕೃತಿಕ ಷಷ್ಠ್ಯಂತದ ಮುಂದೆ ಯಞ್ ಅಞ್ ಎಂಬ ಪ್ರತ್ಯಯಗಳು ಬರುವುವು ಎಂದರ್ಥ. ಅಷ್ಟಾಧ್ಯಾಯಿಯಲ್ಲಿ **ಪ್ರಾಗ್ದೀವ್ಯತೋಣ್** (ಪಾ. ಸೂ. ೪-೧-೮೩) ಇಲ್ಲಿಂದ ಹಿಡಿದು **ತೇನದೀವ್ಯತಿ ಖನತಿ ಜಯತಿ ಜಿತಂ** (ಪಾ. ಸೂ. ೪-೪-೨) ಎಂಬ ಸೂತ್ರದವರೆಗೂ ನಿರ್ದಿಷ್ಟವಾದ ಅರ್ಥಗಳಿಗೆ ಪ್ರಾಗ್ದೀವ್ಯತೀಯಾರ್ಥ ಎನ್ನುವರು. **ತಸ್ಯೇದಮ್** (ಪಾ. ಸೂ. ೪-೩-೧೨೦) ಇದು ಪ್ರಾಗ್ದೀವ್ಯತೀಯಾರ್ಥ, ಈ ಅರ್ಥದಲ್ಲಿ ಯಞ್ ಬರುತ್ತೆ. ದೇವಙಸ್‌ಯ, ತದ್ಧಿತಾಂತವಾದ್ದ ರಿಂದ ಪ್ರಾತಿಪದಿಕಸಂಜ್ಞೆ ಬಂದು ಸುಪ್‌ಗೆ ಲುಕ್ ಬರುತ್ತೆ. ದೇವಸ್ಯೇದಂ ಎಂದು ವಿಗ್ರಹ **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಞಿತ್, ಣಿತ್ ಆದ ತದ್ಧಿತಪ್ರತ್ಯಯ ಪರದಲ್ಲಿರುವಾಗ ಅಚ್ಚುಗಳ ಮಧ್ಯೆ ಮೊದಲನೆಯ ಅಚ್ಚಿಗೆ ವೃದ್ಧಿ ಬರುತ್ತೆ ಎಂದು ಏಕಾರಕ್ಕೆ ವೃದ್ಧಿ ಎಂದರೆ ಐಕಾರ ಬರುತ್ತೆ **ಯಸ್ಯೇತಿಚ** ಎಂದು ದೇವಶಬ್ದದ ಅಕಾರಕ್ಕೆ ಲೋಪ ದೈವ್ಯ ಎಂದಾಯಿತು. ಷಷ್ಠ್ಯಂತ ದೈವ್ಯಸ್ಯ. ಞಿತ್ಸ್ವರ ಆದ್ಯುದಾತ್ತ ಬರುತ್ತೆ.

**ಉಪಸ್ಥೇ—ಆತಶ್ಚೋಪಸರ್ಗೇ** (ಪಾ. ಸೂ. ೩-೧-೧೩೬) ಉಪಸರ್ಗವು ಉಪಪದವಾಗಿದ್ದರೆ ಆಕಾರಾಂತ ಧಾತುಮುಂದೆ ತಪ್ರತ್ಯಯ ಬರುತ್ತೆ ಎಂದು ತ ಪ್ರತ್ಯಯ. **ಸುಪಿಸ್ಥಃ** ಎಂಬ ಸೂತ್ರದಲ್ಲಿ ಶೇಖರದಲ್ಲಿ—ಇದಂ ಕೇವಲೋಪಸರ್ಗೇನ **ಆತಶ್ಚೋಪಸರ್ಗೇ** ಇತ್ಯೇವ ಸಿದ್ಧೇ ಕರ್ಮಣ್ಯುಪಪದೇಪಿ ನ **ಆತೋನುಪ—** ಇತ್ಯಾರಂಭಾತ್ ಎಂದಿದೆ. ಆದ್ದರಿಂದಉಪಸರ್ಗ ಮಾತ್ರ ಇರುವ ಕಡೆ **ಸುಪಿಸ್ಥಃ** ಎಂಬುದು ಬರುವುದಿಲ್ಲ. ಉಪಸ್ಥಾ+ಅ, **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಕಿತ್ ಅಥವಾ ಙಿತ್ ಆದ ಅಜಾದ್ಯಾರ್ಧಧಾತುಕ, ಇಡಾಗಮ ಇವು ಪರದಲ್ಲಿದ್ದರೆ ಆಕಾರಕ್ಕೆ ಲೋಪ ಬರುತ್ತೆ ಎಂದು ಆಕಾರಲೋಪ. ॥ ೫ ॥



॥ ಸಾಯಣಭಾಷ್ಯಂ ॥

ತಿಸ್ರೋ ದ್ಯಾವಃ ಸವಿತುರ್ದ್ವಾ ಉಪಸ್ಥಾಁ ಏಕಾ ಯಮಸ್ಯ ಭುವನೇ ವಿರಾಷಾಟ್ ।
ಆಣಿಂ ನ ರಥ್ಯಮಮೃತಾಧಿ ತಸ್ಥುರಿಹ ಬ್ರವೀತು ಯ ಉ ತಚ್ಚಿಕೇತತ್ ॥ ೬ ॥

॥ ಪದಪಾಠಃ ॥

ತಿಸ್ರಃ । ದ್ಯಾವಃ । ಸವಿತುಃ । ದ್ವೌ । ಉಪಽಸ್ಥಾ । ಏಕಾ । ಯಮಸ್ಯ ।
ಭುವನೇ । ವಿರಾಷಾಟ್ ।
ಆಣಿಂ । ನ । ರಥ್ಯಂ । ಅಮೃತಾ । ಅಧಿ । ತಸ್ಥುಃ । ಇಹ । ಬ್ರವೀತು ।
ಯಃ । ಊಁ ಇತಿ । ತತ್ । ಚಿಕೇತತ್ ॥ ೬ ॥

॥ ಸಾಯಣಭಾಷ್ಯ ॥

ದ್ಯಾವಃ ಸ್ವರ್ಗೋಪಲಕ್ಷಿತಾಃ ಪ್ರಕಾಶಮಾನಾ ಲೋಕಾಸ್ತಿಸ್ರಸ್ತ್ರಿಸಂಖ್ಯಾಕಾಃ ಸಂತಿ ॥ ತತ್ರ ದ್ವೌ ಲೋಕೌ ಸವಿತುಃ ಸೂರ್ಯಸ್ಯೋಪಸ್ಥಾ ಸಮೀಪಸ್ಥಾನೇ ವರ್ತೇತೇ । ದ್ಯುಲೋಕಭೂಲೋಕಯೋಃ

ಸೂರ್ಯೇಣ ಪ್ರಕಾಶಿತತ್ವಾತ್ । ಏಕಾ ಮಧ್ಯಮಾ ಭೂಮಿರಂತರಿಕ್ಷಲೋಕೋ ಯಮಸ್ಯ ಭುವನೇ ಪಿತೃಪತೇರ್ಗೃಹೇ ವಿರಾಷಾಟ್ । ವಿರಾನ್ ಗಂತ್ವಾನ್ಸಹತೇ । ಪ್ರೇತಾಃ ಪುರುಷಾ ಅಂತರಿಕ್ಷಮಾರ್ಗೇಣ ಯಮಲೋಕೇ ಗಚ್ಛಂತೀತ್ಯರ್ಥಃ । ಅಮೃತಾಮೃತಾನಿ ಚಂದ್ರನಕ್ಷತ್ರಾದೀನಿ ಜ್ಯೋತೀಂಷಿ ಜಲಾನಿ ವಾಧಿ ತಸ್ಥುಃ । ಸವಿತಾರಮಧಿಗಮ್ಯ ಸ್ಥಿತಾನಿ । ತತ್ರ ದೃಷ್ಟಾಂತಃ । ರಥ್ಯಮಾಣಿಂ ನ । ರಥಾದ್ಬಹಿರಕ್ಷಚ್ಛಿದ್ರೇ ಪ್ರಕ್ಷಿಪ್ತಃ ಕೀಲವಿಶೇಷ ಆಣಿರಿತ್ಯುಚ್ಯತೇ । ರಥಸಂಬಂಧಿನಮಾಣಿಮಧಿಗಮ್ಯ ಯಥಾ ರಥಸ್ತಿಷ್ಠತಿ ತದ್ವತ್ । ಯಸ್ತು ಮಾನವಸ್ತತ್ಸವಿತೃರೂಪಂ ಚಿಕೇತತ್ ಜಾನಾತಿ ಸ ಮಾನವ ಇಹಾಸ್ಮಿನ್ವಿಷಯೇ ಬ್ರವೀತು । ಕಥಯತು । ಕೇನಾಪಿ ವಕ್ತುಮಶಕ್ಯಃ ಸವಿತುರ್ಮಹಿಮೇತ್ಯರ್ಥಃ ॥ ತಿಸ್ರಃ । ತಿಸೃಭ್ಯೋ ಜಸಃ । ಪಾ. ೬-೧-೧೬ । ಇತಿ ವಿಭಕ್ತೇರುದಾತ್ತತ್ವಂ । ದ್ಯಾವ । ಸಂಹಿತಾಯಾಮಾವಾದೇಶೇ ಲೋಪಃ ಶಾಕಲ್ಯಸ್ಯೇತಿ ವಕಾರಲೋಪಃ । ಉಪಸ್ಥಾ । ಆಜಯೋಜಯೋರಾಂ ಚೋಪಸಂಖ್ಯಾನಂ । ಮ. ೭-೧-೩೯-೧ । ಇತಿ ಸಪ್ತಮ್ಯಾ ಆಜಾದೇಶಃ । ಆಜಿಾೕಽನುನಾಸಿಕಶ್ಛಂದಸಿ । ಪಾ. ೬-೧-೧೨೬ । ಇತಿ ಪ್ರಕೃತಿಭಾವಃ । ವಿರಾಷಾಟ್ । ವೃಞ್ ವರಣೇ । ಘಞರ್ಥೇ ಕವಿಧಾನಂ । ಪಾ. ೩-೩-೫೮-೪ । ಇತಿ ಕರ್ಮಣಿ ಕಃ । ಬಹುಲಂ ಛಂದಸಿ । ಪಾ. ೭-೧-೧೦೩ । ಇತೀತ್ವಂ । ತಥಾ ಸತಿ ಪೂರ್ಯಂತೆ ಇತಿ ವಿರಾ ಇತ್ಯುಕ್ತಂ ಭವತಿ । ತಾನ್ಸಹತ ಇತಿ ವಿರಾಷಾಟ್ । ಛಂದಸಿ ಸಹಃ । ಪಾ. ೩-೨-೬೩ । ಇತಿ ಸಹೇರ್ಣ್ವಿಃ । ಸಹೇಃ ಸಾಡಃ । ಪಾ. ೮-೩-೫೬ । ಇತಿ ಷತ್ವಂ । ಅನ್ಯೇಷಾಮಪಿ ದೃಶ್ಯತ ಇತಿ ಪೂರ್ವಪದಸ್ಯ ದೀರ್ಘಃ । ರಥ್ಯಂ । ರಥಸ್ಯೇದಂ ರಥ್ಯಂ । ರಥಾದ್ಯತ್ । ಪಾ. ೪-೩-೧೨೧ । ಇತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಅಮೃತಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಚಿಕೇತತ್ । ಕಿತ ಜ್ಞಾನೇ । ಲೇಟ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಜುಹೋತ್ಯಾದಿತ್ವಾತ್ ಶ್ಲುಃ । ಲಘೂಪಧಗುಣಃ । ಅನುದಾತ್ತೇ ಚ । ಪಾ. ೬-೧-೧೯೦ । ಇತ್ಯಭ್ಯಸ್ತಸ್ಯಾದ್ಯುದಾತ್ತತ್ವಂ । ಯದ್ವೃತ್ತಯೋಗಾದನಿಘಾತಃ ॥ ॥೬॥

ಪ್ರತಿಪದಾರ್ಥ

ದ್ಯಾವಃ— ಸ್ವರ್ಗಾದಿಲೋಕಗಳು । ತಿಸ್ರಃ— ಮೂರು (ಇರುತ್ತವೆ ಅವುಗಳಲ್ಲಿ) । ದ್ಯಾ— ದ್ಯುಲೋಕ ಮತ್ತು ಭೂಲೋಕಗಳೆರಡೂ । ಸವಿತುಃ— ಸವಿತೃವಿನ । ಉಪಸ್ಥಾ— ಹತ್ತಿರದಲ್ಲಿರತಕ್ಕವು. । ಏಕಾ— ಮಧ್ಯದಲ್ಲಿರುವ ಅಂತರಿಕ್ಷಲೋಕವು । ಯಮಸ್ಯ— ಯಮನ । ಭುವನೇ— ಲೋಕಕ್ಕೆ । ವಿರಾಷಾಟ್— ಹೋಗತಕ್ಕವರನ್ನು ಒಯ್ಯತಕ್ಕದ್ದು । ರಥ್ಯಂ— ರಥವು । ಆಣಿಂ ನ— ಇರಚಿಯನ್ನು (ರಥದ ಅಚ್ಚಿನ ರಂಧ್ರಗಳನ್ನು ಅವಲಂಬಿಸಿರುವಂತೆ । ಅಮೃತಾ—ನಾಶರಹಿತಗಳಾದ ಚಂದ್ರನಕ್ಷತ್ರಾದಿ ತೇಜೋರಾಶಿಗಳು । ಅಧಿತಸ್ಥುಃ— (ಸವಿತೃವನ್ನೇ) ಅವಲಂಬಿಸಿವೆ. । ಯಃ—ಯಾವನಾದರೂ ಮಾನವನು । ತತ್— ಈ ಸವಿತೃಸ್ವರೂಪವನ್ನು । ಚಿಕೇತತ್—ಚನ್ನಾಗಿ ತಿಳಿದುಕೊಂಡಿದ್ದೇ ಆದರೆ । ಇಹ— ಈ ವಿಷಯದಲ್ಲಿ । ಬ್ರವೀತು— (ಅವನು) ವರ್ಣಿಸಲಿ. ।

॥ ಭಾವಾರ್ಥ ॥

ಸ್ವರ್ಗಾದಿಲೋಕತ್ರಯಗಳಲ್ಲಿ ದ್ಯುಲೋಕ ಮತ್ತು ಭೂಲೋಕ ಇವೆರಡೂ ಸೂರ್ಯ್ಯನ ಸಮೀಪದಲ್ಲಿವೆ. ಮಧ್ಯದಲ್ಲಿರುವ ಅಂತರಿಕ್ಷಲೋಕವು ಯಮನ ಲೋಕಕ್ಕೆ ಪ್ರೇತಗಳನ್ನೊಯ್ಯತಕ್ಕದ್ದು. ರಥವು ತನ್ನ ಆಧಾರ ಭೂತವಾದ ಇರಚಿಯನ್ನು ಅವಲಂಬಿಸಿರುವಂತೆ ನಾಶರಹಿತಗಳಾದ ಚಂದ್ರ ನಕ್ಷತ್ರಾದಿ ತೇಜೋವಾಹಿಗಳು ಈ ಸವಿತೃ ವನ್ನೇ ಅವಲಂಬಿಸಿವೆ. ಈ ಸವಿತೃವಿನ ಸ್ವರೂಪವನ್ನು ತಿಳಿಯಲು ಮಾನವನಿಂದ ಸಾಧ್ಯವಾಗಲಾರದು. ಯಾವನಿ ಗಾದರೂ ತಿಳಿದಿದ್ದಲ್ಲಿ ಅವನು ಸವಿತೃದೇವತೆಯ ಅತಿಮಾನುಷವಾದ ಸ್ವರೂಪವನ್ನು ವರ್ಣಿಸಲಿ.

## English Translation

There are three heavens ( three worlds ) two are in the proximity of the Savitri ; the remaining one leads men to Yama 's abode ; the immortal stars depend upon Savitri as a car upon the pin of the axle. Let him who knows the greatness of Savitri say so.

### ವಿಶೇಷ ವಿಷಯಗಳು

**ತಿಸ್ರೋ ದ್ಯಾವಃ**— ಮೂರು ಸ್ವರ್ಗಗಳು ಎಂದರೆ ಭೂಲೋಕ, ಅಂತರಿಕ್ಷಲೋಕ, ಸ್ವರ್ಗಲೋಕಗಳು.

**ಸವಿತುರ್ದ್ವಾ ಉಪಸ್ಥಾ**— ಈ ಮೂರುಲೋಕಗಳಲ್ಲಿ ಸೂರ್ಯನು ಸ್ವರ್ಗದಲ್ಲಿದ್ದು ಭೂಮಿಯನ್ನು ಬೆಳ ಗುವುದರಿಂದ ಸ್ವರ್ಗ ಮತ್ತು ಭೂಲೋಕಗಳು ಸೂರ್ಯನ ಸಮೀಪದಲ್ಲಿವೆ ಎಂದು ವರ್ಣಿಸಲಾಗಿದೆ.

**ಯಮಸ್ಯ ಭುವನೇ ವಿರಾಷಾಟ್**—ಪ್ರೇತಾಃ ಪುರುಷಾಃ ಅಂತರಿಕ್ಷಮಾರ್ಗೇಣ ಯಮಲೋಕೇ ಗಚ್ಛಂತಿ । ಮೂರನೆಯದಾದ ಅಂತರಿಕ್ಷಲೋಕದ ಮಾರ್ಗವಾಗಿ ಮೃತರಾದ ಜನರು (ಅಥವಾ ಅವರ ಆತ್ಮಗಳು) ಯಮಲೋ ಕಕ್ಕೆ ಹೋಗುವುದರಿಂದ ಅಂತರಿಕ್ಷವು ಯಮಲೋಕದ ಮಾರ್ಗವೆಂದು ಹೇಳಲ್ಪಟ್ಟಿದೆ.

**ಆಣಿಂ ನ**— ರಥದ ಅಚ್ಚಿನ ತುದಿಗಳಲ್ಲಿ ಚಕ್ರಗಳು ಚಲಿಸುವಾಗ ಬೀಳದಂತೆ ರಂಧ್ರಗಳಲ್ಲಿ ಹಾಕಿರುವ ಕಡಾಣಿಗಳು. ಈ ಕಡಾಣಿಗಳಿಲ್ಲದಿದ್ದರೆ ಚಕ್ರಗಳು ಮತ್ತು ರಥವು ಸರಿಯಾಗಿ ಚಲಿಸದೆ ಬಿದ್ದುಹೋಗುವವು. ಆದು ದರಿಂದ ರಥ ಮತ್ತು ಚಕ್ರಗಳಿಗೆ ಕಡಾಣಿಗಳು ಆಧಾರವಾಗಿರುವಂತೆ ಸೂರ್ಯನು ಭೂಸ್ವರ್ಗಲೋಕಗಳಿಗೆ ಪ್ರಕಾಶ ವನ್ನುಂಟುಮಾಡುತ್ತಾ ಆಧಾರಭೂತವಾಗಿರುವನು ಎಂದಭಿಪ್ರಾಯವು.

**ಅಮೃತಾ— ಅಮೃತಾನಿ ಚಂದ್ರನಕ್ಷತ್ರಾದೀನಿ ಜ್ಯೋತೀಂಷಿ ಜಲಾನಿ ವಾ**—ಅಮೃತಾ ಎಂದರೆ ನಾಶ ವಾಗದ ; ಯಾವಾಗಲೂ ಇರುವ. ಇಲ್ಲಿ ಚಂದ್ರನಕ್ಷತ್ರಾದಿ ಜ್ಯೋತಿರ್ಗ್ರಹಗಳು ಅಥವಾ ಅಮೃತವಾದ ಉದಕವು ಎಂದರ್ಥವು.

**ಇಹ ಬ್ರವೀತು ಯ ಉ ತಚ್ಚಿಕೇತತ್**— ಈ ವಿಷಯವನ್ನು ಮನುಷ್ಯನಾದವನು ತಿಳಿದಿದ್ದರೆ ಹೇಳಲಿ ಎಂದರೆ ಈ ವಿಷಯವು ಅತಿರಹಸ್ಯ ಅಥವಾ ಗಹನವಿಷಯವಾದ್ದರಿಂದ ಯಾರಿಗೂ ತಿಳಿಯದೆಂದಭಿಪ್ರಾಯವು.

|| ವ್ಯಾಕರಣಪ್ರಕ್ರಿಯಾ ||

**ತಿಸ್ರಃ**—**ತ್ರಿಚತುರೋಃ ಸ್ತ್ರಿಯಾಂ ತಿಸೃ ಚತಸೃ** (ಪಾ. ಸೂ. ೭-೨-೯೯) ಎಂದು ತ್ರಿ ಶಬ್ದಕ್ಕೆ ಸ್ತ್ರೀಲಿಂಗದಲ್ಲಿ ತಿಸೃ ಆದೇಶ. ಅಂತೋದಾತ್ತ. ತ್ರಿಶಬ್ದಸ್ಥಾನದಲ್ಲಿ ಬಂದ ಈ ಆದೇಶವು ಸ್ಥಾನಿವದ್ಭಾವದಿಂದ ಅಂತೋದಾತ್ತ, ತಿಸೃ+ಜಸ್, **ಅಚಿ ರ ಋತಃ** (ಪಾ. ಸೂ. ೭-೨-೧೦೦) ಅಚ್ ಪರದಲ್ಲಿರುವಾಗ ತಿಸೃ-ಚತಸೃ ಇವುಗಳ ಋಕಾರಕ್ಕೆ ರೇಫ ಬರುತ್ತೆ ಎಂದು ರೇಫ. ತಿಸ್‌ರ್‌+ಅಸ್=ತಿಸ್ರಃ—ಉದಾತ್ತಸ್ಥಾನದಲ್ಲಿ ಬಂದ ಯಣ್‌ರೇಫ. **ಉದಾತ್ತಯಣೋ ಹಲ್ಪೂರ್ವಾತ್** (ಪಾ. ಸೂ. ೬-೧-೭೪) ಎಂದು ಸ್ವರಿತವು ಪ್ರಾಪ್ತವಾಗುತ್ತೆ, ಇದಕ್ಕೆ ಅಪವಾದವಾಗಿ **ತಿಸೃಭ್ಯೋ ಜಸಃ** (ಪಾ. ಸೂ. ೬-೧-೧೬೬) ಋನ್ನೇಭ್ಯೋ ಙೀಪ್, ಎಂಬಲ್ಲಿ ಬಹುವಚನದಂತೆ ಇಲ್ಲಿಯೂ ಪ್ರಯೋಗಭೇದದಿಂದ ಶಬ್ದಬಾಹುಲ್ಯವನ್ನು ವಿವಕ್ಷಿಸಿ ಬಹುವಚನ ಬಂದಿದೆ. ತಿಸೃಶಬ್ದದ ಮುಂದೆ ಇರುವ ಜಸ್‌ವಿಭಕ್ತಿಯ ಅಂತವು ಉದಾತ್ತವಾಗುತ್ತೆ ಎಂದು ಈ ಸೂತ್ರಕ್ಕೆ ಅರ್ಥ. ಇದರಿಂದ ಜಸ್ ಉದಾತ್ತ.

**ದ್ಯೌ**—ಸಂಹಿತಾ ಕಾಲದಲ್ಲಿ ಇದರ ಮುಂದೆ ಉಕಾರ ಇರುವುದರಿಂದ **ಏಚೋಽಯವಾಯಾವಃ** (ಪಾ. ಸೂ. ೬-೧-೭೮) ಎಂದು ಔಗೆ ಆವ್ ಆದೇಶ ದ್ಯಾವ್+ಉ, **ಲೋಪಃ ಶಾಕಲ್ಯಸ್ಯ** (ಪಾ. ಸೂ. ೮-೩-೧೯) ಶಾಕಲ್ಯರ ಮತದಲ್ಲಿ ಅವರ್ಣ ಪೂರ್ವಕಗಳೂ ಪದಾಂತದಲ್ಲಿರುವುವೂ ಆದ ಯಕಾರ ವಕಾರಗಳಿಗೆ ಲೋಪವು ಅಚ್ ಪರದಲ್ಲಿದ್ದರೆ ಬರುತ್ತೆ ಎಂದು ವ್‌ಗೆ ಲೋಪ. ಈ ಲೋಪವು ಅಸಿದ್ಧವಾಗುವುದರಿಂದ ಸ್ವರಸಂಧಿ ಬರುವುದಿಲ್ಲ.

**ಉಪಸ್ಥಾ**—ಉಪ-ಸಮೀಪದಲ್ಲಿ, ತಿಷ್ಠತಃ= ಇರುವವರು ಎಂದು ವಿಗ್ರಹ. **ಆತಶ್ಚೋಪಸರ್ಗೇ** (ಪಾ. ಸೂ. ೩-೧-೧೩೬) ಎಂದು ಕ ಪ್ರತ್ಯಯ, ಆಕಾರಲೋಪ, ಸಪ್ತಮೀದ್ವಿವಚನ ಓಸ್, **ಸುಪಾಂ ಸುಲುಕ್**—, (ಪಾ. ಸೂ. ೭-೧-೩೯) ಎಂಬ ಸೂತ್ರದಲ್ಲಿ **ಆಜಯಾ ಜಯಾರಾಂ ಚೋಪಸಂಖ್ಯಾನಂ** ಎಂದು ವಾರ್ತಿಕ ಇದೆ. ಆಜ್, ಆಯಾಚ್, ಅಯಾರ್ ಈ ಮೂರು ಸುಪ್‌ನ ಸ್ಥಾನದಲ್ಲಿ ಬರುತ್ತೆ ಎಂದರ್ಥ, ಇದರಿಂದ ಓಸ್‌ಗೆ ಆಜ್, ಉಪಸ್ಥ+ಆ, ಸವರ್ಣದೀರ್ಘ, **ಅಂತಾದಿವಚ್ಚ** (ಪಾ. ಸೂ. ೬-೧-೮೫) ಏಕಾದೇಶವು ಪೂರ್ವಕ್ಕೆ ಅಂತದಂತೆ ಆಗುತ್ತೆ ಎಂದು ಏಕಾದೇಶ ಬರುವುದಕ್ಕೆ ಮುಂಚೆ ಅದು ಪೂರ್ವಕ್ಕೆ ಅಂತವಾಗಿದ್ದಾಗ ಪ್ರಾತಿಪದಿಕ, ಪ್ರತ್ಯಯ ಮೊದಲಾದ ಯಾವ ಯಾವ ವ್ಯವಹಾರ ಬರುವುದೋ ಅದು ಏಕಾದೇಶ ಬಂದ ಮೇಲೆಯೂ ಬರುತ್ತೆ. ಹೀಗೆ ಪರವರ್ಣವು ಬೇರೆ ಇದ್ದಾಗ ತನ್ಘಟಿತ ಸಮುದಾಯಕ್ಕೆ ಬರುವ ವ್ಯವಹಾರಗಳೂ ಏಕಾದೇಶ ಬಂದಮೇಲೂ ಬರುವುವು ಎಂದರ್ಥ. ಇದನ್ನು ಅಂತಾದಿಭ್ಯಾಂ ಪೃಥಗವಸ್ಥಿತಾಭ್ಯಾಂ ಯೇ ವ್ಯವಹಾರಾಃ ಪ್ರಾತಿಪದಿಕತ್ವಪ್ರತ್ಯಯ-ತ್ವಾದಯಸ್ತೇ ಕೃತೈಕಾದೇಶಸ್ಯಾಪಿ ಭವಂತಿ, ಎಂದು ಟೀಕಾಕಾರರು ಹೇಳಿರುವರು ಇಲ್ಲಿ ಏಕಾದೇಶ ಬರುವುದಕ್ಕಿಂತ ಮುಂಚೆ ಆಜ್ ಎಂಬ ವ್ಯವಹಾರವು ಆ ಎಂಬುದರಲ್ಲಿತ್ತು, ಅದು ಏಕಾದೇಶ ಬಂದ ಮೇಲೂ ಪರಾದಿವದ್ಭಾವದಿಂದ ಬರುತ್ತ **ಆಜೋಽನುನಾಸಿಕಶ್ಛಂದಸಿ** (ಪಾ. ಸೂ. ೬-೧-೧೨೬) ಛಂದಸ್ಸಿನಲ್ಲಿ ಅಚ್ ಪರದಲ್ಲಿರುವಾಗ ಆಜ್‌ಗೆ ಅನುನಾಸಿಕವು ಬರುವುದು ಅದು ಪ್ರಕೃತಿಭಾವವನ್ನೂ ಹೊಂದುವುದು ಎಂದು ಅನುನಾಸಿಕಾಕಾರವೂ, ಪ್ರಕೃತಿ ಭಾವವೂ ಬರುತ್ತೆ.

**ವಿರಾಷಾಟ್**—ವೀರೈರ್ಯುಜ್ಯಂತೇ ಇತಿ ವಿರಾಃ ಎಂದು ವಿಗ್ರಹ, ವೃಙ್ ವರಣೇ ಧಾತು. **ಗ್ರಹ ವೃದೃನಿಶ್ಚಿಗಮಶ್ಚ** (ಪಾ. ಸೂ. ೩-೩-೫೮) ಈ ಸೂತ್ರದಲ್ಲಿ ಮಹಾಭಾಷ್ಯದಲ್ಲಿ **ಘಞರ್ಥೇ ಕವಿಧಾನಂ ಸ್ಥಾಸ್ನಾಪಾವ್ಯಧಿಹನಿ**

**ಯುಧ್ಯರ್ಥಮ್** ಎಂದು ವಾರ್ತಿಕ ಇದೆ. ಇಲ್ಲಿ ಹೇಳಿರುವ ಧಾತುಗಳು ಉದಾಹರಣೆಗಳು, ಪರಿಗಣಿತಗಳಲ್ಲ, ಏವಂಚ ಬೇರೆ ಧಾತುಗಳ ಮುಂದೆಯೂ ಕ ಬರಬಹುದು, ಭಾವ ಮತ್ತು ಕರ್ತೃಭಿನ್ನಕಾರಕ ಇವು ಘಞ್ ಪ್ರತ್ಯಯದ ಅರ್ಥಗಳು ಇಲ್ಲಿ ಕರ್ಮಾರ್ಥದಲ್ಲಿ ಕ ಬರುತ್ತೆ. ವೃ+ಅ. **ಬಹುಲಂ ಛಂದಸಿ** (ಪಾ. ಸೂ. ೭-೧-೧೦೩) ಛಂದಸ್ಸಿನಲ್ಲಿ ಇತ್ವ ಉತ್ವಗಳು ಬಹುಲವಾಗಿ ಒರುವುವು, ಎಂದು ಋಗೆ ಇತ್ವ ರಪರವಾಗಿ ಬರುತ್ತೆ. ವಿರ್+ಅ, ಕಿತ್ ಪರದಲ್ಲಿದೆ, ಗುಣಕ್ಕೆ ನಿಷೇಧ, ವಿರಾನ್ ಸಹತೇ ಇತಿ ವಿರಾಷಾಟ್ ಎಂದು ವಿಗ್ರಹ, ಷಹ ಮರ್ಷಣೇ ಧಾತು, **ಧಾತ್ವಾದೇಃ ಷಸ್ಸಃ** ಎಂದು ಷಕಾರಕ್ಕೆ ಸಕಾರ- **ಛಂದಸಿ ಸಹಃ** (ಪಾ. ಸೂ. ೩-೨-೬೩) ಸುಬಂತವು ಉಪಪದವಾಗಿರುವಾಗ ಸಹ್ ಧಾತು ಮುಂದೆ ಣ್ವಿಪ್ರತ್ಯಯವು ಛಂದಸ್ಸಿನಲ್ಲಿ ಬರುತ್ತೆ ಎಂದು ಣ್ವಿಪ್ರತ್ಯಯ, **ಅತಉಪಧಾಯಾಃ** (ಪಾ. ಸೂ. ೭-೨-೧೧೬) ಎಂದು ಉಪಧಾವೃದ್ಧಿ, **ಚುಟೂ, ಉಪದೇಶೇಜನುನಾಸಿಕ ಇತ್** ಎಂಬ ಸೂತ್ರಗಳಿಂದ ಣಕಾರ ಇಕಾರಗಳಿಗೆ ಇತ್ಸಂಜ್ಞೆ. **ವೇರಪೃಕ್ತಸ್ಯ** ಎಂದು ವಲೋಪ, **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ನಿಪಾತಾದಿಗಳಿಗಿಂತಲೂ ಬೇರೆಯಾದ ಪೂರ್ವಪದಗಳಿಗೂ ದೀರ್ಘ ಬರುತ್ತೆ ಎಂದು ವಿರಪದಕ್ಕೆ ದೀರ್ಘ ವಿರಾಸಾಹ್, ಇದರ ಮುಂದೆ, ಸು, **ಹಲ್ಙ್ಯಾಭ್ಯಃ**—ಎಂದು ಸುಲೋಪ, **ಹೋಢಃ** ಎಂದು ಹಕಾರಕ್ಕೆ ಢಕಾರ, ವಿರಾಸಾಢ್, **ಝಲಾಂ ಜಶೋಽನ್ತೇ** ಎಂದು ಜಶ್ತ್ವ **ಸಹೇಸ್ಸಾಡಸ್ಸಃ** (ಪಾ. ಸೂ. ೮-೩-೫೬) ಪದಾಂತ ವಿಷಯದಲ್ಲಿ ಸಹ್ ಧಾತು ಸಕಾರಕ್ಕೆ ಷಕಾರ, ಚರ್ತ್ವ, ವಿರಾಷಾಟ್ ಎಂದು ಆಗುತ್ತದೆ.

**ರಥ್ಯಮ್**—ರಥಸ್ಯ ಇದಂ= ರಥದ ಸಂಬಂಧಿ ಎಂದು ವಿಗ್ರಹ. **ರಥಾದ್ಯತ್** (ಪಾ. ಸೂ. ೪-೩-೧೨೧) ರಥಶಬ್ದಪ್ರಕೃತಿಕ ಷಷ್ಠ್ಯಂತದ ಮುಂದೆ ಇದಮ್ ಎಂಬ ಅರ್ಥದಲ್ಲಿ ಯತ್ ಬರುತ್ತೆ ಎಂದು ಯತ್ ಪ್ರತ್ಯಯ ರಥ+ಯ **ಯಸ್ಯೇತಿ ಚ** ಎಂದು ಅಕಾರಲೋಪ. **ಯತೋಽನಾವಃ** (ಪಾ. ಸೂ. ೬-೧-೨೧೩) ನೌಶಬ್ದ ಭಿನ್ನವಾದ ಶಬ್ದದ ಮುಂದೆ ವಿಹಿತವಾದ ಯಾವ ಯತ್ ಪ್ರತ್ಯಯವಿದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಶಬ್ದವು ಎರಡು ಅಚ್ಚುಗಳನ್ನು ಹೊಂದಿದ್ದರೆ ಅದರ ಆದಿಯು ಉದಾತ್ತವಾಗುತ್ತೆ ಎಂಬುದರಿಂದ ಆದ್ಯುದಾತ್ತ.

**ಚಿಕೇತತ್**—ಕಿತ ಜ್ಞಾನೇ ಧಾತು, ಲೇಟ್, ತಿಪ್, ಶಪ್, ಕಿತ್+ಅ+ತಿ **ಇತಶ್ಚ ಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಪರಸ್ಮೈಪದದಲ್ಲಿ ಲೇಟ್‌ನ ಸ್ಥಾನದಲ್ಲಿ ಬಂದ ತಿಪ್‌ನ ಇಕಾರಕ್ಕೆ ಲೋಪ ಬರುತ್ತೆ ಎಂದು ಇಕಾರಲೋಪ, **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂದು ಅಟ್ ಆಗಮ. ಕಿತ್+ಅ+ಅತ್, **ಜುಹೋತ್ಯಾದಿಭ್ಯಃ ಶ್ಲುಃ** ಎಂದು ಶಪ್‌ಗೆ ಶ್ಲು (ಲೋಪ) ಬರುತ್ತೆ. **ಶ್ಲೌ** (ಪಾ. ಸೂ. ೬-೧-೧೦) ಎಂದು ದ್ವಿತ್ವ, ಕಿತ್ ಕಿತ್+ಅತ್, ಅಭ್ಯಾಸದ ತ್‌ಗೆ ಲೋಪ, ಲಘೂಪಧಗುಣ **ಕುಹೋಶ್ಚುಃ** ಎಂದು ಕಕಾರಕ್ಕೆ ಚಕಾರ. ಈಗ ಇರುವ ಧಾತುಪಾಠದಲ್ಲಿ ಕಿ ಜ್ಞಾನೇ ಎಂದು ಪಾಠ ಇದೆ, ಆಗ ತುಗಾಗಮವು ಛಾಂದಸವೆಂದು ಹೇಳಬೇಕು. **ಅನುದಾತ್ತೇ ಚ** (ಪಾ. ಸೂ. ೬-೧-೧೯೦) ನ ವಿದ್ಯತೇ ಉದಾತ್ತಃ ಯಸ್ಮಿನ್ ಸಃ ಅನುದಾತ್ತಃ, ತಸ್ಮಿನ್ ಎಂದು ವಿಗ್ರಹ, ಉದಾತ್ತವನ್ನು ಹೊಂದದೇ ಇರುವ ಲಸ್ಥಾನಿಕ ಸಾರ್ವಧಾತುಕವು ಪರದಲ್ಲಿದ್ದರೆ ಅಭ್ಯಸ್ತದ ಆದಿಯು ಉದಾತ್ತವಾಗುತ್ತೆ ಎಂದು ಆದ್ಯುದಾತ್ತ ಬರುತ್ತೆ. ಯತ್ ಶಬ್ದದ ಯೋಗವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ ಬರುತ್ತೆ. ॥ ೬ ॥

---

॥ ಸಂಹಿತಾಪಾಠಃ ॥

ವಿ ಸುಪರ್ಣೋ ಅನ್ತರಿಕ್ಷಾಣ್ಯಖ್ಯದ್ಗಭೀರವೇಪಾ ಅಸುರಃ ಸುನೀಥಃ ।
ಕ್ವೇ೩ದಾನೀಂ ಸೂರ್ಯಃ ಕಶ್ಚಿಕೇತ ಕತಮಾಂ ದ್ಯಾಂ ರಶ್ಮಿರಸ್ಯಾ
ತತಾನ ॥ ೭ ॥

॥ ಪದಪಾಠಃ ॥

ವಿ । ಸುಽಪರ್ಣಃ । ಅನ್ತರಿಕ್ಷಾಣಿ । ಅಖ್ಯತ್ । ಗಭೀರಽವೇಪಾಃ । ಅಸುರಃ ।
ಸುಽನೀಥಃ ।
ಕ್ವ । ಇದಾನೀಂ । ಸೂರ್ಯಃ । ಕಃ । ಚಿಕೇತ । ಕತಮಾಂ । ದ್ಯಾಂ ।
ರಶ್ಮಿಃ । ಅಸ್ಯ । ಆ । ತತಾನ ॥ ೭ ॥

ಸಾಯಣಭಾಷ್ಯಂ

ಸುಪರ್ಣಃ ಶೋಭನಪತನಃ ಸೂರ್ಯಸ್ಯ ರಶ್ಮಿಃ । ಸುಪರ್ಣಾ ಇತಿ ಪಂಚದಶ ರಶ್ಮಿನಾಮಾನೀತಿ ತನ್ನಾಮಸು ಪಠಿತತ್ವಾತ್ । ಅಂತರಿಕ್ಷಾಣ್ಯಂತರಿಕ್ಷೋಪಲಕ್ಷಿತಾನಿ ಲೋಕತ್ರಯಸ್ಥಾನಾನಿ ವ್ಯಖ್ಯತ್ । ವಿಶೇಷೇಣ ಖ್ಯಾಪಿತವಾನ್ ಪ್ರಕಾಶಿತವಾನ್ । ಕೀದೃಶೋ ರಶ್ಮಿಃ । ಗಭೀರವೇಪಾ ಗಂಭೀರಕಂಪನಃ । ರಶ್ಮೇಃ ಪ್ರಕಂಪನಂ ಚಲನಂ ಕೇನಾಪಿ ದ್ರಷ್ಟುಮಶಕ್ಯಮಿತ್ಯರ್ಥಃ । ಅಸುರಃ ಸರ್ವೇಷಾಂ ಪ್ರಾಣದಃ । ತಥಾ ಚಾನ್ಯತ್ರಾಮ್ನಾಯತೇ । ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯೋದೇತೀತಿ । ಸುನೀಥಃ ಸುನಯನಃ ಶೋಭನಪ್ರಾಪಣಃ । ಮಾರ್ಗಪ್ರಕಾಶನೇನಾಭೀಷ್ಟದೇಶಂ ಪ್ರಾಪಯತೀತ್ಯರ್ಥಃ । ತಾದೃಶರಶ್ಮಿಯುಕ್ತಃ ಸೂರ್ಯ ಇದಾನೀಂ ರಾತ್ರೌ ಕ್ವ ಕುತ್ರ ವರ್ತತೇ । ತದೇತದ್ರಹಸ್ಯಂ ಕಶ್ಚಿಕೇತ ಕೋ ಜಾನಾತಿ । ನ ಕೋಽಪೀತ್ಯರ್ಥಃ । ಅಸ್ಯ ಸೂರ್ಯಸ್ಯ ರಶ್ಮಿಃ ಕತಮಾಂ ದ್ಯಾಮಾ ತತಾನ । ಕಂ ದ್ಯುಲೋಕಂ ರಾತ್ರೌ ವ್ಯಾಪ್ತವಾನ್ । ಏತದಪಿ ಕೋ ಜಾನಾತಿ ॥ ಸುಪರ್ಣಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಗಭೀರವೇಪಾಃ । ಟುವೇಪೃ ಕಂಪನೇ । ಅಸುನ್ । ಗಭೀರಂ ವೇಪೋ ಯಸ್ಯ । ಪೂರ್ವಪದಪ್ರಕೃತಿಸ್ವರತ್ವಂ । ಅಸುರಃ । ಅಸು ಕ್ಷೇಪಣೇ । ಅಸ್ಯತಿ ಶತ್ರೂನಿತ್ಯಸುರಃ । ಅಸೇರುರನ್ । ಉ. ೧-೪೨ । ನಿತ್ತ್ವಾದಾದ್ಯುದಾತ್ತತ್ವಂ । ಯದ್ವಾ । ಅಸೂನ್ಪ್ರಾಣಾನ್ರಾತಿ ದದಾತೀತ್ಯಸುರಃ । ಆತೋಽನುಪಸರ್ಗೇ ಕ ಇತಿ ಕಪ್ರತ್ಯಯಃ ಸುನೀಥಃ । ಣೀಞ್ ಪ್ರಾಪಣೇ । ಹನಿಕುಷಿನೀರಮಿಕಾಶಿಭ್ಯಃ ಕ್ಥನ್ । ಉ.

೨-೨ | ಇತಿ ಕ್ಥನ್ | ಪ್ರಾದಿಮಾಸೇ ಥಾಥಾದಿನೋತ್ತರಪದಾಂತೋದಾತ್ತತ್ವಂ | ಇದಾನೀಂ | ಇದಂಶಬ್ದಾತ್ಸಪ್ತ-ಮ್ಯರ್ಥೇ ದಾನೀಂ ಚ | ಪಾ. ೫-೩-೧೮ | ಇತಿ ದಾನೀಂಪ್ರತ್ಯಯಃ | ಇದಮ ಇಶಿತೀದಂಶಬ್ದಸ್ಯೇಶಾದೇಶಃ | ಪ್ರತ್ಯಯಾದ್ಯುದಾತ್ತತ್ವಂ | ಸೂರ್ಯಃ | ಷೂ ಪ್ರೇರಣೇ | ಸುವತೀತಿ ಸೂರ್ಯಃ | ರಾಜಸೂಯ-ಸೂರ್ಯೇತ್ಯಾದಿನಾ ರುಡಾಗಮಸಹಿತಃ ಕ್ಯಪ್ಪ್ರತ್ಯೋ ನಿಪಾತಿತಃ | ಪ್ರತ್ಯಯಸ್ಯಾನುದಾತ್ತತ್ವೇ ಧಾತು-ಸ್ವರೇಣಾದ್ಯುದಾತ್ತತ್ವಂ | ಚಿಕೇತ | ಕಿತ ಜ್ಞಾನೇ | ಲಿಟ್ | ಕತಮಾಂ | ಕಿಂಜಾತೀಯಾಂ | ವಾ ಬಹೂನಾಂ ಜಾತಿಪರಿಪ್ರಶ್ನೇ ಡತಮಚ್ | ಪಾ. ೫-೩-೯೩ | ಇತಿ ಕಿಂಶಬ್ದಾತ್ ಡತಮಚ್ | ಡಿತ್ವಾಟ್ಟಿ-ಲೋಪಃ | ಚಿತ ಇತ್ಯಂತೋದಾತ್ತತ್ವಂ ||

॥ ಪ್ರತಿಪದಾರ್ಥ ॥

**ಗಭೀರವೇಪಾಃ**— ದುಜ್ಞೇ೯ಯವಾದ ಸ್ಪಂದ(ಕಂಪ)ವುಳ್ಳ | **ಅಸುರಃ**— ಪ್ರಾಣದಾಯಕವಾದ **ಸುನೀಥಃ**—ಮಾರ್ಗದರ್ಶಕವಾಗಿ ಅಭೀಷ್ಟ ಪ್ರದೇಶವನ್ನು ಸೇರಿಸತಕ್ಕ | **ಸುಪರ್ಣಃ**—ಚನ್ನಾಗಿ ಪ್ರಸರಿಸುವಂತಹ ಸೂರ್ಯಕಿರಣವು | **ಅಂತರಿಕ್ಷಾಣಿ**—ಅಂತರಿಕ್ಷಾದಿ ಲೋಕತ್ರಯವನ್ನೂ | **ವಿ ಅಖ್ಯತ್**—ಚನ್ನಾಗಿ ಬೆಳಗಿಸಿತು | **ಇದಾನೀಂ**— ಈಗ (ರಾತ್ರಿಯಲ್ಲಿ) | **ಸೂರ್ಯಃ**—(ಆ ಕಿರಣವುಳ್ಳ) ಸೂರ್ಯನು | **ಕ್ವ**—ಎಲ್ಲಿದ್ದಾನೆ ? | **ಕಶ್ಚಿಕೇತ**—ಯಾರು ತಿಳಿಯಬಲ್ಲರು ? (ಯಾರಿಂದಲೂ ತಿಳಿಯಲಶಕ್ಯವು) | **ಅಸ್ಯ**—ಸೂರ್ಯನ | **ರಶ್ಮಿಃ**—ಕಿರಣವು | **ಕತಮಾಂ ದ್ಯಾಂ**—ಯಾವ ದ್ಯುಲೋಕವನ್ನು | **ಆ ತತಾನ**—ಆವರಿಸಿದೆ ? (ಇದನ್ನು ಯಾರೂ ತಿಳಿಯಲಾರರು.)

॥ ಭಾವಾರ್ಥ ॥

ಸಕಲರಿಗೂ ಪ್ರಾಣದಾಯಕವಾದ ಸೂರ್ಯನ ಕಿರಣವು ಮಧ್ಯಾಹ್ನವೆಲ್ಲ ಮೂರು ಲೋಕಗಳನ್ನೂ ಬೆಳಗಿ ಸಕಲರಿಗೂ ಮಾರ್ಗದರ್ಶಕವಾಗಿತ್ತು. ಅಸ್ತಕಾಲದಲ್ಲಿ ಅದರ ಗಂಭೀರವಾದ ಕಂಪನದಿಂದ ರಮಣೀಯವಾಗಿಯೂ ಆಹ್ಲಾದಕರವಾಗಿಯೂ ಇತ್ತು. ಆದರೆ ಅದೇ ಕಿರಣವುಳ್ಳ ಸೂರ್ಯನು ಈಗ ರಾತ್ರಿಯಲ್ಲಿ ಎಲ್ಲಿ ಸಂಚರಿಸುತ್ತಿದ್ದಾನೆ. ? ಯಾವ ಯಾವ ದ್ಯುಲೋಕಗಳನ್ನು ಬೆಳಗಿಸುತ್ತಿದ್ದಾನೆ ಎಂಬುದನ್ನು ಹೇಳಲು ಯಾವ ಮನುಷ್ಯನಿಂದಲೂ ಶಕ್ಯವಿಲ್ಲ.

English Translation

Suparna (ray of the sun) is quivering, life-giving and directed (towards the earth); It has illminated tbe (three) aerial regions. Where is surya (sun) now ? who knows to what heaven his rays have extended now ?

॥ ವಿಶೇಷ ವಿಷಯಗಳು ॥

**ಸುಪರ್ಣಃ—ಖೇದಯಃ ಕಿರಣಾಃ** ಎಂದು ಮೊದಲಾದ ಹದಿನೈದು ರಶ್ಮಿನಾಮಗಳ ಮಧ್ಯದಲ್ಲಿ ಸುಪರ್ಣ ಶಬ್ದವು ಪಠಿತವಾಗಿರುವುದರಿಂದ ಸುಪರ್ಣವೆಂದರೆ ಸೂರ್ಯನ ರಶ್ಮಿಯು (ನಿ. ೧-೧೫)

**ಗಭೀರವೇಪಾಃ—ಗಂಭೀರಕಂಪನಃ ।** ಸೂರ್ಯನ ರಶ್ಮಿಗಳು ವಾಯುಮಂಡಲದ ಮೂಲಕ ಹಾದು ಬರುವಾಗ ಕಂಪಿಸುತ್ತಿರುವಂತೆ (quivering) ಕಾಣಿಸುವುವು. ಆದುದರಿಂದ ಋಷಿಯು ಸೂರ್ಯ ರಶ್ಮಿಗಳನ್ನು ಕಂಪಿಸುತ್ತಿರುವವು ಎಂದು ವರ್ಣಿಸಿರುವನು.

**ಅಸುರಃ—ಅಸು ಕ್ಷೇಪಣೇ । ಅಸ್ಯತಿ ಶತ್ರೂನಿತ್ಯಸುರಃ । ಯದ್ವಾ । ಅಸೂನ್ಪ್ರಾಣಾನ್ ರಾತಿ ದದಾತೀತ್ಯಸುರಃ ।** ಅಸುರಶಬ್ದವು ಸುಪರ್ಣಶಬ್ದಕ್ಕೆ ವಿಶೇಷಣವು. ಇದಕ್ಕೆ ಎರಡು ವಿಧವಾದ ಅರ್ಥವನ್ನು ಭಾಷ್ಯಕಾರರು ಹೇಳಿರುವರು. ಶತ್ರುಗಳನ್ನು ನಾಶಮಾಡುವುದರಿಂದ ಎಂದರೆ ಕತ್ತಲೆಯನ್ನು ಪರಿಹರಿಸುವುದರಿಂದ ಸೂರ್ಯರಶ್ಮಿಗೆ ಅಸುರ ಎಂದು ಹೆಸರು. ಅಥವಾ ಅಸುವೆಂದರೆ ಪ್ರಾಣ. ರಾ ಧಾವಿತುಗೆ ಕೊಡುವುದೆಂದರ್ಥವು. ಪ್ರಾಣಿಗಳಿಗೆ ಅತ್ಯವಶ್ಯಕವಾದ ಶಾಖವನ್ನು ಉಂಟುಮಾಡಿ ಆ ಮೂಲಕ ಪ್ರಾಣಗಳನ್ನು ಕಾಪಾಡುವುದರಿಂದ ಅಸುರ ವೆಂದು ಹೆಸರು, life giving vital breath

**ಕ್ವ ಇದಾನೀಂ ಸೂರ್ಯಃ**—ಹಗಲುಹೊತ್ತಿನಲ್ಲಿ ಸೂರ್ಯನು ಬೆಳಗುತ್ತಿರುವುದನ್ನು ಎಲ್ಲರೂ ನೋಡುವರು ಆದರೆ ಸಾಯಂಕಾಲದಲ್ಲಿ ಸೂರ್ಯನು ಮುಳಗಿ ಮಾರನೆಯ ದಿನ ಪ್ರಾತಃಕಾಲದಲ್ಲಿ ಮತ್ತೆ ಉದಯಿಸುವನು. ಈ ವಿಷಯವೂ ಜನಗಳಿಗೆ ಗೊತ್ತಿದೆ. ಆದರೆ ಸೂರ್ಯನು ಮುಳುಗಿದ ವೇಳೆ ಪುನಃ ಮಾರನೆಯದಿನ ಉದಯಿಸುವವ ರೆಗೆ (ಎಂದರೆ ರಾತ್ರಿಕಾಲದಲ್ಲಿ) ಸೂರ್ಯನು ಎಲ್ಲಿರುವನು ಎಂದು ಋಷಿಯು ಆಶ್ಚರ್ಯಪಡುತ್ತಾ ಈ ಪ್ರಶ್ನೆಯನ್ನು ಕೇಳಿ ರುವನು. ಆ ಕಾಲದಲ್ಲಿ ಭೂಮಿಯ ಚಲನವಲನಗಳೂ ಹಗಲು ರಾತ್ರಿಗಳು ಹೇಗೆ ಆಗುತ್ತವೆಂಬುದೂ ಜನಗಳಿಗೆ ತಿಳಿಯದಿದ್ದುದರಿಂದ ಈ ವಿಷಯ ಆಶ್ಚರ್ಯಕರವಾಗಿ ಕಂಡಿರಬಹುದು.

**ಕಶ್ಚಿಕೇತ ಕತಮಾಂ ದ್ಯಾಂ ರಶ್ಮಿರಸ್ಯಾ ತತಾನ**— ರಾತ್ರಿಕಾಲದಲ್ಲಿ ಸೂರ್ಯನ ರಶ್ಮಿಗಳು ಯಾವ ಪ್ರದೇಶವನ್ನು (ಬೇರೆ ಸ್ವರ್ಗವನ್ನು) ವ್ಯಾಪಿಸಿ ಬೆಳಕನ್ನುಂಟುಮಾಡುವವು ? ಅದನ್ನು ಯಾವ ಮನುಷ್ಯನು ತಿಳಿ ಯಲು ಶಕ್ತನು ? ಎಂದು ಋಷಿಯು ಆಶ್ಚರ್ಯಚಕಿತನಾಗಿ ಸೂರ್ಯನ ಅಗಾಧವಾದ ಮಹಿಮೆಯನ್ನು ಕೊಂಡಾಡುವು ದಕ್ಕಾಗಿ ಈ ರೀತಿ ತನಗೆ ತಾನೇ ಪ್ರಶ್ನೆಮಾಡಿಕೊಳ್ಳುವನು.

॥ ವ್ಯಾಕರಣಪ್ರಕ್ರಿಯಾ ॥

**ಸುಪರ್ಣಃ**—ಶೋಭನಂ ಪರ್ಣಂ ಪತನಂ ಯಸ್ಯ ಸಃ ಎಂದು ಬಹುವ್ರೀಹಿ **ನಞ್‌ಸುಭ್ಯಾಂ** (ಪಾ. ಸೂ. ೬-೨-೧೭೨) ನಞ್ ಸುಗಳ ಮುಂದೆ ಇರುವ ಉತ್ತರಪದವು ಬಹುವ್ರೀಹಿಯಲ್ಲಿ ಅಂತೋದಾತ್ತವಾಗುವುದು ಎಂದು ಪರ್ಣಪದವು ಅಂತೋದಾತ್ತ.

**ಗಭೀರವೇಪಾಃ**—ಟುವೇಪೃ ಕಂಪನೇ, ಔಣಾದಿಕವಾದ ಅಸುನ್‌ಪ್ರತ್ಯಯ ಗಭೀರಂ ವೇಪಃ ಯಸ್ಯ ಸಃ ಎಂದು ಬಹುವ್ರೀಹಿ, ಪೂರ್ವಪದ ಪ್ರಕೃತಿಸ್ವರ ಬರುತ್ತೆ, ಗಭೀರಶಬ್ದವು ಅಂತೋದಾತ್ತ.

**ಅಸುರಃ**—ಅಸು ಕ್ಷೇಪಣೇ ಧಾತು, ಅಸ್ಯತಿ ಇತ್ಯಸುರಃ **ಅಸೇರುರನ್** (ಉ. ಸೂ. ೧-೪೨) ಅಸು ಧಾತು ಮುಂದೆ ಉರನ್ ಬರುತ್ತೆ ಎಂದು ಉರನ್, ನಿತ್ಸ್ವರ ಬರುತ್ತೆ ಇನ್ನೊಂದು ವಿಧವಾಗಿ ಪ್ರಕ್ರಿಯೆ ಹೇಳಬಹುದು.

ಅಸೂನ್= ಪ್ರಾಣಗಳನ್ನು, ರಾತಿ= ಕೊಡುವನು ಎಂದು ವಿಗ್ರಹ. ಯುದ್ಧದಲ್ಲಿ ತನ್ನ ಪ್ರಾಣವನ್ನು ಬಲಿಕೊಡುವನು ಎಂದರ್ಥ. ಅಸು ಶಬ್ದೋಪಪದಕವಾದ ರಾ ಧಾತು ಮುಂದೆ **ಆತೋಽನುಪಸರ್ಗೇ ಕಃ** (ಪಾ. ಸೂ. ೩-೨-೩) ಎಂದು ಕ ಪ್ರತ್ಯಯ, ಆಕಾರಕ್ಕೆ ಲೋಪ.

**ಸುನೀಥಃ**—ಣೀಞ್ ಪ್ರಾಪಣೇ ಧಾತು, **ಹನಿಕುಷಿನೀರಮಿಕಾಶಿಭ್ಯಃ ಕ್ಥನ್** (ಉ ಸೂ. ೨-೧೫೯) ಹನ ಹಿಂಸಾಗತ್ಯೋಃ, ಕುಷ ನಿಷ್ಕರ್ಷೇ ; ಣೀಞ್ ಪ್ರಾಪಣೇ, ರಮು ಕ್ರೀಡಾಯಾಂ, ಕಾಶೃ ದೀಪ್ತೌ ಈ ಐದು ಧಾತು ಗಳ ಮುಂದೆ ಕ್ಥನ್ ಪ್ರತ್ಯಯ ಬರುತ್ತೆ ಎಂದು ಕ್ಥನ್ **ಣೋ ನಃ** (ಪಾ. ಸೂ. ೬-೧-೬೫) ಎಂದು ಮೊದಲೇ ಣಕಾರಕ್ಕೆ ನಕಾರ. ನೀ+ಥ ಕಿತ್ತಾಗ್ದರಿಂದ ಗುಣ ಬರುವುದಿಲ್ಲ. **ಕುಗತಿಪ್ರಾದಯಃ** ಎಂದು ಪ್ರಾದಿಸಮಾಸ, **ಥಾಥಘಞ್‌ಕ್ತಾಜಬಿತ್ರಕಾಣಾಂ** (ಪಾ. ಸೂ. ೬-೨-೧೪೪) ಈ ಪ್ರತ್ಯಯಾಂತವಾದ ಶಬ್ದಗಳು ಗತಿ, ಕಾರಕ ಉಪಪದ, ಇವುಗಳ ಮುಂದೆ ಇದ್ದರೆ ಇವುಗಳ ಅಂತವು ಉದಾತ್ತವಾಗುತ್ತೆ ಎಂದು ಅಂತೋದಾತ್ತ.

**ಇದಾನೀಮ್**—**ದಾನೀಂಚ** (ಪಾ. ಸೂ. ೫-೩ ೧೮) ಕಾಲವಾಚಕವಾದ ಇದಂ ಶಬ್ದ ಪ್ರಕೃತಿಕವಾಗ ಸಪ್ತಮ್ಯಂತದ ಮುಂದೆ ಸ್ವಾರ್ಥದಲ್ಲಿ ದಾನೀಂ ಪ್ರತ್ಯಯ ಬರುತ್ತೆ ಎಂದು ದಾನೀಂ ಬಂದರೆ ಇದಮ್+ಙಿ+ದಾನೀಮ್, ತದ್ಧಿತಾಂತಪ್ರಾತಿಪದಿಕಾವಯವವಾದ ಙಿಗೆ **ಸುಪೋಧಾತು—**, (ಪಾ. ಸೂ. ೨-೪-೭೧) ಎಂದು ಲುಕ್. **ಇದಮ ಇಶ್** (ಪಾ. ಸೂ. ೫-೩-೩) ಪ್ರಾಗ್ದಿಶೀಯ ಪ್ರತ್ಯಯ ಪರದಲ್ಲಿರುವಾಗ ಇದಂ ಶಬ್ದಕ್ಕೆ ಇಶ್ ಆದೇಶ ಬರುತ್ತೆ ಎಂದು ಇಶ್ ಬರುತ್ತೆ. ಅದು ಶಿತ್ ಎಂದರೆ ಶಕಾರೇತ್ಸಂಜ್ಞಕ, ಆದ್ದರಿಂದ **ಅನೇಕಾಲ್‌ಶಿತ್ಸರ್ವಸ್ಯ** (ಪಾ. ಸೂ. ೧-೧-೫೫) ಅನೇಕವಾದ ವರ್ಣಗಳುಳ್ಳ ಅಥವಾ ಶಿತ್ ಆಗ ಆದೇಶಗಳು ಸಂಪೂರ್ಣ ಸ್ಥಾನಿಗೆ ಬರುವುವು ಎಂದು ಇದಮ್ ಎಂಬ ಸಂಪೂರ್ಣದ ಸ್ಥಾನದಲ್ಲಿ ಇಶ್-ಇ। ದಾನೀಮ್= ಇದಾನೀಮ್, ಪ್ರತ್ಯಯಸ್ವರದಿಂದ ದಾ ಉದಾತ್ತ

**ಸೂರ್ಯಃ**—ಷೂ ಪ್ರೇರಣೇ ಧಾತು, ಸುವತಿ= ಪ್ರೇರಯತಿ ಎಂದರೆ ಜನರು ತಮ್ಮ ತಮ್ಮ ಕೆಲಸಗಳಲ್ಲಿ ತೊಡಗುವಂತೆ ಪ್ರೇರಿಸುವನು ಎಂದು ಅರ್ಥ. **ರಾಜಸೂಯ ಸೂರ್ಯ—**, (ಪಾ ಸೂ. ೩-೧-೧೧೪) ರುಡಾಗಮ ಸಹಿತವಾದ ಕ್ಯಪ್ ಪ್ರತ್ಯಯವು ಈ ಸೂತ್ರದಲ್ಲಿ ನಿಪಾತಿತವಾಗಿದೆ. ಷಕಾರಕ್ಕೆ ಸಕಾರ, ಕ್ಯಪ್ ಪಿತ್ ಅನುದಾತ್ತ ಧಾತುಸ್ವರದಿಂದ ಸೂ ಎಂಬುದು ಆದ್ಯುದಾತ್ತ.

**ಚಿಕೇತ**—ಕಿತ ಜ್ಞಾನೇ ಜುಹೋತ್ಯಾದಿ. ಇದರ ಮುಂದೆ ಲಿಟ್, **ಲಿಟಿಧಾತೋಃ—**, (ಪಾ. ಸೂ. ೬-೧-೮) ಎಂದು ದ್ವಿತ್ವ ಕಿತ್+ಕಿತ್, ಲಿಟ್, ಅಭ್ಯಾಸದಲ್ಲಿ ತ್‌ಗೆ, ಲೋಪ, ಕ್ ಗೆ ಚಕಾರ-ಚಿ+ಕಿತ್+ಲಿಟ್ ಲಘೂಪಧಗುಣ, ಲಿಟ್‌ಗೆ ತ ಆದೇಶ. **ಲಿಟಸ್ತಝಯೋಃ—**, (ಪಾ. ಸೂ. ೩-೪-೮೧) ಎಂದು ಏತ್ವದ ಬರದೇ ಇರುವಿಕೆಯು ಛಾಂದಸವು.

**ಕತಮಾಮ್**—**ವಾ ಬಹೂನಾಂ ಜಾತಿಪರಿಪ್ರಶ್ನೇ ಡತಮಚ್** (ಪಾ. ಸೂ. ೫-೩-೯೩) ಈ ಸೂತ್ರ ದಲ್ಲಿರುವ **ಜಾತಿಪರಿಪ್ರಶ್ನೇ** ಎಂಬ ಪದವನ್ನು ಮಹಾಭ್ಯಾದಲ್ಲಿ ಪ್ರತ್ಯಾಖ್ಯಾನಮಾಡಿರುವರು ಎಂದರೆ ಅನವಶ್ಯಕ ವೆಂದು ತಳ್ಳಿರುವರು. ಬಹು ಸಂಖ್ಯಾಕರ ಮಧ್ಯೆ ಒಬ್ಬನನ್ನು ನಿರ್ಧರಿಸುವಾಗ ಕಿಮ್, ಯತ್, ತತ್, ಇವುಗಳ ಮುಂದೆ ಡತಮಚ್ ಪ್ರತ್ಯಯ ಬರುತ್ತೆ ಎಂದು ಡತಮಚ್, ಡಿತ್ಕರಣದಿಂದ ಇಮ್ ಎಂಬ ಟಿಗೆ ಲೋಪ, ಅತಮ ಎಂದು ಪ್ರತ್ಯಯ ಉಳಿಯುತ್ತೆ ಕತಮ ಎಂದಾಯಿತು, ಪ್ರತ್ಯಯ ಚಿತ್, **ಚಿತಃ** ಎಂದು ಅಂತೋದಾತ್ತ ಬರುತ್ತೆ. ||೭||

|| ಸಂಹಿತಾಪಾಠಃ ||

ಅಷ್ಟೌ ವ್ಯಖ್ಯತ್ಕಕುಭಃ ಪೃಥಿವ್ಯಾಸ್ತ್ರೀ ಧನ್ವ ಯೋಜನಾ ಸಪ್ತ
ಸಿಂಧೂನ್ ।
ಹಿರಣ್ಯಾಕ್ಷಃ ಸವಿತಾ ದೇವ ಆಗಾದ್ದಧದ್ರತ್ನಾ ದಾಶುಷೇ ವಾ-
ರ್ಯಾಣಿ ॥ ೮ ॥

|| ಪದಪಾಠಃ ||

ಅಷ್ಟೌ । ವಿ । ಅಖ್ಯತ್ । ಕಕುಭಃ । ಪೃಥಿವ್ಯಾಃ । ತ್ರೀ । ಧನ್ವ । ಯೋಜನಾ ।
ಸಪ್ತ । ಸಿಂಧೂನ್ ।
ಹಿರಣ್ಯಽಅಕ್ಷಃ । ಸವಿತಾ । ದೇವಃ । ಆ । ಅಗಾತ್ । ದಧತ್ । ರತ್ನಾ ।
ದಾಶುಷೇ । ವಾರ್ಯಾಣಿ ॥ ೮ ॥

|| ಸಾಯಣಭಾಷ್ಯಂ ||

ಪೃಥಿವ್ಯಾಃ ಸಂಬಂಧಿನೀರಷ್ಟೌ ಕಕುಭಃ ಪ್ರಾಚ್ಯಾದ್ಯಾಶ್ಚತಸ್ರೋ ದಿಶ ಆಗ್ನೇಯ್ಯಾದ್ಯಾಶ್ಚತಸ್ರೋ ವಿದಿಶ ಇತ್ಯೇವಮಷ್ಟೌ ದಿಶೋ ವ್ಯಖ್ಯತ್ । ಸವಿತಾ ಪ್ರಕಾಶಿತವಾನ್ । ತಥಾ ಯೋಜನಾ ಪ್ರಾಣಿನಃ ಸ್ವಸ್ವ-ಭೋಗೇನ ಯೋಜಯಿತ್ರ್ಯಾನ್ಧನ್ವ ಅಂತರಿಕ್ಷೋಪಲಕ್ಷಿತಾನ್ ತ್ರೀ ತ್ರಿಸಂಖ್ಯಾಕಾನ್ಪೃಥಿವ್ಯಾದಿಲೋಕಾನ್ ಸಪ್ತ ಸಿಂಧೂನ್ ಗಂಗಾದಿನದೀಃ ಸಮುದ್ರಾನ್ವಾ ಸವಿತಾ ವ್ಯಖ್ಯತ್ । ಹಿರಣ್ಯಾಕ್ಷಃ । ಹಿತರಮಣೀಯ-ಚಕ್ಷುರ್ಯುಕ್ತೋ ಹಿರಣ್ಮಯಾಕ್ಷೋ ವಾ ಸವಿತಾ ದೇವ ಆಗಾತ್ । ಇಹಾಗಚ್ಛತು । ಕಿಂ ಕುರ್ವನ್ । ದಾಶುಷೇ ಹವಿರ್ದತ್ತವತೇ ಯಜಮಾನಾಯ ವಾರ್ಯಾಣಿ ವರಣೀಯಾನಿ ರತ್ನಾನಿ ದಧತ್ । ಪ್ರಯ-ಚ್ಛನ್ ॥ ಅಖ್ಯತ್ । ಖ್ಯಾತೇರ್ಲುಙ್ಯಸ್ಯತಿವಕ್ತೀತ್ಯಾದೀನಾ ಚ್ಲೇರಙಾದೇಶಃ । ತ್ರೀ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಧನ್ವ । ಧಿವಿ ರವಿ ಧವಿ ಗತ್ಯರ್ಥಾಃ । ಇದಿತೋ ನುಮ್ ಧಾತೋರಿತಿ ನುಮ್ । ಅಸ್ಮಾತ್ಕನಿನ್ಯುವೃಷಿತಕ್ಷಿರಾಜಿಧನ್ವಿದ್ಯುಪ್ರತಿದಿವ ಇತಿ ಕನಿನ್ । ಸುಪಾಂ ಸುಲುಗಿತಿ ವಿಭಕ್ತೇ-ರ್ಲುಕ್ । ನ ಲೋಪಃ । ಪ್ರತ್ಯಯಸ್ಯ ನಿತ್ತ್ವಾದಾದ್ಯುದಾತ್ತತ್ವಂ । ಯೋಜನಾ । ಯೋಜಯಂತಿ ಪ್ರಾಣಿನ ಉಪಭೋಗೇನೇತಿ ಯೋಜನಾನಿ । ನಂದ್ಯಾದಿಲಕ್ಷಣೋ ಲ್ಯುಃ । ಣೇರನಿಟೀತಿ ಣಿಲೋಪಃ ।

**ಪೂರ್ವಪಕ್ಷೀಯೋಲೋಪಃ । ಹಿರಣ್ಯಾಕ್ಷಃ । ಹಿರಣ್ಯಮಯೋನ್ಯಕ್ಷೀಣಿ ಯಸ್ಯಾಸೌ ಹಿರಣ್ಯಾಕ್ಷಃ । ಬಹುವ್ರೀಹೌ ಸಕ್ಥ್ಯಕ್ಷ್ಣೋಃ । ಪಾ. ೫-೪-೧೧೩ । ಇತಿ ಸಮಾಸಾಂತಃ ಷಚ್‌ಪ್ರತ್ಯಯಃ । ಅಗಾತ್ । ಏತೇಲುಙಿಣೋ ಗಾ ಲುಙಿ । ಪಾ. ೨-೪-೪೫ । ಇತಿ ಗಾದೇಶಃ । ಗಾತಿಸ್ಥೇತಿ ಸಿಚೋ ಲುಕ್ । ದಧತ್ । ಶತರಿ ನಾಭ್ಯಸ್ತಾಚ್ಛತುರಿತಿ ನುಮಾಗಮಪ್ರತಿಷೇಧಃ । ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ಅಭ್ಯಸ್ತಾನಾ-ಮಾದಿರಿತ್ಯಾದ್ಯುದಾತ್ತತ್ವಂ । ದಾಶುಷೇ । ದಾಶ್ವಾನ್ಸಾಹ್ವಾನಿತ್ಯಾದಿನಾ ಕ್ವಸುಪ್ರತ್ಯಯಾಂತೋ ನಿಪಾ-ತಿತಃ । ಚತುರ್ಥ್ಯೇಕವಚನೇ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ ॥ ಪರಪೂರ್ವತ್ವಂ । ಶಾಸಿವಸಿಘ-ಸೀನಾಂ ಚೇತಿ ಷತ್ವಂ । ವಾರ್ಯಾಣಿ । ವೃಙ್ ಸಂಭಕ್ತೌ । ಋಹಲೋರ್ಣ್ಯತ್ । ಈಡವಂದೇತ್ಯಾ-ದಿನಾದ್ಯುದಾತ್ತತ್ವಂ ।**

ಪ್ರತಿಪದಾರ್ಥ

**ಸವಿತಾ**—ಸವಿತೃದೇವತೆಯು । **ಪೃಥಿವ್ಯಾಃ**— ಭೂಮಿಯ । **ಅಷ್ಟೌ ಕಕುಭಃ**—ಎಂಟು ದಿಕ್ಕುಗಳನ್ನೂ (ನಾಲ್ಕು ದಿಕ್ಕುಗಳು ಮತ್ತು ನಾಲ್ಕು ವಿದಿಕ್ಕುಗಳು) । **ಯೋಜನಾ**— ಪ್ರಾಣಿಗಳನ್ನು ತಮ್ಮ ವ್ಯವಹಾರಾನುಭವಗಳಲ್ಲಿ ಸೇರಿಸತಕ್ಕ । **ಧನ್ವ**—ಅಂತರಿಕ್ಷವನ್ನೊಳಗೊಂಡ । **ತ್ರೀ**—ಪೃಥಿವ್ಯಾದಿ ಮೂರು ಲೋಕಗಳನ್ನೂ । **ಸಪ್ತ ಸಿಂಧೂನ್**—ಗಂಗಾದಿ ಸಪ್ತ ನದಿಗಳನ್ನೂ (ಅಥವಾ ಸಪ್ತಸಮುದ್ರಗಳನ್ನೂ) । **ವ್ಯಖ್ಯತ್**— ಚೆನ್ನಾಗಿ ಬೆಳಗಿಸಿದನು (ಹಾಗೆಯೇ) । **ಹಿರಣ್ಯಾಕ್ಷಃ**—ಸುವರ್ಣಮಯವಾದ ಕಣ್ಣುಳ್ಳ (ಅಥವಾ ಹಿತಕಾರಿಯಾಗಿಯೂ ರಮಣೀಯವಾಗಿಯೂ ಇರುವ ಕಣ್ಣುಳ್ಳ) । **ದೇವಃ**—ಪ್ರಕಾಶಮಾನನಾದ ಸವಿತೃವು । **ದಾಶುಷೇ**— ಹವಿಸ್ಸನ್ನು ಕೊಡತಕ್ಕ ಯಜಮಾನನಿಗೆ । **ವಾರ್ಯಾಣಿ**— ಹಾರೈಸಿದ ರತ್ನಗಳನ್ನು । **ದಧತ್**— ಕೊಡುತ್ತ । **ಅಗಾತ್**— ಇಲ್ಲಿಗೆ ಬರಲಿ ।

ಭಾವಾರ್ಥ

ಪ್ರಕಾಶಮಾನನಾದ ಸವಿತೃದೇವತೆಯು ಭೂಮಿಯ ಎಂಟು ದಿಕ್ಕುಗಳನ್ನೂ, ಪ್ರಾಣಿಗಳನ್ನು ತಮ್ಮ ತಮ್ಮ ವ್ಯವಹಾರಾನುಭವಗಳಲ್ಲಿ ಯೋಜಿಸತಕ್ಕ ಪೃಥಿವ್ಯಾದಿ ಲೋಕತ್ರಯವನ್ನೂ, ಗಂಗಾದಿ ಸಪ್ತನದಿಗಳನ್ನೂ ಮತ್ತು ಸಪ್ತಸಾಗರಗಳನ್ನೂ (ತನ್ನ ಕಿರಣಗಳಿಂದ) ಬೆಳಗಿಸಿದನು. ಅವನ ಕಣ್ಣು ಸುವರ್ಣ ನಿರ್ಮಿತವಾದದ್ದು. ಸರ್ವರಿಗೂ ಹಿತಕಾರಿಯಾಗಿಯೂ ರಮಣೀಯವಾಗಿಯೂ ಇದೆ. ಇಂತಹ ಕಣ್ಣುಳ್ಳ ಮತ್ತು ಪ್ರಕಾಶಮಾನನಾದ ಸವಿತೃವು ಯಜ್ಞಮಾಡಿ ಹವಿಸ್ಸನ್ನು ಕೊಡತಕ್ಕ ಯಜಮಾನನಿಗೆ ಅವನು ಬಯಸಿದ ಐಶ್ವರ್ಯಗಳನ್ನೂ ದಯಪಾಲಿಸುತ್ತಾ ಈ ಯಜ್ಞಭೂಮಿಗೆ ಬರಲಿ

English Translation

He has lighted up the eight quarters (points) of the earth, the three regions of living beings and the seven rivers (or seven Seas); may the golden-eyed Savitri come hither bestowing upon the offerer of the oblation, desirable riches.

ವಿಶೇಷವಿಷಯಗಳು

**ಅಷ್ಟೌ ಕಕುಭಃ ಪೃಥಿವ್ಯಾಃ**—ಎಂಟು ದಿಕ್ಕುಗಳು ಎಂದರೆ ಪೂರ್ವ, ಪಶ್ಚಿಮ, ದಕ್ಷಿಣ ಉತ್ತರ ಎಂಬ ನಾಲ್ಕು ದಿಕ್ಕುಗಳೂ, ಆಗ್ನೇಯ, ನೈಋತ್ಯ, ವಾಯುವ್ಯ, ಐಶಾನ್ಯ ಎಂಬ ನಾಲ್ಕು ವಿದಿಕ್ಕುಗಳೂ ಸೇರಿ ಎಂಟು ದಿಕ್ಕುಗಳು. Eight points of the Horizon

**ತ್ರೀ**— ಭೂಮ್ಯಂತರಿಕ್ಷ ಸ್ವರ್ಗಗಳೆಂಬ ಮೂರು ಲೋಕಗಳು.

**ಸಪ್ತ ಸಿಂಧೂನ್**— ಗಂಗಾ, ಯಮುನಾ, ಸರಸ್ವತೀ, ಶುತುದ್ರೀ, ಪರುಷ್ಣೀ, ಅಸಿಕ್ನೀ, ವಿತಸ್ತಾ ಎಂಬ ಏಳು ನದಿಗಳು ಅಥವಾ ಸಪ್ತ ಸಮುದ್ರಗಳು.

**ಹಿರಣ್ಯಾಕ್ಷಃ— ಹಿತರಮಣೀಯೆಚಕ್ಷುಯುರ್ಯಸ್ಯ ಸಃ** । ಅಥವಾ **ಹಿರಣ್ಮಯೇ ಅಕ್ಷಿಣೀ ಯಸ್ಯಾಸೌ ಹಿರಣ್ಯಾಕ್ಷಃ** ।

ಎಂದರೆ ನೋಡುವುದಕ್ಕೆ ರಮಣೀಯವಾದ, ಸುಂದರವಾದ ಕಣ್ಣುಗಳುಳ್ಳವನು ಅಥವಾ, ಸುವರ್ಣದಂತೆ ಅತಿ ಸುಂದರ ವಾದ ಕಣ್ಣುಗಳುಳ್ಳವನು.

**ವಾರ್ಯಾಣಿ—ವರಣೀಯಾನಿ** । ಎಲ್ಲರೂ ಅಪೇಕ್ಷಿಸುವ, ಎಲ್ಲರಿಗೂ ಬೇಕಾದ, desirable &c.

॥ ವ್ಯಾಕರಣಪ್ರಕ್ರಿಯಾ ॥

**ಅಖ್ಯತ್**—ಇದೇ ಸೂಕ್ತ ೫ ನೇ ಮಂತ್ರದಲ್ಲಿ ವಿವೃತವಾಗಿದೆ.

**ತ್ರೀ**—ನಪುಂಸಕಲಿಂಗದಲ್ಲಿ ತ್ರಿಶಬ್ದದ ಮುಂದೆ ಶಸ್, ಅದಕ್ಕೆ ಶಿ ಆದೇಶ ಸರ್ವನಾಮಸ್ಥಾನ ಸಂಜ್ಞೆಇದೆ. ನುಮಾಗಮ, ಉಪಧಾದೀರ್ಘ ತ್ರೀನ್+ಶಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂದು ಶಿಗೆ ಲೋಪ, ನಕಾರಕ್ಕೆ ಲೋಪ.

**ಧನ್ವ**—ಧವಿ ರವಿ ಧವಿ ಗತ್ಯರ್ಥಾಃ ಧಾತು, ಇದಿತ್, **ಇದಿತೋನುಮ್ ಧಾತೋಃ** (ಪಾ. ಸೂ. ೭-೧-೫೮) ಎಂದು ನುಮ್ ಆಗನು ಧನ್ವ್ ಎಂದಾಯಿತು. **ಕನಿನ್ಯುವೃಷಿತಕ್ಷಿರಾಜಿಧನ್ವಿದ್ಯುಪ್ರತಿದಿವಃ** (ಉ. ಸೂ. ೧-೧೫೪) ಈ ಧಾತುಗಳ ಮುಂದೆ ಕನಿನ್ ಪ್ರತ್ಯಯ ಬರುತ್ತೆ ಎಂದರ್ಥ, ಅನ್ ಎಂದು ನಿಲ್ಲುತ್ತೆ. ಧನ್ವ್+ಅನ್= ಧನ್ವನ್, **ಸುಪಾಂಸುಲುಕ್—**, ಎಂದು ಶಸ್‌ಗೆ ಲುಕ್ **ನಲೋಪಃ ಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂದು ನಕಾರಕ್ಕೆ ಲೋಪ, ಕನಿನ್ ಪ್ರತ್ಯಯ ನಿತ್. ನಿತ್ಸ್ವರ ಆದ್ಯುದಾತ್ತ ಬರುತ್ತೆ.

**ಯೋಜನಾ**—ಯುಜಿರ್ ಯೋಗೇ ಧಾತು, (ಪ್ರಾಣಿಗಳನ್ನು ಉಪಭೋಗಗಳೊಡನೆ) ಯೋಜಯನ್ತಿ= ಸೇರಿಸುವರು, ಯೋಜಯತೀತಿ ಯೋಜನಾ ಎಂದು ವಿಗ್ರಹ. **ನಂದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ** (ಪಾ. ಸೂ. ೩-೧-೧೩೪) ಎಂದು ಲ್ಯು ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂದು ಅದಕ್ಕೆ

ಆನ ಆದೇಶ. **ಣೇರನಿಟಿ** (ಪಾ. ಸೂ. ೬-೪-೫೧) ಇಡಾದಿಯಲ್ಲದ ಆರ್ಧಧಾತುಕ ಪರದಲ್ಲಿದ್ದರೆ ಣಿಗೆ ಲೋಪ ಬರುತ್ತೆ ಎಂದು ಣಿಗೆ ಲೋಪ, ಲಘೂಪಧಗುಣ, ಯೋಜನ ಶಬ್ದದ ಮುಂದೆ ಶ್‌ಸ್, ಶಿ ಆದೇಶ, ಶಿಲೋಪಾದಿ ಕಾರ್ಯಗಳು ಹಿಂದಿನಂತೆ.

**ಹಿರಣ್ಯಾಕ್ಷಃ**—ಹಿರಣ್ಯಾನಿ ಅಕ್ಷೀಣಿ ಯಸ್ಯ ಸಃ ಎಂದು ವಿಗ್ರಹ. ಸುವರ್ಣಮಯವಾದ ಕಣ್ಣುಳ್ಳವನು ಎಂದು ಅರ್ಥ. ಹಿರಣ್ಯಾಕ್ಷನ್ ಎಂದಿದೆ. **ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಂಗಾತ್ ಷಚ್** (ಪಾ. ಸೂ. ೫-೪-೧೧೩) ಸ್ವಾಂಗವಾಚಕವಾದ ಸಕ್ಥಿ ಅಥವಾ ಅಕ್ಷಿನ್ ಇವುಗಳನ್ನು ಕೊನೆಯಲ್ಲಿ ಹೊಂದಿರುವ ಬಹುವ್ರೀಹಿ ಸಮಾಸದ ಮುಂದೆ ಷಚ್ ಬರುತ್ತೆ ಅದು ಸಮಾಸಾಂತವೂ ತದ್ಧಿತವೂ ಆಗುತ್ತೆ ಎಂದರ್ಥ. **ಅದ್ರವಂ ಮೂರ್ತಿಮತ್ಸ್ವಾಂಗಂ ಪ್ರಾಣಿಸ್ಥಮವಿಕಾರಜಮ್ । ಅತತ್ಸ್ಥಂ ತತ್ರ ದೃಷ್ಟಂ ಚ ತೇನ ಚೇತ್ತತ್ಥಾಯುತಮ್ ॥** ಎಂದು ಸ್ವಾಂಗಕ್ಕೆ ಲಕ್ಷಣ, ಇದರ ಅರ್ಥ—ಇಲ್ಲಿ ಮೂರು ಲಕ್ಷಣಗಳು ಸಂಗ್ರಹಿಸಲ್ಪಟ್ಟಿವೆ. ದ್ರವವಲ್ಲದುದೂ, ಮೂರ್ತಿಮತ್ತು ಪ್ರಾಣಿಯಲ್ಲಿರುವುದೂ ಆಗಿ ವಿಕಾರಾಜನ್ಯವಾದುದು ಸ್ವಾಂಗ ಎನ್ನಲ್ಪಡುತ್ತೆ ಎಂದು ಪ್ರಥಮಸ್ವಾಂಗಲಕ್ಷಣ. ದ್ರವ ಎಂದರೆ ನೀರಾದ ವಸ್ತು, ಮುಟ್ಟುವುದಕ್ಕೆ ಯೋಗ್ಯವಾದ ದ್ರವ್ಯದ ಪರಿಮಾಣ ಮೂರ್ತಿ, ಮೂಗುಬಾಯಿಗಳಲ್ಲಿ ಸಂಚರಿಸುವ ವಾಯುಪ್ರಾಣ. ಅದುಳ್ಳವರು ಪ್ರಾಣಿಗಳು. ಇಲ್ಲಿ ಅಕ್ಷಿನ್ ಶಬ್ದವು ಕಣ್ಣು ಎಂದು ಬೋಧಿಸುತ್ತೆ. ಅದು ದ್ರವವಲ್ಲ ಒಂದು ಆಕಾರವುಳ್ಳದ್ದಾಗಿದೆ. ಪ್ರಾಣಿಯಲ್ಲಿರುವುದೂ ಆಗಿದೆ. ಇದು ಪ್ರಾಣಿಗಳಲ್ಲಿ ಸ್ವಾಭಾವಿಕವಾಗಿಯೇ ಇರುವುದು. ವಿಕಾರದಿಂದ ಬಂದಿದ್ದಲ್ಲ. ಆದ್ದರಿಂದ ಇದು ಸ್ವಾಂಗವಾಗುತ್ತೆ **ಅತತ್ಸ್ಥಂ ತತ್ರ ದೃಷ್ಟಂಚ** ಎಂದು ಎರಡನೇ ಲಕ್ಷಣ, ಈಗ ಪ್ರಾಣಿಯಲ್ಲಿಲ್ಲದೇ ಇರುವುದೂ ಹಿಂದೆ ಪ್ರಾಣಿಯಲ್ಲಿದ್ದುದೂ ಆದುದು ಸ್ವಾಂಗವು, ಸುಕೇಶೀ ರಥ್ಯಾ ಉದಾಹರಣೆ, ಬೀದಿಯಲ್ಲಿರುವ ಕೇಶವು ಈಗ ಪ್ರಾಣಿಯಲ್ಲಿಲ್ಲದಿದ್ದರೂ ಹಿಂದೆ ಪ್ರಾಣಿಯಲ್ಲಿರುವುದು. **ತೇನ ಚೇತ್ತತ್ಥಾಯುತಮ್** ತತ್ ಅಪ್ರಾಣಿದ್ರವ್ಯವು, ತೇನ=ಪ್ರಾಣಿಯಲ್ಲಿರುವ ಸ್ತನಾದ್ಯಾಕೃತಿಯುಳ್ಳ ಅವಯವವಿಶೇಷದಿಂದ, ತಥಾ=ಪ್ರಾಣಿಯಲ್ಲಿರುವಂತೆ, ಯುತಂ=ಕೂಡಿರುವುದು. ೩ ನೇ ಸ್ವಾಂಗ, ಉದಾಹರಣೆ ಸುಸ್ತನೀ ಪ್ರತಿಮಾ. ಪ್ರಕೃತ ಹಿರಣ್ಯಾಕ್ಷಿನ್ ಶಬ್ದದ ಮುಂದೆ ಷಚ್ ಬಂದರೆ ಹಿರಣ್ಯಾಕ್ಷಿನ್+ಅ. **ನಸ್ತದ್ಧಿತೇ** (ಪಾ. ಸೂ. ೬-೪-೧೪೪) ತದ್ಧಿತಪ್ರತ್ಯಯ ಪರದಲ್ಲಿದ್ದರೆ ನಕಾರಾಂತವೂ ಭಸಂಜ್ಞಕವೂ ಆದ ಅಂಗದ ಟಿಗೆ ಲೋಪ ಬರುತ್ತೆ ಎಂದು ಇನ್‌ಗೆ ಲೋಪ, ಅಂತೋದಾತ್ತ.

**ಅಗಾತ್**—ಇಣ್ ಗತೌ, ಲುಙ್, **ಇಣೋ ಗಾ ಲುಙಿ** (ಪಾ.ಸೂ. ೨-೪-೪೫) ಲುಙ್ ಪರದಲ್ಲಿದ್ದರೆ ಇಣ್ ಧಾತುವಿಗೆ ಗಾ ಆದೇಶ ಬರುತ್ತೆ ಎಂದು ಗಾ ಆದೇಶ, **ಗಾತಿಸ್ಥಾ—**, (ಪಾ. ಸೂ. ೨-೪-೭೭) ಎಂದು ಸಿಚ್‌ಗೆ ಲುಕ್ ತಿಪ್‌ನ ಇಕಾರಕ್ಕೆ **ಇತಶ್ಚ** ಎಂದು ಲೋಪ.

**ದಧತ್**—ಡುಧಾಞ್ ಧಾರಣಪೋಷಣಯೋಃ, ಲಟ್, ಶತೃ, ಶಪ್ ಶ್ಲು, ದ್ವಿತ್ವ,-ಧಾ+ಧಾ+ಅತ್ **ಹ್ರಸ್ವಃ** (ಪಾ. ಸೂ. ೭-೪-೫೯) ಎಂದು ಅಭ್ಯಾಸಕ್ಕೆ ಹ್ರಸ್ವ **ಅಭ್ಯಾಸೇಚರ್ಚ** (ಪಾ. ಸೂ. ೮-೪-೫೪) ಎಂದು ಧಕಾರಕ್ಕೆ ದಕಾರ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಕಿತ್ ವಾ ಙಿತ್ ಆದ ಸಾರ್ವಧಾತುಕ ಪ್ರತ್ಯಯ ಪರದಲ್ಲಿರುವಾಗ ಶ್ನಾ ಪ್ರತ್ಯಯ ಅಭ್ಯಸ್ತ ಇವುಗಳ ಆಕಾರಕ್ಕೆ ಲೋಪ ಬರುತ್ತೆ ಎಂದು ಆಕಾರಲೋಪ. ದಧ್+ಅತ್ **ನಾಭ್ಯಸ್ತಾಚ್ಛತುಃ** (ಪಾ. ಸೂ. ೭-೧-೭೮) ಅಭ್ಯಸ್ತದ ಮುಂದೆ ಇರುವ ಶತೃಪ್ರತ್ಯಯಕ್ಕೆ ನುಮ್ ಬರುವುದಿಲ್ಲ

ಎಂಬುಗರಿಂದ ಸುಪ್ರತ್ಯಯ ಪರದಲ್ಲಿರುವಾಗ **ಉಗಿದಚಾಂ—,** ಎಂದು ಪ್ರಾಪ್ತವಾಗುವ ನುಮ್‌ಗೆ ನಿಷೇಧ, ಸುಲೋಪ, **ಉಭೇ ಅಭ್ಯಸ್ತಮ್** (ಪಾ. ಸೂ. ೬-೧-೫) ಆರನೇ ಅಧ್ಯಾಯದ ಸೂತ್ರಗಳಿಂದ ದ್ವಿತ್ವವನ್ನು ಹೊಂದಿದ ಶಬ್ದ ಸಮುದಾಯಕ್ಕೆ ಅಭ್ಯಸ್ತಸಂಜ್ಞೆ ಬರುತ್ತೆ ಎಂದು ಅಭ್ಯಸ್ತಸಂಜ್ಞೆಯು ವಿಹಿತವಾಗಿದೆ. **ಅಭ್ಯಸ್ತಾ-ನಾಮಾದಿಃ** (ಪಾ. ಸೂ. ೬-೧-೧೮೯) ಎಂದು ಆದ್ಯುದಾತ್ತ.

**ದಾಶುಷೇ—ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ** (ಪಾ. ಸೂ. ೬-೧-೧೨) ದಾಶೃ ದಾನೇ ಧಾತು ಮುಂದೆ ಕ್ವಸು ಬಂದಾಗ **ಲಿಟಿಧಾತೋಃ—,** ಎಂದು ಬರುವ ದ್ವಿತ್ವಕ್ಕೆ ಅಭಾವವೂ ಇಡಭಾವವೂ ನಿಪಾತಿತವಾಗುತ್ತೆ. ಸಾಹ್ವಾನ್ ಎಂಬಲ್ಲಿ ಷಹ ಮರ್ಷಣೇ ಧಾತು ಪರಸ್ಮೈಪದವೂ ಕ್ವಸುಬಂದಾಗ ದ್ವಿತ್ವವಿಲ್ಲದಿರುವಿಕೆಯೂ ಇಡಾಗಮ ವಿಲ್ಲದೆ ಇರುವಿಕೆಯೂ ಉಪಧಾ ದೀರ್ಘವೂ ನಿಪಾತಿಸಲ್ಪಡುತ್ತೆ. ಮೀಢ್ವಾನ್ ಎಂಬಲ್ಲಿ ಮಿಹ ಸೇಚನೇ ಧಾತು ಮುಂದೆ ಕ್ವಸು ಬಂದಾಗ ದ್ವಿತ್ವಾಭಾವ ಇಡಭಾವಗಳು ನಿಪಾತಿಸಲ್ಪಡುತ್ತವೆ. ದಾಶ್ವಸ್ ಎಂಬುದರ ಮುಂದೆ ಚತುರ್ಥೀ ಏಕವಚನ ಙೇ ಪ್ರತ್ಯಯ, ದಾಶ್ವಸ್+ಏ, **ವಸೋಸ್ಸಂಪ್ರಸಾರಣಂ** (ಪಾ. ಸೂ. ೬-೪-೧೩೧) ವಸ್ವಂತವೂ ಭಸಂಜ್ಞಕವೂ ಆದ ಅಂಗಕ್ಕೆ ಸಂಪ್ರಸಾರಣ ಬರುತ್ತೆ ಎಂದು ವಕಾರಕ್ಕೆ ಉಕಾರ, ಪೂರ್ವರೂಪ, ದಾಶುಸ್+ಏ **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೯) ಎಂದು ಪ್ರತ್ಯಯಾವಯವವಾದ ಸಕಾರಕ್ಕೆ ಷಕಾರ, **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬೦) ಎಂಬಲ್ಲಿ ಸಾಹಚರ್ಯದಿಂದ ಧಾತುವಿಗೆ ಗ್ರಹಣ, ಪ್ರತ್ಯಯಕ್ಕೆ ಗ್ರಹಣ ಇಲ್ಲ. ಆದ್ದರಿಂದ ಇದರಿಂದ ಷತ್ವವು ಇಲ್ಲಿ ಬರಲಾರದು, ಈ ಅರ್ಥ ಶೇಖರಾದಿ ಗ್ರಂಥಗಳಲ್ಲಿ ವ್ಯಕ್ತವು.

**ವಾರ್ಯಾಣಿ—**ವೃಙ್ ಸಂಭಕ್ತೌ ಋಕಾರಾಂತ, **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಋಕಾರಾಂತ ಅಥವಾ ವ್ಯಂಜನಾಂತವಾದ ಧಾತುಗಳ ಮುಂದೆ ಣ್ಯತ್ ಬರುತ್ತೆ ಎಂದು ಣ್ಯತ್ ವೃ+ಯ **ಅಚೋ ಞ್ಣಿತಿ** (ಪಾ. ಸೂ. ೭-೨-೧೧೫) ಞಿತ್-ವಾ-ಣಿತ್ ಆದ ಪ್ರತ್ಯಯಪರದಲ್ಲಿದ್ದರೆ ಅಜಂತವಾದ ಅಂಗಕ್ಕೆ ವೃದ್ಧಿ ಬರುತ್ತೆ ಎಂದು ವೃದ್ಧಿ ಬರುತ್ತೆ ವಾರ್ಯ ಎಂದಾಗುತ್ತೆ. **ಈಡವಂದವೃಶಂಸದುಹಾಂ ಣ್ಯತಃ** (ಪಾ. ಸೂ. ೬-೧-೨೧೪) ಣ್ಯತ್ ಪ್ರತ್ಯಯಾಂತವಾದ ಇವುಗಳ ಆದಿಯು ಉದಾತ್ತವಾಗುತ್ತೆ ಎಂದು ಆದ್ಯುದಾತ್ತ ಬರುತ್ತೆ, ಈ ಸೂತ್ರಗಲ್ಲಿ ವೃಞ್ ವರಣೇ ಎಂಬುದಕ್ಕೆ ಗ್ರಹಣವಿಲ್ಲ. ವೃಞ್‌ಗೆ ಗ್ರಹಣಮಾಡಿದರೆ **ಏತಿಸ್ತುಶಾಸ್ವೃದೃ ಜುಷಃ ಕ್ಯಪ್** (ಪಾ. ಸೂ. ೩-೧-೧೦೯) ಎಂದು ವಿಶೇಷವಿಹಿತವಾದ ಕ್ಯಪ್ ಬರಬೇಕಾಗುತ್ತೆ. **ವೃಞಃೋ ಗ್ರಹಣಂ ಕರ್ತವ್ಯಂ** ಎಂಬ ವಾರ್ತಿಕದಿಂದ ಏತಿಸ್ತು ಎಂಬ ಸೂತ್ರದಲ್ಲಿ ವೃಞ್‌ಗೆ ಗ್ರಹಣವು ಸ್ಪಷ್ಟವು. **ಈಡವಂದ** ಎಂಬಲ್ಲಿ ವೃ ಪದದಿಂದ ವೃಙ್ ಧಾತುವಿಗೇ ಗ್ರಹಣವು. ಇಲ್ಲದಿದ್ದರೆ ಣ್ಯತ್‌ಪ್ರತ್ಯಯ ಬರಲಾರದು. ॥೮॥

॥ ಸಂಹಿತಾಪಾಠಃ ॥

ಹಿರಣ್ಯಪಾಣಿಃ ಸವಿತಾ ವಿಚರ್ಷಣಿರುಭೇ ದ್ಯಾವಾಪೃಥಿವೀ ಅನ್ತ-
ರೀಯತೇ ।

ಅಪಾಮೀವಾಂ ಬಾಧತೇ ವೇತಿ ಸೂರ್ಯಮಭಿ ಕೃಷ್ಣೇನ ರಜಸಾ
ದ್ಯಾಮೃಣೋತಿ ॥ ೯ ॥

॥ ಪದಪಾಠಃ ॥

ಹಿರಣ್ಯऽಪಾಣಿಃ । ಸವಿತಾ । ವಿऽಚರ್ಷಣಿಃ । ಉಭೇ ಇತಿ । ದ್ಯಾವಾ-
ಪೃಥಿವೀ ಇತಿ । ಅಂತಃ । ಈಯತೇ ।
ಅಪ । ಅಮೀವಾಂ । ಬಾಧತೇ । ವೇತಿ । ಸೂರ್ಯಂ । ಅಭಿ । ಕೃಷ್ಣೇನ ।
ರಜಸಾ । ದ್ಯಾಂ । ಋಣೋತಿ ॥ ೯ ॥

॥ ಸಾಯಣಭಾಷ್ಯಂ ॥

ಹಿರಣ್ಯಪಾಣಿಃ ಸುವರ್ಣಮಯಹಸ್ತಯುಕ್ತಃ । ಯದ್ವಾ । ಯಜಮಾನೇಭ್ಯೋ ದಾತುಂ ಹಿರಣ್ಯಂ ಹಸ್ತೇ ಧೃತವಾನ್ । ವಿಚರ್ಷಣಿರ್ವಿವಿಧದರ್ಶನಯುಕ್ತಃ । ವಿಚರ್ಷಣಿಃ ಪಶ್ಯತ್ಯರ್ಥಃ । ವಿಚರ್ಷಣಿರ್ವಿಶ್ವಚರ್ಷಣಿರಿತಿ ತನ್ನಾಮಸು ಪಾಠಾತ್ । ಸವಿತಾ ದೇವ ಉಭೇ ದ್ಯಾವಾಪೃಥಿವೀ ಅಂತಃ ಉಭಯೋರ್ಲೋಕಯೋರ್ಮಧ್ಯ ಈಯತೇ । ಗಚ್ಛತಿ । ಅಮೀವಾಂ ರೋಗಾದಿಬಾಧಾಮಪ ಬಾಧತೇ । ಸಮ್ಯಙ್ನಿರಾಕರೋತಿ । ತಥಾ । ಸೂರ್ಯಂ ವೇತಿ ಗಚ್ಛತಿ । ಯದ್ಯಪಿ ಸವಿತೃಸೂರ್ಯಯೋರೇಕದೇವತಾತ್ವಂ ತಥಾಪಿ ಮೂರ್ತಿಭೇದೇನ ಗಂತೃಗಂತವ್ಯಭಾವಃ । ಕೃಷ್ಣೇನ ತಮಸಃ ಕರ್ಷಕೇಣ ನಿವರ್ತಕೇನ ರಜಸಾ ತೇಜಸಾ ದ್ಯಾಮಾಕಾಶಮಭ್ಯೃಣೋತಿ । ಸರ್ವತೋ ವ್ಯಾಪ್ನೋತಿ ॥ ದ್ಯಾವಾಪೃಥಿವೀ । ದಿವಸಶ್ಚ ಪೃಥಿವ್ಯಾಂ । ಪಾ. ೬. ೩. ೩೦ । ಇತಿ ಚಶಬ್ದಾದ್ದಿವ್ಯಶಬ್ದಸ್ಯ ದ್ಯಾವಾದೇಶಃ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ । ನೋತ್ತರಪದೇಽನುದಾತ್ತಾದೌ । ಪಾ. ೬-೨-೧೪೨ । ಇತಿ ನ ನಿಷೇಧಃ । ಅಪೃಥಿವೀರುದ್ರಪೂಷಮಂಥಿಷ್ವಿತಿ ಪರ್ಯುದಸ್ತತ್ವಾತ್ । ಈಯತೇ । ಈಙ್ ಗತೌ । ತಿಙ್ಙತಿಙ ಇತಿ ನಿಘಾತಃ । ಬಾಧತೇ । ಬಾಧತೇ ಚ ವೇತಿ ಚೇತಿ ಸಮುಚ್ಚಯಾರ್ಥಪ್ರತೀತೇಶ್ಚಶಬ್ದಸ್ಯಾಪ್ರಯೋಗಾಚ್ಚಾದಿಲೋಪೇ ವಿಭಾಷೇತಿ ನಿಘಾತಪ್ರತಿಷೇಧಃ । ವೇತಿ । ವೀ ಗತಿಪ್ರಜನಕಾಂತ್ಯಶನಖಾದನೇಷು । ಅದಾದಿತ್ವಾಚ್ಛಪೋ ಲುಕ್ । ತಿಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಯದ್ಯಪ್ಯೇಷಾ ದ್ವಿತೀಯಾ ತಥಾಪಿ ತಿಙಃ ಪರತ್ವಾನ್ನಿಘಾತಾಭಾವಃ । ಋಣೋತಿ । ಋಣು ಗತೌ । ತನಾದಿತ್ವಾದುಃ । ತನಾದಿಷು ಕರೋತೇರೇವ ಗುಣೋ ನಾನ್ಯೇಷಾಮಿತ್ಯಾಪಿಶಲಿಮತೇನ ಗುಣಾಭಾವಃ ॥

॥ ಪ್ರತಿಪದಾರ್ಥ ॥

**ಹಿರಣ್ಯಪಾಣಿಃ**— ಸುವರ್ಣ ಹಸ್ತವುಳ್ಳ (ಅಥವಾ ಯಜಮಾನನಿಗೆ ಕೊಡಲು ಕೈಯಲ್ಲಿ ಚಿನ್ನವನ್ನು ಹಿಡಿದಿರುವ) । **ವಿಚರ್ಷಣಿಃ**— ನಾನಾವಿಧವಾದ ದರ್ಶನವುಳ್ಳ (ಭೂತಭವಿಷ್ಯದ್ವರ್ತಮಾನಗಳನ್ನು ನೋಡ ತಕ್ಕ) । **ಸವಿತಾ**— ಸವಿತೃದೇವತೆಯು । **ಉಭೇ ದ್ಯಾವಾಪೃಥಿವೀ**— ಭೂಮ್ಯಂತರಿಕ್ಷಗಳಾದ(ಎರಡು ಲೋಕ ಗಳ । **ಅಂತಃ**— ಮಧ್ಯದಲ್ಲಿ । **ಈಯತೇ**— ಸಂಚರಿಸುತ್ತಾನೆ । **ಅಮೀವಾಂ**— ರೋಗಾದ್ಯುಪದ್ರವಗಳನ್ನು । **ಅಪ ಬಾಧತೇ**— ಸಂಪೂರ್ಣವಾಗಿ ನಾಶಪಡಿಸುತ್ತಾನೆ. (ಹಾಗೆಯೇ) । **ಸೂರ್ಯಂ**— ಸೂರ್ಯನ ಸಮೀಪಕ್ಕೆ । **ವೇತಿ**— ಹೋಗುತ್ತಾನೆ । **ಕೃಷ್ಣೇನ**— (ತಮಸ್ಸನ್ನು)ನಿವಾರಿಸತಕ್ಕ । **ರಜಸಾ**— ತೇಜಸ್ಸಿನಿಂದ । **ದ್ಯಾಂ**— ಆಕಾಶವನ್ನು । **ಅಭಿ ಋಣೋತಿ**— ಸುತ್ತಲೂ ವ್ಯಾಪಿಸುತ್ತಾನೆ.

ಭಾವಾರ್ಥ

ಸವಿತೃದೇವತೆಯ ಹಸ್ತವು ಸುವರ್ಣನಿರ್ಮಿತವಾದದ್ದು. ಅಥವಾ ಆತನು ಯಜ್ಞ ಮಾಡತಕ್ಕ ಯಜಮಾನ ನಿಗೆ ಕೊಡಲು ಯಾವಾಗಲೂ ಕೈಯಲ್ಲಿ ಚಿನ್ನವನ್ನು ಹಿಡಿದಿರುತ್ತಾನೆ. ಅವನು ಸಕಲವನ್ನೂ ನೋಡಬಲ್ಲನು. ಭೂತ ಭವಿಷ್ಯದ್ವರ್ತಮಾನಗಳನ್ನು ವೀಕ್ಷಿಸಬಲ್ಲನು. ಈ ಸವಿತೃವು ಭೂಮ್ಯಂತರಿಕ್ಷಗಳೆಂಬ ಎರಡು ಲೋಕಗಳ ಮಧ್ಯದಲ್ಲಿ ಸಂಚರಿಸುತ್ತಾನೆ. ರೋಗಾದ್ಯುಪದ್ರವಗಳನ್ನು ಸಂಪೂರ್ಣವಾಗಿ ನಾಶಪಡಿಸುತ್ತಾನೆ ತನ್ನದೇ ಬೇರೆ ಮೂರ್ತಿಯಾದ ಸೂರ್ಯನ ಸಮೀಪಕ್ಕೆ ಹೋಗುತ್ತಾನೆ. ಮತ್ತು ಕಗ್ಗತ್ತಲೆಯನ್ನು ನಿವಾರಿಸತಕ್ಕ ತನ್ನ ದಿವ್ಯ ತೇಜಸ್ಸಿನಿಂದ ಆಕಾಶ ವನ್ನೆಲ್ಲಾ ಸುತ್ತಲೂ ವ್ಯಾಪಿಸುತ್ತಾನೆ.

English Translation

The golden-handed, all seeing Savitri travels between heaven and earth, dispels diseases, approaches the sun, and ascends the heaven through the dark regions of space·

॥ ವಿಶೇಷವಿಷಯಗಳು ॥

**ಹಿರಣ್ಯಪಾಣಿಃ— ಸುವರ್ಣಮಯಹಸ್ತಯುಕ್ತಃ । ಯದ್ವಾ । ಯಜಮಾನೇಭ್ಯೋ ದಾತುಂ ಹಿರಣ್ಯಂ ಹಸ್ತೇ ಧೃತವಾನ್ ॥** ಸುವರ್ಣಮಯವಾದ ಹಸ್ತಗಳುಳ್ಳವನು ಅಥವಾ ಯಜ್ಞಮಾಡುವ ಯಜಮಾನ ರಿಗೆ ಕೊಡುವುದಕ್ಕಾಗಿ ಕೈಯಲ್ಲಿ ಸುವರ್ಣವನ್ನು ಹಿಡಿದಿರುವವನು. ಈ ಶಬ್ದದ ವಿವರಣೆಯನ್ನು ನಾವು ಋಗ್ವೇದ ಸಂಹಿತಾಭಾಗ ೩. ಪೇಜುಗಳು ೭೫ ಮತ್ತು ೭೬ ರಲ್ಲಿ ವಿಶದವಾಗಿ ಕೊಟ್ಟಿದ್ದೇವೆ.

**ವಿಚರ್ಷಣಿಃ—ವಿಶೇಷೇಣ ದ್ರಷ್ಟಾ ಅಥವಾ ವಿಶ್ವಸ್ಯ ಭುವನಸ್ಯ ದ್ರಷ್ಟಾ ।** ಸಮಸ್ತ ಪ್ರಪಂಚವನ್ನು ನೋಡುವವನು. ಸೂರ್ಯನ ಕಣ್ಣಿಗೆ ಬೀಳದಿರುವ ವಸ್ತುವೇ ಇಲ್ಲ. ಎಂದರೆ ಸೂರ್ಯ ರಶ್ಮಿಗಳು ಪ್ರಪಂಚವೆಲ್ಲ ವನ್ನೂ ವ್ಯಾಪಿಸುವವು ಎಂದರ್ಥವು.

**ಉಭೇ ದ್ಯಾವಾಪೃಥಿವೀ ಅಂತರೀಯತೇ**— ಕೆಳಗೆ ಭೂಮಿ, ಮೇಲೆ ಸ್ವರ್ಗ, ಈ ಲೋಕಗಳ ಮಧ್ಯದಲ್ಲಿ ಅಂತರಿಕ್ಷಮಾರ್ಗವಾಗಿ ಸಂಚರಿಸುವನೆಂದರ್ಥವು.

**ಅಮೀವಾಂ ಅಪ ಬಾಧತೇ**— ರೋಗಾದಿಗಳನ್ನು ನಾಶಮಾಡುವವನು. ಸೂರ್ಯನ ಕಿರಣಗಳಿಗೆ ಅನೇಕ ವ್ಯಾಧಿಗಳನ್ನು ಪರಿಹಾರ ಮಾಡುವ ಶಕ್ತಿಯಿರುವುದೆಂದು ವೈದ್ಯಶಾಸ್ತ್ರಜ್ಞರ ಅಭಿಮತವು. ಈ ವಿಷಯದಲ್ಲಿ—

**ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ ।**

(ಋ. ಸಂ. ೧-೫೦-೧೧)

ಎಂದರೆ ನನ್ನ ಹೃದಯರೋಗವನ್ನು, ಕಾಮಾಲೆರೋಗವನ್ನೂ ನಾಶಮಾಡೆಂದು ಈ ಸೂಕ್ತದ ಋಷಿಯಾದ ಪ್ರಸ್ಕಣ್ವನು ಸೂರ್ಯನನ್ನು ಪ್ರಾರ್ಥಿಸಿರುವನು. ಸೂರ್ಯನ ಪ್ರಕಾಶವು ಪ್ರಾಣಿಗಳ ಮತ್ತು ಸಸ್ಯವರ್ಗದ ಜೀವನಕ್ಕೆ ಅತ್ಯವಶ್ಯಕವೆಂಬುದನ್ನೂ ಸೂರ್ಯನಿಲ್ಲದಿದ್ದರೆ ಭೂಮಿಯ ಮೇಲೆ ಪ್ರಾಣಿಗಳು ಮತ್ತು ಸಸ್ಯವರ್ಗವು ಜೀವಿಸಿರಲು ಸಾಧ್ಯವಿಲ್ಲವೆಂಬುದನ್ನೂ ಸಾಧಾರಣ ಜನರೂ ಸಹ ಚೆನ್ನಾಗಿ ತಿಳಿದಿರುವರು.

**ಸೂರ್ಯಮಭಿ**— ಇಲ್ಲಿ ಭಾಷ್ಯಕಾರರು **ಯದ್ಯಪಿ ಸವಿತೃ-ಸೂರ್ಯಯೋರೇಕದೇವತಾತ್ವಂ ತಥಾಪಿ ಮೂರ್ತಿಭೇದೇನ ಗಂತೃಗಂತವ್ಯಭಾವಃ ।** ಎಂದರೆ ಸೂರ್ಯ ಮತ್ತು ಸವಿತೃದೇವತೆಗಳು ಒಂದೇ ದೇವತೆಯಾದರೂ ಮೂರ್ತಿಭೇದದಿಂದ ಒಬ್ಬನು ಇನ್ನೊಬ್ಬನ ಸಮೀಪಕ್ಕೆ ಹೋಗುವನು ಎಂದು ಹೇಳಬಹುದು ಎಂದು ಸಮಾಧಾನ ಹೇಳಿರುವರು. ಯಾಸ್ಕರು ಸೂರ್ಯಶಬ್ದಕ್ಕೆ ಅರ್ಥವಿವರಣೆ ಮಾಡುವಾಗ—**ಸೂರ್ಯಃ ಸರ್ತೇರ್ವಾ ಸುವತೇರ್ವಾ ಸ್ವೀರ್ಯತೇರ್ವಾ** ಎಂದು ಹೇಳಿರುವರು. ಈ ಮೂರು ವಿಧವಾದ ವಿವರಣೆಗಳಲ್ಲಿ ಸ್ವೀರ್ಯತೇರ್ವಾ ಎಂದರೆ ಸುಪೂರ್ವಸ್ಯ ವಾ ಈರಯತೇಃ ಗತ್ಯರ್ಥಸ್ಯ । ಚನ್ನಾಗಿ ಅಥವಾ ವೇಗವಾಗಿ ಚಲಿಸುವವನು ಎಂದರ್ಥವಾಗುವುದು. ಈ ಅರ್ಥವನ್ನೇ ಈ ಋಕ್ಕಿನಲ್ಲಿ ಹೇಳುವುದಾದರೆ ಸೂರ್ಯನು ಅಂತರಿಕ್ಷದಲ್ಲಿ ವೇಗವಾಗಿ ಚಲಿಸುತ್ತಾ ಸ್ವರ್ಗಲೋಕವನ್ನು ಕುರಿತು ಹೋಗುವನು ಎಂದರ್ಥವನ್ನು ಹೇಳಿದರೆ ಸರಿಹೋಗುವುದು.

**ಕೃಷ್ಣೇನ ರಜಸಾ**— ಸೂರ್ಯನು ಸಂಚರಿಸುವ ಅಂತರಿಕ್ಷವು ಅಂಧಕಾರಮಯವಾಗಿರುವುದು. ಸೂರ್ಯನು ತನ್ನ ಪ್ರಕಾಶದಿಂದ ಎಲ್ಲವನ್ನೂ ಪ್ರಕಾಶಪಡಿಸುವನು.

॥ ವ್ಯಾಕರಣಪ್ರಕ್ರಿಯಾ ॥

**ದ್ಯಾವಾಪೃಥಿವೀ**— ದ್ಯೌಶ್ಚ ಪೃಥಿವೀ ಚ ಎಂದು ದ್ವಂದ್ವಸಮಾಸ. **ದಿವಸಶ್ಚ ಪೃಥಿವ್ಯಾಮ್** (ಪಾ. ಸೂ ೬-೩-೩೦) ಇಲ್ಲಿ ದಿವಸಶ್ಚ ಎಂಬಲ್ಲಿ ಚಕಾರದಿಂದ **ದಿವೋದ್ಯಾವಾ** ಎಂಬ ಹಿಂದಿನ ಸೂತ್ರದಿಂದ ದ್ಯಾವಾ ಎಂಬುದು ಅನುವೃತ್ತವಾಗುತ್ತೆ. ಸ್ವರಿತತ್ವಪ್ರತಿಜ್ಞೆ ಇರುವುದರಿಂದ ದಿವಃ ಎಂದು ಅನುವೃತ್ತಿ. ಏವಂಚ ದ್ವಂದ್ವ ಸಮಾಸದಲ್ಲಿ ಪೃಥಿವೀ ಎಂಬ ಉತ್ತರಪದ ಪರದಲ್ಲಿದ್ದರೆ ದಿವ್ ಶಬ್ದಕ್ಕೆ ದಿವಸ್—ದ್ಯಾವಾ ಈ ಆದೇಶಗಳು ಬರುವುವು **ಎಂದರ್ಥ**, ಪ್ರಕೃತ ದ್ಯಾವಾ ಆದೇಶ, ಇದು ಆದ್ಯುದಾತ್ತವಾಗಿ ನಿಪಾತಿವಾಗಿದೆ ಎಂದು **ನೋತ್ತರಪದೇ**, ಎಂಬಲ್ಲಿ ಕಾಮುದಿ

ಯಲ್ಲಿದೆ. **ಪ್ರಥೇಃಷಿವನ್ ಸಂಪ್ರಸಾರಣಂ ಚ** (ಉ. ಸೂ. ೧-೧೪೯) ಪ್ರಥ ಪ್ರಖ್ಯಾನೇ ಧಾತು ಮುಂದೆ ಷಿವನ್ ಪ್ರತ್ಯಯವೂ ಪ್ರಕೃತಿಗೆ ಸಂಪ್ರಸಾರಣವೂ ಬರುತ್ತೆ ಎಂದು. ಅವು ಬಂದರೆ ಪೃಥಿವ, ಎಂದಿರುವಾಗ **ಷಿದ್ಗೌರಾದಿಭ್ಯಶ್ಚ** ಪಾ. ಸೂ. ೪-೧-೪೧) ಎಂದು ಙೀಷ್ ಬರುತ್ತೆ. ಇದು ಪ್ರತ್ಯಯಸ್ವರದಿಂದ ಅಂತೋದಾತ್ತ, ಸಮಾಸ ಬಂದನಂತರ **ದೇವತಾದ್ವಂದ್ವೇ ಚ** (ಪಾ. ಸೂ. ೬-೨-೧೪೧) ದೇವತಾವಾಚಕಪದಗಳಿಗೆ ದ್ವಂದ್ವಸಮಾಸ ಬಂದಿದ್ದರೆ ಪೂರ್ವೋತ್ತರಪದಗಳೆರಡಕ್ಕೂ ಒಟ್ಟಿಗೆ ಪ್ರಕೃತಿಸ್ವರ ಬರುತ್ತೆ ಎಂದರೆ ಮೊದಲಿದ್ದ ಸ್ವರವೇ ಬರುವುದು ಅದು ವ್ಯತ್ಯಾಸವಾಗುವುದಿಲ್ಲ ಎಂದರ್ಥ. ಶೇಷನಿಘಾತದಿಂದ ಪೃಥಿವೀ ಎಂಬಲ್ಲಿ ಪೃವು ಅನುದಾತ್ತ, ಆದ್ದರಿಂದ ಅದು **ಅನುದಾತ್ತಾದಿನೋತ್ತರಪದೇಽನುದಾತ್ತಾದೌ—,** (ಪಾ. ಸೂ. ೬-೨-೧೪೨) ಅನುದಾತ್ತಾದಿಯಾದ ಉತ್ತರ ಪದ ಪರದಲ್ಲಿದ್ದರೆ ಪೂರ್ವೋತ್ತರ ಪದಗಳಿಗೆ ಒಟ್ಟಿಗೆ ಪ್ರಕೃತಿಸ್ವರ ಬರುವುದಿಲ್ಲ ಎಂದು ನಿಷೇಧ ಬರಲಿ ಎನ್ನಬಹುದು, ಈ ಸೂತ್ರದಲ್ಲಿ —**ಅಪೃಥಿವೀ ರುದ್ರಪೂಷ ಮನ್ಥಿಷು** (ಪಾ. ಸೂ. ೬-೪-೧೪೨) ಎಂದು ಹೇಳಿದೆ. ಏವಂಚ ಪೃಥಿವ್ಯಾದಿ ಭಿನ್ನವಾದ ಉತ್ತರಪದ ಪರದಲ್ಲಿದ್ದರೆ ಪೂರ್ವೋಕ್ತವಾದ ಉಭಯಪದ ಪ್ರಕೃತಿಸ್ವರ ಬರುವುದಿಲ್ಲ ಎಂದು **ನೋತ್ತರಪದೇ** ಎಂಬುವಕ್ಕೆ ಅರ್ಥವಾಗುತ್ತೆ. ಇಲ್ಲಿ ಪೃಥಿವಿಪದವೇ ಉತ್ತರಪದವಾಗಿದೆ, ಆದ್ದರಿಂದ **ನೋತ್ತರಪದೇ** ಎಂಬ ನಿಷೇಧವು ಇಲ್ಲಿ ಬರುವುದಿಲ್ಲ.

**ಈಯತೇ**—ಈಙ್ ಗತೌ ಧಾತು. ೪ ನೇ ಗಣ. ಧಾತು ಙಿತ್ **ಅನುದಾತ್ತಙಿತ ಆತ್ಮನೇಪದಮ್** (ಪಾ. ಸೂ. ೧-೩-೧೨) ಎಂದು ಆತ್ಮನೇಪದ, ಲಟ್‌ಗೆ ತ **ಟಿತ ಆತ್ಮನೇ ಪದಾನಾಂ** ಎಂದು ಟಿಗೆ ಏತ್ವ **ದಿವಾದಿಭ್ಯಃ ಶ್ಯನ್** ಎಂದು ಶ್ಯನ್. **ಕ್ಙಿತಿಚ** ಎಂದು ಗುಣಕ್ಕೆ ನಿಷೇಧ. **ತಿಙ್ಙತಿಙಃ** ಎಂದು ಸರ್ವಾನುದಾತ್ತ.

**ಅಮೀವಾಂ**—ಅಮ ರೋಗೇ **ಶೇವಯಹ್ವ ಜಿಹ್ವಾಗ್ರೀವಾಪ್ವಾಮೀವಾಃ** (ಉ. ಸೂ. ೧-೧೫೨)ಎಂದು ವನ್‌ಪ್ರತ್ಯಯ, ಈಟ್ ಇವು ನಿಪಾತಿಸಲ್ಪಡುತ್ತವೆ. ಟಾಪ್ ದ್ವಿತೀಯೈಕವಚನ ಅಮ್, ಪೂರ್ವರೂಪ

**ಬಾಧತೇ**—ಇಲ್ಲಿ ಸವಿತೃವು ರೋಗವನ್ನು (ಬಾಧತೇ) ಬಾಧಿಸುವನು, ಸೂರ್ಯಂ ವೇತಿ **ಚ,** ಮೂರ್ತಿ ಭೇದದಿಂದ ಭಿನ್ನನಾದ ಸೂರ್ಯನ ಬಳಿಗೆ ಹೋಗಿಯೂ ಹೋಗುವನು ಎಂದು ಚಾರ್ಥಪ್ರತೀತಿ ಇದ್ದರೂ ಚಕಾರಕ್ಕೆ ಪ್ರಯೋಗವಿಲ್ಲ. **ಚಾದಿಲೋಪೇವಿಭಾಷಾ** (ಪಾ ಸೂ. ೮-೧-೬೩) ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ ಬರುತ್ತೆ.

**ವೇತಿ**—ವೀ ಗತಿಪ್ರಜನಕಾಂತ್ಯಶನಖಾದನೇಷು ಧಾತು, ಲಟ್-ತಿಪ್, ಶಪ್, **ಅದಿಪ್ರಭೃತಿಭ್ಯಃ ಶಪಃ** ಎಂದು ಶಪ್‌ಗೆ ಲುಕ್, ಗುಣ. ತಿಪ್ ಪಿತ್ತಾದ್ದರಿಂದ ಅನುದಾತ್ತ. ಧಾತುಸ್ವರ ಉಳಿಯುತ್ತೆ. ಇದು ಎರಡನೆಯ ತಿಙಂತ. ಆದ್ದರಿಂದ **ಚಾದಿಲೋಪೇ**—, ಎಂಬುದು ಬರುವುದಿಲ್ಲ. ಆದರೂ ಬಾಧತೇ ಎಂಬ ತಿಙಂತದ ಮುಂದೆ ಇರುವುದರಿಂದ ಅತಿಙಂತಾತ್ಪರತ್ವವಿಲ್ಲದಕಾರಣ **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುವುದಿಲ್ಲ.

**ಋಣೋತಿ**—ಋಣು ಗತೌ ತನಾದಿಧಾತು, ಲಟ್, ತಿಪ್, **ತನಾದಿಕೃಞ್ಭ್ಯ ಉಃ** (ಪಾ ಸೂ. ೩-೧-೭೯) ಎಂದು ಉ ಪ್ರತ್ಯಯ, ಇದನ್ನು ನಿಮಿತ್ತಮಾಡಿಕೊಂಡು ಲಘೂಪಧಗುಣವು ಪ್ರಾಪ್ತವಾಗುತ್ತದೆ. ಆತ್ರೇಯ-ಆಪಿಶಲಿ ಮೊದಲಾದವರು, **ಸಂಜ್ಞಾಪೂರ್ವಕೋವಿಧಿರನಿತ್ಯಃ** (ಪರಿಭಾ. ೯೩) ಎಂದು ಗುಣವಿಧಿಯು

ಅನಿತ್ಯವಾದ್ದರಿಂದ ತನಾದಿಯಲ್ಲಿ ಅದು ಬರುವುದಿಲ್ಲ ಎನ್ನುವರು, ಅವರ ಮತದಿಂದ ಇಲ್ಲಿ ಗುಣ ಬರುವುದಿಲ್ಲ. ಅಥವಾ **ಬಹುಲಮೇತನ್ನಿದರ್ಶನಂ** ಎಂಬುದನ್ನನುಸರಿಸಿ ಋ ಧಾತುವನ್ನು ಸ್ವಾದಿಯಲ್ಲಿ ಪಠಿಸಿ, **ಸ್ವಾದಿಭ್ಯಃ ಶ್ನುಃ** (ಪಾ. ಸೂ. ೮-೩-೭೦) ಎಂದು ಶ್ನು ವಿಕರಣವನ್ನು ಹಚ್ಚಬೇಕು, ಅದು ಅಪಿತ್ತಾದ ಸಾರ್ವಧಾತುಕ. ಆದ್ದರಿಂದ ಙಿತ್ತಾಗುತ್ತೆ. **ಕ್ಙಿತಿಚ** ಎಂದು ಗುಣಕ್ಕೆ ನಿಷೇಧ ಬರುತ್ತೆ. ಋಣೋತಿ ಎಂದಾಗುತ್ತೆ ಎಂದು ಹೇಳಬಹುದು ॥೯॥



॥ ಸಂಹಿತಾಪಾಠಃ ॥

ಹಿರಣ್ಯಹಸ್ತೋ ಅಸುರಃ ಸುನೀಥಃ ಸುಮೃಳೀಕಃ ಸ್ವವಾँ ಯಾತ್ವ-
ರ್ವಾಙ್ ।
ಅಪಸೇಧನ್ರಕ್ಷಸೋ ಯಾತುಧಾನಾನಸ್ಥಾದ್ದೇವಃ ಪ್ರತಿದೋಷಂ
ಗೃಣಾನಃ ॥ ೧೦ ॥

॥ ಪದಪಾಠಃ ॥

ಹಿರಣ್ಯಽಹಸ್ತಃ । ಅಸುರಃ । ಸುಽನೀಥಃ । ಸುಽಮೃಳೀಕಃ । ಸ್ವಽವಾನ್ ।
ಯಾತು । ಅರ್ವಾಙ್ ।
ಅಪಽಸೇಧನ್ । ರಕ್ಷಸಃ । ಯಾತುಽಧಾನಾನ್ । ಅಸ್ಥಾತ್ । ದೇವಃ ।
ಪ್ರತಿಽದೋಷಂ । ಗೃಣಾನಃ ॥ ೧೦ ॥

॥ ಸಾಯಣಭಾಷ್ಯಂ ॥

ಹಿರಣ್ಯಹಸ್ತೋಽಸುರಃ ಪ್ರಾಣದಾತಾ ಸುನೀಥಃ ಸುಷ್ಠು ನೇತಾ । ಪ್ರಶಸ್ಯ ಇತ್ಯರ್ಥಃ । ಸುನೀಥಃ ಪಾಕ ಇತಿ ಪ್ರಶಸ್ಯನಾಮಸು ಪಾಠಾತ್ । ಸುಮೃಳೀಕಃ ಸುಷ್ಠು ಸುಖಯಿತಾ ಸ್ವವಾನ್

**ಧನವಾನ್ ಅರ್ವಾಙ್ ಅಭಿಮುಖಃ ಕರ್ಮದೇಶೇ ಗಚ್ಛತು । ಕಿಂಚಾಯಂ ದೇವಃ ಪ್ರತಿದೋಷಂ ಪ್ರತಿರಾತ್ರಿ ಗೃಣಾನಃ ಸ್ತೂಯಮಾನೋಽಸ್ಥಾತ್ । ಸ್ಥಿತವಾನ್ । ಕಿಂ ಕುರ್ವನ್ । ರಕ್ಷಸೋ ಬಾಧಕತ್ವೇನ ರಕ್ಷಣನಿಮಿತ್ತಭೂತಾನ್ । ರಕ್ಷೋ ರಕ್ಷಿತವ್ಯಮಸ್ಮಾದಿತಿ ಯಾಸ್ಕಃ । ನಿ. ೪-೧೮ । ಯಾತುಧಾನಾನಸುರಾನ-ಪಸೇಧನ್ ನಿರಾಕುರ್ವನ್ ॥ ಹಿರಣ್ಯಹಸ್ತಾದಯೋ ಗತಾಃ । ಸುಮೃಳೀಕಃ । ಸುಷ್ಟು ಮೃಳೀಕಂ ಸುಖಂ ಯಸ್ಯಾಸೌ ತಥೋಕ್ತಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಸ್ವವಾನ್ । ಸ್ವಮಸ್ಯಾಸ್ತೀತಿ ಸ್ವವಾನ್ । ಮಾದುಪಧಾಯಾ ಇತಿ ವತ್ವಂ । ಸಂಹಿತಾಯಾಂ ನಕಾರಸ್ಯ ದೀರ್ಘಾದಟಿ ಸಮಾನಪಾದ ಇತಿ ರುತ್ವಂ । ಆತೋಽಟಿ ನಿತ್ಯಮಿತಿ ಸಾನುನಾಸಿಕ ಆಕಾರಃ । ರೋರ್ಯತ್ವಂ । ಯಲೋಪಶ್ಚ । ಅಪಸೇಧನ್ । ಷಿಧು ಗತ್ಯಾಂ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣ ಕೃದುತ್ತರಪದ ಪ್ರಕೃತಿ-ಸ್ವರತ್ವಂ । ರಕ್ಷಸಃ । ರಕ್ಷ ಪಾಲನ ಇತ್ಯಸ್ಮಾದಪಾದಾನ ಔಣಾದಿಕೋಽಸಿಪ್ರತ್ಯಯಃ । ಯದ್ವಾ । ರಕ್ಷ್ಯಂತ್ಯನೇನೇತಿ ರಕ್ಷೋ ಬಲಂ । ಕರಣೇಽಸುನ್ । ತದೇಷಾಮಸ್ತೀತಿ ರಕ್ಷಸ್ವಿನಃ । ಮತ್ವರ್ಥಪ್ರತ್ಯಯ-ಲೋಪಶ್ಛಾಂದಸಃ । ಪ್ರತ್ಯಯಸ್ವರಃ । ಯಾತುಧಾನಾನ್ । ಯತ ನಿಕಾರೋಪಸಂಸ್ಕಾರಯೋಃ । ತಸ್ಮಾಣ್ಣ್ಯಂತಾದೌಣಾದಿಕೋ ಭಾವ ಉಪ್ರತ್ಯಯಃ । ಯಾತವೋ ಯಾತನಾ ನಿಷು ಧೀಯಂತ ಇತಿ ಯಾತು-ಧಾನಾಃ । ಅಧಿಕರಣೇ ಲ್ಯುಟ್ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಅಸ್ಥಾತ್ । ಗಾತಿಸ್ಥೇತಿ ಸಿಚೋ ಲುಕ್ । ಪ್ರತಿದೋಷಂ ದೋಷಾಂ ದೋಷಾಂ । ಪ್ರತಿ ವೀಪ್ಸಾಲಕ್ಷಣೇ ಯಥಾರ್ಥೇ । ಅವ್ಯಯೀಭಾವಃ । ಗೃಣಾನಃ । ಗೄ ಶಬ್ದೇ । ಕರ್ಮಣಿ ಲಟಃ ಶಾನಚ್ । ವ್ಯತ್ಯಯೇನ ಶ್ನಾ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತಂ । ಚಿತ ಇತ್ಯಂತೋದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಹಿರಣ್ಯಹಸ್ತಃ**— ಸುವರ್ಣನಿರ್ಮಿತವಾದ ಕೈಯುಳ್ಳ (ಅಥವಾ ಯಜ್ಞಕರ್ತನಿಗೆ ಕೊಡಲು ಕೈಯಲ್ಲಿ ಚಿನ್ನವನ್ನು ಹಿಡಿದಿರುವ) । **ಅಸುರಃ**— ಪ್ರಾಣದಾಯಕನಾದ । **ಸುನೀಥಃ**— ಮಾರ್ಗದರ್ಶಕನಾಗಿ ಅಭೀಷ್ಟ ಪ್ರದೇಶವನ್ನು ಸೇರಿಸುವುದರಿಂದ ಶ್ಲಾಘ್ಯನಾದ । **ಸುಮೃಳೀಕಃ**— ಅತ್ಯಂತ ಹರ್ಷಯುಕ್ತನಾದ (ಅಥವಾ ಹರ್ಷ ದಾಯಕನಾದ) । **ಸ್ವವಾನ್**— ಧನವಂತನಾದ ಸವಿತೃವು । **ಅರ್ವಾಙ್**— ಯಜ್ಞಭೂಮಿಯ ಅಭಿಮುಖವಾಗಿ (ನಡೆಯಲಿ ಏತಕ್ಕೆಂದರೆ) । **ದೇವಃ**— ಸವಿತೃದೇವನು । **ಪ್ರತಿದೋಷಂ**— ಪ್ರತಿರಾತ್ರಿಯೂ । **ಗೃಣಾನಃ**— ಸ್ತೋತ್ರಮಾಡಲ್ಪಡುವವನಾಗಿ । **ರಕ್ಷಸಃ**—ಹಿಂಸಕರಾದ । **ಯಾತುಧಾನಾನ್**— ರಾಕ್ಷಸರನ್ನು । **ಅಪಸೇಧನ್**— ತಡೆದು ಓಡಿಸುತ್ತ । **ಅಸ್ಥಾತ್**— (ಯಜ್ಞ ಭೂಮಿಯಲ್ಲೇ) ನಿಲ್ಲುತ್ತಾನೆ.

ಭಾವಾರ್ಥ

ಸವಿತೃದೇವತೆಯು ಹಸ್ತವು ಸುವರ್ಣ ನಿರ್ಮಿತವಾಗಿದೆ. ಅಥವಾ ಆವನು ಯಜ್ಞಕರ್ತನಿಗೆ ಕೊಡಲು ಯಾವಾಗಲೂ ಚಿನ್ನವನ್ನು ಕೈಯಲ್ಲಿ ಹಿಡಿದಿರುತ್ತಾನೆ. ಸಕಲ ಪ್ರಾಣಿಗಳಿಗೂ ಪ್ರಾಣದಾತನು. ಸಕಲರಿಗೂ ಬೆಳಕು ತೋರಿಸಿ ಮಾರ್ಗದರ್ಶಕನಾದುದರಿಂದ ಸಕಲರಿಗೂ ಹರ್ಷದಾಯಕನು. ಇಂತಹ ಐಶ್ವರ್ಯವಂತನಾದ ಸವಿತೃವು ಯಜ್ಞಭೂಮಿಯ ಕಡೆಗೆ ನಡೆಯಲಿ— ಏತಕ್ಕೆಂದರೆ ಅಲ್ಲಿ ರಾಕ್ಷಸರ ಹಿಂಸೆಯು ಜಾಸ್ತಿ. ಸವಿತೃದೇವತೆಯನ್ನು

ಚೆನ್ನಾಗಿ ಪ್ರತಿ ರಾತ್ರಿಯೂ ಸ್ತೋತ್ರಮಾಡಿದರೆ ಅವನು ಆ ಸ್ತೋತ್ರಕ್ಕೆ ಸಂತೋಷಪಟ್ಟು ಯಜ್ಞಭೂಮಿಯಲ್ಲೇ ನಿಂತು ಹಿಂಸಕರಾದ ರಾಕ್ಷಸರನ್ನು ತಡೆದು ಓಡಿಸುತ್ತಾ ಯಜ್ಞಭೂಮಿಯಲ್ಲೇನಿಲ್ಲುತ್ತಾನೆ.

### English Translation

May the golden-handed Savitri, the excellent guide, the giver of happiness and possessor of riches come to this sacrifice ; praised by men he drives off the harmful Rukshasas every night.

### ವಿಶೇಷವಿಷಯಗಳು

**ಹಿರಣ್ಯಹಸ್ತಃ**— ಇದರ ಅರ್ಥವೂ ಮತ್ತು ನಿಷ್ಪತ್ತಿಯೂ ಹಿರಣ್ಯಪಾಣಿಃ ಎಂಬ ಶಬ್ದದಂತೆಯೇ ಇರುವುದು.

**ಅಸುರಃ—ಅಸುಂ ಪ್ರಾಣಂ ರಾತಿ ದದಾತೀತ್ಯಸುರಃ । ಪ್ರಾಣದಾತಾ ।** ಪ್ರಾಣದಾತನು ಪ್ರಾಣವನ್ನು ರಕ್ಷಿಸುವವನು. life giving.

**ಸುನೀಥಃ**— ಸುಷ್ಠು ನೇತಾ ಪ್ರಶಸ್ಯ ಇತ್ಯರ್ಥಃ । ನಾಯಕನು, ಶ್ರೇಷ್ಠನು, ಸ್ತುತಿಯೋಗ್ಯನು, ಅಸ್ರೇಮಾಃ ಅನೇಮಾಃ ಮೊದಲಾದ ಹತ್ತು ಪ್ರಶಸ್ಯ ವಾಚಕ ಶಬ್ದಗಳ ಮಧ್ಯದಲ್ಲಿ ಸುನೀಥಃ ಎಂಬ ಶಬ್ದವು ಪಠಿತವಾಗಿರುವುದ ಸುನೀಥಃ ಎಂದರೆ ಪ್ರಶಸ್ಯನು ಎಂದರ್ಥವು.

**ಸುಮೃಳೀಕಃ—ಸುಷ್ಠು ಸುಖಯಿತಾ ।** ಸುಖವನ್ನುಂಟುಮಾಡುವವನು.

**ಸ್ವವಾನ್—ಸ್ವಮಸ್ಯಾಸ್ತೀತಿ ಸ್ವವಾನ್ । ಧನವಾನ್ ।** ಧನವುಳ್ಳವನು

**ಅಪಸೇಧನ್—ನಿರಾಕುರ್ವನ್ ।** ತಿರಸ್ಕಾರ ಮಾಡುತ್ತಾ, ಓಡಿಸುತ್ತಾ, ಪರಿಹಾರಮಾಡುತ್ತಾ ಇತ್ಯಾದಿ.

**ರಕ್ಷಃ—ರಕ್ಷಂತ್ಯನೇನೇತಿ ರಕ್ಷೋ ಬಲಂ । ರಕ್ಷೋ ರಕ್ಷಿತವ್ಯಮಸ್ಮಾದಿತಿ ಯಾಸ್ಕಃ** (ನಿ. ೪-೧೮) ರಕ್ಷಿಸುವವನು ಅಥವಾ ರಾಕ್ಷಸಾದಿಗಳಿಂದ ರಕ್ಷಿಸಲು ಸಮರ್ಥನು.

**ಯಾತುಧಾನಾನ್**— ಈ ಶಬ್ದಕ್ಕೆ ಸಾಮಾನ್ಯವಾಗಿ, ರಾಕ್ಷಸರು, ನಿಶಾಚರರು. ಅಸುರರು ಎಂದು ಅರ್ಥವನ್ನು ಹೇಳಬಹುದಾದರೂ ಇದರ ಸರಿಯಾದ ಅರ್ಥವು ಮಂತ್ರಗಾರ, ಮಾಟಗಾರ, ಮಾಯಗಾರ, Sorcerer, Wizard, magician ಎಂದಾಗುವುದು. ಒಂದೆರಡು ಉದಾಹರಣೆಗಳನ್ನು ಕೊಡುತ್ತೇವೆ.

**ಅಯೋದಂಷ್ಟ್ರೋ ಅರ್ಚಿಷಾ ಯಾತುಧಾನಾನುಪ ಸ್ಪೃಶ ಜಾತವೇದಃ ಸಮಿದ್ಧಃ ।**
(ಋ. ಸಂ. ೧೦-೮೭-೨)

**ಉತಾಂತರಿಕ್ಷೇ ಪರಿ ಯಾಹಿ ರಾಜಞ್ಜಂಭೈಃ ಸಂ ಧೇಹ್ಯಭಿ ಯಾತುಧಾನಾನ್ ।**
(ಋ. ಸಂ. ೧೦ ೮೭ ೩)

**ಇಹ ಪ್ರ ಬ್ರೂಹಿ ಯತಮಃ ಸೋ ಅಗ್ನೇ ಯೋ ಯಾತುಧಾನೋ ಯ ಇದಂ ಕೃಣೋತಿ ।**
(ಋ. ಸಂ. ೧೦-೮೭-೭)

**ತಸ್ಯಾಗ್ನೇ ಪೃಷ್ಟೀರ್ಹರಸಾ ಶೃಣೀಹಿ ತ್ರೇಧಾ ಮೂಲಂ ಯಾತುಧಾನಸ್ಯ ವೃಶ್ಚ ।**
(ಋ. ಸಂ. ೧೦-೮೭-೭)

ಮತ್ತೂ ಈ ಶಬ್ದವು ಅಥರ್ವಣವೇದದಲ್ಲಿ ಅ. ವೇ. ೧-೭-೧; ೪-೩-೪, ೬-೧೩-೩; ೬-೩೨-೨; ೭-೭೦-೨; ೧೯-೪೬-೨; ಕಾಠಕಸಂಹಿತಾ. ೩೭-೧೪; ವಾಜಸನೇಯಸಂಹಿತಾ. ೮-೭, ಶತಪಥಬ್ರಾಹ್ಮಣ ೭-೪-೧-೯ ಇತ್ಯಾದಿ ಮಂತ್ರಗಳಲ್ಲಿ ಪಠಿತವಾಗಿದೆ.

**ಪ್ರತಿದೋಷಂ—ಪ್ರತಿರಾತ್ರಾಣಿ ।** ಪ್ರತಿ ದಿನ ರಾತ್ರಿಯಲ್ಲಿಯೂ

**ಗೃಣಾನಃ—ಗೄ ಶಬ್ದೇ । ಸ್ತೂಯಮಾನಃ ।** ಸ್ತೋತ್ರ ಮಾಡಲ್ಪಡುವವನಾಗಿ.

ವ್ಯಾಕರಣಪ್ರಕ್ರಿಯಾ

**ಸ್ವವಾನ್**—ಸ್ವಂ ಏಷಾಂ ಅಸ್ತಿ ಎಂದು ವಿಗ್ರಹ. **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** (ಪಾ. ಸೂ. ೫-೨-೯೪) ಎಂದು ಮತುಪ್. **ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ** (ಪಾ. ಸೂ. ೮-೨-೯) ಮ್ ಚ್ ಅಶ್ಚ ಅನಯೋಸ್ಸಮಾಹಾರಃ ಮಂ ತಸ್ಮಾತ್ ಎಂದು ವಿಗ್ರಹ. **ಯಂ ವಿಧಿಂ ಪ್ರತ್ಯುಪದಿಶ್ಯತೇ ... ಯೇನ ನಾಪ್ರಾಪ್ತೇ** — ಎಂಬ ನ್ಯಾಯದಿಂದ ಮತುಪ್ರತ್ಯಯದಿಂದ ಪ್ರಾತಿಪದಿಕವು ಆಕ್ಷಿಪ್ತವಾಗುತ್ತೆ. ಮಾತ್ ಎಂಬುದು ಅದಕ್ಕೆ ವಿಶೇಷಣವಾದ್ದರಿಂದ ತದಂತಲಾಭ, **ಉಪಧಾಯಾಶ್ಚ** ಎಂಬಲ್ಲಿಯೂ ಮಾತ್ ಎಂಬುದಕ್ಕೆ ಸಂಬಂಧ, ಏವಂಚ ಮವರ್ಣಾವರ್ಣಾನ್ಯತರಚರಮಾವಯವಕವಾದ ಯವಾದಿಗಣಕ್ಕೆ ಸೇರದ ಪ್ರಾತಿಪದಿಕದ ಮುಂದೆ ಇರುವ ಮತುಪ್‌ನ ಮಕಾರಕ್ಕೆ ವಕಾರ ಬರುತ್ತೆ ಎಂದು ಒಂದು ವಾಕ್ಯಾರ್ಥ, ಮವರ್ಣಾವರ್ಣಾನ್ಯತರೋಪಧಕ ಪ್ರಾತಿಪದಿಕವಾದ ಯವಾದಿಗಣಾನಂತರ್ಗತಶಬ್ದದ ಮುಂದೆ ಇರುವ ಮತುಪ್ಪಿನ ಮಕಾರಕ್ಕೆ ವಕಾರಬರುತ್ತೆ ಎಂದು ಮತ್ತೊಂದುವಾಕ್ಯ. ಇಲ್ಲಿ ಸ್ವ ಎಂಬುದು ಅವರ್ಣಾಂತ, ಆದ್ದರಿಂದ ಪ್ರಥಮ ವಾಕ್ಯದಿಂದ ಮಕಾರಕ್ಕೆ ವಕಾರ, ಸ್ವವತ್ ಇದರ ಮುಂದೆ ಸು ಪ್ರತ್ಯಯ, **ಅತ್ವಸಂತಸ್ಯಚಾಧಾತೋಃ** (ಪಾ. ಸೂ. ೬-೪-೧೪) ಅತುವನ್ನು ಕೊನೆಯಲ್ಲಿ ಹೊಂದಿದ್ದರೂ, ಧಾತುಸಂಬಂಧಿಯಲ್ಲದ ಅಸ್‌ನ್ನು ಕೊನೆಯಲ್ಲಿ ಹೊಂದಿದ್ದರೂ ಧಾತುಸಂಬಂಧಿಭಿನ್ನಸರ್ವನಾಮಸ್ಥಾನ ಪರದಲ್ಲಿದ್ದರೆ ಉಪಧೆಗೆ ದೀರ್ಘ ಬರುತ್ತೆ ಎಂದರ್ಥ. ನುಮಾಗಮವು ಪರವೂ ನಿತ್ಯವೂ ಆಗಿದೆ. ಆದರೂ ವಚನಸಾಮರ್ಥ್ಯದಿಂದ ಮೊದಲು ಈ ಸೂತ್ರದಿಂದ ದೀರ್ಘ, ನಂತರ **ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ** (ಪಾ. ಸೂ. ೭-೧-೭೦) ಎಂದು ನುಮ್ ಆಗಮ, ಸ್ವವಾನ್‌ತ್+ಸು, **ಹಲ್ಙ್ಯಾಭ್ಯಃ—**, ಎಂದು ಸುಲೋಪ. **ಸಂಯೋಗಾಂತಸ್ಯ ಲೋಪಃ** (ಪಾ. ಸೂ. ೮-೨-೨೩) ಎಂದು ತ್‌ಗೆ ಲೋಪ. ಈ ತಲೋಪವು ಅಸಿದ್ಧವಾಗುವುದರಿಂದ **ನಲೋಪಃಪ್ರಾ—**, ಎಂದು ನ್‌ಗೆ ಲೋಪ ಬರುವುದಿಲ್ಲ. ಸಂಹಿತಾಕಾಲದಲ್ಲಿ ಅಟ್ ಪ್ರತ್ಯಾಹಾರಕ್ಕೆ ಸೇರಿದ ಯಕಾರವು ಪರದಲ್ಲಿದೆ. **ದೀರ್ಘಾದಟಿಸಮಾನಪಾದೇ** (ಪಾ. ಸೂ. ೮-೩-೯) ನಕಾರ, ಅಟ್ ಪ್ರತ್ಯಾಹಾರಕ್ಕೆ ಸೇರಿದ ವರ್ಣ ಇವು ಒಂದೇ ಪಾದದಲ್ಲಿದ್ದರೆ [illegible] ಹಿಂದೆ ಇರುವುದೂ ದೀರ್ಘದ ಮುಂದೆ

ಇರುವುದೂ ಆದ ನಕಾರಕ್ಕೆ ರು ಆದೇಶ ಬರುತ್ತೆ ಎಂದು ರು ಆದೇಶ, ಸ್ವನಾರ್+ಯಾತು, **ಆತೋಽಟಿ ನಿತ್ಯಮ್** (ಪಾ. ಸೂ. ೮-೩-೩) ಅಟ್ ಪರದಲ್ಲಿದ್ದರೆ ರುವಿಗಿಂತಲೂ ಪೂರ್ವದಲ್ಲಿರುವ ಆಕಾರಕ್ಕೆ ಅನುನಾಸಿಕ ಬರುತ್ತೆ ಎಂದು ಅನುನಾಸಿಕ ಆಕಾರ, ಸವಾರ್+ಯಾತು, **ಭೋಭಗೋ ಅಘೋ ಅಪೂರ್ವಸ್ಯಯೋಽಶಿ** (ಪಾ. ಸೂ. ೮-೩-೧೭) ಎಂದು ರುಗೆ ಯ್ ಆದೇಶ. **ಲೋಪಶ್ಶಾಕಲ್ಯಸ್ಯ** (ಪಾ. ಸೂ. ೮-೩-೧೯) ಎಂದು ಯ್‌ಗೆ ಲೋಪ.

**ಅಪಸೇಧನ್**—ಷಿಧ ಗತ್ಯಾಂ ೧ನೇ ಗಣ ೪೭ ನೇ ಧಾತು, ೪೮, ಷಿಧೂ ಶಾಸ್ತ್ರೇ ಮಾಂಗಲ್ಯೇಚ, ಷಿಧು ಸಂರಾದ್ಧೌ ೧೯೨ ನೇ ಧಾತು ೪ನೇ ಗಣ. ಈಗ ಇರುವ ಧಾತುಪಾಠದಲ್ಲಿ ಈ ಧಾತುಗಳಿವೆ, ಷಿಧು ಗತ್ಯಾಂ ಎಂದು ಇಲ್ಲ. ಲಟ್, ಅದಕ್ಕೆ ಶತೃ ಶಪ್, ಲಘೂಪಧಗುಣ ಸೇಧತ್, ಇದರ ಮುಂದೆ ಸು, ಉಗಿತ್ತ್ವಾದ್ದರಿಂದ ನುಮ್, ಸೇಧನ್‌ತ್‌ಸು, ಹಲ್‌ಙ್ಯಾದಿಲೋಪತಲೋಪಗಳು, ಅಪ ಉಪಸರ್ಗ, ಶಪ್ ಪಿತ್ತ್ವಾದ್ದರಿಂದಲೂ, ಶತೃವು ಲಕಾರ ಸ್ಥಾನದಲ್ಲಿ ಬಂದ ಸಾರ್ವಧಾತುಕವಾದ್ದರಿಂದಲೂ ಎರಡೂ ಅನುದಾತ್ತ. ಅಪ ಪದದೊಂದಿಗೆ ಸಮಾಸ ಬಂದಮೇಲೆ ಕೃದುತ್ತರಪದಪ್ರಕೃತಿಸ್ವರ.

**ರಕ್ಷಸಃ**—ರಕ್ಷ ಪಾಲನೆ, ೧ನೇ ಗಣ, ಇದರ ಮುಂದೆ ಅಪಾದಾನ ಎಂಬ ಅರ್ಥದಲ್ಲಿ ಔಣಾದಿಕವಾದ ಅಸಿನ್ ಪ್ರತ್ಯಯ, ರಕ್ಷನ್ತಿ ಅಸ್ಮಾತ್ ಎಂದು ವಿಗ್ರಹ. ರಕ್ಷಣೆಗೆ ನಿಮಿತ್ತಭೂತರಾದ ಎಂದರ್ಥ, ಅಥವಾ ರಕ್ಷ್ಯತ್ಯನೇನ ಇತಿ ರಕ್ಷಃ ಕರಣಾರ್ಥದಲ್ಲಿ ಔಣಾದಿಕ ಅಸಿಪ್ರತ್ಯಯ. ಯಾತರಿಂದ ಕಾಪಾಡುವರೋ ಅದು. ಬಲವಿಲ್ಲದಿದ್ದರೆ ಕಾಪಾಡಲು ಸಾಧ್ಯವಿಲ್ಲ. ಏವಂಚ ರಕ್ಷಃ ಎಂದರೆ ಬಲ, ರಕ್ಷಃ ಏಷಾಮಸ್ತಿ ಎಂದು ವಿಗ್ರಹ, ಬಲವುಳ್ಳವರು ಎಂದು ಅರ್ಥ. **ಅಸ್ಮಾಯಾಮೇಧಾಸ್ರಜೋ ವಿನಿಃ** (ಪಾ. ಸೂ. ೫-೨-೧೨೧) ಎಂದು ಬರುವ ವಿನ್‌ಪ್ರತ್ಯಯಕ್ಕೆ ಛಾಂದಸವಾಗಿ ಲುಕ್ ಬರುತ್ತೆ ರಕ್ಷಸಃ-ರಕ್ಷಸ್ವಿನಃ-ಬಲವುಳ್ಳವರಾದ ಎಂದು ಅರ್ಥ. ಅಸ್ ನ ಅಕಾರ ಪ್ರತ್ಯಯಸ್ವರದಿಂದ ಉದಾತ್ತ, ಅಸುನ್‌ಪ್ರತ್ಯಯವನ್ನು ಹೇಳಿದರೆ ಆದ್ಯುದಾತ್ತ ಬರಬೇಕಾಗುತ್ತೆ.

**ಯಾತುಧಾನಾನ್**—ಯತ ನಿಕಾರೋಪಸಂಸ್ಕಾರಯೋಃ ೧೦ನೇ ಗಣ, **ಸತ್ಯಾಪ.... ಚುರಾದಿಭ್ಯೋಣಿಚ್** (ಪಾ. ಸೂ. ೩-೧-೨೫) ಎಂದು ಸ್ವಾರ್ಥೇ ಣಿಚ್. ಇದರ ಮುಂದೆ ಭಾವಾರ್ಥದಲ್ಲಿ ಔಣಾದಿಕವಾದ ಉಪ್ರತ್ಯಯ, ಣಿಗೆ ಲೋಪ, ಉಪಧಾವೃದ್ಧಿ, ಯಾತು ಎಂದಾಯಿತು, ಯಾತನೆ ಎಂದು ಅರ್ಥ, ಯಾತವಃ ಧೀಯನ್ತೇ ಏಷು ಎಂದು ವಿಗ್ರಹ. **ಕರಣಾಧಿಕರಣಯೋಶ್ಚ** (ಪಾ. ಸೂ. ೩-೩-೧೧೭) ಎಂದು ಅಧಿಕರಣಾರ್ಥದಲ್ಲಿ ಧಾ ಧಾತ ಮುಂದೆ ಲ್ಯುಟ್, ಅನ ಆದೇಶ, ಯಾತುಧಾ+ಅನ ಲಿತ್ತಿ ಎಂದು ಧಾ ಉದಾತ್ತ, ಸವರ್ಣದೀರ್ಘ, ಏಕಾದೇಶಸ್ವರ.

**ಅಸ್ಮಾತ್**—ಇದೇ ಸೂಕ್ತ ೪ನೇ ಮಂತ್ರದಲ್ಲಿ ವಿವೃತವಾಗಿದೆ.

**ಪ್ರತಿದೋಷಮ್**—ದೋಷಾ ಎಂದರೆ ರಾತ್ರಿ, ದೋಷಾಂ ದೋಷಾಂ ಪ್ರತಿ, ಎಂಬ ವಾಕ್ಯಾರ್ಥದಲ್ಲಿ ದೋಷಾಶಬ್ದದೊಂದಿಗೆ ಪ್ರತಿಶಬ್ದಕ್ಕೆ ಸಮಾಸ, **ಅವ್ಯಯಂವಿಭಕ್ತಿಸಮೀಪಸಮೃದ್ಧಿ ವ್ಯೃದ್ಧ್ಯರ್ಥಾಭಾವಾತ್ಯಯಾ ಸಂಪ್ರತಿಶಬ್ದಪ್ರಾದುರ್ಭಾವಪಶ್ಚಾದ್ಯಥಾ ನುಪೂರ್ವ್ಯಯೌಗಪದ್ಯಸಾದೃಶ್ಯಸಂಪತ್ತಿಸಾಕಲ್ಯಾಂತ ವಚನೇಷು** (ಪಾ. ಸೂ. ೨-೧-೬) ವಿಭಕ್ತ್ಯರ್ಥವೇ ಮೊದಲಾದ ೧೬ ಅರ್ಥಗಳಲ್ಲಿರುವ ಅವ್ಯಯವು ಸುಬಂತ ಮೊಂದಿಗೆ ಸಮಾಸವನ್ನು ಹೊಂದುತ್ತೆ ಅವ್ಯ[illegible]ಯಾಭಾವವಾಗುತ್ತೆ ಎಂದು ಸೂತ್ರಾರ್ಥ, ಇಲ್ಲಿ ಯಥಾಶಬ್ದಾರ್ಥ

ದಲ್ಲಿರುವ ಪ್ರತಿ ಎಂಬ ಅವ್ಯಯವು ದೋಷಾಂ ಎಂಬ ಸುಬಂತದೊಂದಿಗೆ ಸಮಾಸವನ್ನು ಹೊಂದಿ ಅವ್ಯಯೀಭಾವ ಸಮಾಸವಾಗುತ್ತೆ. ಯೋಗ್ಯತೆ, ವೀಪ್ಸೆ, ಪದಾರ್ಥಾನತಿವೃತ್ತಿ, ಸಾದೃಶ್ಯ ಇವು ನಾಲ್ಕು ಯಥಾಶಬ್ದಾರ್ಥಗಳು. ವೀಪ್ಸೆ=ವ್ಯಾಪ್ತೀಚ್ಛೆ, ಇಲ್ಲಿ ಇಚ್ಛೆ, ಸ್ವರೂಪ ಸತ್, ವಾಕ್ಯಾರ್ಥದಲ್ಲಿ ತೋರುವುದಿಲ್ಲ. ಏವಂಚ ಪ್ರಕೃತ್ಯರ್ಥವಾದ ವ್ಯಾಪ್ತಿಗೆ ವೀಪ್ಸಾ ಎನ್ನುವರು. ವ್ಯಾಪ್ತಿಃ ಕಾರ್ತ್ಸ್ನ್ಯೇನ ಸಂಬಂಧಃ ಎಂದರೆ ಸಂಪೂರ್ಣವಾಗಿ ಸಂಬಂಧಿಸುವಿಕೆ, ವಾಕ್ಯದಲ್ಲಿ ವೀಪ್ಸೆ ತೋರುವಾಗ **ನಿತ್ಯವೀಪ್ಸಯೋಃ** (ಪಾ. ಸೂ. ೮-೧-೪) ಎಂದು ದ್ವಿತ್ವ ಬರುತ್ತೆ, ಸಮಾಸದಲ್ಲಿ ಅದರಿಂದಲೇ ವೀಪ್ಸೆಯು ಉಕ್ತವಾಗುವುದರಿಂದ ಅಲ್ಲಿ ದ್ವಿತ್ವ ಬರುವುದಿಲ್ಲ ಎಂದು **ಹಯವರಟ್** (ಮಾ. ಸೂ. ೫) ಸೂತ್ರದಲ್ಲಿ ಕೈಯಟಕಾರರು ಹೇಳಿರುವರು. ಅವ್ಯಯೀಭಾವದಲ್ಲಿ ಅವ್ಯಯಕ್ಕೆ ಮೊದಲು ಪ್ರಯೋಗ. ಪ್ರತಿದೋಷಾ, **ಅವ್ಯಯೀಭಾವಶ್ಚ** (ಪಾ. ಸೂ ೨-೪-೧೮) ಇದು ನಪುಂಸಕಲಿಂಗವಾಗುತ್ತೆ ಎಂದು ಇದು ನಪುಂಸಕ. **ಹ್ರಸ್ವೋ-ನಪುಂಸಕೇಪ್ರಾತಿಪದಿಕಸ್ಯ** (ಪಾ. ಸೂ. ೧-೩-೪೭) ಎಂದು ಹ್ರಸ್ವ. **ನಾವ್ಯಯೀಭಾವಾದತೋಮ್ತ್ವ ಪಂಚಮ್ಯಾಃ** (ಪಾ. ಸೂ. ೨-೪-೮೩) ಅದಂತವಾದ ಅವ್ಯಯೀಭಾವದ ಮುಂದೆ ಇರುವ ಸುಪ್‌ಗೆ ಲುಕ್ ಬರುವುದಿಲ್ಲ. ಅದಕ್ಕೆ ಅಮ್ ಆದೇಶ ಬರುತ್ತೆ, ಈ ಅಮ್ ಆದೇಶ ಪಂಚಮಿಗೆ ಬರುವುದಿಲ್ಲ ಎಂದು ಸಪ್ತಮೀವಿಭಕ್ತಿಗೆ ಅಮ್ ಆದೇಶ, **ಅಮಿಪೂರ್ವಃ** (ಪಾ. ಸೂ. ೬-೧-೧೦೭) ಎಂದು ಪೂರ್ವರೂಪ.

**ಗೃಣಾನಃ**—ಗೄ ಶಬ್ದೇ ಧಾತು ಕ್ರ್ಯಾದಿ, ಕರ್ಮಣಿ ಲಟ್, ಶಾನಚ್, **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂದು ಶ್ನಾ ವಿಕರಣ, ಗೄ+ನಾ+ಆನ **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦ ಎಂದು ಧಾತುವಿಗೆ ಹ್ರಸ್ವ. **ಋವರ್ಣಾನ್ನಸ್ಯಣತ್ವಂ ವಾಚ್ಯಂ** ಎಂದು ನಕಾರಕ್ಕೆ ಣಕಾರ. **ಚಿತಃ** ಎಂದು ಅಂತೋದಾತ್ತ. ॥ ೧೦ ॥



॥ ಸಂಹಿತಾಪಾಠಃ ॥

ಯೇ ತೇ ಪನ್ಥಾಃ ಸವಿತಃ ಪೂರ್ವ್ಯಾಸೋಽ ರೇಣವಃ ಸುಕೃತಾ ಅನ್ತ-
ರಿಕ್ಷೇ ।
ತೇಭಿರ್ನೋ ಅದ್ಯ ಪಥಿಭಿಃ ಸುಗೇಭೀ ರಕ್ಷಾ ಚ ನೋ ಅಧಿ ಚ
ಬ್ರೂಹಿ ದೇವ ॥ ೧೧ ॥

॥ ಪದಪಾಠಃ ॥

ಯೇ । ತೇ । ಪನ್ಥಾಃ । ಸವಿತರಿತಿ । ಪೂರ್ವ್ಯಾಸಃ । ಅರೇಣವಃ । ಸುऽಕೃ-
ತಾಃ । ಅನ್ತರಿಕ್ಷೇ ।

ತೇಭಿಃ । ನಃ । ಅದ್ಯ । ಪಥಿऽಭಿಃ । ಸುऽಗೇಭಿಃ । ರಕ್ಷ । ಚ । ನಃ । ಅಧಿ ।
ಚ । ಬ್ರೂಹಿ । ದೇವ ॥ ೧೧ ॥

ಸಾಯಣಭಾಷ್ಯಂ

ಹೇ ಸವಿತಃ ತೇ ತವ ಪಂಥಾ ಮಾರ್ಗಾಃ ಪೂರ್ವ್ಯಾಸಃ ಪೂರ್ವಸಿದ್ಧಾ ಅರೇಣವೋ ಧೂಲಿರಹಿತಾ ಅಂತರಿಕ್ಷೇ ಸುಕೃತಾಃ ಸುಷ್ಠು ಸಂಪಾದಿತಾಃ । ಸುಗೇಭಿಃ ಸುಷ್ಠು ಗಂತುಂ ಶಕ್ಯೈಸ್ತೇಭಿಃ ಪಥಿಭಿಸ್ತೈ-ರ್ಮಾರ್ಗೈರಾಗತ್ಯಾದ್ಯಾಸ್ಮಿನ್ದಿನೇ ನೋಽಸ್ಮಾನ್ರಕ್ಷ ಚ । ಪಾಲನಮಪಿ ಕುರು । ತಥಾ ಹೇ ದೇವ ನೋಽಸ್ಮಾ-ನನುಷ್ಠಾತೄನಧಿ ಬ್ರೂಹಿ ಚ । ದೇವಾನಾಮಗ್ರೇಽಧಿಕತ್ವೇನ ಕಥಯ ಚ ॥ ಪಂಥಾಃ । ಸುಪಾಂ ಸುಲುಗಿತಿ ಜಸಃ ಸುಃ । ಪಥಿಮಥೋಃ ಸರ್ವನಾಮಸ್ಥಾನ ಇತ್ಯಾದ್ಯುದಾತ್ತತ್ವಂ । ಪೂರ್ವ್ಯಾಸಃ । ಪೂರ್ವೈಃ ಕೃತಾಃ ಪೂರ್ವ್ಯಾಃ । ಪೂರ್ವೈಃ ಕೃತಮಿನಿಯೌ ಚ । ಪಾ. ೪-೪-೧೩೩ । ಇತಿ ಯಃ । ಪ್ರತ್ಯಯಸ್ವರಃ । ಅಸುಗಾಗಮಃ । ಅರೇಣವಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಸುಕೃತಾಃ । ಕರ್ಮಣಿ ಕ್ತಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಸುಗೇಭಿಃ । ಸುಷ್ಠು ಗಚ್ಛಂತ್ಯೇಷ್ವಿತಿ ಸುಗಾಃ । ಸುದುರೋರಧಿಕರಣೇ । ಪಾ. ೩-೨-೪೮-೩ । ಇತಿ ಗಮೇರ್ಡಪ್ರತ್ಯಯಃ । ಕೃದುತ್ತರಪದಪ್ರಕೃತಿಸ್ವರತ್ವಂ । ರಕ್ಷ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ ॥ ॥ ೭ ॥

॥ ಪ್ರತಿಪದಾರ್ಥ ॥

**ಸವಿತಃ**— ಎಲೈ ಸವಿತೃದೇವತೆಯೇ । **ತೇ**— ನಿನ್ನ । **ಪಂಥಾಃ**— (ಯಜ್ಞಭೂಮಿಗೆ ಬರತಕ್ಕ) ಮಾರ್ಗಗಳು । **ಪೂರ್ವಾಸಃ**— ಹಿಂದಿನಿಂದಲೇ ಸಿದ್ಧವಾಗಿವೆ. (ನಮ್ಮ ಹಿಂದಿನವರೇ ಸಿದ್ಧಮಾಡಿದಾರೆ ಮತ್ತು) **ಅರೇಣವಃ**— ಧೂಳಿಲ್ಲದೆ । **ಅಂತರಿಕ್ಷೇ**— ಅಂತರಿಕ್ಷಲೋಕದಲ್ಲಿ । **ಸುಕೃತಾಃ**— ಚನ್ನಾಗಿ ಪರಿಷ್ಕೃತಗಳಾಗಿವೆ. (ಇಂತಹ) । **ಸುಗೇಭಿಃ**— ಓಡಾಡಲು ಸುಲಭವಾಗಿರುವ । **ತೇಭಿಃ ಪಥಿಭಿಃ**— ಆ ಮಾರ್ಗಗಳಿಂದ (ಬಂದು) । **ನಃ**— ನಮ್ಮನ್ನು । **ರಕ್ಷ ಚ**— ರಕ್ಷಣೆಮಾಡು । **ಚ**—ಮತ್ತು । **ಹೇ ದೇವ**— ಎಲೈ ಪ್ರಕಾಶಮಾನನಾದ ಸವಿತೃವೇ । **ನಃ**— (ವೈದಿಕವ್ರತಾಚರಣೆಯುಳ್ಳ) ನಮ್ಮನ್ನು । **ಅಧಿ ಬ್ರೂಹಿ**— (ಇತರ ದೇವತೆಗಳ ಸಮಕ್ಷಮ ದಲ್ಲಿ) ಹೊಗಳು. (ನಮ್ಮ ವಿಷಯದಲ್ಲಿ ಅನುಕೂಲವಾಗಿ ಹೇಳು.) ।

॥ ಭಾವಾರ್ಥ ॥

ಎಲೈ ಸವಿತೃದೇವತೆಯೇ, ಯಜ್ಞಭೂಮಿಗೆ ನೀನು ಬರಬೇಕಾದ ಮಾರ್ಗಗಳು ಮೊದಲೇ ಸಿದ್ಧವಾಗಿಯೂ, ಧೂಳಿಲ್ಲದೆಯೂ, ಪರಿಷ್ಕೃತವಾಗಿಯೂ ಇವೆ. ಸುಗಮವಾದ ಆ ಮಾರ್ಗಗಳಿಂದ ನಮ್ಮ ಯಜ್ಞಭೂಮಿಗೆ ದಯ ಮಾಡಿ ನಮ್ಮನ್ನು ರಕ್ಷಿಸು. ಮತ್ತು ನಾವು ಯಾವಾಗಲೂ ವೈದಿಕಕರ್ಮಾಚರಣೆಯಿಂದ ದೇವತೆಗಳನ್ನುದ್ದೇಶಿಸಿ ಯಜ್ಞ ಮಾಡಿ ಅವರಿಗೆ ಹವಿಸ್ಸನ್ನರ್ಪಿಸುವವರೆಂದೂ, ಶುದ್ಧಚರಿತರೆಂದೂ ಇತರ ದೇವತೆಗಳ ಮುಂದೆ ನಮ್ಮನ್ನು ಹೊಗಳು.

English Translation

O Savitri, your paths are ancient, are free from dust and well placed in the firmament; by those paths easy to be traversed come and protect us; speak well of us ( to the gods )

॥ ವಿಶೇಷವಿಷಯಗಳು ॥

**ಪೂರ್ವ್ಯಾಸಃ— ಪೂರ್ವಸಿದ್ಧಾಃ ।** ಅನೇಕಕಾಲದಿಂದಲೂ ಪ್ರತಿದಿನವೂ ಸಂಚರಿಸುತ್ತಿರುವ ಮಾರ್ಗವಾದ್ದರಿಂದ ಸೂರ್ಯನಮಾರ್ಗವು ಪೂರ್ವದ ಅಥವಾ ಬಹಳ ಹಳೆಯದಾದ ಮಾರ್ಗವು ಎಂದಭಿಪ್ರಾಯವು.

**ಅರೇಣವಃ—ಧೂಲಿರಹಿತಾಃ ।** ಸಾಧಾರಣವಾಗಿ ಮಾರ್ಗಗಳಲ್ಲಿ (ರಸ್ತೆಗಳಲ್ಲಿ) ಧೂಳಿರುವುದು ಸ್ವಭಾವವು. ಆದರೆ ಸೂರ್ಯನು ಸಂಚರಿಸುವ ಮಾರ್ಗವು ಅಂತರಿಕ್ಷದಲ್ಲಿರುವುದರಿಂದ ಅಲ್ಲಿ ಯಾವ ಧೂಳೂ ಇರುವುದಿಲ್ಲ. ಆದುದರಿಂದ ಧೂಳಿಲ್ಲದ ಮಾರ್ಗವೆಂದರ್ಥವು.

**ಸುಕೃತಾ—** ಚೆನ್ನಾಗಿ ಮಾಡಲ್ಪಟ್ಟ ಅಥವಾ ಒಳ್ಳೆಯ ಸ್ಥಿತಿಯಲ್ಲಿರುವ Well-kept.

**ಸುಗೇಭಿಃ— ಸುಷ್ಠು ಗಂತುಂ ಶಕ್ಯೈಃ ।** ಸುಲಭವಾಗಿ ಹೋಗುವುದಕ್ಕೆ ಸಾಧ್ಯವಾದ; ಸುಗಮವಾದ easy to go &c.

**ಅಧಿ ಚ ಬ್ರೂಹಿ—** (ನಮ್ಮನ್ನು ಕಾಪಾಡುವುದಲ್ಲದೆ) ದೇವತೆಗಳಿಗೆ ನಮ್ಮ ವಿಷಯದಲ್ಲಿ ಒಳ್ಳೆಯ ಮಾತನಾಡು ಎಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ಪನ್ಥಾಃ—**ಪಥಿನ್ ಶಬ್ದದ ಮುಂದೆ ಜಸ್, ಅದಕ್ಕೆ **ಸುಪಾಂಸುಲುಕ್—**, ಎಂದು ಸು ಆದೇಶ, ಪಥಿನ್+ಸು, **ಪಥಿಮಥಿ ಋಭುಕ್ಷಾಮಾತ್** (ಪಾ. ಸೂ. ೭-೧-೮೫) ಸುಪ್ರತ್ಯಯ ಪರದಲ್ಲಿರುವಾಗ ಈ ಶಬ್ದಗಳಿಗೆ ಆಕಾರವು ಅಂತಾದೇಶವಾಗಿ ಬರುತ್ತೆ. ಆ ಆತ್, ಎಂದು ಪ್ರಶ್ಲೇಷಮಾಡಿಕೊಂಡು ಆಕಾರರೂಪವಾದ ಆಕಾರ ಬರುತ್ತೆ ಎಂದು ಅರ್ಥವನ್ನು ಹೇಳುತ್ತೇವೆ. ಅಶ್ರುತಪದಪರಿಕಲ್ಪನಂ ಪ್ರಶ್ಲೇಷಃ ಎಂದರೆ ಅಲ್ಲಿಲ್ಲದೆ ಇರುವ ಪದವನ್ನು ಶಾಸ್ತ್ರ

ಸಹಾಯದಿಂದ ಕಲ್ಪನೆಮಾಡಿಕೊಳ್ಳುವುದು. ಏವಂಚ ಅನುನಾಸಿಕವಾದ ನಕಾರಸ್ಥಾನದಲ್ಲಿಯೂ ನಿರನುನಾಸಿಕವಾದ ಆಕಾರವೇ ಬರುತ್ತೆ. **ಇತೋತ್ಸರ್ವನಾಮಸ್ಥಾನೇ** (ಪಾ. ಸೂ. ೭-೧-೮೬) ಸರ್ವನಾಮಸ್ಥಾನ ಪರದಲ್ಲಿರುವಾಗ ಪಥಿ ಮೊದಲಾದುವುಗಳ ಇಕಾರಕ್ಕೆ ಅಕಾರ ಬರುತ್ತೆ ಎಂದು ಇಕಾರಕ್ಕೆ ಅಕಾರ, **ಥೋನ್ಥಃ** (ಪಾ ಸೂ. ೭-೧-೮೭) ಪಥಿಮಥ್‌ಗಳ ಥಕಾರಕ್ಕೆ ನ್ಥ್ ಬರುತ್ತೆ ಎಂದು ನ್ಥ್ ಆದೇಶ, ರುತ್ವ-ವಿಸರ್ಗ, **ಪಥಿಮಥೋಃ ಸರ್ವನಾಮಸ್ಥಾನೇ** (ಪಾ. ಸೂ. ೬-೧-೧೯೯) ಸರ್ವನಾಮಸ್ಥಾನ ಪರದಲ್ಲಿರುವಾಗ ಪಥಿಮಥಿಗಳಿಗೆ ಆದ್ಯುದಾತ್ತ ಬರುತ್ತೆ ಎಂದು ಆದ್ಯುದಾತ್ತ.

**ಪೂರ್ವ್ಯಾಸಃ—ಪೂರ್ವೈಃ ಕೃತಮಿನಯೌಚ** (ಪಾ. ಸೂ. ೪-೪-೧೩೩) ಪೂರ್ವಶಬ್ದಪ್ರಕೃತಿಕವಾದ ತೃತೀಯಾಬಹುವಚನಾಂತದ ಮುಂದೆ ಕೃತಂ ಎಂಬ ಅರ್ಥದಲ್ಲಿ ಇನ-ಯ ಎಂಬ ಪ್ರತ್ಯಯಗಳು ಬರುವುವು ಎಂಬುದ ರಿಂದ ಪೂರ್ವೈಃ ಕೃತಂ ಎಂದು ವಿವಕ್ಷಿಸಿದಾಗ ಯ ಬರುತ್ತೆ. **ಯಸ್ಯೇತಿ ಚ** ಎಂದು ಅಕಾರಲೋಪ. ಜಸ್ **ಆಜ್ಜಸೇ-ರಸುಕ್** ಎಂದು ಅಸುಕ್ ಆಗಮ, ಯ ಪ್ರತ್ಯಯಸ್ವರದಿಂದ ಉದಾತ್ತ.

**ಸುಗೇಭಿಃ**—ಸುಷ್ಠು ಗಚ್ಛಂತಿ ಏಷು. ಈ ದಾರಿಗಳಲ್ಲಿ ಸುಖವಾಗಿ ಹೋಗುವರು ಎಂದು ಅರ್ಥ, **ಸುದು-ರೋರಧಿಕರಣೇ** (ಪಾ. ಸೂ. ೩-೨-೪೮-೩) ಸು-ದುರ್ ಇವು ಉಪಪದವಾಗಿರುವಾಗ ಗಮ್‌ಧಾತು ಮುಂದೆ ಅಧಿಕರಣಾರ್ಥದಲ್ಲಿ ಡ ಪ್ರತ್ಯಯ ಬರುತ್ತೆ ಎಂದು ಡ ಪ್ರತ್ಯಯ, ಸು ಗಮ್+ಅ, ಡಿತ್ವ ಸಾಮರ್ಥ್ಯದಿಂದ ಟಿಲೋಪ ಭಿಸ್‌ಗೆ **ಬಹುಲಂಛಂದಸಿ** (ಪಾ. ಸೂ. ೭-೧-೧೦) ಎಂದು ಐಸ್ ಬರುವುದಿಲ್ಲ. ಸಮಾಸಾನಂತರ **ಗತಿಕಾರಕೋ-** ಎಂದು ಕೃದಂತ ಉತ್ತರಪದಕ್ಕೆ ಪ್ರಕೃತಿಸ್ವರ ಬರುತ್ತೆ.

**ರಕ್ಷ**—ರಕ್ಷಪಾಲನೇ, ೧ ನೇ ಗಣ, ಲೋಟ್, ಮಧ್ಯಮ ಏಕವಚನ, **ದ್ವ್ಯಚೋತಸ್ತಿಙಃ** (ಪಾ. ಸೂ. ೬-೩-೧೩೫) ಮಂತ್ರದಲ್ಲಿ ದ್ವ್ಯಚ್ಕವಾದ ತಿಙಂತಕ್ಕೆ ದೀರ್ಘಬರುತ್ತೆ ಎಂದು ದೀರ್ಘ ॥೧೧॥

ಇಲ್ಲಿಗೆ ಮೂರನೇ ಸೂಕ್ತ ಮುಗಿದುದು.



॥ ಓಂ ॥

# ಮೂವತ್ತಾರನೆಯ ಸೂಕ್ತವು

**ಅಷ್ಟಮೇಽನುವಾಕೇಽಷ್ಟೌ ಸೂಕ್ತಾನಿ । ತತ್ರ ಪ್ರ ವೋ ಯಹ್ವಮಿತಿ ವಿಂಶತ್ಯೃಚಂ ಪ್ರಥಮಂ ಸೂಕ್ತಂ । ಘೋರಪುತ್ರಃ ಕಣ್ವ ಋಷಿಃ । ಅಯುಜೋ ಬೃಹತ್ಯಃ । ತೃತೀಯಪಾದಸ್ಯ ದ್ವಾದಶಾಕ್ಷರ-**

**ತ್ವಾತ್ । ಯುಜಃ ಸತೋಬೃಹತ್ಯಃ ।। ಪ್ರಥಮತೃತೀಯಯೋಃ ಪಾದಯೋರ್ದ್ವಾದಶಾಕ್ಷರತ್ವಾತ್ । ಅಗ್ನಿರ್ದೇವತಾ । ಊರ್ಧ್ವ ಊ ಷ್ವಿತ್ಯಾದಿಕೇ ಯೂಪದೇವತ್ಯೇ । ತಥಾ ಚಾನುಕ್ರಾಂತಂ । ಪ್ರ ವೋ ವಿಂಶತಿಃ ಕಣ್ವೋ ಘೌರ ಆಗ್ನೇಯಂ ಪ್ರಾಗಾಥಮೂರ್ಧ್ವ ಊ ಷು ಯೌಪ್ಯಾವಿತಿ । ನನೂರ್ಧ್ವ ಊ ಷ್ವಿತ್ಯಾದಿಕಯೋರಪ್ಯಗ್ನೇರ್ದೇವತಾತ್ವೇನ ಭವಿತವ್ಯಮಾಗ್ನೇಯೇ ಕ್ರತಾವನಯೋರನುದ್ಧಾರಾತ್ । ತಥಾ ಹಿ ಸೂತ್ರೇ ಏನಾ ವೋ ಅಗ್ನಿಂ ಪ್ರ ವೋ ಯಹ್ವಂ । ಆ. ೪-೧೩ । ಇತಿ ಪ್ರತೀಕವನ್ಮಾತ್ರಸ್ಯೈವೋಪಾದಾನಾ-ತ್ಕೃತ್ಸ್ನಸೂಕ್ತಮಾಗ್ನೇಯಮಿತಿ ಗಮ್ಯತೇ । ಯದ್ಯೇತೇ ಅನ್ಯದೇವತ್ಯೇ ಸ್ಯಾತಾಂ ವಸಿಷ್ವಾ ಹೀತಿ ಸೂಕ್ತ-ಯೋರುತ್ತಮಾಮುದ್ಧರೇತ್ । ಆ. ೪-೧೩ । ಇತಿವದುದ್ಧಾರಂ ಬ್ರೂಯಾತ್ । ನ ಚ ಬ್ರೂತೇ । ಅತಃ ಕಥಂ ಯೌಪ್ಯಾವಿತಿ । ನೈಷ ದೋಷಃ । ಯೂಪಾಧಿಷ್ಠಾನಸ್ಯಾಗ್ನೇಃ ಸ್ತೂಯಮಾನತ್ವಾದನಯೋರಪ್ಯಗ್ನಿ-ರ್ದೇವತೇತ್ಯಾಗ್ನೇಯೇ ಕ್ರತಾವುದ್ಧಾರೋ ನ ಕೃತಃ । ಅಧಿಷ್ಠಾನಪ್ರಾಧಾನ್ಯವಿವಕ್ಷಯಾ ಯೌಪ್ಯಾವಿತ್ಯೇತ-ದಪಿ ನ ವಿರುಧ್ಯತೇ ।। ಪ್ರಾತರನುವಾಕ ಆಗ್ನೇಯೇ ಕ್ರತೌ ಬಾರ್ಹತೇ ಛಂದಸಿ ಪ್ರ ವೋ ಯಹ್ವಮಿತಿ ಸೂಕ್ತಂ । ಅಥೈತಸ್ಯಾ ರಾತ್ರೇರ್ವಿವಾಸಕಾಲ ಇತಿ ಖಂಡೇ ಸೂತ್ರಿತಂ । ಏನಾ ವೋ ಅಗ್ನಿಂ ಪ್ರ ವೋ ಯಹ್ವಮಿತಿ ।।**

ಅನುವಾದವು—**ಪ್ರ ವೋ ಯಹ್ವಂ** ಎಂಬ ಸೂಕ್ತದಿಂದ ಪ್ರಥಮ ಮಂಡಲದಲ್ಲಿ ಎಂಟನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ಎಂಟು ಸೂಕ್ತಗಳಿರುವುವು. ಅವುಗಳಲ್ಲಿ **ಪ್ರ ವೋ ಯಹ್ವಂ** ಎಂಬ ಮೊದಲನೆಯ ಸೂಕ್ತದಲ್ಲಿ ಇಪ್ಪತ್ತು ಋಕ್ಕುಗಳಿರುವುವು ಈ ಅನುವಾಕದಲ್ಲಿರುವ ಎಂಟು ಸೂಕ್ತಗಳಿಗೂ ಘೋರ ಪುತ್ರನಾದ ಕಣ್ವನೆಂಬುವನೇ ಋಷಿಯು ; ಈ ಸೂಕ್ತದಲ್ಲಿ ಅಯುಜಋಕ್ಕುಗಳು ಎಂದರೆ ೧, ೩, ೫, ೭, ೯, ೧೧ ೧೩, ೧೫, ೧೭, ೧೯. ನೆಯ ಋಕ್ಕುಗಳಲ್ಲಿ ಮೂರನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳಿರುವುದರಿಂದ ಇವು ಬೃಹತೀ ಛಂದಸ್ಸಿನವು , ಸಮಋಕ್ಕುಗಳಾದ ೨, ೪, ೬, ೮, ೧೦, ೧೨, ೧೪, ೧೬, ೧೮, ೨೦. ನೆಯ ಋಕ್ಕುಗಳಲ್ಲಿ ಮೊದಲನೆಯ ಮತ್ತು ಮೂರನೆಯ ಪಾದಗಳಲ್ಲಿ ಹನ್ನೆರಡು ಅಕ್ಷರಗಳಿರುವುದರಿಂದ ಇವು ಸತೋಬೃಹತೀಛಂದಸ್ಸಿನವು. ಈ ಸೂಕ್ತಕ್ಕೆ ಅಗ್ನಿಯು ದೇವತೆಯು. **ಊರ್ಧ್ವ ಊ ಷು** ಮತ್ತು **ಊರ್ಧ್ವೋ ನಃ** ಎಂಬ ೧೩, ೧೪ ನೆಯ ಋಕ್ಕುಗಳಿಗೆ ಯೂಪವು ದೇವತೆಯು ಅನುಕ್ರಮಣಿಕೆಯಲ್ಲಿ ಈ ರೀತಿ ಇರುವುದು—**ಪ್ರವೋ ವಿಂಶತಿಃ ಕಣ್ವೋ ಘೌರ ಆಗ್ನೇಯಂ ಪ್ರಾಗಾಥಮೂರ್ಧ್ವ ಊಷು ಯೌಪ್ಯಾವಿತಿ**—ಎಂದರೆ **ಪ್ರವೋ** ಎಂಬ ಇಪ್ಪತ್ತು ಋಕ್ಕುಗಳ ಸೂಕ್ತಕ್ಕೆ ಕಣ್ವೋ ಘೌರನೆಂಬುವನು ಋಷಿಯು, ಅಗ್ನಿಯು ದೇವತೆಯು, **ಊರ್ಧ್ವ ಊಷು** ಎಂಬ ಎರಡು ಋಕ್ಕುಗಳು ಯೂಪದೇವತಾಕವು ; ಪ್ರಾಗಾಥವೆಂಬುದು ಛಂದಸ್ಸು ಎಂದು. **ಊರ್ಧ್ವ ಊ ಷು** ಎಂಬ ಎರಡು ಋಕ್ಕುಗಳು ಯೂಪದೇವತಾಕವೆಂದಿರುವುದರಿಂದ ಈ ಋಕ್ಕುಗಳು ಅಗ್ನಿದೇವತಾಪರವಲ್ಲವೆಂದು ಭಾವಿಸಿ ಆಗ್ನೇಯ ಕ್ರತುಮಂತ್ರಪಠನಕಾಲದಲ್ಲಿ ಇವುಗಳನ್ನು ಪಠಿಸದಿರುವುದು ರೂಢಿಯಾಗಿದೆ. ಆದರೂ ಈ ವಿಷಯವು ಆಶ್ವಲಾಯನಸೂತ್ರದ **ಏನಾ ವೋ ಅಗ್ನಿಂ** (ಋ. ಸಂ. ೭-೧೬-೧.) **ಪ್ರ ವೋ ಯಹ್ವಂ** (ಋ. ಸಂ. ೧-೩೬-೧ ) ಎಂಬ ಸೂತ್ರದಲ್ಲಿ ವಿವೃತವಾಗಿರುವುದು. (ಆ. ೪-೧೩) ಆದುದರಿಂದ ಈ ಸೂಕ್ತವೆಲ್ಲವೂ ಅಗ್ನಿದೇವತಾಕವೆಂದು ಹೇಳಲ್ಪಡುವುದು. ಪ್ರಸಕ್ತವಾದ ೧೩-೧೪. ನೆಯ ಋಕ್ಕುಗಳು ಅಗ್ನಿದೇವತಾಕವಲ್ಲದೆ ಅನ್ಯದೇವತಾಕವೆಂದು ಹೇಳುವ ಪಕ್ಷದಲ್ಲಿ **ವಸಿಷ್ವಾ ಹಿ** ಎಂಬ ಸೂಕ್ತಗಳ ಕೊನೆಯ ಋಕ್ಕುಗಳನ್ನು ಉದಾಹರಿಸಬಹುದು (ಆ ೪-೧೩) ಹಾಗೆ

**ಹೇಳಲು ಸಾಧ್ಯವಿಲ್ಲ. ಆದುದರಿಂದ ಈ ೧೩-೧೪ ನೆಯ ಋಕ್ಕುಗಳು ಹೇಗೆ ಯೂಪದೇವತಾಕಗಳಾಗುವುವು ? ಎಂದರೆ, ಹಾಗೆ ಹೇಳಿದರೆ ದೋಷವೇನೂ ಇಲ್ಲ. ಏಕೆಂದರೆ ಯೂಪಾಧಿಷ್ಠಾತೃವಾದ ಅಗ್ನಿಯನ್ನು ಈ ಋಕ್ಕುಗಳು ಸ್ತುತಿಸುವುದರಿಂದ ಇವು ಅಗ್ನಿದೇವತಾಕವಾದ ಋಕ್ಕುಗಳೆಂದು ಪರಿಗಣಿಸಲ್ಪಟ್ಟಿದ್ದರೂ ಆಗ್ನೇಯ ಕ್ರತುವಿನಲ್ಲಿ ಈ ಋಕ್ಕುಗಳ ಪಠನವಿಲ್ಲ. ಅಧಿಷ್ಠಾನವನ್ನೇ ಪ್ರಾಧಾನ್ಯವಾಗಿಟ್ಟುಕೊಂಡರೆ ಇವು ಯೂಪದೇವತಾಕವೆಂಬುದು ವಿರುದ್ಧ ವಾಗುವುದಿಲ್ಲ.**

ಪ್ರಾತರನುವಾಕ ಮಂತ್ರಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ಬೃಹತೀಛಂದಸ್ಸಿನ ಮಂತ್ರಗಳನ್ನು ಪಠಿಸುವಾಗ **ಪ್ರವೋ ಯಹ್ವಂ** ಎಂಬ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಥೈತಸ್ಯಾ ರಾತ್ರೇರ್ವಿವಾಸಕಾಲ** ಎಂಬ ಖಂಡದಲ್ಲಿ **ಏನಾ ವೋ ಅಗ್ನಿಂ** (ಋ.ಸಂ.೭-೧೬-೧) **ಪ್ರ ವೋ ಯಹ್ವಂ** (ಋ. ಸಂ. ೧-೩೬-೧) ಎಂಬ ಋಕ್ಕುಗಳನ್ನು ಪಠಿಸಬೇಕೆಂದು ಸೂತ್ರವಿರುವುದು.

॥ ಓಂ ॥

## ಸೂಕ್ತ—೩೬

॥ ಮಂಡಲ—೧ ॥ ಅನುವಾಕ—೮ ॥ ಸೂಕ್ತ—೩೬ ॥

॥ ಅಷ್ಟಕ— ೧ ॥ ಅಧ್ಯಾಯ— ೩ ॥ ವರ್ಗ—೮, ೯, ೧೦, ೧೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ ೧—೨೦ ॥

॥ ಋಷಿಃ— ಕಣ್ವೋ ಘೌರಃ ॥

॥ ದೇವತಾ— ೧-೧೨, ೧೫-೨೦ ಅಗ್ನಿಃ । ೧೩-೧೪ ಅಗ್ನಿಃ ಯೂಪೋ ವಾ ॥

ಛಂದಃ— ಪ್ರಾಗಾಥಂ ಬಾರ್ಹತಂ । ವಿಷಮಾ ಬೃಹತ್ಯಃ ಸಮಾಃ ಸತೋ ಬೃಹತ್ಯಃ । ೧, ೩, ೫, ೭, ೯, ೧೧, ೧೩, ೧೫, ೧೭, ೧೯ ಬೃಹತೀ । ೨, ೪, ೬, ೮, ೧೦, ೧೨, ೧೪, ೧೬. ೧೮, ೨೦ ಸತೋಬೃಹತೀ । (೧೩ ಉಪರಿಷ್ಟಾದ್ಬೃಹತೀ । ಐ. ಬ್ರಾ. ೨-೨ ಚರಣಚ್ಛೇದಃ)

॥ ಸಂಹಿತಾಪಾಠಃ ॥

ಪ್ರ ವೋ ಯ॒ಹ್ವಂ ಪು॑ರೂ॒ಣಾಂ ವಿ॒ಶಾಂ ದೇ॑ವಯ॒ತೀನಾಂ॑ ।

ಅ॒ಗ್ನಿಂ ಸೂ॒ಕ್ತೇಭಿ॒ರ್ವಚೋ॑ಭಿರೀಮಹೇ॒ ಯಂ ಸೀ॒ಮಿದ॒ನ್ಯ ಈಳ॑ತೇ ॥

॥ ಪದಪಾಠಃ ॥

ಪ್ರ । ವಃ । ಯುಹ್ವಂ । ಪುರೂಣಾಂ । ವಿಶಾಂ । ದೇವಽಯತೀನಾಂ ।
ಅಗ್ನಿಂ । ಸುಽಉಕ್ತೇಭಿಃ । ವಚಃಽಭಿಃ । ಈಮಹೇ । ಯಂ । ಸೀಂ ।
ಇತ್ । ಅನ್ಯೇ । ಈಳತೇ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಗ್ಯಜಮಾನಾಃ ದೇವಯತೀನಾಂ ದೇವಾನ್ಕಾಮಯಮಾನಾನಾಂ ಪುರೂಣಾಂ ಬಹೂನಾಂ ವಿಶಾಂ ಪ್ರಜಾರೂಪಾಣಾಂ ವೋ ಯುಷ್ಮಾಕಮನುಗ್ರಹಾಯ ಯಹ್ವಂ ಮಹಾಂತಂ। ಯಹ್ವೋ ವಿವಕ್ಷಿಥ ಇತಿ ಮಹನ್ನಾಮಸು ಪಾಠಾತ್। ಅಗ್ನಿಂ ಸೂಕ್ತೇಭಿರ್ವಚೋಭಿಃ ಸೂಕ್ತರೂಪೈರ್ವಾಕ್ಯೈಃ ಪ್ರೇಮಹೇ। ಪ್ರಕರ್ಷೇಣ ಯಾಚಾಮಹೇ। ಈಮಹೇ ಯಾಮೀತಿ ಯಾಚ್ಞಾಕರ್ಮಸು ಪಾಠಾತ್। ಅನ್ಯ ಇದನ್ಯೇಽಪ್ಯೃಷಯೋ ಯಮಗ್ನಿಂ ಸೀಂ ಸರ್ವತ ಈಳತೇ ಸ್ತುವಂತಿ। ತಮಗ್ನಿಮಿತಿ ಪೂರ್ವತ್ರಾನ್ವಯಃ॥ ಪುರೂಣಾಂ। ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ। ವಿಶಾಂ। ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ। ದೇವಯತೀನಾಂ। ದೇವಾನಾತ್ಮನ ಇಚ್ಛಂತ್ಯೋ ದೇವಯಂತ್ಯಃ। ಸುಪ ಆತ್ಮನಃ ಕ್ಯಚ್। ನ ಛಂದಸ್ಯಪುತ್ರಸ್ಯೇತೀತ್ವಸ್ಯೇವ ದೀರ್ಘಸ್ಯಾಪಿ ಪ್ರತಿಷೇಧಃ। ಅಶ್ವಾಘಸ್ಯಾದಿತಿ ಪುನರಾತ್ವವಿಧಾನಾಜ್ಜ್ಞಾಪಕಾತ್। ಕ್ಯಜಂತಾಲ್ಲಟಃ ಶತೃ। ಕರ್ತರಿ ಶಪ್। ಶಪಃ ಪಿತ್ತ್ವಾದನುದಾತ್ತತ್ವಂ। ಶತುಶ್ಚ ಲಸಾರ್ವಧಾತುಕಸ್ವರೇಣ ಕ್ಯಚಾ ಸಹೈಕಾದೇಶ ಏಕಾದೇಶ ಉದಾತ್ತೇನೋದಾತ್ತ ಇತಿ ಶತುರುದಾತ್ತತ್ವಂ। ಉಗಿತಶ್ಚೇತಿ ಙೀಪ್। ಅನಿತ್ಯಮಾಗಮಶಾಸನಮಿತಿ ವಚನಾನ್ನುಮಭಾವಃ। ಏಕಾದೇಶಸ್ವರಸ್ಯ ಪೂರ್ವತ್ರಾಸಿದ್ಧತ್ವಂ ನೇಷ್ಯತ ಇತಿ ವಚನಾತ್। ಪಾ. ೮-೨-೬-೧। ಶತುರುದಾತ್ತತ್ವಂ ಸಿದ್ಧಮೇವೇತಿ ಶತುರನುಮ ಇತಿ ನದ್ಯಾ ಉದಾತ್ತತ್ವಂ। ಸೂಕ್ತೇಭಿಃ। ವಕ್ತೇಃ ಕ್ತಿಚ್‌ಕ್ತೌ ಚ ಸಂಜ್ಞಾಯಾಮಿತಿ ಕ್ತಃ। ಥಾಥಾದಿನೋತ್ತರಪದಾಂತೋದಾತ್ತತ್ವಂ। ಈಳತೇ। ಈಡ ಸ್ತುತೌ। ಅದಾದಿತ್ವಾಚ್ಛಪೋ ಲುಕ್। ಅನುದಾತ್ತೇತ್ತ್ವಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ। ಯದ್ವೃತ್ತಯೋಗಾದನಿಘಾತಃ॥

॥ ಪ್ರತಿಪದಾರ್ಥ ॥

**ದೇವಯತೀನಾಂ**— (ಎಲೈ ಋತ್ವಿಕ್ಕುಗಳೇ ಮತ್ತು ಯಜಮಾನರೇ) ಪ್ರಜಾದಿಗಳಿಂದ ದೇವತೆಗಳನ್ನು (ಅನುಗ್ರಹಾರ್ಥವಾಗಿ) ಅಪೇಕ್ಷಿಸುವ। **ಪುರೂಣಾಂ**—ಬಹುಸಂಖ್ಯಾಕರಾದ। **ವಿಶಾಂ**— ಪ್ರಜಾರೂಪವಲ್ಲಿರುವ। **ವಃ**—ನಿಮ್ಮ (ಅನುಗ್ರಹಕ್ಕೋಸ್ಕರ)। **ಯಂ**—ಯಾರನ್ನು। **ಅನ್ಯೇ ಇತ್**—ಇತರ ಋಷಿಗಳೂ ಕೂಡ। **ಸೀಂ**—

ಎಲ್ಲಕಡೆಗಳಲ್ಲಿಯೂ । **ಈಳತೇ**— ಸ್ತೋತ್ರಮಾಡುತ್ತಾರೋ (ಅಂತಹ) । **ಯಹ್ವಂ**— ಶ್ರೇಷ್ಠನಾದ । **ಅಗ್ನಿಂ**— ಅಗ್ನಿದೇವನನ್ನು । **ಸೂಕ್ತೇಭಿಃ**—ಸೂಕ್ತರೂಪದಲ್ಲಿರುವ । **ವಚೋಭಿಃ**—ಸ್ತೋತ್ರವಾಕ್ಯಗಳಿಂದ । **ಪ್ರ ಈಮಹೇ**— ಚನ್ನಾಗಿ ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಯಜ್ಞಕರ್ಮವನ್ನು ಮಾಡುವ ಎಲೈ ಋತ್ವಿಕ್ಕುಗಳೇ ಮತ್ತು ಯಜಮಾನರೇ, ಬಹುಸಂಖ್ಯಾತರಾದ ಪ್ರಜೆಗಳಾದ ನೀವೆಲ್ಲರೂ ಪೂಜಾದಿಗಳಿಂದ ದೇವತೆಗಳನ್ನು ತೃಪ್ತಿಪಡಿಸಿ ಅವರ ಅನುಗ್ರಹವನ್ನಪೇಕ್ಷಿಸುತ್ತೀರಿ. ಅವರಿಗೆಲ್ಲ ಯಜ್ಞದಲ್ಲಿ ಪ್ರತಿನಿಧಿಯಾಗಿರುವ ಮತ್ತು ಶ್ರೇಷ್ಠನಾದ ಅಗ್ನಿಯ ಅನುಗ್ರಹವು ಮೊದಲು ಆಗಬೇಕು. ಆ ಅಗ್ನಿ ದೇವನನ್ನು ಸಕಲ ಋಷಿಗಳೂ ಎಲ್ಲಕಡೆಯಲ್ಲಿಯೂ ಸ್ತೋತ್ರಮಾಡುತ್ತಾರೆ. ನಾವೂ ಸಹ ಸೂಕ್ತರೂಪದಲ್ಲಿರುವ ಶ್ರೇಷ್ಠವಾದ ಸ್ತೋತ್ರವಾಕ್ಯಗಳಿಂದ ನಿಮ್ಮ ಇಷ್ಟಾರ್ಥಸಿದ್ಧಿದಾಯಕನಾದ ಅವನನ್ನು ನಿಮಗೆ ಅನುಗ್ರಹ ಮಾಡಲೆಂದು ಪ್ರಾರ್ಥಿಸುತ್ತೇವೆ.

English Translation

(O, priests and sacrificers) let us priase the mighty Agni with sacred hymns, the same Agni whom others also praise and for the benifit of you who are many and who desire to worship the gods.

ವಿಶೇಷ ವಿಷಯಗಳು

ಈ ಸೂಕ್ತಕ್ಕೆ ಘೋರಪುತ್ರನಾದ ಕಣ್ವನೆಂಬುವನು ಋಷಿಯು. ಈ ಋಷಿಯು ಈ ಪ್ರಥಮ ಮಂಡಲದಲ್ಲಿ ೩೬-೪೩ ಸೂಕ್ತಗಳಿಗೂ ೯ ನೇ ಮಂಡಲನಲ್ಲಿ ೯೪ ನೇಯ ಸೂಕ್ತಕ್ಕೂ ಋಷಿಯಾಗಿರುವನು. ಈ ಋಷಿಗೆ ಸಂಬಂಧ ಪಟ್ಟಂತೆ ಒಟ್ಟು ೧೦೧ ಋಕ್ಕುಗಳಿರುವುವು.

**ಯಹ್ವಂ**—ಮಹತ್ ಬ್ರಧ್ನ ಮೊದಲಾದ ಇಪತ್ತೈದು ಮಹನ್ನಾಮಗಳ ಮಧ್ಯದಲ್ಲಿ ಯಹ್ವಃ ಎಂಬ ಶಬ್ದವು ಪಠಿತವಾಗಿರುವುದರಿಂದ ಯಹ್ವಂ ಎಂದರೆ ದೊಡ್ಡವನಾದ ಎಂದರ್ಥವು. (ನಿ ೩-೧೩)

**ದೇವಯುತೀನಾಂ — ದೇವಾನ್ ಕಾಮಯಮಾನಾನಾಂ** । ದೇವತೆಗಳನ್ನು (ಸ್ತೋತ್ರಮಾಡಲು) ಅಪೇಕ್ಷಿಸುವ

**ಈಮಹೇ**— ಈಮಹೇ, ಯಾಮಿ ಮೊದಲಾದ ಹದಿನೇಳು ಯಾಚ್ಞಾಕರ್ಮವಾಚಕ ಶಬ್ದಗಳ ಮಧ್ಯದಲ್ಲಿ ಈಮಹೇ ಎಂಬ ಶಬ್ದವು ಪಠಿತವಾಗಿರುವುದರಿಂದ ಈಮಹೇ ಎಂದರೆ ಯಾಚಿಸುತ್ತೇವೆ, ಪ್ರಾರ್ಥಿಸುತ್ತೇವೆ ಎಂದರ್ಥವು. (ನಿ. ೩-೧೯)

**ಸೀಂ-ಸೀಮಿತಿ ಪರಿಗ್ರಹಾರ್ಥೀಯೋ ವಾ ಪದಪೂರಣೋ ವಾ ।** (ನಿ ೧-೭) ಎಂದು ಯಾಸ್ಕರ ಹೇಳಿರುವುದರಿಂದ ಇಲ್ಲಿ ಈ ಪದಕ್ಕೆ ವಿಶೇಷವಾದ ಯಾವ ಮುಖ್ಯಾರ್ಥವೂ ಇಲ್ಲ. ಪಾದಪೂರಣಕ್ಕಾಗಿ ಉಪಯೋಗಿಸಲ್ಪಟ್ಟಿದೆ.

॥ ವ್ಯಾಕರಣಪ್ರಕ್ರಿಯಾ ॥

**ಪುರೂಣಾಮ್**—ಪುರುಶಬ್ದದ ಮುಂದೆ ಆಮ್, **ಹ್ರಸ್ವನದ್ಯಾಪೋನುಟ್** (ಪಾ. ಸೂ. ೭-೧-೫೪) ಎಂದು ನುಡಾಗಮ. ಪುರು+ನಾಮ್, **ನಾಮಿ** (ಪಾ. ಸೂ. ೬-೪-೩) ಎಂದು ದೀರ್ಘ, **ನಾಮನ್ಯತರಸ್ಯಾಂ** (ಪಾ. ಸೂ. ೬-೧-೧೭೭) ಮತುಪ್ ಪರದಲ್ಲಿರುವಾಗ ಯಾವುದು ಹ್ರಸ್ವವೋ ತದಂತವಾದ ಅಂತೋದಾತ್ತದ ಮುಂದೆ ಇರುವ ನಾಮ್ ಎಂಬುದು ವಿಕಲ್ಪವಾಗಿ ಉದಾತ್ತವಾಗುತ್ತೆ ಎಂದರ್ಥ. ಪರವೂ ನಿತ್ಯವೂ ಆದ್ದರಿಂದ ಮೊದಲು ದೀರ್ಘ ಬಂದರೂ, ಪುರುತಮಃ ಇತ್ಯಾದಿಗಳಲ್ಲಿ ಮತುಪ್ ಪರದಲ್ಲಿರುವಾಗ ಪುರು ಎಂಬುದು ಹ್ರಸ್ವಾಂತ, **ಪೄಭಿದಿ—,** (ಉ. ಸೂ. ೧-೨೩) ಎಂದು ಉಪ್ರತ್ಯಯ ಬಂದು, ಪುರುಶಬ್ದ ಅಂತೋದಾತ್ತ, ಇದರ ಮುಂದಿರುವ ನಾಮ್‌ಗೆ, ಪೂರ್ವೋಕ್ತಸೂತ್ರದಿಂದ ಅಂತೋದಾತ್ತ ಬರುತ್ತೆ.

**ವಿಶಾಮ್**—ವಿಶ ಪ್ರವೇಶನೇ ಕ್ವಿಪ್, ಆಮ್ ವಿಟ್ಸು ಎಂದು ಸಪ್ತಮೀ ಬಹುವಚನದಲ್ಲಿ ಸುಪ್ ಪರದಲ್ಲಿರುವಾಗ ಏಕಾಚ್ಕವಾಗಿದೆ. **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ ಸೂ. ೬-೧-೧೬೮) ಸಪ್ತಮೀ ಬಹುವಚನ ಪರದಲ್ಲಿರುವಾಗ ಯಾವ ಏಕಾಚ್ಕರೂಪವಿದೆಯೋ ಅಂತಹ ಏಕಾಚ್ಕದ ಮುಂದೆ ಇರುವ ತೃತೀಯಾದಿ ವಿಭಕ್ತಿಯು ಉದಾತ್ತವಾಗುತ್ತೆ ಎಂದು, ಆಮ್ ಉದಾತ್ತ.

**ದೇವಯತೀನಾಮ್**—ದೇವಾನಾತ್ಮನಃ ಇಚ್ಛಂತ್ಯಃ ದೇವಯನ್ತ್ಯಃ ಎಂದು ವಿಗ್ರಹ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಏಷಿತ್ರರ್ಥವಾದ ಕರ್ಮವನ್ನು ಹೇಳುವ ಸುಬಂತದ ಮುಂದೆ ಇಚ್ಛತಿ ಎಂಬ ಅರ್ಥದಲ್ಲಿ ಕ್ಯಚ್ ವಿಕಲ್ಪವಾಗಿ ಬರುತ್ತೆ ಎಂದು ಕ್ಯಚ್, ದೇವ+ಶಸ್+ಯ, ಕ್ಯಚ್ ಪ್ರತ್ಯಯಾಂತವಾದ್ದರಿಂದ ಧಾತುಸಂಜ್ಞೆ. ಧಾತ್ವವಯವವಾದ ಸುಪ್‌ಗೆ **ಸುಪೋಧಾತು—,** ಎಂದು ಲುಕ್. ದೇವ+ಯ. ಈಗ **ಕ್ಯಚಿಚ** (ಪಾ.ಸೂ.೭-೪-೩೩) ಕ್ಯಚ್ ಪರದಲ್ಲಿರುವಾಗ ಅಕಾರಕ್ಕೆ ಈತ್ವ ಬರುತ್ತೆ ಎಂದು ಈತ್ವಕ್ಕೆ ಪ್ರಾಪ್ತಿ ಇದೆ. ಹೀಗೆ **ಅಕೃತ್ಸಾರ್ವಧಾತುಕಯೋರ್ದೀರ್ಘಃ** (ಪಾ. ಸೂ. ೭-೪-೨೫) ಯಾದಿಪ್ರತ್ಯಯ ಪರದಲ್ಲಿರುವಾಗ ಅಜಂತವಾದ ಅಂಗಕ್ಕೆ ದೀರ್ಘ ಬರುತ್ತೆ ಆದರೆ ಕೃತ್ ಅಥವಾ ಸಾರ್ವಧಾತುಕ ಇವು ಪರದಲ್ಲಿದ್ದರೆ ದೀರ್ಘ ಬರುವುದಿಲ್ಲ ಎಂದು ದೀರ್ಘಕ್ಕೂ ಪ್ರಾಪ್ತಿ ಇದೆ. **ನ ಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಕ್ಯಚ್ ಪರದಲ್ಲಿದ್ದರೆ ಪುತ್ರಶಬ್ದಭಿನ್ನವಾದ ಅಕಾರಾಂತ ಶಬ್ದಕ್ಕೆ ಈತ್ವದೀರ್ಘಗಳು ಬರುವುದಿಲ್ಲ ಎಂದು ಅರ್ಥ. ಇಲ್ಲಿ ಯದ್ಯಪಿ ಅಷ್ಟಾಧ್ಯಾಯಿಯಲ್ಲಿ ಹಿಂದೆ ಈತ್ವಮಾತ್ರವೇ ವಿಧಿಸಿರುವುದರಿಂದ ಇದು ಈತ್ವಕ್ಕೆ ಮಾತ್ರ ನಿಷೇಧಕ ಎಂದು ಹೇಳುವುದು ಉಚಿತವೆಂದು ತೋರಬಹುದು. ಆದರೆ **ಅಶ್ವಾಘಸ್ಯಾತ್** (ಪಾ. ಸೂ. ೭-೪-೩೭) ಛಂದಸ್ಸಿನಲ್ಲಿ ಕ್ಯಚ್ ಪರದಲ್ಲಿರುವಾಗ ಅಶ್ವ ಅಘ ಇವುಗಳಿಗೆ ಆಕಾರಾದೇಶ ಬರುತ್ತೆ ಎಂದು ಅರ್ಥ, ಉದಾಹರಣೆ ಅಶ್ವಾಯನ್ತಃ, ಅಘಾಯವಃ, ಇಲ್ಲಿ ಅಶ್ವ+ಯ, ಅಘ+ಯ ಎಂದಿರುವಾಗ, **ನಛಂದಸಿ—,** ಎಂಬುದು ಈತ್ವಕ್ಕೆ ಮಾತ್ರ ನಿಷೇಧಕವಾದರೆ, **ಅಕೃತ್ಸಾರ್ವಧಾ—,** ಎಂದು ದೀರ್ಘ

ಬಂದರೆ, ಅಶ್ವಾಯ, ಮಘಾಯ ಎಂದು ಸಿದ್ಧವಾಗುತ್ತೆ, ಹೀಗಿರುವಾಗ **ಅಶ್ವಾಘ—,** ಎಂದು ಆತ್ವವಿಧಿಯು ವ್ಯರ್ಥವಾಗುತ್ತೆ. ಅದು ವ್ಯರ್ಥವಾಗಿ **ನಛಂದಸಿ** ಎಂಬುದು ಎರಡಕ್ಕೂ ನಿಷೇಧಕ ಎಂದು ಜ್ಞಾಪಿಸುವುದು. ಈ ಅರ್ಥ **ನ ಛಂಧಸಿ—,** ಎಂಬ ಸೂತ್ರದಿಂದ ಹೇಗೆ ಲಬ್ಧವಾಗುತ್ತೆ ಎಂದರೆ, **ಕ್ಯಚ್** ಪರದಲ್ಲಿರುವಾಗ ಏನ. ಹೇಳಲ್ಪಟ್ಟಿದೆಯೋ ಅದು ಪುತ್ರಭಿನ್ನಾದಂತಶಬ್ದಕ್ಕೆ ಬರುವುದಿಲ್ಲ ಎಂಬ ವ್ಯಾಖ್ಯಾನದಿಂದ ಲಬ್ಧವಾಗುತ್ತೆ. ಏವಂಚ **ಕ್ಯಚ್** ಪರದಲ್ಲಿರುವಾಗ ಈತ್ವದೀರ್ಘಗಳು ಉಕ್ತವಾಗಿವೆ. ಅವೆರಡೂ ಛಂದಸ್ಸಿನಲ್ಲಿ ಬರುವುದಿಲ್ಲ. ಏವಂಚ ದೇವಯ ಎಂದೇ ಇರುತ್ತೆ, ಇದರ ಮುಂದೆ ಲಟ್, ಅದಕ್ಕೆ ಶತೃ-ಶಪ್ ವಿಕರಣ, ದೇವಯ+ಅ+ಅತ್, ಇಲ್ಲಿ ಶಪ್ ಪಿತ್ತಾಗಿದ್ದರಿಂದ **ಅನುದಾತ್ತೌಸುಪ್ಪಿತೌ** ಎಂದು ಅನುದಾತ್ತ. ಅನುಪದೇಶದ ಮುಂದೆ ಇರುವುದರಿಂದ ಅತ್ ಎಂಬ ಲಸ್ಥಾನಿಕಸಾರ್ವಧಾತುಕವು **ತಾಸ್ಯನುದಾತ್ತೇನ್ಙಿದದುಪದೇಶಾತ್—,** ಎಂದು ಅನುದಾತ್ತ. ಕ್ಯಚ್ ಚಿತ್ಸ್ವರದಿಂದ ಉದಾತ್ತ, ಕ್ಯಜಕಾರ ಶಬಕಾರಗಳಿಗೆ **ಅತೋಗುಣೇ** (ಪಾ. ಸೂ. ೬-೧-೯೭) ಎಂದು ಪರರೂಪ, **ಏಕಾದೇಶ ಉದಾತ್ತೇನ,** ಎಂದು ಉದಾತ್ತ, ಪುನಃ ಪರರೂಪವೂ ಹೀಗೆಯೇ ಉದಾತ್ತ, ಈ ರೀತಿಯಲ್ಲಿ ದೇವಯತ್ ಎಂಬಲ್ಲಿ ಶತೃವು ಉದಾತ್ತವಾಗಿ ನಿಲ್ಲುತ್ತೆ, **ಉಗಿತಶ್ಚ** (ಪಾ. ಸೂ. ೬-೩-೪೫) ಉಗಿದಂತವಾದ ಪ್ರಾತಿಪದಿಕದ ಮುಂದೆ ಙೀಪ್ ಸ್ತ್ರೀಲಿಂಗದಲ್ಲಿ ಬರುತ್ತೆ ಎಂದು ಙೀಪ್, ಯದ್ಯಪಿ **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದು ಎಂಟನೇ ಅಧ್ಯಾಯ ಎರಡನೇ ಪಾದದಲ್ಲಿದೆ. ಆದ್ದರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬ ಸಪಾದಸಪ್ತಾಧ್ಯಾಯದ ಕಾರ್ಯವನ್ನು ಮಾಡುವಾಗ **ಪೂರ್ವತ್ರಾಸಿದ್ಧಂ** (ಪಾ ಸೂ. ೮-೨-೧) ಸಪಾದಸಪ್ತಾಧ್ಯಾಯದ ಕಾರ್ಯವನ್ನು ಮಾಡುವಾಗ ತ್ರೈಪಾದಿಕ ಶಾಸ್ತ್ರವು ಅಸಿದ್ಧವಾಗುತ್ತೆ. ತ್ರಿಪಾದಿಯಲ್ಲಿಯೂ ಪೂರ್ವಶಾಸ್ತ್ರವನ್ನು ಮಾಡುವಾಗ ಪರಶಾಸ್ತ್ರವು ಅಸಿದ್ಧವಾಗುತ್ತೆ ಎಂದು ಏಕಾದೇಶಸ್ವರಕ್ಕೆ ಅಸಿದ್ಧತ್ವ ಬರುವುದು ಉಚಿತವು. ಆದರೂ **ಸ್ವರಿತೋವಾನುದಾತ್ತೇಪದಾದೌ** (ಪಾ. ಸೂ. ೮-೨-೬) ಎಂಬಲ್ಲಿ ಮಹಾಭಾಷ್ಯದಲ್ಲಿ "ಏಕಾದೇಶಸ್ವರೋನ್ತರಂಗಃ ಅಯವಾಯಾವೇಕಾದೇಶ ಶತೃಸ್ವರೈಕಾನುದಾತ್ತಸರ್ವಾನುದಾತ್ತಾರ್ಥಮ್" ಎಂದು ಶತೃ ನಿಮಿತ್ತಕವಾಗಿ ಸ್ವರವನ್ನು ಮಾಡುವಾಗ ಏಕಾದೇಶಸ್ವರವು ಸಿದ್ಧವಾಗುತ್ತೆ ಎಂದು ಹೇಳಿದೆ. ಏವಂಚ ಶತೃಪ್ರತ್ಯಯಾಂತವು ಅಂತೋದಾತ್ತವಾಗುವುದರಿಂದ **ಶತುರನುಮೋ—,** ಎಂದು ಙೀಪ್‌ಗೆ ಉದಾತ್ತ ಬರುತ್ತೆ.

**ಸೂಕ್ತೇಭಿಃ—** ವಚ ಪರಿಭಾಷಣೇ-**ಕ್ತಿಚ್‌ಕ್ತೌಚ ಸಂಜ್ಞಾಯಾಂ** ಎಂದು ಕ್ತಿಚ್ **ವಚಿಸ್ವಪಿ—,** ಎಂದು ಸಂಪ್ರಸಾರಣ, ಸು ಉಪಸರ್ಗ. ಸು+ಉಚ್+ತ, ಸವರ್ಣದೀರ್ಘ, **ಚೋಃ ಕುಃ** ಎಂದು ಚ್‌ಗೆ ಕ್ ಆದೇಶ ಸೂಕ್ತ, ಭಿಸ್, ಛಾಂದಸವಾಗಿ ಐಸ್ ಬರುವುದಿಲ್ಲ. **ಥಾಥಘಞ್‌ಕ್ತಾ—,** ಎಂದು ಉತ್ತರಪದಕ್ಕೆ ಅಂತೋದಾತ್ತ ಬರುತ್ತೆ

**ಈಳಶೇ—** ಈಡಸ್ತುತೌ, ಅದಾದಿ, ಲಟ್, ಅನುದಾತ್ತೇತ್ತು. ಆತ್ಮನೇಪದಪ್ರತ್ಯಯ ತ, ಏತ್ವ, ಶಪ್, **ಅಜ್ಮಧ್ಯಸ್ಥಡಕಾರಸ್ಯ** ಎಂಬ ಬಹ್ವೃಚರ ಸಂಪ್ರದಾಯದಿಂದ ಡಕಾರಕ್ಕೆ ಳಕಾರ, ಶಪ್‌ಗೆ **ಅದಿಪ್ರಭೃತಿಭ್ಯಃ-ಶಪಃ** ಎಂದು ಲುಕ್, ಲಸ್ಥಾನಿಕವಾದ ತ ಎಂಬ ಸಾರ್ವಧಾತುಕವು ಅನುದಾತ್ತೇತ್ಕವಾದ ಧಾತು ಮುಂದೆ ಇದೆ ಆದ್ದರಿಂದ **ತಾಸ್ಯನುದಾತ್ತೇತ್—** ಎಂಬುದರಿಂದ ಅನುದಾತ್ತ, ಯಂ ಎಂಬ ಯದ್ವೃತ್ತದ ಯೋಗ ಇದೆ. **ಯದ್ವೃತ್ತಾನ್ನಿತ್ಯಂ** ಎಂದು ಸರ್ವಾನುದಾತ್ತಕ್ಕೆ ನಿಷೇಧ. ಧಾತು ಸ್ವರವೇ ಉಳಿಯುತ್ತೆ. ॥ ೧ ॥

॥ ಸಂಹಿತಾಪಾಠಃ ॥

ಜನಾಸೋ ಅಗ್ನಿಂ ದಧಿರೇ ಸಹೋವೃಧಂ ಹವಿಷ್ಮಂತೋ ವಿಧೇಮ ತೇ ।
ಸ ತ್ವಂ ನೋ ಅದ್ಯ ಸುಮನಾ ಇಹಾವಿತಾ ಭವಾವಾಜೇಷು ಸನ್ತ್ಯ ॥ ೨ ॥

॥ ಪದಪಾಠಃ ॥

ಜನಾಸಃ । ಅಗ್ನಿಂ । ದಧಿರೇ । ಸಹಃ ಽ ವೃಧಂ । ಹವಿಷ್ಮಂತಃ । ವಿಧೇಮ । ತೇ ।
ಸಃ । ತ್ವಂ । ನಃ । ಅದ್ಯ । ಸು ಽ ಮನಾಃ । ಇಹ । ಅವಿತಾ । ಭವ । ವಾಜೇಷು । ಸನ್ತ್ಯ ॥ ೨ ॥

॥ ಸಾಯಣಭಾಷ್ಯ ॥

ಜನಾಸೋಽನುಷ್ಠಾತಾರೋ ಜನಾಃ ಸಹೋವೃಧಂ ಬಲಸ್ಯ ವರ್ಧಯಿತಾರಮಗ್ನಿಂ ದಧಿರೇ । ಧೃತವಂತಃ । ಹವಿಷ್ಮಂತೋ ಹವಿರ್ಯುಕ್ತಾ ವಯಂ ಹೇ ಅಗ್ನೇ ತೇ ತ್ವಾಂ ವಿಧೇಮ । ಪರಿಚರೇಮ । ವಿಧತಿಃ ಪರಿಚರಣಕರ್ಮಾ । ವಿಧೇಮ ಸಪರ್ಯತೀತಿ ಪರಿಚರಣಕರ್ಮಸು ಪಠಿತತ್ವಾತ್ । ವಾಜೇಷ್ವನ್ನೇಷು ಸಂತ್ಯ ದಾನಶೀಲ ಹೇ ಅಗ್ನೇ ಸ ತ್ವಮದ್ಯಾಸ್ಮಿನ್ದಿನ ಇಹ ಕರ್ಮಣಿ ನೋಽಸ್ಮಾನ್ಪ್ರತಿ ಸುಮನಾಃ ಶೋಭನಮನಸ್ಕೋಽವಿತಾ ರಕ್ಷಿತಾ ಭವ ॥ ಸಹೋವೃಧಂ । ವೃಧು ವೃದ್ಧೌ । ಅಸ್ಮಾದಂತರ್ಭಾವಿತಣ್ಯರ್ಥಾತ್ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ । ಹವಿಷ್ಮಂತಃ । ತಸೌ ಮತ್ವರ್ಥ ಇತಿ ಭತ್ವೇನ ಪದತ್ವಾಭಾವಾದ್ರುತ್ವಾದ್ಯಭಾವಃ । ವಿಧೇಮ । ವಿಧ ವಿಧಾನೇ । ತುದಾದಿತ್ವಾಚ್ಛಃ । ಸುಮನಾಃ । ಶೋಭನಂ ಮನೋ ಯಸ್ಯಾಸೌ ಸುಮನಾಃ । ಸೋರ್ಮನಸೀ ಅಲೋಮೋಷಸೀ । ಪಾ. ೬-೨-೧೧೭ । ಇತ್ಯುತ್ತರಪದಾದ್ಯುದಾತ್ತತ್ವಂ । ಭವ । ಪಾದಾದಿತ್ವಾತ್ತಿಙ್ಙತಿಙ ಇತಿ ನಿಘಾತಾಭಾವಃ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ಸಂತ್ಯ । ಷಣು ದಾನೇ । ಕ್ತಿಚಿ ತಿತುತ್ರೇತ್ಯಾದಿನಾ ಇಟ್ಪ್ರತಿಷೇಧಃ । ನ ಕ್ತಿಚಿ ದೀರ್ಘಶ್ಚ । ಪಾ. ೬-೪-೩೯ । ಇತ್ಯನುನಾಸಿಕಲೋಪದೀರ್ಘಯೋರ್ನಿಷೇಧಃ । ಸಂತಿರ್ದಾತಾ । ತತ್ರ ಭವಃ ಸಂತ್ಯಃ । ಭವೇ ಛಂದಸೀತಿ ಯತ್ ॥

ಪ್ರತಿಪದಾರ್ಥ

**ಜನಾಸಃ**— ಯಜ್ಞಾನುಷ್ಠಾನ ಮಾಡತಕ್ಕ ಜನರು. । **ಸಹೋವೃಧಂ**— ಶಕ್ತಿಯನ್ನು ವೃದ್ಧಿಪಡಿಸತಕ್ಕ । **ಅಗ್ನಿಂ**— ಅಗ್ನಿದೇವನನ್ನು । **ದಧಿರೇ**— ಆಶ್ರಯಿಸುತ್ತಾರೆ. (ಎಲೈ ಅಗ್ನಿಯೇ) । **ಹವಿಷ್ಮಂತಃ**— ಹವಿಸ್ಸನ್ನು (ಸಿದ್ಧವಾಗಿ) ಇಟ್ಟುಕೊಂಡಿರುವ ನಾವೂ ಕೂಡ । **ತೇ**— ನಿನ್ನನ್ನು । **ವಿಧೇಮ**— ಪೂಜಿಸುತ್ತೇವೆ. । **ವಾಜೇಷು**— ಅನ್ನಗಳ ವಿಷಯಗಲ್ಲಿ । **ಸಂತ್ಯ**— ಉದಾರವಾಗಿ ದಾನಶೀಲನಾಗ ಅಗ್ನಿಯೇ । **ಸಃ ತ್ವಂ**— ಅಂತಹ ನೀನು । **ಅದ್ಯ**— ಇಂದು । **ಇಹ**— ನಮ್ಮ ಈ ಯಜ್ಞಕರ್ಮದಲ್ಲಿ । **ನಃ**— ನಮ್ಮ ವಿಷಯಗಲ್ಲಿ । **ಸುಮನಾಃ**— ಅನುಕೂಲ ಮನಸ್ಸುಳ್ಳವನಾಗಿಯೂ । **ಅವಿತಾ**— ರಕ್ಷಕನಾಗಿಯೂ । **ಭವ**— ಆಗು.

॥ ಭಾವಾರ್ಥ ॥

ವೈದಿಕ ಕರ್ಮಾಚರಣೆಯಲ್ಲಿರುವ ಜನರೆಲ್ಲರೂ ತಮ್ಮ ರಕ್ಷಣೆಗಾಗಿ ಜನರ ಶಕ್ತಿವರ್ಧಕನಾದ ಅಗ್ನಿದೇವನನ್ನು ಆಶ್ರಯಿಸುತ್ತಾರೆ. ಎಲೈ ಅಗ್ನಿಯೇ, ನಾವೂ ಸಹ ಹವಿಸ್ಸನ್ನು ಸಿದ್ಧಮಾಡಿಕೊಂಡು ನಿನ್ನನ್ನು ಪೂಜಿಸುತ್ತೇವೆ. ನೀನು ಅನ್ನದಾನದಲ್ಲಿ ಬಹಳ ಉದಾರಿಯಾಗಿರುವೆ. ಆ ಔದಾರ್ಯವನ್ನು ಇಂದು ತೋರಿಸಿ ನಮ್ಮ ಯಜ್ಞಕರ್ಮದಲ್ಲಿ ನಮಗೆ ಅನುಕೂಲ ಮನಸ್ಸುಳ್ಳವನಾಗಿ ನಮ್ಮ ರಕ್ಷಕನಾಗಿರು

English Translation

The people have approached the Agni who is the increaser of vigour; Agni, we worship you with oblations; O liberal giver of food, be well disposed to us here this day and be our protector.

॥ ವಿಶೇಷ ವಿಷಯಗಳು ॥

**ಜನಾಸಃ**— **ಜನಾಃ** ಎಂಬ ಶಬ್ದದ ಪ್ರಾಚೀನಪ್ರಯೋಗವು, ಜನರು.

**ದಧಿರೇ**— **ಧೃತವಂತಃ ।** ಭಕ್ತಿಭಾವದಿಂದ ನಿನ್ನನ್ನು ಸ್ತೋತ್ರಮಾಡುವುದಕ್ಕಾಗಿ ಸಮೀಪಕ್ಕೆ ಬಂದಿರುವರು ಎಂದಭಿಪ್ರಾಯವು.

**ಸಹೋವೃಧಂ**— **ಬಲಸ್ಯ ವರ್ಧಯಿತಾರಂ ।** ಸಹ ಎಂದರೆ ಬಲವು (ನಿ.೨-೨೫) ಬಲವನ್ನು ವೃದ್ಧಿಪಡಿಸುವ, ಬಲವನ್ನು ಕೊಡುವ.

**ಹವಿಷ್ಮಂತಃ**—**ಹವಿರ್ಯುಕ್ತಾ ವಯಂ ।** ನಿನಗೆ ಅರ್ಪಿಸುವುದಕ್ಕಾಗಿ ಹವಿಸ್ಸನ್ನು ಸಿದ್ಧಪಡಿಸಿ ಇಟ್ಟುಕೊಂಡಿರುವ ನಾವು

**ಸುಮನಾಃ**—**ಶೋಭನಮನಸ್ಕಃ ।** ನಮ್ಮ ವಿಷಯದಲ್ಲಿ ಒಳ್ಳೆಯ ಅಥವಾ ಉದಾರಬುದ್ಧಿಯುಳ್ಳವನಾಗಿ.

**ಅವಿತಾ— ರಕ್ಷಿತಾ** | ಸಂರಕ್ಷಕನಾಗಿ, ನಮ್ಮನ್ನು ಕಾಪಾಡುವವನಾಗಿ.
**ವಾಜೇಷು ಸಂತ್ಯ**— ಅನ್ನಾದ್ಯಾಹಾರಗಳ ವಿಷಯದಲ್ಲಿ ದಾನಶೀಲನು, ಕೊಡುವವನು.

॥ ವ್ಯಾಕರಣಪ್ರಕ್ರಿಯಾ ॥

**ಸಹೋವೃಧಮ್**— ವೃಧುವೃದ್ಧೌ ಧಾತು, ಣಿಚ್‌ಪ್ರತ್ಯಯ ಇಲ್ಲದಿದ್ದರೂ ಅದರ ಅರ್ಥವನ್ನುಕೊಡುವುದಕ್ಕೆ ಅಂತರ್ಭಾವಿತಣ್ಯರ್ಥ ಎನ್ನುವರು, ಇಂತಹ ಈ ಧಾತು ಮುಂದೆ ಕ್ವಿಪ್, ಸಹ ವರ್ಧಯತೀತಿ ಸಹೋವೃಧ್ ಎಂದು ವಿಗ್ರಹ. ಬಲವನ್ನು ವೃದ್ಧಿಗೊಳಿಸುವ ಎಂದು ಅರ್ಥ. ವೃಧ್ ಎಂಬುದು ಧಾತುಸ್ವರದಿಂದ ಉದಾತ್ತ, ಸಮಾಸಾನಂತರ ಕೃದಂತವಾದ ಉತ್ತರಪದಕ್ಕೆ ಪ್ರಕೃತಿಸ್ವರ ಬರುವುದರಿಂದ ಇದೇ ಸಿಧ್ಧಿಸುತ್ತೆ.

**ಹವಿಷ್ಮಂತಃ**—ಹು ದಾನಾದನಯೋಃ, **ಅರ್ಚಿಶುಚಿಹುಸೃಪಿಛಾದಿಛರ್ದಿಭ್ಯ ಇಸಿಃ** (ಉ. ಸೂ. ೨-೨೬೬) ಎಂದು ಇಸಿ ಪ್ರತ್ಯಯ. ಗುಣ, ಅವಾದೇಶ, **ನಬ್ವಿಷಯಸ್ಯಾನಿಸಂತಸ್ಯ** (ಫಿ ಸೂ. ೨೬) ಅನಿಸಂತಸ್ಯ ಎಂದು ಪರ್ಯುದಾಸ ಮಾಡಿರುವುದರಿಂದ ಆದ್ಯುದಾತ್ತ ಬರುವುದಿಲ್ಲ. ಹವಿಃ ಏಷಾಂ ಸಂತಿ ಎಂದು ವಿಗ್ರಹ್ಯ **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** ಎಂದು ಮತುಪ್, ಹವಿಸ್+ಮತ್, **ತಸೌ ಮತ್ವರ್ಥೇ** (ಪಾ. ಸೂ. ೧-೪-೧೯) ಮತ್ವರ್ಥಪ್ರತ್ಯಯ ಪರದಲ್ಲಿದ್ದರೆ ತಕಾರಾಂತ, ಅಥವಾ ಸಕಾರಾಂತಶಬ್ದಗಳು ಭ ಸಂಜ್ಞೆಯನ್ನು ಹೊಂದುವುವು ಎಂದು ಅಂತರ್ವರ್ತಿವಿಭಕ್ತಿನಿಮಿತ್ತಕವಾದ ಪದಸಂಜ್ಞೆಗೆ ಬಾಧ ಬರುತ್ತೆ. ಏವಂಚ ಪದತ್ವವಿಲ್ಲದುದರಿಂದ **ಸಸಜುಷೋರುಃ** (ಪಾ. ಸೂ. ೮-೨-೬೬) ಇತ್ಯಾದಿ ಸೂತ್ರಗಳಿಂದ ರುತ್ವಾದಿಕಾರ್ಯಗಳು ಬರುವುದಿಲ್ಲ.

**ವಿಧೇಮ**—ವಿಧ ವಿಧಾನೇ-ಧಾತು ತುದಾದಿ, ಪರಸ್ಮೈಪದಿ, ವಿಧಿಲಙ್ ಮಸ್-ಸಲೋಪ. **ತುದಾದಿಭ್ಯಃ ಶಃ** (ಪಾ.ಸೂ ೩-೧-೭೭) ಎಂದು ಶ. ವಿಧ್+ಅ-ಮ. ಗುಣಕ್ಕೆ ನಿಷೇಧ, ಯಾಸುಟ್, ಸಲೋಪ, ಇಯಾದೇಶ-ಗುಣ.

**ಸುಮನಾಃ**—ಶೋಭನಂ=ಒಳ್ಳೆಯ, ಮನಃ-ಮನಸ್ಸು, ಯೇಷಾಂ ತೇ=ಯಾರಿಗಿದೆಯೋ ಅವರು, ಎಂದು ಬಹುವ್ರೀಹಿ, **ಸೋಮನಸೀ ಅಲೋಮೋಷಸೀ** (ಪಾ. ಸೂ. ೬-೨ ೧೧೭) ಸು ಮುಂದೆ ಇರುವ ಲೋಮನ್, ಉಷಸ್ ಎಂಬ ಶಬ್ದಗಳನ್ನು ಬಿಟ್ಟು ಮನ್ ಅಥವಾ ಅಸ್‌ಗಳನ್ನು ಕೊನೆಯಲ್ಲಿ ಹೊಂದಿರುವ ಉತ್ತರಪದವು ಆದ್ಯುದಾತ್ತವಾಗುತ್ತೆ, ಎಂದು ಸು ಮುಂದೆ ಇರುವ ಮನಸ್ ಎಂಬ ಅಸಂತವು ಆದ್ಯುದಾತ್ತ

**ಭವ**—ಲೋಟ್-ಮಧ್ಯಮ-ಏಕವಚನ, ಇದು ೪ನೇ ಪಾದದ ಆದಿಯಲ್ಲಿದೆ. **ಅನುದಾತ್ತಂ ಸರ್ವಮಪಾದಾದೌ** ಎಂಬ ಪಾದದ-ಆದಿಯಲ್ಲಿರುವುದಕ್ಕೆ ಅನುದಾತ್ತವು ನಿಷೇಧಿಸಲ್ಪಟ್ಟಿದೆ. ಆದ್ದರಿಂದ **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುವುದಿಲ್ಲ ಸಂಹಿತಾಕಾಲದಲ್ಲಿ **ದ್ವ್ಯಚೋಽತಸ್ತಿಙಃ** (ಪಾ. ಸೂ. ೬-೩-೧೩೫) ಮಂತ್ರದ ಎರಡು ಸ್ವರಗಳುಳ್ಳ ತಿಙಂತದ ಅಕಾರಕ್ಕೆ ದೀರ್ಘ ಬರುತ್ತೆ ಎಂದು ದೀರ್ಘ.

**ಸಂತ್ಯ**— ಷಣು ದಾನೇ, **ಧಾತ್ವಾದೇಃ ಷಃ ಸಃ** ಎಂದು ಷಕಾರಕ್ಕೆ ಸಕಾರ. **ಕ್ತಿಚ್‌ಕ್ತೌ ಚ ಸಂಜ್ಞಾಯಾಂ** ( ಪಾ. ಸೂ. ೩-೩-೧೭೪ ) ಆಶೀರರ್ಥದಲ್ಲಿ ಸಂಜ್ಞೆ ತೋರುವಾಗ ಧಾತುಗಳ ಮುಂದೆ

ಕ್ತಿಚ್-ಕ್ತ ಪ್ರತ್ಯಯಗಳು ಬರುವುವು, ಎಂದು ಕ್ತಿಚ್. ಸನುತಾತ್- ಸನ್ತಿಃ ಸನ್+ತಿ ಎಂದಿರುವಾಗ **ನಕ್ತಿಚಿ ದೀರ್ಘಶ್ಚ** (ಪಾ. ಸೂ. ೬-೪-೩೯) ಕ್ತಿಚ್ ಪರದಲ್ಲಿರುವಾಗ ಅನಿಟ್ಕಾದ ಧಾತುಗಳು ವನತಿ ತನೋತ್ಯಾದಿ ಧಾತುಗಳು ಇವುಗಳಿಗೆ ದೀರ್ಘಾನುನಾಸಿಕ ಲೋಪಗಳು ಬರುವುದಿಲ್ಲ, ಎಂದು ನಿಷೇಧ ಇರುವುದರಿಂದ **ಅನುನಾಸಿಕಸ್ಯ ಕ್ವಿಝಲೋಃ ಕ್ಙಿತಿ** (ಪಾ. ಸೂ. ೬-೪-೧೫) ಕ್ವಿಪ್ ಪರದಲ್ಲಿದ್ದರೂ, ಝಲಾದಿಯಾಗಿ ಕಿತ್ ಅಥವಾ ಙಿತ್ ಆದ ಪ್ರತ್ಯಯಪರದಲ್ಲಿದ್ದರೂ ಅನುನಾಸಿಕವನ್ನು ಕೊನೆಯಲ್ಲಿ ಹೊಂದಿರುವ ಧಾತುವಿನ ಉಪಧೆಗೆ ದೀರ್ಘ ಬರುವುದು ಎಂದು ಬರುವ ದೀರ್ಘಕ್ಕೆ ನಿಷೇಧ. ಹೀಗೆಯೇ **ಅನುದಾತ್ತೋಪದೇಶವನತಿತನೋತ್ಯಾದೀನಾಮನುನಾಸಿಕಲೋಪೋ ಝಲಿ ಕ್ಙಿತಿ** (ಪಾ. ಸೂ. ೬-೪-೩೭) ಎಂದು ಪ್ರಾಪ್ತವಾಗುವ ಅನುನಾಸಿಕಲೋಪಕ್ಕೂ ನಿಷೇಧ. ಆಯಾ ವರ್ಗದ ಐದನೇ ಅಕ್ಷರಗಳಾದ ಙ ಮ ಙ ಣ ನ ಗಳು ಅನುನಾಸಿಕಗಳು. **ತಿತುತ್ರ** , (ಪಾ.ಸೂ. ೭-೨-೯) ಎಂದು ಇಡಾಗಮಕ್ಕೆ ನಿಷೇಧ. ಸನ್ತಿಃ ಎಂದರೆ ದಾತಾ ಎಂದು ಅರ್ಥ, ಸನ್ತ್ಯಾಂ ಭವಃ ಎಂದು ವಿಗ್ರಹ. **ಭವೇ ಛಂದಸಿ** (ಪಾ. ಸೂ. ೪-೪-೧೧೦) ಛಂದಸ್ಸಿನಲ್ಲಿ ಭವ ಎಂಬ ಅರ್ಥದಲ್ಲಿ ಯತ್ ಬರುತ್ತೆ ಎಂದು ಯತ್, ಸನ್ತಿ+ಯ, **ಯಸ್ಯೇತಿ ಚ** ಎಂದು ಇಕಾರಲೋಪ ಸಂಬೋಧನ ಪ್ರಥಮಾ ಏಕವಚನಾಂತ ॥೨॥



॥ ಸಂಹಿತಾಪಾಠಃ॥

ಪ್ರ ತ್ವಾ ದೂತಂ ವೃಣೀಮಹೇ ಹೋತಾರಂ ವಿಶ್ವವೇದಸಂ ।
ಮಹಸ್ತೇ ಸತೋ ವಿ ಚರನ್ತ್ಯರ್ಚಯೋ ದಿವಿ ಸ್ಪೃಶನ್ತಿ ಭಾನವಃ ॥

॥ ಪದಪಾಠಃ ॥

ಪ್ರ । ತ್ವಾ । ದೂತಂ । ವೃಣೀಮಹೇ । ಹೋತಾರಂ । ವಿಶ್ವಽವೇದಸಂ ।
ಮಹಃ । ತೇ । ಸತಃ । ವಿ । ಚರನ್ತಿ । ಅರ್ಚಯಃ । ದಿವಿ । ಸ್ಪೃಶಂತಿ ।
ಭಾನವಃ ॥ ೩ ॥

‖ ಸಾಯಣಭಾಷ್ಯಂ ‖

**ಹೇ ಅಗ್ನೇ ಹೋತಾರಂ ಹೋಮನಿಷ್ಪಾದಕಮಾಹ್ವಾತಾರಂ ವಾ ವಿಶ್ವವೇದಸಂ ಸರ್ವಜ್ಞಂ ದೂತಂ ದೇವಾನಾಂ ದೂತ್ಯೇ ಪ್ರವೃತ್ತಂ । ಅಗ್ನಿರ್ವೈ ದೇವಾನಾಂ ದೂತ ಆಸೀದಿತಿ ಶ್ರುತ್ಯಂತರಾತ್ । ತಾದೃಶಂ ತ್ವಾಂ ವೃಣೀಮಹೇ । ಪ್ರಕರ್ಷೇಣ ವರಣಂ ಕುರ್ಮಃ । ಮಹೋ ಮಹತಃ ಸತೋ ನಿತ್ಯಂ ವರ್ತಮಾನಸ್ಯ ತೇ ತವಾರ್ಚಯೋ ದೀಪ್ತಯೋ ವಿ ಚರಂತಿ । ವಿವಿಧಂ ಪ್ರಚರಂತಿ । ಭಾನವಸ್ತ್ವದೀಯಾ ರಶ್ಮಯೋ ದಿವಿ ದ್ಯುಲೋಕೇ ಸ್ಪೃಶಂತಿ । ತತ್ರತ್ಯಾನ್ಪ್ರಾಣಿನಃ ಪ್ರಕಾಶಯಂತೀತ್ಯರ್ಥಃ ‖ ವಿಶ್ವವೇದಸಂ । ವಿಶ್ವಾನಿ ವೇತ್ತೀತಿ ವಿಶ್ವವೇದಾಃ । ಅಸುನ್ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ । ಯದ್ವಾ । ವೇದ ಇತಿ ಧನನಾಮ । ವಿಶ್ವಂ ವೇದೋ ಧನಂ ಯಸ್ಯ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ । ಮಹಃ । ಮಹ ಪೂಜಾಯಾಂ । ಕ್ವಿಪ್ಚೇತಿ ಕ್ವಿಪ್ । ಸಾವೇಕಾಚ ಇತಿ ಙಸ ಉದಾತ್ತತ್ವಂ । ಯದ್ವಾ । ಮಹಚ್ಛಬ್ದೇ ಛಬ್ದಲೋಪಶ್ಛಾಂದಸಃ । ಸತಃ । ಅಸ್ತೇಃ ಶತರಿ ಶ್ನಸೋರಲ್ಲೋಪ ಇತ್ಯಕಾರಲೋಪಃ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ದಿವಿ । ಊಡಿದಮಿತಿ ವಿಭಕ್ತೇರುದಾತ್ತತ್ವಂ ‖**

‖ ಪ್ರತಿಪದಾರ್ಥ ‖

**ಹೋತಾರಂ**— (ಎಲೈ ಅಗ್ನಿಯೇ) ಹೋಮಸಂಪಾದಕನಾದ ಅಥವಾ (ನಮಗೋಸ್ಕರ) ದೇವತೆಗಳ ನಿಮಂತ್ರಕನಾದ (ಆಹ್ವಾತೃವಾದ) । **ವಿಶ್ವವೇದಸಂ**—ಸರ್ವಜ್ಞನಾಗಿಯೂ । **ದೂತಂ**—ದೇವತೆಗಳ ದೂತಕಾರ್ಯದಲ್ಲಿ ನಿರತನಾಗಿಯೂ ಇರತಕ್ಕ (ನಿನ್ನನ್ನು) । **ಪ್ರ ವೃಣೀಮಹೇ**— ಪ್ರಧಾನವಾಗಿ ಆರಿಸುತ್ತೇವೆ. । **ಮಹಃ**— ಮಹಾನುಭಾವನಾದ (ಪೂಜ್ಯನಾದ) । **ಸತಃ**— ನಾಶರಹಿತನಾಗಿ, ಶಾಶ್ವತವಾಗಿರತಕ್ಕ । **ತೇ**— ನಿನ್ನ । **ಅರ್ಚಯಃ**— ಪ್ರಭೆಗಳು । **ವಿಚರಂತಿ**— ಸರ್ವದಿಕ್ಕುಗಳಲ್ಲೂ ಹರಡುತ್ತವೆ. । **ಭಾನವಃ**— (ನಿನ್ನ) ಕಿರಣಗಳು । **ದಿವಿ**— ಅಂತರಿಕ್ಷದಲ್ಲಿ । **ಸ್ಪೃಶಂತಿ**— ಮುಟ್ಟುತ್ತವೆ. (ಅಲ್ಲಿರುವ ಪ್ರಾಣಿಗಳನ್ನು ಬೆಳಗಿಸುತ್ತವೆ.) ।

‖ ಭಾವಾರ್ಥ ‖

ಎಲೈ ಅಗ್ನಿದೇವನೇ, ನೀನು ನಮ್ಮ ಹೋಮಸಂಪಾದಕನು. ನಮ್ಮ ಪರವಾಗಿ ದೇವತೆಗಳಿಗೆ ನಮ್ಮ ಯಜ್ಞಕ್ಕಾಗಿ ಆಹ್ವಾನ ಕೊಡುವವನು. ನೀನು ಸರ್ವಜ್ಞನು. ದೇವತೆಗಳ ದೂತಕಾರ್ಯದಲ್ಲಿ ನಿರತನಾಗಿರುವವನು. ಆದುದರಿಂದ ನಿನ್ನನ್ನು ನಮ್ಮ ಯಜ್ಞಕಾರ್ಯದಲ್ಲಿ ಮುಖ್ಯನನ್ನಾಗಿ ಆರಿಸುತ್ತೇವೆ. (ಕರೆಯುತ್ತೇವೆ) ನೀನು ಮಹಾನುಭಾವನು. ನಾಶರಹಿತನು. ಅನಾದ್ಯನಂತನು. ಅಂತಹ ನಿನ್ನ ಪ್ರಭೆಗಳು ಸಕಲದಿಕ್ಕುಗಳಲ್ಲೂ ವ್ಯಾಪಿಸಿ ಸಕಲಲೋಕಗಳನ್ನು ಬೆಳಗಿಸುತ್ತವೆ. ನಿನ್ನ ಕಿರಣಗಳು ಅಂತರಿಕ್ಷದಲ್ಲಿ ಪ್ರವೇಶಿಸಿ ಅಲ್ಲಿರುವ ಪ್ರಾಣಿಗಳನ್ನು ಪ್ರಕಾಶಗೊಳಿಸುತ್ತವೆ.

## English Translation

We select ( invoke ) you, O Agni, the messenger and invoker of gods; you are endowed with all knowledge; you are mighty and your flames spread in all directions touching even heaven.

॥ ವಿಶೇಷವಿಷಯಗಳು ॥

**ದೂತಂ— ಅಗ್ನಿರ್ದೇವಾನಾಂ ದೂತ ಆಸೀತ್** ಎಂದು ಶ್ರುತಿವಾಕ್ಯವಿರುವುದರಿಂದ ಅಗ್ನಿಯು ಮನುಷ್ಯರ ಬಳಿಗೆ ದೇವತೆಗಳನ್ನು ಕರೆದುಕೊಂಡು ಬರುವ ದೂತನು.

**ಹೋತಾರಂ— ಹೋಮನಿಷ್ಪಾದಕಮಾಹ್ವಾತಾರಂ ವಾ ।** ಹೋಮನಿಷ್ಪಾದಕನು ಅಥವಾ ದೇವತೆಗಳನ್ನು ಯಜ್ಞಕ್ಕೆ ಬರುವಂತೆ ಕರೆಯುವವನು.

**ವಿಶ್ವವೇದಸಂ—** ಸಮಸ್ತವನ್ನೂ ತಿಳಿದವನು.

**ವಿ ಚರಂತ್ಯರ್ಚಯಃ—** ನಿನ್ನ ಕಾಂತಿಗಳು ಸುತ್ತಲೂ ವ್ಯಾಪಿಸುತ್ತವೆ. ಅಗ್ನಿಯು ಪ್ರಕಾಶಮಾನನಾಗಿ ಉರಿಯುವಾಗ ಅದರ ಬೆಳಕು ಎಲ್ಲೆಡೆಗೂ ವ್ಯಾಪಿಸುವುದೆಂದರ್ಥವು.

**ದಿವಿ ಸ್ಪೃಶಂತಿ ಭಾನವಃ—** ನಿನ್ನ ಜ್ಯೋತಿಃಕಿರಣಗಳು ಸ್ವರ್ಗವನ್ನು ಸಹ ಮುಟ್ಟುವವು

॥ ವ್ಯಾಕರಣಪ್ರಕ್ರಿಯಾ ॥

**ವಿಶ್ವವೇದಸಮ್—** ವಿಶ್ವಂ ವೇತ್ತೀತಿ ವಿಶ್ವವೇದಾಃ ಪ್ರಪಂಚವನ್ನು ತಿಳಿದಿರುವನು ಎಂದರ್ಥ, ವಿದ ಜ್ಞಾನೇ, **ಸರ್ವಧಾತುಭ್ಯೋಽಸುನ್** (ಉ ಸೂ. ೪-೬೨೮) ಎಂದು ಅಸುನ್. ಮರುಗ್ವೃಧಾದಿಯಲ್ಲಿ ಇರುವುದರಿಂದ ಪೂರ್ವಪದಕ್ಕೆ ಅಂತೋದಾತ್ತ ಬರುತ್ತೆ, ಅಥವಾ ನಿರುಕ್ತ (೨-೧-೪) ದಲ್ಲಿ **ವೇದಃ**ಶಬ್ದವು ಧನವಾಚಕ ಎಂದಿದೆ. ವಿಶ್ವಂ-ಸಮಸ್ತವಾದ, ವೇದಃ=ಧನವು, ಯಸ್ಯ ಸಃ ಎಂದು ಬಹುವ್ರೀಹಿ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂದು ಪ್ರಾಪ್ತವಾಗುವ ಪೂರ್ವಪದಪ್ರಕೃತಿಸ್ವರವನ್ನು ಬಾಧಿಸಿ **ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ** (ಪಾ. ಸೂ. ೬-೨-೧೦೬) ಬಹುವ್ರೀಹಿಸಮಾಸದಲ್ಲಿ ಸಂಜ್ಞೆತೋರುವಾಗ ಪೂರ್ವಪದವಾದ ವಿಶ್ವಶಬ್ದವು ಅಂತೋದಾತ್ತವಾಗುವುದು ಎಂದು ಅಂತೋದಾತ್ತ.

**ಮಹಃ—** ಮಹ ಪೂಜಾಯಾಂ, **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂದು ಕ್ವಿಪ್, ಷಷ್ಠೀ ಏಕವಚನ ಙಸ್, ಮಟ್ಟು ಎಂದು ಸುಪ್ ಪರದಲ್ಲಿರುವಾಗ ಮಟ್ ಎಂದು ಏಕಾಚ್ಕವಾಗಿದೆ. ಆದ್ದರಿಂದ **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ. ಸೂ. ೬-೧-೧೬೮) ಸಪ್ತಮೀ ಬಹುವಚನವಾದ ಸುಪ್ ಪರದಲ್ಲಿರುವಾಗ ಯಾವ ಏಕಾಜ್ರೂಪವಿದೆಯೋ ಅವರ ಮುಂದೆ ಇರುವ ತೃತೀಯಾದಿವಿಭಕ್ತಿಯು ಉದಾತ್ತವಾಗುತ್ತೆ ಎಂದು ಉದಾತ್ತ. ಅಥವಾ ಮಹತ್‌ಶಬ್ದವು **ವರ್ತಮಾನೇ ಪೃಷನ್ಮಹತ್—,** (ಉ. ಸೂ. ೨-೨೪೨) ಎಂದು ಅತಿಪ್ರತ್ಯಯಾಂತವಾಗಿ ನಿಪಾತಿತವಾಗಿದೆ, ಇವರ ಅತ್ ಎಂಬುದಕ್ಕೆ ಛಾಂದಸವಾಗಿ ಲೋಪ. ವಿಭಕ್ತಿಗೆ ಪೂರ್ವದಂತೆಯೇ ಸ್ವರ. ಶತೃವದ್ಭಾವಾತಿದೇಶವಿರುವುದರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂದಾದರೂ ವಿಭಕ್ತಿಗೆ ಉದಾತ್ತವನ್ನು ಹೇಳಬಹುದು.

**ಸತಃ**—ಅಸ ಭುವಿ ಧಾತು, ಲಟ್, ಶತೃ, ಶಪ್, **ಅದಿಪ್ರಭೃತಿಭ್ಯಃ ಶಪಃ** ಎಂದು ಶಪ್‌ಗೆ ಲುಕ್, ಅಸ್+ಅತ್, **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಕಿತ್, ಅಥವಾ ಙಿತ್ ಆದ ಸಾರ್ವಧಾತುಕವು ಪರದಲ್ಲಿರುವಾಗ ಶ್ನಪ್ರತ್ಯಯ ಅಸ್‌ಧಾತು ಇವುಗಳ ಅಕಾರಕ್ಕೆ ಲೋಪ ಬರುತ್ತೆ ಎಂದು ಅಸ್‌ನ ಅಕಾರಕ್ಕೆ ಲೋಪ, ಸ್+ಅತ್=ಐಸ್, **ಶತುರನುಮೋ—**, ನುಮಾಗಮವನ್ನು ಹೊಂದದ ಶತೃಪ್ರತ್ಯಯವನ್ನು ಕೊನೆಯಲ್ಲಿ ಹೊಂದಿರುವ ಅಂತೋದಾತ್ತವಾದ ಶಬ್ದದ ಮುಂದೆ ಇರುವ ನದೀಸಂಜ್ಞಕವೂ ಅಜಾದಿಶಸಾದಿವಿಭಕ್ತಿಯೂ ಉದಾತ್ತವಾಗುತ್ತೆ ಎಂದು ವಿಭಕ್ತಿಯು ಉದಾತ್ತವಾಗುತ್ತೆ.

**ದಿವಿ—ಊಡಿದಂ ಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಇವುಗಳ ಮುಂದೆ ಇರುವ ಅಸರ್ವನಾಮಸ್ಥಾನ ವಿಭಕ್ತಿಯು ಉದಾತ್ತವಾಗುತ್ತೆ ಎಂದು ವಿಭಕ್ತಿ ಉದಾತ್ತ. ॥ ೩ ॥

---

॥ ಸಂಹಿತಾಪಾಠಃ ॥

ದೇವಾಸಸ್ತ್ವಾ ವರುಣೋ ಮಿತ್ರೋ ಅರ್ಯಮಾ ಸಂ ದೂತಂ
　　ಪ್ರತ್ನಮಿಂಧತೇ ।
ವಿಶ್ವಂ ಸೋ ಅಗ್ನೇ ಜಯತಿ ತ್ವಯಾ ಧನಂ ಯಸ್ತೇ ದದಾಶ
　　ಮರ್ತ್ಯಃ ॥ ೪ ॥

॥ ಪದಪಾಠಃ ॥

**ದೇವಾಸಃ । ತ್ವಾ । ವರುಣಃ । ಮಿತ್ರಃ । ಅರ್ಯಮಾ । ಸಂ । ದೂತಂ ।**
　　**ಪ್ರತ್ನಂ । ಇಂಧತೇ ।**
**ವಿಶ್ವಂ । ಸಃ । ಅಗ್ನೇ । ಜಯತಿ । ತ್ವಯಾ । ಧನಂ । ಯಃ । ತೇ । ದದಾಶ ।**
　　**ಮರ್ತ್ಯಃ ॥ ೪ ॥**

ಸಾಯಣಭಾಷ್ಯಂ

ಹೇ ಅಗ್ನೇ ವರುಣಾದಯಸ್ತ್ರಯೋ ದೇವಾಸೋ ದೇವಾಃ ಪ್ರತ್ನಂ ಪುರಾತನಂ ದೂತಂ ತ್ವಾಂ ಸಮಿಂಧತೇ । ಸಮ್ಯಗ್ದೀಪಯಂತಿ । ಯೋ ಮರ್ತ್ಯೋ ಮನುಷ್ಯೋ ಯಜಮಾನಸ್ತೇ ತುಭ್ಯಂ ದದಾಶ ಹವಿರ್ದತ್ತವಾನ್ ಸ ಯಜಮಾನಸ್ತ್ವಯಾ ಸಹಾಯಭೂತೇನ ವಿಶ್ವಂ ಸರ್ವಂ ಧನಂ ಜಯತಿ ॥ ಅರ್ಯಮಾ । ಅರ್ಯಾನ್ಮಿಮೀತ ಇತ್ಯರ್ಯಮಾ । ಶ್ವನ್ನುಕ್ಷನ್ನಿತ್ಯಾದಿನಾ । ಉ. ೧-೧೫೮ । ಕನಿನ್ಪ್ರತ್ಯಯಾಂತೋ ನಿಪಾತಿತಃ । ಇಂಧತೇ ಞಿ ಇಂಧೀ ದೀಪ್ತೌ । ಅಸ್ಮಾಲ್ಲಟಿ ಝಸ್ಯಾದಾದೇಶೇ ಶ್ನಮ್ । ಶ್ನಾನ್ನಲೋಪಃ । ಪಾ.೬-೪-೨೩ । ಶ್ನಸೋರಲ್ಲೋಪ ಇತ್ಯಕಾರಲೋಪಃ । ದದಾಶ । ದಾಶೃ ದಾನೇ । ಲಿಟಿ ಲಿತ್ಸ್ವರೇಣ ಪ್ರತ್ಯಯಾತ್ಪೂರ್ವಸ್ಯಾಕಾರಸ್ಯೋದಾತ್ತತ್ವಂ । ಯದ್ವೃತ್ತಯೋಗಾದನಿಘಾತಃ ॥

ಪ್ರತಿಪದಾರ್ಥ

**ಅಗ್ನೇ**— ಎಲೈ ಅಗ್ನಿಯೇ, । **ವರುಣಃ, ಮಿತ್ರಃ, ಅರ್ಯಮಾ, ದೇವಾಸಃ**—ವರುಣ, ಮಿತ್ರ ಮತ್ತು ಅರ್ಯಮನ್ ಎಂಬ ಮೂರು ದೇವತೆಗಳೂ । **ಪ್ರತ್ನಂ**— ಪುರಾತನನಾದ । **ದೂತಂ**— ದೂತನಾದ ನಿನ್ನನ್ನು । **ಸಂ ಇಂಧತೇ**— ಚೆನ್ನಾಗಿ ಪ್ರಜ್ವಲಿಸುವಂತೆ ಮಾಡುತ್ತಾರೆ । **ಯಃ ಮರ್ತ್ಯಃ**— ಯಾವ ಯಜ್ಞಕರ್ತನಾದ ಮಾನವನು । **ತೇ**—ನಿನಗೆ । **ದದಾಶ**—ಹವಿಸ್ಸನ್ನು ಅರ್ಪಿಸುವನೋ । **ಸಃ**—ಆ ಯಜಮಾನನು । **ತ್ವಯಾ**—ನಿನ್ನಿಂದ (ನಿನ್ನ ಸಹಾಯದಿಂದ) । **ವಿಶ್ವಂ ಧನಂ**— ಸಕಲಧನವನ್ನೂ । **ಜಯತಿ**— ಪಡೆಯುತ್ತಾನೆ.

ಭಾವಾರ್ಥ

ಎಲೈ ಅಗ್ನಿಯೇ, ನೀನು ಬಹಳ ಪುರಾತನನು. ಮೊದಲಿನಿಂದಲೂ ದೇವದೂತನು. ವರುಣ, ಮಿತ್ರ ಮತ್ತು ಅರ್ಯಮ ಎಂಬ ಮೂರು ದೇವತೆಗಳೂ ಸಹ ನಿನ್ನನ್ನು ಪ್ರಜ್ವಲಿಸುವಂತೆ ಮಾಡುತ್ತಾರೆ. ಮಾನವರಲ್ಲಿ ಯಾರು ಯಾರು ನಿನ್ನನ್ನು ಉದ್ದೇಶಿಸಿ ಯಜ್ಞಮಾಡಿ ನಿನಗೆ ಹವಿಸ್ಸನ್ನು ಅರ್ಪಿಸುವರೋ ಅವರೆಲ್ಲ ನಿನ್ನ ಸಹಾಯದಿಂದ ಅವರವರಿಗೆ ಬೇಕಾದ ಸಕಲ ಧನವನ್ನೂ ಪಡೆಯುತ್ತಾರೆ.

English Translation

The gods Varuna, Mitra and Aryaman, kindle you, their ancient messenger; the man who has offered you oblations gets through you great wealth.

ವಿಶೇಷ ವಿಷಯಗಳು

**ಪ್ರತ್ನಂ—ಪುರಾತನಂ** । ಬಹಳಕಾಲದಿಂದಲೂ ಅಗ್ನಿಯು ದೇವತೆಗಳ ದೂತನೆಂದು ಪ್ರಸಿದ್ಧಿಯು

**ಸಂ ಇಂಧತೇ—ಸಮ್ಯಗ್ದೀಪಯಂತಿ** । ಚೆನ್ನಾಗಿ ಪ್ರಕಾಶಮಾನವಾಗುವಂತೆ ಉದ್ದೀಪನಗೊಳಿಸುತ್ತಾರೆ, ಅಗ್ನಿಯಲ್ಲಿ ಕಾಷ್ಠಾದಿಗಳನ್ನು ಹಾಕಿ ಚೆನ್ನಾಗಿ ಉರಿಯುವಂತೆ ಮಾಡುತ್ತಾರೆ.

**ತ್ವಯಾ**— ನಿನ್ನಿಂದ ಅಥವಾ ನಿನ್ನ ಸಹಾಯದಿಂದ

**ಯಸ್ತೇ ದದಾಶ ಮರ್ತ್ಯಃ**— ಯಾವ ಮನುಷ್ಯನು ನಿನಗೆ ಹವಿಸ್ಸನ್ನು ಅರ್ಪಿಸುವನೋ ಅವನು

**ವಿಶ್ವಂ ಧನಂ ಜಯತಿ**— ಸಮಸ್ತವಾದ ಎಂದರೆ ಬಹಳವಾದ ಧನವನ್ನು ಗೆಲ್ಲುತ್ತಾನೆ. ಗಳಿಸುತ್ತಾನೆ.

॥ ವ್ಯಾಕರಣಪ್ರಕ್ರಿಯಾ ॥

**ಅರ್ಯಮಾ**—ಶ್ವನ್ನುಕ್ಷನ್ಪೂಷನ್ ಪ್ಲೀಹನ್ ಕ್ಲೇದನ್ ಸ್ನೇಹನ್ ಮೂರ್ಧನ್ ಮಜ್ಜನ್ ಅರ್ಯಮನ್ ವಿಶ್ವಪ್ಸನ್ ಪರಿಜ್ಮನ್ ಮಾತರಿಶ್ವನ್ಮಘವನ್ನಿತಿ (ಉ ಸೂ. ೧-೧೫೭) ಈ ಹದಿಮೂರು ಶಬ್ದಗಳು ಕನಿ ಪ್ರತ್ಯಯಾಂತಗಳಾಗಿ ನಿಪಾತಿಸಲ್ಪಡುವುವು. ಅರ್ಯಶಬ್ದೋಪಪದಕವಾದ ಮಾ ಧಾತುವಿನ ಮುಂದೆ ಕನಿಪ್ರತ್ಯಯ ಅರ್ಯಮಾ+ ಅನ್ **ಆತೋ ಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂದು ಆಕಾರಕ್ಕೆ ಲೋಪ, ಪ್ರತ್ಯಯಸ್ವರದಿಂದ ಅಂತೋದಾತ್ತ.

**ಇನ್ಧತೇ**—ಞಿ-ಇನ್ಧೀ ದೀಪ್ತೌ ಧಾತು, ಇದರ ಮುಂದೆ ಲಟ್, ಝ, **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಆತ್ಮನೇ ಪದದಲ್ಲಿ ಅಕಾರಕ್ಕಿಂತ ಪರದಲ್ಲಿ ಇಲ್ಲದ ಝ್‌ಗೆ ಅತ್ ಆದೇಶ ಬರುತ್ತೆ ಎಂದು ಝಿಗೆ ಅತ್, **ರುಧಾದಿಭ್ಯಃ ಶ್ನಮ್** (ಪಾ ಸೂ. ೩-೧-೭೮) ಎಂದು ಶ್ನಮ್, ಅದು ಮಿತ್, **ಮಿದಚೋಂತ್ಯಾತ್ಪರಃ** ಎಂದು ಎಂದು ಕೊನೆಯ ಸ್ವರದ ಮುಂದೆ ಬರುತ್ತೆ. ಇನನ್ಧ್+ಅತ, ಏತ್ವ. **ಶ್ನಾನ್ನಲೋಪಃ** (ಪಾ. ಸೂ. ೬-೪-೨೩) ಶ್ನಮ್‌ನ ಮುಂದೆ ಇರುವ ನಕಾರಕ್ಕೆ ಲೋಪ ಬರುತ್ತೆ. ನ್‌ಗೆ ಲೋಪ, **ಶ್ನಸೋರಲ್ಲೋಪಃ**=ಇದರ ಅರ್ಥ ಹಿಂದಿನ ಮಂತ್ರದಲ್ಲಿದೆ, ಇದರಿಂದ ಶ್ನಮ್‌ನ ಅಕಾರಕ್ಕೆ ಲೋಪ.

**ದದಾಶ**—ದಾಶೃ ದಾನೇ ಧಾತು, ಲಿಟ್, ತಿಪ್, **ಪರಸ್ಮೈಪದಾನಾಂ—**, ಎಂದು ಣಲ್, ದಿತ್ವ, ಹ್ರಸ್ವ ಜಶ್ತ್ವ, ಪ್ರಕೃತಿಜಶ್‌ಗೆ ಪ್ರಕೃತಿಜಶ್ ವರ್ಣವೇ ಬರುತ್ತೆ ಣಲ್ ಪ್ರತ್ಯಯದ ಹಿಂದೆ ಇರುವ ವರ್ಣವು **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಉದಾತ್ತ, **ಯಸ್ತೇ ದದಾಶ** ಎಂದು ಯದ್ವೃತ್ತಯೋಗ ಇದೆ. **ಪೂಜನಾತ್ಪೂಜತ—**, ಎಂಬ ಸೂತ್ರದಲ್ಲಿ ಪುನಃ ಪೂಜಿತಗ್ರಹಣದಿಂದ ವ್ಯವಧಾನ ಇದ್ದರೂ **ಯದ್ವೃತ್ತಾನ್ನಿತ್ಯಂ** ಎಂಬ ನಿಷೇಧ ಬರುತ್ತೆ ಎಂದು ಹಿಂದೆ ಉಪಪಾದಿಸಲಾಗಿದೆ ಆದ್ದರಿಂದ **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುವುದಿಲ್ಲ. ॥ ೪ ॥

॥ ಸಂಹಿತಾಪಾಠಃ ॥

ಮನ್ದ್ರೋ ಹೋತಾ ಗೃಹಪತಿರಗ್ನೇ ದೂತೋ ವಿಶಾಮಸಿ।
ತ್ವೇ ವಿಶ್ವಾ ಸಂಗತಾನಿ ವ್ರತಾ ಧ್ರುವಾ ಯಾನಿ ದೇವಾ ಅಕೃ-
ಣ್ವತ ॥ ೫ ॥

॥ ಪದಪಾಠಃ ॥

ಮನ್ದ್ರಃ । ಹೋತಾ । ಗೃಹಃಽಪತಿಃ । ಅಗ್ನೇ । ದೂತಃ । ವಿಶಾಂ । ಅಸಿ । ತ್ವೇ ಇತಿ । ವಿಶ್ವಾ । ಸಂಽಗತಾನಿ । ವ್ರತಾ । ಧ್ರುವಾ । ಯಾನಿ । ದೇವಾಃ । ಅಕೃಣ್ವತ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಮಂದ್ರೋ ಹರ್ಷಹೇತುರ್ಹೋತಾ ದೇವಾನಾಮಾಹ್ವಾತಾ ವಿಶಾಂ ಯಜಮಾನರೂಪಾಣಾಂ ಪ್ರಜಾನಾಂ ಗೃಹಪತಿರ್ಗೃಹಸ್ಯ ಪಾಲಕೋ ದೂತೋ ದೇವದೂತೋಽಸಿ । ತ್ವೇ ತ್ವಯಿ ವಿಶ್ವಾ ವ್ರತಾ ಸರ್ವಾಣಿ ಕರ್ಮಾಣಿ ಸಂಗತಾನಿ । ವ್ರತಂ ಕರ್ವರಮಿತಿ ಕರ್ಮನಾಮಸು ವ್ರತಶಬ್ದಃ ಪಠಿತಃ । ಪೃಥಿವ್ಯಾದಯೋ ದೇವಾ ಧ್ರುವಾ ಸ್ಥಿರಾಣಿ ಯಾನಿ ಕರ್ಮಾಣ್ಯಕೃಣ್ವತ ಕೃತವಂತಃ । ಪೃಥಿವೀ ಧಾರಯತಿ ಪರ್ಜನ್ಯೋ ವರ್ಷತಿ ಸೂರ್ಯಃ ಪ್ರಕಾಶಯತಿ । ತಾನ್ಯೇತಾನಿ ತ್ವಯಿ ಸಂಗತಾನೀತಿ ಪೂರ್ವತ್ರಾನ್ವಯಃ ॥ ಗೃಹಪತಿಃ । ಪತ್ಯಾವೈಶ್ವರ್ಯ ಇತಿ ಪೂರ್ವಪದಪ್ರಕೃತಿಸ್ವರತ್ವಂ ತ್ವೇ ಸುಪಾಂ ಸುಲುಗಿತಿ ಸಪ್ತಮ್ಯೇಕವಚನಸ್ಯ ಶೇ ಆದೇಶಃ । ತ್ವಮಾವೇಕವಚನ ಇತಿ ಮಪರ್ಯಂತಸ್ಯ ತ್ವಾದೇಶಃ । ಶೇಷೇ ಲೋಪ ಇತಿ ಟಿಲೋಪಪಕ್ಷ ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ ಅಂತ್ಯಲೋಪಪಕ್ಷೇ ತ್ವೇಕಾದೇಶಸ್ವರೇಣ । ಸಂಗತಾನಿ । ಗಮೇಃ ಕರ್ಮಣಿ ನಿಷ್ಠಾಯಾಮೇಕಾಚಃ । ಪಾ. ೭-೨-೧೦ । ಇತೀಟ್ ಪ್ರತಿಷೇಧಃ ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ವ್ರತಾ ಧ್ರುವೇತ್ಯುಭಯತ್ರ ಶೇರ್ಲೋಪಃ । ಅಕೃಣ್ವತ ಕೃವಿ ಹಿಂಸಾಕರಣಯೋಶ್ಚ । ವ್ಯತ್ಯಯೇನಾತ್ಮನೇಪದಂ । ಇದಿತೋ ನುಮ್ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ ॥ ೮ ॥

॥ ಪ್ರತಿಪದಾರ್ಥ ॥

**ಅಗ್ನೇ**— ಎಲೈ ಅಗ್ನಿಯೇ (ನೀನು) । **ಮಂದ್ರಃ**— ಹರ್ಷದಾಯಕನೂ । **ಹೋತಾ**— (ದೇವತೆಗಳನ್ನು ಯಜ್ಞಕ್ಕೆ) ಕರೆಯುವವನೂ । **ವಿಶಾಂ**— ಯಜ್ಞಕರ್ತೃಗಳಾದ ಪ್ರಜೆಗಳ । **ಗೃಹಪತಿಃ**— ಮನೆಯ ರಕ್ಷಕನೂ । **ದೂತಃ**— ದೇವದೂತನೂ । **ಅಸಿ**— ಆಗಿದ್ದೀಯೆ. । **ದೇವಾಃ**— ಪೃಥಿವ್ಯಾದಿ ದೇವತೆಗಳು । **ಧ್ರುವಾ**—ಸ್ಥಿರವಾದ । **ಯಾನಿ ಕರ್ಮಾಣಿ**— ಯಾವ ಕರ್ಮಗಳನ್ನು ( ಪೃಥ್ವಿಯ ಧಾರಣ ಕರ್ಮವನ್ನೂ, ಪರ್ಜನ್ಯನು ಮಳೆಗರಿಸುವ ಕರ್ಮವನ್ನೂ, ಸೂರ್ಯನು ಪ್ರಭೆಯಿಂದ ಪ್ರಕಾಶಿಸುವ ಕರ್ಮವನ್ನೂ ಹೀಗೆಯೇ ಇತರ ದೇವತೆಗಳ ಸ್ವಸ್ವಾನುರೂಪವಾದ ಕರ್ಮಗಳನ್ನೆಲ್ಲ) । **ಅಕೃಣ್ವತ**—ಮಾಡಿರುತ್ತಾರೋ । **ವಿಶ್ವಾ ವ್ರತಾ**—(ಲೋಕಕ್ಷೇಮಕರವಾದ) ಆ ಸಕಲ ಕರ್ಮಗಳೂ ಸಹ । **ತ್ವೇ**— ನಿನ್ನಲ್ಲಿ । **ಸಂಗತಾನಿ**— ಕೂಡಿಕೊಂಡು ಸಮನ್ವಿತವಾಗುತ್ತವೆ

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಮನುಷ್ಯರಿಗೂ ಮತ್ತು ದೇವತೆಗಳಿಗೂ ಸಮಾನವಾದ ಬಂಧುವಾಗಿದ್ದೀಯೆ. ನೀನು ಎಲ್ಲರಿಗೂ ಹರ್ಷದಾಯಕನು. ಮಾನವರಿಗೋಸ್ಕರ ಅವರ ಯಜ್ಞಕರ್ಮಕ್ಕೆ ದೇವತೆಗಳನ್ನು ಕರೆಯುತ್ತೀಯೆ. ಯಜ್ಞಕರ್ತರ ಗೃಹ ರಕ್ಷಕನಾಗಿದ್ದೀಯೆ. ದೇವತೆಗಳ ಪರ ಅವರ ದೂತನಾಗಿದ್ದೀಯೆ. ಮತ್ತು ಅವರ ಕಾರ್ಯಗಳಿಗೆಲ್ಲಾ ಆಧಾರಭೂತನಾಗಿದ್ದೀಯೆ. ಪೃಥ್ವಿಯು ಯಾವ ಧಾರಣಕರ್ಮವುಂಟೋ, ಪರ್ಜನ್ಯನ ವೃಷ್ಟಿರೂಪವಾದ ಯಾವ ಕರ್ಮವುಂಟೋ, ಮತ್ತು ಸೂರ್ಯನ ಪ್ರಕಾಶನಸ್ವರೂಪವಾದ ಯಾವ ಕರ್ಮವುಂಟೋ ಹೀಗೆಯೇ ಇತರ ದೇವತೆಗಳ ಲೋಕದಲ್ಲಿ ಸ್ಥಿರವಾಗಿರತಕ್ಕ ಯಾವ ಯಾವ ಕರ್ಮಗಳುಂಟೋ ಲೋಕಕ್ಷೇಮಕರಗಳಾದ ಆ ಸಕಲ ಕರ್ಮಗಳೂ ನಿನ್ನಲ್ಲಿ ಸೇರಿ ಒಂದುಗೂಡಿ ಸಮನ್ವಯವನ್ನು ಹೊಂದುತ್ತವೆ. ಎಂದರೆ ನಿನ್ನಿಂದಲೇ ನಡೆಯುತ್ತವೆ.

English Translation

O Agni, you are the giver of delight, the invoker and messenger of gods and the lord of the house ; the good actions which the gods perform are all united in you.

ವಿಶೇಷ ವಿಷಯಗಳು

**ಮಂದ್ರಃ— ಹರ್ಷಹೇತುಃ ।** ಹರ್ಷವನ್ನುಂಟುಮಾಡುವ

**ಹೋತಾ— ದೇವಾನಾಮಾಹ್ವಾತಾ ।** ಯಜ್ಞಗಳಲ್ಲಿ ದೇವತೆಗಳನ್ನು ಆಹ್ವಾನಮಾಡುವವನು.

**ಗೃಹಪತಿಃ—** ಗೃಹಪಾಲಕನು. ಅಗ್ನ್ಯಾಧಾನ ಮೊದಲಾದ ಕರ್ಮಗಳನ್ನು ಮಾಡುವ ಯಜಮಾನನ ಮನೆಯಲ್ಲಿ ಯಾವಾಗಲೂ ಅಗ್ನಿಯು ಇರುವುದರಿಂದ ಅಗ್ನಿಯು ಗೃಹಪಾಲಕನೆಂದು ಹೇಳಲ್ಪಡುವನು.

**ಸಂಗತಾನಿ—** ಸೇರಿವೆ. ದೇವತೆಗಳು ಮಾಡುವ ಅವರವರ ಕರ್ಮಗಳೆಲ್ಲವೂ ನಿನ್ನಲ್ಲಿ ಸೇರಿವೆ ಎಂದರೆ ನಿನ್ನ ಸಹಾಯದಿಂದಲೇ ನೆರವೇರುತ್ತವೆ.

**ವ್ರತಾ ಧ್ರುವಾ ಯೋನಿ ದೇವಾ ಅಕೃಣ್ವತ—** ದೇವತೆಗಳು ತಾವು ಮಾಡಬೇಕಾದ ಕರ್ತವ್ಯ ರೂಪವಾದ ಕರ್ಮಗಳ ಎಂದರೆ ಭೂಮಿಯು ಪ್ರಾಣಿಗಳಿಗೆ ಆಶ್ರಯ ಕೊಟ್ಟು ಅವು ಜೀವಿಸುವುದಕ್ಕೆ ಸಹಾಯ ಮಾಡುವುದು, ಪರ್ಜನ್ಯನು ತನ್ನ ಕೆಲಸವಾದ ಮಳೆಯನ್ನು ಸುಯ್ಯುವುದು, ಸೂರ್ಯನು ಲೋಕದ ಜನರ ಸೌಕರ್ಯಕ್ಕಾಗಿ ಪ್ರಕಾಶಿಸುವುದು, ಇವೇ ಮೊದಲಾದ ದೇವತೆಗಳು ನಿತ್ಯವೂ ಮಾಡುವ ಯಾವ ಕರ್ಮಗಳುಂಟೋ ಅವೆಲ್ಲವೂ ಅಗ್ನಿಯಾದ ನಿನ್ನಲ್ಲಿಯೇ ಸೇರಿವೆ ಎಂದರೆ ನಿನ್ನ ಸಹಾಯದಿಂದಲೇ ನೆರವೇರುತ್ತವೆ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಗೃಹಪತಿಃ—**ಗೃಹಸ್ಯ ಪತಿಃ ಎಂದು ವಿಗ್ರಹ. **ಪಾತೇರ್ಡತಿಃ** ಎಂದು ಡತಿಪ್ರತ್ಯಯಾಂತ ಪತಿಶಬ್ದ. **ಪತ್ಯಾವೈಶ್ವರ್ಯೇ** (ಪಾ. ಸೂ. ೬-೨-೧೮) ಐಶ್ವರ್ಯಾರ್ಥಕಪತಿಶಬ್ದವು ಪರದಲ್ಲಿರುವಾಗ ಪೂರ್ವಪದವು ತತ್ಪುರುಷ

ಸಮಾಸದಲ್ಲಿ ಪ್ರಕೃತಿಸ್ವರವನ್ನು ಹೊಂದುತ್ತೆ ಎಂದು ಪೂರ್ವಪದಪ್ರಕೃತಿಸ್ವರ ಬರುತ್ತೆ. ಪೂರ್ವಪದವಾದ ಗೃಹ ಶಬ್ದವು **ಗೇಹೇ ಕಃ** (ಪಾ. ಸೂ. ೩-೧-೧೪೪) ಪ್ರತ್ಯಯಾರ್ಥವಾದ ಕರ್ತೃವು ಗೇಹ ಎಂದರೆ ಮನೆಯಾದಾಗ ಗ್ರಹ ಉಪಾದಾನೇ ಧಾತು ಮುಂದೆ ಕ ಪ್ರತ್ಯಯ ಬರುತ್ತೆ ಎಂದು ಕ ಪ್ರತ್ಯಯ ಬರಲು **ಗ್ರಹಿಜ್ಯಾವಯಿ—,** ಎಂದು ಸಂಪ್ರಸಾರಣ ಬಂದು ಗೃಹಶಬ್ದವು ನಿಷ್ಪನ್ನವಾಗುತ್ತೆ. ಏನಂಚ ಪ್ರತ್ಯಯಸ್ವರದಿಂದ ಗೃಹಶಬ್ದವು **ಅಂತೋದಾತ್ತ**

**ತ್ವೇ**—ಯುಷ್ಮದ್ ಶಬ್ದದ ಮುಂದೆ ಸಪ್ತಮೀ ಏಕವಚನ ಙಿ, ಅದಕ್ಕೆ **ಸುಪಾಂಸುಲುಕ್– ,**ಎಂದು ಶೇ ಆದೇಶ, ಯುಷ್ಮದ್+ಏ, **ತ್ವಮಾವೇಕವಚನೇ** (ಪಾ, ಸೂ. ೭-೨-೯೭) ಏಕತ್ವವಿಶಿಷ್ಟವಾದ ಅರ್ಥವನ್ನು ಬೋಧಿಸುವ ಯುಷ್ಮದ್, ಅಸ್ಮದ್ ಶಬ್ದಗಳ ಮಪರ್ಯಂತಕ್ಕೆ ಕ್ರಮವಾಗಿ ತ್ವ-ಮ ಎಂಬ ಆದೇಶಗಳು ಬರುವುವು ಎಂದು ತ್ವ ಆದೇಶ, ಆದೇಶವನ್ನು ಹೊಂದಿದ ವಿಭಕ್ತಿಯಾದ್ದರಿಂದ **ಯೋಽಚಿ** ಎಂದು ಯಾದೇಶ ಬರುವುದಿಲ್ಲ **ಶೇಷೇ ಲೋಪಃ** (ಪಾ. ಸೂ. ೭-೨-೯೦) ವಿಭಕ್ತಿಪರದಲ್ಲಿರುವಾಗ ಯುಷ್ಮದಸ್ಮಚ್ಛಬ್ದಗಳ ಮಪರ್ಯಂತಕ್ಕಿಂತಲೂ ಮುಂದೆ ಉಳಿದಿರುವ ಅದ್‌ಗೆ ಲೋಪ ಬರುತ್ತೆ ಎಂದು ಒಂದು ಅರ್ಥ, ಆತ್ವಯತ್ವಗಳಿಗೆ ನಿಮಿತ್ತವಾಗದ ವಿಭಕ್ತಿ ಪರದಲ್ಲಿರುವಾಗ ಯುಷ್ಮದಸ್ಮಚ್ಛಬ್ದಗಳ ಕೊನೆಯ ವರ್ಣಕ್ಕೆ ಲೋಪ ಬರುತ್ತೆ ಎಂದು ಮತ್ತೊಂದರ್ಥ, ೧ನೆಯದು ಟಿ ಲೋಪಪಕ್ಷ. ೨ನೆಯದು ಅಂತ್ಯಲೋಪ ಪಕ್ಷ. ತ್ವ-ಮ ಆದೇಶಗಳು ಅಜಂತ ಎಂದೂ ಹಲಂತ ಎಂದೂ ಎರಡು ಪಕ್ಷ ಇದೆ, ಅಜಂತ ಎಂಬ ಪಕ್ಷದಲ್ಲಿ **ಅತೋಗುಣೇ** ಎಂದು ಪರರೂಪ ಬರುತ್ತೆ, ತ್ವದ್ ಎಂದಿರುತ್ತೆ, ತ್ವದ್+ಏ, ಎಂಬಲ್ಲಿ ಟಿಗೆ ಲೋಪ ಬಂದರೆ, **ಅನುದಾತ್ತಸ್ಯಚ ಯತ್ರೋದಾತ್ತ ಲೋಪಃ** ಎಂಬ ಉದಾತ್ತನಿವೃತ್ತಿಸ್ವರದಿಂದ ಏ ಉದಾತ್ತ, ಯುಷ್ ಧಾತುವಿನ ಮುಂದೆ **ಯುಷ್ಯಸಿಭ್ಯಾಂಮದಿಕ್** ಎಂದು ಮದಿಕ್ ಬರುವುದರಿಂದ ಪ್ರತ್ಯಯಸ್ವರ ಬಂದು ಅದ್ ಉದಾತ್ತ, ಅದರ ಲೋಪಕ್ಕೆ ನಿಮಿತ್ತವಾಗುತ್ತೆ. ಅಂತ್ಯಲೋಪ ಪಕ್ಷದಲ್ಲಿ ತ್ವ+ಏ ಎಂದಿರುವಾಗ **ಅತೋಗುಣೇ** ಎಂದು ಪರರೂಪ, **ಏಕಾದೇಶ ಉದಾತ್ತೇನೋದಾತ್ತಃ** ಎಂದು ಏಯು ಉದಾತ್ತ.

**ಸಂಗತಾನಿ**—ಸಂ ಉಪಸರ್ಗ, ಗಮ್ಲೃ ಗತೌ ಧಾತು, ಕರ್ಮಾರ್ಥದಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂದು ಕ್ತಪ್ರತ್ಯಯ, **ತಯೋರೇವಕೃತ್ಯಕ್ತಖಲರ್ಥಾಃ** (ಪಾ. ಸೂ. ೩-೪-೭೦) ಕೃತ್ಯಪ್ರತ್ಯಯಗಳು, ಕ್ತ ಪ್ರತ್ಯಯ, ಖಲರ್ಥಪ್ರತ್ಯಯಗಳು ಇವು ಭಾವ ಮತ್ತು ಕರ್ಮ ಈ ಅರ್ಥಗಳಲ್ಲಿಯೇ ಬರುವುವು ಎಂದು ಹೇಳಿರುವುದರಿಂದ ಸಕರ್ಮಕವಾದ ಗಮ್ ಧಾತು ಮುಂದೆ ಕರ್ಮಾರ್ಥದಲ್ಲಿ ಕ್ತ ಬರುತ್ತೆ. **ಏಕಾಚ ಉಪದೇಶೇಽನುದಾತ್ತಾತ್** (ಪಾ. ಸೂ. ೭-೨-೧೦) ಎಂದು ಇಡಾಗಮಕ್ಕೆ ನಿಷೇಧ, **ಅನುದಾತ್ತೋಪದೇಶ—,** ಎಂದು ಮ್‌ಗೆ ಲೋಪ, **ಗತಿರನಂತರಃ** (ಪಾ. ಸೂ. ೬-೨-೪೯) ಕರ್ಮಾರ್ಥಕ ಕ್ತಪ್ರತ್ಯಯಾಂತವು ಪರದಲ್ಲಿರುವಾಗ ಅವ್ಯವಹಿತವಾದ ಗತಿಯು ಪ್ರಕೃತಿಸ್ವರವನ್ನು ಹೊಂದುತ್ತೆ ಎಂದು ಗತಿಗೆ ಪ್ರಕೃತಿಸ್ವರ ಬರುತ್ತೆ.

**ವ್ರತಾ-ಧ್ರುವಾ**—ವ್ರತಾನಿ, ಧ್ರುವಾಣಿ ಎಂಬ ಪದಗಳಿಗೆ ಬದಲಾಗಿ ಈ ಪದಗಳು ವೇದದಲ್ಲಿ ಬಂದಿವೆ, ಈ ಎರಡು ಶಬ್ದದಲ್ಲಿಯೂ **ಶೇಶ್ಛಂದಸಿ ಬಹುಲಂ** ಎಂದು ಶಿಗೆ ಲೋಪ.

**ಅಕೃಣ್ವತ**—ಕೃವಿ ಹಿಂಸಾಕರಣಯೋಶ್ಚ ಧಾತು, ಇದಿತ್, **ಇದಿತೋನುಮ್ ಧಾತೋಃ** ಎಂದು ನುಮ್ ಆಗಮ, ಈ ಧಾತುವು ೧ ನೇ ಗಣದಲ್ಲಿದೆ, ಸ್ವಾದಿಯಲ್ಲಿಯೂ ಇದಕ್ಕೆ ಪಾಠ ಇದೆ. ಗತ್ಯರ್ಥದಲ್ಲಿಯೂ ಇದಕ್ಕೆ

ಪ್ರಯೋಗ ಉಂಟು, ಇದು ಪರಸ್ಮೈಪದಿ, ಆದರೂ **ವ್ಯತ್ಯಯೋಬಹುಲಂ** ಎಂಬುವರಿಂದ ಇಲ್ಲಿ ಆತ್ಮನೇಪದ ಬಂದಿದೆ, ಲಜ್, ಝ, **ಧಿನ್ವಿಕೃಣ್ವ್ಯೋರಚ** (ಪಾ. ಸೂ. ೩-೧-೮೦) ಧಿನ್ವ್-ಕೃಣ್ವ್ ಇವುಗಳ ಕೊನೆಯ ವರ್ಣಕ್ಕೆ ಅಕಾರ ಬರುತ್ತೆ, ಕರ್ತ್ರರ್ಥಕ ಸಾರ್ವಧಾತುಕ ಪರದಲ್ಲಿರುವಾಗ ಶಪ್‌ಗೆ ಬದಲಾಗಿ ಉ ಪ್ರತ್ಯಯ ಬರುತ್ತೆ ಎಂದು. ಅವು ಬಂದರೆ, ಕೃನ+ಉ+ಝ, **ಆತ್ಮನೇಪದೇಷ್ವನತಃ** ಎಂದು ಝ್‌ಗೆ ಅತ್ ಆದೇಶ, ಅಡಾಗಮ, ಅಕೃನ+ಉ+ಅತ, **ಅತೋಲೋಪಃ** (ಪಾ. ಸೂ. ೬-೪-೪೮) ಆರ್ಧಧಾತುಕದ ಉಪದೇಶಕಾಲದಲ್ಲಿ ಯಾವುದು ಅಕಾರಾಂತವಾಗಿದೆಯೋ ಅದರ ಅಕಾರಕ್ಕೆ ಲೋಪ ಬರುತ್ತೆ ಎಂದು ಅಕಾರಕ್ಕೆ ಲೋಪ, ಅಕೃನ್+ಉ+ಅತ, ಗುಣಕ್ಕೆ ನಿಷೇಧ, ಯಣಾದೇಶ, **ಋವರ್ಣಾನ್ನಸ್ಯಣತ್ವಂ ವಾಚ್ಯಂ** ಎಂದು ನಕಾರಕ್ಕೆ ಣಕಾರ, ಅಕೃಣ್ವತ ಎಂದು ರೂಪವು ಸಿದ್ಧವಾಗುವುದು. ॥ ೫ ॥

---

॥ ಸಂಹಿತಾಪಾಠ ॥

ತ್ವೇ ಇದಗ್ನೇ ಸುಭಗೇ ಯವಿಷ್ಠ್ಯ ವಿಶ್ವಮಾ ಹೂಯತೇ ಹವಿಃ ।
ಸ ತ್ವಂ ನೋ ಅದ್ಯ ಸುಮನಾ ಉತಾಪರಂ ಯಕ್ಷಿ ದೇವಾನ್ತ್ಸು-
ವೀರ್ಯಾ ॥ ೬ ॥

॥ ಪದಪಾಠಃ ॥

**ತ್ವೇ ಇತಿ । ಇತ್ । ಅಗ್ನೇ । ಸುಽಭಗೇ । ಯವಿಷ್ಠ್ಯ । ವಿಶ್ವಂ । ಆ ।**
**ಹೂಯತೇ । ಹವಿಃ ।**

**ಸಃ । ತ್ವಂ । ನಃ । ಅದ್ಯ । ಸುಽಮನಾಃ । ಉತ । ಅಪರಂ । ಯಕ್ಷಿ ।**
**ದೇವಾನ್ । ಸುಽವೀರ್ಯಾ ॥ ೬ ॥**

॥ ಸಾಯಣಭಾಷ್ಯಂ ॥

**ಹೇ ಯವಿಷ್ಠ್ಯ ಯುವತಮಾಗ್ನೇ ಸುಭಗೇ ಸೌಭಾಗ್ಯಯುಕ್ತೇ ತ್ವೇ ಇತ್ ತ್ವಯ್ಯೇವ ವಿಶ್ವಂ ಸರ್ವಂ ಹವಿರಾ ಹೂಯತೇ । ಸರ್ವತಃ । ಪ್ರಕ್ಷಿಪ್ಯತೇ ಸ ತ್ವಂ ನೋಸ್ಮಾನ್ಪ್ರತಿ ಸುಮನಾಃ ಶೋಭನ-**

**ಮನಸ್ಕೋ ಭೂತ್ವಾದ್ಯಾಸ್ಮಿನ್ನಿನ ಉತಾಪಿ ಚಾಪರಂ ಶ್ವೋಽಪರಂ ಶ್ವ ಇತ್ಯಾದಿಕ ಮುತ್ತರಂ ಕಾಲಂ ಸರ್ವಸ್ಮಿನ್ನಪಿ ಕಾಲೇ ನೈರಂತರ್ಯೇಣ ಸುವೀರ್ಯಾ ಶೋಭನವೀರ್ಯೋಪೇತಾನ್ದೇವಾನ್ಯಕ್ಷಿ। ಯಜ ॥ ಸುಭಗೇ। ಶೋಭನೋ ಭಗೋ ಯಸ್ಯೇತಿ ಬಹುವ್ರೀಹಾವಾದ್ಯುದಾತ್ತತ್ವಂ। ದ್ವ್ಯಚ್ಛಂದಸೀತ್ಯುತ್ತರ- ಪದಾದ್ಯುದಾತ್ತತ್ವಂ। ಯವಿಷ್ಠ್ಯ। ಯುವಶಬ್ದಾದಿಷ್ಠನ್। ಸ್ಥೂಲದೂರೇತ್ಯಾದಿನಾ। ಪಾ. ೬-೪-೧೫೬। ಯಣಾದೇಃ ಪರಸ್ಯ ಲೋಪಃ ಪೂರ್ವಸ್ಯ ಚ ಗುಣಃ। ಛಾಂದಸೋ ಯಕಾರೋಪಜನಃ। ಯಕ್ಷಿ। ಬಹುಲಂ ಛಂದಸಿ ಶಪೋ ಲುಕ್। ಸುವೀರ್ಯಾ। ಶೋಭನಂ ವೀರ್ಯಂ ಯೇಷಾಂ। ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ। ಸುಪಾಂ ಸುಲುಗಿತಿ ವಿಭಕ್ತೇರಾಕಾರಃ ॥**

॥ ಪ್ರತಿಪದಾರ್ಥ ॥

**ಯವಿಷ್ಠ್ಯ**— ಅತ್ಯಂತ ಯುವಕನಾದ । **ಅಗ್ನೇ**— ಎಲೈ ಅಗ್ನಿಯೇ । **ಸುಭಗೇ**— ಪುಣ್ಯವಂತನಾದ । **ತ್ವೇ ಇತ್**— ನಿನ್ನಲ್ಲೇನೆ । **ವಿಶ್ವಂ**— ಸಮಸ್ತವಾದ । **ಹವಿಃ**— ಹವಿಸ್ಸು । **ಆ ಹೂಯತೇ**—ಎಲ್ಲೆಡೆಯೂ ಅರ್ಪಿಸಲ್ಪಡುತ್ತದೆ. । **ಸ ತ್ವಂ**— ಅಂತಹ ನೀನು । **ನಃ**— ನಮ್ಮ ವಿಷಯದಲ್ಲಿ । **ಸುಮನಾಃ**— ಮಂಗಳಕರ ವಾದ ಮನಸ್ಸುಳ್ಳವನಾಗಿ । **ಅದ್ಯ**— ಇಂದೂ । **ಉತ**— ಮತ್ತು । **ಅಪರಂ**— ಇತರ ದಿನಗಳಲ್ಲೂ (ಅವಿ ಚ್ಛಿನ್ನವಾಗಿ) । **ಸುವೀರ್ಯಾ**— ಶ್ರೇಯಸ್ಕರರೂ, ವೀರ್ಯವಂತರೂ ಆದ । **ದೇವಾನ್**— ದೇವತೆಗಳನ್ನು ಉದ್ದೇಶಿಸಿ । **ಯಕ್ಷಿ**— ಯಜ್ಞ ಮಾಡು. ।

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಪುರಾತನನಾದರೂ ಅಜರನು ಯಾವಾಗಲೂ ಅತ್ಯಂತ ಯುವಕನಾಗಿದ್ದೀಯೆ, ನೀನು ಪುಣ್ಯವಂತನು. ಯಜ್ಞಗಳ ಎಲ್ಲ ಹವಿಸ್ಸೂ, ಎಲ್ಲೆಡೆಯಲ್ಲಿಯೂ ನಿನ್ನಲ್ಲೇ ಅರ್ಪಿತವಾಗುತ್ತದೆ. ನೀನು ಯಜ್ಞಕರ್ತರಾದ ನಮ್ಮಗಳ ವಿಷಯದಲ್ಲಿ ಮಂಗಳವನ್ನುಂಟುಮಾಡುವ ಬುದ್ಧಿಯುಳ್ಳವನಾಗಿ ನಮ್ಮ ಅಭ್ಯುದಯ ಕ್ಕಾಗಿ ಸರ್ವದಾ ದೇವತೆಗಳನ್ನು ಆಹ್ವಾನಿಸಿ ಶ್ರೇಯಸ್ಕರರೂ ವೀರ್ಯವಂತರೂ ಆದ ಆ ದೇವತೆಗಳನ್ನುದ್ದೇಶಿಸಿ ಅವಿ ಚ್ಛಿನ್ನವಾಗಿ ಯಜ್ಞ ಮಾಡುತ್ತಿರು.

English Translation

Youthfull and good natured Agni, all the oblations intended for the gods are offered through you ; be well dispcsed towards us now or at any other time and convey the oblations to the powerful gods.

॥ ವಿಶೇಷ ವಿಷಯಗಳು ॥

**ಅದ್ಯ ಉತ ಅಪರಂ**— ಈಗ ಮತ್ತು ಬೇರೆ ಕಾಲದಲ್ಲಿಯೂ ಎಂದರೆ ನಾವು ಯಜ್ಞ ಮಾಡುತ್ತಿರುವ ಈ ದಿನವೂ ಮುಂದೆ ನಾವು ಯಜ್ಞ ಮಾಡಬಹುದಾದ ಇತರ ದಿನಗಳಲ್ಲಿಯೂ now and in future.

**ಸುವೀರ್ಯಾ—ಸುವೀರ್ಯಾನ್ ।** ಶೋಭನವೀರ್ಯೋಪೇತಾನ್ । ಬಹು ಪರಾಕ್ರಮಶಾಲಿಗಳಾದ ಈ ಶಬ್ದವು ದ್ವಿತೀಯಾಬಹುವಚನವು. ದೇವಾನ್ ಎಂಬ ಶಬ್ದಕ್ಕೆ ವಿಶೇಷಣವು

॥ ವ್ಯಾಕರಣ ಪ್ರಕ್ರಿಯಾ ॥

**ಸುಭಗೇ**—ಶೋಭನಃ ಭಗಃ ಯಸ್ಯ ಸಃ ಎಂದು ಬಹುವ್ರೀಹಿಸಮಾಸ, **ಆದ್ಯುದಾತ್ತಂದ್ವ್ಯಚ್ ಛಂದಸಿ** (ಪಾ. ಸೂ. ೬-೨-೧೧೯) ಬಹುವ್ರೀಹಿಸಮಾಸದಲ್ಲಿ ಸು ಶಬ್ದದ ಮುಂದೆ ಇರುವ ಆದ್ಯುದಾತ್ತವೂ ದ್ವ್ಯಚ್ಕವೂ ಆದ ಉತ್ತರಪದವು ಆದ್ಯುದಾತ್ತವಾಗುತ್ತೆ, ಪೂರ್ವಪದಪ್ರಕೃತಿಸ್ವರ ಬರುವುದಿಲ್ಲ ಎಂದರ್ಥ.

**ಯವಿಷ್ಠ್ಯ**—ಯುವ ಶಬ್ದದ ಮುಂದೆ **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂದು ಇಷ್ಠನ್ ಪ್ರತ್ಯಯ, ಯುವ+ಇಷ್ಠ. **ಸ್ಥೂಲದೂರಯುವ ಹ್ರಸ್ವ ಕ್ಷಿಪ್ರಕ್ಷುದ್ರಾಣಾಂ ಯಣಾದಿಪರಂ ಪೂರ್ವಸ ಚ ಗುಣಃ** (ಪಾ. ಸೂ. ೬-೪-೧೫೬) ಇಷ್ಠನ್, ಇಮನಿಚ್, ಈಯಸುನ್, ಈ ಪ್ರತ್ಯಯಗಳು ಪರದಲ್ಲಿದ್ದರೆ ಸ್ಥೂಲ-ದೂರ-ಯುವ-ಹ್ರಸ್ವ-ಕ್ಷಿಪ್ರ-ಕ್ಷುದ್ರ ಈ ಆರು ಶಬ್ದಗಳಲ್ಲಿ ಪರದಲ್ಲಿರುವ ಯಣಾದಿವರ್ಣಕ್ಕೆ ಲೋಪ ಬರುತ್ತೆ ಮತ್ತು ಪೂರ್ವಕ್ಕೆ ಗುಣ ಬರುತ್ತೆ ಎಂದು ವಕಾರಲೋಪವೂ, ಉಕಾರಕ್ಕೆ ಗುಣವೂ ಬಂದರೆ ಯೋ+ಇಷ್ಠ, ಅವಾದೇಶ, ಇಲ್ಲಿ ಛಾಂದಸವಾಗಿ ಯಕಾರವು ಹೆಚ್ಚಾಗಿ ಸೇರಿಕೊಳ್ಳುತ್ತದೆ.

**ಯಕ್ಷಿ**—ಯಜ ದೇವಪೂಜಾದೌ, ಲೋಟ್. ಸಿಪ್, **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂದು ಶಪ್‌ಗೆ ಲುಕ್, **ವ್ರಶ್ಚಭ್ರಸ್ಜಸೃಜಮೃಜಯಜರಾಜಭ್ರಾಜಛಶಾಂ ಷಃ** (ಪಾ. ಸೂ. ೮-೨-೩೬) ಎಂದು ಜ್‌ಗೆ ಷಕಾರ, **ಷಢೋಃಕಸ್ಸಿ** ಎಂದು ಷಕಾರಕ್ಕೆ ಕಕಾರ, **ಆದೇಶಪ್ರತ್ಯಯಯೋಃ** ಎಂದು ಸಕಾರಕ್ಕೆ ಷಕಾರ.

**ಸುವೀರ್ಯಾ**—ಶೋಭನಂ ವೀರ್ಯಂ ಯೇಷಾಂ ತೇ ಎಂದು ಬಹುವ್ರೀಹಿ. **ವೀರವೀರ್ಯೌ ಚ** (ಪಾ. ಸೂ. (ಪಾ. ಸೂ. ೬-೨-೧೨೦) ಬಹುವ್ರೀಹಿ ಸಮಾಸದಲ್ಲಿ ಸುಶಬ್ದದ ಮುಂದೆ ಇರುವ ವೀರ-ವೀರ್ಯ ಎಂಬ ಪದಗಳ ಛಂದಸ್ಸಿನಲ್ಲಿ ಆದ್ಯುದಾತ್ತಗಳಾಗುವುವು ಎಂದು ವೀರ್ಯ ಶಬ್ದಕ್ಕೆ ಆದ್ಯುದಾತ್ತ ಬರುತ್ತೆ. ವೀರ ವಿಕ್ರಾನ್ತೌ ಧಾತು ಮುಂದೆ ಪಚಾದಿಲಕ್ಷಣವಾದ ಅಚ್ ಬಂದರೆ ವೀರ ಎಂದೂ **ಅಚೋಯತ್** ಎಂಬುದರಿಂದಲೋ **ತತ್ರಸಾಧುಃ** ಎಂಬುದರಿಂದಲೋ ಯತ್ ಬರಲು ವೀರ್ಯ ಎಂದೂ ಆಗುತ್ತೆ. ಇಲ್ಲಿ **ಯತೋऽನಾವಃ** ಎಂದು ವೀರ್ಯ ಶಬ್ದಕ್ಕೆ ಆದ್ಯುದಾತ್ತ ಬರುವ ಪಕ್ಷಕ್ಕೆ **ಆದ್ಯುದಾತ್ತಂ ದ್ವ್ಯಚ್ ಛಂದಸಿ** ಎಂಬ ಹಿಂದಿನ ಸೂತ್ರದಿಂದಲೇ ಆದ್ಯುದಾತ್ತವು ಸಿದ್ಧವಾಗುವುದರಿಂದ ಈ ಸೂತ್ರದಲ್ಲಿ ವೀರ್ಯಪದಗ್ರಹಣವು ವ್ಯರ್ಥವಾಗುವುದು. ಅದು ವ್ಯರ್ಥವಾಗಿ **ಯತೋऽನಾವಃ** ಎಂದು ಆದ್ಯುದಾತ್ತವು ವೀರ್ಯಪದಕ್ಕೆ ಬರುವುದಿಲ್ಲ ಎಂದು ಜ್ಞಾಪಿಸುವುದು, ಏವಂಚ ವೀರ್ಯ ಗ್ರಹಣಸಾರ್ಥಕವಾಗುತ್ತದೆ. ದ್ವಿತೀಯಾ ಬಹುವಚನ ಶಸ್‌ಗೆ **ಸುಪಾಂಸುಲುಕ್**—, ಎಂದು ಆಕಾರಾದೇಶ. ॥೬॥

॥ ಸಂಹಿತಾಪಾಠಃ ॥

ತಂ ಘೇಮಿತ್ಥಾ ನಮಸ್ವಿನ ಉಪ ಸ್ವರಾಜಮಾಸತೇ।
ಹೋತ್ರಾಭಿರಗ್ನಿಂ ಮನುಷಃ ಸಮಿಂಧತೇ ತಿತಿರ್ವಾಂಸೋ ಅತಿ
ಸ್ರಿಧಃ ॥ ೭ ॥

॥ ಪದಪಾಠಃ ॥

ತಂ । ಘ । ಈಂ । ಇತ್ಥಾ । ನಮಸ್ವಿನಃ । ಉಪ । ಸ್ವಽರಾಜಂ । ಆಸತೇ ।
ಹೋತ್ರಾಭಿಃ । ಅಗ್ನಿಂ । ಮನುಷಃ । ಸಂ । ಇಂಧತೇ । ತಿತಿರ್ವಾಂಸಃ ।
ಅತಿ । ಸ್ರಿಧಃ ॥ ೭ ॥

ಸಾಯಣಭಾಷ್ಯಂ

ಅಭಿಪ್ಲವೇ ಸಾಯಂಕಾಲೀನ ಉತ್ತರಸ್ಮಿನ್ಪಟಲೇ ತಂ ಘೇಮಿತ್ಥಾ ನಮಸ್ವಿನ ಇತ್ಯೇಷಾ ವಿನಿಯುಕ್ತಾ। ಅಥೋತ್ತರಮಿತಿ ಖಂಡೇ ಸೂತ್ರಿತಂ। ಪ್ರಾಗಾಥೀಂ ಪೂರ್ವಾಹ್ಣೇ ಕಾಣ್ವೀಮಪರಾಹ್ಣೇ। ಆ. ೪-೭। ಇತಿ

ಹೇ ಅಗ್ನೇ ನಮಸ್ವಿನೋಽನ್ನಯುಕ್ತಾ ನಮಸ್ಕಾರಯುಕ್ತಾ ವಾ। ನಮ ಆಯುಃ ಸೂನೃತೇತ್ಯನ್ನನಾಮಸು ಪಾಠಾನ್ನಮಃ ಶಬ್ದಾನ್ನವಾಚಿತ್ವಂ। ತಾದೃಶಾ ಯಜಮಾನಾಃ ಸ್ವರಾಜಂ ಸ್ವತೋ ದೀಪ್ಯಮಾನಂ ತಂ ಘೇಂ ತಮೇವ ಪೂರ್ವೋಕ್ತಸರ್ವಗುಣವಿಶಿಷ್ಟಂ ತ್ವಾಮಿತ್ಥಾನೇನ ಪ್ರಕಾರೇಣ ಹವಿಷ್ಪ್ರದಾನಾದಿರೂಪೇಣೋಪಾಸತೇ। ಮನುಷೋ ಮನುಷ್ಯಾ ಯಜಮಾನಾ ಹೋತ್ರಾಭಿಃ ಸಪ್ತಭಿರ್ವಷಟ್ಕರ್ತೃಭಿಃ। ಸಪ್ತ ಹೋತ್ರಾಃ ಪ್ರಾಚೀರ್ವಷಟ್ಕುರ್ವಂತೀತಿ ಶ್ರುತ್ಯಂತರಾತ್। ಅಗ್ನಿಂ ತ್ವಾ ಸಮಿಂಧತೇ। ಸಮ್ಯಗ್ದೀಪಯಂತಿ। ಕೀದೃಶಾ ಮನುಷ್ಯಾಃ ಸ್ರಿಧಃ ಶತ್ರೂನತಿ ತಿತಿರ್ವಾಂಸೋಽತಿಶಯೇನ ತರಂತಃ॥ ನಮಸ್ವಿನಃ। ಅಸ್ಮಾಯಾಮೇಧೇತಿ ಮತ್ವರ್ಥೀಯೋ ವಿನಿಃ। ಸ್ವರಾಜಂ। ಸ್ವಭಾಸಾ ರಾಜತ ಇತಿ ಸ್ವರಾಟ್। ಸತ್ಸೂದ್ವಿಷೇತಿ ಕ್ವಿಪ್। ಕೃದುತ್ತರಪದಪ್ರಕೃತಿಸ್ವರತ್ವಂ। ಆಸತೇ। ಆಸ ಉಪವೇಶನೇ। ಅದಾದಿತ್ವಾಚ್ಛಪೋ ಲುಕ್। ತಿತಿರ್ವಾಂಸಃ। ತೄ ಪ್ಲವನತರಣಯೋಃ। ಛಂದಸಿ ಲಿಡಿತಿ ವರ್ತಮಾನೇ ಲಿಟ್। ತಸ್ಯ ಕ್ವಸುಶ್ಚೇತಿ ಕ್ವಸುಃ। ವಸ್ವೇಕಾಜಾದ್ಘಸಾಮಿತಿ ನಿಯಮಾದಿಡಭಾವಃ। ಋತ ಇದ್ಧಾತೋರಿತೀತ್ವಂ।

**ಋಚ್ಛತ್ಯೄತಾಂ । ಪಾ. ೭-೪-೧೧ । ಇತಿ ಗುಣೋ ಹಲಿ ಚ । ಪಾ. ೮-೨-೭೭ । ಇತಿ ದೀರ್ಘತ್ವಂ ಚ ನ ಭವತಿ । ಸಂಜ್ಞಾಪೂರ್ವಕೋ ವಿಧಿರನಿತ್ಯ ಇತಿ ತಯೋರನಿತ್ಯತ್ವಾತ್ । ಯದ್ವಾ । ತಿರತಿಃ ಪ್ರಕೃತ್ಯಂತರಂ ದ್ರಷ್ಟವ್ಯಂ । ಸ್ರಿಧಃ । ಸ್ರಿಧು ಶೋಷಣೇ । ಕ್ವಿಪ್ಚೇತಿ ಕ್ವಿಪ್ ॥**

॥ ಪ್ರತಿಪದಾರ್ಥ ॥

**ಅಗ್ನೇ**— ಎಲೈ ಅಗ್ನಿಯೇ । **ನಮಸ್ವಿನಃ**— ಅನ್ನಯುಕ್ತರಾದ ಅಥವಾ ನಮಸ್ಕಾರ ಮಾಡುತ್ತಿರುವ ಯಜಮಾನರು । **ಸ್ವರಾಜಂ**— ಸ್ವಪ್ರಕಾಶದಿಂದ ಬೆಳಗುತ್ತಿರುವ । **ತಂ ಘೇಂ**— ಆ ಪೂರ್ವೋಕ್ತ ಸರ್ವಗುಣ ವಿಶಿಷ್ಟನಾದ ನಿನ್ನನ್ನೇ । **ಇತ್ಥಾ**— ಈ ರೀತಿ ಹವಿಸ್ಸನ್ನು ಅರ್ಪಿಸುವ ರೂಪದಿಂದ । **ಉಪಾಸತೇ**— ಪೂಜಿಸುತ್ತಾರೆ. । **ಸ್ರಿಧಃ**— ಶತ್ರುಗಳನ್ನು । **ಅತಿ ತಿತಿರ್ವಾಂಸಃ**-- (ಚನ್ನಾಗಿ) ಹಿರಿಮೆಯಿಂದ ಜಯಿಸಿರುವ । **ಮನುಷಃ**— ಮಾನವರಾದ ಯಜ್ಞಕರ್ತರು । **ಹೋತ್ರಾಭಿಃ**— ಏಳು ಜನ ವಷಟ್ಕರ್ತೃಗಳಾದ ಹೋತೃಗಳಿಂದ (ಹವಿಸ್ಸನ್ನರ್ಪಿಸಿ) । **ಅಗ್ನಿಂ**— ಅಗ್ನಿದೇವನಾದ ನಿನ್ನನ್ನು । **ಸಮಿಂಧತೇ**— ಚನ್ನಾಗಿ ಪ್ರಜ್ವಲಿಸುವಂತೆ ಮಾಡುತ್ತಾರೆ

ಭಾವಾರ್ಥ

ಎಲೈ ಅಗ್ನಿದೇವನೆ, ನೀನು ಯಾವಾಗಲೂ ಸ್ವಪ್ರಕಾಶದಿಂದ ಬೆಳಗುವವನು. ನಿನ್ನನ್ನು ನಿನ್ನ ಭಕ್ತರಾದ ಯಜ್ಞಕರ್ತರು ನಮಸ್ಕಾರ ಪೂರ್ವಕವಾಗಿ ಅನ್ನರೂಪವಾದ ಹವಿಸ್ಸನ್ನು ಅರ್ಪಿಸಿ ಪೂಜಿಸುತ್ತಾರೆ. ನಿನ್ನ ಸಹಾಯದಿಂದ ಅವರೆಲ್ಲರೂ ಶತ್ರುಗಳನ್ನು ಜಯಿಸಿದ್ದಾರೆ. ಆ ಸಂತೋಷವನ್ನೂ ಕೃತಜ್ಞತೆಯನ್ನೂ ಸೂಚಿಸಲು ಅವರೆಲ್ಲರೂ ಸಹ ಯಜ್ಞವನ್ನು ಮಾಡಿ ವಷಟ್ಕರ್ತೃಗಳಾದ ಹೋತೃಗಳ ಮೂಲಕ ನಿನಗೆ ಹವಿಸ್ಸನ್ನು ಅರ್ಪಿಸಿ ನಿನ್ನನ್ನು ಚನ್ನಾಗಿ ಪ್ರಜ್ವಲಿಸುವಂತೆ ಮಾಡುತ್ತಾರೆ.

Englis Translation

In this manner the devout persons ( sacrificers and others ) adore you who are bright with your own radiance ; the ( seven ) priests including Hotri who are victorious over their enemies, kindle Agni with oblations·

ವಿಶೇಷ ವಿಷಯಗಳು

ಅಭಿಷ್ಟವವೆಂಬ ಸ್ತೋತ್ರಪಠನ ಕಾಲದಲ್ಲಿ **ತಂಘೇಮಿತ್ಥಾ** ಎಂಬ ಋಕ್ಕನ್ನು ಸಾಯಂಕಾಲದಲ್ಲಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಅಥೋತ್ತರಂ** ಎಂಬ ಖಂಡದ **ಪ್ರಾಗಾಧೀಂ ಪೂರ್ವಾಹ್ಣೇಕಾಣ್ವೇ-ಮಪರಾಹ್ಣೇ** ಎಂಬ ಸೂತ್ರದಲ್ಲಿ ಹೇಳಿರುವುದು. (ಅ. ೪-೭)

**ಘ ಈಂ**— ಈ ಶಬ್ದಗಳು ಪಾದಪೂರಣಕ್ಕಾಗಿ ಉಪಯೋಗಿಸಲ್ಪಡುವವು. ಇವುಗಳಿಗೆ ಯಾವ ನಿರ್ದಿಷ್ಟಾರ್ಥಗಳು ಇಲ್ಲದಿದ್ದರೂ ಏವಶಬ್ದದ ಅರ್ಥವನ್ನು ಹೇಳಬಹುದು. **ತಂ**= ಅವನನ್ನು, **ತಂ ಘ ಈಂ** ಅಥವಾ ತಂಘೇಮ್ =ಅವನನ್ನೇ ಎಂದರ್ಥವು.

**ನಮಸ್ವಿನಃ— ನಮಸ್ವಿನೋಽನ್ನಯುಕ್ತಾ ನಮಸ್ಕಾರಯುಕ್ತಾ ವಾ ।** ಅನ್ನವೆಂದರೆ ದೇವತೆಗೆ ಅರ್ಪಿಸುವುದಕ್ಕಾಗಿ ಹವಿಸ್ಸಿನ ರೂಪದಲ್ಲಿರುವ ಅನ್ನವನ್ನು ಸಿದ್ಧಪಡಿಸಿಕೊಂಡಿರುವ, ಅಥವಾ ನಮಸ್ಕಾರವನ್ನು ಮಾಡುತ್ತಿರುವ.

**ಸ್ವರಾಜಂ— ಸ್ವಭಾಸಾ ರಾಜತ ಇತಿ ಸ್ವರಾಟ್ ತಂ ।** ತನ್ನ ಸ್ವಂತ ಪ್ರಕಾಶದಿಂದಲೇ ಬೆಳಗುತ್ತಿರುವ. ಅಗ್ನಿ, ಸೂರ್ಯ ಇವರ ಪ್ರಕಾಶಕ್ಕೆ ಬೇರೆ ವಿಧವಾದ ಸಹಾಯವು ಅವಶ್ಯಕವಿಲ್ಲ. ತಮ್ಮ ಪ್ರಕಾಶದಿಂದಲೇ ಎಲ್ಲವನ್ನೂ ಬೆಳಗುವರು.

**ಆಸತೇ— ಉಪಾಸತೇ—** ಸಮೀಪದಲ್ಲಿ ಕುಳಿತು ಪ್ರಾರ್ಥಿಸುವರು, ಸೇವಿಸುವರು, ಉಪಾಸನೆ ಮಾಡುವರು worship.

**ಹೋತ್ರಾಭಿಃ—** ಯಜ್ಞಗಳಲ್ಲಿ ಹೋತೃವು ಒಬ್ಬನೇ ಇದ್ದರೂ ಯಜ್ಞದಲ್ಲಿ ಭಾಗವಹಿಸುವ ಇತರ ಋತ್ವಿಗ್ಜನರನ್ನು ಸೇರಿಸಿ ಹೋತ್ರಾಭಿಃ ಎಂಬ ಬಹುವಚನ ಶಬ್ದಪ್ರಯೋಗದಿಂದ ಯಜಮಾನರಾದಿಯಾದ ಯಜಮಾನ ಅಧ್ವರ್ಯು, ಉದ್ಗಾತೃ, ಪೋತೃ, ನೇಷ್ಟೃ, ಬ್ರಹ್ಮ ಮೊದಲಾದ ಋತ್ವಿಗ್ಜನರೆಂದರ್ಥವು.

**ಮನುಷಃ—ಮನುಷ್ಯಾಃ ।** ಮನುಷ್ಯರು. ಛಂದಸ್ಸಿನ ಅನುಕೂಲಕ್ಕಾಗಿ ಷಕಾರವು ಹ್ರಸ್ವವಾಗಿರುವುದು.

**ತಿತಿರ್ವಾಂಸಃ—** ತೄ ಪ್ಲವನತರಣಯೋಃ **ಸ್ರಿಧಃ ಅತಿ ತಿತಿರ್ವಾಂಸಃ** ಎಂದರೆ ಅತಿಕ್ರಮಿಸುವವರು ಇಲ್ಲಿ ಭಾಷ್ಯಕಾರರು ಶತ್ರುಗಳನ್ನು ಅತಿಕ್ರಮಿಸಿರುವರು ಎಂದು ಅರ್ಥ ಮಾಡಿರವರು.

॥ ವ್ಯಾಕರಣಪ್ರಕ್ರಿಯಾ ॥

**ನಮಸ್ವಿನಃ— ಅಸ್‌ಮಾಯಾಮೇಧಾಸ್ರಜೋವಿನಿಃ** (ಪಾ ಸೂ. ೫-೨-೧೨೧) ಎಂದು ಅಸ್‌ನ್ನು ಕೊನೆಯಲ್ಲಿ ಹೊಂದಿರುವ ನಮಸ್ ಶಬ್ದದ ಮುಂದೆ ಮತ್ವರ್ಥದಲ್ಲಿ ವಿನಿಪ್ರತ್ಯಯ.

**ಸ್ವರಾಜಂ**— ಸ್ವತಃ ರಾಜತೇ ಇತಿ ಸ್ವರಾಟ್-ರಾಜೃ ದೀಪ್ತೌ ಧಾತು **ಸತ್ಸೂದ್ವಿಷದ್ರುಹದುಹಯುಜವಿದಭಿದಚ್ಛಿದಜಿನೀರಾಜಾ ಮುಪಸರ್ಗೇಽಪಿಕ್ವಿಪ್** (ಪಾ. ಸೂ. ೩-೨-೬೧) ಉಪಸರ್ಗವಿದ್ದರೂ ಇಲ್ಲದೇ ಇದ್ದರೂ ಸಂಬಂತವು ಉಪಪದವಾಗಿದ್ದರೆ ಈ ಧಾತುಗಳ ಮುಂದೆ ಕ್ವಿಪ್ ಬರುತ್ತೆ ಎಂದು ಕ್ವಿಪ್‌ಪ್ರತ್ಯಯ **ಗತಿಕಾರಕೋಪಪದಾತ್ಕೃತ್** ಎಂದು ಕೃದಂತವಾದ ಉತ್ತರಪದಕ್ಕೆ ಪ್ರಕೃತಿಸ್ವರಬರುತ್ತೆ.

**ಆಸತೇ**— ಆಸ ಉಪವೇಶನೇ ಧಾತು-ಅದಾದಿ **ಅದಿಪ್ರಭೃತಿಭ್ಯಃ ಶಪಃ** ಎಂದು ಶಪ್ ಲುಕ್, ಝ.ಗೆ **ಆತ್ಮನೇಪದೇಷ್ವನತಃ** ಎಂದು ಅತ್ ಆದೇಶ.

**ತಿತಿರ್ವಾಂಸಃ**— ತೄ ಪ್ಲವನತರಣಯೋಃ ಧಾತು, **ಛಂದಸಿಲಿಟ್** (ಪಾ. ಸೂ. ೩-೨-೧೦೫) ಭೂತಸಾಮಾನ್ಯದಲ್ಲಿ ಛಂದಸ್ಸಿನಲ್ಲಿ ಧಾತುಗಳ ಮುಂದೆ ಲಿಟ್ ಬರುತ್ತೆ ಎಂದು ಅರ್ಥ, ಏವಂಚ ಈ ಸೂತ್ರದಿಂದ ವರ್ತಮಾನಾರ್ಥದಲ್ಲಿ ಲಿಟ್ ಬರಲಾರದು. **ಛಂದಸಿಲುಙ್ ಲಙ್‌ಲಿಟಃ** (ಪಾ. ಸೂ. ೩-೪-೬) ಧಾತ್ವರ್ಥಗಳಿಗೆ

ಸಂಬಂಧ ತೋರುವಾಗ ಧಾತುಗಳ ಮುಂದೆ ಭೂತಭವಿಷ್ಯದ್ವರ್ತಮಾನರೂಪ ಸರ್ವಕಾಲಗಳಲ್ಲಿಯೂ ಛಂದಸ್ಸಿನಲ್ಲಿ ಲುಙ್, ಲಙ್, ಲಿಟ್ ಇವು ಬರುವುವು ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. **ಕ್ವಸುಶ್ಚ** (ಪಾ. ಸೂ. ೩-೨-೧೦೭) ಛಂದಸ್ಸಿನಲ್ಲಿ ಭೂತಾರ್ಥಪ್ರತೀಯಮಾನವಾದರೆ ಲಿಟ್‌ಗೆ ಕ್ವಸು ಬರುತ್ತ ಎಂದು ಅರ್ಥ ಪ್ರಕೃತ ಸೂತ್ರದಲ್ಲಿ ಮಹಾಭಾಷ್ಯದಲ್ಲಿ ಕಿತ್ಕರಣಕ್ಕೆ ಪ್ರಯೋಜನವನ್ನು ಹೇಳುವಾಗ “ ಅಙ್ತ್ವೀಃ-ಆಜಿವಾನ್ ॥ ಛಾಂದಸೌ ಕಾನಚ್‌ಕ್ವಸೂ ” ಎಂದಿರುವರು, ಇದನ್ನು ಪರ್ಯಾಲೋಚಿಸಿದರೆ **ಅನಂತರಸ್ಯವಿಧಿರ್ವಾ ಭವತಿಪ್ರತಿಷೇಧೋ ವಾ** (ಪರಿಭಾ ೬೩) ಎಂಬುದರಿಂದ **ಛಂದಸಿಲಿಟ್** ಎಂದು ವಿಹಿತವಾದ ಲಿಟ್‌ಗೇನೆ ಕಾನಚ್-ಕ್ವಸುಪ್ರತ್ಯಯಗಳು ಬರುವುವು ಎಂದು ಏರ್ಪಡುತ್ತೆ. **ವಿಭಾಷಾಪೂರ್ವಾಹ್ಣಾಪರಾಹ್ಣಾಭ್ಯಾಮ್** (ಪಾ. ಸೂ. ೪-೩-೨೪) ಎಂಬ ಸೂತ್ರ ಮಹಾಭಾಷ್ಯದಲ್ಲಿ **ಪಪುಷ ಆಗತಂ ಪಪಿವದ್ಭ್ರೂಷ್ಯಮ್** ಎಂದು ಪಾ ಧಾತು ಮುಂದೆ ಕ್ವಸು ಪ್ರತ್ಯವು ಪ್ರಯುಕ್ತವಾಗಿದೆ, ಇದನ್ನು ಪರ್ಯಾಲೋಚಿಸಿದರೆ, **ಅನಂತರಸ್ಯ—,** ಎಂಬ ಪರಿಭಾಷೆಯು ಇಲ್ಲಿ ಪ್ರವೃತ್ತಿಸುವುದಿಲ್ಲ. ಏವಂಚ ಎಲ್ಲಾ ಲಿಟ್ಟುಗಳ ಸ್ಥಾನದಲ್ಲಿ ಛಂದಸ್ಸಿನಲ್ಲಿಯೂ ಲೋಕದಲ್ಲಿಯೂ ಕ್ವಸು ಬರುವುದು ಎಂದು ಏರ್ಪಡುತ್ತೆ. ವೃತ್ತಿಕಾರರು **ಲಿಟಃ ಕಾನಜ್ವಾ** ಎಂಬಲ್ಲಿ ಪುನಃ ಲಿಟ್‌ಗ್ರಹಣದಿಂದ ಎಲ್ಲಾ ಲಿಟ್ಟಿಗೂ ಗ್ರಹಣ ಎಂದಿರುವರು. ಏವಂಚ **ಛಂದಸಿ ಲುಙ್—,** ಎಂಬುದರಿಂದ ಬಂದ ಲಿಟ್‌ಗೂ ಕ್ವಸು ಬರಬಹುದು. ಛಂದಸ್ಸಾದ್ದರಿಂದ ಭೂತಾರ್ಥ ತೋರದಿದ್ದರೂ ಲಿಟ್‌ಗೆ ಕ್ವಸು ಬಂದಿದೆ. **ಛಾಂದಸೌ ಕಾನಚ್‌ಕ್ವಸೂ** ಎಂಬ ಭಾಷ್ಯವು ಅಙ್ತ್ವಾ ಧಾತುಪ್ರಕೃತಿಕವಾದ ಕ್ವಸ್‌ವಿಷಯವಾಗಿ ಹೊರಟದೆ, ಇದಕ್ಕೆ ಮಾತ್ರ ಲೋಕದಲ್ಲಿ ಪ್ರಯೋಗವಿಲ್ಲ. ಮಿಕ್ಕವುಗಳಿಗೆ ಲೋಕದಲ್ಲಿಯೂ ಪ್ರಯೋಗ ಉಂಟು, ಏವಂಚ ಉದಾಹೃತಭಾಷ್ಯಗಳಿಗೆ ಸಾಮರಸ್ಯವು ಏರ್ಪಟ್ಟಿತು. ತೃ ಧಾತು ಮುಂದೆ ಕ್ವಸು ಬಂದರೆ ತೃ+ವಸ್. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಎಂದು ಇಟ್ ಪ್ರಾಪ್ತವಾದರೆ **ನೇಡ್ವಶಿಕೃತಿ** (ಪಾ. ಸೂ. ೭-೨-೮) ವಶಾದಿಯಾದ ಕೃತ್ತಿಗೆ ಇಟ್ ಬರುವುದಿಲ್ಲ ಎಂದು ನಿಷೇಧ. **ಕೃಸೃಭೃವೃಸ್ತುದ್ರುಸ್ರುಶ್ರುವೋಲಿಟಿ** (ಪಾ. ಸೂ. ೭-೨-೧೩) ಪ್ರಕೃತ್ಯಾಶ್ರಯವಾದುದೇ ಆಗಲಿ ಪ್ರತ್ಯಯಾಶ್ರಯವಾದುದೇ ಆಗಲಿ ಎಷ್ಟು ಇಟ್ ನಿಷೇಧಶಾಸ್ತ್ರಗಳಿವೆಯೋ ಅವು ಲಿಟ್‌ನಲ್ಲಿ ಬರುವ ಪಕ್ಷಕ್ಕೆ ಕೃ ಮೊದಲಾದ ಧಾತುಗಳ ಮುಂದಿರುವ ಲಿಟ್ಟಿನಲ್ಲಿ ಬರುವುವು. ಮಿಕ್ಕ ಧಾತುಗಳ ಮುಂದೆ ಇರುವ ಲಿಟ್ಟಿನಲ್ಲಿ ಯಾವ ಇಟ್ ನಿಷೇಧವೂ ಬರುವುದಿಲ್ಲ. ಇಲ್ಲಿ ಕೃ ಮೊದಲಾದ ೪ ಧಾತುಗಳು ನಿಯಾಮಕಗಳು, ಮಿಕ್ಕವು ವಿಧಾಯಕಗಳು ಎಂದು ಇಟ್ಟುಕೊಳ್ಳಬೇಕು. ಇದಕ್ಕೆ ಕ್ರಾದಿ ನಿಯಮ ಎನ್ನುವರು. ಈ ನಿಯಮದಿಂದ ಕ್ರಾದಿಯಲ್ಲಿ ಸೇರದ ತೃಧಾತು ಮುಂದಿರುವ ಲಿಟ್‌ಗೆ ಅಂದರೆ ಲಿಟ್‌ಸ್ಥಾನದಲ್ಲಿ ಬಂದ ವಸ್‌ಗೆ ಇಟ್ ಪ್ರಾಪ್ತವಾಗುತ್ತೆ. ಇದಕ್ಕೆ ಮುಂದೆ ಹೇಳುವ ಮತ್ತೊಂದು ನಿಯಮದಿಂದ ನಿಷೇಧ ಏರ್ಪಡುತ್ತೆ. **ವಸ್ವೇಕಾಜಾದ್ಘಸಾಮ್** (ಪಾ. ಸೂ. ೭-೨-೬೭) ದ್ವಿತ್ವವನ್ನು ಮಾಡಿದಮೇಲೆ ಒಂದೇ ಅಚ್ಚನ್ನು ಹೊಂದಿರುವ ಧಾತುಗಳು, ಆಕಾರಾಂತವಾದ ಧಾತುಗಳು ಘಸ್ ಧಾತು ಇವುಗಳ ಮುಂದೆ ಇರುವ ವಸ್‌ಗೆ ಮಾತ್ರ ಇಟ್ ಬರುತ್ತೆ. ಮಿಕ್ಕ ಧಾತುಗಳ ಮುಂದೆ ಇರುವ ವಸ್‌ಗೆ ಇಟ್ ಬರುವುದಿಲ್ಲ ಎಂಬ ನಿಯಮದಿಂದ ತೃ ಧಾತುಮುಂದೆ ಇರುವ ವಸ್‌ಗೆ ಇಟ್ ಬರುವುದಿಲ್ಲ. **ಋತ ಇದ್ಧಾತೋಃ** (ಪಾ. ಸೂ. ೭-೧-೧೦೦) ಋಕಾರಾಂತ ಧಾತುರೂಪವಾದ ಅಂಗಕ್ಕೆ ಇತ್ವ ಬರುತ್ತೆ, ಅಂದರೆ **ಅಲೋಽನ್ತ್ಯಸ್ಯ** (ಪಾ. ಸೂ. ೧-೧-೫೨) ಎಂದು ಅಂಗದ ಕೊನೆಯ ಋಗೆ ಇಯು ಬರುವುದು, **ಉರಣ್ರಪರಃ** (ಪಾ. ಸೂ. ೧-೧-೫೧) ಎಂದು ರೇಫಶಿರಸ್ಕವಾಗಿ ಬರುತ್ತೆ. ತಿರ್। ವಸ್, **ಋಚ್ಛತ್ಯೃತಾಮ್** (ಪಾ. ಸೂ. ೭-೪-೧೧) ತುದಾದಿಯಲ್ಲಿರುವ

ಋಚ್ಛ ಧಾತು, ಋಕಾರಾಂತ ಧಾತು ಇವುಗಳಿಗೆ ಲಿಟ್ ಪರಗಲ್ಲಿದ್ದರೆ ಗುಣ ಬರುತ್ತೆ ಎಂದು ಪ್ರಾಪ್ತವಾಗುವ ಗುಣವೂ, **ಹಲಿಚ** (ಪಾ. ಸೂ. ೮-೨-೭೭) ವ್ಯಂಜನವು ಪರದಲ್ಲಿದ್ದರೆ ರೇಫಾಂತ ಅಥವಾ ವಕಾರಾಂತವಾದ ಧಾತುಗಳ ಉಪಧಾ ಭೂತಗಳಾದ ಇ-ಉ-ಋಗಳಿಗೆ ದೀರ್ಘ ಬರುತ್ತೆ ಎಂದು ಪ್ರಾಪ್ತವಾಗುವ ದೀರ್ಘವೂ ಗುಣ, ದೀರ್ಘ ಎಂಬ ಸಂಜ್ಞೆ ಯನ್ನು ಮುನ್ನಿಟ್ಟು ಬರುವುವು. **ಸಂಜ್ಞಾಪೂರ್ವಕೋವಿಧಿರನಿತ್ಯಃ** (ಪರಿಭಾ ೯೫) ಎಂಬುದರಿಂದ ಅವು ಅನಿತ್ಯ ಗಳಾದ ಕಾರಣ ಇಲ್ಲಿ ಬರುವುದಿಲ್ಲ. ತ್ವಾ ಧಾತುವಿಗೆ ಇತ್ವ ಬರುವುದಕ್ಕೆ ಮುಂಚೆ ಗುಣಕ್ಕೆ ಪ್ರಾಪ್ತಿ ಇದೆ, ಇತ್ವಾ ನಂತರ ದೀರ್ಘಕ್ಕೆ ಪ್ರಾಪ್ತಿ ಇದೆ ಎಂದರಿಯಬೇಕು. ದ್ವಿತ್ವ, **ಹಲಾದಿಃ ಶೇಷಃ** ಎಂದು ಅಭ್ಯಾಸಲೋಪ ತಿತಿರ್+ ವಸ್, ಜಸ್, **ಉಗಿದಚಾಂ—,** ಎಂದು ನುಮ್ ಆಗಮ ತಿತಿರ್ವನ್ ಸ್+ಅಸ್, **ಸಾಂತಮಹತಸ್ಸಂಯೋಗಸ್ಯ** (ಪಾ- ಸೂ. ೬-೪-೧೦) ಸಕಾರಾಂತವಾದ ಸಂಯೋಗ, ಮಹತ್ ಶಬ್ದ ಇವುಗಳ ಸಂಬಂಧಿಯಾದ ಯಾವ ನಕಾರ ವಿದೆಯೋ ಅದರ ಹಿಂದಿನ ವರ್ಣಕ್ಕೆ ದೀರ್ಘ ಬರುತ್ತೆ ಎಂದು ದೀರ್ಘ, **ನಶ್ಚಾಪದಾಂತಸ್ಯಝಲಿ** (ಪಾ.ಸೂ. ೮-೩-೨೪) ಎಂದು ನ್‌ಗೆ ಅನುಸ್ವಾರ, ರುತ್ವವಿಸರ್ಗಗಳು, ತಿತಿರ್ವಾಂಸಃ ಎಂದಾಗುತ್ತೆ. ಅಥವಾ **ಬಹುಲಮೇತನ್ನಿ ದರ್ಶನಮ್** ಎಂಬ ಗಣಸೂತ್ರಾನುಸಾರ ತಿರ್ ಎಂಬ ಹೊಸ ಧಾತುವನ್ನು ಕಲ್ಪಿಸಿ ಅದರ ಮುಂದೆ ಲಿಟ್, ವಸ್ ಇತ್ಯಾದಿ ಪ್ರಕ್ರಿಯೆಯು ಹಿಂದಿನಂತೆ ಎಂದು ಹೇಳಬಹುದು. ಈ ಪಕ್ಷದಲ್ಲಿ **ಋಚ್ಛತ್ಯೄತಾಂ** ಎಂಬ ಗುಣಕ್ಕೆ ಪ್ರಾಪ್ತಿಯೇ ಇಲ್ಲ. **ಹಲಿಚ** ಎಂಬುದಕ್ಕೆ ಪ್ರಾಪ್ತಿ ಇದ್ದರೂ ಹಿಂದಿನಂತೆಯೇ ಅದಕ್ಕೆ ಅಪ್ರವೃತ್ತಿಯನ್ನು ಹೇಳ ಬೇಕು, ಅಕಾರಾಂತಧಾತು ಎಂದು ಇಟ್ಟುಕೊಂಡರೆ, **ಅತೋಲೋಪಃ** ಎಂದು ಬರುವ ಲೋಪಕ್ಕೆ ಸ್ಥಾನಿವದ್ಭಾವ ಬರುವುದರಿಂದ, ರೇಫಾಂತವಾಗುವುದಿಲ್ಲ. ಆದ್ದರಿಂದ **ಹಲಿಚ** ಎಂಬುದಕ್ಕೂ ಪ್ರಾಪ್ತಿ ಇಲ್ಲ ಎಂದು ಹೇಳಬಹುದು.

ಸ್ರಿಧಃ—ಸ್ರಿಧು ಶೋಷಣೇ ಧಾತು **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂದು ಕ್ವಿಪ್‌ಪ್ರತ್ಯಯ. ||೭||



|| ಸಂಹಿತಾಪಾಠಃ ||

ಘ್ನಂತೋ ವೃತ್ರಮತರನ್ರೋದಸೀ ಅಪ ಉರು ಕ್ಷಯಾಯ ಚಕ್ರಿರೇ |
ಭುವತ್ಕಣ್ವೇ ವೃಷಾ ದ್ಯುಮ್ನ್ಯಾಹುತಃ ಕ್ರಂದದಶ್ವೋ ಗವಿಷ್ಟಿಷು || ೮ ||

॥ ಪದಪಾಠಃ ॥

ಘ್ನಂತಃ । ವೃತ್ರಂ । ಅತರನ್ । ರೋದಸೀ ಇತಿ । ಅಪಃ । ಉರು ।
ಕ್ಷಯಾಯ । ಚಕ್ರಿರೇ ॥

ಭುವತ್ । ಕಣ್ವೇ । ವೃಷಾ । ದ್ಯುಮ್ನೀ । ಆऽಹುತಃ । ಕ್ರಂದತ್ ।
ಅಶ್ವಃ । ಗೋऽಇಷ್ಟಿಷು ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಘ್ನಂತಸ್ತ್ವತ್ಸಹಾಯೇನೇತರೇ ದೇವಾಃ ಪ್ರಹರಂತೋ ವೃತ್ರಮತರನ್ । ತೀರ್ಣವಂತಃ । ತದನಂತರಂ ರೋದಸೀ ದ್ಯಾವಾಪೃಥಿವ್ಯಾವಪೋಽಂತರಿಕ್ಷಂ ಚ ಕ್ಷಯಾಯ ಪ್ರಾಣಿನಾಂ ನಿವಾಸಾರ್ಥಮುರು ವಿಸ್ತಾರೋ ಯಥಾ ಭವತಿ ತಥಾ ಚಕ್ರಿರೇ । ಅಪ್ಯಬ್ಶೋಽಂತರಿಕ್ಷವಾಚೀ । ಆಪಃ ಪೃಥಿವೀತಿ ತನ್ನಾಮಸು ಪಠಿತತ್ವಾತ್ । ಭವಾಂಸ್ತು ಕಣ್ವೇ ಕಣ್ವನಾಮಕೇ ಮಹರ್ಷೌ ವೃಷಾ ಕಾಮಾನಾಂ ವರ್ಷಿತಾ ದ್ಯುಮ್ನೀ ಧನವಾನ್ ಆಹುತಃ ಸರ್ವತೋ ಹೋಮಯುಕ್ತಶ್ಚ ಭುವತ್ । ಭವತು । ತತ್ರ ದೃಷ್ಟಾಂತಃ । ಗವಿಷ್ಟಿಷು ಗೋವಿಷಯೇಚ್ಛಾಯುಕ್ತೇಷು ಸಂಗ್ರಾಮೇಷ್ವಶ್ವಃ ಕ್ರಂದತ್ ಶಬ್ದಂ ಕುರ್ವನ್ಯಥಾಭೀಷ್ಟಪ್ರಾಪಕಸ್ತಥೇತಿ ಶೇಷಃ ॥ ಘ್ನಂತಃ । ಹಂತೇಃ ಶತರಿ ಗಮಹನೇತ್ಯಾದಿನೋಪಧಾಲೋಪಃ । ಹೋ ಹಂತೇರ್ಞ್ಣಿನ್ನೇಷು । ಪಾ. ೭-೩-೫೪ । ಇತಿ ಘುತ್ವಂ । ಅಪಃ । ಊಡಿದಮಿತಿ ಶಸ ಉದಾತ್ತತ್ವಂ । ಕ್ಷಯಾಯ । ಕ್ಷಿ ನಿವಾಸಗತ್ಯೋಃ । ಕ್ಷಿಯಂತಿ ನಿವಸಂತ್ಯಸ್ಮಿನ್ನಿತಿ ಕ್ಷಯೋ ನಿವಾಸಸ್ಥಾನಂ । ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣೇತಿ ಘಃ । ಕ್ಷಯೋ ನಿವಾಸೇ । ಪಾ. ೬-೧-೨೦೧ । ಇತ್ಯಾದ್ಯುದಾತ್ತತ್ವಂ । ಭುವತ್ । ಭವತೇರ್ಲೇಟ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಬಹುಲಂ ಛಂದಸೀತಿ ಶಪೋ ಲುಕ್ ಭೂಸುವೋಸ್ತಿಙಿ । ಪಾ. ೭-೩-೮೮ । ಇತಿ ಗುಣಪ್ರತಿಷೇಧಃ । ಅಡಾಗಮಸ್ಯಾನುದಾತ್ತತ್ವೇ ಧಾತುಸ್ವರಃ । ಆಹುತಃ । ಆಹೂಯತ ಇತ್ಯಾಹುತಃ । ಹು ದಾನಾದನಯೋಃ । ಕರ್ಮಣಿ ಕ್ತಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಕ್ರಂದತ್ । ಕದಿ ಕ್ರದಿ ಕ್ಲದಿ ಆಹ್ವಾನೇ । ಶತರಿ ನುಮಭಾವಶ್ಛಾಂದಸಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಗವಿಷ್ಟಿಷು । ಇಷು ಇಚ್ಛಾಯಾಂ । ಏಷಣಮಿಷ್ಟಿಃ । ಗವಾಮಿಷ್ಟಿರ್ಯೇಷು ಸಂಗ್ರಾಮೇಷು ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

(ಎಲೈ ಅಗ್ನಿಯೇ ನಿನ್ನ ಸಹಾಯದಿಂದ) **ಘ್ನಂತಃ**— ಶತ್ರುನಾಶಕರಾದ ಇತರ ದೇವತೆಗಳು | **ವೃತ್ರಂ**-ವೃತ್ರಾಸುರನನ್ನು | **ಅತರನ್**— ಜಯಿಸಿದರು. (ಭಯದಿಂದ ದಾಟಿದರು. ಅನಂತರ) | **ರೋದಸೀ**— ದ್ಯುಲೋಕ ಭೂಲೋಕಗಳನ್ನೂ | **ಅಪಃ**— ಅಂತರಿಕ್ಷವನ್ನೂ | **ಕ್ಷಯಾಯ**— ಪ್ರಾಣಿಗಳ ವಾಸಕ್ಕಾಗಿ | **ಉರು**— ವಿಸ್ತೃತವಾಗುವಂತೆ | **ಚಕ್ರಿರೇ**— ಮಾಡಿದರು. | **ಗವಿಷ್ಟಿಷು**--ಪಸುವನ್ನು ಪಡೆಯುವ ಆಸೆಯಿಂದ ನಡೆಯುವ ಯುದ್ಧಕಾಲದಲ್ಲಿ | **ಅಶ್ವಃ**— ಕುದುರೆಯು | **ಕ್ರಂದತ್**— ಶಬ್ದ ಮಾಡುತ್ತ (ಯಾವರೀತಿ ತನ್ನ ಯಜಮಾನನ ಇಷ್ಟಾರ್ಥಸಾಧಕವಾಗುವುದೋ ಹಾಗೆ) | **ಆಹುತಃ**— ಯಜ್ಞದಲ್ಲಿ ಹವಿರ್ಭಾಗದಿಂದ ಕೂಡಿದವನಾಗಿ | **ದ್ಯುಮ್ನೀ**-ಧನವಂತನಾದ ನೀನು | **ಕಣ್ವೇ**— ಕಣ್ವನೆಂಬ ಋಷಿಗೆ | **ವೃಷಾ**—ಇಷ್ಟಾರ್ಥಪ್ರದನಾಗಿ (ಉಪಕಾರಕನಾಗಿ) | **ಭುವತ್**— ಆಗು |

|| ಭಾವಾರ್ಥ ||

ಎಲೈ ಅಗ್ನಿಯೇ, ಶತ್ರುನಾಶಕರಾದ ಇತರ ದೇವತೆಗಳೂ ಸಹ ನಿನ್ನ ಸಹಾಯದಿಂದಲೇ ವೃತ್ರಾಸುರನ ಸಂಹಾರ ಮಾಡಿ ಅವನನ್ನು ಜಯಿಸಿದರು. ಅನಂತರ ಶತ್ರುಬಾಧೆಯನ್ನು ಸಂಪೂರ್ಣವಾಗಿ ತಪ್ಪಿಸಿ ಪೃಥಿವ್ಯಾದಿ ಮೂರು ಲೋಕಗಳನ್ನೂ ಪ್ರಾಣಿಗಳ ವಾಸಕ್ಕೆ ಅನುಕೂಲವಾಗುವಂತೆ ವಿಸ್ತರಿಸಿದರು. ಯಾವ ರೀತಿ ಕುದುರೆಯು ಗೋವಿಗೋಸ್ಕರ ಯುದ್ಧಮಾಡುತ್ತಿರುವ ಯುದ್ಧದಲ್ಲಿ ತನ್ನ ಯಜಮಾನನನ್ನು ಹೊತ್ತುಕೊಂಡು ಶಬ್ದ ಮಾಡುತ್ತಾ ಅವನ ಶತ್ರು ನಾಶಕ್ಕೆ ಸಹಾಯ ಮಾಡಿ ಗೋವನ್ನು ಪಡೆಯಲು ಸಹಾಯ ಮಾಡುತ್ತದೋ, ಅದೇ ರೀತಿ ಸಿರಿವಂತನಾದ ನೀನೂ ಸಹ ಕಣ್ವನೆಂಬ ಮುನಿಯ ಯಜ್ಞಕಾಲನಲ್ಲಿ ಕರೆದಾಗ ಬಂದು ಅವನ ಇಷ್ಟಾರ್ಥಪ್ರದನಾಗಿ ಆಗು.

English Translation

The gods who destroy enemies have slain Vrıtra ; they have made earth and heaven and the firmament the spacious dwelling place for living creatures ; may Agni, the possessor of wealth when invoked be to Kanwa the giver of wealth like a horse which neighs ( with pleasure ) in a battle faught for the possession of cattle·

ವಿಶೇಷವಿಷಯಗಳು

**ಘ್ನಂತಃ**— ಕೊಲ್ಲುವ, ಸಂಹಾರಮಾಡುವ. ಇಲ್ಲಿ ಭಾಷ್ಯಕಾರರು ತಮ್ಮ ಶತ್ರುಗಳನ್ನು ಸಂಹಾರಮಾಡುವ ದೇವತೆಗಳೆಂಬ ಅರ್ಥವನ್ನು ಹೇಳಿರುವರು.

**ಅತರನ್—ತೀರ್ಣವಂತಃ** | ಅತಿಕ್ರಮಿಸಿದರು, ಸಂಹಾರ ಮಾಡಿದರು &c.

**ರೋದಸೀ**— ಸ್ವಧೇ, ಪುರಂಧೀ ಮೊದಲಾದ ಇಪ್ಪತ್ತನಾಲ್ಕು ದ್ಯಾವಾಪೃಥಿವೀನಾಮಗಳ ಮಧ್ಯದಲ್ಲಿ ರೋದಸೀ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ.೩-೩೦) ರೋದಸಿ ಎಂದರೆ ದ್ಯಾವಾಪೃಥಿವೀ, ಸ್ವರ್ಗ ಮತ್ತು ಭೂಲೋಕಗಳು.

**ಅಪಃ**—ಅಂಬರಂ ವಿಯತ್ ಮೊದಲಾದ ಹದಿನಾರು ಅಂತರಿಕ್ಷ ನಾಮಗಳ ಮಧ್ಯದಲ್ಲಿ ಆಪಶ್ಶಬ್ದವು ಪಠಿತ್ತವಾಗಿರುವುದರಿಂದ ಅಪಃ ಎಂದರೆ (ಅಪ ಎಂಬುದು ಆಪಶ್ಶಬ್ದದ ದ್ವಿತೀಯಾಬಹುವಚನವು) ಅಂತರಿಕ್ಷವನ್ನು ಎಂದರ್ಥವು.

**ಕ್ಷಯಾಯ**— ಕ್ಷಯವೆಂದರೆ ಇಲ್ಲಿ ನಿವಾಸಸ್ಥಳವೆಂದರ್ಥವು (ನಿ. ೮-೧೮) ಪೃಥಿವೀ, ಸ್ವರ್ಗ, ಅಂತರಿಕ್ಷ ಎಂಬ ಮೂರು ಲೋಕಗಳನ್ನು ಶತ್ರುಬಾಧಾರಹಿತವನ್ನಾಗಿಯೂ ವಾಸಸ್ಥಾನಕ್ಕೆ ಯೋಗ್ಯವಾಗುವಂತೆಯೂ ಮಾಡಿದರೆಂದಭಿಪ್ರಾಯವು.

**ಕಣ್ವೇ**—ಈ ಸೂಕ್ತದ ಋಷಿಯಾದ ಕಣ್ವಋಷಿಯು ತನಗೆ ಅಗ್ನಿಯು ಐಶ್ವರ್ಯಾದಿಗಳನ್ನು ಕೊಡಬೇಕೆಂದು ಪ್ರಾರ್ಥಿಸಿರುವನು.

**ವೃಷಾ— ಕಾಮಾನಾಂ ವರ್ಷಿತಾ |** ತನಗೆ ಬೇಕಾದ ಇಷ್ಟಾರ್ಥಗಳನ್ನು ವರ್ಷಿಸುವವನು. ಎಂದರೆ ಕೊಡುವವನು ಎಂದಭಿಪ್ರಾಯವು.

**ದ್ಯುಮ್ನೀ— ಧನವಾನ್,** ಐಶ್ವರ್ಯವುಳ್ಳವನು.

**ಕ್ರಂದತ್ ಅಶ್ವಃ ಗವಿಷ್ಟಿಷು—** ಈ ಉಪಮಾನವು ಇಲ್ಲಿ ಸರಿಯಾಗಿ ಹೊಂದುವುದಿಲ್ಲ. ಅಗ್ನಿಯು ಸುಪ್ರೀತನಾಗಿ ಕಣ್ವಋಷಿಗೆ ಧನಾದ್ಯೈಶ್ವರ್ಯಗಳನ್ನು ಕೊಡುವ ವಿಚಾರಕ್ಕೂ, ಕುದುರೆಯು ಗೋವುಗಳಿಗಾಗಿ ಹೋರಾಡುವ ಯುದ್ಧದಲ್ಲಿ ಹರ್ಷಧ್ವನಿ ಮಾಡುವುದಕ್ಕೂ ಏನೂ ಸಾಮ್ಯವಿದ್ದಂತೆ ಕಂಡುಬರುವುದಿಲ್ಲ. ಆದುದರಿಂದ ಈ ಶಬ್ದಗಳ ಅರ್ಥವು ಅಸ್ಪಷ್ಟವಾಗಿದೆ.

ವ್ಯಾಕರಣಪ್ರಕ್ರಿಯಾ

**ಘ್ನನ್ತಃ**—ಹನ ಹಿಂಸಾಗತ್ಯೋಃ ಅದಾದಿಧಾತು, ಲಟ್, **ಲಟಶ್ಶತೃಶಾನಚೌ—,** ಎಂದು ಶತೃ. **ಅದಿಪ್ರಭೃತಿಭ್ಯಃಶಪಃ** ಎಂದು ಶಪ್‌ಗೆ ಲುಕ್, ಹನ್+ಅತ್, **ಗಮ ಹನ ಜನ ಖನ ಘಸಾಂ ಲೋಪಃ ಕ್ಙಿತ್ಯನಙಿ** (ಪಾ. ಸೂ. ೬-೪-೯೮) ಅಙ್ ಭಿನ್ನವಾದ ಅಜಾದಿಯಾಗಿ ಕಿತ್ ವಾ ಙಿತ್ ಆಗಿರುವ ಪ್ರತ್ಯಯು ಪರದಲ್ಲಿರುವಾಗ ಈ ಸೂತ್ರದಲ್ಲಿರುವ ಧಾತುಗಳ ಉಪಧಾ ವರ್ಣಕ್ಕೆ ಲೋಪ ಬರುತ್ತೆ ಎಂದು ಹನ್ ಧಾತುವಿನ ಅಕಾರಕೆ ಲೋಪ, **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಎಂದು ಶತೃವು ಙಿತ್ ಆಗುತ್ತೆ. ಹ್ ನ್+ಅತ್, **ಹೋಹನ್ತೇರ್ಞ್ಣಿನ್ನೇಷು** (ಪಾ. ಸೂ. ೭-೩-೫೪) ಞ್ ಚ ಣ್ ಚ ಞ್ಣೌ, ತೌ ಇತೌ ಯಯೋಃಸ್ತೌ, ಞ್ಣಿತೌ, **ದ್ವಂದ್ವಾಂತೇ ಶ್ರೂಯಮಾಣಂಪದಂ ಪ್ರತ್ಯೇಕ ಮಭಿಸಂಬಧ್ಯತೇ** ಎಂಬ ನ್ಯಾಯದಿಂದ ಇತ್‌ಶಬ್ದಕ್ಕೆ ಎರಡು ಕಡೆಯಲ್ಲಿ ಅನ್ವಯ. ಞ್ಣಿತೌಚ ನಶ್ಚ ಞ್ಣಿನ್ನಾಃ ತೇಷು ಎಂದು ವಿಗ್ರಹ, ಏವಂಚ ಞಿತ್ ಣಿತ್ ಆದ ಪ್ರತ್ಯಯಗಳು

ನಕಾರ ಇವುಗಳಲ್ಲಿ ಯಾವುದಾದರೂ ಒಂದು ಪರದಲ್ಲಿದ್ದರೆ ಹನ್ ಧಾತುವಿನ ಹಕಾರಕ್ಕೆ ಕುತ್ವ ಬರುವುದು ಎಂದು ಸೂತ್ರಾರ್ಥ, ಕುತ್ವ ಎಂದರೆ ಕವರ್ಗ, ಘೋಷನಾದ ಸಂವಾರ ಮಹಾಪ್ರಾಣಪ್ರಯತ್ನಕವಾದ ಹಕಾರದ ಸ್ಥಾನದಲ್ಲಿ ಅಂತಹ ಘಕಾರ ಬರುತ್ತೆ. ಇಲ್ಲಿ ನಕಾರವನ್ನು ನಿಮಿತ್ತಮಾಡಿಕೊಂಡು ಕುತ್ವವನ್ನು ವಿಧಾನಮಾಡಿರುವ ಸಾಮರ್ಥ್ಯದಿಂದ **ಅಚಃ ಪರಸ್ಮಿನ್—,** ಎಂದು ಅಕಾರಲೋಪಕ್ಕೆ ಸ್ಥಾನಿವದ್ಭಾವ ಬರುವುದಿಲ್ಲ. ಘ್ನ್+ಅತ್=ಘ್ನತ್, ಜಸ್, ಉಗಿತ್ತ್ವಾದ್ದರಿಂದ ನುಮ್ ಆಗಮ, ರುತ್ವ, ವಿಸರ್ಗ.

**ಅಪಃ—**ಅಪ್ ಶಬ್ದದ ಮುಂದೆ ದ್ವಿತೀಯಾಬಹುವಚನ ಶಸ್, **ಊಡಿದಂ ಪದಾದ್ಯಪ್ಪುಮ್ರೈದ್ಯುಭ್ಯಃ** (ಪಾ. ಸೂ ೬-೧-೧೭೧) ಇವುಗಳ ಮುಂದೆ ಇರುವ ಅಸರ್ವನಾಮಸ್ಥಾನವಿಭಕ್ತಿಯು ಉದಾತ್ತವಾಗುತ್ತೆ ಎಂದು ಶಸ್ ಉದಾತ್ತವಾಗುತ್ತೆ.

**ಕ್ಷಯಾಯ—**ಕ್ಷಿ ನಿವಾಸಗತ್ಯೋಃ ಧಾತು, ಕ್ಷಿಯನ್ತಿ=ನಿವಸನ್ತಿ ಅತ್ರ ಇತಿ ಕ್ಷಯಃ, ವಾಸಮಾಡುವ ಸ್ಥಳ ಎಂದರ್ಥ. **ಪುಂಸಿಸಂಜ್ಞಾಯಾಂ ಘಃ ಪ್ರಾಯೇಣ** (೩-೩-೧೧೮) ಕರಣ ಅಧಿಕರಣ ಎಂಬ ಅರ್ಥಗಳಲ್ಲಿ ಧಾತುವಿನ ಮುಂದೆ ಪುಲ್ಲಿಂಗದಲ್ಲಿ ಪ್ರಾಯಶಃ ಘ ಪ್ರತ್ಯಯ ಬರುತ್ತೆ ಎಂದು ಘ ಪ್ರತ್ಯಯ, ಕ್ಷಿ+ಅ, ಗುಣ, ಅಯಾದೇಶ, **ಕ್ಷಯೋನಿವಾಸೇ** (ಪಾ. ಸೂ. ೬-೧-೨೦೧) ನಿವಾಸ ಎಂಬ ಅರ್ಥವನ್ನು ಕೊಡುವ ಕ್ಷಯ ಶಬ್ದವು ಆದ್ಯುದಾತ್ತವಾಗುವುದು ಎಂದು ಆದ್ಯುದಾತ್ತ, ಚತುರ್ಥೀ ಏಕವಚನ.

**ಭುವತ್—**ಭೂ ಸತ್ತಾಯಾಂ ಧಾತು. **ಲಿಙರ್ಥೇಲೇಟ್** (ಪಾ. ಸೂ. ೩-೪-೭) ಎಂದು ಲೇಟ್. ಅದಕ್ಕೆ ತಿಪ್, ಶಪ್‌ಗೆ **ಬಹುಲಂ ಛಂದಸಿ** ಎಂದು ಲುಕ್, **ಇತಶ್ಚ ಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಪರಸ್ಮೈಪದದಲ್ಲಿ ಲೇಟ್ಟಿನ ಸ್ಥಾನದಲ್ಲಿ ಬಂದ ತಿಙ್‌ನ ಇಕಾರಕ್ಕೆ ಲೋಪ ಬರುತ್ತೆ ಎಂದು ಇಕಾರಕ್ಕೆ ಲೋಪ. **ಲೇಟೋಽಡಾಟೌ** (ಪಾ ಸೂ. ೩-೪-೯೪) ಎಂದು ಲೇಟ್‌ಗೆ ಅಟ್ ಆಗಮ. **ಭೂಸುವೋಸ್ತಿಙಿ** (ಪಾ. ಸೂ. ೭-೩-೮೮) ಭೂ. ಸೂ. ಇವುಗಳಿಗೆ ಸಾರ್ವಧಾತುಕವಾದ ತಿಙ್ ಪರದಲ್ಲಿದ್ದರೆ ಗುಣ ಬರುವುದಿಲ್ಲ ಎಂದು ಗುಣಕ್ಕೆ ನಿಷೇಧ. **ಅಚಿಶ್ನುಧಾತು—,** (ಪಾ ಸೂ. ೬-೪-೭೭) ಎಂದು ಉವಙ್ ಆದೇಶ, ಭುವತ್ ಎಂದು ಆಯಿತು.

**ಆಹುತಃ—**ಆ ಹೂಯತೇ ಇತಿ ಆಹುತಃ, ಹು ದಾನಾದನಯೋಃ ಧಾತು, **ನಿಷ್ಠಾ** ಎಂಬುದರಿಂದ ಕರ್ಮಾರ್ಥದಲ್ಲಿ ಕ್ತ ಪ್ರತ್ಯಯ. **ಗತಿರನಂತರಃ** (ಪಾ ಸೂ. ೬-೨-೪೯) ಕರ್ಮಾರ್ಥಕ ಕ್ತ ಪ್ರತ್ಯಯಾಂತವು ಪರದಲ್ಲಿದ್ದರೆ ಅವ್ಯವಹಿತವಾದ ಗತಿಯು ಪ್ರಕೃತಿಸ್ವರವನ್ನು ಹೊಂದುತ್ತೆ ಎಂದು ಪೂರ್ವಪದಪ್ರಕೃತಿಸ್ವರ.

**ಕ್ರನ್ದತ್—**ಕದಿ ಕ್ರದಿ ಕ್ಲದಿ ಆಹ್ವಾನೇ ಒಂದನೇ ಗಣದ ಧಾತು. ಲಟ್, ಅದಕ್ಕೆ ಶತೃ. ಶಪ್, ಪರರೂಪ, ಸುಪ್ರತ್ಯಯ, **ಉಗಿದಚಾಂ—,** ಎಂದು ನುಮ್ ಆಗಮವು ಪ್ರಾಪ್ತವಾದರೂ ಛಾಂದಸವಾಗಿ ಇಲ್ಲಿ ಬರುವುದಿಲ್ಲ. ಸು ಲೋಪ. **ತಾಸ್ಯನುದಾತ್ತೇತ್** ಎಂದು ಅದುಪದೇಶವಾದ ಶಪ್‌ನ ಮುಂದೆ ಇರುವ ಶತೃವಿಗೆ ಅನುದಾತ್ತ. ಧಾತುಸ್ವರ ನಿಲ್ಲುತ್ತೆ.

**ಗವಿಷ್ಟಿಷು**—ಇಷು ಇಚ್ಛಾಯಾಂ ಧಾತು. **ಸ್ತ್ರಿಯಾಂ ಕ್ತಿನ್** ಎಂದು ಕ್ತಿನ್ ಪ್ರತ್ಯಯ, ಗವಾಮಿಷ್ಟಿರ್ಯೇಷು ಸಂಗ್ರಾಮೇಷು ತೇ, ಯಾವ ಯುದ್ಧಗಳಲ್ಲಿ ಗೋವುಗಳು ಇಚ್ಛಿಸಲ್ಪಡುತ್ತವೆಯೋ ಅಂತಹ ಯುದ್ಧಗಳು ಎಂದು ಅರ್ಥ. ಬಹುವ್ರೀಹಿಯಾಗ್ದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತೆ. ॥ ೮ ॥



॥ ಸಂಹಿತಾಪಾಠಃ ॥

ಸಂ ಸೀದಸ್ವ ಮಹಾಁ ಅಸಿ ಶೋಚಸ್ವ ದೇವವೀತಮಃ ।
ವಿ ಧೂಮಮಗ್ನೇ ಅರುಷಂ ಮಿಯೇಧ್ಯ ಸೃಜ ಪ್ರಶಸ್ತ ದರ್ಶತಂ ॥ ೯ ॥

॥ ಪದಪಾಠಃ ॥

ಸಂ । ಸೀದಸ್ವ । ಮಹಾನ್ । ಅಸಿ । ಶೋಚಸ್ವ । ದೇವಽವೀತಮಃ ।
ವಿ । ಧೂಮಂ । ಅಗ್ನೇ । ಅರುಷಂ । ಮಿಯೇಧ್ಯ । ಸೃಜ । ಪ್ರಽಶಸ್ತ । ದರ್ಶತಂ ॥ ೯ ॥

॥ ಸಾಯಣಭಾಷ್ಯಂ ॥

ಪ್ರವರ್ಗ್ಯೇ ಮಹಾವೀರೇ ಖರೇ ಸಂಸಾದ್ಯಮಾನೇ ಸ ಸೀದಸ್ವ ಮಹಾಁ ಅಸೀತ್ಯೇಷಾ । ಸ್ಪೃಷ್ಟ್ವೋದಕಮಿತಿ ಖಂಡೇ ಸಂ ಸೀದಸ್ವ ಮಹಾಁ ಅಸೀತಿ ಸಂಸಾದ್ಯಮಾನೇ । ಆ. ೪-೬ । ಇತಿ ॥

ಹೇ ಅಗ್ನೇ ಸಂ ಸೀದಸ್ವ । ಬರ್ಹಿಷ್ಯುಪವಿಶ । ಮಹಾನಸಿ । ಗುಣಾಧಿಕೋ ಭವಸಿ । ದೇವವೀತಮೋಽತಿಶಯೇನ ದೇವಾನ್ಕಾಮಯಮಾನಃ ಶೋಚಸ್ವ । ದೀಪ್ಯಸ್ವ । ಹೇ ಮಿಯೇಧ್ಯ ಮೇಧಾರ್ಹ ಪ್ರಶಸ್ತ ಉತ್ಕೃಷ್ಟಾಗ್ನೇ ಅರುಷಂ ಗಮನಶೀಲಂ ದರ್ಶತಂ ದರ್ಶನೀಯಂ ಧೂಮಂ ವಿ ಸೃಜ । ವಿಶೇಷೇಣ ಸಂಪಾದಯ ॥ ಸೀದಸ್ವ । ಷದ್ಲೃ ವಿಶರಣಗತ್ಯವಸಾದನೇಷು । ವ್ಯತ್ಯಯೇನಾತ್ಮನೇಪದಂ । ಪ್ರಾರ್ಥನಾಯಾಂ ಲೋಟಿ ಶಪಿ ಪಾಘ್ರೇತ್ಯಾದಿನಾ ಸೀದಾದೇಶಃ । ಮಹಾನ್ । ಸಂಹಿತಾಯಾಂ ನಕಾರಾ

**ಕಾರಯೋಃ ರುತ್ವಾನುನಾಸಿಕಾವುಕ್ತೌ । ಶೋಚಿಸ್ವ । ಶುಚ ದೀಪ್ತೌ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ತಿಙಃ ಪರತ್ವಾನ್ನಿಘಾತಾಭಾವಃ । ದೇವವೀತಮಃ । ವೀ ಗತಿಪ್ರಜನಕಾಂತ್ಯಶನಖಾದನೇಷು । ದೇವಾನ್ವೇತಿ ಗಚ್ಛತೀತಿ ದೇವವೀಃ । ಕ್ವಿಪ್ಚೇತಿ ಕ್ವಿಪ್ । ಅತಿಶಯೇನ ದೇವವೀರ್ದೇವವೀತಮಃ । ತಮಪಃ ಪಿತ್ವಾದನುದಾತ್ತತ್ವೇ ಕೃದುತ್ತರಪದಪ್ರಕೃತಿಸ್ವರತ್ವಂ । ಅರುಷಂ । ಆರೋಷಣಂ । ರಿಷ ರುಷ ಹಿಂಸಾಯಾಂ । ಘಞರ್ಥೇ ಕವಿಧಾನಮಿತಿ ಭಾವೇ ಕಪ್ರತ್ಯಯಃ । ನಾಸ್ತಿ ರುಷೋಽಸ್ಯೇತಿ ಬಹುವ್ರೀಹೌ ನಞ್‌ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಮಿಯೇಧ್ಯ । ಛಂದಸಿ ಚೇತ್ಯರ್ಹಾರ್ಥೇ ಯಪ್ರತ್ಯಯಃ । ಮಕಾರಾತ್ಪರ ಇಯಾಗಮಶ್ಛಾಂದಸಃ । ಸೃಜ । ಸೃಜ ವಿಸರ್ಗೇ । ತುದಾದಿತ್ವಾಚ್ಛಃ । ವಿಕರಣಸ್ವರಃ । ಪಾದಾದಿತ್ವಾದನಿಘಾತಃ । ದರ್ಶತಂ । ಭೃಮೃದೃಶೀತ್ಯಾದಿನಾ ದೃಶೇಃ ಕರ್ಮಣ್ಯತಚ್‌ಪ್ರತ್ಯಯಃ ॥**

॥ ಪ್ರತಿಪದಾರ್ಥ ॥

(**ಅಗ್ನೇ**—ಎಲೈ ಅಗ್ನಿಯೇ) । **ಸಂ ಸೀದಸ್ವ**- (ದರ್ಭಾಸನದ ಮೇಲೆ) ಕುಳಿತುಕೊ । **ಮಹಾನ್ ಅಸಿ**—ನೀನು ಬಹಳ ಪ್ರಭಾವಶಾಲಿಯಾಗಿದ್ದೀಯೆ । **ದೇವವೀತಮಃ**—ದೇವತೆಗಳನ್ನು ತೃಪ್ತಿಗೊಳಿಸುವವನಾಗಿ । **ಶೋಚಿಸ್ವ**—ನಿನ್ನ ಕಾಂತಿಯನ್ನು ಬೀರು । **ಮಿಯೇಧ್ಯ**—ಯಜ್ಞಭಾಗಾರ್ಹನೂ । **ಪ್ರಶಸ್ತ**—ಶ್ಲಾಘ್ಯವಾದ ಉತ್ಕೃಷ್ಟ ಗುಣಗಳುಳ್ಳವನೂ ಆದ । **ಅಗ್ನೇ**—ಎಲೈ ಅಗ್ನಿಯೇ, । **ಅರುಷಂ**—ಚಲಿಸತಕ್ಕ । **ದರ್ಶತಂ** ರಮಣೀಯವಾಗಿರತಕ್ಕ । **ಧೂಮಂ**—ಹೊಗೆಯನ್ನು । **ವಿಸೃಜ**—ಹೊರಡಿಸು.

॥ ಭಾವಾರ್ಥ ॥

ಎಲೈ ಅಗ್ನಿದೇವನೇ, ನೀನು ಪ್ರಭಾವಶಾಲಿಯಾಗಿ ಮಹಾನುಭಾವನಾಗಿದ್ದೀಯೆ. ದಯಮಾಡಿ ಬಂದು ದರ್ಭಾಸನದ ಮೇಲೆ ಕುಳಿತುಕೊ. ದೇವತೆಗಳ ದೂತನಾಗಿ ಯಜ್ಞಭಾಗಗಳನ್ನು ಅವರವರಿಗೆ ತಲಪಿಸಿ ಅವರನ್ನು ತೃಪ್ತಿಗೊಳಿಸುವ ಸ್ವರೂಪವುಳ್ಳ ನಿನ್ನ ಕಾಂತಿಯನ್ನು ಬೀರು. ನೀನು ಯಜ್ಞ ಭಾಗಾರ್ಹನು. ನಿನ್ನ ಉತ್ಕೃಷ್ಟ ಗುಣಗಳು ಅತ್ಯಂತ ಶ್ಲಾಘನೀಯವಾದವು. ದಯವಿಟ್ಟು ಯಜ್ಞಸ್ಥಾನಕ್ಕೆ ಬಂದು ಊರ್ಧ್ವಮುಖವಾಗಿ ಚಲಿಸುವ ಮತ್ತು ನೋಡಲು ರಮಣೀಯವಾಗಿರುವ ಹೊಗೆಯನ್ನು ಹೊರಕ್ಕೆ ಹೊರಡಿಸು.

English Translation

O Agni, take your seat on the sacred grass; you are great and devoted to the gods; shine forth, adorable and excellent Agni, send forth your reddish and beautiful smoke.

॥ ವಿಶೇಷವಿಷಯಗಳು ॥

**ದೇವವೀತಮಃ— ಅತಿಶಯೇನ ದೇವಾನ್ ಕಾಮಯಮಾನಃ ।** ದೇವತೆಗಳ ವಿಷಯದಲ್ಲಿ ಬಹಳವಾಗಿ ಆದರವುಳ್ಳವನು

**ಮಿಯೇಧ್ಯ—ಮೇಧಾರ್ಹ** । ಪೂಜಿಸಲ್ಪಡಲು ಅಥವಾ ಗೌರವಿಸಲ್ಪಡಲು ಯೋಗ್ಯನಾದವನು.

**ದರ್ಶತಂ—ದರ್ಶನೀಯಂ** । ನೋಡುವುದಕ್ಕೆ ಆಹ್ಲಾದಕರವಾಗಿರುವ, ಬಹಳ ಚೆನ್ನಾಗಿರುವ.

**ಅರುಷಂ—ಗಮನಶೀಲಂ** । ಮೇಲಕ್ಕೆ ಹೊರಹೊರಡುತ್ತಿರುವ ಅಥವಾ ಸ್ವಲ್ಪ ಕೆಂಪುಛಾಯೆಯುಳ್ಳ.

॥ ವ್ಯಾಕರಣಪ್ರಕ್ರಿಯಾ ॥

**ಸೀದಸ್ವ**—ಷದ್ಲೃ ವಿಶರಣಗತ್ಯವಸಾದನೇಷು ಧಾತು. **ವ್ಯತ್ಯಯೋ ಬಹುಲಂ** ಎಂದು ಆತ್ಮನೇಪದ ಬರುತ್ತೆ. ಪ್ರಾರ್ಥನೆ ಎಂಬ ಅರ್ಥದಲ್ಲಿ **ಲೋಟ್**, **ಸಿಪ್**, **ಶಪ್**, **ಪಾಘ್ರಾಧ್ಮಾ—,** (ಪಾ. ಸೂ. ೭-೩-೭೮) ಇತ್ಸಂಜ್ಞಕ ಶಕಾರಾದಿ ಪ್ರತ್ಯಯ ಪರದಲ್ಲಿರುವಾಗ ಪಾ ಮೊದಲಾದ ಧಾತುಗಳಿಗೆ ಪಿಬ ಮೊದಲಾದ ಆದೇಶಗಳು ಬರುತ್ತವೆ ಎಂದು ಸೀದ್ ಆದೇಶ, ಸೀದ್+ಅ+ಸಿ, **ಟಿತ ಆತ್ಮನೇ ಪದಾನಾಂ**-ಎಂದು ಟಿಗೆ ಏತ್ವ **ಸವಾಭ್ಯಾಂ ವಾಮೌ** (ಪಾ. ಸೂ. ೩-೪-೯೧) ಎಂದು ಏಗೆ ವ ಆದೇಶ.

**ಮಹಾನ್**—ಸಂಹಿತಾಕಾಲದಲ್ಲಿ ಅಸಿ ಎಂಬುದರ ಅಕಾರರೂಪವಾದ ಅಟ್ ಪರದಲ್ಲಿದೆ **ದೀರ್ಘಾದಟಿ-ಸಮಾನಪಾದೇ** (ಪಾ. ಸೂ. ೮-೩-೯) ಎಂದು ನ್‌ಗೆ ರು ಆದೇಶ, **ಆತೋಽಟಿನಿತ್ಯಮ್** (ಪಾ. ಸೂ, ೮-೩-೩) ಎಂದು ದೀರ್ಘವಾದ ಆಕಾರಕ್ಕೆ ಅನುನಾಸಿಕವಾದ ಅಕಾರ ಬರುತ್ತೆ.

**ಶೋಚಸ್ವ**—ಶುಚದೀಪ್ತೌ ಧಾತು, ಆತ್ಮನೇ ಪದಿ. ಲೋಟ್ ಮಧ್ಯಮಪುರುಷ ಥಾಸ್, ಸೇ ಆದೇಶ ಏಕಾರಕ್ಕೆ ವಕಾರ, ಸ್ವ ಎಂಬ ಲಸ್ಥಾನಿಕ ಸಾರ್ವಧಾತುಕವು ಅದುಪದೇಶದ ಮುಂದೆ ಇರುವುದರಿಂದ ಅನುದಾತ್ತ ಏವಂಚ ಧಾತುಸ್ವರವೇ ನಿಲ್ಲುವುದು ಅಸಿಶೋಚಸ್ವ ಎಂಬ ಸಂಹಿತೆಯಲ್ಲಿ ಅಸಿ ಎಂಬ ತಿಙಂತದ ಮುಂದೆ ಇರುವುದರಿಂದ **ಅತಿಙಃ** ಎಂದು ನಿಷೇಧ ಬರುವುದು. ಆದ್ದರಿಂದ ಸರ್ವಾನುದಾತ್ತ ಬರುವುದಿಲ್ಲ.

**ದೇವವೀತಮಮ್**—ವೀ ಗತಿಪ್ರಜನಕಾನ್ತ್ಯಶನ ಖಾದನೇಷು ಧಾತು, ದೇವಾನ್=ದೇವತೆಗಳನ್ನು ಕುರಿತು, ವೇತಿ=ಹೋಗುತ್ತದೆ ಎಂದು ವಿಗ್ರಹ. **ಕ್ವಿಪ್‌ಚ** ಎಂದು ಕ್ವಿಪ್, **ಧಾತೋಃ** (ಪಾ. ಸೂ. ೬-೧-೧೬೨) ಎಂದು ವೀ ಎಂಬುದು ಉದಾತ್ತ. ಅತಿಶಯೇನ ದೇವವೀಃ, ಎಂದು ಅತಿಶಯಾರ್ಥವನ್ನು ವಿವಕ್ಷಿಸಿದಾಗ **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂದು ತಮಪ್, ಅದು ಪಿತ್ತಾದ್ದರಿಂದ ಅನುದಾತ್ತ. ಕೃದಂತವಾದ ಉತ್ತರ ಪದಕ್ಕೆ ಪ್ರಕೃತಿಸ್ವರ ಬರುವುದರಿಂದ ಸಮಾಸ ಬಂದಮೇಲೆಯೂ ವೀ ಉದಾತ್ತವಾಗಿಯೇ ಇರುತ್ತೆ.

**ಅರುಷಮ್**—ರುಷ ರಿಷ ಹಿಂಸಾಯಾಂ ಧಾತು, **ಘಞರ್ಥೇಕವಿಧಾನಂ ಸ್ಥಾಸ್ನಾಪಾವ್ಯಧಿ ಹನಿ ಯುಧ್ಯರ್ಥಮ್** (ಪಾ. ಸೂ. ೩-೩-೫೮-೫) ಎಂದು ಭಾವಾರ್ಥದಲ್ಲಿ ಕ ಪ್ರತ್ಯಯ. ಭಾವ ಮತ್ತು ಕರ್ತೃಭಿನ್ನ ಕಾರಕ ಇವು ಘಞರ್ಥಗಳು, ಈ ಧಾತುವು ಹಿಂಸಾರ್ಥದಲ್ಲಿ ಪಠಿತವಾಗಿದ್ದರೂ ಧಾತುಗಳಿಗೆ ಅನೇಕವಾದ ಅರ್ಥಗಳಿರುವುದರಿಂದ ಗತಿ ಎಂಬ ಅರ್ಥವನ್ನು ಬೋಧಿಸುವುದು. ನಾಸ್ತಿ ರುಷಃ=ಗಮನಂ ಯಸ್ಯಸಃ ಎಂದು ಬಹುವ್ರೀಹಿ

**ನಞ್ ಸುಭ್ಯಾಂ** (ಪಾ. ಸೂ. ೬-೨-೧೭೨) ನಞ್, ಸು, ಗಳ ಮುಂದೆ ಇರುವ **ಉತ್ತರ**ಪದವು ಬಹುವ್ರೀಹಿಯಲ್ಲಿ ಅಂತೋದಾತ್ತವಾಗುವುದು ಎಂದು ಉತ್ತರಪದಕ್ಕೆ ಅಂತೋದಾತ್ತ ಬರುತ್ತೆ.

**ಮಿಯೇಧ್ಯ**— ಮೇಧೃ ಮೇಧಾಹಿಂಸನಯೋಃ ಧಾತು, ಕ್ವಿಪ್, **ಛಂದಸಿ ಚ** (ಪಾ. ಸೂ. ೫-೧-೬೭) ಪ್ರಾತಿಪದಿಕಪ್ರಕೃತಿಕ ದ್ವಿತೀಯಾಂತದ ಮುಂದೆ ಅರ್ಹತಿ ಎಂಬ ಅರ್ಥದಲ್ಲಿ ಯತ್ ಬರುತ್ತೆ ಎಂಬುದರಿಂದ ಮೇಧ ಮರ್ಹತಿ ಎಂದು ವಿವಕ್ಷಿಸಿದಾಗ ಯತ್ಪ್ರತ್ಯಯ, ಮೇಧ್+ಯಮ್, ಎಂಬುದರ ಮುಂದೆ ಛಾಂದಸವಾಗಿ ಇಯ್ ಆಗಮ-ಆಮಂತ್ರಿತವಾದ್ದರಿಂದ ಸರ್ವಾನುದಾತ್ತ.

**ಸೃಜ**—ಸೃಜ ವಿಸರ್ಗೇ, ಲೋಟ್-ಸಿಪ್ **ತುದಾದಿಭ್ಯಃ ಶಃ** (ಪಾ. ಸೂ. ೩-೧-೭೭) ಎಂದು ಶ ವಿಕರಣ, ಪಾದಾದಿಯಲ್ಲಿರುವುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ದರ್ಶತಮ್—ಭೃಮೃದೃಶಿ—,** (ಉ. ಸೂ. ೩-೩೪೦) ಎಂಬುದರಿಂದ ದೃಶಿರ್ ಪ್ರೇಕ್ಷಣೇ ಧಾತು ಮುಂದೆ ಅತಚ್ ಪ್ರತ್ಯಯ. ||೯||



॥ ಸಂಹಿತಾಪಾಠಃ ॥

ಯಂ ತ್ವಾ ದೇವಾಸೋ ಮನವೇ ದಧುರಿಹ ಯಜಿಷ್ಠಂ ಹವ್ಯವಾ-
ಹನ ।
ಯಂ ಕಣ್ವೋ ಮೇಧ್ಯಾತಿಥಿರ್ಧನಸ್ಪೃತಂ ಯಂ ವೃಷಾ ಯಮುಪ-
ಸ್ತುತಃ ॥ ೧೦ ॥

॥ ಪದಪಾಠಃ ॥

ಯಂ । ತ್ವಾ । ದೇವಾಸಃ । ಮನವೇ । ದಧುಃ । ಇಹ । ಯಜಿಷ್ಠಂ ।
ಹವ್ಯಽವಾಹನ ।

ಯಂ । ಕಣ್ವಃ । ಮೇಧ್ಯಽ ಅತಿಥಿಃ । ಧನಽ ಸ್ಪೃತಂ । ಯಂ । ವೃಷಾ ।

ಯಂ । ಉಪಽ ಸ್ತುತಃ ॥ ೧೦ ॥

॥ ಸಾಯಣಭಾಷ್ಯಂ ॥

**ಹೇ ಹವ್ಯವಾಹನ ಹವಿಷೋ ವಾಹಕಾಗ್ನೇ ಮನವೇ ಮನೋರನುಗ್ರಹಾಯ ದೇವಾಸಃ ಸರ್ವೇ ದೇವಾ ಯಜಿಷ್ಠಮತಿಶಯೇನ ಪೂಜ್ಯಂ ಯಷ್ಟೃತಮಂ ವಾ ಯಂ ತ್ವಾಮಿಹ ದೇವಯಜನದೇಶೇ ದಧುಃ ಧೃತವಂತಃ । ಮೇಧ್ಯಾತಿಥಿರ್ಮೇಧಾರ್ಹೈರತಿಥಿಭಿರ್ಯುಕ್ತಃ ಕಣ್ವ ಏತನ್ನಾಮಕೋ ಮಹರ್ಷಿರ್ಯಂ ತ್ವಾಂ ಧನಸ್ಪೃತಂ ಧನೇನ ಪ್ರೀಣಯಿತಾರಂ ಕೃತ್ವಾ ದಧ ಇತಿ ಶೇಷಃ ॥ ತಥಾ ವೃಷೇಂದ್ರೋ ಯಂ ತ್ವಾಂ ದಧೇ । ತಥೋಪಸ್ತುತೋಽನ್ಯೋಽಪಿ ಸ್ತೋತಾ ಯಜಮಾನೋ ಯಂ ತ್ವಾಂ ದಧೇ । ಸ ತ್ವಂ ಸಂ ಸೀದಸ್ವೇತಿ ಪೂರ್ವತ್ರಾನ್ವಯಃ ॥ ದಧುಃ । ಲಿಟ್ಯುಸಿ ಕಿತ್ವೆ ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಪ್ರತ್ಯಯಸ್ವರಃ ಯಷ್ಟೃಶಬ್ದಾತ್ತುಶ್ಛಂದಸಿ । ಪಾ. ೫-೩-೫೯ । ಇತ್ಯಗುಣವಚನಾದಪ್ಯಾತಿಶಾಯನಿಕ ಇಷ್ಠನ್ । ತುರಿಷ್ಠೇಮೇಯಃಸು । ಪಾ. ೬-೪-೧೫೪ । ಇತಿ ತೃಲೋಪಃ । ನಿತ್ವಾದಾದ್ಯುದಾತ್ತತ್ವಂ । ಹವ್ಯವಾಹನ । ಹವ್ಯಂ ವಹತೀತಿ ಹವ್ಯವಾಹನಃ । ಹವ್ಯೇಽನಂತಃಪಾದಂ । ಪಾ. ೩-೨-೬೬ । ಇತಿ ವಹತೇರ್ಞ್ಯುಟ್ । ಮೇಧ್ಯಾತಿಥಿಃ । ಮೇಧ್ಯಾ ಅತಿಥಯೋ ಯಸ್ಯೇತಿ ಬಹುವ್ರೀಹೌ ಪೂರ್ವಪದ-ಪ್ರಕೃತಿಸ್ವರತ್ವಂ । ಧನಸ್ಪೃತಂ ಧನೈರಸ್ಮಾನ್ಸ್ಪೃಣೋತಿ ಪ್ರೀಣಯತೀತಿ ಧನಸ್ಪೃತ್ । ಸ್ಪೃ ಪ್ರೀತಿ-ಬಲಯೋಃ । ಕ್ವಿಪ್ಚೇತಿ ಕ್ವಿಪ್ । ತತಸ್ತುಕ್ । ಕೃದುತ್ತರಪದಪ್ರಕೃತಿಸ್ವರತ್ವಂ । ಉಪಸ್ತುತಃ । ಕ್ತಿಚ್‌ಕ್ತೌ ಚ ಸಂಜ್ಞಾಯಾಮಿತಿ ಕರ್ತರಿ ಕ್ತಃ । ಥಾಥಾದಿನೋತ್ತರಪದಾಂತೋದಾತ್ತತ್ವಂ ॥೯॥**

॥ ಪ್ರತಿಪದಾರ್ಥ ॥

**ಹವ್ಯವಾಹನ**— (ದೇವತೆಗಳಿಗೆ) ಹವಿರ್ಧಾರಕನಾದ (ಹವಿಸ್ಸನ್ನು ತಲುಪಿಸತಕ್ಕ) ಎಲೈ ಅಗ್ನಿಯೇ **ಮನವೇ**— ಮನುವಿಗೋಸ್ಕರ (ಅವನಿಗೆ ಅನುಗ್ರಹ ಮಾಡಲು) । **ದೇವಾಸಃ**— ಸಕಲ ದೇವತೆಗಳೂ । **ಯಜಿಷ್ಠಂ**— ಅತ್ಯಂತ ಪೂಜ್ಯನಾದ ಅಥವಾ ಅತ್ಯಂತ ಶ್ರೇಷ್ಠನಾದ ಯಜ್ಞಕರ್ತೃವಾದ । **ಯಂ ತ್ವಾ**— ಯಾವ ನಿನ್ನನ್ನು । **ಇಹ**— ಈ ಯಜ್ಞಭೂಮಿಯಲ್ಲಿ । **ದಧುಃ**— (ನಿರ್ಬಂಧದಿಂದ) ನಿಲ್ಲಿಸಿಕೊಂಡರೋ, । **ಮೇಧ್ಯಾ-ತಿಥಿಃ**— ಪೂಜ್ಯರಾದ ಅತಿಥಿಗಳೊಡನೆ ಇದ್ದ । **ಕಣ್ವಃ**— ಕಣ್ವನೆಂಬ ಋಷಿಯು (ಅಥವಾ ಕಣ್ವವಂಶಸ್ಥನಾದ ಮೇಧ್ಯಾತಿಥಿ ಎಂಬ ಋಷಿಯು) । **ಯಂ**— ಯಾವ ನಿನ್ನನ್ನು । **ಧನಸ್ಪೃತಂ**— ಧನದಾನದಿಂದ ಸಂತೋಷ ಪಡಿಸುವವನನ್ನಾಗಿ (ಮಾಡಿ) । **(ದಧೇ)**— (ನಿಲ್ಲಿಸಿಕೊಂಡನೋ) । (ಹಾಗೆಯೇ) । **ವೃಷಾ**— ಇಂದ್ರನು । **ಯಂ**— ಯಾವ ನಿನ್ನನ್ನು । **ದಧೇ**— ನಿಲ್ಲಿಸಿಕೊಂಡನೋ (ಮತ್ತು) । **ಉಪಸ್ತುತಃ**— ಇನ್ನೊಬ್ಬ ಭಕ್ತನೂ । **ಯಂ**— ಯಾವ ನಿನ್ನನ್ನು (ನಿಲ್ಲಿಸಿಕೊಂಡನೋ ಅಂತಹ ನೀನು) । **(ಸೀದಸ್ವ**— ಕುಳಿತುಕೊ) ।

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಸಕಲ ದೇವತೆಗಳಿಗೂ ಹವಿಸ್ಸನ್ನುತಲುಪಿಸುವವನು. ಸಕಲರಿಗೂ ಉಪಕಾರಮಾಡುವವನು. ಆದ್ದರಿಂದಲೇ ನಿನ್ನನ್ನು ಸಕಲ ದೇವತೆಗಳೂ ಸಹ ಮನುವಿಗೆ ಅನುಗ್ರಹ ಮಾಡುವುದಕ್ಕಾಗಿ ಯಜ್ಞಭೂಮಿಯಲ್ಲಿ ನಿಲ್ಲಿಸಿಕೊಂಡರು. ಅತ್ಯಂತ ಪೂಜ್ಯನಾದ ನಿನ್ನನ್ನು ಅತಿಥಿಗಳಿಗೆ ಸತ್ಕಾರ ಮಾಡಲು ಕಣ್ವನೆಂಬ ಮುನಿಯು ಪ್ರಾರ್ಥಿಸಿ ನಿಲ್ಲಿಸಿಕೊಂಡನು. ಅವನಿಗೂ ಇತರರಿಗೂ ಧನದಾನದಿಂದ ನೀನು ಸಂತೋಷದಾಯಕನು. ಇಂದ್ರನೂ ಮತ್ತಿತರ ಭಕ್ತರೂ ಸಹ ನಿನ್ನ ಅನುಗ್ರಹವನ್ನಪೇಕ್ಷಿಸಿ ನಿಲ್ಲಿಸಿಕೊಂಡರು. ನೀನು ನಮಗೂ ಅನುಗ್ರಹ ಮಾಡಲು ಯಜ್ಞಭೂಮಿಯಲ್ಲಿ ಕುಳಿತುಕೊ.

English Translation

O bearer of oblations, the gods have established you here as the best sacrificer for the sake of Manu; you whom Kanwa, host of pious guests has established; whom, giver of wealth, Indra has detained; whom some other worshipper has detained.

ವಿಶೇಷ ವಿಷಯಗಳು

**ಮನವೇ**— ಮನುವಿಗೋಸ್ಕರ ಎಂದರೆ ಮನುಪ್ರಜಾಪತಿಗೋಸ್ಕರ; ಮನುವು ಮನುಷ್ಯರಿಗೆ ಮೂಲಪುರುಷನೆಂದು ಪ್ರತೀತಿ ಇರುವುದು. ಮನುವಿನಿಂದ ಉತ್ಪನ್ನರಾದ ಅಥವಾ ಮನುವಿನ ವಂಶಸ್ಥರಾದ ಜನರಿಗೆ ಮಾನವರು ಅಥವಾ ಮನುಷ್ಯರೆಂದು ಹೇಳುವರು. ಆದುದರಿಂದ ಮನವೇ ಎಂದರೆ ಮನುಷ್ಯರಿಗೋಸ್ಕರ ಎಂಬ ಜಾತ್ಯೇಕವಚನಾರ್ಥವನ್ನು ಬೇಕಾದರೂ ಹೇಳಬಹುದು.

**ದೇವಾಸೋ ದಧುರಿಹ— ದೇವಾಃ ಇಹ ದೇವಯಜನದೇಶೇ ಧೃತವಂತಃ ।** ದೇವತೆಗಳು ಯಜ್ಞವೇದಿಕೆಯಲ್ಲಿ ನಿನ್ನನ್ನು (ಅಗ್ನಿಯನ್ನು) ಪ್ರತಿಷ್ಠಿಸಿದರು ಎಂದಭಿಪ್ರಾಯವು.

**ಯಜಿಷ್ಠಂ— ಅತಿಶಯೇನ ಪೂಜ್ಯಂ, ಯಷ್ಟೃತಮಂ ।** ವಿಶೇಷ ರೀತಿಯಿಂದ ಅಥವಾ ಬಹಳವಾಗಿ ಪೂಜಿಸಲ್ಪಡಲು ಅರ್ಹನಾದವನು, ಅಥವಾ ಯಜ್ಞ ಮಾಡುವವರಲ್ಲಿ (ದೇವತೆಗಳಿಗೆ ಯಜ್ಞ ಭಾಗವನ್ನು ಒಯ್ಯುವುದರಲ್ಲಿ) ಶ್ರೇಷ್ಠನಾದವನು.

**ಹವ್ಯವಾಹನ— ಹವ್ಯಂ ವಹತೀತಿ ಹವ್ಯವಾಹನಃ ।** ಯಜ್ಞದಲ್ಲಿ ಯಜಮಾನರು ದೇವತೆಗಳನ್ನು ಉದ್ದೇಶಿಸಿ ಅರ್ಪಿಸುವ ಹವಿಸ್ಸನ್ನು ಅವರಿಗೆ ಸೇರುವಂತೆ ಒಯ್ಯುವವನು.

**ಕಣ್ವಃ ಮೇಧ್ಯಾತಿಥಿಃ—ಮೇಧ್ಯಾ ಅತಿಥಯೋ ಯಸ್ಯ ಸಃ ಮೇಧ್ಯಾತಿಥಿಃ ।** ಪೂಜ್ಯರಾದ ಅತಿಥಿ ಗಳಿಂದ ಯುಕ್ತನಾದ ಕಣ್ವಋಷಿಯು. **ಈ** ಸೂಕ್ತದ ಋಷಿಯಾದ ಕಣ್ವಋಷಿಯೆಂದಭಿಪ್ರಾಯವು. ಇಲ್ಲಿ ಮೇಧಾ ತಿಥಿಃ ಎಂಬುದು ಕಣ್ವವಂಶಸ್ಥನಾದ ಒಬ್ಬ ಋಷಿಯ ಹೆಸರು. ಆ ಹೆಸರನ್ನೇ ಇಲ್ಲಿ ಘೋರ ಪುತ್ರನಾದ ಕಣ್ವ ಋಷಿಯು ಹೇಳಿರಬಹುದು. ಈ ಶಬ್ದಕ್ಕೆ ಅವಯವಾರ್ಥವನ್ನು ಹೇಳುವುದಕ್ಕಿಂತಲೂ ಮೇಧ್ಯಾತಿಥಿ ಎಂದರೆ ಮೇಧ್ಯಾತಿಥಿ ಎಂಬ ಕಣ್ವವಂಶಸ್ಥನಾದ ಋಷಿಯು ಎಂದು ಹೇಳುವುದೇ ಯುಕ್ತವಾಗಿರುವುದು. ಈ ಮೇಧ್ಯಾತಿಥಿಯು ೮ ನೆಯ ಮಂಡಲದಲ್ಲಿ ೧ ನೇ ಸೂಕ್ತದ ೩-೨೯ ಋಕ್ಕುಗಳಿಗೂ ಅದೇ ಮಂಡಲದ ೩ನೇ ಸೂಕ್ತದಲ್ಲಿರುವ ೨೪ ಋಕ್ಕುಗಳಿಗೂ ಮತ್ತೆ ಅದೇ ಮಂಡಲದ ೩೩ ನೆಯ ಸೂಕ್ತದಲ್ಲಿರುವ ೧೯ ಋಕ್ಕುಗಳಿಗೂ ಒಟ್ಟು ೭೦ ಋಕ್ಕುಗಳಿಗೆ ಋಷಿಯಾಗಿರುವುದರಿಂದ ಈ ಮೇಧ್ಯಾತಿಥಿಯು ಕಣ್ವವಂಶಸ್ಥರಲ್ಲಿ ಪ್ರಸಿದ್ಧನಾದ ಋಷಿಯು. ಇವನನ್ನೇ ಉದ್ದೇಶಿಸಿ ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಮೇಧ್ಯಾತಿಥಿ ಶಬ್ದದ ಪ್ರಯೋಗವಿರುವುದೆಂದು ತಿಳಿಯಬೇಕು.

**ಧನಸ್ಪೃತಂ—ಧನೈರಸ್ಮಾನ್ ಸ್ಪೃಣೋತಿ ಪ್ರೀಣಯತೀತಿ ಧನಸ್ಪೃತ್ ।** ಧನಗಳನ್ನು ಕೊಟ್ಟು ನಮ್ಮನ್ನು ಸಂತೋಷಪಡಿಸುವವನು.

**ವೃಷಾ—** ಇಲ್ಲಿ ವೃಷಾ ಎಂಬ ಶಬ್ದಕ್ಕೆ ಭಾಷ್ಯಕಾರರು ಇಂದ್ರನೆಂದು ಅರ್ಥವಿವರಣೆ ಮಾಡಿರುವರು. ಇಷ್ಟಾದಿಗಳನ್ನು ವರ್ಷಿಸುವುದರಿಂದ ವೃಷಾ ಎಂದು ಇಂದ್ರನನ್ನು ಕರೆಯಬಹುದು.

**ವೃಷಾ ಹ್ಯುಗ್ರ ಶೃಣ್ವಿರೇ ಪರಾವತಿ ವೃಷೋ ಅರ್ವಾವತಿ ಶ್ರುತಃ ।**
**ವೃಷಣಸ್ತೇ ಅಭೀಶವೋ ವೃಷಾ ಕಶಾ ಹಿರಣ್ಯಯೀ ।**
**ವೃಷಾ ರಥೋ ಮಘವನ್ ವೃಷಣಾ ಹರೀ ವೃಷಾ ತ್ವಂ ಶತಕ್ರತೋ**
**ವೃಷಾ ಸೋತಾ ಸುನೋತು ತೇ ವೃಷನ್ನೃಜೀಪಿನ್ನಾ ಭರ ।**
**ವೃಷಾ ದಧನ್ವೇ ವೃಷಣಂ ನದೀಷ್ವಾ ತುಭ್ಯಂ ಸ್ಥಾತರ್ಹರೀಣಾಂ ॥**

(ಋ. ಸಂ. ೮-೩೩-೧೦, ರಿಂದ ೧೨)

ಈ ಋಕ್ಕುಗಳಲ್ಲಿ ವೃಷಾ ಎಂಬ ಶಬ್ದವು ಇಂದ್ರ ಎಂಬ ಅರ್ಥವನ್ನೇ ಸೂಚಿಸುವುದು.

**ಉಪಸ್ತುತಃ—ಅನ್ಯೋಽಪಿಸ್ತೋತಾ ।** ನಿನ್ನನ್ನು ಸ್ತೋತ್ರ ಮಾಡುವ ಮತ್ತೊಬ್ಬ ಪುರುಷನೂ ಸಹ ಎಂದರೆ ಯಜ್ಞ ಮಾಡುವ ಯಜಮಾನ ಮೊದಲಾದವರು.

॥ ವ್ಯಾಕರಣಪ್ರಕ್ರಿಯಾ ॥

**ದಧುಃ—** ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್-ಝಿ, **ಪರಸ್ಮೈಪದಾನಾಂ—**, ಎಂದು ಉಸ್ ಆದೇಶ, ದ್ವಿತ್ವ, ಹ್ರಸ್ವ, ಜಶ್ತ್ವ, ದಧಾ+ಉಸ್, **ಅಸಂಯೋಗಾಲ್ಲಿಟ್ಕಿತ್** (ಪಾ. ಸೂ. ೧-೨-೫) ಎಂದು ಉಸ್ ಕಿತ್ ಆಗುತ್ತೆ. **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಕಿತ್ ಪ್ರಾಚೀತ್ ಆದ

ಅಜಾದ್ಯಾರ್ಧಧಾತುಕ, ಇಟ್ ಇವು ಪರದಲ್ಲಿದ್ದರೆ ಆಕಾರಕ್ಕೆ **ಲೋಪ** ಬರುತ್ತೆ ಎಂದು ಆಕಾರಕ್ಕೆ ಲೋಪ, ಪ್ರತ್ಯಯಸ್ವರ.

**ಯಜಿಷ್ಠಮ್**—ಯಜ ದೇವಪೂಜಾದೌ, ತೃಚ್, ಯಷ್ಟೃಶಬ್ದವು ಗುಣವಾಚಿಯಲ್ಲ. **ಅಜಾದೀ ಗುಣವಚನಾದೇವ** (ಪಾ. ಸೂ. ೫-೩-೫೮) ಇಷ್ಠನ್ ಈಯಸುನ್‌ಗಳು ಗುಣವಚನದ ಮುಂದೆಯೇ ಬರುವುವು ಎಂದು ಇದೆ. ಆದರೂ, **ತುಶ್ಛಂದಸಿ** (ಪಾ. ಸೂ. ೫-೩-೫೯) ಛಂದಸ್ಸಿನಲ್ಲಿ ತೃನ್ ತೃಜಂತಗಳ ಮುಂದೆ ಇಷ್ಠನ್ ಈಯಸುನ್ ಇವು ಬರುವುವು ಎಂದು ಗುಣವಾಚಿಯಲ್ಲದಾಗ್ಯೂ ಯಷ್ಟೃಶಬ್ದದ ಮುಂದೆ ಅತಿಶಯಾರ್ಥದಲ್ಲಿ ಇಷ್ಠನ್ ಬರುತ್ತೆ. **ತುರಿಷ್ಠೇಮೇಯಸ್ಸು** (ಪಾ. ಸೂ. ೬-೪-೧೫೪) ಇಷ್ಠನ್, ಇಮನಿಚ್, ಈಯಸುನ್ ಇವು ಪರದಲ್ಲಿರುವಾಗ ತೃಗೆ ಲೋಪ ಬರುತ್ತೆ ಎಂದು ತೃಗೆ ಲೋಪ, ಯಜಿಷ್ಠ ಎಂದಾಯಿತು. ಇದು ನಿತ್ಸ್ವರದಿಂದ ಆದ್ಯುದಾತ್ತ.

**ಹವ್ಯವಾಹನ**—ಹವ್ಯಂ ವಹತೀತಿ ಹವ್ಯವಾಹನಃ ಎಂದು ವಿಗ್ರಹ. **ಹವ್ಯೇಽನನ್ತಃ ಪಾದಮ್** (ಪಾ. ಸೂ. ೩-೨-೬೬) ಪಾದದ ಮಧ್ಯೆ ಇಲ್ಲದೇ ಇದ್ದರೆ ಹವ್ಯ ಶಬ್ದವು ಉಪಪದವಾಗಲು ವಹ್ ಧಾತು ಮುಂದೆ ಞ್ಯುಟ್ ಬರುತ್ತೆ ಎಂದು ವಹಪ್ರಾಪಣೇ ಧಾತು ಮುಂದೆ ಞ್ಯುಟ್-ಅವುಗೆ ಲೋಪ, ಯುಗೆ ಅನ ಆದೇಶ, ಉಪಧಾ ವೃದ್ಧಿ, ಹವ್ಯವಾಹನ ಎಂದಾಗುತ್ತೆ. ಆಮನ್ತ್ರಿವಾದ್ದರಿಂದ ಸರ್ವಾನುದಾತ್ತ.

**ಮೇಧ್ಯಾತಿಥಿಃ**—ಮೇಧ್ಯಾಃ=ಪರಿಶುದ್ಧರಾದ, ಅತಿಥಯಃ=ಅತಿಥಿಗಳು, ಯಸ್ಯ ಸಃ=ಯಾವನಿಗೆ ಇರುವರೋ ಅವನು ಎಂದು ಬಹುವ್ರೀಹಿ, ಪೂರ್ವಪದಪ್ರಕೃತಿಸ್ವರ.

**ಧನಸ್ಪೃತಮ್**—ಧನೈಃ ಅಸ್ಮಾನ್ ಸ್ಪೃಣೋತಿ ಎಂದರೆ ಹಣದಿಂದ ನಮ್ಮನ್ನುತೃಪ್ತಿಪಡಿಸುವನು ಎಂದು ಅರ್ಥ. ಸ್ಪೃ ಪ್ರೀತಿಬಲಯೋಃ ಧಾತು, ಸ್ಪೃ ಪ್ರೀತಿಚಲನಯೋಃ ಎಂದು ಸ್ವಾದಿಯಲ್ಲಿದೆ. ಸ್ಪೃಪ್ರೀತಿಚಲನಯೋಃ ಎಂದು ಕೆಲವರು ಹೇಳುವರು, ಪ್ರೀತಿ ಎಂಬ ಅರ್ಥವು ಎಲ್ಲರಿಗೂ ಸಂಮತವಾದುದು. **ಕ್ವಿಪ್‌ಚ** ಎಂದು ಕ್ವಿಪ್, **ಹ್ರಸ್ವಸ್ಯ ಪಿತಿ ಕೃತಿ ತುಕ್** (ಪಾ. ಸೂ. ೬-೧-೭೧) ಎಂದು ತುಗಾಗಮ. ಉತ್ತರಪದವು ಕೃದಂತವಾದ್ದರಿಂದ ಪ್ರಕೃತಿಸ್ವರ ಬರುತ್ತೆ.

**ಉಪಸ್ತುತಃ**—ಷ್ಟುಞ್ ಸ್ತುತೌ ಧಾತು, **ಕ್ತಿಚ್‌ಕ್ತೌಚ ಸಂಜ್ಞಾಯಾಂ** (ಪಾ. ಸೂ. ೩-೩-೧೭೪) ಎಂದು ಕರ್ತಾ ಎಂಬ ಅರ್ಥದಲ್ಲಿ ಕ್ತಿಚ್, **ಥಾಥ ಘಞ್‌ಕ್ತ—**, (ಪಾ. ಸೂ. ೬-೨-೧೪೪) ಎಂದು ಸ್ತುತ ಎಂಬ ಪದವು ಅಂತೋದಾತ್ತವಾಗುತ್ತೆ. ॥೧೦॥



॥ ಸಂಹಿತಾಪಾಠಃ ॥

ಯಮಗ್ನಿಂ ಮೇಧ್ಯಾತಿಥಿಃ ಕಣ್ವ ಈಧ ಋತಾದಧಿ।
ತಸ್ಯ ಪ್ರೇಷೋ ದೀದಿಯುಸ್ತಮಿಮಾ ಋಚಸ್ತಮಗ್ನಿಂ ವರ್ಧಯಾ-
ಮಸಿ ॥೧೧॥

॥ ಪದಪಾಠಃ ॥

ಯಂ । ಅಗ್ನಿಂ । ಮೇಧ್ಯಽಅತಿಥಿಃ । ಕಣ್ವಃ । ಈಧೇ । ಋತಾತ್ । ಅಧಿ ।
ತಸ್ಯ । ಪ್ರ । ಇಷಃ । ದೀದಿಯುಃ । ತಂ । ಇಮಾಃ । ಋಚಃ । ತಂ ।
ಅಗ್ನಿಂ । ವರ್ಧಯಾಮಸಿ ॥ ೧೧ ॥

ಸಾಯಣಭಾಷ್ಯಂ

ಮೇಧಾತಿಥಿರ್ಯಾಗಯೋಗ್ಯಾ ಅತಿಥಯ ಋತ್ವಿಗ್ರೂಪಾ ಯಸ್ಯ ತಾದೃಶಃ ಕಣ್ವ ಋಷಿರ್ಋತಾದಧಿ ಆದಿತ್ಯಾದಧ್ಯಾಹೃತ್ಯ ಯಮಗ್ನಿಮಾಧೇ ದೀಪ್ತವಾನ್ ತಸ್ಯಾಗ್ನೇರಿಷೋ ಗಮನಸ್ವಭಾವಾ ರಶ್ಮಯಃ ಪ್ರ ದೀದಿಯುಃ । ಪ್ರಕರ್ಷೇಣ ದೀಪ್ಯಂತೇ । ತಥಾ ತಮಗ್ನಿಮಿಮಾ ಅಸ್ಮಾಭಿಃ ಪ್ರಯುಜ್ಯಮಾನಾ ಋಚೋ ವರ್ಧಯಂತೀತಿ ಶೇಷಃ । ವಯಮಪಿ ತಮಗ್ನಿಂ ವರ್ಧಯಾಮಸಿ । ಸ್ತೋತ್ರೈರ್ವರ್ಧಯಾಮಃ ॥ ಈಧೇ । ಞಿಇಂಧೀ ದೀಪ್ತೌ । ಇಂಧಿಭವತಿಭ್ಯಾಂ ಚ । ಪಾ. ೧-೨-೬ । ಇತಿ ಲಿಟಃ ಕಿತ್ತ್ವಾದನಿದಿತಾಮಿತಿ ನಕಾರಲೋಪಃ । ದ್ವಿರ್ಭಾವಹಲಾದಿಶೇಷಯೋಃ ಕೃತಯೋಃ ಸವರ್ಣದೀರ್ಘಃ । ಪ್ರತ್ಯಯಸ್ವರಃ । ಯದ್ವೃತ್ತಯೋಗಾದನಿಘಾತಃ । ಇಷಃ । ಇಷ ಗತೌ । ಇಷ್ಯಂತಿ ಗಚ್ಛಂತೀತೀಷೋ ರಶ್ಮಯಃ । ದೀದಿಯುಃ । ದೀದೇತಿಶ್ಛಾಂದಸೋ ಧಾತುರ್ದೀಪ್ತಿಕರ್ಮಾ । ಲಿಟ್ಯುಸಿ ಯಜಾದೇಶಃ । ಏರನೇಕಾಚ ಇತಿ ಯಣಾದೇಶಾಭಾವಶ್ಛಾಂದಸಃ । ವರ್ಧಯಾಮಸಿ । ಇದಂತೋ ಮಸಿರಿತಿ ಮಸ ಇಕಾರಾಗಮಃ ॥

॥ ಪ್ರತಿಪದಾರ್ಥ ॥

**ಮೇಧ್ಯಾತಿಥಿಃ**— ಯಾಗಯೋಗ್ಯರಾಗಿಯೂ ಋತ್ವಿಕ್ಕುಗಳ ರೂಪದಲ್ಲಿಯೂ ಇರತಕ್ಕ ಅತಿಥಿಗಳುಳ್ಳ । **ಕಣ್ವಃ**—ಕಣ್ವನೆಂಬ ಋಷಿಯು । **ಋತಾದಧಿ**—ಸೂರ್ಯನಿಗಿಂತಲೂ ಹೆಚ್ಚಾಗಿ । **ಯಂ ಅಗ್ನಿಂ**—ಯಾವ ಅಗ್ನಿಯನ್ನು । **ಈಧೇ**— ಪ್ರಜ್ವಲಿಸುವಂತೆ ಮಾಡಿದನೋ । **ತಸ್ಯ**— ಆ ಅಗ್ನಿಯ । **ಇಷಃ**— ಸಂಚಾರ ಸ್ವಭಾವವುಳ್ಳ ಕಿರಣಗಳು । **ಪ್ರ ದೀದಿಯುಃ**— ಅಧಿಕವಾಗಿ ಪ್ರಕಾಶಿತವಾಗಿವೆ (ಹಾಗೆಯೇ) । **ತಂ**— ಆ ಅಗ್ನಿಯನ್ನು ।

**ಇಮಾಃ**— ನಮ್ಮಿಂದ ಉಚ್ಚರಿಸಲ್ಪಟ್ಟ | **ಋಚಃ**— ಋಕ್ಕುಗಳು | (**ವರ್ಧಯಂತಿ**— ವಿಕಾಸಹೊಂದುವಂತೆ ಮಾಡುತ್ತವೆ (**ವಯಂ ಅಪಿ**— ನಾವೂ ಕೂಡ) **ತಂ ಅಗ್ನಿಂ**— ಆ ಅಗ್ನಿಯನ್ನು | **ವರ್ಧಯಾಮಸಿ**— ವೃದ್ಧಿಯಾಗುವಂತೆ ಮಾಡುತ್ತೇವೆ.

॥ ಭಾವಾರ್ಥ ॥

ಕಣ್ವನೆಂಬ ಮಹರ್ಷಿಯು ಅತಿಥಿಸತ್ಕಾರದಲ್ಲಿ ಯಾವಾಗಲೂ ಪ್ರಸಿದ್ಧನು. ಅವನ ಅತಿಥಿಗಳು ಪೂಜಾ ಯೋಗ್ಯರಾಗಿಯೂ, ಯಾಗಮಾಡುವ ಅರ್ಹತೆಯುಳ್ಳವರಾಗಿಯೂ ಇದ್ದು ಋತ್ವಿಗ್ರೂಪಗಳಲ್ಲಿ ಅವನ ಅತಿಥ್ಯವನ್ನು ಸ್ವೀಕರಿಸುತ್ತಾರೆ. ಆ ಅತಿಥಿಗಳ ಸಹಾಯದಿಂದ ಕಣ್ವನು ಯಜ್ಞಮಾಡಿ ಅಗ್ನಿಯನ್ನು ಸೂರ್ಯನಿಗಿಂತಲೂ ಹೆಚ್ಚಾಗಿ ಪ್ರಜ್ವಲಿಸುವಂತೆ ಮಾಡುತ್ತಾನೆ. ಗಂಭೀರವಾದ ಸಂಚಾರವುಳ್ಳ ಅವನ ಕಿರಣಗಳು ಅಧಿಕವಾಗಿ ಪ್ರಕಾಶಿತವಾಗಿವೆ. ನಾವು ಉಚ್ಚರಿಸಿದ ಋಕ್ಕುಗಳು ಆ ಅಗ್ನಿಯು ವಿಕಾಸಹೊಂದುವಂತೆ ಮಾಡುತ್ತವೆ. ನಾವೂ ಸಹ ಯಜ್ಞಮಾಡಿ ಆ ಅಗ್ನಿದೇವನು ವೃದ್ಧಿಹೊಂದುವಂತೆ ಮಾಡುತ್ತೇವೆ.

## English Translation

The rays of that Agni whom Medhyatithi Kanwa made more brilliant than the sun, shine brightly ; we praise (extol) that same Agni by reciting hymns.

॥ ವಿಶೇಷ ವಿಷಯಗಳು ॥

**ಋತಾತ್—ಆದಿತ್ಯಾತ್ |** ಸೂರ್ಯನಿಂದ, **ಋತೇನಾದಿತ್ಯಸ್ಸತ್ಯಪತಿ** (ತೈ. ಉ.) ಎಂದು ಶ್ರುತಿವಾಕ ವಿರುವುದು.

**ಇಷಃ—ಗಮನಸ್ವಭಾವಾ ರಶ್ಮಯಃ |** ಹರಡುವ ಸ್ವಭಾವವುಳ್ಳ ಅಥವಾ ವ್ಯಾಪಿಸುವ ಸ್ವಭಾವವುಳ್ಳ ರಶ್ಮಿಗಳು.

**ಇಮಾ ಋಚಃ**— ಈಗ ನಾವು ಸ್ತೋತ್ರಮಾಡುತ್ತಿರುವ ಈ ಋಕ್ಕುಗಳು.

**ಅಗ್ನಿಂ ವರ್ಧಯಾಮಸಿ—ಅಗ್ನಿಂ ಸ್ತೋತ್ರೈರ್ವರ್ಧಯಾಮಃ |** ಅಗ್ನಿಯನ್ನು ಸ್ತುತಿರೂಪವಾದ ಋಕ್ಕುಗಳಿಂದ ಪ್ರಶಂಸೆಮಾಡುತ್ತೇವೆ.

॥ ವ್ಯಾಕರಣಪ್ರಕ್ರಿಯಾ ॥

**ಈಧೇ**— ಞಿಇನ್ಧೀ ದೀಪ್ತೌ ಧಾತು. ಲಿಟ್, ತ, **ಲಿಟಸ್ತಝಯೋಃ**—, ಎಂದು ಏಶ್, **ಇನ್ಧಿ ಭವತಿಭ್ಯಾಂ ಚ** (ಪಾ ಸೂ. ೧-೨-೬) ಞಿಇನ್ಧೀ ದೀಪ್ತೌ, ಭೂ ಸತ್ತಾಯಾಂ ಈ ಧಾತುಗಳ ಮುಂದೆ ಇದ್ದರೂ

ಲಿಟ್ ಕಿತ್ ಆಗುತ್ತೆ ಎಂದು ಅರ್ಥ, ಇನ್ಧಿ ಧಾತು ಇಜಾದಿಯೂ ಗುರುಮತ್ತೂ ಆಗಿರುವುದರಿಂದ **ಇಜಾದೇಶ್ಚ ಗುರುಮತೋಽನೃಚ್ಛಃ** (ಪಾ. ಸೂ. ೩-೧-೩೬) ಎಂದು ಲಿಟ್‌ಗೆ ಆಮ್ ಬರುತ್ತೆ. **ಅಮನ್ತ್ರೇ** ಎಂಗು ನಿಷೇಧ ಬರುವುದರಿಂದ ಛಂದಸ್ಸಿನಲ್ಲಿ ಯದ್ಯಪಿ ಆಮ್ ಬರುವುದಿಲ್ಲ. ಆದರೂ **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂದು ಸಾರ್ವಧಾತುಕ ಸಂಜ್ಞೆಯೂ ಇರುವುದರಿಂದ **ಸಾರ್ವಧಾತುಕ ಮಪಿತ್** (ಪಾ. ಸೂ. ೧-೨-೪) ಎಂದು ಙಿತ್ವ ಬರುತ್ತೆ. ಏವಂಚ ಕಿತ್ವವಿದ್ದರೆ ಬರುವ ಕಾರ್ಯಗಳು ಙಿತ್ವವಿದ್ದರೂ ಬರಬಹುದು. ಭೂಧಾತುವಿನ ಮುಂದೆ ಇರುವ ಲಿಟ್‌ಗೆ ವುಗಾಗಮವು ನಿತ್ಯವಾಗಿ ಬರುವುದರಿಂದ ವೃದ್ಧ್ಯಾದಿಗಳಿಗೆ ಪ್ರಾಪ್ತಿಯೇ ಇಲ್ಲ, ಏವಂಚ **ಇನ್ಧಿ ಭವತಿಭ್ಯಾಂಚ** ಎಂಬುದು ಪ್ರತ್ಯಾಖ್ಯಾನ ಮಾಡಲ್ಪಟ್ಟಿದೆ. **ಅನಿದಿತಾಂ ಹಲ ಉಪಧಾಯಾಃ ಕ್ಙಿತಿ** (ಪಾ. ಸೂ. ೬-೪-೨೪) ಎಂದು ಇನ್ಧ್ ಧಾತುವಿನ ನಕಾರಕ್ಕೆ ಲೋಪ ಇಧ್+ಏ, ದ್ವಿತ್ವ, ಅಭ್ಯಾಸಲೋಪ, ಸವರ್ಣದೀರ್ಘ. **ಯಮಗ್ನಿಂ** ಎಂದು ಯದ್ವೃತ್ತಯೋಗವಿರುವುದರಿಂದ ಸರ್ವಾನುದಾತ್ತಕ್ಕೆ ನಿಷೇಧ, ಪ್ರತ್ಯಯಸ್ವರ ಬರುತ್ತೆ.

**ಇಷಃ—ಇಷ ಗತೌ** ದಿವಾದಿಧಾತು ಇಷ್ಯಸ್ತಿ ಇತಿ ಇಷ, ರಶ್ಮಿಗಳು, ಆಶ್ರಯವಸ್ತುವನ್ನು ಬಿಟ್ಟು ದೂರ ಹೋಗುವುದರಿಂದ ಅವಕ್ಕೆ ಇಷಃ ಎಂದು ಹೇಳುತ್ತಾರೆ.

**ದೀದಿಯುಃ**—ದೀದಿ ಧಾತುವಿಗೆ ದೀಪ್ತಿ ಎಂದರ್ಥ, ಇದಕ್ಕೆ ಛಂದಸ್ಸಿನಲ್ಲಿ ಮಾತ್ರ ಪ್ರಯೋಗ, ಇದರ ಮುಂದೆ ಲಿಟ್, ಝಿ, ಉಸ್, ದೀದಿ+ಉಸ್ **ಅಚಿಶ್ನು—,** ಎಂದು ಇಯಙಾದೇಶ, **ಏರನೇಕಾಚೋಸಂಯೋಗ-ಪೂರ್ವಸ್ಯ** (ಪಾ. ಸೂ. ೬-೪-೮೨) ಧಾತ್ವವಯವಸಂಯೋಗ ಪೂರ್ವಕವಲ್ಲದ ಇವರ್ಣವನ್ನು ಕೊನೆಯಲ್ಲಿ ಹೊಂದಿರುವ ಧಾತುವನ್ನು ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ಯಣ್ ಬರುತ್ತೆ ಎಂದು ವಿಹಿತವಾದ ಯಣಾದೇಶವು **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ** (ಪರಿಭಾ ೩೫) ಎಂದು ವಿಕಲ್ಪವಾದ್ದರಿಂದ ಇಲ್ಲಿ ಬರುವುದಿಲ್ಲ. ಹೀಗೆಯೇ ದ್ವಿತ್ವವೂ ಬರುವುದಿಲ್ಲ ಎಂದು ತಿಳಿಯುವುದು.

**ವರ್ಧಯಾಮಸಿ—ಇದನ್ತೋಮಸಿ** (ಪಾ. ಸೂ. ೭-೧-೪೬) ಮಸಿ ಎಂದು ಅವಿಭಕ್ತಿಕ ನಿರ್ದೇಶ, ಮಸ್ ಎಂಬುದು ಇದಂತವಾಗುತ್ತೆ ಎಂದರೆ ಇಕಾರವನ್ನು ಕೊನೆಯ ಅವಯವವುಳ್ಳದ್ದಾಗಿ ಆಗುತ್ತೆ ಎಂದು ಸೂತ್ರಾರ್ಥ. ಇದರಿಂದ ಣಿಚ್‌ಪ್ರತ್ಯಯಾಂತವಾದ ವೃಧ್ ಧಾತುವಿನ ಮುಂದೆ ಬರುವ ಲಟ್ ಉತ್ತಮಪುರುಷ ಬಹುವಚನವಾದ ಮಸ್‌ಗೆ ಇಯು ಅಂತಾವಯವವಾಗಿ ಬರುತ್ತೆ, ವರ್ಧಯಾಮಸಿ ಎಂದಾಗುತ್ತೆ. ||೧೧||

---

॥ ಸಂಹಿತಾಪಾಠಃ ॥

ರಾಯಸ್ಪೂರ್ಧಿ ಸ್ವಧಾವೋಽಸ್ತಿ ಹಿ ತೇಽಗ್ನೇ ದೇವೇಷ್ವಾಪ್ಯಂ।
ತ್ವಂ ವಾಜಸ್ಯ ಶ್ರುತ್ಯಸ್ಯ ರಾಜಸಿ ಸ ನೋ ಮೃಳ ಮಹಾಁ ಅಸಿ ||೧೨||

॥ ಪದಪಾಠಃ ॥

ರಾಯಃ । ಪೂರ್ಧಿ । ಸ್ವಧಾಽವಃ । ಅಸ್ತಿ । ಹಿ । ತೇ । ಅಗ್ನೇ । ದೇವೇಷು ।
ಆಪ್ಯಂ ।
ತ್ವಂ । ವಾಜಸ್ಯ । ಶ್ರುತ್ಯಸ್ಯ । ರಾಜಸಿ । ಸಃ । ನಃ । ಮೃಳ । ಮಹಾನ್ ।
ಅಸಿ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಸ್ವಧಾವೋಽನ್ನವನ್ನಗ್ನೇ । ಸ್ವಧಾ ಅರ್ಕ ಇತಿ ತನ್ನಾಮಸು ಪಾಠಾತ್ । ಅಸ್ಮಾಕಂ ರಾಯೋ ಧನಾನಿ ಪೂರ್ಧಿ । ಪೂರಯ ದೇಹಿ ವಾ । ಪೂರ್ಧಿ ಪೂರಯ ದೇಹೀತಿ ವಾ । ನಿ. ೪-೩ । ಇತಿ ಯಾಸ್ಕಃ । ಹೇ ಅಗ್ನೇ ತೇ ತವ ದೇವೇಷ್ವಾಪ್ಯಂ ಪ್ರಾಪಣೀಯಂ ಸಖ್ಯಮಸ್ತಿ ಹಿ । ವಿದ್ಯತೇ ಖಲು । ತ್ವಂ ಶ್ರುತ್ಯಸ್ಯ ಶ್ರವಣೀಯಸ್ಯ ವಾಜಸ್ಯಾನ್ನಸ್ಯ ರಾಜಸಿ । ಈಶ್ವರೋ ಭವಸಿ । ಸ ತ್ವಂ ನೋಽಸ್ಮಾನ್ಮೃಳ । ಸುಖಯ । ಮಹಾನ್ ಗುಣೈರಧಿಕೋಽಸಿ ॥ ರಾಯಃ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಪೂರ್ಧಿ । ಪೄ ಪಾಲನಪೂರಣಯೋಃ । ಶ್ರುಶೃಣುಪೄಕೃವೃಭ್ಯಶ್ಛಂದಸೀತಿ ಹೇರ್ಧಿರಾದೇಶಃ । ಬಹುಲಂ ಛಂದಸೀತಿ ಶಪೋ ಲುಕ್ । ಹೇರಪಿತ್ತ್ವೇನ ಙಿತ್ತ್ವಾದ್ಗುಣಾಭಾವ ಉದೋಷ್ಠ್ಯಪೂರ್ವಸ್ಯ । ಪಾ. ೭-೧-೧೦೨ । ಇತ್ಯುತ್ವಂ । ಹಲಿ ಚೇತಿ ದೀರ್ಘಃ । ಸ್ವಧಾವಃ । ಸಂಬುದ್ಧೌ ಮತುವಸೋರಿತಿ ರುತ್ವಂ । ಆಪ್ಯಂ । ಅದುಪಧತ್ವಾಭಾವೇಽಪಿ ವ್ಯತ್ಯಯೇನ ಪೋರದುಪಧಾತ್ । ಪಾ. ೩-೧-೯೮ । ಇತಿ ಕರ್ಮಣಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ ಯದ್ವಾ । ಣ್ಯತಿ ಚ್ಛಾಂದಸಮಾದ್ಯುದಾತ್ತತ್ವಂ । ಶ್ರುತ್ಯಸ್ಯ । ಶ್ರು ಶ್ರವಣೇ । ಔಣಾದಿಕಃ ಕ್ಯಪ್ । ತುಗಾಗಮಃ । ಯದ್ವಾ । ಶ್ರುತಿಶಬ್ದಾದ್ಭವೇ ಛಂದಸೀತಿ ಯತ್ । ಮೃಳ । ಮೃಡ ಸುಖನೇ । ಶಸ್ಯ ಙಿತ್ತ್ವಾಲ್ಲಘೂಪಧಗುಣಾಭಾವಃ ॥

॥ ಪ್ರತಿಪದಾರ್ಥ ॥

**ಸ್ವಧಾವಃ**— ಅನ್ನಯುಕ್ತ (ದಾತ) ನಾದ ಅಗ್ನಿಯೇ । (**ಅಸ್ಮಾಕಂ**— ನಮಗೆ) **ರಾಯಃ**— ಧನಗಳನ್ನು । **ಪೂರ್ಧಿ**— ತುಂಬಿಸು । **ಅಗ್ನೇ**— ಎಲೈ ಅಗ್ನಿಯೇ । **ತೇ**—ನಿನಗೆ । **ದೇವೇಷು**—ದೇವತೆಗಳಲ್ಲಿ । **ಆಪ್ಯಂ**— (ನಮ್ಮನ್ನು) ಸೇರಿಸತಕ್ಕ ಸ್ನೇಹವು । **ಅಸ್ತಿ ಹಿ**— ಇರುವುದು ಸರಿಯಷ್ಟೆ । **ತ್ವಂ**— ನೀನು । **ಶ್ರುತ್ಯಸ್ಯ**—ಕಿವಿಗೆ ಬೀಳತಕ್ಕ (ಪ್ರಸಿದ್ಧವಾದ) **ವಾಜಸ್ಯ**--ಅನ್ನಕ್ಕೆ (ಆಹಾರಕ್ಕೆ) । **ರಾಜಸಿ**— ಪ್ರಭುವಾಗಿದ್ದೀಯೆ. । **ಸಃ ತ್ವಂ**— ಆ ನೀನು । **ನಃ**—ನಮ್ಮನ್ನು । **ಮೃಳ**—ಸುಖಪಡಿಸು । **ಮಹಾನ್ ಅಸಿ**— ಶ್ರೇಷ್ಠಗುಣಗಳಿಂದ ಕೂಡಿ ದೊಡ್ಡವನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಉತ್ತಮಗುಣಗಳಿಂದ ಕೂಡಿ ಶ್ರೇಷ್ಠನಾಗಿದ್ದೀಯೆ. ಯಾವಾಗಲೂ ಅನ್ನ ಸಂಪತ್ತಿನಿಂದ ಕೂಡಿ ನಮಗೆಲ್ಲ ಅನ್ನದಾತನಾಗಿದ್ದೀಯೆ. ಪ್ರಸಿದ್ಧವಾದ ಅನ್ನಾಹಾರಕ್ಕೆಲ್ಲ ಪ್ರಭುವಾಗಿದ್ದೀಯೆ. ನಮಗೆ ಅನ್ನದಾನಮಾಡಿ ನಮ್ಮನ್ನು ಸುಖಪಡಿಸು. ನೀನು ದೇವತೆಗಳ ಆಪ್ತಸ್ನೇಹಿತನಾದುದರಿಂದ ನಮ್ಮನ್ನೂ ಆ ದೇವತೆಗಳೊಡನೆ ಸೇರುವಂತೆ ಮಾಡು. ಅವರ ತೃಪ್ತ್ಯರ್ಥವಾಗಿ ಯಜ್ಞವನ್ನು ಮಾಡುವುದಕ್ಕೆ ಬೇಕಾದ ಐಶ್ವರ್ಯ ವನ್ನು ನಮಗೆ ತುಂಬಿಸು. (ತಂದುಕೊಡು.)

## English Translation

Agni, giver of food, fill us with wealth ; you are friendly with the gods (or our friendship of the gods is obtainable through you) you are lord of famous food, make happy, for you are great.

॥ ವಿಶೇಷವಿಷಯಗಳು ॥

**ಪೂರ್ಧಿ—ಪೂರಯ ದೇಹಿ ವಾ ।** ಪೂರ್ಣಗೊಳಿಸು ಎಂದರೆ ಕೊಡು ಎಂದರ್ಥವು. **ಪೂರ್ಧಿ ಪೂರಯ ದೇಹೀತಿ ವಾ** ಎಂದು ಯಾಸ್ಕರು ಪೂರ್ಧಿಶಬ್ದಕ್ಕೆ ಅರ್ಥವಿವರಣೆ ಮಾಡಿರುವರು (ನಿ. ೪-೩)

**ಸ್ವಧಾವಃ—ಸ್ವಧಾವಾನ್** ಶಬ್ದದ ಸಂಬುದ್ಧಿ ಪ್ರಥಮೈಕವಚನವು. ಅಂಧಃ ವಾಜಃ ಮೊದಲಾದ ಇಪ್ಪ ತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಸ್ವಧಾ ಎಂಬ ಶಬ್ದವು ಪಠಿತವಾಗಿರುವುದರಿಂದ ಸ್ವಧಾ ಎಂದರೆ ಅನ್ನವು, ಆಹಾ ರವು. ಸ್ವಧಾವಾನ್ ಎಂದರೆ ಅನ್ನವುಳ್ಳವನು ಅಥವಾ ಆಹಾರವುಳ್ಳವನು ಎಂದರ್ಥವು.

**ಆಪ್ಯಂ—ಪ್ರಾಪಣೀಯಂ ।** ಹೊಂದಲ್ಪಡಲು ಯೋಗ್ಯವಾದ, ಹೊಂದುವುದಕ್ಕೆ ಸಾಧ್ಯವಾದ ; ದೇವತೆ ಗಳ ಸ್ನೇಹವು ನಿನ್ನಿಂದ ಮಾತ್ರ ಹೊಂದಲು ಸಾಧ್ಯನೆಂದಭಿಪ್ರಾಯವು.

**ಶ್ರುತಸ್ಯ—ಶ್ರವಣೀಯಸ್ಯ, ಪ್ರಸಿದ್ಧಸ್ಯ ।** ಪ್ರಸಿದ್ಧವಾದ, ಎಲ್ಲರಿಗೂ ಅವಶ್ಯಕವಾಗಿ ಬೇಕಾದ,

**ರಾಜಸಿ— ಈಶ್ವರೋ ಭವಸಿ ।** ಮುಖ್ಯ ಅಧಿಪತಿಯಾಗಿ ಪ್ರಕಾಶಿಸುವೆ.

॥ ವ್ಯಾಕರಣಪ್ರಕ್ರಿಯಾ ॥

**ರಾಯಃ—ಊಡಿದಂ ಪದಾದ್ಯಪ್ಪುಮ್ರೈದ್ಯುಭ್ಯಃ** ಎಂದು ಶಸ್ ವಿಭಕ್ತಿಯು ಉದಾತ್ತವಾಗುತ್ತೆ.

**ಪೂರ್ಧಿ—**ಪೄ, ಪಾಲನಪೂರಣಯೋಃ ಧಾತು, ಲೋಟ್, ಸಿಪ್, ಸಿಗೆ ಹಿ ಆದೇಶ. ಶಪ್‌ಗೆ **ಬಹುಲಂ ಛಂದಸಿ** ಎಂದು ಲುಕ್, **ಶ್ರು ಶೃಣು ಪೃ ಕೃ ವೃಭ್ಯಶ್ಛಂದಸಿ** (ಪಾ. ಸೂ ೬-೪-೧೦೨) ಈ ಧಾತುಗಳ ಮುಂದೆ

ಇರುವ ಹಿಗೆ ಧಿ ಆದೇಶ ಬರುತ್ತೆ ಎಂದು ಹಿಗೆ ಧಿ ಆದೇಶ, **ಸೇರ್ಹ್ಯಪಿಚ್ಚ** ಎಂದು ಬಂದ ಹಿಯು ಅಪಿತ್ತಾಗುತ್ತೆ. ಆದ್ದರಿಂದ **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಪಿತ್ ಅಲ್ಲದ ಸಾರ್ವಧಾತುಕವು ಙಿತ್ ಆಗುತ್ತೆ. **ಕ್ಙಿತಿಚ** (ಪಾ. ಸೂ ೧-೧-೫) ಎಂದು ಗುಣಕ್ಕೆ ನಿಷೇಧ. **ಉದೋಷ್ಠ್ಯಪೂರ್ವಸ್ಯ** (ಪಾ. ಸೂ. ೭-೧ ೧೦೨) ಅಂಗಾವಯವವಾದ ಓಷ್ಠ್ಯವರ್ಣಗಳನ್ನು ಪೂರ್ವದಲ್ಲಿ ಹೊಂದಿರುವ ಋಗೆ ಉ ಬರುತ್ತೆ ಎಂದರ್ಥ. ಉ, ಪವರ್ಗ, ಉಪಧ್ಮಾನೀಯ, ಇವು ಓಷ್ಠ್ಯಗಳು, ಪುರ್+ಧಿ, **ಹಲಿಚ** (ಪಾ. ಸೂ. ೮-೨-೭೭) ರೇಫ ವಕಾರಗಳನ್ನು ಕೊನೆಯಲ್ಲುಳ್ಳ ಧಾತುಗಳ ಉಪಧಾಭೂತಗಳಾದ ಇ-ಉ-ಋಗಳಿಗೆ ದೀರ್ಘ ಬರುತ್ತೆ ಎಂದು ದೀರ್ಘ.

**ಸ್ವಧಾವಃ**—ಸ್ವಧಾ ಅಸ್ಯ ಅಸ್ತೀತಿ ಸ್ವಧಾವಾನ್, **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** ಎಂದು ಮತುಪ್, **ಮತುವಸೋರು ಸಂಬುದ್ಧೌ ಛಂದಸಿ** (ಪಾ. ಸೂ. ೮-೩-೧) ಮತುಪ್, ಅಥವಾ ವಸು ಈ ಪ್ರತ್ಯಯಗಳನ್ನು ಕೊನೆಯಲ್ಲಿ ಹೊಂದಿರುವ ಶಬ್ದದ ಕೊನೆಯ ವರ್ಣಕ್ಕೆ ರು ಆದೇಶ ಬರುತ್ತೆ ಎಂದು ರು ಆದೇಶ, **ಮಾದುಪಧಾಯಾಶ್ಚ—**, ಎಂದು ಮಕಾರಕ್ಕೆ ವಕಾರ.

**ಆಪ್ಯಮ್**—ಆಪ್ಲೃ ವ್ಯಾಪ್ತೌ ಇದು ಪ್ರಸ್ವಾಕಾರವನ್ನು ಉಪಧೆಯಲ್ಲಿ ಹೊಂದಿಲ್ಲ. ಆದರೂ ಪ್ರತ್ಯಯದಿಂದ **ಪೋರದುಪಧಾತ್** (ಪಾ. ಸೂ. ೩-೧-೯೮) ಪವರ್ಗಾಂತವೂ ಅದುಪಧವೂ ಆದ ಧಾತುವಿನ ಮುಂದೆ ಯತ್ ಬರುತ್ತೆ-ಎಂದು ಯತ್ ಬರುತ್ತೆ. **ಯತೋऽನಾವಃ** (ಪಾ ಸೂ. ೬-೧-೨೧೩) ನಾವ ಶಬ್ದವನ್ನು ಬಿಟ್ಟು ಯತ್ ಪ್ರತ್ಯಯಾಂತವು ಎರಡು ಅಚ್ಚುಳ್ಳದ್ದಾಗಿದ್ದರೆ ಅದರ ಆದಿಯು ಉದಾತ್ತವಾಗುತ್ತೆ ಎಂದು ಆದ್ಯುದಾತ್ತ, ಅಥವಾ **ಋಹಲೋರ್ಣ್ಯತ್** ಎಂದು ಣ್ಯತ್ ಪ್ರತ್ಯಯ. ಛಾಂದಸವಾಗಿ ಆದ್ಯುದಾತ್ತ ಬರುತ್ತೆ.

**ಶ್ರುತ್ಯಸ್ಯ**—ಶ್ರು ಶ್ರವಣೇ ಧಾತು. ಔಣಾದಿಕವಾದ ಕ್ಯಪ್, **ಹ್ರಸ್ವಸ್ಯ ಪಿತಿಕೃತಿ ತುಕ್** ಎಂದು ತುಕ್ ಆಗಮ, ಅಥವಾ ಶ್ರುತೌ ಭವಃ ಎಂದು ವಿಗ್ರಹ. **ಭವೇಛಂದಸಿ** (ಪಾ. ಸೂ. ೪-೪-೧೧೦) ಎಂದು ಯತ್ **ಯಸ್ಯೇತಿ ಚ** ಎಂದು ಇಕಾರಕ್ಕೆ ಲೋಪ.

**ಮೃಳ**—ಮೃಡ ಸುಖನೇ, ಲೋಟ್, ಸಿಪ್, ಹಿ ಆದೇಶ. **ತುದಾದಿಭ್ಯಃ ಶಃ** ಎಂದು ಶ ವಿಕರಣ, ಇದು ಙಿತ್, ಆದ್ದರಿಂದ ಲಘೂಪಧಗುಣ ಬರುವುದಿಲ್ಲ. **ಅತೋಹೇಃ** ಎಂದು ಹಿಗೆ ಲುಕ್. ಬಹ್ವೃಚಸಂಪ್ರದಾಯದಿಂದ ಡಕಾರಕ್ಕೆ ಳಕಾರ ಬರುತ್ತೆ. ॥೧೨॥

॥ ಸಂಹಿತಾಪಾಠಃ ॥

ಊರ್ಧ್ವ ಊ ಷು ಣ ಊತಯೇ ತಿಷ್ಠಾ ದೇವೋ ನ ಸವಿತಾ।
ಊರ್ಧ್ವೋ ವಾಜಸ್ಯ ಸನಿತಾ ಯದಂಜಿಭಿರ್ವಾಘದ್ಭಿರ್ವಿಹ್ವ-
ಯಾಮಹೇ ॥ ೧೩ ॥

॥ ಪದಪಾಠಃ ॥

ಊರ್ಧ್ವಃ । ಊಂ ಇತಿ । ಸು । ನಃ । ಊತಯೇ । ತಿಷ್ಠ । ದೇವಃ । ನ । ಸವಿತಾ ।

ಊರ್ಧ್ವಃ । ವಾಜಸ್ಯ । ಸನಿತಾ । ಯತ್ । ಅಂಜಿಽಭಿಃ । ವಾಘತ್ಽಭಿಃ । ವಿಽಹ್ವಯಾಮಹೇ ॥ ೧೩ ॥

॥ ಸಾಯಣಭಾಷ್ಯಂ ॥

ಯೂಪೋಚ್ಛ್ರಯಣ ಊರ್ಧ್ವ ಊ ಷು ಣ ಊತಯ ಇತಿ ದ್ವೇ । ಪಶಾವಿಷ್ಟಿರಿತಿ ಖಂಡೇ ಸೂತ್ರಿತಂ । ಊರ್ಧ್ವ ಊ ಷು ಣ ಊತಯ ಇತಿ ದ್ವೇ । ಅ. ೩-೧ । ಇತಿ ॥ ಏತೇ ಏವಾಭಿಷ್ಟವೇಽಪಿ ವಿನಿಯುಕ್ತೇ । ಅಥೋತ್ತರ ಮಿತಿ ಖಂಡೇ ಸೂತ್ರಿತಂ । ಸಖೇ ಸಖಾಯಮಭ್ಯಾ ವವೃತ್ಸ್ವೋರ್ಧ್ವ ಊ ಷು ಣ ಊತಯ ಇತಿ ದ್ವೇ । ಆ. ೪-೭ । ಇತಿ ॥

ಹೇ ಯೂಪ ಯದ್ವಾ ಯೂಪಾತ್ಮಕದಾರುನಿಷ್ಠಾಗ್ನೇ ನೋಽಸ್ಮಾಕಮೂತಯೇ ರಕ್ಷಣಾಯೋರ್ಧ್ವ ಉನ್ನತಸ್ತಿಷ್ಠ । ತತ್ರ ದೃಷ್ಟಾಂತಃ । ಸವಿತಾ ದೇವೋ ನ । ಯಥಾ ಸೂರ್ಯೋ ದೇವ ಉನ್ನತಸ್ತಿಷ್ಠತಿ ತದ್ವತ್ । ಊರ್ಧ್ವ ಉನ್ನತಸ್ಸನ್ ವಾಜಸ್ಯಾನ್ನಸ್ಯ ಸನಿತಾ ದಾತಾ ಭವಿಷ್ಯಸಿ । ಯದ್ಯಸ್ಮಾತ್ಕಾರಣಾದಂಜಿಭಿರಾಜ್ಯೇನ ಯೂಪಮಂಜದ್ಭಿರ್ವಾಘದ್ಭಿರ್ಯಜ್ಞಂ ವಹದ್ಭಿರೃತ್ವಿಗ್ಭಿಃ ಸಹ ವಿಹ್ವಯಾಮಹೇ ಅನ್ನದಾನಾಯ ತ್ವಾಂ ವಿಶೇಷೇಣಾಹ್ವಯಾಮಃ । ತಸ್ಮಾದನ್ನಸ್ಯ ದಾತಾ ಭವೇತಿ ಪೂರ್ವತ್ರಾನ್ವಯಃ ॥ ಊ ಷು ಣಃ । ಇಕಃ ಸುಞಿ । ಪಾ. ೬-೩-೧೩೪ । ಇತಿ ಸಂಹಿತಾಯಾಂ ದೀರ್ಘಃ । ಸುಞಃ । ಪಾ. ೮-೩-೧೦೭ । ಇತಿ ಷತ್ವಂ । ನಶ್ಚ ಧಾತುಸ್ಥೋರುಷುಭ್ಯಃ । ಪಾ. ೮-೪-೨೭ । ಇತಿ ಣತ್ವಂ । ಊತಯೇ । ಅವತೇಃ ಕ್ತಿನಿ ಜ್ವರತ್ವರೇತ್ಯಾದಿನಾ ಊಟ್ ಊತಿಯೂತೀತ್ಯಾದಿನಾ ಕ್ತಿನ್ನುದಾತ್ತತ್ವಂ । ತಿಷ್ಠ । ತಿಷ್ಠ । ಶಪಿ ಪಾಘ್ರೇತ್ಯಾದಿನಾ ತಿಷ್ಠಾದೇಶಃ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ವಾಜಸ್ಯ । ಕ್ರಿಯಾಗ್ರಹಣಂ ಕರ್ತವ್ಯಂ । ಪಾ. ೧-೪-೩೨-೧ । ಇತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ । ಸನಿತಾ । ಷಣು ದಾನೇ । ಲುಟಿ ತಾಸಿಃ । ವಲಾದಿಲಕ್ಷಣ ಇಟ್ । ಪಾ. ೭-೨-೩೫ । ತಿಪೋ ಡಾದೇಶಃ । ಪಾ. ೨-೪-೮೫ । ಟಿಲೋಪಃ । ಉದಾತ್ತನಿವೃತ್ತಿಸ್ವರೇಣ ತಿಬಾದೇಶಸ್ಯೋದಾತ್ತತ್ವೇ ಪ್ರಾಪ್ತೇ ತಾಸ್ಯನುದಾತ್ತೇದಿತಿ ತಸ್ಯಾನುದಾತ್ತತ್ವಂ ಧಾತುಸ್ವರಃ । ನ ಲುಟ್ । ಪಾ. ೮-೧-೨೯ । ಇತಿ ನಿಘಾತಪ್ರತಿಷೇಧಃ । ಅಂಜಿಭಿಃ । ಅಂಜೂ ವ್ಯಕ್ತಿಮ್ರಕ್ಷಣಗತಿಷು । ಖನಿಕಷ್ಯಂಜೀತ್ಯಾದಿನಾ । ಉ. ೪-೧೩೯ । ಇಪ್ರತ್ಯಯಃ । ವಿಹ್ವಯಾಮಹೇ । ನಿಸಮುಪವಿಭ್ಯೋ ಹ್ವಃ । ಪಾ. ೧-೩-೩೦ । ಇತ್ಯಕರ್ತ್ರಭಿಪ್ರಾ-

**ಯೇऽಸ್ಯಾತ್ಮನೇಪದಂ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ತಿಙಿ ಚೋದಾತ್ತವತೀತಿ ಗತೇರನುದಾತ್ತತ್ವಂ । ಯದ್ವೃತ್ತಯೋಗಾದನಿಘಾತಃ ॥**

॥ ಪ್ರತಿಪದಾರ್ಥ ॥

(ಎಲೈ ಯೂಪಸ್ತಂಭದಲ್ಲಿ ಅಡಕವಾಗಿರುವ ಅಗ್ನಿಯೇ) **ಸವಿತಾ ದೇವೋ ನ**— ಸವಿತೃದೇವತೆಯು (ಸೂರ್ಯದೇವನು) ಉನ್ನತವಾಗಿ ಮೇಲಕ್ಕೆದ್ದು ನಿಂತಿರುವಂತೆ (ನೀನೂ ಕೂಡ) । **ನಃ**— ನಮ್ಮ । **ಊತಯೇ**-ರಕ್ಷಣೆಗೋಸ್ಕರ । **ಊರ್ಧ್ವಃ**— ಉನ್ನತವಾಗಿ ಮೇಲಕ್ಕೆಗ್ದು । **ತಿಷ್ಠ**— ನಿಲ್ಲು । **ಊರ್ಧ್ವಃ**— ಎದ್ದುನಿಂತು । **ಯತ್**— ಯಾವ ಕಾರಣದಿಂದ । **ಅಂಜಿಭಿಃ**— ಯೂಪಕ್ಕೆ ಲೇಪನ ಮಾಡತಕ್ಕ ತುಪ್ಪದೊಡನೆಯೂ । **ವಾಘದ್ಭಿಃ**— ಯಜ್ಞ ನಿರ್ವಾಹಕರಾದ ಋತ್ವಿಕ್ಕುಗಳೊಡನೆಯೂ । **ವಿಹ್ವಯಾಮಹೇ**— ವಿಶೇಷ ರೀತಿಯಿಂದ ಕರೆಯುತ್ತೇವೆಯೋ (ಆ ನಿಮಿತ್ತದಿಂದ) । **ವಾಜಸ್ಯ**— ಅನ್ನದ । **ಸನಿತಾ**— ದಾತನಾಗಿ ಆಗು.

ಭಾವಾರ್ಥ

ಎಲೈ ಅಗ್ನಿಯೇ, ನೀನು ಯೂಪಸ್ತಂಭದಲ್ಲಿ ಅಡಕವಾಗಿದ್ದೀಯೆ. ಸೂರ್ಯದೇವನು ಭೂಮಿಯ ಮರೆಯಲ್ಲಿ ಅಡಕವಾಗಿದ್ದು ಪ್ರಾಣಿಗಳ ರಕ್ಷಣೆಗೋಸ್ಕರ ಉನ್ನತವಾಗಿ ಮೇಲಕ್ಕೆದ್ದು ಬರುವಂತೆ ನೀನೂ ಸಹ ನಮ್ಮಗಳ ರಕ್ಷಣೆಗಾಗಿ ಸ್ತಂಭದಿಂದ ಹೊರಗೆದ್ದು ಕಾಣಿಸಿಕೋ. ನಾವು ನಾನಾವಿಧವಾದ ಉಪಚಾರಗಳನ್ನು ಮಾಡುತ್ತೇವೆ. ಯೂಪಸ್ತಂಭಕ್ಕೆ ಲೇಪನವನ್ನು ಹಚ್ಚಿ ಪೂಜೆ ಮಾಡಿ ಯಜ್ಞನಿರ್ವಾಹಕರಾದ ಋತ್ವಿಕ್ಕುಗಳೊಡನೆ ನಿನಗೆ ವಿಶೇಷ ರೀತಿಯಲ್ಲಿ ಆಹ್ವಾನವನ್ನು ಕೊಡುತ್ತೇವೆ. ನಮ್ಮ ಪೂಜೆಯನ್ನೂ ಆಹ್ವಾನವನ್ನೂ ಸ್ವೀಕರಿಸಿ ನಮಗೆ ಅನ್ನದಾತನಾಗು.

English Translation

Stand up erect for our protection like the divine Savitri ; you, giver of food, be erect ; we invoke you through our annointing priests who are offering oblations.

॥ ವಿಶೇಷ ವಿಷಯಗಳು ॥

ಈ ಋಕ್ಕಿಗೂ ಮುಂದಿನ **ಊರ್ಧ್ವೋ ನಃ** ಎಂಬ ಋಕ್ಕಿಗೂ ಯೂಪ—ಎಂದರೆ ಪಶುಯಾಗದಲ್ಲಿ ಪಶುವನ್ನು ಕಟ್ಟುವ ಕಂಭ, ಅಥವಾ ದಾರು (ಸೌದೆ, ಕಟ್ಟಿಗೆ) ಮಯಾತ್ಮಕನಾದ ಅಗ್ನಿಯು ದೇವತೆಯೆಂದು ಪರಿಗಣಿಸಲ್ಪಟ್ಟಿರುವುದು ಆದುದರಿಂದ ಪಶುಯಾಗದಲ್ಲಿ ಯೂಪಸ್ತಂಭವನ್ನು ನೆಡುವ ಸಮಯದಲ್ಲಿ **ಊರ್ಧ್ವಃ ಊಷು ಣ** ಎಂದು ಮೊದಲಾದ ಎರಡು ಋಕ್ಕುಗಳನ್ನು ಪಠಿಸುವರು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ಪಶಾವಿಷ್ಟಿ**-ಎಂಬ ಖಂಡದ **ಊರ್ಧ್ವ ಊಷುಣ ಊತಯೆ ಇತಿ ದ್ವೇ** ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು. (ಆ.೩-೧) ಮತ್ತು ಅಭಿಪ್ಲವದಲ್ಲಿಯೂ **ಅಥೋತ್ತರಂ** ಎಂಬ ಖಂಡದಲ್ಲಿ **ಸಖೇ ಸಖಾಯಮಭ್ಯಾವವೃತ್ಸ್ವ** (ಋ.ಸಂ ೪-೧ ೩ ) **ಊರ್ಧ್ವ ಊಷುಣ ಊತಯೆ** (ಋ. ಸಂ. ೧-೩೬-೧೩. ಮತ್ತು ೧೪) **ಇತಿ ದ್ವೇ** ಎಂಬ ಸೂತ್ರದಿಂದ ನಿವರಿಸಲ್ಪಟ್ಟಿರುವುದು. (ಆ. ೪-೭)

**ಊತಯೇ—** ರಕ್ಷಣೆಗಾಗಿ, ಯೂಪಸ್ತಂಭವು ನಮ್ಮನ್ನು ಹೇಗೆ ರಕ್ಷಿಸುವುದು ಎಂದರೆ ಯೂಪವು ಯಜ್ಞಕ್ಕೆ ಸಹಾಯಕವಾಗಿರುವುದು. ಯಜ್ಞ ಮಾಡುವುದರಿಂದ ದೇವತೆಗಳು ನಮಗೆ ರಕ್ಷಣೆಯನ್ನೀಯುವರೆಂದಭಿಪ್ರಾಯವು.

**ದೇವೋ ನ ಸವಿತಾ—** ಪ್ರಕಾಶಮಾನನಾದ ಸೂರ್ಯನಂತೆ. ಎಂದರೆ ಸೂರ್ಯನು ಚೆನ್ನಾಗಿ ಪ್ರಕಾಶಿಸುವಾಗ ಬಹಳ ಎತ್ತರದಲ್ಲಿ (ನೆತ್ತಿಯ ಮೇಲೆ) ಇರುವಂತೆ ಎಲೈ ಯೂಪಸ್ತಂಭವೇ ನೀನೂ ಸಹ ಎತ್ತರವಾಗಿ ನಿಂತಿರು ಎಂದಭಿಪ್ರಾಯವು ನೇರವಾಗಿ ಅಥವಾ ಎತ್ತರವಾಗಿ ನಿಲ್ಲು ಎಂದು ಯೂಪಸ್ತಂಭವನ್ನು ಪ್ರಾರ್ಥಿಸುವುದು ಯಜ್ಞದಲ್ಲಿ ರೂಢಿಯಾಗಿರುವುದು. ಈ ವಿಷಯದಲ್ಲಿ—

**ಯದೂರ್ಧ್ವಸ್ತಿಷ್ಠಾ ದ್ರವಿಣೇಹ ಧತ್ತಾದ್ಯದ್ವಾ ಕ್ಷಯೋ ಮಾತುರಸ್ಯಾ ಉಪಸ್ಥೇ ।**
( ಋ ಸಂ. ೩-೮-೧ )

**ಉಚ್ಛ್ರಯಸ್ವ ವನಸ್ಪತೇ ವರ್ಷ್ಮನ್ ಪೃಥಿವ್ಯಾ ಅಧಿ ।**
(ಋ. ಸಂ ೩-೮-೩)

**ತಂ ಧೀರಾಸಃ ಕವಯ ಉನ್ನಯಂತಿ ಸ್ವಾಧ್ಯೋ೩ಮನಸಾ ದೇವಯಂತಃ**
(ಋ. ಸಂ. ೩-೮-೪)

**ಉನ್ನೀಯಮಾನಾಃ ಕವಿಭಿಃ ಪುರಸ್ತಾದ್ದೇವಾ ದೇವಾನಾಮಪಿ ಯಂತಿ ಪಾಥಃ ॥**
(ಋ ಸಂ. ೩-೮-೯.)

ಇತ್ಯಾದಿ ಋಕ್ಕುಗಳಲ್ಲಿ ಯೂಪಸ್ತಂಭವನ್ನು ಎತ್ತರವಾಗಿ ನೆಡುವ ವಿಷಯವು ಪ್ರಸ್ತಾಪಿಸಲ್ಪಟ್ಟಿದೆ

**ವಾಜಸ್ಯ ಸನಿತಾ— ಅನ್ನಸ್ಯ ದಾತಾ ।** ಅನ್ನವನ್ನು ಅಥವಾ ಆಹಾರವನ್ನು ಕೊಡುವ

**ಯದಂಜಿಭಿಃ— ಆಜ್ಯೇನ ಯೂಪಮಂಜದ್ಭಿಃ ।** ತುಪ್ಪವನ್ನು ಯೂಪಸ್ತಂಭಕ್ಕೆ ಬಳಿಯುವುದು ರೂಢಿಯು. ಅಂತಹ ಕಾರ್ಯವನ್ನು ಋತ್ವಿಕ್ಕುಗಳು ಮಂತ್ರೋಕ್ತವಾಗಿ ಮಾಡುವರು. ಅಂತಹ ಋತ್ವಿಗ್ಜನರಿಂದ ಎಂದಭಿಪ್ರಾಯವು ಯೂಪಸ್ತಂಭವನ್ನು ಘೃತದಿಂದ ಸವರುವ ವಿಷಯದಲ್ಲಿ—

**ಅಂಜಂತಿ ತ್ವಾಮಧ್ವರೇ ದೇವಯಂತೋ ವನಸ್ಪತೇ ಮಧುನಾ ದೈವ್ಯೇನ**
( ಋ. ಸಂ. ೩-೮-೧. )

ಎಂಬ ಋಕ್ಕು ಈ ಘೃತಾಂಜನ ಕ್ರಮವನ್ನು ಸ್ಪಷ್ಟವಾಗಿ ವಿವರಿಸುವುದು.

**ವಾಘದ್ಭಿಃ— ಯಜ್ಞಂ ವಹದ್ಭಿಃ ಋತ್ವಿಗ್ಭಿಃ—** ಯಜ್ಞದಲ್ಲಿ ಕಾರ್ಯಕಲಾಪಗಳನ್ನು ನಿರ್ವಹಿಸುವ ಋತ್ವಿಗ್ಜನರಿಂದ ; ಈ ವಿಷಯದಲ್ಲಿ—

**ವಾಘದ್ಭಿರ್ವಾ ವಿಹವೇ ಶ್ರೋಷಮಾಣಾ ಅಸ್ಮಾಂ ಅವಂತು ಪೃತನಾಜ್ಯೇಷು ॥**
(ಋ. ಸಂ. ೩-೮-೧೦)

ಎಂಬ ಋಕ್ಕು ಈ ವಿಷಯವನ್ನು ವಿಶದಪಡಿಸುವುದು.

**ವಿಹ್ವಯಾಮಹೇ— ವಿಶೇಷೇಣಾಹ್ವಯಾಮಃ ।** ವಿಶೇಷ ರೀತಿಯಿಂದ ಎಂದರೆ ಸ್ತೋತ್ರಾದಿಗಳಿಂದ ಆಹ್ವಾನಮಾಡುತ್ತೇವೆ.

॥ ವ್ಯಾಕರಣಪ್ರಕ್ರಿಯಾ ॥

**ಊ ಷು ಣಃ— ಇಕಸ್ಸುಙಿ** (ಪಾ. ಸೂ. ೬-೩-೧೩೪) ಋಕ್ಕಿನಲ್ಲಿ ಸುಞ್ ಪರದಲ್ಲಿದ್ದರೆ ಇಗಂತವಾದ ಶಬ್ದಕ್ಕೆ ದೀರ್ಘ ಬರುತ್ತೆ ಎಂದು ಉ ಎಂಬುದಕ್ಕೆ ದೀರ್ಘ. **ಸುಞಃ** (ಪಾ. ಸೂ. ೮-೩-೭) ಪೂರ್ವಪದದಲ್ಲಿರುವ ಇಣ್ ಕವರ್ಗಗಳ ಮುಂದೆ ಇರುವ ಸುಞ್ ಎಂಬ ನಿಪಾತದ ಸಕಾರಕ್ಕೆ ಷಕಾರ ಬರುತ್ತೆ ಎಂದು ಸು ಎಂಬುದರ ಸಕಾರಕ್ಕೆ ಷಕಾರ. **ನಶ್ಚ ಧಾತುಸ್ಥೋ ರುಷುಭ್ಯಃ** (ಪಾ. ಸೂ. ೮-೪-೨೭) ಧಾತುಗಳಲ್ಲಿರುವ ರೇಫ ಷಕಾರಗಳು, ಉರುಶಬ್ದ, ಷುಶಬ್ದ, ಇವುಗಳ ಮುಂದೆ ಇರುವ ನಸ್ ಎಂಬುದರ ನಕಾರಕ್ಕೆ ಣಕಾರ ಬರುತ್ತೆ ಎಂದು ಅಸ್ಮಚ್ಛಬ್ದಕ್ಕೆ ಆದೇಶವಾಗಿ ಬಂದ ನಸ್ ನಕಾರಕ್ಕೆ ಣಕಾರ.

**ಊತಯೇ**—ಅವ ರಕ್ಷಣೇ ಧಾತು, **ಸ್ತ್ರಿಯಾಂ ಕ್ತಿನ್** ಎಂದು ಕ್ತಿನ್, **ಊತಿಯೂತಿ—,** ಎಂದು ಕ್ತಿನ್ ಉದಾತ್ತ. **ಜ್ವರತ್ವರ -,** ಎಂದು ಉಪಧಾವಕಾರಗಳಿಗೆ ಎಂದರೆ ಅವ್ ಎಂಬುದಕ್ಕೆ ಊ ಆದೇಶ.

**ತಿಷ್ಠ**—ಷ್ಠಾ ಗತಿನಿವೃತ್ತೌ ಧಾತು, ಲೋಟ್-ಸಿಪ್, ಶಪ್, **ಪಾಘ್ರಾಧ್ಮಾಸ್ಥಾ**—(ಪಾ. ಸೂ. ೭-೩-೭೮) ಎಂದು ಸ್ಥಾಗೆ ತಿಷ್ಠ ಆದೇಶ, **ಅತೋಹೇಃ** ಎಂದು ಸಿಪ್‌ಗೆ ಬರುವ ಹಿಗೆ ಲುಕ್, **ದ್ವ್ಯಚೋತಸ್ತಿಙಃ** (ಪಾ. ಸೂ. ೬-೩-೧೩೫) ಋಕ್ಕಿನಲ್ಲಿ ಎರಡು ಅಚ್ಚುಗಳುಳ್ಳ ತಿಙಂತದ ಅಕಾರಕ್ಕೆ ದೀರ್ಘ ಬರುತ್ತೆ ಎಂದು ದೀರ್ಘ

**ವಾಜಸ್ಯ**—ವಾಜಸ್ಯ ಸನಿತಾ ಎಂದರೆ ಅನ್ನವನ್ನು ಕೊಡುವವನಾಗಿ ಎಂದು ಅರ್ಥ. **ಕರ್ಮಣಾಯಮಭಿಪ್ರೈತಿ ಸ ಸಂಪ್ರದಾನಂ** (ಪಾ. ಸೂ. ೧-೪-೩೨) ಎಂಬ ಸೂತ್ರದಲ್ಲಿ **ಕ್ರಿಯಾಗ್ರಹಣಮ್** ಕ್ರಿಯೆಗೆ ಉದ್ದೇಶ್ಯವಾದುದು ಸಂಪ್ರದಾನ ಸಂಜ್ಞೆಯನ್ನು ಹೊಂದುತ್ತೆ ಎಂದು ಸನಧಾತೂಪಸ್ಥಾಪ್ಯವಾದ ಕ್ರಿಯೆಗೆ ಉದ್ದೇಶ್ಯವಾದ ವಾಜ ಎಂಬುದು ಸಂಪ್ರದಾನ ಸಂಜ್ಞೆಯನ್ನು ಹೊಂದುತ್ತೆ. ಅದಕ್ಕೆ ಶೇಷತ್ವೇನ ವಿವಕ್ಷೆಮಾಡಿದರೆ ಷಷ್ಠೀವಿಭಕ್ತಿ ಬರುತ್ತೆ.

**ಸನಿತಾ**—ಷಣು ದಾನೇ ಧಾತು, ಲುಟ್, **ಸ್ಯತಾಸೀ ಲೃಲುಟೋಃ** ಎಂದು, ತಾಸ್, ತಿಪ್, **ಲುಟಃ ಪ್ರಥಮಸ್ಯ ಡಾರೌರಸಃ** (ಪಾ. ಸೂ ೨-೪-೮೫) ಎಂದು ತಿಪ್‌ಗೆ ಡಾ ಆದೇಶ, ಡಿತ್ಕರಣ ಸಾಮರ್ಥ್ಯದಿಂದ ತಾಸ್‌ನ ಟಿಗೆ ಲೋಪ, ಆರ್ಧಧಾತುಕವಾದ ತಾಸ್‌ಗೆ ಇಡಾಗಮ. **ತಾಸ್ಯನುದಾತ್ತೇತ್—,** ಎಂದು ತಾಸ್ ಮುಂದೆ ಇರುವ ಡಾ ಎಂಬುದು ಅನುದಾತ್ತ, **ನಲುಟ್** (ಪಾ. ಸೂ ೮-೧-೨೯) ಲುಡಂತವು ಅನುದಾತ್ತವಾಗುವುದಿಲ್ಲ ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ. ಧಾತುಸ್ವರವೇ ನಿಲ್ಲುವುದು.

**ಅಞ್ಜಿಭಿಃ**—ಅಞ್ಜೂ ವ್ಯಕ್ತಿಮ್ರಕ್ಷಣ ಗತಿಷು ಧಾತು, **ಖನಿಕೃಷ್ಯ ಜ್ಯಸಿ ವಸಿ ವನಿ ಸನಿ ಧ್ವನಿಗ್ರಂಥಿ ಚಲಿಭ್ಯಶ್ಚ** (ಉ. ಸೂ. ೪-೫೭೯) ಈ ಧಾತುಗಳ ಮುಂದೆ ಇಪ್ರತ್ಯಯ ಬರುತ್ತೆ ಎಂದು ಅಞ್ಜೂ ಧಾತು ಮುಂದೆ ಇ ಪ್ರತ್ಯಯು.

· **ವಿಹ್ವಯಾಮಹೇ—ನಿಸಮುಪ ವಿಭ್ಯೋಹ್ವಃ** (ಪಾ ಸೂ. ೧-೩-೩೦) ನಿ, ಸಮ್, ಉಪ, ಈ ಉಪಸರ್ಗಗಳ ಮುಂದೆ ಇರುವ ಹ್ವೇಞ್ ಧಾತುವಿಗೆ ಫಲವು ಕರ್ತೃಗಾಮಿಯಾದಾಗಲೂ ಆತ್ಮನೇಪದ ಬರುತ್ತೆ ಎಂದು ಆತ್ಮನೇಪದ, ಮಹಿಙ್, ಏತ್ವ, ಶಪ್ **ತಾಸ್ಯನುದಾತ್ತೇತ್—,** ಎಂದು ಅನುಪದೇಶದ ಮುಂದೆ ಇರುವ ಲಸ್ಥಾನಿಕ ಸಾರ್ವಧಾತುಕಕ್ಕೆ ಅನುದಾತ್ತ, ಧಾತುಸ್ವರ ನಿಲ್ಲುತ್ತೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಉದಾತ್ತವುಳ್ಳ ತಿಙಂತವು ಪರದಲ್ಲಿದ್ದರೆ ಗತಿಸಂಜ್ಞಕವು ಅನುದಾತ್ತವಾಗುವುದು ಎಂದು ವಿ ಅನುದಾತ್ತ. ॥೧೩॥



॥ ಸಂಹಿತಾಪಾಠಃ ॥

ಊರ್ಧ್ವೋ ನಃ ಪಾಹ್ಯಂಹಸೋ ನಿ ಕೇತುನಾ ವಿಶ್ವಂ ಸಮ-
ತ್ರಿಣಂ ದಹ।
ಕೃಧೀ ನ ಊರ್ಧ್ವಾಞ್ಚರಥಾಯ ಜೀವಸೇ ವಿದಾ ದೇವೇಷು ನೋ
ದುವಃ ॥ ೧೪ ॥

॥ ಪದಪಾಠಃ ॥

ಊರ್ಧ್ವಃ । ನಃ । ಪಾಹಿ । ಅಂಹಸಃ । ನಿ । ಕೇತುನಾ । ವಿಶ್ವಂ । ಸಮ್ ।
ಅತ್ರಿಣಂ । ದಹ ।
ಕೃಧಿ । ನಃ । ಊರ್ಧ್ವಾನ್ । ಚರಥಾಯ । ಜೀವಸೇ । ವಿದಾಃ । ದೇ-
ವೇಷು । ನಃ । ದುವಃ ॥ ೧೪ ॥

|| ಸಾಯಣಭಾಷ್ಯಂ ||

**ಹೇ ಯೂಪ ಯದ್ವಾ ತನ್ನಿಷ್ಠಾಗ್ನೇ ಊರ್ಧ್ವ ಉನ್ನತಃ ಸನ್ ನೋಽಸ್ಮಾನ್ಕೇತುನಾ ಜ್ಞಾನೇನಾಂಹಸಃ ಪಾಪಾನ್ನಿ ಪಾಹಿ । ನಿತರಾಂ ಪಾಲಯ । ವಿಶ್ವಮತ್ರಿಣಂ ಸರ್ವಮತ್ತಾರಂ ಭಕ್ಷಕಂ ರಾಕ್ಷಸಂ ಸಂ ದಹ । ಸಮ್ಯಗ್ಭಸ್ಮೀಕುರು । ನೋಽಸ್ಮಾನೂರ್ಧ್ವಾನುನ್ನತಾನ್ಕೃಧಿ । ಕುರು । ಕಿಮರ್ಥಂ । ಚರಥಾಯ ಲೋಕೇ ಚರಣಾಯ ಜೀವಸೇ ಜೀವನಾಯ ಚ ನೋಽಸ್ಮಾಕಂ ದುವೋ ಧನಂ ಹವಿಃಸ್ವರೂಪಂ ದೇವೇಷು ವಿದಾಃ । ಲಂಭಯ ॥ ಅತ್ರಿಣಂ । ಅದ ಭಕ್ಷಣೇ । ಅದೇಸ್ತ್ರಿನಿ ಚ । ಉ. ೪-೬೮ । ಇತ್ಯೌಣಾದಿಕಸ್ತ್ರಿನಿಪ್ರತ್ಯಯಃ । ಯದ್ವಾ । ಅದತೆಸ್ತ್ರಯಂತ ಇತ್ಯತ್ರಾಃ । ಅತೋಽನುಪಸರ್ಗೇ ಕ ಇತಿ ಕಃ । ಅತೋ ಮತ್ವರ್ಥೀಯ ಇನಿಃ । ಕೃಧಿ । ಶ್ರುಶೃಣುಪೃಕೃವೃಭ್ಯಶ್ಛಂದಸೀತಿ ಹೇರ್ಧಿರಾದೇಶಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಂ ದೀರ್ಘಃ । ಊರ್ಧ್ವಾನ್ । ಉಭಯಥರ್ಕ್ಷು । ಪಾ. ೮-೩-೮ । ಇತಿ ವಿಕಲ್ಪವಿಧಾನಾನ್ನಶ್ಛವ್ಯಪ್ರಶಾನ್ । ಪಾ. ೮-೩-೭ । ಇತಿ ನಕಾರಸ್ಯ ರುತ್ವಾಭಾವಃ । ಚರಥಾಯ । ಚರೇರೌಣಾದಿಕೋ ಭಾವೇಽಥಪ್ರತ್ಯಯಃ । ಜೀವಸೇ । ಜೀವ ಪ್ರಾಣಧಾರಣೇ । ತುಮರ್ಥೇ ಸೇಸೇನಿತ್ಯಸೇಪ್ರತ್ಯಯಃ । ವಿದಾಃ ವಿದ್ಲೃ ಲಾಭೇ । ಅಸ್ಮಾದಂತರ್ಭಾವಿತಣ್ಯರ್ಥಾಲ್ಲೇಟಿ ಸಿಪಿ ಲೇಟೋಽಡಾಟಾವಿತ್ಯಾಡಾಗಮಃ । ತುದಾದಿತ್ವಾಚ್ಛಃ । ಶೇ ಮುಚಾದೀನಾಮಿತಿ ನುಮ್ ನ ಭವತಿ । ಅನಿತ್ಯಮಾಗಮಶಾಸನಮಿತಿ ವಚನೇನ ತಸ್ಯಾನಿತ್ಯತ್ವಾತ್ । ಇತಶ್ಚ ಲೋಪ ಇತೀಕಾರಲೋಪಃ । ಆಗಮಾನುದಾತ್ತತ್ವೇ ವಿಕರಣಸ್ವರಃ ॥**

ಪ್ರತಿಪದಾರ್ಥ

**ಊರ್ಧ್ವಃ**— (ಎಲೈ ಯೂಪದಲ್ಲಿ ಅಡಕವಾಗಿರುವ ಅಗ್ನಿಯೇ) ಉನ್ನತವಾಗಿ ಮೇಲಕ್ಕೆದ್ದು । **ನಃ** – ನಮ್ಮನ್ನು । **ಕೇತುನಾ**— ಜ್ಞಾನದಿಂದಲೂ । **ಅಂಹಸಃ**— ಪಾಪದಿಂದಲೂ (ಪಾಪನಿವಾರಣದಿಂದಲೂ) । **ನಿ ಪಾಹಿ**—ಚೆನ್ನಾಗಿ ಕಾಪಾಡು. । **ವಿಶ್ವಂ ಅತ್ರಿಣಂ**—ಸರ್ವಭಕ್ಷಕನಾದ ರಾಕ್ಷಸನನ್ನು । **ಸಂ ದಹ**— ಸಂಪೂರ್ಣವಾಗಿ ಭಸ್ಮ ಮಾಡು । **ಚರಥಾಯ**— ಲೋಕದಲ್ಲಿ ವ್ಯವಹಾರ ನಡೆಸುವುದಕ್ಕೂ । **ಜೀವಸೇ**—ಜೀವನವನ್ನು ನಡೆಸುವುದಕ್ಕೂ । **ನಃ**—ನಮ್ಮನ್ನು । **ಊರ್ಧ್ವಾನ್**—ಉನ್ನತವಾಗಿ ಮೇಲಕ್ಕೇಳುವವರನ್ನಾಗಿ (ಅಭಿವೃದ್ಧಿಗೆ ಬರುವವರನ್ನಾಗಿ) । **ಕೃಧಿ**- ಮಾಡು । **ನಃ**—ನಮ್ಮ । **ದುವಃ**--ಹವಿಃಸ್ವರೂಪವಾದ ಧನವನ್ನು । **ದೇವೇಷು**- ದೇವತೆಗಳಲ್ಲಿ । **ವಿದಾಃ**- ತಲುಪಿಸು ।

|| ಭಾವಾರ್ಥ ||

ಯೂಪಸ್ತಂಭದಲ್ಲಿ ಅಡಕವಾಗಿರುವ ಎಲೈ ಅಗ್ನಿಯೇ, ಅಥವಾ ಯೂಪನೇ ನಮಗೆ ಕಾಣಿಸಿಕೊಳ್ಳುವಂತೆ ಮೇಲಕ್ಕೆದ್ದು ನಿಲ್ಲು. ನಮಗೆ ಜ್ಞಾನದಾನದಿಂದಲೂ, ನಮ್ಮನ್ನು ಪಾಪದಿಂದ ತಪ್ಪಿಸುವುದರಿಂದಲೂ ನಮ್ಮನ್ನು ಚೆನ್ನಾಗಿ

ಕಾಪಾಡು. ನಮ್ಮ ವೈರಿಯಾದ ಸರ್ವಭಕ್ಷಕನಾದ ರಾಕ್ಷಸನನ್ನು ಸಂಪೂರ್ಣವಾಗಿ ಭಸ್ಮಮಾಡು. ಲೋಕದಲ್ಲಿ ನಮ್ಮ ನಮ್ಮ ವ್ಯವಹಾರನಡೆಸುವುದಕ್ಕೂ, ಜೀವಿಸುವುದಕ್ಕೂ ಸಹ ನಮ್ಮನ್ನೂ ಅಭಿವೃದ್ಧಿಗೆ ಬರುವರನ್ನಾಗಿ ಮಾಡು. ನಮ್ಮ ಹವಿಃಸ್ವರೂಪವಾದ ಧನವನ್ನು ದೇವತೆಗಳಲ್ಲಿ ತಲಸಿಸು.

## English Translation

Be erect and protect us from sin by knowledge, burn down all the evil spirits; raise us aloft that we may pass through the world and we may live; convey our wealth (of oblations) to the gods.

॥ ವಿಶೇಷವಿಷಯಗಳು ॥

**ಕೇತುನಾ**— ಜ್ಞಾನೇನ. ತಿಳುವಳಿಕೆ, ಜ್ಞಾನ, ವಿವೇಕ ಇತ್ಯಾದಿ.

**ಅತ್ರಿಣಂ**— ಸರ್ವಮತ್ತಾರಂ ಭಕ್ಷಕ ರಾಕ್ಷಸಂ। ಸರ್ವ ಪ್ರಾಣಿಗಳನ್ನೂ ಭಕ್ಷಿಸುವ ದುಷ್ಟರಾದ ರಕ್ಷೋಗಣಗಳು, ರಾಕ್ಷಸರು, ಪಿಶಾಚಿಗಳು, ನಿಶಾಚರರು ಇತ್ಯಾದಿ.

**ಊರ್ಧ್ವಾನ್ ಕೃಧಿ— ಉನ್ನತಾನ್ ಕುರು।** ಉನ್ನತರನ್ನಾಗಿ ಎಂದರೆ ಧೈರ್ಯಯುಕ್ತರನ್ನಾಗಿ ಮಾಡು.

**ಚರಥಾಯ**— ಲೋಕದಲ್ಲಿ ಸಂಚಾರಮಾಡುವುದಕ್ಕಾಗಿ, ನಮ್ಮ ವ್ಯವಹಾರಾದಿಗಳನ್ನು ನಿರ್ವಹಿಸುವುದಕ್ಕಾಗಿ.

**ಜೀವಸೇ— ಜೀವನಾಯ।** ನಿರ್ಭಯವಾಗಿ ಜೀವಿಸುವುದಕ್ಕಾಗಿಯೂ

**ವಿದಾ ದೇವೇಷು ನೋ ದುವಃ**— ಇಲ್ಲಿ ದುವಃ ಎಂದರೆ ಧನವು. ದೇವತೆಗಳಿಗೆ ನಾವು ಧನವನ್ನು ಕೊಡುವುದು ಹೇಗೆ ಎಂದರೆ ಧನವೆಂದು ಹೇಳಲ್ಪಡುವ ಹವಿಸ್ಸ್ವರೂಪವಾದ ಅನ್ನವು ಎಂದಭಿಪ್ರಾಯವು. ಎಂದರೆ ನಾವು ದೇವತೆಗಳಿಗೆ ಸಮರ್ಪಿಸುವುದಕ್ಕಾಗಿ ಸಿದ್ಧಪಡಿಸಿರುವ ಹವಿಸ್ಸೆಂಬ ಧನವನ್ನು ದೇವತೆಗಳಿಗೆ ತಿಳಿಯಪಡಿಸು ಅಥವಾ ತಲಪಿಸು ಎಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ಅತ್ರಿಣಂ**—ಅದ ಭಕ್ಷಣೇಧಾತು, **ಅದೇಸ್ತ್ರಿನಿ ಚ** (ಉ. ಸೂ. ೪-೫೦೨) ಅದ ಧಾತು ಮುಂದೆ ತ್ರಿನಿ ಪ್ರತ್ಯಯವೂ ಚಕಾರದಿಂದ ತ್ರಿಪ್ ಪ್ರತ್ಯಯವೂ ಬರುತ್ತೆ ಎಂದು ತ್ರಿನಿಪ್ರತ್ಯಯ, ಅಥವಾ ಅದತಃ ತ್ರಾಯನ್ತೇ ಎಂದು ವಿಗ್ರಹ. ತ್ರೈಙ್ ಪಾಲನೇ ಧಾತು, **ಆದೇಚ ಉಪದೇಶೇಽಶಿತಿ** (ಪಾ. ಸೂ. ೬-೧-೪೫) ಎಂದು ಆತ್ವ **ಆತೋಽನುಪಸರ್ಗೇ ಕಃ** (ಪಾ.ಸೂ. ೩-೨-೩) ಉಪಸರ್ಗವಲ್ಲದ ಸುಬಂತವು ಉಪಪದವಾಗಿರುವಾಗ ಆಕಾರಾಂತ

ಧಾತು ಮುಂದೆ ಕ ಪ್ರತ್ಯಯ ಬರುತ್ತೆ ಎಂದು ಕ ಪ್ರತ್ಯಯ. **ಆತೋಲೋಪ ಇಟಿ ಚ** ಎಂದು ಆಗೆ ಲೋಪ ಅತ್ರ ಶಬ್ದದ ಮುಂದೆ, **ಅತಇನಿಠನೌ** ಎಂದು ಇನಿಪ್ರತ್ಯಯ, **ಯಸ್ಯೇತಿ ಚ** ಎಂದು ಅಕಾರಲೋಪ. ಅತ್ರಿನ್. ಎಂದಾಗುತ್ತೆ.

**ಕೃಧಿ**—ಡುಕೃಞ್ ಕರಣೇ ಧಾತು. **ಶ್ರುಶೃಣುಪೃಕೃ**—, ಇದರ ಅರ್ಥ ಇದೇ ಸೂಕ್ತ ೧೨ ನೇ ಮಂತ್ರದಲ್ಲಿದೆ. ಇದರಿಂದ ಹಿಗೆ ಧಿ ಆದೇಶ, ವಿಕರಣಕ್ಕೆ ಲುಕ್. ಹಿಯು ಅಪಿತ್ತಾದ್ದರಿಂದ ಗುಣಕ್ಕೆ ನಿಷೇಧ **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂದು ದೀರ್ಘ.

ಊರ್ಧ್ವಾನ್—ಇದರ ಮುಂದೆ ಚ ಎಂಬ ಅಮ್ ಪರಕವಾದ ಛವ್ ಇದೆ. **ಉಭಯಥರ್ಕ್ಷು** (ಪಾ. ಸೂ. ೮-೩-೮) ಅಮ್‌ಪರಕವಾದ ಛವ್ ಪರದಲ್ಲಿದ್ದರೆ ನಕಾರಕ್ಕೆ ರು ಆದೇಶ ವಿಕಲ್ಪವಾಗಿ ಋಕ್ಕಿನಲ್ಲಿ ಬರುತ್ತೆ ಎಂದು ನ್‌ಗೆ ರು ಆದೇಶವು ವಿಕಲ್ಪಿತವಾಗಿದೆ. ಆದ್ದರಿಂದ **ನಶ್ಛವ್ಯಪ್ರಶಾನ್** ಎಂಬುದರಿಂದ ರು ಆದೇಶ ಬರುವುದಿಲ್ಲ.

**ಚರಥಾಯ**—ಚರ ಧಾತು ಮುಂದೆ ಭಾವಾರ್ಥದಲ್ಲಿ ಅಥ ಎಂಬ ಔಣಾದಿಕ ಪ್ರತ್ಯಯ ಬರುತ್ತೆ.

**ಜೀವಸೇ**—ಜೀವ ಪ್ರಾಣಧಾರಣೇ ಧಾತು, **ತುಮರ್ಥೇಸೇಸೇನ್**—, (ಪಾ. ಸೂ. ೩-೪-೯) ಎಂದು ಅಸೇ ಪ್ರತ್ಯಯ. ತುಮುನ್‌ಪ್ರತ್ಯಯದ ಅರ್ಥವು ಭಾವ, ಭಾವ ಎಂದು ಹೇಳದೇ ತುಮರ್ಥೇ ಎಂದಿರುವುದರಿಂದ ಸಾಧ್ಯಾವಸ್ಥಾಪನ್ನ ಭಾವಕ್ಕೆ ಗ್ರಹಣ.

**ವಿದಾಃ**—ವಿದ್ಲೃ ಲಾಭೇ. ಣಿಚ್ ಪ್ರತ್ಯಯದ ಅರ್ಥವನ್ನು ಒಳಗೊಂಡಿರುವ ಈ ಧಾತು ಮುಂದೆ ಲೇಟ್, ಸಿಪ್, **ಲೇಟೋಽಡಾಟೌ** ಎಂದು ಆಟ್ ಆಗಮ, ಶ ವಿಕರಣ ವಿದ್+ಅ+ಆಸಿ, **ಆಗಮಶಾಸ್ತ್ರಮನಿತ್ಯಂ** ಎಂದು ಹೇಳಿರುವುದರಿಂದ **ಶೇಮುಚಾದೀನಾಂ** (ಪಾ. ಸೂ. ೭-೧-೫೯) ಶ ವಿಕರಣ ಪರದಲ್ಲಿದ್ದರೆ ಮುಚಾದಿ ಧಾತುಗಳಿಗೆ ನುಮ್ ಆಗಮ ಬರುತ್ತೆ ಎಂದು ವಿಹಿತವಾದ ನುಮ್ ಬರುವುದಿಲ್ಲ. **ಇತಶ್ಚಲೋಪಃ ಪರಸ್ಮೈಪದೇಷು** ಎಂದು ಸಿಯ ಇಕಾರಕ್ಕೆ ಲೋಪ. ಸವರ್ಣದೀರ್ಘ, ವಿದಾಸ್, ರುತ್ವ-ವಿಸರ್ಗ. ಆಗಮ ಅನುದಾತ್ತ. ವಿಕರಣ ಉದಾತ್ತ, ಏಕಾದೇಶವು ಉದಾತ್ತ. ||೧೪||

|| ಸಂಹಿತಾಪಾಠಃ ||

ಪಾಹಿ ನೋ ಅಗ್ನೇ ರಕ್ಷಸಃ ಪಾಹಿ ಧೂರ್ತೇರರಾವ್ಣಃ |
ಪಾಹಿ ರೀಷತ ಉತ ವಾ ಜಿಘಾಂಸತೋ ಬೃಹದ್ಭಾನೋ ಯವಿಷ್ಠ್ಯ || ೧೫ ||

॥ ಪದಪಾಠಃ ॥

ಪಾಹಿ । ನಃ । ಅಗ್ನೇ । ರಕ್ಷಸಃ । ಪಾಹಿ । ಧೂರ್ತೇಃ । ಅರಾವ್ಣಃ ।
ಪಾಹಿ । ರಿಷತಃ । ಉತ । ವಾ । ಜಿಘಾಂಸತಃ । ಬೃಹದ್ಭಾನೋ ಇತಿ
ಬೃಹತ್ ऽ ಭಾನೋ । ಯವಿಷ್ಠ್ಯ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಹೇ ಬೃಹದ್ಭಾನೋ ಬೃಹಂತೋ ಭಾನವೋ ಯಸ್ಯ ತಾದೃಶ ಹೇ ಯವಿಷ್ಠ್ಯ ಯುವತ್ತಮ ಹೇ ಅಗ್ನೇ ನೋಽಸ್ಮಾನ್ರಕ್ಷಸೋ ಬಾಧಕಾದ್ರಾಕ್ಷಸಾದೇಃ ಪಾಹಿ । ಪಾಲಯ । ತಥಾ ಅರಾವ್ಣೋ ಧನಾದೀನಾಮದಾತೃರೂಪಾದ್ಧೂರ್ತೇರ್ಹಿಂಸಕಾತ್ಪಾಹಿ । ತಥಾ ರಿಷತೋ ಹಿಂಸಕಾದ್ವ್ಯಾಘ್ರಾದೇಃ ಸಕಾಶಾತ್ಪಾಹಿ । ಉತ ವಾ ಅಥವಾ ಜಿಘಾಂಸತೋ ಹಂತುಮಿಚ್ಛತಃ ಶತ್ರೋಃ ಸಕಾಶಾತ್ಪಾಹಿ ॥ ಧೂರ್ತೇಃ । ಧುರ್ವೀ ಹಿಂಸಾರ್ಥಃ । ಕ್ತಿಚ್‌ಕ್ತೌ ಚ ಸಂಜ್ಞಾಯಾಮಿತಿ ಕರ್ತರಿ ಕ್ತಿಚ್ । ತಿತುತ್ರೇತ್ಯಾದಿನೇಟ್‌ಪ್ರತಿಷೇಧಃ । ರಾಲ್ಲೋಪಃ । ಪಾ. ೬-೪-೨೧ । ಇತಿ ವಕಾರಲೋಪಃ । ಹಲಿ ಚೇತಿ ದೀರ್ಘತ್ವಂ । ಅರಾವ್ಣಃ । ರಾ ದಾನೇ । ಆತೋ ಮನಿನ್ನಿತ್ಯಾದಿನಾ ವನಿಪ್ । ನಞ್‌ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ಪಂಚಮ್ಯೇಕವಚನೇಽಲ್ಲೋಪೋಽನ ಇತ್ಯನೋಽಕಾರಸ್ಯ ಲೋಪಃ । ರಿಷತಃ । ರಿಷ ಹಿಂಸಾಯಾಂ । ಲಟಃ ಶತೃ । ಬಹುಲಂ ಛಂದಸೀತಿ ಶಪೋ ಲುಕ್ । ಪ್ರತ್ಯಯಸ್ವರೇ ಪ್ರಾಪ್ತೇ ವ್ಯತ್ಯಯೇನಾದ್ಯುದಾತ್ತತ್ವಂ । ಜಿಘಾಂಸತಃ । ಹಂತೇರಿಚ್ಛಾರ್ಥೇ ಸನ್ಯಜ್ಝನಗಮಾಂ ಸನಿ । ಪಾ. ೬-೪-೧೬ । ಇತ್ಯುಪಧಾದೀರ್ಘತ್ವಂ । ಅಭ್ಯಾಸಾಚ್ಚ । ಪಾ. ೭-೩-೫೫ । ಇತ್ಯಭ್ಯಾಸಾದುತ್ತರಸ್ಯ ಹಕಾರಸ್ಯ ಘುತ್ವಂ । ಸನ್ಯತ ಇತೀತ್ವಂ । ಅದುಪದೇಶಾಲ್ಲಸಾರ್ವಧಾತುಕಾನುದಾತತ್ವೇ ಸನೋ ನಿತ್ತ್ವಾನ್ನಿತ್ಸ್ವರೇಣ ಪದಸ್ಯಾದ್ಯುದಾತ್ತತ್ವಂ । ಬೃಹದ್ಭಾನೋ । ಆಮಂತ್ರಿತಸ್ಯ ಚೇತಿ ಷಾಷ್ಠಿಕಮಾದ್ಯುದಾತ್ತತ್ವಂ । ಪಾದಾದಿತ್ವಾದಾಷ್ಟಮಿಕನಿಘಾತಾಭಾವಃ । ಯವಿಷ್ಠ್ಯ । ಸ್ಥೂಲದೂರೇತ್ಯಾದಿನಾ ಯಣಾದಿಪರಸ್ಯ ಲೋಪಃ । ಪೂರ್ವಸ್ಯ ಚ ಗುಣಃ । ಯಕಾರೋಪಜನಶ್ಛಾಂದಸಃ ॥ ೧೦ ॥

॥ ಪ್ರತಿಪದಾರ್ಥ ॥

ಬೃಹದ್ಭಾನೋ—ದೇದೀಪ್ಯಮಾನಗಳಾದ ಕಿರಣಗಳುಳ್ಳ । ಯವಿಷ್ಠ್ಯಂ— ಅತ್ಯಂತ ಯುವಕನಾದ । ಅಗ್ನೇ—ಎಲೈ ಅಗ್ನಿಯೇ । ನಃ—ನಮ್ಮನ್ನು । ರಕ್ಷಸಃ—ನಮಗೆ ಕೆಡಕನ್ನುಂಟು ಮಾಡುವ ರಾಕ್ಷಸನಿಂದ । ಪಾಹಿ—ಕಾಪಾಡು. । ಅರಾವ್ಣಃ— ನಮಗೆ ಧನಾದಿಗಳನ್ನು ಕೊಡದೆ ಇರತಕ್ಕ । ಧೂರ್ತೇಃ—ವಂಚಕನಾಗಿಯೂ, ಹಿಂಸಕನಾಗಿಯೂ ಇರುವವನಿಂದ । ಪಾಹಿ— ಕಾಪಾಡು. । ರಿಷತಃ— ಉಪದ್ರವಗಳನ್ನುಂಟುಮಾಡುವ

ಹುಲಿಯೇ ಮುಂತಾದ ದುಷ್ಟ ಮೃಗಗಳಿಂದ । **ಪಾಹಿ**—ರಕ್ಷಿಸು । **ಉತ ವಾ**— ಅಥವಾ । **ಜಿಘಾಂಸತಃ**— ನಮ್ಮನ್ನು ಕೊಲ್ಲಲು ಇಚ್ಛಿಸಿ ಕೇಡು ಬಯಸುವ (ಶತ್ರುವಿನಿಂದಲೂ ಕಾಪಾಡು.)

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಯಾವಾಗಲೂ ದೇದೀಪ್ಯಮಾನಗಳಾದ ಕಿರಣಗಳಿಂದ ಪ್ರಜ್ವಲಿಸುತ್ತಾ ಶಾಶ್ವತ ವಾಗಿ ಯುವಕನಾಗಿದ್ದೀಯೆ. ನಮ್ಮ ಸಕಲ ರಕ್ಷಣೆಯೂ ನಿನಗೆ ಸೇರಿದುದು. ನಮಗೆ ಕೇಡನ್ನು ಬಯಸಿ ಹಿಂಸೆ ಕೊಡತಕ್ಕ ಶತ್ರುಗಳು ಬಹಳವಾಗಿದ್ದಾರೆ. ನಮಗೆ ಕೆಡಕನ್ನುಂಟುಮಾಡುವ ರಾಕ್ಷಸರೂ, ನಮಗೆ ಕೊಡಬೇಕಾದ ದನಧಾನ್ಯಗಳನ್ನು ಕೊಡದೆ ವಂಚಿಸಿ ಹಿಂಸಿಸತಕ್ಕ ನೆರೆಹೊರೆಯ ದುಷ್ಟರೂ, ನಾನಾವಿಧವಾಗಿ ಉಪದ್ರವಗಳನ್ನು ಕೊಡತಕ್ಕ ವ್ಯಾಘ್ರಾದಿಹಿಂಸ್ರಜಂತುಗಳೂ ಮತ್ತು ನಮಗೆ ಯಾವಾಗಲೂ ಕೇಡುಬಯಸಿ ಕೊಲ್ಲಲಿಚ್ಛಿಸುವ ಶತ್ರುಗಳೂ ಬಹಳ ಇದ್ದಾರೆ- ಇವರೆಲ್ಲರಿಂದಲೂ ನಮ್ಮನ್ನು ರಕ್ಷಿಸು.

English Translation

Youthfull and most brilliant Agni, protect us from evil spirits and from the wicked man who gives no gifts ; protect us from harmful animals and from those who desire to kill us

ವಿಶೇಷ ವಿಷಯಗಳು

**ಧೂರ್ತೇಃ— ಹಿಂಸಕಾತ್** । ನಮಗೆ ತೊಂದರೆ ಕೊಡತಕ್ಕ ಮನುಷ್ಯನು, ದುಷ್ಟಸ್ವಭಾವದವನು.

**ಅರಾವ್ಣಃ— ರಾ ದಾನೇ** । ಧನಾದಿಗಳನ್ನು ಕೊಡದೆ ಇರುವ, ಎಂದರೆ ನಮಗೆ ಪ್ರತಿಕೂಲವಾಗಿರುವ, ನಮ್ಮ ಹಿತೈಷಿಗಳಲ್ಲದ.

**ರಿಷತಃ—ರಿಷ ಹಿಂಸಾಯಾಂ** ॥ ಹಿಂಸೆಯನ್ನು ಮಾಡುವ ದುಷ್ಟಪ್ರಾಣಿಗಳಿಂದ

**ಜಿಘಾಂಸತಃ— ಹಂತುಮಿಚ್ಛತಃ ಶತ್ರೋಸ್ಸಕಾಶಾತ್** । ನಮ್ಮನ್ನು ಕೊಲ್ಲಬೇಕೆಂದು ಬಯಸುವ ಶತ್ರುಜನರಿಂದ

**ಯವಿಷ್ಠ್ಯ— ಯುವತ್ತಮ** । ಯುವಕರಲ್ಲಿ ಶ್ರೇಷ್ಠನು, ಅಗ್ರಗಣ್ಯನು ಎಂದರೆ ಯುವಕನು, ತರು ಣನು. ಅಗ್ನಿಯು ಇಂಧನಾದಿಗಳನ್ನು ಹಾಕಿದಷ್ಟೂ ಹೆಚ್ಚಾಗಿ ಬಹಳಕಾಲ ಉರಿಯುತ್ತಿರುವುದರಿಂದ ವಯಸ್ಸಾಗಿಲ್ಲದೆ ಇನ್ನೂ ಬಹುಕಾಲ ಜೀವಿಸುವ ಯುವಕನಿಗೆ ಹೋಲಿಸುವುದು ರೂಢಿಯು. ಆದುದರಿಂದ ಅಗ್ನಿಯ ಗುಣಗಳನ್ನು ಹೇಳುವಾಗ ಯುವಾ, ಯವಿಷ್ಠ್ಯ ಮೊದಲಾದ ಶಬ್ದಗಳನ್ನು ಉಪಯೋಗಿಸುವುದು ರೂಢಿಯಾಗಿದೆ.

**ಬೃಹದ್ಭಾನೋ— ಬೃಹಂತೋ ಭಾನವೋ ಯಸ್ಯ ।** ದೊಡ್ಡದಾದ ಅಥವಾ ಹೆಚ್ಚಾದ ಕಿರಣಗಳುಳ್ಳ ಎಂದರೆ ಅತಿ ಪ್ರಕಾಶಮಾನನಾದ

॥ ವ್ಯಾಕರಣಪ್ರಕ್ರಿಯಾ ॥

**ಧೂರ್ತೇಃ**—ಧುರ್ವೀ ಹಿಂಸಾರ್ಥಃ ಧಾತು. **ಕ್ತಿಚ್ ಕ್ತೌ ಚ ಸಂಜ್ಞಾಯಾಂ** ಎಂದು ಕರ್ತ್ರರ್ಥದಲ್ಲಿ ಕ್ತಿಚ್‌ಪ್ರತ್ಯಯ, **ತಿತುತ್ರ—,** ಎಂದು ಇಡಾಗಮಕ್ಕೆ ನಿಷೇಧ. **ರಾಲ್ಲೋಪಃ** (ಪಾ. ಸೂ. ೬-೪-೨೧) ಕ್ವಿಪ್ ಪ್ರತ್ಯಯ, ಝಲಾದಿಯಾದ ಪ್ರತ್ಯಯ, ಅನುನಾಸಿಕಾದಿ ಪ್ರತ್ಯಯ ಇವು ಪರದಲ್ಲಿರುವಾಗ ರೇಫದ ಮುಂದೆ ಇರುವ ಛಕಾರ ವಕಾರಗಳಿಗೆ ಲೋಪ ಬರುತ್ತೆ ಎಂದು ವ್‌ಗೆ ಲೋಪ ಧುರ್+ತಿ. **ಹಲಿಚ** (ಪಾ.ಸೂ. ೮-೨-೭೭) ವ್ಯಂಜನ ಪರದಲ್ಲಿರುವಾಗ ರೇಫಾಂತ ಅಥವಾ ವಕಾರಾಂತವಾದ ಧಾತುವಿನ ಉಪಧೆಯಲ್ಲಿರುವ ಇಕ್‌ಗೆ ದೀರ್ಘ ಬರುತ್ತೆ ಎಂದು ಉಕಾರಕ್ಕೆ ದೀರ್ಘ ಧೂರ್ತಿ ಎಂದಾಯಿತು. ಪಂಚಮೀ ಏಕವಚನ

**ಅರಾವ್ಣಃ**—ರಾ ದಾನೇ ಧಾತು. **ಆತೋಮನಿನ್‌ಕ್ವನಿಬ್ವನಿಪಶ್ಚ** ಎಂದು ವನಿಪ್, ರಾವನ್, ನ ರಾವನ್ ಎಂದು ನಞ್ ಸಮಾಸ. **ತತ್ಪುರುಷೇ—,** ಎಂದು ಅವ್ಯಯಪೂರ್ವಪದಪ್ರಕೃತಿಸ್ವರ. ಪಂಚಮೀ ಏಕವಚನ ಅಸ್, ಅರಾವನ್+ಅಸ್, **ಅಲ್ಲೋಪೋಽನಃ** (ಪಾ. ಸೂ. ೬-೪-೧೩೪) ಎಂದು ಅನ್‌ನ ಅಕಾರಕ್ಕೆ ಲೋಪ.

**ರಿಷತಃ**—ರಿಷ ಹಿಂಸಾಯಾಂ ಧಾತು, ಲಟ್ಟಿಗೆ ಶತೃ ಆದೇಶ. ಶಪ್‌ಗೆ ಲುಕ್, ಛಾಂದಸವಾಗಿ ಆದ್ಯುದಾತ್ತ ಬರುತ್ತೆ.

**ಜಿಘಾಂಸತಃ**—ಹನ ಹಿಂಸಾಗತ್ಯೋಃ ಧಾತು. **ಧಾತೋಃಕರ್ಮಣಃ—,** ಎಂದು ಇಚ್ಛೆ ಎಂಬ ಅರ್ಥದಲ್ಲಿ ಸನ್, **ಸನ್ಯಙೋಃ** ಎಂದು ದ್ವಿತ್ವ, ಅಭ್ಯಾಸಲೋಪ. ಹ ಹನ್+ಸ. **ಅಜ್ಝನಗಮಾಂ ಸನಿ** (ಪಾ. ಸೂ. ೬-೪-೧೬ ಝಲಾದಿಯಾದ ಸನ್ ಪರದಲ್ಲಿರುವಾಗ ಅಜಂತಧಾತುಗಳಿಗೂ, ಹನ್‌ಧಾತು, ಅಜಾದೇಶವಾದ ಗಮ್‌ಧಾತು ಇವುಗಳ ಉಪಧೆಗೂ ದೀರ್ಘ ಬರುತ್ತೆ. ಇಣ್-ಇಕ್, ಇಜ್ ಈ ಧಾತುಗಳಿಗೆ ಆದೇಶವಾಗಿ ಬಂದ ಗಮ್‌ಗೆ ಅಜಾದೇಶ ಗಮ್ ಎಂದು ವ್ಯವಹಾರವು. ಹ ಹಾನ್+ಸ, **ಅಭ್ಯಾಸಾಚ್ಚ** (ಪಾ ಸೂ. ೭-೩-೫೫) ಅಭ್ಯಾಸದ ಮುಂದೆ ಇರುವ ಹನ್‌ಧಾತುವಿನ ಹಕಾರಕ್ಕೆ ಕುತ್ವ ಬರುತ್ತೆ ಎಂದು ಎರಡನೆಯ ಹಕಾರಕ್ಕೆ ಘಕಾರ. **ಅಭ್ಯಾಸೇಚರ್ಚ** ಎಂದು ಮೊದಲನೆ ಹಕಾರಕ್ಕೆ ಜಕಾರ, **ಸನ್ಯತಃ** ಎಂದು ಅಭ್ಯಾಸಕ್ಕೆ ಇಕಾರ. ನಕಾರಕ್ಕೆ ಅನುಸ್ವಾರ, ಜಿಘಾಂಸ ಎಂದಾಯಿತು. ಲಟ್, ಶತೃ, ಅದುಪದೇಶದ ಮುಂದೆ ಇರುವುದರಿಂದ ಶತೃ ಅನುದಾತ್ತ. ಸನ್ ನಿತ್ತಾದ್ದರಿಂದ ಆದ್ಯುದಾತ್ತ ಬರುತ್ತೆ.

**ಬೃಹದ್ಭಾನೋ**—ಪಾದದ ಆದಿಯಲ್ಲಿದೆ, ಎಂಟನೇ ಅಧ್ಯಾಯದಲ್ಲಿರುವ **ಆಮನ್ತ್ರಿತಸ್ಯ ಚ** ಎಂಬುದರಿಂದ ಸರ್ವಾನುದಾತ್ತ ಬರುವುದಿಲ್ಲ. ಆರನೇ ಅಧ್ಯಾಯದಲ್ಲಿರುವ **ಆಮನ್ತ್ರಿತಸ್ಯ ಚ** ಎಂಬುದರಿಂದ ಆದ್ಯುದಾತ್ತ ಬರುತ್ತೆ.

**ಯವಿಷ್ಠ್ಯ**— ಇದೇ ಸೂಕ್ತ ೬ ನೇ ಮಂತ್ರದಲ್ಲಿ ವಿವೃತವಾಗಿದೆ. ॥೧೫॥

॥ ಸಂಹಿತಾಪಾಠಃ ॥

ಘನೇ॑ವ॒ ವಿಷ್ವ॒ಗ್ವಿ ಜ॒ಹ್ಯರಾ᳚ವ್ಣ॒ಸ್ತಪು॑ರ್ಜಂ॒ಭ॒ ಯೋ ಅ॑ಸ್ಮ॒ಧ್ರುಕ್ ।
ಯೋ ಮರ್ತ್ಯಃ॒ ಶಿಶೀ॑ತೇ॒ ಅತ್ಯ॒ಕ್ತುಭಿ॒ರ್ಮಾ ನಃ॒ ಸ ರಿ॒ಪುರೀ᳚ಶತ ॥೧೬॥

॥ ಪದಪಾಠಃ ॥

ಘನಾ॑ಽಇವ । ವಿಷ್ವ॑ಕ್ । ವಿ । ಜ॒ಹಿ॒ । ಅರಾ᳚ವ್ಣಃ । ತಪುಃ॑ಽಜಂಭ । ಯಃ ।
ಅ॒ಸ್ಮ॒ಽಧ್ರುಕ್ ।

ಯಃ । ಮರ್ತ್ಯಃ॑ । ಶಿಶೀ॑ತೇ । ಅತಿ॑ । ಅ॒ಕ್ತುಽಭಿಃ॑ । ಮಾ । ನಃ॒ । ಸಃ ।
ರಿ॒ಪುಃ । ಈ॒ಶ॒ತ ॥ ೧೬ ॥

ಸಾಯಣಭಾಷ್ಯಂ

ಹೇ ತಪುರ್ಜಂಭ ತಪ್ಯಮಾನರಶ್ಮಿಯುಕ್ತಾಗ್ನೇ ಅರಾವ್ಣೋಽಸ್ಮಭ್ಯಂ ದೇಯಸ್ಯ ಧನಸ್ಯಾದಾತ್ರ್ಯಾನ್ವೈರಿಣೋ ವಿಷ್ವಕ್ ಸರ್ವತೋ ವಿ ಜಹಿ । ವಿಶೇಷೇಣ ಮಾರಯ । ತತ್ರ ದೃಷ್ಟಾಂತಃ । ಘನೇವ । ಯಥಾ ಕಠಿನೇನ ದಂಡಪಾಷಾಣಾದಿನಾ ಭಾಂಡಾದಿಭಂಗಂ ಕರೋತಿ ತದ್ವತ್ । ಯೋಽನ್ಯೋಽಪಿ ರಿಪುರಸ್ಮಧ್ರುಕ್ ಅಸ್ಮದ್ವಿಷಯದ್ರೋಹಕಾರೀ ಭರ್ತ್ಸನಾದಿನಾ ಬಾಧತೇ । ಯಶ್ಚಾನ್ಯೋ ಮರ್ತ್ಯೋ ಮನುಷ್ಯಃ ಶತ್ರುರಕ್ತುಭಿರಾಯುಧೈರತಿ ಶಿಶೀತೇ ತನೂಕರೋತಿ । ಅಸ್ಮಾನ್ಪ್ರಹರತೀತ್ಯರ್ಥಃ । ಸ ರಿಪುರ್ಭರ್ತ್ಸನಪ್ರಹಾರಕಾರೀ ದ್ವಿವಿಧೋಽಪಿ ಶತ್ರುರ್ನೋಽಸ್ಮಾನ್ಪ್ರತಿ ಮೇಶತ । ಈಶ್ವರಃ ಶಕ್ತೋ ಮಾ ಭೂತ್ ॥ ಘನಾಽಇವ । ಸುಪಾಂ ಸುಲುಗಿತಿ ತೃತೀಯಾಯಾ ಡಾದೇಶಃ । ಜಹಿ । ಹಂತೇರ್ಲೋಟಿ ಹೌ ಹಂತೇರ್ಜಃ । ಪಾ. ೬-೪-೩೬ । ಇತಿ ಜಾದೇಶಃ । ತಸ್ಯಾಸಿದ್ಧತ್ವಾದ್ಧೇರ್ಲುಗಭಾವಃ । ತಪುರ್ಜಂಭ । ತಪ ಸಂತಾಪೇ । ಔಣಾದಿಕಃ ಕರಣ ಉಸಿನ್ಪ್ರತ್ಯಯಾಂತಸ್ತಪುಸ್ಶಬ್ದೋ ನಿತ್ತ್ವಾದಾದ್ಯುದಾತ್ತಃ । ಜಭಿ ನಾಶನೇ । ಜಂಭ್ಯಂತೇ ಶತ್ರವ ಏಭಿರಿತಿ ಜಂಭಾನ್ಯಾಯುಧಾನಿ । ಕರಣೇ ಘಞ್ । ತಪೂಂಷ್ಯೇವ ಜಂಭಾನಿ ಯಸ್ಯಾಸೌ ತಪುರ್ಜಂಭಃ । ಆಮಂತ್ರಿತಾದ್ಯುದಾತ್ತತ್ವಂ । ಅಸ್ಮಧ್ರುಕ್ । ದ್ರುಹ ಜಿಘಾಂಸಾಯಾಂ । ಸತ್ಸೂದ್ವಿಷೇತ್ಯಾದಿನಾ ಕ್ವಿಪ್ । ವಾ ದ್ರುಹಮುಹಷ್ಣುಹಷ್ಣಿಹಾಂ । ಪಾ. ೮-೨-೩೩ । ಇತಿ ಹಕಾರಸ್ಯ ಘತ್ವಂ । ಭಷ್ಭಾವಃ । ಶಿಶೀತೇ । ಶೋ ತನೂಕರಣೇ । ವ್ಯತ್ಯಯೇನಾತ್ಮನೇಪದಂ । ಬಹುಲಂ

**ಛಂದಸೀತಿ ವಿಕರಣಸ್ಯ ಶ್ಲುಃ । ಆದೇಚ ಇತ್ಯಾತ್ವಂ । ತತೋ ದ್ವಿರ್ವಚನೇ ಬಹುಲಂ ಛಂದಸಿ । ಪಾ- ೭-೪-೭೮ । ಇತ್ಯಭ್ಯಾಸಸ್ಯೇತ್ವಂ । ಈ ಹಲ್ಯಘೋರಿತೀತ್ವಂ । ವ್ಯತ್ಯಯೇನಾದ್ಯುದಾತ್ತತ್ವಂ । ಯದ್ವೃತ್ತ- ಯೋಗಾದನಿಘಾತಃ । ಈಶತ । ಲಙಿ ಬಹುಲಂ ಛಂದಸೀತಿ ಶಪೋ ಲುಗಭಾವಃ । ನ ಮಾಙ್ಯೋಗ ಇತ್ಯಡಾಗಮಾಭಾವಃ ॥**

॥ ಪ್ರತಿಪದಾರ್ಥ ॥

**ತಪುರ್ಜಂಭ**— ದಹಿಸತಕ್ಕ ಕಿರಣಗಳೇ ಆಯುಧವಾಗಿ ಉಳ್ಳ ಅಗ್ನಿಯೇ, । **ಅರಾವ್ಣಃ**— (ನಮಗೆ ಕೊಡಬೇಕಾದ) ಧನಾದಿಗಳನ್ನು ಕೊಡಗಂತೆ ತಡೆಯುವ ಶತ್ರುಗಳನ್ನು । **ಘನೇವ**—ಕಠಿನವಾದ ಕಲ್ಲುಗಳಿಂದ(ಕುಂಬಾ ರನ ಮಡಕೆಗಳನ್ನು) ನಾಶಮಾಡುವಂತೆ । **ವಿಷ್ವಕ್**— ಸುತ್ತಲೂ । **ವಿಜಹಿ**— ಸಂಪೂರ್ಣವಾಗಿ ನಾಶಮಾಡು । **ಯಃ**— ಯಾವನಾದರೂ ಇತರ ಶತ್ರುವು । **ಅಸ್ಮಧ್ರುಕ್**— ನಮಗೆ ದ್ರೋಹವನ್ನು ಬಯಸಿ ಭಯಪಡಿಸಿ ಹಿಂಸಿ ಸುತ್ತಾನೋ, । **ಯಃ**— ಯಾವ ಮನುಷ್ಯ ರೂಪದಲ್ಲಿರುವ ಶತ್ರುವು । **ಅಕ್ತುಭಿಃ**— ಹರಿತವಾದ ಆಯುಧಗ ಳಿಂದ । **ಅತಿ ಶಿಶೀತೇ**— ನಮ್ಮನ್ನು ಪ್ರಹರಿಸಿ ಕುಗ್ಗಿಸುತ್ತಾನೆಯೋ । **ಸ ರಿಪುಃ**— (ಆ ರೀತಿ ಭಯಪಡಿಸುವ ಮತ್ತು ಪ್ರಹರಿಸುವ) ಆ ಶತ್ರುವು (ಅಥವಾ ಶತ್ರುಗಳು) । **ನಃ**— ನಮ್ಮ ವಿಷಯದಲ್ಲಿ । **ಮಾ ಈಶತ**— (ಜಯಿ ಸಲು) ಶಕ್ತನಾಗದಿರಲಿ. ।

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನ ಕಿರಣಗಳು ಯಾವಾಗಲೂ ದಹಿಸುವ ಶಕ್ತಿಯುಳ್ಳವುಗಳಾಗಿ ನಮ್ಮ ಶತ್ರುನಾಶಕ ವಾಗಿವೆ. ನಮಗೆ ಕೊಡಬೇಕಾದ ಧನಾದಿಗಳನ್ನು ಕೊಡದಂತೆ ತಡೆಯುವ ಶತ್ರುಗಳನ್ನು ಕೊಲ್ಲಲು ನಿನ್ನ ಕಿರಣಗಳಿಗೆ ಕೊಂಚವೂ ಶ್ರಮವಿಲ್ಲ. ಕಠಿಣವಾದ ಕಲ್ಲು ಮತ್ತು ಕೋಲುಗಳಿಂದ ಕುಂಬಾರನ ಮಡಿಕೆಗಳನ್ನು ಎಷ್ಟು ಸುಲಭವಾಗಿ ಒಡೆಯಬಹುದೋ ಅಷ್ಟೇ ಸುಲಭವಾಗಿ ನಮ್ಮ ಶತ್ರುಗಳನ್ನು ನಾಶಮಾಡು. ಆ ಕಿರಣಗಳಿಂದ ನಮಗೆ ದ್ರೋಹ ಮಾಡಿ ಹಿಂಸಿಸುವ ರಾಕ್ಷಸ ರೂಪದಲ್ಲಿರುವ ಶತ್ರುಗಳನ್ನೂ ಮತ್ತು ಹರಿತವಾದ ಆಯುಧಗಳಿಂದ ನಮ್ಮನ್ನು ಪ್ರಹರಿಸಿ ಭಯಪಡಿಸುವ ಮತ್ತು ನಮ್ಮನ್ನು ಕುಗ್ಗಿಸುವ ಮನುಷ್ಯ ರೂಪದ ಶತ್ರುಗಳನ್ನು ಸಹ ನಾಶಮಾಡಿ ಅವರು ನಮ್ಮ ಮೇಲೆ ಕೈಯೆತ್ತಿದಾಗ ನಮ್ಮನ್ನು ಜಯಿಸಲು ಶಕ್ತರಾಗದಿರುವಂತೆ ಮಾಡು.

## English Translation

Agni, with the burning rays destroy entirely our enemies who give no gifts ( as a man smashes earthen pots ) with a hammer ; let not the person who hates us, nor the man who attacks us with sharp weapons prevail against us.

ವಿಶೇಷ ವಿಷಯಗಳು

**ಘನೇನ— ಕಠಿನೇನ ದಂಡಪಾಷಾಣಾದಿನಾ** । ಕಠಿನವಾದ ಅಥವಾ ಘಟ್ಟಿಯಾದ ದೊಣ್ಣೆ, ಕಲ್ಲು ಮೊದಲಾದ ಆಯುಧಗಳಿಂದ ಸುಲಭವಾಗಿ ಒಡೆದು ಹೋಗುವ ಮಡಕೆ ಮುಂತಾದ ವಸ್ತುಗಳನ್ನು ಹೇಗೆ ನಾಶಮಾಡ ಬಹುದೋ ಅದರಂತೆ ನಮ್ಮ ಶತ್ರುಗಳನ್ನು ನಾಶಮಾಡು ಎಂದಭಿಪ್ರಾಯವು.

**ವಿಷ್ವಕ್— ಸರ್ವತಃ ।** ಎಲ್ಲಾ ಕಡೆಯಲ್ಲಿಯೂ, ಅಥವಾ ಸಂಪೂರ್ಣವಾಗಿ.

**ತಪುರ್ಜಂಭ— ತಪ ಸಂತಾಪೇ । ಜಭಿ ನಾಶನೇ ।** ಅಗ್ನಿಯ ಜ್ವಾಲೆಗಳು ಅಥವಾ ಕಿರಣಗಳು ಎಲ್ಲ ವನ್ನೂ (ಮುಖ್ಯವಾಗಿ ಶತ್ರುಜನರನ್ನು) ದಹಿಸಲು ಶಕ್ತಿಯುಳ್ಳದ್ದರಿಂದ ತಪುರ್ಜಂಭ ಎಂದರೆ ಚೆನ್ನಾಗಿ ಸುಡುವ ರಶ್ಮಿ ಗಳುಳ್ಳ ಅಗ್ನಿಯೆಂದರ್ಥವು

**ಅಸ್ಮಧ್ರುಕ್— ಅಸ್ಮದ್ವಿಷಯೇದ್ರೋಹಕಾರೀ ।** ನಮ್ಮ ವಿಷಯದಲ್ಲಿ ದ್ರೋಹವನ್ನೆಣಿಸುವವನು ನಮ್ಮ ದ್ವೇಷಿಯು.

**ಶಿಶೀತೇ ಅತ್ಯಕ್ತುಭಿಃ—** ಎಂದರೆ ಆಯುಧಾದಿಗಳಿಂದ ನಮ್ಮನ್ನು ಪ್ರಹರಿಸುವ ಎಂದು ಭಾಷ್ಯಕಾರರ ವಿವರ ಣೆಯು. ವೇದಾರ್ಥಯತ್ನಕಾರರು ಅಕ್ತುಭಿಃ ಎಂಬ ಶಬ್ದಕ್ಕೆ ರಾತ್ರಿಕಾಲದಲ್ಲಿ ಎಂದು ಅರ್ಥವಿವರಣೆ ಮಾಡಿರುವರು

**ದ್ಯುಭಿರಕ್ತುಭಿಃ ಪರಿಪಾತಮಸ್ಮಾನರಿಷ್ಟೇಭಿರಶ್ವಿನಾ ಸೌಭಗೇಭಿಃ ।**
(ಋ. ಸಂ. ೧-೧೧೨-೨೫.)

ಎಂಬ ಋಕ್ಕಿನಲ್ಲಿ ಹೇಳಿರುವ ಈ ವಿಧವಾದ ಅರ್ಥವೂ ಇಲ್ಲಿ ಸರಿಯಾಗಿ ಹೊಂದುವುದು.

**ಮಾನಃ ಸ ರಿಪುಃ ಈಶತ—**ಅಂತಹ ಎಂದರೆ ಮೇಲೆ ಹೇಳಿದ ಶತ್ರುಜನವು ನಮ್ಮ ಮೇಲೆ ಅಧಿಕಾರ ಮಾಡ ದಿರಲಿ, ನಮ್ಮನ್ನು ತೊಂದರೆಪಡಿಸದಿರಲಿ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಘನಾ ಇವ—**ಘನಶಬ್ದದ ಮುಂದೆ ಬರುವ ತೃತೀಯಾ ಏಕವಚನ ಟಾ ಪ್ರತ್ಯಯಕ್ಕೆ **ಸುಪಾಂ ಸುಲುಕ್,** ಎಂದು ಡಾ ಆದೇಶ. ಟಿಲೋಪ, ಇವಶಬ್ದದೊಂದಿಗೆ **ಇವೇನ ಸಮಾಸಃ—,** ಎಂದು ನಿತ್ಯಸಮಾಸ.

**ಜಹಿ**—ಹನಧಾತು ಮುಂದೆ ಲೋಟ್, ಸಿಪ್, ಹಿ ಆದೇಶ, **ಹನ್ತೇರ್ಜಃ** (ಪಾ. ಸೂ. ೬-೪-೩೬) ಹಿ ಪರ ದಲ್ಲಿರುವಾಗ ಹನ್‌ಧಾತುವಿಗೆ ಜ ಎಂಬ ಆದೇಶ ಬರುತ್ತದೆ ಎಂದು ಜ ಆದೇಶ, ಜ+ಹಿ, **ಅತೋಹೇಃ** (ಪಾ. ಸೂ. ೬-೪-೧೦೫) ಹ್ರಸ್ವಾಕಾರದ ಮುಂದೆ ಇರುವ ಹಿಗೆ ಲುಕ್ ಬರುತ್ತೆ ಎಂದು ಹಿಗೆ ಲುಕ್ ಪ್ರಾಪ್ತವಾದರೂ, ಈ ಲುಕ್ಕನ್ನು ಮಾಡುವಾಗ **ಅಸಿದ್ಧವದತ್ರಾಭಾತ್** (ಪಾ. ಸೂ. ೬-೪-೨೨) ಸಮಾನಾಶ್ರಯವಾದ ಭಾಧಿಕಾರಶಾಸ್ತ್ರವನ್ನು ಮಾಡುವಾಗ ಮತ್ತೊಂದು ಭಾಧಿಕಾರಶಾಸ್ತ್ರವು ಅಸಿದ್ಧವಾಗುವುದು ಎಂದು ಜ ಆದೇಶವು ಅಸಿದ್ಧವಾಗುತ್ತೆ. ಆದ್ದರಿಂದ

ಹನ್ ನ ಮುಂದೆ ಓ ಇದ್ದಂತೆ ಆಗುತ್ತೆ ಏವಂಚ ಹ್ರಸ್ವಾಕಾರದ ಮುಂದೆ ಇಲ್ಲದೇ ಇರುವುದರಿಂದ ಹಿಗೆ ಲುಕ್ ಬರುವುದಿಲ್ಲ.

**ತಪುರ್ಜಮ್ಭ**—ತಪ ಸಂತಾಪೇ ಧಾತು. ಉಸಿನ್ ಎಂಬ ಉಣಾದಿ ಪ್ರತ್ಯಯವು ಕರಣಾರ್ಥದಲ್ಲಿ ಬರುತ್ತೆ. ತಪುಸ್ ಎಂಬುದು ನಿತ್ಸ್ವರದಿಂದ ಆದ್ಯುದಾತ್ತ. ಜಭಿ ನಾಶನೇ ೧೦ ನೇ ಗಣದ ಧಾತು. ಜಂಭ್ಯನ್ತೇ ಶತ್ರವಃ ಏಭಿಃ ಇತಿ ಜಂಭಾನಿ, ಶತ್ರುಗಳನ್ನು ನಾಶಪಡಿಸುವ ಆಯುಧಗಳು ಎಂದರ್ಥ. ಕರಣಾರ್ಥದಲ್ಲಿ ಘಞ್ ಪ್ರತ್ಯಯ. ತಪೂಂಷ್ಯೇವ ಜಂಭಾನಿ ಯಸ್ಯ ಎಂದು ಬಹುವ್ರೀಹಿ ಯಾವ ಅಗ್ನಿಗೆ ಪ್ರಕಾಶಮಾನವಾದ ಅಥವಾ ಶತ್ರುಗಳಿಗೆ ಹಿಂಸೆಯನ್ನು ಕೊಡುವ ಕಿರಣಗಳೇ ಆಯುಧಗಳಾಗಿ ಇರುವುವೋ ಆ ಅಗ್ನಿ ಎಂದು ತಪುರ್ಜಂಭ ಪದದ ಅರ್ಥ. ಆರನೇ ಅಧ್ಯಾಯದ **ಆಮನ್ತ್ರಿತಸ್ಯ ಚ** ಎಂಬುದರಿಂದ ಆದ್ಯುದಾತ್ತ, ಪಾದಾದಿಯಲ್ಲಿರುವುದರಿಂದ ಆಷ್ಟಮಿಕಾನುದಾತ್ತ ಬರುವುದಿಲ್ಲ.

**ಅಸ್ಮದ್ಧ್ರುಕ್**—ಅಸ್ಮಭ್ಯಂ ದ್ರೋಗ್ಧಿ ಎಂದು ವಿಗ್ರಹ, ದ್ರುಹ ಜಿಘಾಂಸಾಯಾಂ ಎಂದು ದಿವಾದಿಧಾತು **ಸತ್ಸೂದ್ವಿಷ ದ್ರುಹ**—(ಪಾ. ಸೂ. ೩-೨-೬೧) ಉಪಸರ್ಗ ಇದ್ದರೂ ಇಲ್ಲದೇ ಇದ್ದರೂ ಸುಬಂತವು ಉಪಪದವಾದರೆ ಈ ಧಾತುಗಳ ಮುಂದೆ ಕ್ವಿಪ್ ಬರುತ್ತೆ ಎಂದು ಕ್ವಿಪ್, ಸಮಾಸದಲ್ಲಿರುವ ಸುಪ್‌ಗೆ ಲುಕ್, ಸು ಪ್ರತ್ಯಯ. **ಹಲ್-ಙ್ಯಾಭ್ಯಃ—**, ಎಂದು ಸುಲೋಪ, **ವಾದ್ರುಹ ಮುಹಷ್ಣುಹಷ್ಣಿಹಾಂ** (ಪಾ. ಸೂ. ೮-೨-೩೩) ಝಲ್ ಪರದಲ್ಲಿದ್ದರೂ ಪದಾಂತ ವಿಷಯದಲ್ಲಿಯೂ ಈ ಧಾತುಗಳ ಹಕಾರಕ್ಕೆ ಘ್ ಆದೇಶ ಬರುತ್ತೆ ಎಂದು ಪದಾಂತದಲ್ಲಿರುವ ಹ್‌ಗೆ ಘ್ ಬರುತ್ತೆ. ಅಸ್ಮದ್‌ದ್ರುಘ್ **ಏಕಾಚೋಬಶೋ ಭಷ್ ಝಷನ್ತಸ್ಯ ಸ್ಧ್ವೋಃ** (ಪಾ ಸೂ. ೮-೨-೩೭) ಸಕಾರ ಧ್ವಶಬ್ದಗಳು ಪರದಲ್ಲಿದ್ದರೂ, ಪದಾಂತ ವಿಷಯದಲ್ಲಿಯೂ ಧಾತ್ವವಯವವೂ ಝಷಂತವೂ ಆದ ಏಕಾಚ್ಯ ಸಂಬಂಧಿಯಾದ ಬಶ್‌ಗೆ ಭಷ್ ಬರುತ್ತೆ, ಬ-ಗ-ಡ ದ ಇವು ಬಶ್‌ಗಳು, ಭ-ಘ-ಢ-ಧ ಇವು ಭಷ್‌ಗಳು. ಇದರಿಂದ ದಕಾರಕ್ಕೆ, ಧಕಾರ ಅಸ್ಮದ್ಧ್ರುಘ್ ಚರ್ತ್ವ ಬರುತ್ತೆ.

**ಶಿಶೀತೇ**—ಶೋ ತನೂಕರಣೇ ದಿವಾದಿಧಾತು, ಪರಸ್ಮೈಪದಿ, **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಶಬಾದಿ ವಿಕರಣಗಳು ಛಂದಸ್ಸಿನಲ್ಲಿ ವ್ಯತ್ಯಾಸವಾಗಿ ಬರುವುವು ಎಂದು ಅರ್ಥ. ಈ ಸೂತ್ರದ ಬಹುಲ ಗ್ರಹಣದ ಅರ್ಥವನ್ನು ಹೀಗೆ ಹೇಳಿರುವರು. **ಸುಪ್ತಿಙುಪಗ್ರಹಲಿಙ್ಗನರಾಣಾಂ ಕಾಲಹಲಚ್‌ಸ್ವರ ಕರ್ತೃಯಙಾಂ-ಚ । ವ್ಯತ್ಯಯ ಮಿಚ್ಛತಿಶಾಸ್ತ್ರಕೃದೇಷಾಂ ಸೋಽಪಿ ಚ ಸಿಧ್ಯ ತಿ ಬಾಹುಲಕೇನ ॥** ಇಲ್ಲಿ ಉಪಗ್ರಹ ಎಂದರೆ ಪರಸ್ಮೈಪದ ಆತ್ಮನೇಪದಗಳು. ಇವುಗಳಿಗೆ ವ್ಯತ್ಯಾಸ ಎಂದರೆ ಪರಸ್ಮೈಪದಕ್ಕೆ ಬದಲಾಗಿ ಆತ್ಮನೇಪದವೂ ಆತ್ಮನೇ ಪದಕ್ಕೆ ಬದಲಾಗಿ ಪರಸ್ಮೈಪದವೂ ಬರುತ್ತೆ ಎಂದಿರುವರು. ಆದ್ದರಿಂದ ಪರಸ್ಮೈಪದಕ್ಕೆ ಬದಲಾಗಿ ಆತ್ಮನೇಪದ ಬರುತ್ತೆ. ಶ್ಯನ್ ವಿಕರಣಕ್ಕೆ **ಬಹುಲಂ ಛಂದಸಿ** ಎಂದು ಶ್ಲು ಬರುತ್ತೆ. **ಆದೇಚ ಉಪದೇಶೇಽಶಿತಿ** (ಪಾ. ಸೂ. ೬-೧-೪೫) ಶಿತ್ ಆದ ಪ್ರತ್ಯಯ ಪರದಲ್ಲಿಲ್ಲದೇ ಇದ್ದರೆ ಉಪದೇಶದಲ್ಲಿ ಏಜಂತವಾದ ಧಾತುವಿಗೆ ಆತ್ವ ಬರುತ್ತೆ ಎಂದು ಓಕಾರಕ್ಕೆ ಆಕಾರ. **ಶ್ಲೌ** (ಪಾ. ಸೂ. ೬-೧-೧೦) ಎಂದು ದ್ವಿತ್ವ-ಶಾ-ಶಾ+ತೇ ಅಭ್ಯಾಸಕ್ಕೆ ಹ್ರಸ್ವ **ಬಹುಲಂ ಛಂದಸಿ** (ಪಾ. ಸೂ ೭-೪-೭೮) ಛಂದಸ್ಸಿನಲ್ಲಿ ಅಭ್ಯಾಸಕ್ಕೆ ಇಕಾರವು ಬಹುಲವಾಗಿ ಬರುತ್ತೆ ಎಂದು

ಮೊದಲನೆ ಶಗೆ ಇಕಾರ, ಶಿಶಾ+ತೇ, **ಈ ಹಲ್ಯಘೋಃ** (ಪಾ. ಸೂ. ೬-೪-೧೧೩) ಕಿತ್ ವಾ ಙಿತ್ ಆದ ಹಲಾದಿ ಸಾರ್ವಧಾತುಕ ಪರದಲ್ಲಿದ್ದರೆ ಶ್ನಾಪ್ರತ್ಯಯ-ಅಭ್ಯಸ್ತ-ಇವುಗಳ ಆಕಾರಕ್ಕೆ ಈಕಾರ ಬರುತ್ತೆ ಎಂದು ಆಗೆ ಈಕಾರ ಶಿಶೀತೇ ಎಂದಾಗುತ್ತೆ. ವ್ಯತ್ಯಾಸದಿಂದ ಆದ್ಯುದಾತ್ತ ಬರುತ್ತೆ. **ಯೋಃ** ಎಂಬ ಯದ್ವೃತ್ತಯೋಗವಿದೆ **ಯದ್ವೃತ್ತಾನ್ನಿತ್ಯಂ** ಎಂದು ಸರ್ವಾನುದಾತ್ತ ಬರುವುದಿಲ್ಲ.

**ಈಶತೆ**—ಈಶ ಐಶ್ವರ್ಯೇ ಅದಾದಿ, ಆತ್ಮನೇಪದಿ, ಲಙ್, **ನ ಮಾಙ್ಯೋಗೇ** (ಪಾ. ಸೂ ೬-೪-೭೪) ಎಂದು ನಿಷೇಧ ಬರುವುದರಿಂದ ಅಟ್ ಆಗಮ ಬರುವುದಿಲ್ಲ. ಅದಾದಿಯಾದ್ದರಿಂದ ನ್ಯಾಯವಾಗಿ ಶಪ್‌ಗೆ ಲುಕ್ ಬರಬೇಕು. ಆದರೂ **ಬಹುಲಂ ಛಂದಸಿ** ಎಂದು ಲುಕ್ ಬರುವುದಿಲ್ಲ. ॥೧೬॥



॥ ಸಂಹಿತಾಪಾಠಃ ॥

ಅಗ್ನಿರ್ವನ್ವೇ ಸುವೀರ್ಯಮಗ್ನಿಃ ಕಣ್ವಾಯ ಸೌಭಗಂ ।
ಅಗ್ನಿಃ ಪ್ರಾವನ್ಮಿತ್ರೋತ ಮೇಧ್ಯಾತಿಥಿಮಗ್ನಿಃ ಸಾತಾ ಉಪಸ್ತುತಂ ॥

॥ ಪದಪಾಠಃ ॥

ಅಗ್ನಿಃ । ವನ್ವೇ । ಸುऽವೀರ್ಯಂ । ಅಗ್ನಿಃ । ಕಣ್ವಾಯ । ಸೌಭಗಂ ।
ಅಗ್ನಿಃ । ಪ್ರ । ಆವತ್ । ಮಿತ್ರಾ । ಉತ । ಮೇಧ್ಯऽಅತಿಥಿಂ । ಅಗ್ನಿಃ ।
ಸಾತೌ । ಉಪऽಸ್ತುತಂ ॥ ೧೭ ॥

ಸಾಯಣಭಾಷ್ಯಂ

ಅಗ್ನಿರ್ದೇವಃ ಸುವೀರ್ಯಂ ಶೋಭನವೀರ್ಯೋಪೇತಂ ಧನಮುದ್ದಿಶ್ಯ ವನ್ವೇ । ಯಾಚಿತಃ । ಸೋऽಗ್ನಿಃ ಕಣ್ವಾಯ ಮಹರ್ಷಯೇ ಸೌಭಾಗ್ಯಂ ಶೋಭನಧನಾದಿದಿರೂಪಂ ಭಾಗ್ಯಂ ಪ್ರಾಯಚ್ಛದಿತಿ

**ಶೇಷಃ । ತಥಾಗ್ನಿರ್ಮಿತ್ರಾಸ್ಮನ್ಮಿತ್ರಾಣಿ ಪ್ರಾವತ್ । ಪ್ರಕರ್ಷೇಣ ರಕ್ಷಿತವಾನ್ । ಉತಾಪಿ ಚ ಮೇಧ್ಯಾತಿಥಿಂ ಮೇಧಯೋಗ್ಯೈರತಿಥಿಭಿರುಪೇತಮೃಷಿಂ ಪ್ರಾವತ್ । ತಥೋಪಸ್ತುತಮನ್ಯಮಪಿ ಸ್ತೋತಾರಂ ಯಜಮಾನಂ ಸಾತೌ ಧನಾದಿದಾನನಿಮಿತ್ತಂ ಪ್ರಾವದಿತಿ ಶೇಷಃ ॥ ವವ್ನೇ । ವನು ಯಾಚನೇ । ಕರ್ಮಣಿ ಲಿಟ್ । ನ ಶಸದದವಾದಿಗುಣಾನಾಂ । ಪಾ. ೬-೪-೧೨೬ । ಇತ್ಯೇತ್ವಾಭ್ಯಾಸಲೋಪಯೋಃ ಪ್ರತಿಷೇಧಃ । ಉಪಧಾಲೋಪಶ್ಛಾಂದಸಃ । ಸೌಭಗಂ । ಸುಭಗಾನ್ಮಂತ್ರ ಇತ್ಯುದ್ಗಾತ್ರಾದಿಷು ಪಾಠಾತ್ತಸ್ಯ ಭಾವ ಇತ್ಯೇತಸ್ಮಿನ್ನರ್ಥೇಽಞ್ । ಪಾ. ೫-೧-೧೨೯ । ಞಿತ್ತ್ವಾದಾದ್ಯುದಾತ್ತತ್ವಂ । ಮಿತ್ರಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಉಪಸ್ತುತಂ । ಕ್ತಿಚ್ಕ್ತೌ ಚ ಸಂಜ್ಞಾಯಾಮಿತಿ ಸ್ತೌತೇಃ ಕರ್ತರಿ ಕ್ತಃ । ಥಾಥಾದಿನೋತ್ತರಪದಾಂತೋದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಅಗ್ನಿಃ**— ಅಗ್ನಿದೇವನು. । **ಸುವೀರ್ಯಂ**— ಹಿತಕರವೂ ಶಕ್ತಿದಾಯಕವೂ ಆದ ಧನಕ್ಕಾಗಿ । **ವವ್ನೇ**- ಪ್ರಾರ್ಥಿಸಲ್ಪಟ್ಟಿರುವನು. । **ಅಗ್ನಿಃ**— ಅಗ್ನಿದೇವನು । **ಕಣ್ವಾಯ**— ಕಣ್ವನೆಂಬ ಮಹರ್ಷಿಗೆ । **ಸೌಭಗಂ**— ಅಭ್ಯುದಯರೂಪದಲ್ಲಿರುವ ಪುಣ್ಯವನ್ನು (ಕೊಟ್ಟನು ಹಾಗೆಯೇ) । **ಅಗ್ನಿಃ**— ಅಗ್ನಿಯು । **ಮಿತ್ರಾ**— ನಮ್ಮ ಸ್ನೇಹಿತನನ್ನು । **ಪ್ರಾವತ್**— ಚೆನ್ನಾಗಿ ಕಾಪಾಡಿದನು. । **ಉತ**— ಅದೂ ಅಲ್ಲದೆ । **ಮೇಧ್ಯಾತಿಥಿಃ**— ಪೂಜಾರ್ಹರಾದ ಅತಿಥಿಯೊಡಗೂಡಿದ ಋಷಿಯನ್ನೂ (ಕಾಪಾಡಿದನು) (ಮತ್ತು) । **ಉಪಸ್ತುತಂ**— ಸ್ತೋತ್ರ ಮಾಡಿದ ಬೇರೆ ಭಕ್ತನಾದ ಯಜ್ಞಕರ್ತನನ್ನೂ । **ಸಾತೌ**— (ಅವನ) ಧನಲಾಭೇಚ್ಛೆಯನ್ನು ತೃಪ್ತಿಗೊಳಿಸುವ ಸಲುವಾಗಿ (ಚೆನ್ನಾಗಿ ಕಾಪಾಡಿದನು. ) ।

॥ ಭಾವಾರ್ಥ ॥

ಮಾನವನಿಗೆ ಮಂಗಳಕರವೂ, ಶಕ್ತಿದಾಯಕವೂ ಆಗಿರತಕ್ಕ ಮುಖ್ಯವಾದ ಧನವನ್ನು ಅಗ್ನಿದೇವನ ಅನುಗ್ರಹದಿಂದ ಪಡೆಯಲು ಸಾಧ್ಯ. ಆ ಧನಕ್ಕಾಗಿ ಅವನ ಭಕ್ತರೆಲ್ಲ ಅವನನ್ನು ಬೇಡಿದರು. ಅವನು ಸಕಲ ಭಕ್ತರಿಗೂ ಅದನ್ನು ದಯಪಾಲಿಸಿದನು. ಅಭ್ಯುದಯರೂಪದಲ್ಲಿರುವ ಆ ಪುಣ್ಯವನ್ನು ಭಕ್ತನಾದ ಕಣ್ವನೆಂಬ ಋಷಿಗೂ, ನಮ್ಮ ಇತರ ಸ್ನೇಹಿತರಿಗೂ, ತನ್ನನ್ನು ಸ್ತೋತ್ರಮಾಡುವ ಎಲ್ಲ ಭಕ್ತರಿಗೂ ಕೊಟ್ಟು, ಎಲ್ಲರನ್ನೂ ಅನುಗ್ರಹಿಸಿ ಎಲ್ಲರ ಧನೇಚ್ಛಾರೂಪವಾದ ಇಷ್ಟಾರ್ಥವನ್ನು ತೃಪ್ತಿಗೊಳಿಸಿ ಕಾಪಾಡಿದನು

English Translation

Agni is praised for power and wealth ; he has granted prosperity to Kanwa, he has protected our friends, he has protected Medhyatithi and Upastuta ( or sacrificer ) who prayed for him to get riches.

ವಿಶೇಷ ವಿಷಯಗಳು

**ಸುವೀರ್ಯಂ—ಶೋಭನವೀರ್ಯೋಪೇತಂ ಧನಮುದ್ದಿಶ್ಯ ।** ಎಂದರೆ ಸೌಭಾಗ್ಯ ಯುಕ್ತವಾದ (ಅಥವಾ ಪರಾಕ್ರಮಯುಕ್ತವಾಗ) ಧನವೆಂದು ಹೇಳಿರುವರು. ವೀರ್ಯವೆಂದರೆ ಬಲ, ಶಕ್ತಿ, ಪರಾಕ್ರಮ ಎಂದು ಅರ್ಥವು. ಧನವೆಂಬ ಅರ್ಥವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

**ಸೌಭಗಂ—ಶೋಭನಧನಾದಿರೂಪಂ ಭಾಗ್ಯಂ ।** ಉತ್ತಮವಾದ ಧನಾದ್ಯೈಶ್ವರ್ಯವನ್ನು.

**ಅಗ್ನಿಃ ಪ್ರ ಅವತ್ ಮಿತ್ರಾ ಉತ ಮೇಧ್ಯಾತಿಥಿಃ—** ಅಗ್ನಿಯು ಮಿತ್ರರನ್ನು ಎಂದರೆ (ಕಣ್ವಋಷಿಯ ಮಿತ್ರರನ್ನು) ಮೇಧ್ಯಾತಿಥಿ ಎಂಬ ಕಣ್ವವಂಶಸ್ಥನಾದ ಓರ್ವ ಋಷಿಯನ್ನೂ ಕಾಪಾಡಿದನು. ಎಂದರ್ಥವು. ಇಲ್ಲಿ ಮೇಧ್ಯಾತಿಥಿ ಶಬ್ದಕ್ಕೆ ಭಾಷ್ಯಕಾರರು ಹೇಳಿರುವ ಮೇಧಯೋಗ್ಯೈರತಿಥಿಭಿರುಪೇತಂ— ಪೂಜಾರ್ಹರಾದ ಅತಿಥಿಗಳಿಂದ ಸಹಿತನಾದ— ಎಂಬ ಅರ್ಥವನ್ನು ಹೇಳುವುದಕ್ಕಿಂತ ಕಣ್ವವಂಶಸ್ಥನಾದ ಮೇಧ್ಯಾತಿಥಿಯೆಂಬ ಋಷಿಯೆಂದು ಹೇಳುವುದೇ ಪ್ರಶಸ್ತವಾಗಿರುವುದು ಏಕೆಂದರೆ ಮೇಧ್ಯಾತಿಥಿಯು ಕಣ್ವವಂಶದಲ್ಲಿ ಒಬ್ಬ ಪ್ರಸಿದ್ಧನಾದ ಋಷಿಯಾಗಿರುವುದರಿಂದ ಅದೇ ಕಣ್ವವಂಶಸ್ಥನಾದ ಈ ಸೂಕ್ತದ ಋಷಿಯು ಮೇಧ್ಯಾತಿಥಿಯ ಹೆಸರನ್ನು ಸ್ಮರಿಸುವುದು ಯೋಗ್ಯವಾಗಿದೆ. ಇದಲ್ಲದೆ ಮಿತ್ರಾ ಎಂಬ ಶಬ್ದಕ್ಕೆ ಮಿತ್ರಾವರುಣರೆಂದು ಸ್ಕಂದಸ್ವಾಮಿಯು ಹೇಳಿರುವ ಅರ್ಥವೂ ಅಷ್ಟು ಸಮಂಜಸವಾಗಿಲ್ಲ. ಮಿತ್ರಾವರುಣರೂ ಅಗ್ನಿಯಂತೇ ಮುಖ್ಯ ದೇವತೆಗಳಾದುದರಿಂದ ಒಬ್ಬ ದೇವತೆಯು ಇನ್ನೊಬ್ಬ ದೇವತೆಯನ್ನು ಕಾಪಾಡುವುದೆಂದರೆ ಸರಿಯಾಗಿ ಕಾಣುವುದಿಲ್ಲ.

ವ್ಯಾಕರಣಪ್ರಕ್ರಿಯಾ

**ವವ್ನೇ—**ವನು ಯಾಚನೇ ತನಾದಿಧಾತು. ಕರ್ಮಣಿ ಲಿಟ್, ತಗೆ **ಲಿಟಸ್ತಝಯೋಃ—,** ಎಂದು ಏಶ್ **ನ ಶಸದದವಾದಿಗುಣಾನಾಮ್** (ಪಾ. ಸೂ. ೬-೪-೧೨೬) ಶಸ್-ದದ್-ಧಾತುಗಳು ವಕಾರಾದಿ ಧಾತುಗಳು, ಇವುಗಳ ಅಕಾರಕ್ಕೂ ಗುಣಶಬ್ದವನ್ನು ಉಚ್ಚರಿಸಿ (ಸಾಕ್ಷಾತ್ಪರಂಪರಯಾ ವಾ) ವಿಹಿತವಾದ ಅಕಾರಕ್ಕೂ ಏತ್ವ ಬರುವುದಿಲ್ಲ ಮತ್ತು ಇವುಗಳ ಅಭ್ಯಾಸಕ್ಕೆ ಲೋಪವೂ ಬರುವುದಿಲ್ಲ ಎಂದು ವಕಾರಾದಿ ಯಾದ ವನ್ ಧಾತುವಿನ ಅಕಾರಕ್ಕೆ ಏತ್ವ ಬರುವುದಿಲ್ಲ ಮತ್ತು ಅಭ್ಯಾಸಕ್ಕೆ ಲೋಪವೂ ಬರುವುದಿಲ್ಲ, ವವನ್+ಏ ಉಪಧೆಗೆ ಲೋಪವು ಛಾಂದಸವಾಗಿ ಬರುತ್ತೆ.

**ಸೌಭಗಮ್**— ಉದ್ಗಾತ್ರಾದಿಗಣದಲ್ಲಿ ಸುಭಗಶಬ್ದವು ಪಠಿತವಾಗಿದೆ. ಆದ್ದರಿಂದ **ಪ್ರಾಣಭೃಜ್ಜಾತಿವಯೋ ವಚನೋದ್ಗಾತ್ರಾದಿಭ್ಯೋಽಞ್** (ಪಾ. ಸೂ. ೫-೧-೧೨೯) ಪ್ರಾಣವುಳ್ಳ ಜಾತಿವಾಚಕಗಳು, ವಯೋವಿಶೇಷವಾಚಕಗಳು, ಮತ್ತು ಉದ್ಗಾತ್ರಾದಿಗಣದಲ್ಲಿರುವ ಶಬ್ದಗಳು ಇವುಗಳ ಮುಂದೆ ಭಾವ, ಅಥವಾ ಕರ್ಮ ಎಂಬ ಅರ್ಥಗಳಲ್ಲಿ ಅಞ್ ಬರುತ್ತೆ ಎಂದು ಅಞ್, ಸುಭಗ+ಅ, ಆದಿವೃದ್ಧಿ ಞಿತ್ತ್ವಾದ್ದರಿಂದ ಆದ್ಯುದಾತ್ತ.

**ಮಿತ್ರಾ—** ಮಿತ್ರಶಬ್ದ ನಪುಂಸಕಲಿಂಗ, ಶಸ್‌ಗೆ ಶಿ ಆದೇಶ, **ಶೇಶ್ಛಂದಸಿ ಬಹುಲಂ** ಎಂದು ಶಿಗೆ ಲೋಪ.

**ಉಪಸ್ತುತಮ್—ಕ್ತಿಚ್ ಕ್ತೌಚ ಸಂಜ್ಞಾಯಾಂ** ಎಂದು ಸ್ತು ಧಾತು ಮುಂದೆ ಕರ್ತ್ರರ್ಥದಲ್ಲಿ ಕ್ತ ಪ್ರತ್ಯಯ, **ಥಾಥಘಞ್ಕ್ತಾ—,** ಎಂದು ಉತ್ತರ ಪದಕ್ಕೆ ಅಂತೋದಾತ್ತ. ॥೧೭॥



॥ ಸಂಹಿತಾಪಾಠಃ ॥

ಅಗ್ನಿನಾ ತುರ್ವಶಂ ಯದುಂ ಪರಾವತ ಉಗ್ರಾದೇವಂ ಹವಾಮಹೇ ।
ಅಗ್ನಿರ್ನಯನ್ನವವಾಸ್ತ್ವಂ ಬೃಹದ್ರಥಂ ತುರ್ವೀತಿಂ ದಸ್ಯವೇ ಸಹಃ ॥ ೧೮ ॥

॥ ಪದಪಾಠಃ ॥

ಅಗ್ನಿನಾ । ತುರ್ವಶಂ । ಯದುಂ । ಪರಾಽವತಃ । ಉಗ್ರಽದೇವಂ । ಹವಾಮಹೇ ।
ಅಗ್ನಿಃ । ನಯತ್ । ನವಽವಾಸ್ತ್ವಂ । ಬೃಹತ್ಽರಥಂ । ತುರ್ವೀತಿಂ । ದಸ್ಯವೇ । ಸಹಃ ॥ ೧೮ ॥

॥ ಸಾಯಣಭಾಷ್ಯಂ ॥

ಅಗ್ನಿನಾ ಸಹಾವಸ್ಥಿತಾನ್ ತುರ್ವಶನಾಮಕಂ ಯದುನಾಮಕಮುಗ್ರದೇವನಾಮಕಂ ಚ ರಾಜರ್ಷೀನ್ಪರಾವತೋ ದೂರಾದೇಶಾದ್ಧವಾಮಹೇ । ಆಹ್ವಯಾಮಃ । ಸ ಚಾಗ್ನಿರ್ನವವಾಸ್ತುನಾಮಕಂ ಬೃಹದ್ರಥನಾಮಕಂ ತುರ್ವೀತಿನಾಮಕಂ ಚ ರಾಜರ್ಷೀನ್ನಯತ್ । ಇಹಾನಯತು । ಕೀದೃಶೋಽಗ್ನಿಃ । ದಸ್ಯವೇ ಸಹಃ ಅಸ್ಮದುಪದ್ರವಹೇತೋಶ್ಚೋರಸ್ಯಾಭಿಭವಿತಾ ॥ ನಯೆತ್ । ಣೀಞ್ ಪ್ರಾಪಣೇ ।

**ಲೇಟ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ನವವಾಸ್ತ್ವಂ । ನವಂ ವಾಸ್ತು ಯಸ್ಯಾಸೌ । ನವವಾಸ್ತುಃ । ವಾ ಛಂದಸೀತ್ಯನುವೃತ್ತೇರಮಿ ಪೂರ್ವತ್ವಾಭಾವೇ ಯಣಾದೇಶಃ । ಬೃಹದ್ರಥಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥**

॥ ಪ್ರತಿಪದಾರ್ಥ ॥

**ಅಗ್ನಿನಾ**— ಅಗ್ನಿದೇವನೊಡನೆ (ಇರತಕ್ಕ) । **ತುರ್ವಶಂ, ಯದುಂ, ಉಗ್ರದೇವಂ**— ತುರ್ವಶ, ಯದು ಮತ್ತು ಉಗ್ರದೇವ ಎಂಬ ಹೆಸರುಗಳುಳ್ಳ (ರಾಜರ್ಷಿಗಳನ್ನೂ) । **ಪರಾವತಃ**— ದೂರದೇಶದಿಂದ । **ಹ್ವಯಾಮಹೇ**— ಕರೆಯುತ್ತೇವೆ । **ದಸ್ಯವೇ ಸಹಃ**—ಚೋರನಾದ ರಾಕ್ಷಸನನ್ನು ನಿರೋಧಿಸಿ ಜಯಿಸುವ । **ಅಗ್ನಿಃ** - ಅಗ್ನಿಯು । **ನವವಾಸ್ತ್ವಂ, ಬೃಹದ್ರಥಂ, ತುರ್ವೀತಿಂ**— ನವವಾಸ್ತು, ಬೃಹದ್ರಥ, ತುರ್ವೀತಿ ಎಂಬ ಹೆಸರುಗಳುಳ್ಳ ರಾಜರ್ಷಿಗಳನ್ನೂ ಸಹ । **ನಯತ್**— ಈ ಯಜ್ಞಭೂಮಿಗೆ ಕರೆತರಲಿ.

॥ ಭಾವಾರ್ಥ ॥

ಅಗ್ನಿಯ ಜತೆಯಲ್ಲಿ ಸದ್ಗುಣಗಳಿಂದ ಕೂಡಿದ ಅನೇಕ ರಾಜರ್ಷಿಗಳಿರುವರು. ನಮ್ಮ ಯಜ್ಞದಲ್ಲಿ ಆತಿಥ್ಯವನ್ನು ಸ್ವೀಕರಿಸಲು ನಾವು ಅವರಿಗೆಲ್ಲ ಆಹ್ವಾನವನ್ನು ಕೊಡುತ್ತೇವೆ. ಶಕ್ತಿಯುತನಾದ ಅಗ್ನಿಯು ದುಷ್ಟನೂ ಚೋರನೂ ಆದ ರಾಕ್ಷಸನನ್ನು ತಡೆದು ಜಯಿಸಿ ತುರ್ವಶ, ಯದು, ಉಗ್ರದೇವ ನವವಾಸ್ತು, ಬೃಹದ್ರಥ ಮತ್ತು ತುರ್ವೀತಿ ಎಂಬ ಎಲ್ಲ ರಾಜರ್ಷಿಗಳನ್ನೂ ನಮ್ಮ ಈ ಯಜ್ಞಭೂಮಿಗೆ ಕರೆತರಲಿ.

English Translation

We invoke from a distant place, Turvasa, Yadu, Ugradeva along with Agni ; let Agni who overcomes the robbers (demons) bring Navavastwa, Brihadratha and Turviti.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಋಷಿಯು ಕೆಲವು ಪ್ರಸಿದ್ಧರಾದ ಮತ್ತು ಪ್ರಸಿದ್ಧರಲ್ಲದ ವ್ಯಕ್ತಿಗಳ ಹೆಸರನ್ನು ಸೂಚಿಸಿರುವನು ಅವರ ಹೆಸರುಗಳು ಆಗಿನ ಕಾಲದ ಜನರಿಗೆ ಬಳಕೆಯಲ್ಲಿದ್ದಂತೆ ತೋರುತ್ತದೆ.

**ತುರ್ವಶಂ**—ತುರ್ವಶ ಎಂಬುದು ಒಬ್ಬ ಮನುಷ್ಯನ ಅಥವಾ ಒಂದು ಜನಾಂಗದ ಹೆಸರು ಈ ಶಬ್ದವು ಅನೇಕ ಸಂದರ್ಭಗಳಲ್ಲಿ **ಯದು** ಎಂಬ ಮತ್ತೊಂದು ಪುರುಷ ಶಬ್ದದೊಡನೆ ಋಗ್ವೇದದಲ್ಲಿ ಅನೇಕ ಕಡೆ ಪಠಿತವಾಗಿದೆ. ಈ ಎರಡು ಶಬ್ದಗಳೂ ಪ್ರತ್ಯೇಕವಾದ ವಿಭಕ್ತಿವಚನಗಳೊಡನೆ ಇರುವುದರಿಂದ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳು. ಈ ವಿಷಯದಲ್ಲಿ ಕೆಲವು ಉದಾಹರಣೆಗಳು—

ತ್ವಮಾವಿಥ ನರ್ಯಂ ತುರ್ವಶಂ ಯದು ತ್ವಂ ತುರ್ವೀತಿಂ ವಯ್ಯಂ ಶತಕ್ರತೋ ।
(ಋ. ಸಂ ೧-೫೪-೬)

ಪ್ರ ಯತ್ಸಮುದ್ರಮತಿ ಶೂರ ಪರ್ಷಿ ಪಾರಾಯಾ ತುರ್ವಶಂ ಯದುಂ ಸ್ವಸ್ತಿ ।
(ಋ. ಸಂ. ೧-೧೭೪-೯ ಮತ್ತು ೬-೨೦-೧೨)

ಯ ಆನಯತ್ ಪರಾವತಃ ಸುನೀತೀ ತುರ್ವಶಂ ಯದುಂ । ಇಂದ್ರಃ ಸನೋ ಯುವಾ ಸಖಾ
(ಋ. ಸಂ. ೬-೪೫-೧)

ಮಹತ್ತೇ ವೃಷ್ಣೋ ಅಭಿಚಕ್ಷ್ಯಂ ಕೃತಂ ಪಶ್ಯೇಮ ತುರ್ವಶಂ ಯದುಂ ।
(ಋ. ಸಂ. ೮-೪-೭)

ಯೇನಾವ ತುರ್ವಶಂ ಯದುಂ ಯೇನ ಕಣ್ವಂ ಧನಸ್ಪೃತಂ ॥
(ಋ. ಸಂ. ೮-೭-೭)

ಇಮೇ ಸೋಮಾಸೋ ಅಧಿ ತುರ್ವಶೇ ಯದಾವಿಮೇ ಕಣ್ವೇಷು ವಾಮಥ ॥
(ಋ. ಸಂ. ೮-೯-೧೪)

ಸತ್ಯಂ ತತ್ತುರ್ವಶೇ ಯದೌ ವಿದಾನೋ ಅಹ್ನವಾಯ್ಯಂ ॥
(ಋ. ಸಂ. ೮-೪೫-೨೭)

ಅಹಂ ಸಪ್ತಹಾ ನಹುಷೋ ನಹುಷ್ಟರಃ ಪ್ರಾಶ್ರಾವಯಂ ಶವಸಾ ತುರ್ವಶಂ ಯದುಂ
(ಋ. ಸಂ. ೧೦-೪೯-೮)

ಯದಿಂದ್ರಾಗ್ನೀ ಯದುಷು ತುರ್ವಶೇಷು ಯದ್ದ್ರುಹ್ಯುಷ್ವನುಷು ಪೂರುಷಸ್ಥಃ ॥
(ಋ. ಸಂ. ೧-೧೦೮-೮)

ತುರ್ವಶ ಮತ್ತು ಯದು ಎಂಬುವರು ಎರಡು ಮುಖ್ಯ ಜನಾಂಗದ ಮೂಲಪುರುಷರೆಂದು ಕೆಲವರು ಅಭಿಪ್ರಾಯಪಡುವರು. ಇವರ ಹೆಸರಿನಿಂದಲೇ ತುರ್ವಶರು ಯದುಗಳು ಎಂದು ಆ ಜನಾಂಗಗಳನ್ನು ಕರೆಯುವುದು ರೂಢಿಯಲ್ಲಿತ್ತೆಂದು ಕೊನೆಯಲ್ಲಿ ಕೊಟ್ಟಿರುವ ಉದಾಹರಣೆಯಿಂದ ತಿಳಿಯಬಹುದು. ಋಗ್ವೇದದಲ್ಲಿ ಅನುಗಳು, ದ್ರುಹ್ಯುಗಳು, ತುರ್ವಶರು, ಯದುಗಳು, ಪುರುಗಳು ಎಂದು ಐದು ಮುಖ್ಯ ಜನಾಂಗಗಳ ( Tribes ) ಹೆಸರುಗಳು ಅನೇಕ ಕಡೆ ಸೂಚಿತವಾಗಿರುವುದರಿಂದ ಇವರೆಲ್ಲ ಆ ಕಾಲದ ಪ್ರಸಿದ್ಧ ಜನಾಂಗದವರಾಗಿರಬೇಕು. ಅವರಲ್ಲಿಯೂ ತುರ್ವಶ ಮತ್ತು ಯದು ಎಂಬ ಶಬ್ದಗಳು ವಿಶೇಷವಾಗಿ ಜತೆಯಲ್ಲಿಯೇ ಪಠಿತವಾಗಿರುವುದರಿಂದ ಈ ಎರಡು ಜನಾಂಗದವರೂ ಪರಸ್ಪರ ಸಮೀಪದಲ್ಲಿಯೇ ವಾಸಿಸುತ್ತಿದ್ದರೆಂದೂ ಇವರಿಗೆ ಪರಸ್ಪರ ನಿಕಟಸಂಬಂಧವಿತ್ತೆಂದೂ ಊಹಿಸಬಹುದು.

ತುರ್ವಶನ ಮುಖ್ಯ ಕೃತ್ಯವೆಂದರೆ ಸುದಾಸನೆಂಬ ರಾಜನೊಡನೆ ಯುದ್ಧ ಮಾಡಿದುದು. ಆದರೆ ಅವನನ್ನು ಜಯಿಸಲಾಗಲಿಲ್ಲ. ಸೋಲಬೇಕಾಗಿ ಬಂತು. ಈ ಕಾರಣಕ್ಕಾಗಿ ತುರ್ವಶ ಎಂದರೆ ರಣರಂಗದಿಂದ ತಪ್ಪಿಸಿಕೊಂಡು ಹೋದನೆಂಬ ಹೆಸರು ಇವನಿಗೆ ಬಂದಿರಬಹುದೆಂದು Hopkins ಎಂಬ ಪಂಡಿತನು ಅಭಿಪ್ರಾಯ ಪಡುವನು. ಇವನು ಯುದ್ಧದಿಂದ ಪಾರಾಗಿ ಬರುವುದಕ್ಕೆ ಇಂದ್ರನು ಸಹಾಯ ಮಾಡಿದನೆಂದು ಕೆಲವು ಋಕ್ಕುಗಳಲ್ಲಿ ಹೇಳಿದೆ—

**ಪ್ರ ಯತ್ಸಮುದ್ರಮತಿ ಶೂರ ಪರ್ಷಿ ಪಾರಯಾ ತುರ್ವಶಂ ಯದುಂ ಸ್ವಸ್ತಿ ||**
(ಋ. ಸಂ. ೧-೧೭೪-೯)

**ಉತ ತ್ಯಾ ತುರ್ವಶಾಯದೂ ಅಸ್ನಾತಾರಾ ಶಚೀಪತಿಃ |**
**ಇಂದ್ರೋ ವಿದ್ವಾಂ ಅಪಾರಯತ್**
(ಋ. ಸಂ. ೪-೩೦-೧೭)

**ತ್ವಮಪೋ ಯದವೇ ತುರ್ವಶಾಯಾರಮಯಃ ಸುದುಘಾಃ ಪಾರ ಇಂದ್ರ |**
(ಋ. ಸಂ. ೫-೩೧-೮)

**ಮಹತ್ತೇ ವೃಷ್ಣೋ ಅಭಿಚಕ್ಷ್ಯಂ ಕೃತಂ ಪಶ್ಯೇಮ ತುರ್ವಶಂ ಯದುಂ**
(ಋ. ಸಂ. ೮-೪-೭)

ಹಿಂದೆ ಹೇಳಿದ ಸುದಾಸನೊಡನೆ ನಡೆದ ಯುದ್ಧದಲ್ಲಿ ಅನು ಮತ್ತು ದ್ರುಹ್ಯು ಎಂಬುವರು ' ಪರಾಜಿತರಾಗಿ ನೀರಿನಲ್ಲಿ ಮುಳುಗಿಹೋದರೆಂದೂ ತುರ್ವಶ ಮತ್ತು ಯದು ಎಂಬಿಬ್ಬರು ಮಾತ್ರ ಇಂದ್ರನ ಸಹಾಯದಿಂದ ಬದುಕಿ ಬಂದರೆಂದೂ ವರ್ಣನೆ ಇರುವುದು.

**ಯ ಆನಯತ್ಪರಾವತಃ ಸುನೀತೀ ತುರ್ವಶಂ ಯದುಂ |**
(ಋ. ಸಂ. ೬-೪೧-೧)

**ಪುರಃ ಸದ್ಯ ಇತ್ಥಾಧಿಯೇ ದಿವೋದಾಸಾಯ ಶಂಬರಂ |**
**ಅಧ ತ್ಯಂ ತುರ್ವಶಂ ಯದುಂ ||**
(ಋ. ಸಂ. ೯-೬೧-೨)

ಈ ಋಕ್ಕುಗಳಲ್ಲಿ ತುರ್ವಶ ಮತ್ತು ಯದು ಎಂಬುವರು ಸುದಾಸನ ತಂದೆಯಾದ ದಿವೋದಾಸನೊಡನೆ ಯುದ್ಧ ಮಾಡಿದ ವಿಷಯವು ಇರುವುದು. ಈ ಯುದ್ಧದ ವಿಷಯವು ಋ. ಸಂ. ೬ನೇ ಮಂಡಲದ ೨೭ನೇ ಸೂಕ್ತದ ೫-೭ ಋಕ್ಕುಗಳಲ್ಲಿ ವರ್ಣಿತವಾಗಿದೆ. ಇಲ್ಲಿ ವೃಚೀವಂತರೆಂದರೆ ತುರ್ವಶರು ಎಂದು ಕೆಲವರೂ, ವೃಚೀವಂತರೂ ತುರ್ವಶರೂ ಬೇರೆ ಬೇರೆ ಜನಾಂಗಗಳೆಂದೂ ಆದರೆ ಇವರು ಯುದ್ಧದಲ್ಲಿ ಪರಸ್ಪರ ಸಹಾಯಕರೆಂದು ಮತ್ತೆ ಕೆಲವರೂ ಅಭಿಪ್ರಾಯಪಡುವರು. ಈ ಯುದ್ಧವು ಯವ್ಯಾವತೀ ಎಂಬ ನದಿಯ ತೀರದಲ್ಲಿ ನಡೆದುದಾಗಿ ತಿಳಿಯಬರುತ್ತದೆ. ಶತಪಥ ಬ್ರಾಹ್ಮಣದಲ್ಲಿ (ಶತ. ಬ್ರಾ. ೧೩-೫-೪-೧೬.) ತುರ್ವಶರೂ ಪಾಂಚಾಲರೂ ಯುದ್ಧ ಮಿತ್ರರೆಂದೂ ತುರ್ವಶರ ಬಳಿಯಲ್ಲಿ ೩೩ ಅಶ್ವಗಳೂ ೬೦೦೦ ಯುದ್ಧಭಟರೂ ಇದ್ದರೆಂದೂ ವರ್ಣನೆ ಇರುವುದು. ತುರ್ವಶರು ಪರುಷ್ಣಿ ಎಂಬ ನದಿಯನ್ನು ದಾಟಿದರೆಂಬ ವಿಷಯುವು ಋ. ಸಂ. ೭-೧೮ ನೆಯ ಸೂಕ್ತದಿಂದ ತಿಳಿಯಬರುವುದಾದರೂ ಈ ತುರ್ವಶರು ವಾಸಿಸುತ್ತಿದ್ದ ದೇಶ (ಪ್ರದೇಶ) ವು ಯಾವುದು ಎಂಬುದು ಸ್ಪಷ್ಟವಾಗಿಲ್ಲ.

**ಉಗ್ರಾದೇವಂ**— ಈ ಶಬ್ದಕ್ಕೆ ಭಾಷ್ಯಕಾರರು **ಏತನ್ನಾಮಕರಾಜರ್ಷಿಂ** ಎಂದು ಮಾತ್ರ ಹೇಳಿರುವರು. ಈ ಉಗ್ರಾದೇವನು ಯಾರು, ಇವನ ವಿಷಯವೇನು ಎಂಬುದು ಸ್ಪಷ್ಟವಾಗಿಲ್ಲ. ಈ ಶಬ್ದವು ಋಗ್ವೇದದಲ್ಲಿ ಈ ಋಕ್ಕಿ

ನಲ್ಲಿ ಮಾತ್ರ ಇದೆ. ಬೇರೆ ಇನ್ನೆಲ್ಲಿಯೂ ಇಲ್ಲ. ಸಾಮವೇದದ ಪಂಚವಿಂಶತಿ ಬ್ರಾಹ್ಮಣದಲ್ಲಿಯೂ (ಪಂ. ಬ್ರಾ. ೧೪-೩-೧೭ ಮತ್ತು ೨೩-೧೬-೧೧)ತೈತ್ತಿರೀಯ ಆರಣ್ಯಕದಲ್ಲಿಯೂ (ತೈ. ಆ. ೫-೪-೧೨) ಈ ಶಬ್ದದ ಪ್ರಯೋಗವಿದೆ. ಹೆಚ್ಚು ವಿವರಣೆ ದೊರೆಯುವುದಿಲ್ಲ

**ನವವಾಸ್ತ್ವಂ, ಬೃಹದ್ರಥಂ**—ನವವಾಸ್ತ್ವಶಬ್ದವು ಋಗ್ವೇದದಲ್ಲಿ ಪ್ರಸಕ್ತ ಋಕ್ಕಿನಲ್ಲಿ ಮತ್ತು ಈ ಋಕ್ಕುಗಳಲ್ಲಿ ಮಾತ್ರ ಪಠಿತವಾಗಿದೆ.

**ಪರಾ ನವವಾಸ್ತ್ವಮನುದೇಯಂ ಮಹೇ ಪಿತ್ರೇ ದದಾಥ ಸ್ವಂ ನಪಾತಂ ।**
(ಋ. ಸಂ. ೬-೨೦-೧೧)

**ಅಹಂ ಸ ಯೋ ನವವಾಸ್ತ್ವಂ ಬೃಹದ್ರಥಂ ಸಂವೃತ್ರೇವ ದಾಸಂ ವೃತ್ರಹಾರುಜಂ ॥**
(ಋ. ಸಂ. ೧೦-೪೯-೬)

ಪ್ರಸಕ್ತ ಋಕ್ಕಿನಲ್ಲಿ ನವವಾಸ್ತ್ವನು ಅಗ್ನಿಯೊಡನೆ ಇರುವುದಾಗಿ ಹೇಳಿದೆ. ಮೇಲಿನ ಉದಾಹರಣೆಗಳಲ್ಲಿ ಇಂದ್ರನೋಡನಿರುವುದಾಗಿ ತಿಳಿಯಬರುತ್ತೆ. ಮತ್ತು ಇಂದ್ರನಿಗೆ ಪ್ರೀತಿಪಾತ್ರನಾದ ಉಶನಸ್ ಎಂಬುವನ ಪುತ್ರನೆಂಬ ಅರ್ಥವು ಭಾಸವಾಗುತ್ತೆ. ಆದರೆ ಕೊನೆಯ ಉದಾಹರಣೆಯಲ್ಲಿ ಇಂದ್ರನಿಂದ ಪರಾಜಿತನಾಗಿರುವ ವಿಷಯವಿರುವುದು ಬೃಹದ್ರಥನ ವಿಷಯವು ಋಗ್ವೇದದಲ್ಲಿ ಪ್ರಸಕ್ತ ಋಕ್ಕಿನಲ್ಲಿಯೂ ಮೇಲಿನ ಉದಾಹರಣೆಯಲ್ಲಿಯೂ (ಋ. ಸಂ ೧೦-೪೯-೬) ಎರಡು ಋಕ್ಕುಗಳಲ್ಲಿ ಮಾತ್ರ ಸೂಚಿಸಲ್ಪಟ್ಟಿದೆ. ಎರಡು ಸ್ಥಳಗಳಲ್ಲಿಯೂ ನವವಾಸ್ತ್ವಶಬ್ದದ ಜತೆಯಲ್ಲಿಯೇ ಬೃಹದ್ರಥ ಶಬ್ದಪ್ರಯೋಗವಿರುವುದರಿಂದ ಈ ಬೃಹದ್ರಥನು ಬೇರೆ ಒಬ್ಬ ವ್ಯಕ್ತಿಯೇ ಅಥವಾ ಬೃಹದ್ರಥ ಶಬ್ದವು (ದೊಡ್ಡ ರಥಿಕನು) ನವವಾಸ್ತ್ವಶಬ್ದಕ್ಕೆ ವಿಶೇಷಣಪದವೇ ಎಂಬುದು ಸಂದೇಹಾಸ್ಪದವಾಗಿದೆ. ಮುಖ್ಯವಾಗಿ ನವವಾಸ್ತ್ವ, ಬೃಹದ್ರಥ ಎಂಬುವರ ವಿಷಯದಲ್ಲಿ ನಮಗೆ ಹೆಚ್ಚಿನ ವಿಷಯಗಳು ಯಾವವೂ ಋಗ್ವೇದದಲ್ಲಿ ದೊರೆಯುವುದಿಲ್ಲ.

**ತುರ್ವೀತಿಂ**—ಈ ಶಬ್ದವು ಋಗ್ವೇದದಲ್ಲಿ ಪ್ರಸಕ್ತ ಋಕ್ಕಿನಲ್ಲಿಲ್ಲದೆ ಋ. ಸಂ. ೧-೫೪-೬ ; ೧-೧೧೨-೨೩ ಎಂಬ ಋಕ್ಕುಗಳಲ್ಲಿಯೂ ತುರ್ವೀತಯೇ ಎಂಬ ಶಬ್ದವು ಋ. ಸಂ. ೧-೬೧-೧೧ ; ೨-೧೩-೧೨ ; ೪-೧೯-೬ ಎಂಬ ಋಕ್ಕುಗಳಲ್ಲಿ ಮಾತ್ರ ಪಠಿವಾಗಿದೆ. ಕೆಲವು ಸಂದರ್ಭಗಳಲ್ಲಿ ವಯ್ಯ ಎಂಬ ಪುರುಷನ ಹೆಸರಿನೊಂದಿಗೆ ಈ ಶಬ್ದಪ್ರಯೋಗವಿದೆ. ಮೇಲಿನ ಕೆಲವು ಋಕ್ಕುಗಳಲ್ಲಿ ಇಂದ್ರನು ತುರ್ವೀತಿ ಮತ್ತು ವಯ್ಯ ಎಂಬುವರನ್ನು ನದಿಯ ಪ್ರವಾಹವನ್ನು ದಾಟಲು ಸಹಾಯವಮಾಡಿದನೆಂಬ ವಿಷಯವಿರುವುದು Ludwig ಮೊದಲಾದ ಕೆಲವು ಪಾಶ್ಚಾತ್ಯಪಂಡಿತರು, ಈ ತುರ್ವೀತಿ ಎಂಬುವನು ತುರ್ವಶರ ಮತ್ತು ಯದುಗಳೆಂಬ ಜನಾಂಗದ ರಾಜನೆಂಬುದಾಗಿ ಅಭಿಪ್ರಾಯಪಡುವರು. ಆದರೆ ಈ ವಿಷಯವನ್ನು ಸಮರ್ಥಿಸುವುದಕ್ಕೆ ಯಾವ ಆಧಾರವೂ ಇಲ್ಲ. ತುರ್ವಶರ ಜನಾಂಗದವರಲ್ಲಿ ಇವನೂ ಒಬ್ಬನೆಂದು ಮಾತ್ರ ಹೇಳಿದರೂ ಹೇಳಬಹುದು

॥ ವ್ಯಾಕರಣಪ್ರಕ್ರಿಯಾ ॥

**ನಯೇತ್**— ಣೀಞ್ ಪ್ರಾಪಣೇ, ೧ನೇ ಗಣ. ಲೇಟ್, ತಿಪ್, **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂದು ಪ್ರತ್ಯಯಕ್ಕೆ ಅಟ್ ಆಗಮ, **ಇತಶ್ಚ ಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಪರಸ್ಮೈಪದದಲ್ಲಿ ಲೇಟಿಗೆ ಬಂದ ತಿಬ್ ಪ್ರತ್ಯಯದ ಇಕಾರಕ್ಕೆ ಲೋಪ ಬರುತ್ತೆ ಎಂದು ಇಕಾರಕ್ಕೆ ಲೋಪ, ಶಪ್, **ಅತೋ ಗುಣೇ** ಎಂದು ಎರಡು ಅಕಾರಗಳಿಗೂ ಪರರೂಪ, ಗುಣ, ಅಯ್ ಆದೇಶ

**ನವವಾಸ್ತ್ವಮ್**— ನವಂ ವಾಸ್ತು ಯಸ್ಯ ಸಃ, ಹೊಸದಾದ ಮನೆಯುಳ್ಳವನು ಎಂದು ಅವಯವಾರ್ಥ. ಪ್ರಕೃತದಲ್ಲಿ ಈ ಅರ್ಥವು ವ್ಯುತ್ಪತ್ತಿಗೆ ಮಾತ್ರ. ವಾಕ್ಯಾರ್ಥದಲ್ಲಿ ಇದು ಸಂಬಂಧಿಸದು. ದ್ವಿತೀಯೈಕವಚನ ಅಮ್-ನವವಾಸ್ತು+ಅಮ್ **ಅಮಿಪೂರ್ವಃ** (ಪಾ. ಸೂ. ೬-೧-೧೦೭) ಇಲ್ಲಿ **ವಾ ಛಂದಸಿ** ಎಂಬ ಹಿಂದಿನ ಸೂತ್ರವು ಅನುವೃತ್ತವಾಗುತ್ತೆ. ಅಗ್ವರ್ಣಗಳ ಮುಂದೆ ಅಮ್‌ನ ಅಕಾರ ಇದ್ದರೆ ಪೂರ್ವ ಪರಸ್ಥಾನಗಳಿಗೆ ಪೂರ್ವದ ರೂಪ ಒಂದೇ ಬರುತ್ತೆ. ಆದರೆ ಇದು ಛಂದಸ್ಸಿನಲ್ಲಿ ವಿಕಲ್ಪವಾಗಿ ಬರುತ್ತೆ ಎಂದು ಸೂತ್ರದ ಅರ್ಥ. ಏವಂಚ ಛಂದಸ್ಸಿನಲ್ಲಿ ಪೂರ್ವರೂಪವು ವಿಕಲ್ಪವಾದ್ದರಿಂದ ಬರುವುದಿಲ್ಲ.

**ಬೃಹದ್ರಥಂ**--ಬಹುವ್ರೀಹಿಯಾದ್ದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ ॥೧೮॥



॥ ಸಂಹಿತಾಪಾಠಃ ॥

ನಿ ತ್ವಾಮಗ್ನೇ ಮನುರ್ದಧೇ ಜ್ಯೋತಿರ್ಜನಾಯ ಶಶ್ವತೇ।
ದೀದೇಥ ಕಣ್ವ ಋತಜಾತ ಉಕ್ಷಿತೋ ಯಂ ನಮಸ್ಯಂತಿ
ಕೃಷ್ಟಯಃ ॥ ೧೯ ॥

॥ ಪದಪಾಠಃ ॥

ನಿ । ತ್ವಾಂ । ಅಗ್ನೇ । ಮನುಃ । ದಧೇ । ಜ್ಯೋತಿಃ । ಜನಾಯ । ಶಶ್ವತೇ ।
ದೀದೇಥ । ಕಣ್ವೇ । ಋತಽಜಾತಃ । ಉಕ್ಷಿತಃ । ಯಂ । ನಮಸ್ಯನ್ತಿ ।
ಕೃಷ್ಟಯಃ ॥ ೧೯ ॥

ಸಾಯಣಭಾಷ್ಯಂ

**ಹೇ ಅಗ್ನೇ ಜ್ಯೋತಿಃ ಪ್ರಕಾಶರೂಪಂ ತ್ವಾಂ ಶಶ್ವತೇ ಬಹುವಿಧಾಯ ಜನಾಯ ಮನುಃ ಪ್ರಜಾಪತಿರ್ನಿ ದಧೇ। ದೇವಯಜನದೇಶೇ ಸ್ಥಾಪಿತವಾನ್। ಹೇ ಅಗ್ನೇ ತ್ವಮೃತಜಾತ ಋತೇನ ಯಜ್ಞೇನ ನಿಮಿತ್ತಭೂತೇನೋತ್ಪನ್ನ ಉಕ್ಷಿತೋ ಹವಿರ್ಭಿಸ್ತರ್ಪಿತಃ ಸನ್ ಕಣ್ವ ಏತನ್ನಾಮಕೇ ಮಹರ್ಷೌ ದೀದೇಥ। ದೀಪ್ತವಾನಸಿ। ಯಮಗ್ನಿಂ ಕೃಷ್ಟಯೋ ಮನುಷ್ಯಾಃ। ಕೃಷ್ಟಯಶ್ಚರ್ಷಣಯ ಇತಿ ಮನುಷ್ಯನಾಮಸು ಪಠಿತತ್ವಾತ್। ನಮಸ್ಯಂತಿ ನಮಸ್ಕುರ್ವಂತಿ। ಸ ತ್ವಮಿತಿ ಪೂರ್ವತ್ರಾನ್ವಯಃ॥ ದೀದೇಥ। ದೀದೇತಿಶ್ಛಾಂದಸೋ ದೀಪ್ತಿಕರ್ಮಾ। ಥಲಿ ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಂ। ಕಾ. ೬-೧-೮-೧। ಇತಿ ದ್ವಿರ್ವಚನಾಭಾವಃ। ಅನಿತ್ಯಮಾಗಮಶಾಸನಮಿತಿ ವಚನಾದಿಡಭಾವಃ। ಲಿತ್ಸರ್ವೇಣ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ। ಋತಜಾತಃ। ಋತೇ ಜನ್ಯತ ಇತ್ಯೃತಜಾತಃ। ಶ್ವೀದಿತೋ ನಿಷ್ಠಾಯಾಮಿತೀಟ್ ಪ್ರತಿಷೇಧಃ। ಜನಸನೇತ್ಯಾದಿನಾತ್ವಂ। ತೃತೀಯಾಪೂರ್ವಪದಪ್ರಕೃತಿಸ್ವರತ್ವಂ। ನಮಸ್ಯಂತಿ। ನಮೋವರಿವಃ। ಪಾ. ೩-೧-೧೯। ಇತಿ ಪೂಜಾರ್ಥೇ ಕ್ಯಚ್। ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಕ್ಯಜಂತಧಾತುಸ್ವರಃ। ಕೃಷ್ಟಯಃ। ಕೃಷ ವಿಲೇಖನೇ। ಕ್ತಿಚ್‌ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್॥**

॥ ಪ್ರತಿಪದಾರ್ಥ ॥

**ಅಗ್ನೇ**— ಎಲೈ ಅಗ್ನಿಯೇ। **ಜ್ಯೋತಿಃ**—ಪ್ರಕಾಶಸ್ವರೂಪನಾದ। **ತ್ವಾಂ**— ನಿನ್ನನ್ನು। **ಶಶ್ವತೇ**—ನಾನಾಬಗೆಯ। **ಜನಾಯ**—ಪ್ರಜೆಗಳಿಗಾಗಿ (ಅವರ ಉಪಕಾರಕ್ಕಾಗಿ)। **ಮನುಃ**—ಪ್ರಜಾಪತಿಯಾದ ಮನುವು। **ನಿದಧೇ**—(ಯಜ್ಞಭೂಮಿಯಲ್ಲಿ) ನಿಲ್ಲಿಸಿದನು। **ಯಂ**—ಯಾವ ಅಗ್ನಿಯನ್ನು। **ಕೃಷ್ಟಯಃ**—ಮಾನವರು। **ನಮಸ್ಯಂತಿ**—ನಮಸ್ಕಾರಮಾಡಿ ಪೂಜಿಸುತ್ತಾರೋ। (ಅಂತಹ ನೀನು) **ಋತಜಾತಃ**—(ನಿಮಿತ್ತಕಾರಣ ಭೂತವಾದ) ಯಜ್ಞದಿಂದ ಉತ್ಪನ್ನವಾಗಿ। **ಉಕ್ಷಿತಃ**—ಹವಿಸ್ಸಿನಿಂದ ಸಂತೃಪ್ತನಾಗಿ। **ಕಣ್ವೇ**—ಕಣ್ವನೆಂಬ ಮಹರ್ಷಿಯಲ್ಲಿ। **ದೀದೇಥ**—(ಅನುಗ್ರಹಿಸಿ) ಪ್ರಜ್ವಲಿಸಿದ್ದೀಯೆ

ಭಾವಾರ್ಥ

ಎಲೈ ಅಗ್ನಿಯೇ, ಲೋಕದ ನಾನಾಬಗೆಯ ಪ್ರಜೆಗಳಿಗೆ ಬೆಳಕನ್ನೂ ಶಕ್ತಿಯನ್ನೂ ಕೊಟ್ಟು ಅವರಿಗೆ ಉಪಕಾರಮಾಡುವುದಕ್ಕಾಗಿ ಮನುಪ್ರಜಾಪತಿಯು ನಿನ್ನನ್ನು ಯಜ್ಞಭೂಮಿಯಲ್ಲಿ ನಿಲ್ಲಿಸಿದನು. ನಿನ್ನ ಉಪಕಾರ ಸ್ಮರಣೆಯಿಂದ ಸಕಲ ಮಾನವರೂ ನಿನಗೆ ನಮಸ್ಕಾರಮಾಡಿ ನಿನ್ನನ್ನು ಪೂಜಿಸುತ್ತಾರೆ. ಯಜ್ಞವೇ ನಿನ್ನ ಈ ಉತ್ಪತ್ತಿಗೆ ಕಾರಣವಾಗಿ ಅದರಿಂದ ನೀನು ಉತ್ಪನ್ನನಾಗಿದ್ದೀಯೆ. ಯಜ್ಞಗಳಲ್ಲಿ ಹವಿಸ್ಸನ್ನು ಅರ್ಪಿಸಿ ಕಣ್ವನೆಂಬ ಋಷಿಯು ನಿನಗೆ ತೃಪ್ತಿಯನ್ನುಂಟುಮಾಡಿದ್ದಾನೆ. ನೀನು ಅದರಿಂದ ಸಂತೃಪ್ತನಾಗಿ ಅವನಲ್ಲಿ ಅನುಗ್ರಹಿಸಿ ಪ್ರಜ್ವಲಿಸಿದ್ದೀಯೆ.

## English Translation

O Agni, Manu established you as a light for all people; born of sacrifice, Agni, whom men adore shone brighly in the house of Kanva.

॥ ವಿಶೇಷ ವಿಷಯಗಳು ॥

**ಮನುಃ**— ಪ್ರಜಾಪತಿಯು. ಈ ಶಬ್ದದ ವಿವರಣೆಯನ್ನು ಹಿಂದೆಯೇ ಕೊಟ್ಟಿದ್ದೇವೆ

**ಜನಾಯ ಶಶ್ವತೇ—ಬಹುವಿಧಾಯ ಜನಾಯ ।** ನಾನಾವಿಧವಾದ ಜನಗಳಿಗೋಸ್ಕರ.

**ಋತಜಾತಃ—ಋತೇನ ಯಜ್ಞೇನ ನಿಮಿತ್ತಭೂತೇನೋತ್ಪನ್ನಃ** ಋತವೆಂದರೆ ಯಜ್ಞವು. ಯಜ್ಞ ನಿಮಿತ್ತವಾಗಿ ಉತ್ಪನ್ನನಾದುದರಿಂದ ಅಗ್ನಿಗೆ ಋತಜಾತಃ ಎಂದು ಹೆಸರು.

**ಉಕ್ಷಿತಃ—ಹವಿರ್ಭಿಸ್ತರ್ಪಿತಃ ।** ಹವಿರ್ದ್ರವ್ಯಾದಿಗಳಿಂದ ಸಂತೋಷಪಡಿಸಲ್ಪಟ್ಟ.

**ದೀದೇಥ—ದೀಪ್ತವಾನಸಿ । ಸಂತುಷ್ಟೋಽಸಿ ।** ಸಂತೋಷದಿಂದ ವಿಕಸನನಾಗಿದ್ದೀಯೆ. ಸಂತೋಷ ಗೊಂಡಿರುವೆ.

**ಕೃಷ್ಟಯಃ—ಮನುಷ್ಯಾಃ ।** ಮನುಷ್ಯಾಃ ನರಃ ಮೊದಲಾದ ಇಪ್ಪತ್ತೈದು ಮನುಷ್ಯನಾಮಗಳ ಮಧ್ಯದಲ್ಲಿ ಕೃಷ್ಟಯಃ ಎಂಬ ಶಬ್ದವು ಪಠಿತವಾಗಿರುವುದರಿಂದ ಕೃಷ್ಟಯಃ ಎಂದರೆ ಮನುಷ್ಯರು ಎಂದರ್ಥವು (ನಿ. ೩-೭)

॥ ವ್ಯಾಕರಣಪ್ರಕ್ರಿಯಾ ॥

**ದೀದೇಥ**—ದೀದಿ ಧಾತುವಿಗೆ ದೀಪ್ತಿ ಎಂದರ್ಥ. ಇದಕ್ಕೆ ಛಂದಸ್ಸಿನಲ್ಲಿ ಮಾತ್ರವೇ ಪ್ರಯೋಗ. ಲಿಟ್, ಸಿಪ್, **ಪರಸ್ಮೈಪದಾನಾಂ—,** ಎಂದು ಸಿಪ್‌ಗೆ ಥಲ್. **ಲಿಟಿ ಧಾತೋರನಭ್ಯಾಸಸ್ಯ** (ಪಾ. ಸೂ. ೬-೧-೮) ಎಂಬ ಸೂತ್ರದಲ್ಲಿ ಕಾಶಿಕಾಕಾರರು **ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಮ್** ದ್ವಿತ್ವವನ್ನು ವಿಧಿಸುವ ಪ್ರಕರಣದಲ್ಲಿ **ಛಂದಸಿ ವಾ**–ಛಂದಸ್ಸಿನಲ್ಲಿ ವಿಕಲ್ಪವಾಗಿ ಬರುತ್ತೆ ಎಂದು ವಚನವನ್ನು ಹೇಳಬೇಕು ಎಂದಿರುವರು. ಆದ್ದರಿಂದ ದ್ವಿತ್ವ ಬರುವುದಿಲ್ಲ. **ಆಗಮಶಾಸ್ತ್ರಮನಿತ್ಯಂ** ಎಂದು ಹೇಳಿರುವುದರಿಂದ ಇಟ್ ಬರುವುದಿಲ್ಲ. ದೀದಿ+ಥ **ಸಾರ್ವಧಾತುಕಾರ್ಧಧಾತುಕಯೋಃ** ಎಂದು ಗುಣ. **ಲಿತಿ** ಎಂದು ಪ್ರತ್ಯಯದ ಹಿಂದಿನವರ್ಣ ಉದಾತ್ತ.

**ಋತಜಾತಃ**—ಋತ ಎಂದರೆ ಯಜ್ಞ, ಜನೀ ಪ್ರಾದುರ್ಭಾವೇ ಧಾತು. ಈದಿತ್ತು, ಋತೇನ ಜನ್ಯತೇ ಅಯಂ ಎಂದು ವಿಗ್ರಹ. **ನಿಷ್ಠಾ** ಎಂದು ಕರ್ಮಣಿ ಕ್ತ ಪ್ರತ್ಯಯ. **ಶ್ವೀದಿತೋ ನಿಷ್ಠಾಯಾಮ್** (ಪಾ. ಸೂ. ೭-೨-೧೪) ಶ್ವಿ ಧಾತು, ಈದಿತ್ತಾದ ಧಾತು ಇವುಗಳ ಮುಂದೆ ಇರುವ ಕ್ತ-ಕ್ತವತು ಪ್ರತ್ಯಯಗಳಿಗೆ ಇಟ್ ಬರುವುದಿಲ್ಲ

ಎಂದು ಇಡಾಗಮಕ್ಕೆ ನಿಷೇಧ. **ಜನ ಸನ ಖನಾಂ ಸನ್‌ಝಲೋಃ** (ಪಾ. ಸೂ. ೬-೪-೪೨) ಝಲಾದಿಯಾದ ಸನ್ ಅಥವಾ ಕಿತ್ ವಾ ಙಿತ್ ಆದ ಝಲಾದಿಪ್ರತ್ಯಯ ಇವು ಪರದಲ್ಲಿರುವಾಗ ಈ ಧಾತುಗಳ ಕೊನೆಯ ವರ್ಣಕ್ಕೆ ಆಕಾರ ಬರುತ್ತೆ ಎಂದು ಆಕಾರ. **ತೃತೀಯಾ ಕರ್ಮಣಿ** ಎಂದು ತೃತೀಯಾಂತ ಪೂರ್ವಪದಕ್ಕೆ ಪ್ರಕೃತಿಸ್ವರ ಬರುತ್ತೆ.

**ನಮಸ್ಯನ್ತಿ—ನಮೋವರಿವಶ್ಚಿತ್ರಙಃ ಕ್ಯಚ್** (ಪಾ. ಸೂ. ೩-೧-೧೯) ನಮಸ್ ಶಬ್ದದ ಮುಂದೆ ಪೂಜಾರ್ಥದಲ್ಲಿಯೂ ವರಿವಸ್‌ನ ಮುಂದೆ ಪರಿಚರ್ಯೆ ಎಂಬ ಅರ್ಥದಲ್ಲಿಯೂ; ಚಿತ್ರಙ್‌ನ ಮುಂದೆ ಆಶ್ಚರ್ಯಾರ್ಥದಲ್ಲಿಯೂ ಕ್ಯಚ್ ಬರುತ್ತೆ ಎಂದು ಪೂಜಾರ್ಥದಲ್ಲಿ ನಮಸ್‌ನ ಮುಂದೆ ಕ್ಯಚ್. ನಮಸ್ಯ ಎಂಬುದು ಕ್ಯಜಂತ. **ಸನಾದ್ಯಂತಾ ಧಾತವಃ** ಎಂದು ಧಾತು ಸಂಜ್ಞೆ. ಲಟ್, ಝಿ-ಅನ್ತಿ ಆದೇಶ. ಶಪ್, ಅನುಪದೇಶದ ಮುಂದೆ ಇರುವುದರಿಂದ ಝಿಯು ಅನುದಾತ್ತ. ಕ್ಯಜಂತವು ಧಾತುಸ್ವರದಿಂದ ಉದಾತ್ತ.

**ಕೃಷ್ಟಯಃ—**ಕೃಷ ವಿಲೇಖನೇ—**ಕ್ತಿಚ್‌ಕ್ತೌ ಚ ಸಂಜ್ಞಾಯಾಂ** ಎಂದು ಕ್ತಿಚ್, ಕೃಷ್+ತಿ, ಷ್ಟುತ್ವ. ॥ ೧೯ ॥

---

॥ ಸಂಹಿತಾಪಾಠಃ ॥

ತ್ವೇಷಾಸೋ ಅಗ್ನೇರಮವನ್ತೋ ಅರ್ಚಯೋ ಭೀಮಾಸೋ ನ

ಪ್ರತೀತಯೇ।

ರಕ್ಷಸ್ವಿನಃ ಸದಮಿದ್ಯಾತುಮಾವತೋ ವಿಶ್ವಂ ಸಮತ್ರಿಣಂ ದಹ ॥

॥ ಪದಪಾಠಃ ॥

**ತ್ವೇಷಾಸಃ । ಅಗ್ನೇಃ । ಅಮಽವನ್ತಃ । ಅರ್ಚಯಃ । ಭೀಮಾಸಃ । ನ ।**

**ಪ್ರತಿಽಇತಯೇ ।**

ರಕ್ಷಸ್ವಿನಃ । ಸದಂ । ಇತ್ । ಯಾತುऽಮಾವತಃ । ವಿಶ್ವಃ । ಸಂ ।
ಅತ್ರಿಣಂ । ದಹ ॥ ೨೦ ॥

॥ ಸಾಯಣಭಾಷ್ಯಂ ॥

ಅಗ್ನೇರರ್ಚಯೋ ಜ್ವಾಲಾಸ್ತ್ವೇಷಾಸೋ ದೀಪ್ತಾ ಅಮವಂತೋ ಬಲವಂತೋ ಭೀಮಾಸೋ ಭಯಂಕರಾಃ । ಅತಃ ಪ್ರತೀತಯೇऽಸ್ಮಾಭಿಃ ಪ್ರತ್ಯೇತುಂ ನ ಶಕ್ಯಾ ಇತಿ ಶೇಷಃ । ಹೇ ಅಗ್ನೇ ರಕ್ಷಸ್ವಿನೋ ಬಲವತೋ ಯಾತುಮಾವತೋ ಯಾತುಧಾನಾನಸುರಾನ್ ಸದಮಿತ್ ಸರ್ವದೈವ ಸಂ ದಹ । ಸಮ್ಯಗ್ಭಸ್ಮೀಕುರು । ತಥಾ ವಿಶ್ವಂ ಸರ್ವಮತ್ರಿಣಂ ಭಕ್ಷಕಮಸ್ಮದ್ಬಾಧಕಂ ಶತ್ರುಂ ಸಂ ದಹ ॥ ತ್ವೇಷಾಸಃ । ತ್ವಿಷ ದೀಪ್ತೌ । ಪಚಾದ್ಯಚ್ । ಚಿತ ಇತ್ಯಂತೋದಾತ್ತತ್ವಂ । ಅಮವಂತಃ । ಅಮ ರೋಗೇ । ಅಮತಿ ಶತ್ರೂನ್ಗಚ್ಛತೀತ್ಯಮೋ ಬಲಂ । ಪಚಾದ್ಯಚ್ । ವೃಷಾದಿತ್ವಾದಾದ್ಯುದಾತ್ತತ್ವಂ । ತದೇಷಾಮಸ್ತೀತ್ಯಮವಂತಃ । ಪ್ರತೀತಯೇ । ತಾದೌ ಚ ನಿತೀತಿ ಗತೇಃ ಪ್ರಕೃತಿಸ್ವರತ್ವಂ । ರಕ್ಷಸ್ವಿನಃ । ರಕ್ಷಂತ್ಯನೇನೇತಿ ರಕ್ಷೋ ಬಲಂ । ಕರಣೇऽಸುನ್ । ಅಸ್ಮಾಯಾಮೇಧೇತಿ ಮತ್ವರ್ಥೀಯೋ ವಿನಿಃ । ಯಾತುಮಾವತಃ । ಯಾತವೋ ಯಾತನಾಃ ತಾನ್ಮಿಮತೇ ನಿರ್ಮಿಮತ ಇತಿ ರಾಕ್ಷಸವ್ಯಾಪಾರಾ ಯಾತುಮಾಃ । ಆತೋऽನುಪಸರ್ಗೇ ಕ ಇತಿ ಕಃ । ತದೇಷಾಮಸ್ತೀತಿ ಮತುಪ್ । ಮತೌ ಬಹ್ವಚೋऽನಜಿರಾದೀನಾಂ । ಪಾ. ೬-೩-೧೧೯ । ಇತಿ ದೀರ್ಘತ್ವಂ । ಸಂಜ್ಞಾಯಾಂ । ಪಾ. ೮-೨-೧೧ । ಇತಿ ವತ್ವಂ । ಮತುಪಃ ಪಿತ್ವಾದನುದಾತ್ತತ್ವೇ ಕೃದುತ್ತರಪದಪ್ರಕೃತಿಸ್ವರತ್ವಂ । ಅತ್ರಿಣಂ । ಅದೇಸ್ತ್ರಿನಿ ಚೇತಿ ಕರ್ತರಿ ತ್ರಿನಿಪ್ರತ್ಯಯಃ ॥ ೧೧ ॥

॥ ಪ್ರತಿಪದಾರ್ಥ ॥

**ಅಗ್ನೇಃ**—ಅಗ್ನಿದೇವನ । **ಅರ್ಚಯಃ**—ಜ್ವಾಲೆಗಳು । **ತ್ವೇಷಾಸಃ**—ಪ್ರಜ್ವಲಿಸುವುವಾಗಿಯೂ । **ಅಮವಂತಃ**—ಶತ್ರುಹಿಂಸಕವಾದ ಶಕ್ತಿಯುಳ್ಳವುಗಳಾಗಿಯೂ । **ಭೀಮಾಸಃ**—ಭಯಂಕರಗಳಾಗಿಯೂ (ಇವೆ) (ಆದ್ದರಿಂದ) **ಪ್ರತೀತಯೇ**—(ಅವುಗಳಲ್ಲಿ) ಭರವಸೆಯಿಡಲು । **ನ**—ಸಾಧ್ಯವಿಲ್ಲ । (ಎದುರಿಸಲು ಸಾಧ್ಯವಿಲ್ಲ) (ಎಲೈ ಅಗ್ನಿಯೇ) **ರಕ್ಷಸ್ವಿನಃ**—ಬಲಶಾಲಿಗಳಾದ (ಮತ್ತು) । **ಯಾತುಮಾವತಃ**—(ನಮಗೆ) ಕೇಡನ್ನುಂಟು ಮಾಡುವ ರಾಕ್ಷಸರನ್ನು । **ಸದಮಿತ್**—ಯಾವಾಗಲೂ । **ಸಂ ದಹ**—ಚೆನ್ನಾಗಿ ಭಸ್ಮಮಾಡು । **ವಿಶ್ವಂ ಅತ್ರಿಣಂ**—ಸರ್ವಭಕ್ಷಕನಾದ ನಮ್ಮ ಶತ್ರುವನ್ನು (ಸಂದಹ=ಸಂಪೂರ್ಣವಾಗಿ ಭಸ್ಮಮಾಡು)

॥ ಭಾವಾರ್ಥ ॥

ಎಲೈ ಅಗ್ನಿದೇವನೇ, ನಿನ್ನ ಜ್ವಾಲೆಗಳ ಪ್ರಭೆಯು ಮಾನವನ ದೃಷ್ಟಿಗೆ ಅಗೋಚರವಾದ ಲೋಕಗಳಲ್ಲೆಲ್ಲ ಹರಡತಕ್ಕದ್ದು. ಅವುಗಳ ಶಕ್ತಿಯು ಅವನಿಂದ ಊಹಿಸಲೂ ಅಸಾಧ್ಯವಾದ ಮಹಿಮೆಯುಳ್ಳದ್ದು. ಅವುಗಳು ಶತ್ರು

ನಾಶದಲ್ಲಿ ಬಹಳ ಕ್ರೌರ್ಯವನ್ನು ತೋರಿಸಿ ಪಾಪಮಾಡುವವರಿಗೆ ಬಹಳ ಭಯಂಕರಗಳಾಗಿರುವುವು. ಆದುದರಿಂದ ಅವುಗಳ ಸ್ವರೂಪವು ಇಷ್ಟೇ ಎಂದು ತಿಳಿಯಲರಿಯದ ನಮಗೆ ಅವುಗಳ ಶಕ್ತಿ ಸಾಮರ್ಥ್ಯಗಳ ವಿಷಯದಲ್ಲಿ ಭರವಸೆಯಿಡಲು ಸಾಧ್ಯವಿಲ್ಲ. ಅವು ನಮ್ಮ ನಂಬಿಕೆಗಿಂತ ಮೀರಿದುದಾಗಿವೆ. ಆ ಶಕ್ತಿಸಾಮರ್ಥ್ಯಗಳಿಂದ ನಮಗೆ ಕೇಡನ್ನುಂಟುಮಾಡುವ ರಾಕ್ಷಸರನ್ನೂ ಸರ್ವಭಕ್ಷಕರಾದ ನಮ್ಮ ಶತೃಗಳನ್ನೂ ಸಂಪೂರ್ಣವಾಗಿ ನಾಶಮಾಡು.

## English Translation

The flames of Agni are glaring, powerful ( and ) awe-inspiring and are not to be opposed ; therefore Agni, burn down entirely the mighty spirits of evils and all our other enemies.

### ವಿಶೇಷವಿಷಯಗಳು

**ತ್ವೇಷಾಸಃ—ತ್ವಿಷ ದೀಪ್ತೌ ।** ಬಹಳ ಪ್ರಕಾಶಮಾನವಾದ, ಚೆನ್ನಾಗಿ ಬೆಳಗುತ್ತಿರುವ

**ಅಮವಂತಃ— ಅಮ ರೋಗೇ । ಅಮತಿ ಶತ್ರೂನ್ರುಜತೀತ್ಯಮೋ ಬಲಂ । ತದೇಷಾಮಸ್ತೀತ್ಯಮವಂತಃ ।** ಅಮಧಾತುವಿಗೆ ರೋಗವೆಂದರ್ಥವು. ಶತ್ರುಗಳನ್ನು ರೋಗದಿಂದ ಹಿಂಸಿಸುವುದರಿಂದ ಅಮವೆಂದರೆ ಬಲವು ಅಂತಹ ಬಲವುಳ್ಳವರು **ಅಮವಂತಃ** ಎನ್ನಲ್ಪಡುವರು ಎಂದರೆ ಶಕ್ತಿಯುಳ್ಳ, powerful

**ಅರ್ಚಯಃ—**ರಶ್ಮಿಗಳು ಎಂದರೆ ಅಗ್ನಿಯ ಜ್ವಾಲೆಗಳು

**ಭೀಮಾಸಃ—** ಭಯಂಕರಗಳಾದ, ದಹಿಸುವ ಶಕ್ತಿಯಿರುವುದರಿಂದ ಸಮೀಪವರ್ತಿಗಳಾದವರನ್ನು ಸುಡಬಹುದೆಂಬ ಭಯವನ್ನುಂಟುಮಾಡುವ

**ನ ಪ್ರತೀಯತೇ—**ಎದುರಿಸಲು ಸಾಧ್ಯವಿಲ್ಲದ, not to be opposed

**ರಕ್ಷಸ್ವಿನಃ—ರಕ್ಷಂತ್ಯನೇನೇತಿ ರಕ್ಷೋ ಬಲಂ ತದೇಷಾಮಸ್ತೀತಿ ರಕ್ಷಸ್ವಿನಃ ।** ರಕ್ಷಿಸುವ ಶಕ್ತಿಯಿರುವುದರಿಂದ ರಕ್ಷಃ ಎಂದರೆ ಬಲವು. ರಕ್ಷಸ್ವಿನಃ ಎಂದರೆ ಬಲವುಳ್ಳ ಶಕ್ತಿಯುತವಾದ ಎಂದಭಿಪ್ರಾಯವು.

**ಯಾತುಮಾವತಃ— ಯಾತವೋ ಯಾತನಾಃ । ತಾನ್ಮಿಮತೇ ನಿರ್ಮಿಮತ ಇತಿ ರಾಕ್ಷಸವ್ಯಾಪಾರಾ ಯಾತುಮಾಃ । ತದೇಷಾಮಸ್ತೀತಿ ಯಾತುಮಾವತಃ ।** ಯಾತುವೆಂದರೆ ಯಾತನೆ. ಯಾತನೆಯನ್ನುಂಟುಮಾಡುವುದರಿಂದ ಯಾತುಮಾ ಎಂದರೆ ರಾಕ್ಷಸವ್ಯಾಪಾರವು ಅಂತಹ ರಾಕ್ಷಸವ್ಯಾಪಾರವುಳ್ಳವರಿಗೆ ಯಾತುಮಾವತಃ ಎಂದು ಹೆಸರು, ದುಷ್ಟರು ಇತ್ಯಾದಿ.

॥ ವ್ಯಾಕರಣಪ್ರಕ್ರಿಯಾ ॥

**ತ್ವೇಷಾಸಃ**— ತ್ವಿಷ ದೀಪ್ತೌ ಧಾತು, **ನನ್ದಿಗ್ರಹಿ—** ಎಂದು ಪಚಾದಿ ಲಕ್ಷಣವಾದ ಅಚ್, ಲಘೂಪಧಗುಣ, **ಚಿತಃ** ಎಂದು ಪ್ರತ್ಯಯಾಂತವು ಅಂತೋದಾತ್ತ, **ಆಜ್ಜಸೇರಸುಕ್** ಎಂದು ಅಸುಕ್ ಆಗಮ.

**ಅಮವನ್ತಃ**— ಅಮ ರೋಗೇ ಚುರಾದಿ ಧಾತು. ಅಮತೀತ್ಯಮಃ ಪಚಾದಿಲಕ್ಷಣವಾದ ಅಚ್, ರೋಗವು ಹಿಂಸಿಸುವಂತೆ ಶತ್ರುಗಳನ್ನು ಹಿಂಸಿಸುವ ಬಲವು ಅಮಶಬ್ದಕ್ಕೆ ಅರ್ಥ, **ವೃಷಾದೀನಾಂ ಚ** ಎಂದು ಆದ್ಯುದಾತ್ತ, ಅಮಃ ಏಷಾಮಸ್ತಿ ಎಂದು ವಿಗ್ರಹ. **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್** ಎಂದು ಮತುಪ್.

**ಪ್ರತೀತಯೇ**— ಪ್ರತಿ ಉಪಸರ್ಗ, ಇಣ್ ಧಾತು ಮುಂದೆ ಕ್ತಿನ್, **ತಾದೌ ಚ ನಿತಿಕೃತ್ಯತೌ** (ಪಾ. ಸೂ. ೬-೨-೫೦) ತು ಶಬ್ದವನ್ನು ಬಿಟ್ಟು ತಕಾರಾದಿಯೂ ನಿತ್ತೂ ಆದ **ಕೃತ್** ಪರದಲ್ಲಿದ್ದರೆ ಅವ್ಯವಹಿತವಾದ ಗತಿಯು ಪ್ರಕೃತಿಸ್ವರವನ್ನು ಹೊಂದುವುದು ಎಂದು ಪ್ರತಿಗೆ ಪ್ರಕೃತಿಸ್ವರ.

**ರಕ್ಷಸ್ವಿನಃ**— ರಕ್ಷ ಪಾಲನೇ ೧ನೇ ಗಣ, ಕರಣಾರ್ಥದಲ್ಲಿ ಅಸುನ್ ಪ್ರತ್ಯಯ, ರಕ್ಷನ್ತಿ ಅನೇನ ಇತಿ ರಕ್ಷಃ, ಕಾಪಾಡಿಕೊಳ್ಳಲು ಸಾಧನವಾದ ಬಲ ಎಂದರ್ಥ. **ಅಸ್ಮಾಯಾಮೇಧಾಸ್ರಜೋವಿನಿಃ** ಎಂದು ವಿನಿಪ್ರತ್ಯಯ.

**ಯಾತುಮಾವತಃ**— ಯಾತು ಎಂದರೆ ಯಾತನೆ ಎಂದರ್ಥ. ಯಾತೂನ್ ಮಿಮತೇ ಇತಿ ಯಾತುಮಾಃ ಯಾತನೆಗಳನ್ನು ಉಂಟುಮಾಡುವ ರಾಕ್ಷಸ ವ್ಯಾಪಾರಗಳು ಎಂದು ಅರ್ಥ ಕರ್ಮವಾಚಕ ಯಾತು ಶಬ್ದೋಪಪದಕವಾದ ಮಾ ಧಾತು ಮುಂದೆ **ಆತೋಽನುಪಪಸರ್ಗೇಕಃ** ಎಂದು ಕ ಪ್ರತ್ಯಯ, ಆಕಾರಕ್ಕೆ ಲೋಪ ಯಾತುಮಾಃ ಏಷಾಂ ಸನ್ತಿ ಎಂದು ವಿಗ್ರಹ **ತದಸ್ಯಾಸ್ತ್ಯಸ್ಮಿನ್—,** ಎಂದು ಮತುಪ್-ಯಾತುಮ+ಮತ್, **ಮತೌ ಬಹ್ವಚೋಽನಜಿರಾದೀನಾಂ** (ಪಾ. ಸೂ. ೬-೩-೧೧೯) ಮತುಪ್ ಪರದಲ್ಲಿರುವಾಗ ಬಹು ಸಂಖ್ಯಾಕವಾದ ಅಚ್ಚುಗಳುಳ್ಳ ಶಬ್ದಕ್ಕೆ ದೀರ್ಘಬರುತ್ತೆ ಆದರೆ ಅಜಿರಾದಿಗಣದಲ್ಲಿರುವ ಶಬ್ದಗಳಿಗೆ ದೀರ್ಘ ಬರುವುದಿಲ್ಲ ಎಂದು ದೀರ್ಘ. ಯಾತುಮಾ+ಮತ್, **ಸಂಜ್ಞಾಯಾಂ** (ಪಾ. ಸೂ. ೮-೨-೧೧) ಸಂಜ್ಞೆ ತೋರುವಾಗ ಮತುಪ್‌ನ ಮಕಾರಕ್ಕೆ ವಕಾರ ಬರುತ್ತೆ ಎಂದು ಮಕಾರಕ್ಕೆ ವಕಾರ, ಯಾತುಮಾವತ್, ಶಸ್, ಮತುಪ್ ಪಿತ್ತಾದ್ದರಿಂದಲೂ ಶಸ್ ಸುಪ್ಪಾದ್ದರಿಂದಲೂ ಅನುದಾತ್ತವಾಗುತ್ತೆ. ಕೃದುತ್ತರಪದ ಪ್ರಕೃತಿಸ್ವರ.

**ಅತ್ರಿಣಮ್**— ಅದ ಭಕ್ಷಣೇ, **ಅದೇಸ್ತ್ರಿನಿ ಚ** (ಉ. ಸೂ. ೪-೫೦೮) ಎಂದು ಕರ್ತರಿ ತ್ರಿನಿ ಪ್ರತ್ಯಯ, ಇದರ ವಿವರಣೆಯನ್ನು ಇದೇ ಸೂಕ್ತ ೧೪ ನೇ ಮಂತ್ರದಲ್ಲಿ ಕೊಟ್ಟಿದೆ. ॥೨೦॥

ಇಲ್ಲಿಗೆ ೩೬ ನೇ ಸೂಕ್ತ ಮುಗಿಯಿತು.



# ಮೂವತ್ತೇಳನೆಯ ಸೂಕ್ತವು



**ಕ್ರೀಳಂ ವ ಇತಿ ದ್ವಿತೀಯಂ ಸೂಕ್ತಂ ಪಂಚದಶರ್ಚಂ । ಅತ್ರೇಯಮನುಕ್ರಮಣಿಕಾ । ಕ್ರೀಳಂ ಪಂಚೋನಾ ಮಾರುತಂ ಹಿ ಗಾಯತ್ರಂ ತ್ವಿತಿ । ಋಷಿಶ್ಚಾನ್ಯಸ್ಮಾದೃಷೇರವಾವಿಶಿಷ್ಟ ಇತಿ ಪರಿಭಾಷಯಾ ಘೋರಪುತ್ರಃ ಕಣ್ವ ಋಷಿಃ । ಇದಮುತ್ತರಂ ಚ ಗಾಯತ್ರೀಚ್ಛಂದಸ್ಕೇ । ಇದಮಾದಿಸೂಕ್ತತ್ರಯಂ ಮರುದ್ದೇವತಾಕಂ । ತುಹಿಹವೇತಿ ಪರಿಭಾಷಿತತ್ವಾತ್ ॥ ವ್ಯೂಳ್ಹೇ ದ್ವಿತೀಯೇ ಛಂದೋಮ ಆಗ್ನಿಮಾರುತ-ಶಸ್ತ್ರ ಏತತ್ಸೂಕ್ತಂ ನಿವಿದ್ಧಾನೀಯಂ । ದ್ವಿತೀಯಸ್ಯಾಗ್ನಿಂ ವೋ ದೇವಮಿತಿ ಖಂಡೇ ಸೂತ್ರಿತಂ । ಕ್ರೀಳಂ ವಃ ಶರ್ಧೋಽಗ್ನೇ ಮೃಳೀತ್ಯಾಗ್ನಿಮಾರುತಂ । ಆ. ೮-೧೦ । ಇತಿ ॥ ಬ್ರಾಹ್ಮಣಂ ಚ । ಕ್ರೀಳಂ ವಃ ಶರ್ಧೋ ಮಾರುತಮಿತಿ । ಐ. ಬ್ರಾ. ೫-೧೯ । ಮರುದ್ಭ್ಯಃ ಕ್ರೀಡಿಭ್ಯಃ ಪುರೋಡಾಶಂ ಸಪ್ತಕಪಾಲಮಿತ್ಯಸ್ಯಾಮಿಷ್ಟೌ ಕ್ರೀಳಂ ವ ಇತ್ಯೇಷಾ ಪ್ರಧಾನಸ್ಯಾನುವಾಕ್ಯಾ । ತಥಾ ತತ ಇತಿ ಖಂಡೇ ಸೂತ್ರಿತಂ । ಕ್ರೀಳಂ ವಃ ಶರ್ಧೋ ಮಾರುತಮಿತ್ಯಾಸೋ ನ ಯೇ ಮರುತಃ ಸ್ವಂಚಃ । ಆ. ೨-೧೮ । ಇತಿ ॥**

ಅನುವಾದವು—ಕ್ರೀಳಂ ವಃ ಎಂಬುದು ಈ ಎಂಟನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವವು. **ಕ್ರೀಳಂ ಪಂಚೋನಾ ಮಾರುತಂ ಹಿ ಗಾಯತ್ರಂ ತ್ವಿತಿ** ಎಂದು ಅನುಕ್ರಮಣಿಕೆಯಲ್ಲಿ ಹೇಳಿರುವುದು. ಹಿಂದೆ ಹೇಳಿದಂತೆ ಈ ಸೂಕ್ತಕ್ಕೆ ಘೋರ ಪುತ್ರನಾದ ಕಣ್ವನೇ ಋಷಿಯು. ಈ ಸೂಕ್ತವೂ ಮುಂದಿನ ಸೂಕ್ತವೂ ಗಾಯತ್ರೀ ಛಂದಸ್ಸುಗಳಿಂದ ಕೂಡಿದ ಸೂಕ್ತಗಳು. ಈ ಸೂಕ್ತದಿಂದ ಮೊದಲು ಮಾಡಿ ಮೂರು ಸೂಕ್ತಗಳು ಮರುದ್ದೇವತಾಕಗಳು.

ವ್ಯೂಳ್ಹವೆಂಬ ಯಾಗದಲ್ಲಿ ಅಗ್ನಿಮಾರುತಶಸ್ತ್ರಮಂತ್ರಪಠನಕಾಲದಲ್ಲಿ ಈ ಸೂಕ್ತವನ್ನು ದ್ವಿತೀಯ ಛಂದೋಮಾ ಮಂತ್ರವನ್ನಾಗಿ ಪಠಿಸುವರು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ದ್ವಿತೀಯಸ್ಯಾಗ್ನಿಂ ವೋ ದೇವಂ** ಎಂಬ ಖಂಡದಲ್ಲಿ **ಕ್ರೀಳಂ ವಶ್ಶರ್ಧೋಽಗ್ನೇ ಮೃಳೀತ್ಯಾಗ್ನಿಮಾರುತಂ** ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು. (ಆ. ೮-೧೦) ಈ ವಿಷಯದಲ್ಲಿ **ಕ್ರೀಳಂ ವಃ ಶರ್ಧೋ ಮಾರುತಂ** (ಐ. ಬಾ. ೫-೧೯) ಎಂಬ ಬ್ರಾಹ್ಮಣವಾಕ್ಯವಿರುವುದು. **ಮರುದ್ಭ್ಯಃ ಕ್ರೀಡಿಭ್ಯಃ ಪುರೋಡಾಶಂ ಸಪ್ತಕಪಾಲಂ** ಎಂದು ಮರುದ್ದೇವತೆಗಳನ್ನುದ್ದೇಶಿಸಿ ಮಾಡುವ ಆಮಿಷ್ಟಿ ಎಂಬ ಹೋಮದಲ್ಲಿ **ಕ್ರೀಳಂ ವಃ** ಎಂಬ ಈ ಋಕ್ಕು ಮುಖ್ಯ ಅನುವಾಕ್ಯಾ ಮಂತ್ರವಾಗಿರುವುದು. ಆಶ್ವಲಾಯನ ಶ್ರೌತಸೂತ್ರದಲ್ಲಿ (ಆ. ೨-೧೮) **ತಥಾ ತತಃ** ಎಂಬ ಖಂಡದಲ್ಲಿ **ಕ್ರೀಳಂ ವಃ ಶರ್ಧೋ ಮಾರುತಂ** (ಋ. ಸಂ. ೧-೩೭-೧) **ಅತ್ಯಾಸೋ ನ ಯೇ ಮರುತಃ ಸ್ವಂಚಃ** (ಋ. ಸಂ. ೭-೫೯-೧೬) ಎಂಬ ಸೂತ್ರವು ಈ ವಿಷಯವನ್ನು ಸೂಚಿಸುವುದು.

॥ ಓಂ ॥

## ಸೂಕ್ತ—೩೭

॥ ಮಂಡಲ—೧ ॥ ಅನುವಾಕ—೮ ॥ ಸೂಕ್ತ—೩೭ ॥

॥ ಅಷ್ಟಕ—೧ ॥ ಅಧ್ಯಾಯ—೩ ॥ ವರ್ಗ—೧೨, ೧೩, ೧೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥

॥ ಋಷಿಃ— ಕಣ್ವೋ ಘೌರಃ ॥

॥ ದೇವತಾ— ಮರುತಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಕ್ರೀಳಂ ವಃ ಶರ್ಧೋ ಮಾರುತಮನರ್ವಾಣಂ ರಥೇಶುಭಂ ।
ಕಣ್ವಾ ಅಭಿ ಪ್ರ ಗಾಯತ ॥೧॥

॥ ಪದಪಾಠಃ ॥

ಕ್ರೀಳಂ । ವಃ । ಶರ್ಧಃ । ಮಾರುತಂ । ಅನರ್ವಾಣಂ । ರಥೇಽಶುಭಂ ।
ಕಣ್ವಾಃ । ಅಭಿ । ಪ್ರ । ಗಾಯತ ॥ ೧ ॥

॥ ಸಾಯಣಭಾಷ್ಯಂ ॥

ಹೇ ಕಣ್ವಾಃ ಕಣ್ವಗೋತ್ರೋತ್ಪನ್ನಾ ಮಹರ್ಷಯಃ । ಯದ್ವಾ । ಮೇಧಾವಿನ ಋತ್ವಿಜಃ । ವೋ ಯುಷ್ಮದರ್ಥಂ ಮಾರುತಂ ಮರುತ್ಸಮೂಹರೂಪಂ ಶರ್ಧೋ ಬಲಮಭಿ ಪ್ರ ಗಾಯತ । ಅಭಿತಃ ಪ್ರಕರ್ಷೇಣ ಸ್ತುಧ್ವಂ । ಕೀದೃಶಂ ಶರ್ಧಃ । ಕ್ರೀಳಂ ವಿಹರಣಶೀಲಂ ಅನರ್ವಾಣಂ ಭ್ರಾತೃವ್ಯರಹಿತಂ । ಅತ ಏವ ಶ್ರುತ್ಯಂತರಬ್ರಾಹ್ಮಣೇನ ಮಂತ್ರಾಂತರಮೇವ ವ್ಯಾಖ್ಯಾತಂ । ಅನರ್ವಾ ಪ್ರೇಹೀತ್ಯಾಹ

ಭ್ರಾತೃವ್ಯೋ ವಾ ಅರ್ವಾ ಭ್ರಾತೃವ್ಯಾಪನುತ್ತ್ಯಾ ಇತಿ । ರಥೇಶುಭಂ ಸ್ವಕೀಯೇ ರಥೇಽವಸ್ಥಾಯ ಶೋಭಮಾನಂ ॥ ಕ್ರೀಳಂ । ಕ್ರೀಡೃ ವಿಹಾರೇ । ಪಚಾದ್ಯಚ್ । ಶರ್ಧಃ । ಶೃಧು ಪ್ರಸಹನೇ । ಶರ್ಧಯತ್ಯನೇನ ಶತ್ರೂನಿತಿ ಶರ್ಧೋ ಬಲಂ । ಅಸುನ್ । ನಿತ್ತ್ವಾದಾದ್ಯುದಾತ್ತತ್ವಂ । ಮಾರುತಂ । ಮರುತಾಂ ಸಂಬಂಧಿ । ತಸ್ಯೇದಮಿತ್ಯಣ್ । ವ್ಯತ್ಯಯೇನಾದ್ಯುದಾತ್ತತ್ವಂ । ಯದ್ವಾ । ಸಮೂಹಾರ್ಥೇಽನುದಾತ್ತೇರಞ್ । ಪಾ. ೪-೨-೪೪ । ಇತ್ಯನುದಾತ್ತಾದಿಲಕ್ಷಣೋಽಞ್‌ಪ್ರತ್ಯಯಃ । ಅನರ್ವಾಣಂ । ವ್ಯತ್ಯಯೇನ ಪುಲ್ಲಿಂಗತಾ । ನಞ್‌ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ರಥೇಶುಭಂ । ಶುಭ ದೀಪ್ತೌ । ರಥೇ ಶೋಭತ ಇತಿ ರಥೇಶುಪ್ । ಕ್ವಿಪ್ಚೇತಿ ಕ್ವಿಪ್ । ತತ್ಪುರುಷೇ ಕೃತಿ ಬಹುಲಮಿತ್ಯಲುಕ್ । ಕೃದುತ್ತರಪದಪ್ರಕೃತಿಸ್ವರತ್ವಂ । ಗಾಯತ । ಕೈ ಗೈ ರೈ ಶಬ್ದೇ । ತಿಙ್ಙತಿಙ ಇತಿ ನಿಘಾತಃ ॥

॥ ಪ್ರತಿಪದಾರ್ಥ ॥

**ಕಣ್ವಾಃ**—ಎಲೈ ಕಣ್ವಋಷಿಯ ವಂಶೋತ್ಪನ್ನರಾದ ಮಹರ್ಷಿಗಳೇ, ಅಥವಾ ಬುದ್ಧಿವಂತರಾದ ಋತ್ವಿಕ್ಕುಗಳೇ । **ವಃ**—ನಿಮಗೋಸ್ಕರವಾಗಿ (ನಿಮ್ಮ ಅಭ್ಯುದಯಕ್ಕಾಗಿ) । **ಕ್ರೀಳಂ**—ಕ್ರೀಡೆಯಲ್ಲಿ ಆಸಕ್ತಿಯುಳ್ಳದ್ದೂ । **ಅನರ್ವಾಣಂ**—ಪ್ರತಿಸ್ಪರ್ಧಿರಹಿತವಾದದ್ದೂ । **ರಥೇಶುಭಂ**—(ಸ್ವಂತ) ರಥದಲ್ಲಿ ಕುಳಿತುಕೊಂಡು ಶೋಭಿಸುತ್ತಿರುವುದೂ) **ಮಾರುತಂ**—ಮರುತ್ತು (ದೇವತೆಗಳ) ಸಾಂಘಿಕ ರೂಪವುಳ್ಳದ್ದೂ ಆದ । **ಶರ್ಧಃ**—ಶಕ್ತಿಯನ್ನು ಕುರಿತು । **ಅಭಿ ಪ್ರಗಾಯತ**—ಸುತ್ತಲೂ ಪ್ರಶಂಸಾರೂಪವಾದ ಸ್ತೋತ್ರವನ್ನು ಚೆನ್ನಾಗಿ ಹಾಡಿರಿ.

॥ ಭಾವಾರ್ಥ ॥

ಎಲೈ ಕಣ್ವವಂಶಸ್ಥರಾದ ಋಷಿಗಳೇ, ಮಹಾಬಲಶಾಲಿಗಳಾದ ಮರುದ್ದೇವತೆಗಳು ತಮ್ಮ ಶೋಭನಕರವಾದ ಮತ್ತು ಅಪ್ರತಿಹತವಾದ ರಥದಲ್ಲಿ ಕುಳಿತು ವಿಹರಿಸುತ್ತಿರುವರು. ಅಂತಹ ಮರುದ್ದೇವತೆಗಳ ಸಮೂಹವನ್ನು ಸ್ತೋತ್ರಾದಿಗಳಿಂದ ಚೆನ್ನಾಗಿ ಗುಣಗಾನಮಾಡಿರಿ.

## English Translation

Celebrate, Kanwas, the aggregate strength of the maruths, sportive, free from enemies and shining in their car.

ವಿಶೇಷ ವಿಷಯಗಳು

ಮರುತಃ ಎಂಬ ಶಬ್ದಕ್ಕೆ ಯಾಸ್ಕರ ವಿವರಣೆಯು ಈ ರೀತಿ ಇರುವುದು—

**ಮರುತೋ ಮಿತರಾವಿಣೋ ವಾ ಮಿತರೋಚಿನೋ ವಾ ಮಹದ್ದ್ರವಂತೀತಿ ವಾ ॥**

ಮಿತಂ ಎಂದರೆ ಸುಶ್ಲಿಷ್ಟವೆಂದರ್ಥವು. ಸುಶ್ಲಿಷ್ಟವಾಗಿ ಶಬ್ದಮಾಡುವುದರಿಂದ ಎಂದರೆ ಶಬ್ದಮಾಡುತ್ತಾ ಬೀಸುವುದರಿಂದ ಅಥವಾ ಚೆನ್ನಾಗಿ ಪ್ರಕಾಶಿಸುವುದರಿಂದ ಅಥವಾ ಬಹಳವಾಗಿ ಶಬ್ದಮಾಡುವುದರಿಂದ ಇವರಿಗೆ **ಮರುತಃ**

ಎಂದು ಹೆಸರು. ಇಲ್ಲಿ ಕೆಲವರು ಮರುತೋ ಮಿತರಾವಿಣೋ ವಾ ಎಂಬ ಸ್ಥಳದಲ್ಲಿ **ಮರುತಃ ಅಮಿತರಾವಿಣಃ** ಎಂದು ಪದಚ್ಛೇದಮಾಡಬೇಕೆಂದೂ ಹಾಗೆ ಮಾಡಿದರೆ ಅಮಿತ ಎಂದರೆ ಬಹಳವಾಗಿ, ರಾವಿಣಃ-ಶಬ್ದಮಾಡುವುದರಿಂದ ಎಂದರ್ಥಮಾಡುವರು. ಅವರಂತೆಯೇ **ಅಮಿತರೋಚಿನಃ** ಎಂದೂ ಪದಚ್ಛೇದಮಾಡಿ ಬಹಳ ಪ್ರಕಾಶವುಳ್ಳವರು ಎಂಬರ್ಥವನ್ನು ಹೇಳಬಹುದು.

ಮರುದ್ದೇವತೆಗಳು ಅನೇಕ ಸಂದರ್ಭಗಳಲ್ಲಿ ಇಂದ್ರನೊಡನೆ ಸೇರಿ ಸ್ತುತಿಸಲ್ಪಡುವರು. **ಮರುದ್ಭಿರಿಂದ್ರ ಸಖ್ಯಂತೇ ಅಸ್ತು** (ಋ. ಸಂ. ೮-೯೬-೭) ಎಂದು ಇಂದ್ರನ ಸ್ತುತಿಯಿರುವುದರಿಂದ ಇಂದ್ರನಂತೆ ಇವರಿಗೂ ಶ್ರೇಷ್ಠತೆ ಇದೆ. ಋಗ್ವೇದದಲ್ಲಿ ಮೂವತ್ತುಮೂರು ಸೂಕ್ತಗಳು ಸಂಪೂರ್ಣವಾಗಿ ಮರುದ್ದೇವತಾಕವಾಗಿವೆ. ಇದಲ್ಲದೆ ಇಂದ್ರನೊಡನೆ ಸೇರಿ ಸ್ತುತಿಸಲ್ಪಡುವ ಏಳು ಸೂಕ್ತಗಳೂ, ಪೂಷಾ ಮತ್ತು ಅಗ್ನಿಯೊಡನೆ ಸ್ತುತಿಸಲ್ಪಡುವ ಒಂದೊಂದು ಸೂಕ್ತಗಳೂ ಇವೆ. ಈ ಮರುದ್ದೇವತೆಗಳು ಅನೇಕರಿರುವರು. ಕೆಲವು ಸ್ಥಳಗಳಲ್ಲಿ **ತ್ರಿಸಪ್ತೈಃ** (ಋ. ಸಂ. ೧-೧೩೩-೬) ಎಂದರೆ ಸಪ್ತಸಂಖ್ಯಾಕವಾದ ಮೂರು ವರ್ಗ ಅಥವಾ ಗುಂಪುಗಳೆಂದೂ, ಮತ್ತೆ ಕೆಲವು ಸ್ಥಳಗಳಲ್ಲಿ **ತ್ರಿ ಷಷ್ಟಿಸ್ತ್ವಾ ಮರುತೋ** (ಋ. ಸಂ ೮-೯೬-೮) ಮೂರು ಅರವತ್ತು ಎಂದರೆ ನೂರೆಂಭತ್ತು ಮರುದ್ದೇವತೆಗಳಿರುವರೆಂದೂ ಹೇಳಿದೆ. ಇವರು ರುದ್ರರ ಪುತ್ರರೆಂದೂ ಆದುದರಿಂದ ಇವರಿಗೆ ರುದ್ರಿಯಾಃ ಎಂಬ ಹೆಸರಿನಿಂದ ಕರೆಯಲ್ಪಡುವರೆಂದೂ ಪ್ರಸಿದ್ಧಿಯು. ಈ ಮರುದ್ದೇವತೆಗಳಿಗೆ ಪೃಶ್ನಿಯು (ಸ್ವರ್ಗಲೋಕದ ಹಸುವು) ತಾಯಿಯೆಂದೂ ಆದುದರಿಂದ ಇವರು ಪೃಶ್ನಿಮಾತರಃ—ಎಂದರೆ ಪ್ರಶ್ನಿಯೇ ತಾಯಿಯಾಗಿವುಳ್ಳವರು ಎಂಬ ಅರ್ಥವಿರುವುದರಿಂದ ಪೃಶ್ನಿಮಾತರಃ ಎಂಬ ಹೆಸರಿನಿಂದಲೂ ಕರೆಯಲ್ಪಡುವರು. ಇಲ್ಲಿ ಪೃಶ್ನಿಯೆಂದರೆ ಮೇಘಗಳಾಗಿರಬಹುದು. ಮೇಘಗಳು ಮಳೆಯನ್ನು ಸುರಿಸುವಾಗ ಸಾಧಾರಣವಾಗಿ ಗಾಳಿಯು ವೇಗವಾಗಿಯೂ ಶಬ್ದಸಹಿತವಾಗಿಯೂ ಬೀಸುತ್ತಿರುವುದರಿಂದ ಈ ದೇವತೆಗಳಿಗೆ ಈ ಹೆಸರು ಬಂದಿರಬಹುದು. ಅಗ್ನಿಯಿಂದಲೂ ಮಿಂಚಿನಿಂದಲೂ ಇವರು ಉತ್ಪನ್ನರಾದವರೆಂದೂ ಮತ್ತು ವಾಯುವಿನಿಂದಲೂ, ಸ್ವರ್ಗದಿಂದಲೂ ಉತ್ಪನ್ನರಾದವರೆಂದೂ, ಸ್ವತಃ ಉತ್ಪನ್ನರೆಂದೂ ಅಲ್ಲಲ್ಲಿ ಹೇಳಿದೆ. ರೋದಸೀ ಎಂಬ ದೇವತೆಯು ಇವರ ಪತ್ನಿಯೆಂದೂ ಇಂದ್ರಾಣೀ ಮತ್ತು ಸರಸ್ವತಿಯರಿಗೂ ಇವರಿಗೂ ವಿಶೇಷ ಸಂಬಂಧವಿದೆಯೆಂದೂ ಅಲ್ಲಲ್ಲಿ ಸೂಚಿತವಾಗಿರುವುದು.

ಮರುದ್ದೇವತೆಗಳ ಸ್ಥಾನವು ಸ್ವರ್ಗಾಂತರಿಕ್ಷಭೂಮಿಗಳೆಂಬ ಮೂರು ಲೋಕಗಳು. ಸಿಡಿಲು ಮಿಂಚಿನೊಡನೆ ಸುರಿಯುವ ಮಳೆಯಲ್ಲಿ ಇವರ ಸಂಬಂಧವು ವಿಶೇಷವಾಗಿರುವುದರಿಂದ ಇವರು ಬಹಳ ಪ್ರಕಾಶಮಾನರಾದವರೆಂದು ಕರೆಯುವುದು ರೂಢಿಯಾಗಿದೆ. ಮಿಂಚೇ ಇವರ ಆಯುಧವಾಗಿರುವುದು. ಶಿರಸ್ಸು, ಪಾದಗಳು, ಹೃದಯ ಮೊದಲಾದ ಅವಯವಗಳಲ್ಲಿ ಸುವರ್ಣಾಭರಣಗಳನ್ನು ಧರಿಸಿರುವಂತೆಯೂ ಕೈಯಲ್ಲಿ ಚಿನ್ನದ ಕೊಡಲಿಯನ್ನು ಹಿಡಿದಿರುವಂತೆಯೂ ಇರುವ ವರ್ಣನೆಗಳನೇಕವಿವೆ. ಪೃಷತೀ ಅಥವಾ ಚುಕ್ಕೆಗಳಿಂದ ಕೂಡಿದ ಜಿಂಕೆಯನ್ನು (spotted deer) ಕಟ್ಟಿದ ರಥದಲ್ಲಿ ಕುಳಿತು ಸಂಚರಿಸುವ ವರ್ಣನೆಯೂ ಇದೆ.

ಈ ಮರುದ್ದೇವತೆಗಳು ದೊಡ್ಡವರು, ಶ್ರೇಷ್ಠರು, ತರುಣರು, ದುಷ್ಟಮೃಗಗಳಂತೆ ಕ್ರೂರರಾದವರು ಆದರೆ ಮಕ್ಕಳಂತೆ ಆಟಪಾಟಗಳಲ್ಲಿ ಆಸಕ್ತರಾದವರು. ಅವರು ಸಂಚರಿಸುವ ರಭಸವು ಸಿಡಿಲಿನಂತೆ ಮಹಾ ಭಯಂಕರವಾಗಿರುವುದು. ಅವರು ತಮ್ಮ ಜತೆಯಲ್ಲಿಯೇ ವೃಷ್ಟಿಯನ್ನು ಎಂದರೆ ಮಳೆಯನ್ನು ತರುವರು. ಮರುನ್ಮೃಧೇ

ಎಂಬ ಪ್ರಸಿದ್ಧವಾದ ನದಿಯು ಇವರ ಸಾಹಸಕ್ಕೆ ಹೆಗ್ಗುರುತಾಗಿರುವುದು. ಇವರು ಉಂಟುಮಾಡುವ ವೃಷ್ಟಿಯು ಜೇನುತುಪ್ಪ, ಹಾಲು, ತುಪ್ಪ ಎಂದು ವಿಧವಿಧವಾದ ಹೆಸರುಗಳಿಂದ ಕರೆಯಲ್ಪಡುವುದು. ಇವರು ತಮ್ಮ ಜತೆಯಲ್ಲಿ ವೃಷ್ಟಿಯನ್ನು ತರುವುದಲ್ಲದೆ ಕತ್ತಲೆಯನ್ನು ಹೋಗಲಾಡಿಸುವರೆಂದು ಪ್ರಸಿದ್ಧಿಯು. ಇವರ ಗಾನವು ಇಂದ್ರನಿಗೆ ವೃತ್ರಾಸುರನ ಸಂಹಾರಕಾಲದಲ್ಲಿ ಶಕ್ತಿಯನ್ನು ಕೊಡುವುದು. ಕೆಲವು ವೇಳೆ ಇವರು ಸೋಮಪಾನಮಾಡುವರೆಂದೂ, ಗಾನಮಾಡುವರೆಂದೂ ಯಜ್ಞಗಳನ್ನು ಸಹ ಮಾಡುವರೆಂದೂ ವಿಧವಿಧವಾದ ಅನೇಕ ವರ್ಣನೆಗಳಿವೆ

ಮರುದ್ದೇವತೆಗಳ ಮುಖ್ಯ ಪರಾಕ್ರಮವೆಂದರೆ ವೃತ್ರಾಸುರನನ್ನು ಸಂಹಾರಮಾಡುವಾಗ ಇಂದ್ರನಿಗೆ ಸಹಾಯ ಮಾಡುವುದೇ ಆಗಿದೆ. ಕೆಲವು ಕಡೆ ಇವರನ್ನು ಇಂದ್ರನ ಪುತ್ರರು ಅಥವಾ ಸಹೋದರರೆಂದು ಸಂಬೋಧಿಸಿದ್ದರೂ ಇಂದ್ರನಿಗೆ ಮುಖ್ಯವಾದ ಕೆಲವು ಸಂದರ್ಭದಲ್ಲಿ ಸಹಾಯಮಾಡದೆ ಕೈಬಿಟ್ಟರೆಂದೂ ಅದಕ್ಕಾಗಿ ಇಂದ್ರನು ಇವರ ಮೇಲೆ ಪ್ರತೀಕಾರಕ್ರಮವನ್ನು ಕೈಗೊಂಡು ಸಂಹಾರಮಾಡಲುದ್ಯುಕ್ತನಾದನೆಂದೂ, ಅಗಸ್ತ್ಯಋಷಿಯು ಬಹಳ ಪ್ರಯತ್ನದಿಂದ ಇಂದ್ರನನ್ನು ಸಮಾಧಾನ ಮಾಡಬೇಕಾಯಿತೆಂದೂ ವರ್ಣಿಸಿರುವ ಒಂದೆರಡು ಸೂಕ್ತಗಳಿವೆ. (ಋ. ಸಂ. ೧-೧೬೫; ೧-೧೭೦)

ಮರುತ್ತುಗಳೊಡನೆ ರುದ್ರನು ಇರುವ ಸಂಬಂಧದಲ್ಲಿ ಈ ಮರುದ್ದೇವತೆಗಳು ತಮ್ಮ ಆಯುಧವನ್ನು (ಕೊಡಲಿ, ಭರ್ಜಿ) ಉಪಯೋಗಿಸಿರುವ ವರ್ಣನೆ ಇದೆ. (ಋ. ಸಂ. ೭-೫೬-೯; ೭-೫೬-೧೭; ೭-೫೭-೪; ೧-೧೭೧-೧; ೧-೧೭೨-೨; ೧-೧೬೪-೮; ೧-೬೪-೯)

ಯಜ್ಞಾನುಷ್ಠಾನಕರ್ಮಗಳ ವಿಷಯದಲ್ಲಿ ಅದರಲ್ಲಿಯೂ ಸೋಮಯಾಗದಲ್ಲಿ ಮರುದ್ದೇವತೆಗಳಿಗೂ ವಾಯುದೇವತೆಗೂ ಅನೇಕ ವ್ಯತ್ಯಾಸಗಳಿವೆ. ವಾಯುವನ್ನು ಪ್ರಾತಸ್ಸವನದಲ್ಲಿಯೂ ಮರುದ್ದೇವತೆಗಳನ್ನು ಮಾಧ್ಯಂದಿನ ಮತ್ತು ತೃತೀಯ ಸವನಗಳಲ್ಲಿಯೂ ಆಹ್ವಾನಮಾಡುವುದು ರೂಢಿಯಾಗಿದೆ. ಚಾತುರ್ಮಾಸ್ಯವೆಂಬ ಯಾಗದಲ್ಲಿ ಮರುದ್ದೇವತೆಗಳ ಪಾತ್ರವು ವಿಶೇಷವಾಗಿರುವುದು.

ಮರುದ್ದೇವತೆಗಳ ಸ್ವರೂಪವನ್ನು ಸಂಕ್ಷೇಪವಾಗಿ ವಿಚಾರಮಾಡುವೆವು. ವಾಯುವಿಗೂ ಮರುತ್ತುಗಳಿಗೂ ಇರುವ ವ್ಯತ್ಯಾಸವೇನೆಂದರೆ—ವಾಯುವು ಸಾಧಾರಣವಾಗಿ ಬೀಸುವ ಗಾಳಿಯು ; ಮರುತ್ತುಗಳು ವರ್ಷಾಕಾಲದಲ್ಲಿ ಗುಡುಗು, ಸಿಡಿಲು, ಮಿಂಚುಗಳಿಂದ ಕೂಡಿ ಮಳೆಯು ಹುಯ್ಯುವಕಾಲದಲ್ಲಿ ಮಹಾ ಆರ್ಭಟದೊಡನೆ ವೇಗವಾಗಿಯೂ, ಭಯಂಕರವಾಗಿಯೂ ಬೀಸುವ ಗಾಳಿಯು. ಆದುದರಿಂದಲೇ ಮರುದ್ದೇವತೆಗಳು ಪ್ರಕಾಶಮಾನರೆಂದೂ, ಶಬ್ದ ಮಾಡುವರೆಂದೂ, ಕ್ರೂರರಾದವರೆಂದು, ಬಹಳ ಶಕ್ತಿ ಸಾಮರ್ಥ್ಯಗಳುಳ್ಳವರೆಂದೂ, ಅಂತರಿಕ್ಷದ (ಸ್ವರ್ಗದ) ಪುತ್ರರೆಂದೂ, ಅಂತರಿಕ್ಷದಲ್ಲಿ ಸದಾ ಬೀಸುತ್ತಿರುವುದರಿಂದ ಯಾವಾಗಲೂ ಕ್ರೀಡೆಗಳಲ್ಲಿ (ಆಟಗಳಲ್ಲಿ) ಆಸಕ್ತರಾದವರೆಂದೂ ವಿಧವಿಧವಾದ ವರ್ಣನೆಗಳು ಕಂಡುಬರುವವು.

**ಕ್ರೀಳಂ—ವಿಹರಣಶೀಲಂ ।** ಆಟವಾಡುವ ಸ್ವಭಾವವುಳ್ಳ, ಆಟಪಾಟಗಳಲ್ಲಿ ಆಸಕ್ತರಾದ, ವಿಹಾರಾದಿಗಳಲ್ಲಿ ತೊಡಗಿರುವ ಇತ್ಯಾದಿ.

**ಶರ್ಧಃ**—ಓಜಃ ಪಾಜಃ ಮೊದಲಾದ **ಇಪ್ಪತ್ತೆಂಟು ಬಲನಾಮಗಳ** ಮಧ್ಯದಲ್ಲಿ ಶರ್ಧಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ ೩-೯) ಶರ್ಧಃ ಎಂದರೆ ಬಲವನ್ನು **ಅಥವಾ** ಸಾಹಸವನ್ನು ಎಂದರ್ಥವು.

**ಮಾರುತಂ—ಮರುತ್ಸಮೂಹಂ** । ಮರುದ್ದೇವತೆಗಳು **ಯಾವಾಗಲೂ** ಅನೇಕರಿರುವುದರಿಂದ ಇವರನ್ನು ಬಹುವಚನದಲ್ಲಿಯೇ ಸಂಬೋಧಿಸಲಾಗಿರುವುದು. ಇಲ್ಲಿ ಮಾರುತಂ ಎಂಬ ಏಕವಚನ ಶಬ್ದಕ್ಕೆ ಮರುದ್ದೇವತೆಗಳ ಸಮೂಹವು ಎಂದರ್ಥವು.

**ಅನರ್ವಾಣಂ—ಭ್ರಾತೃವ್ಯರಹಿತಂ,** ಎಂದರೆ ಶತ್ರುರಹಿತರಾದವರು ಈ ಶಬ್ದಕ್ಕೆ ಈ ಅರ್ಥವು ಹೇಗೆ ಅನ್ವಯಿಸುವುದೆಂಬುದನ್ನು ತೋರಿಸುವುದಕ್ಕಾಗಿ ಭಾಷ್ಯಕಾರರು—**ಅನರ್ವಾ ಪ್ರೇಹೀತ್ಯಾಹ । ಭ್ರಾತೃವ್ಯೋ ವಾ ಅರ್ವಾ । ಭ್ರಾತೃವ್ಯಾಪನುತ್ತ್ಯೈ ॥** ಎಂಬ ಬ್ರಾಹ್ಮಣವಾಕ್ಯವನ್ನು ಉದಾಹರಿಸಿರುವರು. ಕೆಲವು ಪಾಶ್ಚಾತ್ಯ ಪಂಡಿತರು **ಅನರ್ವಾಣಂ** ಎಂಬ ಶಬ್ದಕ್ಕೆ ಬೇರೆ ವಿಧವಾಗಿ ಅರ್ಥಮಾಡಿರುವರು. **ಅರ್ವಾ** ಎಂದರೆ ಕುದುರೆಯು. **ಅನರ್ವಾ** ಎಂದರೆ ಕುದುರೆ ಇಲ್ಲದವರು. ಕುದುರೆಯಿಲ್ಲದ ಮರುದ್ದೇವತೆಗಳೆಂದರೆ, ಮರುದ್ದೇವತೆಗಳ ರಥಕ್ಕೆ ಕುದುರೆಗಳನ್ನು ಕಟ್ಟದೆ ಅವಕ್ಕೆ ಬದಲಾಗಿ **ಪೃಷತೀ** ಎಂಬ ಜಿಂಕೆಗಳನ್ನು ಕಟ್ಟುವುದರಿಂದ ಇವರನ್ನು ಅನರ್ವಾಣಂ ಎಂದು ಕರೆಯಲಾಗಿದೆ ಎಂದಭಿಪ್ರಾಯಪಡುವರು.

**ರಥೇಶುಭಂ**—ಸ್ವಕೀಯವಾದ ರಥದಲ್ಲಿ ಕುಳಿತು ಶೋಭಿಸುವ ಎಂದರ್ಥವು.

**ಕಣ್ವಾಃ**—ಕಣ್ವರು ಎಂದರೆ ಕಣ್ವಋಷಿಯ ವಂಶದಲ್ಲಿ ಉತ್ಪನ್ನರಾದವರು.

**ಅಭಿ ಪ್ರಗಾಯತ**—ಎಲ್ಲರೂ ಒಟ್ಟಾಗಿ ಸೇರಿ ಉಚ್ಚಸ್ವರದಿಂದ ಮರುದ್ದೇವತೆಗಳ ಗುಣಗಾನಮಾಡಿರಿ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಕ್ರೀಳಮ್—ಕ್ರೀಡೃ** ವಿಹಾರೇ ೧ನೇ ಗಣ. ಪಚಾದಿಲಕ್ಷಣವಾದ ಅಚ್. ಎರಡು ಸ್ವರಗಳ ಮಧ್ಯೆ ಇರುವ ಡಕಾರಕ್ಕೆ ಳಕಾರವು ಬಹ್ವೃಚ ಸಂಪ್ರದಾಯದಿಂದ ಬರುತ್ತೆ.

**ಶರ್ಧಃ**—ಶೃಧು ಪ್ರಹಸನೇ ೧೦ ನೇ ಗಣ. ಶರ್ಧಯತ್ಯನೇನ ಶತ್ರೂನ್=ಇದರಿಂದ ಶತ್ರುಗಳನ್ನು ಪರಿಹರಿಸುವನು ಎಂದು ವಿಗ್ರಹ. ಬಲ ಎಂದು ಅರ್ಥ. ಔಣಾದಿಕ ಅಸುನ್ ಪ್ರತ್ಯಯ. ಲಘೂಪಧಗುಣ, ರಪರತ್ವ, **ಞ್ನಿತ್ಯಾದಿರ್ನಿತ್ಯಮ್** ಎಂದು ಆದ್ಯುದಾತ್ತ.

**ಮಾರುತಮ್**—ಮರುತಃ ಇದಂ ಎಂದು ವಿಗ್ರಹ. **ತಸ್ಯೇದಮ್** (ಪಾ. ಸೂ. ೪-೩-೧೨೦) ಪ್ರಾತಿಪದಿಕಪ್ರಕೃತಿಕ ಷಷ್ಠ್ಯಂತದ ಮುಂದೆ ಇದಮ್ ಎಂಬ ಅರ್ಥದಲ್ಲಿ **ಅಣ್** ಮೊದಲಾದ ಸಾಧಾರಣ ಪ್ರತ್ಯಯಗಳೂ, **ರಾಷ್ಟ್ರಾವಾರ**—,ಎಂದು ವಿಹಿತವಾದ ಘಾದಿ ಪ್ರತ್ಯಯಗಳೂ ಬರುತ್ತವೆ ಎಂದು ಅಣ್ ಪ್ರತ್ಯಯ. ಪ್ರತ್ಯಯಸ್ವರಕ್ಕೆ

ಬದಲಾಗಿ ಆದ್ಯುದಾತ್ತವು ಛಾಂದಸವಾಗಿ ಬರುವುದು. ಇದು ಒಂದು ವಿಧ, ಮರುತಾಂ ಸಮೂಹಃ ಎಂದು ವಿಗ್ರಹ. **ಅನುದಾತ್ತಾದೇರಞ್** (ಪಾ. ಸೂ. ೪-೨-೪೪) ಅನುದಾತ್ತಾದಿಶಬ್ದ ಪ್ರಕೃತಿಕ ಷಷ್ಠ್ಯಂತದ ಮುಂದೆ ಸಮೂಹ ಎಂಬ ಅರ್ಥದಲ್ಲಿ ಅಞ್ ಬರುತ್ತೆ ಎಂದು ಅಞ್. **ಮೃಗ್ರೋರುತಿಃ** (ಉ. ಸೂ. ೧-೯೪) ಮೃಞ್ ಪ್ರಾಣತ್ಯಾಗೇ, ಗೃ ನಿಗರಣೇ ಇವುಗಳ ಮುಂದೆ ಉತಿ ಪ್ರತ್ಯಯ ಬರುತ್ತೆ ಎಂದು ಮೃಧಾತು ಮುಂದೆ ಉತಿ ಪ್ರತ್ಯಯ, ಗುಣ, ರಪರತ್ವ, ಪ್ರತ್ಯಯಸ್ವರದಿಂದ ಉಕಾರ ಉದಾತ್ತ, ಶೇಷಾನುದಾತ್ತ, ಹೀಗೆ ಮರುತ್ ಶಬ್ದ ಅನು ದಾತ್ತಾದಿ. ಇದು ಮತ್ತೊಂದು ವಿಧ.

**ಅನರ್ವಾಣಂ**—ಇದು ಶರ್ಧಃ ಎಂಬುವಕ್ಕೆ ವಿಶೇಷಣ, ನಪುಂಸಕ ಲಿಂಗಕ್ಕೆ ಬದಲಾಗಿ ಪುಲ್ಲಿಂಗ ಬಂದಿದೆ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂದು ಉತ್ತರಪದಕ್ಕೆ ಅಂತೋದಾತ್ತ ಬರುತ್ತೆ.

**ರಥೇಶುಭಮ್**—ಶುಭ ದೀಪ್ತೌ, ರಥೇ ಶೋಭತೇ ಇತಿ ರಥೇಶುಪ್, **ಕ್ವಿಪ್ ಚ** ಎಂದು ಕ್ವಿಪ್, **ತತ್ಪು-ರುಷೇ ಕೃತಿ ಬಹುಲಮ್** (ಪಾ. ಸೂ. ೬-೩-೧೪) ತತ್ಪುರುಷ ಸಮಾಸದಲ್ಲಿ ಕೃದಂತವಾದ ಉತ್ತರಪದವು ಪರ ವಲ್ಲಿದ್ದರೆ ಸಪ್ತಮಿಗೆ ಅಲುಕ್ ಬರುತ್ತೆ ಎಂದು ಸಪ್ತಮಿಗೆ ಅಲುಕ್, ಕೃದುತ್ತರಪದ ಪ್ರಕೃತಿಸ್ವರ.

**ಗಾಯತ**—ಕೈ ಗೈ ಶಬ್ದೇ **ತಿಙ್ಙತಿಙಃ** ಎಂದು ಅನುದಾತ್ತ. ॥೧॥



॥ ಸಂಹಿತಾಪಾಠಃ ॥

ಯೇ ಪೃಷತೀಭಿರ್ಋಷ್ಟಿಭಿಃ ಸಾಕಂ ವಾಶೀಭಿರಞ್ಜಿಭಿಃ ।
ಅಜಾಯಂತ ಸ್ವಭಾನವಃ ॥ ೨ ॥

॥ ಪದಪಾಠಃ ॥

ಯೇ । ಪೃಷತೀಭಿಃ । ಋಷ್ಟಿಽಭಿಃ । ಸಾಕಂ । ವಾಶೀಭಿಃ । ಅಞ್ಜಿಽಭಿಃ ।
ಅಜಾಯಂತ । ಸ್ವಽಭಾನವಃ ॥ ೨ ॥

॥ ಸಾಯಣಭಾಷ್ಯಂ ॥

**ಯೇ ಮರುತಃ ಪೃಷತ್ಯಾದಿಭಿಃ ಸಾಕಂ ಸ್ವಭಾನವಃ ಸ್ವಕೀಯದೀಪ್ತಿಯುಕ್ತಾ ಅಜಾಯಂತ ಇತಿ ಸಂಪನ್ನಾಃ । ಪೃಷತ್ಯೋ ಬಿಂದುಯುಕ್ತಾ ಮೃಗ್ಯೋ ಮರುದ್ವಾಹನಭೂತಾಃ । ಪೃಷತ್ಯೋ ಮರುತಾ- ಮಿತಿ ನಿಘಂಟಾವುಕ್ತತ್ವಾತ್ । ಋಷ್ಟಯ ಆಯುಧಾನಿ । ವಾಶ್ಯಃ ಶಬ್ದವಿಶೇಷಾಃ ಪರಕೀಯಸೇನಾಭೀತಿ- ಹೇತವಃ । ವಾಶೀ ವಾಣೀತಿ ವಾಙ್ನಾಮಸು ಪಠಿತತ್ವಾತ್ । ಅಂಜಯೋಽಲಂಕರಣಾನಿ । ತಾನ್ ಸ್ತುಮ ಇತಿ ಶೇಷಃ ॥ ಅಜಾಯಂತ । ಜನೀಪ್ರಾದುರ್ಭಾವೇ । ಶ್ಯನಿ ಜ್ಞಾಜನೋರ್ಜಾ । ಪಾ. ೭-೩-೭೯ । ಇತಿ ಜಾದೇಶಃ । ಅಡಾಗಮ ಉದಾತ್ತಃ । ಸ್ವಭಾನವಃ । ಸ್ವಕೀಯಾ ಭಾನವೋ ಯೇಷಾಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥**

॥ ಪ್ರತಿಪದಾರ್ಥ ॥

**ಸ್ವಭಾನವಃ**— ತಮ್ಮದೇ ಆದ ಪ್ರಭೆಯೊಡಗೂಡಿದವರಾದ । **ಯೇ**— ಯಾವ ಮರುತ್ತುಗಳು । **ಪೃಷ- ತೀಭಿಃ ಸಾಕಂ**— ತಮ್ಮ ವಾಹನಗಳೂ ಮತ್ತು ಬಿಂದು ರೂಪವುಳ್ಳ ಮಚ್ಚೆಗಳುಳ್ಳವೂ ಆದ ಜಿಂಕೆಗಳೊಡನೆಯೂ । **ಋಷ್ಟಿಭಿಃ (ಸಾಕಂ)**— ಹರಿತವಾದ ಆಯುಧಗಳೊಡನೆಯೂ । **ವಾಶೀಭಿಃ (ಸಾಕಂ)**— (ಶತ್ರು ಭಯಂಕರವಾದ) ಯುದ್ಧ ಘೋಷಗಳೊಡನೆಯೂ । **ಅಂಜಿಭಿಃ (ಸಾಕಂ)**— ಅಲಂಕಾರಗಳೊಡನೆಯೂ ಕೂಡಿಕೊಂಡು । **ಅಜಾಯಂತ**— ಉತ್ಪನ್ನರಾದರೋ (ಅಂತಹ ಮರುತ್ತಗಳ ಸಂಘಾತರೂಪವುಳ್ಳ ಶಕ್ತಿಯನ್ನು ಕುರಿತು ಸ್ತೋತ್ರಮಾಡಿ.)

॥ ಭಾವಾರ್ಥ ॥

ಮರುದ್ದೇವತೆಗಳು ತಮ್ಮ ಸ್ವಪ್ರಭೆಯಿಂದ ಬೆಳಗುತ್ತಾರೆ. ಶತ್ರುಗಳನ್ನು ನಾಶಮಾಡುವ ಆಯುಧಗಳನ್ನು ಧರಿಸಿ ಯುದ್ಧಘೋಷಣೆಗಳನ್ನು ಮಾಡುತ್ತಾ ಜಿಂಕೆಯನ್ನು ಕಟ್ಟಿ ನಾನಾವಿಧ ಅಲಂಕಾರಗಳಿಂದ ಸಿದ್ಧಪಡಿಸಿರುವ ತಮ್ಮ ರಥದಲ್ಲಿ ಕುಳಿತು ಸಂಚರಿಸುವ (ಮರುದ್ದೇವತೆಗಳ ಗುಣಗಾನ ಮಾಡಿರಿ)

English Translation

(Praise) the self-luminous Maruths, borne by spotted deer, with weapons, war-cries and decorations.

ವಿಶೇಷ ವಿಷಯಗಳು

**ಪೃಷತೀಭಿಃ**— ಯಾಸ್ಕರು ಕೆಲವು ದೇವತೆಗಳ ವಾಹನಾದಿಗಳ ವಿಷಯದಲ್ಲಿ—

**ಹರೀ ಇಂದ್ರಸ್ಯ । ರೋಹಿತಾಗ್ನೇಃ । ಹರಿತ ಆದಿತ್ಯಸ್ಯ । ರಾಸಭಾವಶ್ವಿನೋಃ ।**

**ಅಜಾಃ ಪೂಷ್ಣಃ । ಪೃಷತ್ಯೋ ಮರುತಾಂಅರುಣ್ಯೋ ಗಾವ ಉಷಸಃ। ಶ್ಯಾವಾಃ ಸವಿತುಃ। ವಿಶ್ವರೂಪಾ ಬೃಹಸ್ಪತೇಃ। ನಿಯುತೋ ವಾಯುಃ॥**

(ನಿ. ೨-೨-೮)

ಇಂದ್ರನ (ಎರಡು) ಕುದುರೆಗಳಿಗೆ **ಹರೀ** ಎಂದೂ, ಅಗ್ನಿಯ ವಾಹನಕ್ಕೆ ರೋಹಿತವೆಂದೂ, ಆದಿತ್ಯನ ವಾಹನಗಳಿಗೆ **ಹರಿತಃ** (ಹಸರುಬಣ್ಣದ ಕುದುರೆಗಳು-ಭದ್ರಾ ಅಶ್ವಾ ಹರಿತಸ್ಸೂರ್ಯಸ್ಯ. ಋ. ಸಂ. ೧-೧೧೫-೩)ಎಂದೂ, ಅಶ್ವಿನೀ ದೇವತೆಗಳ ವಾಹನಕ್ಕೆ **ರಾಸಭೌ** (ಎರಡು ಕತ್ತೆಗಳು) ಎಂದೂ, ಪೂಷನೆಂಬ ದೇವತೆಯ ವಾಹನಕ್ಕೆ **ಅಜಾಃ** (ಆಡುಗಳು) ಎಂದೂ, ಮರುದ್ದೇವತೆಗಳ ವಾಹನಗಳಿಗೆ **ಪೃಷತ್ಯಃ** ( ಚುಕ್ಕಿಗಳುಳ್ಳ ಜಿಂಕೆಗಳು, Spotted deer ) ಎಂದೂ, ಉಷೋದೇವತೆಯ ವಾಹನಗಳಿಗೆ **ಅರುಣ್ಯೋಗಾವಃ** (ಕೆಂಪುವರ್ಣದ ಗೋವುಗಳು) ಎಂದೂ, ಸವಿತೃ ದೇವತೆಯ ವಾಹನಗಳಿಗೆ **ಶ್ಯಾವಾಃ** (ಮಾಸಲುಕೆಂಪುಬಣ್ಣದ ಕುದುರೆಗಳು. brown or tawny horses ) ಬೃಹಸ್ಪತಿಯ ವಾಹನಗಳಿಗೆ **ವಿಶ್ವರೂಪಾಃ** ಎಂದೂ, ವಾಯುವಿನ ವಾಹನಕ್ಕೆ **ನಿಯುತವೆಂದೂ** ಹೆಸರು. ಆದುದರಿಂದ ಮರುದ್ದೇವತೆಗಳ ಅಶ್ವಗಳಾದ ಜಿಂಕೆಗಳನ್ನು **ಪೃಷತೀಃ** ಎಂಬ ಶಬ್ದದಿಂದ ಇಲ್ಲಿ ಕರೆಯಲಾಗಿದೆ.

**ಋಷ್ಟಿಭಿಃ— ಆಯುಧೈಃ ।** ಆಯುಧಗಳಿಂದ

**ವಾಶೀಭಿಃ—** ಶ್ಲೋಕಃ ಧಾರಾ ಮೊದಲಾದ ಐವತ್ತು ವಾಙ್ನಾಮಗಳ ಮಧ್ಯದಲ್ಲಿ ವಾಶೀ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೨-೨೩) ವಾಶೀಭಿಃ ಎಂದರೆ ಶಬ್ದಗಳಿಂದ. ಇಲ್ಲಿ ಭಯಂಕರವಾದ ಶಬ್ದ ಅಥವಾ ಶತ್ರುಗಳನ್ನು ಭಯಗೊಳಿಸುವ ಯದ್ಧಘೋಷಣೆಗಳಿಂದ ಎಂಬರ್ಥವನ್ನು ಭಾಷ್ಯಕಾರರು ಹೇಳಿರುವರು.

**ಅಂಜಿಭಿಃ—** ಅಲಂಕರಣಾದಿಗಳಿಂದ ಕೂಡಿರುವ

**ಸ್ವಭಾನವಃ—ಸ್ವಕೀಯಾ ಭಾನವೋ ಯೇಷಾಂ ತೇ ಸ್ವಭಾನವಃ**— ತಮ್ಮ ಸ್ವಂತ ಪ್ರಕಾಶದಿಂದ ಬೆಳಗುತ್ತಿರುವವರು.

ವ್ಯಾಕರಣಪ್ರಕ್ರಿಯಾ

**ಅಜಾಯನ್ತ—ಜನೀಪ್ರಾದುರ್ಭಾವೇ**—ದಿವಾದಿ, ಆತ್ಮನೇಪದಿ, ಲಙ್, ಝ, ಅನ್ತಾದೇಶ, **ದಿವಾದಿಭ್ಯಃ ಶ್ಯನ್** ಎಂದು ಶ್ಯನ್ ವಿಕರಣ, ಅಡಾಗಮ ಅಜನ್+ಯ+ಅನ್ತ, **ಜ್ಞಾಜನೋರ್ಜಾ** (ಪಾ. ಸೂ. ೭-೩-೭೯) ಶಿತ್ ಆದ ಪ್ರತ್ಯಯ ಪರದಲ್ಲಿದ್ದರೆ ಜ್ಞಾ-ಜನ್ ಧಾತುಗಳಿಗೆ ಜಾ ಆದೇಶ ಬರುತ್ತೆ ಎಂದು ಜನ್‌ಗೆ ಜಾ ಆದೇಶ ಅಜಾಯ+ಅನ್ತ, ಪರರೂಪ, ಅಟ್ ಆಗಮವು ಉದಾತ್ತ.

**ಸ್ವಭಾನವಃ**—ಸ್ವಕೀಯಾಃ ಭಾನವಃ ಯೇಷಾಂ ತೇ ಎಂದು ಬಹುವ್ರೀಹಿ ತನ್ನ ಸಂಬಂಧವಾದ **ಕಾಂತಿ** ಯುಳ್ಳವು ಎಂದರ್ಥ. ಪೂರ್ವಪದಪ್ರಕೃತಿಸ್ವರ. ॥೨॥

॥ ಸಂಹಿತಾಪಾಠಃ ॥

ಇ॒ಹೇವ॑ ಶೃಣ್ವ ಏಷಾಂ॒ ಕಶಾ॒ ಹಸ್ತೇ॑ಷು॒ ಯದ್ವದಾ॑ನ್ ।
ನಿ ಯಾಮಂ॑ಚಿ॒ತ್ರಮೃಂ॑ಜತೇ ॥ ೩ ॥

॥ ಪದಪಾಠಃ ॥

ಇ॒ಹಽಇ॑ವ । ಶೃ॒ಣ್ವೇ॒ । ಏ॒ಷಾ॒ಂ । ಕಶಾಃ॑ । ಹಸ್ತೇ॑ಷು । ಯತ್ । ವದಾ॑ನ್ ।
ನಿ । ಯಾಮ॑ನ್ । ಚಿ॒ತ್ರಂ । ಋ॒ಂಜ॒ತೇ॒ ॥ ೩ ॥

॥ ಸಾಯಣಭಾಷ್ಯಂ ॥

ಏಷಾಂ ಮರುತಾಂ ಹಸ್ತೇಷು ಸ್ಥಿತಾಃ ಕಶಾಃ ಸ್ವಸ್ವನಾಹನತಾಡನಹೇತವೋ ಯದ್ವದಾನ್ ಯದ್ವದಂತಿ ಯಂ ಧ್ವನಿಂ ಕುರ್ವಂತಿ ತಂ ಧ್ವನಿಮಿಹೇವಾತ್ರೇವ ಸ್ಥಿತ್ವಾ ಶೃಣ್ವೇ । ಶೃಣೋಮಿ । ಸ ಧ್ವನಿವಿಶೇಷೋ ಯಾಮನ್ ಸಂಗ್ರಾಮೇ ಚಿತ್ರಂ ವಿವಿಧಂ ಶೌರ್ಯಂ ನ್ಯೃಂಜತೇ । ನಿತರಾಮಲಂಕರೋತಿ । ಋಜಂತಿಃ । ಪ್ರಸಾಧನಕರ್ಮೇತಿ ಯಾಸ್ಕಃ । ನಿ. ೬–೨೧ ॥ ಶೃಣ್ವೇ । ಶ್ರು ಶ್ರವಣೇ । ವ್ಯತ್ಯಯೇನಾತ್ಮನೇಪದಂ । ಶ್ರುವಃ ಶೃ ಚೇತಿ ಶ್ನುಃ । ಹುಶ್ನುವೋಃ ಸಾರ್ವಧಾತುಕ ಇತಿ ಯಣಾದೇಶಃ । ವದಾನ್ । ವದ ವ್ಯಕ್ತಾಯಾಂ ವಾಚಿ । ಲೇಟ್ಯಾಡಾಗಮಃ । ಇತಶ್ಚ ಲೋಪ ಇತೀಕಾರಲೋಪೇ ಸಂಯೋಗಾಂತಲೋಪಃ । ಆಗಮಾನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ಯದ್ವೃತ್ತಯೋಗಾದನಿಘಾತಃ । ಯಾಮನ್ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ನ ಙಿಸಂಬುದ್ಧ್ಯೋಃ । ಪಾ. ೮–೨–೮ । ಇತಿ ನಲೋಪಪ್ರತಿಷೇಧಃ । ಋಂಜತೇ । ಋಜಿ ಭೃಜೀ ಭರ್ಜನೇ । ಅತ್ರ ಪ್ರಸಾಧನಾರ್ಥಃ ॥

॥ ಪ್ರತಿಪದಾರ್ಥ ॥

**ಏಷಾಂ**— ಈ ಮರುತ್ತುಗಳ । **ಹಸ್ತೇಷು** – ಕೈಗಳಲ್ಲಿ (ಇರತಕ್ಕ) । **ಕಶಾಃ**— (ಜಿಂಕೆಗಳನ್ನು ಹೊಡೆಯುವ) ಚಾವಟಿಗಳು । **ಯದ್ವದಾನ್**— ಯಾವ (ಸೀಳು) ಧ್ವನಿಯನ್ನು ಮಾಡುತ್ತವೆಯೋ (ಅದನ್ನು) । **ಇಹೇವ**— ಇಲ್ಲಿಂದಲೇ (ನಿಂತ ಜಾಗದಲ್ಲಿಯೇ) । **ಶೃಣ್ವೇ**— ಕೇಳುತ್ತೇನೆ. (ಆ ವಿಶೇಷರೂಪದ ಧ್ವನಿಯು)

**ಯಾಮನ್**—ಯುದ್ಧದಲ್ಲಿ । **ಚಿತ್ರಂ**—ವಿವಿಧವಾದ ಮತ್ತು ಆಶ್ಚರ್ಯಕರವಾದ ಶೌರ್ಯವನ್ನು । **ನಿ ಋಂಜತೇ**—ಸಂಪೂರ್ಣವಾಗಿ ಅಲಂಕರಿಸುತ್ತದೆ. (ಶೌರ್ಯಕ್ಕೆ ಉತ್ತೇಜನ ಕೊಡುತ್ತದೆ.)

॥ ಭಾವಾರ್ಥ ॥

ಈ ಮರುತ್ತುಗಳ ಕೈಯಲ್ಲಿರತಕ್ಕ ಚಾವಟಿಗಳ ಶಬ್ದವು ಎಷ್ಟು ದೂರದಲ್ಲಿದ್ದರೂ ಸ್ಪಷ್ಟವಾಗಿ ಕೇಳಿಸುತ್ತದೆ. ಅವರ ಚಾವಟಿಗಳ ಆ ಸೀಳು ಶಬ್ದವನ್ನು ನಾನು ನಿಂತಜಾಗದಲ್ಲಿ ಇಲ್ಲಿಂದಲೇ ಕೇಳುತ್ತೇನೆ. ಅದನ್ನು ಕೇಳುತ್ತಾ ಇದ್ದರೆ ಯುದ್ಧಕಾಲದಲ್ಲಿ ನಮ್ಮ ಶೌರ್ಯವು ವೃದ್ಧಿಗೊಂಡು ನಮ್ಮ ಶತ್ರುಮರ್ದನ ಕಾರ್ಯಕ್ಕೆ ಪ್ರೋತ್ಸಾಹವುಂಟಾಗುತ್ತದೆ

English Translation

I hear the cracking of the whips in their hands, wonderfully inspiring courage in the fight.

॥ ವಿಶೇಷ ವಿಷಯಗಳು ॥

**ಕಶಾ**—ಕುದುರೆಗಳನ್ನು ಹೊಡೆಯುವ ಚಾವಟಿ

**ಕಶಾ ಹಸ್ತೇಷು ಯದ್ವದಾನ್**—ಮರುದ್ದೇವತೆಗಳ ಕೈಯಲ್ಲಿರುವ ಚಾವಟಿಗಳ ಶಬ್ದವನ್ನು

**ಇಹೈವ ಶೃಣ್ವ ಏಷಾಂ**— ಆ ಮರುತ್ತುಗಳು ಚಾವಟಿಯಿಂದ ತಮ್ಮ ಅಶ್ವಗಳನ್ನು ಹೊಡೆಯುವ ಶಬ್ದವನು ಇಲ್ಲಿಯೇ ಕೇಳುವೆನು ಎಂದರೆ ನನಗೆ ಇಲ್ಲಿಯೇ ಕೇಳಿಸುವುದು.

**ಚಿತ್ರಂ**— ನಾನಾವಿಧವಾದ ಶೌರ್ಯಸ್ಥೈರ್ಯಾದಿಗಳನ್ನು

**ಋಜಂತೇ— ಋಜಿ ಭೃಜಿ ಭರ್ಜನೇ । ಋಜಂತಿಃ ಪ್ರಸಾಧನಕರ್ಮಾ** (ನಿ. ೬-೨೧.) ಅನುಗ್ರಹಿಸುವುದು, ಪ್ರೋತ್ಸಾಹಿಸುವುದು ಎಂದರೆ ಮರುದ್ದೇವತೆಗಳ ಚಾವಟಿ ಶಬ್ದವು ನನಗೆ ಶೌರ್ಯಸ್ಥೈರ್ಯಾದಿಗಳನ್ನು ಉಂಟಾಗುವಂತೆ ಪ್ರೋತ್ಸಾಹವನ್ನುಂಟುಮಾಡುವುದು

॥ ವ್ಯಾಕರಣಪ್ರಕ್ರಿಯಾ ।

**ಶೃಣ್ವೇ**—ಶ್ರು ಶ್ರವಣೇ ೧ನೇ ಗಣ. ಪರಸ್ಮೈಪದಕ್ಕೆ ಬದಲಾಗಿ ಆತ್ಮನೇಪದ ಬಂದಿದೆ. ಲಟ್, ಅದಕ್ಕೆ ಇಟ್ ಆದೇಶ, ಏತ್ವ-ಶ್ರುಏ, **ಶ್ರುವಃ ಶೃಚ** (ಪಾ. ಸೂ. ೩-೧-೭೪) ಶ್ರುಧಾತು ಮುಂದೆ ಶಪ್‌ಗೆ ಬದಲಾಗಿ ಶ್ನು ವಿಕರಣವೂ, ಧಾತುವಿಗೆ ಶೃ ಆದೇಶವೂ ಬರುತ್ತೆ ಎಂದು. ಅವು ಬಂದರೆ ಶೃ+ನು+ಏ, **ಹುಶ್ನುವೋಃ ಸಾರ್ವಧಾತುಕೇ** (ಪಾ. ಸೂ. ೬-೪-೮೭) ಅಜಾದಿ ಸಾರ್ವಧಾತುಕಪ್ರತ್ಯಯ ಪರದಲ್ಲಿದ್ದರೆ ಹುಧಾತು, ಶ್ನುಪ್ರತ್ಯಯಾಂತ ಇವುಗಳ ಅನೇಕಾಚ್ಕವಾದ ಅಂಗಕ್ಕೆ ಯಣ್ ಬರುತ್ತೆ ಎಂದು ಶ್ನುವಿನ ಉಕಾರಕ್ಕೆ ವಕಾರ.

**ವದಾನ್**—ವದ ವ್ಯಕ್ತಾಯಾಂ ವಾಚಿ. ಲೇಟ್, ಪ್ರಥಮಪುರುಷ ಬಹುವಚನ ಝಿ, **ಝೋಽನ್ತಃ** ಎಂದು ಝ್‌ಗೆ ಅನ್ತ್ ಆದೇಶ, ಶಪ್, ವದ್+ಅ+ಅನ್ತಿ, **ಲೇಟೋಽಡಾಟೌ** ಎಂದು ಆಟ್ ಆಗಮ. ಎರಡಾವರ್ತಿ ಸವರ್ಣ ದೀರ್ಘ, **ಇತಶ್ಚಲೋಪಃ—,** ಎಂದು ಇಕಾರಕ್ಕೆ ಲೋಪ. **ಸಂಯೋಗಾಂತಸ್ಯಲೋಪಃ** ಎಂದು ತಕಾರಕ್ಕೆ ಲೋಪ. ಶಪ್ ಪಿತ್ತ್ವಾದ್ದರಿಂದ ಅನುದಾತ್ತ. **ತಾಸ್ಯನುದಾತ್ತೇತ್—,** ಎಂದು ಲಸ್ಥಾನಿಕ ಸಾರ್ವಧಾತುಕವಾದ ಅನ್ತಿ ಎಂಬುದು ಅದುಪದೇಶದ ಮುಂದೆ ಇರುವುದರಿಂದ ಅನುದಾತ್ತ, ಧಾತುಸ್ವರ ನಿಲ್ಲುತ್ತೆ. **ಯದ್ವೃತ್ತಾನ್ನಿ-ತ್ಯಮ್** ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ.

**ಯಾಮನ್**—ಯಾಮನ್ ಶಬ್ದದ ಮುಂದೆ ಸಪ್ತಮೀ ಏಕವಚನ ಙಿ. **ಸುಪಾಂ ಸುಲುಕ್—,** ಎಂದು ಅದಕ್ಕೆ ಲುಕ್, **ನಙಿಸಂಬುದ್ಧ್ಯೋಃ** (ಪಾ. ಸೂ. ೮-೨-೮) ಙಿ ಅಥವಾ ಸುಬುದ್ಧಿ ಇವು ಪರದಲ್ಲಿದ್ದರೆ ನಕಾರಕ್ಕೆ ಲೋಪ ಬರುವುದಿಲ್ಲ ಎಂದು **ನಲೋಪಃ ಪ್ರಾತಿಪದಿಕಾನ್ತಸ್ಯ** ಎಂಬುದರಿಂದ ಪ್ರಾಪ್ತವಾಗುವ ನಕಾರಲೋಪಕ್ಕೆ ನಿಷೇಧ

**ಶುಮ್ಭತೇ**—ಶುಭಿ ಶುಂಭ ಭರ್ಜನೇ ಧಾತು. ಇಲ್ಲಿ ಪ್ರಸಾಧನ ಎಂದರೆ ಅಲಂಕಾರ ಎಂಬ ಅರ್ಥದಲ್ಲಿದೆ. ಈ ಅರ್ಥ **ಶುಮ್ಭತಿಃ ಪ್ರಸಾಧನಕರ್ಮಾ** (ನಿರು ೬-೨೧) ಎಂಬ ನಿರುಕ್ತದಿಂದ ಏರ್ಪಡುತ್ತೆ. ||೩||



॥ ಸಂಹಿತಾಪಾಠಃ ॥

ಪ್ರ ವಃ ಶರ್ಧಾಯ ಘೃಷ್ವಯೇ ತ್ವೇಷದ್ಯುಮ್ನಾಯ ಶುಷ್ಮಿಣೇ ।
ದೇವತ್ತಂ ಬ್ರಹ್ಮ ಗಾಯತ ॥ ೪ ॥

॥ ಪದಪಾಠಃ ॥

ಪ್ರ । ವಃ । ಶರ್ಧಾಯ । ಘೃಷ್ವಯೇ । ತ್ವೇಷಽದ್ಯುಮ್ನಾಯ । ಶುಷ್ಮಿಣೇ ।
ದೇವತ್ತಂ । ಬ್ರಹ್ಮ । ಗಾಯತ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಋತ್ವಿಜಃ ವೋ ಯುಷ್ಮಾಕಂ ಸಂಬಂಧಿನೇ ಶರ್ಧಾಯ ಪ್ರಸಹನಶೀಲಾಯ ಘೃಷ್ವಯೇ ಶತ್ರುಘರ್ಷಣಯುಕ್ತಾಯ ತ್ವೇಷದ್ಯುಮ್ನಾಯ ದೀಪ್ಯಮಾನಯಶಸೇ । ದ್ಯುಮ್ನಂ ದ್ಯೋತತೇರ್ಯಶೋ ವಾನ್ನಂ ವೇತಿ ಯಾಸ್ಕಃ । ನಿ. ೫-೫ । ಶುಷ್ಮಿಣೇ ಬಲವತೇ । ಶುಷ್ಮಂ ಶುಷ್ಣಮಿತಿ ಬಲನಾಮಸು ಪಾಠಾತ್ । ಏವಂಭೂತಾಯ ಮರುದ್ಗಣಾಯ ಬ್ರಹ್ಮ ಹವಿರ್ಲಕ್ಷಣಮನ್ನಮುದ್ದಿಶ್ಯ ಪ್ರ ಗಾಯತ । ಸ್ತುಧ್ವಂ । ಕೀದೃಶಂ ಬ್ರಹ್ಮ । ದೇವತ್ತಂ ದೇವೈರ್ದತ್ತಂ ದೇವತಾನುಗ್ರಹಾಲ್ಲಬ್ಧಂ ॥ ಶರ್ಧಾಯ । ಶೃಧು ಪ್ರಸಹನೇ । ಶರ್ಧಯತ್ಯಭಿಭವತೀತಿ ಶರ್ಧೋ ಬಲಂ । ಪಚಾದ್ಯಚ್ । ವೃಷಾದಿತ್ವಾದಾದ್ಯುದಾತ್ತತ್ವಂ । ಘೃಷ್ವಯೇ । ಘೃಷ ಸಂಘರ್ಷೇ । ಕೃವಿಘೃಷ್ವೀತ್ಯಾದಿನಾ । ಉ. ೪-೫೬ । ಕ್ವಿನ್ಪ್ರತ್ಯಯಾಂತೋ ನಿಪಾತಿತಃ । ತ್ವೇಷದ್ಯುಮ್ನಾಯ ತ್ವಿಷ ದೀಪ್ತೌ । ಪಚಾದ್ಯಚ್ । ತ್ವೇಷಂ ದೀಪ್ತಂ ದ್ಯುಮ್ನಂ ಯಸ್ಯ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ದೇವತ್ತಂ । ದೇವೈರ್ದತ್ತಂ । ಛಾಂದಸೋವರ್ಣಲೋಪಃ । ಉಕ್ತಂ ಚ । ದ್ವೌ ಚಾಪರೌ ವರ್ಣವಿಕಾರನಾಶೌ । ಕಾ. ೬-೩-೧೦೯ । ಇತಿ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ ॥**

॥ ಪ್ರತಿಪದಾರ್ಥ ॥

**ವಃ**—( ಎಲೈ ಋತ್ವಿಕ್ಕುಗಳೇ) ನಿಮಗೆ (ಆಪ್ತವಾಗಿರತಕ್ಕದ್ದೂ) । **ಶರ್ಧಾಯ**— ನಿರೋಧಕಸಾಮರ್ಥ್ಯವುಳ್ಳದ್ದೂ । **ಘೃಷ್ವಯೇ**— ಶತ್ರುಗಳನ್ನು ಮರ್ದನಮಾಡತಕ್ಕದ್ದೂ । **ತ್ವೇಷದ್ಯುಮ್ನಾಯ**—ಪ್ರಕಾಶಮಾನವಾದ ಕೀರ್ತಿಯುಳ್ಳದ್ದೂ । **ಶುಷ್ಮಿಣೇ**— ಬಲಶಾಲಿಯಾದದ್ದೂ ಆದ । **(ಮರುದ್ಗಣಾಯ)**—(ಮರುದ್ಗಣವನ್ನುದ್ದೇಶಿಸಿ) । **ದೇವತ್ತಂ**— ದೇವತೆಗಳು ಅನುಗ್ರಹಿಸಿ ಬೋಧಿಸಿದ । **ಬ್ರಹ್ಮ**— ಪ್ರಾರ್ಥನಾಸ್ತೋತ್ರವನ್ನು (ಹವಿಸ್ಸಿನರೂಪದ ಅನ್ನವನ್ನು ಕುರಿತು) । **ಪ್ರಗಾಯತ**— ಚೆನ್ನಾಗಿ ಹಾಡಿರಿ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಮರುದ್ಗಣವು ನಿಮಗೆ ಯಾವಾಗಲೂ ಆಪ್ತವಾಗಿರತಕ್ಕದು. ಅದರ ಶಕ್ತಿಯು ಅಪಾರವಾದದ್ದು. ಅದು ತನ್ನನ್ನೂ ತನ್ನ ಕಡೆಯ ಭಕ್ತರನ್ನೂ ರಕ್ಷಿಸಿ ಶತ್ರುವನ್ನು ತಡೆಗಟ್ಟಿ ನಿರೋಧಿಸಿ ಶತ್ರುಮರ್ದನ ಮಾಡತಕ್ಕದ್ದು. ಅದರ ಕೀರ್ತಿಯು ಬಹಳ ಪ್ರಕಾಶಮಾನವಾದದ್ದು. ಮರುದ್ದೇವತೆಗಳ ಶಕ್ತಿಯು ಅಪಾರವಾದುದು. ಆ ಶಕ್ತಿಯನ್ನು ಕುರಿತು ಸ್ತೋತ್ರ ಮಾಡಬೇಕಾದರೆ ದೇವತೆಗಳು ನಿಮಗೆ ಅನುಗ್ರಹಿಸಿ ಬೋಧಿಸಿರುವ ಪ್ರಾರ್ಥನಾಸ್ತೋತ್ರವನ್ನು ಚೆನ್ನಾಗಿ ಹಾಡಿರಿ. ನಿಮ್ಮ ಇಷ್ಟಾರ್ಥವಾದ ಹವಿಸ್ಸಿನ ರೂಪದ ಅನ್ನವು ದೊರೆಯುವುದು.

English Translation

Sing forth, O Kanwas, the god-given hymn in honour of your victorious, splendidly glorious, mighty hosts of Maruths.

॥ ವಿಶೇಷವಿಷಯಗಳು ॥

**ಶರ್ಧಾಯ—ಪ್ರಸಹನಶೀಲಾಯ ।** ಓಜಃ ಪಾಜಃ ಮೊದಲಾದ ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿ ಶರ್ಧಃ ಎಂಬ ಶಬ್ದವು ಪಠಿತವಾಗಿರುವುದರಿಂದ ಶರ್ಧಾಯ ಎಂದರೆ ಬಲಶಾಲಿಯಾದ, ಶಕ್ತಿಯುಳ್ಳ ಎಂದರ್ಥವು (ನಿ ೩-೯)

**ಘೃಷ್ವಾಯ—ಘೃಷ ಸಂಘರ್ಷೇ । ಶತ್ರುಘರ್ಷಣಯುಕ್ತಾಯ ।** ಶತ್ರುವಿನೊಡನೆ ಹೋರಾಡುವ, ಯುದ್ಧಮಾಡುವ.

**ತ್ವೇಷದ್ಯುಮ್ನಾಯ—**ತ್ವೇಷ ಎಂದರೆ ಪ್ರಕಾಶಮಾನವಾದ, ದ್ಯುಮ್ನ ಎಂದರೆ ಯಶಸ್ಸು (ನಿ ೫-೫) ತ್ವೇಷದ್ಯುಮ್ನಾಯ ಎಂದರೆ ಪ್ರಕಾಶಮಾನವಾದ ಎಲ್ಲರಿಂದಲೂ ಹೊಗಳಲ್ಪಡುವ ಯಶೋಯುಕ್ತರಾದ.

**ಶುಷ್ಮಿಣೇ—**ಓಜಃ ಪಾಜಃ ಮೊದಲಾದ ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿ ಶೂಷಂ ಎಂಬ ಶಬ್ದವು ಪಠಿತವಾಗಿರುವುದರಿಂದ ಶೂಷಂ ಎಂದರೆ ಬಲವು. ಶುಷ್ಮಿಣೇ ಎಂದರೆ ಬಲವುಳ್ಳ (ಮರುದ್ದೇವತೆಗಳನ್ನು ದ್ವೇಷಿಸಿ) ಎಂದರ್ಥವು.

**ದೇವತ್ತಂ—ದೇವೈರ್ದತ್ತಂ । ದೇವತಾನುಗ್ರಹಾಲ್ಲಬ್ಧಂ ।** ಇಲ್ಲಿ ಛಂದಸ್ಸಿನ ಅನುಕೂಲಕ್ಕಾಗಿ ದೈವೈರ್ದತ್ತಂ ಎಂಬ ಶಬ್ದದ ದಕಾರವು ಲೋಪವಾಗಿ ದೇವತ್ತಂ ಎಂಬ ರೂಪವಾಗಿರುವುದು, ದೇವತೆಗಳಿಂದ ಕೊಡಲ್ಪಟ್ಟ, ದೇವತೆಗಳ ಅನುಗ್ರಹದಿಂದ ಲಭಿಸಿದ ಎಂದರ್ಥವು.

**ಬ್ರಹ್ಮ**--ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಬ್ರಹ್ಮಶಬ್ದವು ಪಠಿತವಾಗಿರುವುದರಿಂದ (ನಿ. ೩-೯) ಇಲ್ಲಿ ಬ್ರಹ್ಮ ಎಂಬ ಶಬ್ದಕ್ಕೆ **ಹವಿರ್ಲಕ್ಷಣಮುದ್ದಿಶ್ಯ** ಹವಿಸ್ಸ್ವರೂಪವಾದ ಅನ್ನವೆಂದು ಅರ್ಥವು.

**ಬ್ರಹ್ಮ ಗಾಯತ—**ಅನ್ನವನ್ನು ಕೊಡಬೇಕೆಂದು ಪ್ರಾರ್ಥಿಸಿ ಮರುದ್ದೇವತೆಗಳ ಗುಣಗಾನಮಾಡಿರೆಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ಶರ್ಧಾಯ—**ಶೃಧು ಪ್ರಹಸನೇ, ಚುರಾದಿ, ಶರ್ಧಯತೀತಿ ಶರ್ಧಃ ಶತ್ರುಗಳನ್ನು ಪರಿಹಾಸ್ಯಮಾಡುವ ಬಲ ಎಂದರ್ಥ. ಪಚಾದಿಲಕ್ಷಣವಾದ ಅಚ್‌ಪ್ರತ್ಯಯ, **ವೃಷಾದೀನಾಂ ಚ** (ಪಾ. ಸೂ. ೬-೧-೧೦೩) ಎಂದು ಆದ್ಯುದಾತ್ತ.

**ಘೃಷ್ವಯೇ—**ಘೃಷು ಸಂಪರ್ಕೇ ೧ ನೇ ಗಣ, **ಕೃವಿ ಘೃಷ್ವಿ ಛವಿ ಸ್ಥವಿ ಕಿಕೀದಿವಿ** (ಉ.ಸೂ. ೪-೪೯೬) ಎಂಬುದರಿಂದ ಕ್ವಿನ್ ಪ್ರತ್ಯಯಾಂತವಾಗಿ ಘೃಷ್ವಿಶಬ್ದವು ನಿಪಾತಿತವಾಗಿದೆ.।

**ತ್ವೇಷದ್ಯುಮ್ನಾಯ**—ತ್ವಿಷ ದೀಪ್ತೌ, ಪಚಾದಿಲಕ್ಷಣವಾದ ಅಚ್ ಪ್ರತ್ಯಯ, ಲಘೂಪಧಗುಣ, ತ್ವೇಷಂ= ಪ್ರಕಾಶಮಾನವಾದ, ದ್ಯುಮ್ನಂ=ಯಶಸ್ಸು, ಯಸ್ಯ ಸಃ ಎಂದು ಬಹುವ್ರೀಹಿ. ಪೂರ್ವಪದಪ್ರಕೃತಿಸ್ವರ.

**ದೇವತ್ತಮ್**—ದೇವ್ಯೈಃ ದತ್ತಂ ಎಂದು ತತ್ಪುರುಷಸಮಾಸ. **ತೃತೀಯಾ ಕರ್ಮಣಿ** (ಪಾ. ಸೂ ೬-೨-೪೮) ಎಂದು ಪೂರ್ವಪದಪ್ರಕೃತಿಸ್ವರ. **ಪೃಷೋದರಾದೀನಿ ಯಥೋಪದಿಷ್ಟಂ** (ಪಾ. ಸೂ. ೬-೩-೧೦೯) ಎಂಬ ಸೂತ್ರದಲ್ಲಿ ಕಾಶಿಕಾಕಾರರು, **ದ್ವೌ ಚಾಪರೌ ವರ್ಣವಿಕಾರನಾಶೌ** ಎಂದಿರುವರು. ಅಂದರೆ ಒಂದು ವರ್ಣಕ್ಕೆ ಬದಲಾಗಿ ಮತ್ತೊಂದು ವರ್ಣ ಬರುವುದು, ಇರುವ ವರ್ಣಗಳಲ್ಲಿ ಒಂದಕ್ಕೆ ಲೋಪ ಬರುವುದು. ಇವೆರಡು ಕಾರ್ಯಗಳು ಬರುವುವು ಎಂದಿರುವರು, ಇದರಿಂದ ಇಲ್ಲಿ ದಕಾರಕ್ಕೆ ಲೋಪ. ॥೪॥

---

॥ ಸಂಹಿತಾಪಾಠಃ ॥

ಪ್ರ ಶಂಸಾ ಗೋಷ್ವಘ್ನ್ಯಂ ಕ್ರೀಳಂ ಯಚ್ಛರ್ಧೋ ಮಾರುತಂ ।
ಜಮ್ಭೇ ರಸಸ್ಯ ವಾವೃಧೇ ॥ ೫ ॥

॥ ಪದಪಾಠಃ ॥

ಪ್ರ । ಶಂಸ । ಗೋಷು । ಅಘ್ನ್ಯಂ । ಕ್ರೀಳಂ । ಯತ್ । ಶರ್ಧಃ । ಮಾರುತಂ ।
ಜಮ್ಭೇ । ರಸಸ್ಯ । ವವೃಧೇ ॥ ೫ ॥

॥ ಸಾಯಣಭಾಷ್ಯಂ ॥

ಗೋಷು ಮರುನ್ಮಾತೃಭೂತಪೃಶ್ನಿಪ್ರಭೃತಿಷು ಧೇನುಷ್ವವಸ್ಥಿತಂ । ಪೃಶ್ನಿಯ್ಯೈ ವೈ ಪಯಸೋ ಮರುತೋ ಜಾತಾಃ । ತೈ. ಸಂ. ೨-೨-೧೧-೪ । ಇತಿ ಶ್ರುತ್ಯಂತರಾತ್ । ಅಘ್ನ್ಯಮಹಂತವ್ಯಂ ಕ್ರೀಳಂ ವಿಹಾರೋಪೇತಂ ಮಾರುತಂ ಮರುತ್ಸಂಬಂಧಿ ಶರ್ಧಃ ಪ್ರಸಹನಶೀಲಂ ತೇಜೋ ಯದಸ್ತಿ ತತ್ಪ್ರ ಶಂಸ । ಹೇ ಋತ್ವಿಕ್ಸವಹಾಹ ಸ್ತುಹಿ । ರಸಸ್ಯ ಗೋಕ್ಷೀರರೂಪಸ್ಯ ಸಂಬಂಧಿ ತತ್ತೇಜೋ ಜಂಭೇ ಮುಖ ಉದರೇ ವಾ ವವೃಧೇ । ವೃದ್ಧಮಭೂತ್ ॥ ಶಂಸ । ಶಂಸು ಸ್ತುತೌ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ

ದೀರ್ಘಃ । ಗೋಷು । ಸಾವೇಕಾಚ ಇತಿ ಪ್ರಾಪ್ತಸ್ಯ ವಿಭಕ್ತ್ಯುದಾತ್ತಸ್ಯ ನ ಗೋಶ್ವನ್ಸಾವವರ್ಣೇತಿ ಪ್ರತಿಷೇಧಃ । ಅಘ್ನ್ಯಂ । ಘ್ನೋ ಹನನಂ । ಘಞರ್ಥೇ ಕವಿಧಾನಂ । ಪಾ. ೩-೩-೫೮-೪ । ಇತಿ ಕಃ । ಗಮಹನೇತ್ಯಾದಿನೋಪಧಾಲೋಪಃ । ಹೋ ಹಂತೇಃ । ಪಾ. ೭-೩-೫೪ । ಇತಿ ಘತ್ವಂ । ತದರ್ಹತೀತಿ ಘ್ನ್ಯಂ । ಛಂದಸಿ ಚೇತಿ ಯಃ । ನ ಘ್ನ್ಯಮಘ್ನ್ಯಂ । ಅವ್ಯಯೆಪೂರ್ವಪದಪ್ರಕೃತಿಸ್ವರತ್ವಂ । ಕ್ರೀಳಾದಯೋ ಗತಾಃ । ಜಂಭೇ । ಜಭಿ ನಾಶನೇ । ಜಂಭ್ಯತೇ ಭಕ್ಷ್ಯತೇಽನೇನೇತಿ ಜಂಭಮಾಸ್ಯಂ । ಕರಣೇ ಘಞ್ । ವವೃಧೇ । ವೃಧು ವೃದ್ಧೌ । ಲಿಟ್ । ಛಾಂದಸಂ ಸಂಹಿತಾಯಾಮಭ್ಯಾಸದೀರ್ಘತ್ವಂ ॥೧೨॥

ಪ್ರತಿಪದಾರ್ಥ

**ಗೋಷು**—(ಎಲ್ಲೆ ಋತ್ವಿಕ್ಕುಗಳೇ ಮರುದ್ದೇವತೆಗಳಿಗೆ ಮಾತೃಭೂತಗಳಾದ ಪೃಶ್ನಿಯೇ ಮೊದಲಾದ) ಧೇನುಗಳಲ್ಲಿರುವ । **ಅಘ್ನ್ಯಂ**—ಅವಿನಾಶ್ಯವೂ । **ಕ್ರೀಳಂ**—ವಿಲಾಸಯುಕ್ತವೂ । **ಮಾರುತಂ**—ಮರುತ್ತುಗಳಿಗೆ ಸಂಬಂಧಪಟ್ಟಿದ್ದೂ ಆದ । **ಶರ್ಧಃ**—ಶತ್ರುನಿರೋಧಕ ಸಾಮರ್ಥ್ಯವುಳ್ಳ ತೇಜಸ್ಸು । **ಯತ್** (**ಅಸ್ತಿ**)—ಯಾವುದಿದೆಯೋ (ಅದನ್ನು ಕುರಿತು) । **ಪ್ರಶಂಸ**—ಪ್ರಶಂಸಿಸಿ ಸ್ತೋತ್ರಮಾಡಿ । **ರಸಸ್ಯ**—ಹಸುಗಳ ಹಾಲಿನಿಂದ ಪೋಷಿತವಾದ (ಆ ತೇಜಸ್ಸು) । **ಜಂಭೇ**—ಮುಖದಲ್ಲಿ । **ವವೃಧೇ**—ವೃದ್ಧಿಹೊಂದಿತು.

॥ ಭಾವಾರ್ಥ ॥

ಮರುದ್ದೇವತೆಗಳ ಮುಖದಲ್ಲಿ ಒಂದು ಅಸಾಧಾರಣವಾದ ತೇಜಸ್ಸಿದೆ. ಆ ತೇಜಸ್ಸು ಮರುದ್ದೇವತೆಗಳ ಮಾತೃಗಳಾದ ಪೃಶ್ನಿಯೇ ಮೊದಲಾದ ದಿವ್ಯಧೇನುಗಳ ಕ್ಷೀರದಿಂದ ಪೋಷಿತವಾದುದು. ಆದುದರಿಂದಲೇ ಅದಕ್ಕೆ ದಿವ್ಯಕಾಂತಿಯಿದೆ. ಅದನ್ನು ಶತ್ರುಗಳಿಂದ ನಾಶಪಡಿಸಲು ಸಾಧ್ಯವಿಲ್ಲ. ಅದು ಅವಿನಾಶ್ಯ. ಶತ್ರುನಿರೋಧಕ ಸಾಮರ್ಥ್ಯವುಳ್ಳದ್ದು. ಅದು ಯಾವಾಗಲೂ ಕ್ರೀಡೆಯಲ್ಲಿ ಆಸಕ್ತವಾಗಿ ವಿಲಾಸಯುಕ್ತವಾದುದರಿಂದ ಮರುದ್ದೇವತೆಗಳು ಆ ಆನಂದವನ್ನನುಭವಿಸಿ ತಮ್ಮ ಭಕ್ತರಿಗೂ ಆ ತೇಜಸ್ಸಿನ ಸಹಾಯದಿಂದ ಆನಂದವನ್ನು ಕೊಡುತ್ತಾರೆ. ಆ ದಿವ್ಯತೇಜಸ್ಸನ್ನು ಕುರಿತು ಪ್ರಶಂಸಿಸಿ ಸ್ತೋತ್ರಮಾಡಿರಿ.

English Translation

Praise the sportive and resistless might of the Maruts who were born amongst cows and whose strength has been nourished by milk.

ವಿಶೇಷವಿಷಯಗಳು

**ಗೋಷು— ಮರುನ್ಮಾತೃಭೂತಪೃಶ್ನಿಪ್ರಭೃತಿಷು ।** ಮರುದ್ದೇವತೆಗಳ ಮಾತೃಗಳೆಂದು ಹೇಳಲ್ಪಡುವ ಪೃಶ್ನಿ ಎಂಬ ಧೇನು (ಗೋವುಗಳು) ಗಳಲ್ಲಿ ಇರುವ ಎಂದರ್ಥವು. **ಪೃಶ್ನಿಯೈ ವೈ ಪಯಸೋ ಮರುತೋ-**

**ಜಾತಾಃ** (ತೈ. ಸಂ. ೨-೨-೧೧-೪) ಎಂಬ ತೈತ್ತಿರೀಯಶ್ರುತಿವ್ಯಾಖ್ಯಾನುಸಾರ ಮರುದ್ದೇವತೆಗಳು ಪೃಶ್ನಿ ಎಂಬ ಸ್ವರ್ಗದ ಧೇನುವಿನ ಹಾಲಿನಿಂದ ಉತ್ಪನ್ನರಾದವರು ಎಂದು ಪ್ರಸಿದ್ಧಿಯು.

**ಶಂಸ**—ಛಂದಸ್ಸಿನ ಅನುಕೂಲಕ್ಕಾಗಿ ಸಕಾರವು ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ಅಘ್ನ್ಯಂ— ಅಹಂತವ್ಯಂ ।** ಸಂಹರಿಸಲ್ಪಡಲು ಸಾಧ್ಯರಲ್ಲದ, ಅಭೇದ್ಯರಾದ ಇತ್ಯಾದಿ.

**ಜಂಭೇ— ಮುಖೇ ಉದರೇ ವಾ ।** ಮುಖದಲ್ಲಿ ಅಥವಾ ಉದರದಲ್ಲಿ

**ರಹಸ್ಯ— ಗೋಕ್ಷೀರರೂಪಸ್ಯ ಸಂಬಂಧಿ ।** ಪೃಶ್ನಿ ಎಂಬ ಗೋವಿನ ಹಾಲಿನ ಸಂಬಂಧವಾದ (ತೇಜಸ್ಸು)

॥ ವ್ಯಾಕರಣಪ್ರಕ್ರಿಯಾ ॥

**ಶಂಸಾ**—ಶಂಸು ಸ್ತುತೌ, **ಲೋಣ್ಮಧ್ಯಮೈಕವಚನ, ದ್ವ್ಯಚೋಽತಸ್ತಿಙಃ** ಎಂದು ಸಂಹಿತಾಕಾಲದಲ್ಲಿ ದೀರ್ಘಬರುತ್ತೆ.

**ಗೋಷು**—ಇಲ್ಲಿ ವಿಭಕ್ತಿಯು ಗೋಶಬ್ದದ ಮುಂದೆ ಇದೆ. **ಸಾವೇಕಾಚಃ—,** ಎಂದು ಪ್ರಾಪ್ತವಾಗುವ ವಿಭಕ್ತ್ಯುದಾತ್ತಕ್ಕೆ **ನಗೋಶ್ವನ್—,** ಎಂದು ನಿಷೇಧ ಬರುತ್ತೆ.

**ಅಘ್ನ್ಯಮ್**—ಹನ ಹಿಂಸಾಗತ್ಯೋಃ, **ಘಞರ್ಥೇಕವಿಧಾನಂ—,** (ಪಾ. ಸೂ. ೩-೩-೫೮-೪) ಎಂದು ಕ ಪ್ರತ್ಯಯು. **ಗಮಹನ ಜನ ಖನ ಘಸಾಂ ಲೋಪಃ ಕ್ಙಿತ್ಯನಙಿ** ಎಂದು ಧಾತುವಿನ ಅಕಾರಕ್ಕೆ ಲೋಪ. **ಹೋಹನ್ತೇ ರ್ಞ್ಣಿನ್ನೇಷು** (ಪಾ. ಸೂ. ೭-೩-೫೪) ಎಂದು ಹ್‌ಗೆ ಘ್ ಆದೇಶ. ಘ್ನ ಎಂದರೆ ಕೊಲ್ಲುವಿಕೆ ಎಂದರ್ಥ, ಘ್ನಂ ಅರ್ಹತಿ ಎಂದು ವಿಗ್ರಹ. **ಛಂದಸಿ ಚ** (ಪಾ. ಸೂ. ೫-೧-೬೭) ಪ್ರಾತಿಪದಿಕಪ್ರಕೃತಿಕ ದ್ವಿತೀಯಾಂತದ ಮುಂದೆ ಅರ್ಹತಿ ಎಂಬ ಅರ್ಥದಲ್ಲಿ ಯತ್ ಬರುತ್ತೆ ಎಂದು ಯತ್‌ಪ್ರತ್ಯಯು. ನ ಘ್ನ್ಯಃ=ಅಘ್ನ್ಯಃ ಎಂದು ನಞ್‌ತತ್ಪುರುಷ, **ತತ್ಪುರುಷೇ ತುಲ್ಯಾರ್ಥ—,** ಎಂದು ಅವ್ಯಯ ಪೂರ್ವಪದಕ್ಕೆ ಪ್ರಕೃತಿಸ್ವರ, **ಅವ್ಯಯೇ ನಞ್‌ಕು ನಿಪಾತಾನಾಂ** ಎಂಬ ಪರಿಗಣನವನ್ನು ಮರೆಯಬಾರದು.

**ಕ್ರೀಳಮ್, ಶರ್ಧಃ, ಮಾರುತಂ,** ಇವಕ್ಕೆ ಇದೇ ಸೂಕ್ತ ೧ ನೇ ಮಂತ್ರದಲ್ಲಿ ವಿವರಣೆ ಇದೆ.

**ಜಮ್ಭೇ**—ಜಭಿನಾಶನೇ ಚುರಾದಿ ಜಭ್ಯತೇ=ನಾಶ್ಯತೇ ಅನೇನ ಇತಿ ಜಮ್ಭಮ್, ತಿನ್ನಲ್ಪಟ್ಟ ಪದಾರ್ಥಗಳನ್ನು ಬಾಯಿ ನಾಶಮಾಡುವುದು. ಆದ್ದರಿಂದ ಬಾಯಿ ನಾಶಕ್ಕೆ ಎಂದರೆ ಭಕ್ಷಣಕ್ಕೆ ಸಾಧನವಾಗುತ್ತೆ ಜಮ್ಭ ಎಂದರೆ ಬಾಯಿ ಎಂದರ್ಥ, ಕರಣಾರ್ಥದಲ್ಲಿ ಘಞ್.

**ವಾವೃಧೇ**—ವೃಧು ವೃದ್ಧೌ ಲಿಟ್, ದ್ವಿತ್ವ, **ಲಿಟಸ್ತಝಯೋಃ—,** ಎಂದು ತಗೆ ಏಶ್, **ಉರತ್** ಎಂದು ಅಭ್ಯಾಸದ ಋಕಾರಕ್ಕೆ ಅತ್ವರಪರತ್ವ, **ಹಲಾದಿಃಶೇಷಃ** ಎಂದು ರೇಫ ಧಕಾರಂಗಳಿಗೆ ಲೋಪ, ವವೃಧ್+ಏ **ಕ್ಙಿತಿಚ** ಎಂದು ಗುಣಕ್ಕೆ ನಿಷೇಧ, ಅಭ್ಯಾಸಕ್ಕೆ ಛಾಂದಸವಾಗಿ ದೀರ್ಘ ಬರುತ್ತೆ. ॥೫॥

॥ ಸಂಹಿತಾಪಾಠಃ ॥

ಕೋ ವೋ ವರ್ಷಿಷ್ಠ ಆ ನರೋ ದಿವಶ್ಚ ಗ್ಮಶ್ಚ ಧೂತಯಃ।
ಯತ್ಸೀಮನ್ತಂ ನ ಧೂನುಥ ॥ ೬ ॥

॥ ಪದಪಾಠಃ ॥

ಕಃ । ವಃ । ವರ್ಷಿಷ್ಠಃ । ಆ । ನರಃ । ದಿವಃ । ಚ । ಗ್ಮಃ । ಚ । ಧೂತಯಃ ।
ಯತ್ । ಸೀಂ । ಅನ್ತಂ । ನ । ಧೂನುಥ ॥ ೬ ॥

ಸಾಯಣಭಾಷ್ಯಂ

ದಿವಶ್ಚ ದ್ಯುಲೋಕಸ್ಯಾಪಿ ಗ್ಮಶ್ಚ ಭೂಲೋಕಸ್ಯಾಪಿ । ಗ್ಮೇತಿ ಭೂನಾಮಸು ಪಠಿತತ್ವಾತ್ । ಧೂತಯಃ ಕಂಪನಕಾರಿಣೋ(ಽ)ಹೇ ನರೋ ನೇತಾರೋ ಮರುತೋ ವೋ ಯುಷ್ಮಾಕಂ ಮಧ್ಯ ಆ ಸಮಂತಾದ್ವರ್ಷಿಷ್ಠೋ ವೃದ್ಧತಮಃ ಕಃ । ಯದ್ಯಸ್ಮಾತ್ಕಾರಣಾತ್ಸೀಂ ಸರ್ವತೋಽಂತಂ ನ ವೃಕ್ಷಾಗ್ರಮಿವ ಧೂನುಥ ಚಾಲಯಥ । ತಸ್ಮಾತ್ಕಾರಣಾತ್ಕಂಪಯಿತೄಣಾಂ ಯುಷ್ಮಾಕಂ ಮಧ್ಯೇ ಕಃ ಪ್ರಬಲ ಇತಿ ಪ್ರಶ್ನಃ ॥ ವರ್ಷಿಷ್ಠಃ । ವೃದ್ಧಶಬ್ದಾದಿಷ್ಠನಿ ಪ್ರಿಯಸ್ಥಿರೇತ್ಯಾದಿನಾ ವರ್ಷಾದೇಶಃ । ನಿತ್ತ್ವಾದಾದ್ಯುದಾತ್ತಃ । ಗ್ಮಃ । ಗ್ಮಾಶಬ್ದಾತ್ ಷಷ್ಠ್ಯೇಕವಚನ ಆತೋ ಧಾತೋರಿತ್ಯತ್ರ ಆತ ಇತಿ ಯೋಗವಿಭಾಗಃ ಕರ್ತವ್ಯಃ । ಕಾ. ೬-೪-೧೪೦ । ಇತ್ಯುಕ್ತತ್ವಾದಾಕಾರಲೋಪಃ । ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ । ಧೂತಯಃ । ಧೂಞ್ ಕಂಪನೇ । ಕ್ತಿಚ್ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ । ತಿತುತ್ರೇತ್ಯಾದಿನೇಟ್ಪ್ರತಿಷೇಧಃ । ಆಮಂತ್ರಿತಸ್ಯ ಚೇತಿ ಸರ್ವಾನುದಾತ್ತತ್ವಂ । ಧೂನುಥ । ಸ್ವಾದಿಭ್ಯಃ ಶ್ನುಃ । ಸತಿ ಶಿಷ್ಟಸ್ವರಬಲೀಯಸ್ತ್ವಮನ್ಯತ್ರ ವಿಕರಣೇಭ್ಯ ಇತಿ ವಚನಾತ್ಸತಿ ಶಿಷ್ಟೋಽಪಿ ವಿಕರಣಸ್ವರೋ ಲಸಾರ್ವಧಾತುಕಸ್ವರಂ ನ ಬಾಧತೇ । ಅತಸ್ತಿಙ ಏವ ಸ್ವರಃ । ಯದ್ವೃತ್ತಯೋಗಾದನಿಘಾತಃ ॥

॥ ಪ್ರತಿಪದಾರ್ಥ ॥

**ದಿವಶ್ಚ**— ದ್ಯುಲೋಕಕ್ಕೂ । **ಗ್ಮಶ್ಚ**— ಭೂಲೋಕಕ್ಕೂ । **ಧೂತಯಃ**— ಕಂಪನಕಾರಿಗಳಾದ, ಎರಡು ಲೋಕಗಳನ್ನೂ ಅಲ್ಲಾಡಿಸತಕ್ಕ । **ನರಃ**— ಎಲೈ ಧೀರರಾದ ಮರುತ್ತುಗಳೇ । **ಯತ್**— ಯಾವ ಕಾರಣದಿಂದ । **ಸೀಂ**— ಸುತ್ತಲೂ (ಎರಡು ಲೋಕಗಳನ್ನೂ) । **ಅಂತಂ ನ**—(ವೃಕ್ಷದ) ತುದಿಯನ್ನು (ಸುಲಭ

ವಾಗಿ) ಅಲ್ಲಾಡಿಸುವಂತೆ । **ಧೂನುಥ**— ಅಲ್ಲಾಡಿಸುತ್ತೀರೋ (ಆ ಕಾರಣದಿಂದ ; ಆ ಬಲವುಳ್ಳೋಣವರಿಂದ) । **ವಃ**— ನಿಮ್ಮ ಮಧ್ಯೆ । **ಆ**— ಅಂತಹ । **ವರ್ಷಿಷ್ಠಃ**— ವೃದ್ಧತಮನು (ಅತ್ಯಂತ ಶಕ್ತಿಯುಳ್ಳವನು) । **ಕಃ**— ಯಾರು ?

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ನಿಮ್ಮ ಪರಾಕ್ರಮವು ಅತಿಮಾನುಷವಾದದ್ದು. ವೃಕ್ಷದ ತುದಿಯನ್ನು ಎಷ್ಟು ಸುಲಭವಾಗಿ ಅಲ್ಲಾಡಿಸಬಹುದೋ ಅಷ್ಟೇ ಸುಲಭವಾಗಿಯೂ ಶ್ರಮವಿಲ್ಲದೆಯೂ ನೀವು ದ್ಯುಲೋಕ ಮತ್ತು ಭೂಲೋಕ ಇವೆರಡನ್ನೂ ಕಂಪಿಸುವಂತೆ ಮಾಡುತ್ತೀರಿ. ನೀವೆಲ್ಲರೂ ಅಸಾಧಾರಣವಾದ ಶಕ್ತಿಯಿಂದ ಕೂಡಿದ್ದರೂ ನಿಮ್ಮ ನಾಯಕನ ಬಲವು ಎಲ್ಲರ ಬಲಕ್ಕಿಂತಲೂ ಇನ್ನೂ ಅಧಿಕವಾಗಿರಬೇಕು. ನಿಮ್ಮ ಮಧ್ಯೆ ನಿಮಗೆ ಉತ್ಸಾಹ ಕೊಡತಕ್ಕ ಅಧಿಕ ಪರಾಕ್ರಮವುಳ್ಳ ಆ ನಾಯಕನು ಯಾರು ?

English Translation

Agitators of heaven and earth, who is chief leader among you who shake all around like the top of tree ?

ವಿಶೇಷ ವಿಷಯಗಳು

**ವರ್ಷಿಷ್ಠಃ—ವೃದ್ಧತಮಃ ।** ಅತ್ಯಂತ ಹೆಚ್ಚಾಗಿ ಬಲವುಳ್ಳವನು, ಎಲ್ಲರಿಗಿಂತಲೂ ಹೆಚ್ಚು ಸಾಮರ್ಥ್ಯವುಳ್ಳವನು, ಮುಖ್ಯ ನಾಯಕನು, ಪ್ರಬಲನಾದವನು.

**ಗ್ಮಃ**— ಭೂಮಿಯು । ಗೌಃ ಗ್ಮಾ ಮೊದಲಾದ ಇಪ್ಪತ್ತೊಂದು ಪೃಥಿವೀನಾಮಗಳ ಮಧ್ಯದಲ್ಲಿ ಗ್ಮಾ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೧-೧.) ಗ್ಮಃ ಎಂದರೆ ಭೂಮಿಯು ಎಂದರ್ಥವು. ಇದು ಗ್ಮಾಶಬ್ದದ ಷಷ್ಠೀ ಏಕವಚನವು

**ಧೂತಯಃ, ಧೂನುಥ— ।ಧೂಞ್ ಕಂಪನೇ** ವೇಗವಾಗಿ ಬೀಸುವ ಗಾಳಿಯು ವೃಕ್ಷಾದಿಗಳನ್ನು ಎಷ್ಟು ಸುಲಭವಾಗಿ ಅಲ್ಲಾಡಿಸುವುದೋ ಅಷ್ಟೇ ಸುಲಭವಾಗಿ ಈ ಮರುದ್ದೇವತೆಗಳು ಸ್ವರ್ಗಲೋಕವನ್ನೂ ಭೂಲೋಕವನ್ನೂ ಅಲ್ಲಾಡಿಸಲು ಸಮರ್ಥರೆಂದು ಮುಖ್ಯಾಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ವರ್ಷಿಷ್ಠ**—ಅತಿಶಯಾರ್ಥದಲ್ಲಿ ವೃದ್ಧಶಬ್ದದ ಮುಂದೆ **ಅತಿಶಾಯನೇ—,** ಎಂದು ಇಷ್ಠನ್, ಪ್ರಿಯಸ್ಥಿರಸ್ಫಿರೋರು ಬಹುಲ ಗುರುವೃದ್ಧ—, (ಪಾ ಸೂ. ೬-೪-೧೫೭) ಎಂದು ವೃದ್ಧಶಬ್ದಕ್ಕೆ ವರ್ಷ ಎಂಬ ಆದೇಶ. ಇಷ್ಠನ್ ಪ್ರತ್ಯಯ ನಿತ್, ಆದ್ದರಿಂದ ಪ್ರತ್ಯಯಾಂತವು ಆದ್ಯುದಾತ್ತ.

**ಗ್ಮಃ**—ಗ್ಮಾ ಶಬ್ದದ ಮುಂದೆ ಷಷ್ಠೀ ಏಕವಚನ ಙಸ್, ಗ್ಮಾ+ಅಸ್, **ಆತೋ ಧಾತೋಃ** (ಪಾ. ಸೂ. ೬-೪-೧೪೦) ಇಲ್ಲಿ **ಆತಃ** ಎಂದು ಒಂದು ಸೂತ್ರವನ್ನಾಗಿ ವಿಭಾಗಮಾಡಿರುವರು. ಭಸಂಜ್ಞಕಾಂಗಾವಯವವಾದ ಆಕಾರಕ್ಕೆ ಲೋಪ ಬರುತ್ತೆ ಎಂದು ಇದರ ಅರ್ಥ. ಇದರಿಂದ ಗ್ಮಾ ಶಬ್ದದ ಆಕಾರಕ್ಕೆ ಲೋಪ. **ಅನುದಾತ್ತಸ್ಯಚ ಯತ್ರೋದಾತ್ತಲೋಪಃ** ಎಂಬ ಉದಾತ್ತ ನಿವೃತ್ತಿಸ್ವರದಿಂದ ವಿಭಕ್ತಿ ಉದಾತ್ತ.

**ಧೂತಯಃ**—ಧೂಞ್ ಕಂಪನೇ ಸ್ವಾದಿ, **ಕ್ತಿಚ್ ಕ್ತೌಚಸಂಜ್ಞಾಯಾಂ** ಎಂದು ಕ್ತಿಚ್, **ತಿತುತ್ರ**—ಎಂದು ತಿಗೆ ಇಟ್ ಆಗಮ ಬರುವುದಿಲ್ಲ. **ಆಮಂತ್ರಿತಸ್ಯಚ** ಎಂಬ ಎಂಟನೇ ಅಧ್ಯಾಯದ ಸೂತ್ರದಿಂದ ಸರ್ವಾನುದಾತ್ತ.

**ಧೂನುಥ**—ಧೂಞ್ ಧಾತು ಲಟ್ ಮಧ್ಯಮ ಬಹುವಚನ ಥ. **ಸ್ವಾದಿಭ್ಯಃ ಶ್ನುಃ** (ಪಾ. ಸೂ. ೩-೧-೭೩) ಎಂದು ಶ್ನುವಿಕರಣ, ಧೂ+ನು+ಥ, ಶ್ನುಪ್ರತ್ಯಯ ಕೊನೆಯಲ್ಲಿ ಬರುವುದರಿಂದ ಅದಕ್ಕೆ ಬರುವ ಸ್ವರವು ಸತಿಶಿಷ್ಟ **ಸತಿಶಿಷ್ಟಸ್ವರಬಲೀ ಯಸ್ತ್ವಮನ್ಯತ್ರ ವಿಕರಣೇಭ್ಯಃ** ವಿಕರಣವನ್ನುಳಿದು ಸತಿಶಿಷ್ಟ ಸ್ವರವು ಪ್ರಬಲವಾಗುವುದು ಎಂದಿರುವುದರಿಂದ ವಿಕರಣಕ್ಕೆ ಬರುವ ಸ್ವರ ಸತಿಶಿಷ್ಟವಾದರೂ ಪ್ರಬಲವಲ್ಲ. ತಿಙ್‌ಪ್ರತ್ಯಯದ ಸ್ವರವೇ ಬರುತ್ತೆ. **ಯತ್ಸೀಮಂತಂ** ಎಂದು ಯದ್ವೃತ್ತದ ಯೋಗ ಇದೆ. **ಯದ್ವೃತ್ತಾನ್ನಿತ್ಯಂ** ಎಂದು ಸರ್ವಾನುದಾತ್ತಕ್ಕೆ ನಿಷೇಧ ॥೬॥



॥ ಸಂಹಿತಾಪಾಠಃ ॥

ನಿ ವೋ ಯಾಮಾಯ ಮಾನುಷೋ ದಧ್ರ ಉಗ್ರಾಯ ಮನ್ಯವೇ ।
ಜಿಹೀತ ಪರ್ವತೋ ಗಿರಿಃ ॥ ೭ ॥

॥ ಪದಪಾಠಃ ॥

ನಿ । ವಃ । ಯಾಮಾಯ । ಮಾನುಷಃ । ದಧ್ರೇ । ಉಗ್ರಾಯ । ಮನ್ಯವೇ ।
ಜಿಹೀತ । ಪರ್ವತಃ । ಗಿರಿಃ ॥ ೭ ॥

॥ ಸಾಯಣಭಾಷ್ಯಂ ॥

**ಹೇ ಮರುತೋ ವೋ ಯುಷ್ಮಾಕಂ ಯಾಮಾಯ ಗಮನಾರ್ಥಂ ಮಾನುಷೋ ಗೃಹಸ್ವಾಮೀ ಕಶ್ಚಿನ್ಮನುಜೋ ನಿ ದಧ್ರೇ । ಗೃಹದಾರ್ಢ್ಯಾರ್ಥಂ ದೃಢಂ ಸ್ತಂಭಂ ನಿಕ್ಷಿಪ್ತವಾನ್ । ಭವದೀಯಗಮನೇನ ಚಾಲಿತಂ ಗೃಹಂ ಪತಿಷ್ಯತೀತಿ ಭೀತ್ಯಾ ತನ್ನಿವಾರಣಾಯ ದೃಢಸ್ತಂಭಪ್ರಕ್ಷೇಪಃ । ಕೀದೃಶಾಯ ಯಾಮಾಯ । ಉಗ್ರಾಯ ತೀವ್ರಾಯ ಮನ್ಯವೇ ಚಾಲನಾರ್ಥಮಭಿಮನ್ಯಮಾನಾಯ । ಯುಜ್ಯತೇ ಹಿ ಭವದ್ಗಮನಾದ್ಭೀತಿಃ । ಯತೋ ಭವದ್ಗತ್ಯಾ ಚಾಲಿತಃ ಪರ್ವತೋ ಬಹುವಿಧಪರ್ವಯುಕ್ತೋ ಗಿರಿಃ ಶಿಖರೀ ಜಿಹೀತ ಗಚ್ಛೇತ್ ॥ ಮಾನುಷಃ । ಮನೋರ್ಜಾತಾವಞ್ಯತೌ ಷುಕ್ ಚ ।। ಪಾ. ೪-೧-೧೬೧ । ಇತಿ ಮನುಶಬ್ದಾದಪತ್ಯಾರ್ಥೇಽಞ್ ಷುಗಾಗಮಶ್ಚ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ । ದಧ್ರೇ । ಧೃಞ್ ಅವಸ್ಥಾನ ಇತ್ಯಸ್ಯ ಲಿಟಿ ಕಿತ್ತ್ವಾದ್ಗುಣಾಭಾವೇ ಸತಿ ಯಣಾದೇಶಃ । ಪ್ರತ್ಯಯಸ್ವರಃ । ಪಾದಾದಿತ್ವಾನ್ನ ನಿಘಾತಃ । ಜಿಹೀತ । ಓಹಾಙ್ ಗತೌ ಲಿಙಿ ಜುಹೋತ್ಯಾದಿತ್ವಾಚ್ಛಪಃ ಶ್ಲುಃ । ಭೃಞಾಮಿತ್ । ಪಾ. ೭-೪-೭೬ । ಇತ್ಯಭ್ಯಾಸಸ್ಯೇತ್ವಂ । ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ಪರ್ವವಾನ್ ಪರ್ವತಃ । ಮತ್ವರ್ಥೀಯಸ್ತಪ್ರತ್ಯಯಃ ॥**

ಪ್ರತಿಪದಾರ್ಥ

**ವಃ**— (ಎಲೈ ಮರುತ್ತುಗಳೇ) ನಿಮ್ಮ । **ಉಗ್ರಾಯ**— ಪ್ರಚಂಡವಾಗಿಯೂ । **ಮನ್ಯವೇ**—ನಿಯತವಾಗಿ ಅಲ್ಲಾಡಿಸುವ ಪ್ರವೃತ್ತಿಯುಳ್ಳದ್ದಾಗಿಯೂ ಇರುವ । **ಯಾಮಾಯ**— ಸಂಚಾರಕ್ಕಾಗಿ (ನಿಮ್ಮ ಸಂಚಾರಕಾಲದಲ್ಲೂ ಕಂಪನದಿಂದ ಬೀಳದಿರಬೇಕೆಂದು) । **ಮಾನುಷಃ**— (ಮನೆಯ ಯಜಮಾನನಾದ) ಮಾನವನು । **ನಿ ದಧ್ರೇ**— (ಮನೆಗೆ) ಊರೆಕಂಬವನ್ನು ಕೊಟ್ಟಿದ್ದಾನೆ. (ಏತಕ್ಕೆಂದರೆ) । **ಪರ್ವತಃ**— ಅನೇಕ ಏಣುಪಂಕ್ತಿಗಳುಳ್ಳ । **ಗಿರಿಃ**— ಬೆಟ್ಟವೂ (ಕೂಡ) । **ಜಿಹೀತ**— (ನಿಮ್ಮ ರಭಸದಿಂದ) ಜರ್ಝರಿತವಾದೀತು.

ಭಾವಾರ್ಥ

ಎಲೈ ಮರುತ್ತುಗಳೇ, ಸ್ವಭಾವಸಿದ್ಧವಾದ ನಿಮ್ಮ ಪರಾಕ್ರಮವು ಒಟ್ಟು ಪೃಥಿವ್ಯಂತರಿಕ್ಷಗಳನ್ನೇ ಕಂಪಿಸುವಂತೆ ಮಾಡುವಾಗ, ಭೂಭೃತ್ತಾದ ಪರ್ವತವೂ ಜರ್ಝರಿತವಾಗಿ ನಿಮ್ಮ ಶಕ್ತಿಯ ಮುಂದೆ ನಡುಗುವಾಗ, ನಿಮ್ಮ ಸಂಚಾರಕಾಲವಲ್ಲಿ ಅಶಕ್ತನಾದ ಮಾನವನು ಭಯಪಡುವುದು ಸಹಜವಾಗಿದೆ. ಆದರೂ ಸಹ ನಿಮ್ಮ ಸಂಚಾರದಿಂದ ಅವನಿಗೆ ಉಪಕಾರವಾಗುವುದರಿಂದ ಅದಕ್ಕೆ ಅಡ್ಡಿಮಾಡದೆ ನಿಮ್ಮ ಪ್ರಚಂಡವಾಗಿಯೂ, ನಿಯತವಾಗಿ ಅಲ್ಲಾಡಿಸುವ ಪ್ರವೃತ್ತಿಯುಳ್ಳದ್ದಾಗಿಯೂ ಇರುವ ಸಂಚಾರಕಾಲದಲ್ಲಿ ಕಂಪನದಿಂದ ಕೆಳಗೆ ಬೀಳದಿರಲೆಂದು ಅವನು ತನ್ನ ಮನೆಗೆ ಊರೆಕಂಬವನ್ನು ಕೊಟ್ಟು ನಿಲ್ಲಿಸಿದ್ದಾನೆ.

## English Translation

The house-holder, in dread of your fierce and violent approach has planted a firm post; for even the mountain with many ridges is shattered by you.

॥ ವಿಶೇಷವಿಷಯಗಳು ॥

ಮುಖ್ಯಾಭಿಪ್ರಾಯ— ಮರುತ್ತುಗಳು ಬಹಳ ವೇಗವಾಗಿಯೂ ಭಯಂಕರವಾಗಿಯೂ ಬೀಸುವುದರಿಂದ ಪರ್ವತಶಿಖರಗಳೂ ಕೂಡ ಅವುಗಳ ರಭಸವನ್ನು ತಡೆಯಲು ಶಕ್ತಿಯಿಲ್ಲದೆ ಅಲ್ಲಾಡುವವು. ಹೀಗಿರುವಾಗ ಮನುಷ್ಯರು ವಾಸಿಸುವ ಮನೆಗಳು ದೃಢವಾಗಿ ಹೇಗೆ ನಿಲ್ಲುವವು? ಆದಕ್ಕಾಗಿಯೇ ಮನುಷ್ಯರು ಮಹಾರಭಸದಿಂದ ಬೀಸುವ ಗಾಳಿಯಿಂದ ತಮ್ಮ ಮನೆಗಳು ಉರುಳಿಸಲ್ಪಡದಿರುವುದಕ್ಕಾಗಿ ತಮ್ಮ ಮನೆಗಳ ಭದ್ರತೆಗಾಗಿ ಬಲವಾದ ಕಂಬಗಳನ್ನು ನೆಡುತ್ತಾರೆ.

ವ್ಯಾಕರಣಪ್ರಕ್ರಿಯಾ

**ಮಾನುಷಃ—ಮನೋರ್ಜಾತಾವಞ್ಯತೌ ಷುಕ್ಚ** (ಪಾ. ಸೂ. ೪-೧-೧೬೧) ಪ್ರಕೃತಿಪ್ರತ್ಯಯ ಸಮುದಾಯದಿಂದ ಜಾತಿ ವಾಚ್ಯವಾದರೆ ಮನುಶಬ್ದಪ್ರಕೃತಿಕ ಷಷ್ಠ್ಯಂತದ ಮುಂದೆ ಅಞ್—ಯತ್ ಪ್ರತ್ಯಯಗಳು ಬರುವುವು, ಈ ಪ್ರತ್ಯಯಗಳು ಪರದಲ್ಲಿದ್ದರೆ ಮನುಶಬ್ದಕ್ಕೆ ಷುಕ್ ಆಗಮ ಬರುತ್ತೆ ಎಂದು ಮನುಶಬ್ದದ ಮುಂದೆ ಅಞ್ ಪ್ರತ್ಯಯವೂ ಮನುಶಬ್ದಕ್ಕೆ ಅಂತಾವಯವವಾಗಿ ಷುಕ್ ಆಗಮವೂ ಬಂದರೆ ಮಾನುಷ ಎಂದು ಆಗುತ್ತೆ. ವೇದಾಧ್ಯಯನ ಸಂಪನ್ನನೂ ಆಗಿ ವೇದವಿಹಿತಕರ್ಮಾನುಷ್ಠಾನ ಮಾಡುವವನೂ ಆದವನು ಮಾನುಷಪದದಿಂದ ಬೋಧಿಸಲ್ಪಡುವನು, ಹೀಗಿಲ್ಲದೆ ಇದ್ದರೆ ಮಾಣವ ಎನ್ನಬೇಕು.

**ಅಪತ್ಯೇ ಕುತ್ಸಿತೇ ಮೂಢೇ ಮನೋರೌತ್ಸರ್ಗಿಕಃಸ್ಮೃತಃ ।**
**ನಕಾರಸ್ಯ ಚ ಮೂರ್ಧನ್ಯಸ್ತೇನಸಿಧ್ಯತಿ ಮಾಣವಃ ॥**

ಎಂಬ ವಚನದಿಂದ ಮೇಲೆ ಹೇಳಿದ ಅಂಶವು ಏರ್ಪಡುತ್ತೆ. **ಞ್ನಿತ್ಯಾದಿರ್ನಿತ್ಯಂ** ಎಂದು ಆದ್ಯುದಾತ್ತ.

**ದಧ್ರೇ—**ಧೃಞ್ ಅವಸ್ಥಾನೇ, ಲಿಟ್, ತಗೆ ಏಶ್, ದ್ವಿತ್ವ ಧೃ+ ಧೃ+ಏ, **ಉರತ್** ಎಂದು ಅಭ್ಯಾಸದ ಋಕಾರಕ್ಕೆ ಅಕಾರ, ರಪರತ್ವ ಅಭ್ಯಾಸಲೋಪ ಜಶ್ತ್ವಗಳು, ದಧೃ+ಏ **ಕ್ಙಿತಿಚ** ಎಂದು ಗುಣಕ್ಕೆ ನಿಷೇಧ ಯಣಾದೇಶ, ಪಾದಾದಿಯಲ್ಲಿರುವುದರಿಂದ **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುವುದಿಲ್ಲ. ಪ್ರತ್ಯಯಸ್ವರವೇ ಬರುತ್ತದೆ.

**ಜಿಹೀತೆ—**ಓಹಾಙ್ ಗತೌ ಧಾತು, ಲಿಙ್, ತ ಆದೇಶ **ಲಿಙಃಸೀಯುಟ್** ಎಂದು ಸೀಯುಟ್ ಆಗಮ, ಯಲೋಪ, ಸಕಾರಕ್ಕೆ ಲೋಪ, ಹಾ+ಈತ. **ಜುಹೋತ್ಯಾದಿಭ್ಯಃ ಶ್ಲುಃ** (ಪಾ. ಸೂ. ೨-೪-೭೫) ಎಂದು ಶಪ್‌ಗೆ ಶ್ಲು. **ಶ್ಲೌ** (ಪಾ. ಸೂ. ೬-೧-೧೦) ಎಂದು ದ್ವಿತ್ವ. ಹಾ+ಹಾ+ಈತ, **ಭೃಞಾಮಿತ್** (ಪಾ. ಸೂ. ೭-೪-೭೬) ಭೃ-ಮಾಙ್-ಓಹಾಙ್ ಈ ಮೂರು ಧಾತುಗಳ ಅಭ್ಯಾಸಕ್ಕೆ ಇತ್ವವು ಶ್ಲು ಬಂದಾಗ ಬರುತ್ತೆ ಎಂದು ಅಭ್ಯಾಸಕ್ಕೆ ಇಕಾರ. ಹಿ+ಹಾ+ಈತ, **ಕುಹೋಶ್ಚುಃ** ಎಂದು ಅಭ್ಯಾಸದ ಹ್‌ಗೆ ಜ್ ಬರುತ್ತೆ. **ಶ್ನಾಭ್ಯಸ್ತಯೋ ರಾತಃ** (ಪಾ. ಸೂ. ೬-೪-೧೧೨) ಕಿತ್ ವಾ ಙಿತ್ ಆದ ಸಾರ್ವಧಾತುಕ ಪರದಲ್ಲಿರುವಾಗ ಇವುಗಳ ಆಕಾರಕ್ಕೆ ಲೋಪ ಬರುತ್ತೆ ಎಂದು ಆಗೆ ಲೋಪ. ಹಲಾದಿಪ್ರತ್ಯಯ ಪರದಲ್ಲಿ ಇಲ್ಲದೆ ಇರುವುದರಿಂದ **ಈ ಹಲ್ಯಘೋಃ** (ಪಾ. ಸೂ. ೬-೪-೧೧೩) ಕಿತ್ ವಾ ಙಿತ್ ಆದ ಹಲಾದಿ ಸಾರ್ವಧಾತುಕಪರದಲ್ಲಿದ್ದರೆ ಶ್ನಾ ಮತ್ತು ಅಭ್ಯಸ್ತಗಳ ಆಕಾರಕ್ಕೆ ಈಕಾರ

ಬರುತ್ತಿ ಎಂದು ವಿಹಿತವಾದ ಈಕಾರ ಬರುವುದಿಲ್ಲ. ಇದು ವಿಶೇಷವಿಹಿತವಾದ್ದರಿಂದ ಪೂರ್ವಸೂತ್ರಕ್ಕೆ ಅಪವಾದ, ಏವಂಚ ಅಜಾದಿಪ್ರತ್ಯಯ ಪರದಲ್ಲಿರುವಾಗ ಪೂರ್ವಸೂತ್ರವು ಪ್ರವರ್ತಿಸುವುದು.

**ಪರ್ವತಃ**—ಪರ್ವಶಬ್ದದ ಮುಂದೆ ಮತ್ವರ್ಥದಲ್ಲಿ ತ ಪ್ರತ್ಯಯ. ||೭||



। ಸಂಹಿತಾಪಾಠಃ ॥

ಯೇಷಾಮಜ್ಮೇಷು ಪೃಥಿವೀ ಜುಜುರ್ವಾ಼ಁ ಇವ ವಿಶ್ಪತಿಃ ।
ಭಿಯಾ ಯಾಮೇಷು ರೇಜತೇ ॥ ೮ ॥

॥ ಪದಪಾಠಃ ॥

ಯೇಷಾಂ । ಅಜ್ಮೇಷು । ಪೃಥಿವೀ । ಜುಜುರ್ವಾನ್ ऽ ಇವ । ವಿಶ್ಪತಿಃ ।
ಭಿಯಾ । ಯಾಮೇಷು । ರೇಜತೇ ॥ ೮ ॥

ಸಾಯಣಭಾಷ್ಯಂ

ಹೇ ಮರುತೋ ಯೇಷಾಂ ಯುಷ್ಮಾಕಂ ಯಾಮೇಷು ಗಮನೇಷ್ವಜ್ಮೇಷು ಕ್ಷೇಪಕೇಷು ಸತ್ಸು ಪೃಥಿವೀ ಭೂಮಿಃ ರೇಜತೇ ಕಂಪತೇ । ತತ್ರ ದೃಷ್ಟಾಂತಃ । ಜುಜುರ್ವಾ಼ಁ ಇವ ವಿಶ್ಪತಿಃ । ಯಥಾ ವಯೋ-ಹಾನಿರೋಗಾದಿನಾ ಜೀರ್ಣಃ ಪ್ರಜಾಪಾಲಕೋ ರಾಜಾ ವೈರಿಭಯಾತ್ಕಂಪತೇ ತದ್ವತ್ ॥ ಅಜ್ಮೇಷು । ಅಜ ಗತಿಕ್ಷೇಪಣಯೋಃ । ಬಹುಲಗ್ರಹಣಾದೌಣಾದಿಕೋ ಮನ್ । ಅಜೇರ್ವ್ಯಘಞಪೋಃ । ಪಾ. ೨-೪-೫೬ । ಇತಿ ವೀಭಾವೋ ನ ಭವತಿ । ವಲಾದಾವಾರ್ಧಧಾತುಕೇ ವಿಕಲ್ಪ ಇಷ್ಯತೇ । ಕಾ. ೨-೪-೫೬-೨ । ಇತಿ ವಚನಾತ್ । ನಿತ್ತ್ವಾದಾದ್ಯುದಾತ್ತತ್ವಂ । ಜುಜುರ್ವಾನ್ । ಜ್ಯಾಷ್ ವಯೋಹಾನೌ । ಲಿಟಃ ಕ್ವಸುಃ । ಬಹುಲಂ ಛಂದಸಿ । ಪಾ. ೭-೧-೧೦೩ । ಇತ್ಯುತ್ವಂ । ಅಭ್ಯಾಸಹಲಾದಿಶೇಷೌ । ವಸ್ವೇಕಾಜಾದ್ಘಸಾಮಿತಿ

**ನಿಯಮಾದಿಡಾಗಮಾಭಾವಃ । ಋಚ್ಛೃತ್ಯೄತಾಂ । ಪಾ. ೭-೪-೧೧ । ಇತಿ ಗುಣೋ ಹಲಿ ಚೇತಿ ದೀರ್ಘತ್ವಂ ಚ ಸಂಜ್ಞಾಪೂರ್ವಕೋ ವಿಧಿರನಿತ್ಯ ಇತಿ ವಚನಾನ್ನ ಭವತಿ । ವಿಶಾಂ ಪತಿರ್ವಿಶ್ಪತಿಃ । ಪತ್ಯಾವೈಶ್ವರ್ಯೆ ಇತಿ ಪೂರ್ವಪದಪ್ರಕೃತಿಸ್ವರೇ ಪ್ರಾಪ್ತೇ ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಭಿಯಾ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಯಾಮೇಷು । ಯಮ ಉಪರಮೇ । ಭಾವೇ ಘಞ್ । ಕರ್ಷಾತ್ವತೋ ಘಞ ಇತ್ಯಂತೋದಾತ್ತತ್ವೇ ಪ್ರಾಪ್ತೇ ವೃಷಾದಿಷು ಪಾಠಾದಾದ್ಯುದಾತ್ತತ್ವಂ । ರೇಜತೇ । ರೇಜೃ ಕಂಪನೇ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಯದ್ವೃತ್ತಯೋಗಾದನಿಘಾತಃ ॥**

॥ ಪ್ರತಿಪದಾರ್ಥ ॥

**ಯೇಷಾಂ**— ( ಎಲೈ ಮರುತ್ತುಗಳೇ) ಯಾವ ನಿಮ್ಮ । **ಯಾಮೇಷು**— ಗಮನಗಳು । **ಅಜ್ಮೇಷು** (ಎಲ್ಲವನ್ನೂ ಕೆಳಕ್ಕೆ ಬೀಳಿಸುವ) ರಭಸವುಳ್ಳದ್ದಾಗಿರಲು । **ಜುಜುರ್ವಾನಿವ**—(ವಾರ್ಧಕ್ಯದಿಂದಲೂ ರೋಗ ದಿಂದಲೂ) ಜರ್ಝರಿತವಾದ ದೇಹವುಳ್ಳ । **ವಿಶ್ಪತಿಃ**— ಪ್ರಜಾಪಾಲಕನಾದ ರಾಜನು । **ಭಿಯಾ**— (ಶತ್ರು) ಭಯ ದಿಂದ (ನಡಗುವಂತೆ) । **ಪೃಥಿವೀ**— ಭೂಮಿಯು । **ರೇಜತೇ**— ಕಂಪಿಸುತ್ತದೆ.

ಭಾವಾರ್ಥ

ಪೃಥಿವಿಯೂ ಸಹ ನಿಮ್ಮ ಪ್ರಚಂಡವಾಗಿಯೂ, ಎಲ್ಲವನ್ನೂ ಕೆಳಗೆ ಬೀಳಿಸುವುದಾಗಿಯೂ ಇರತಕ್ಕ ಗಮನಗಳ ರಭಸದ ಮುಂದೆ ಕಂಪಿಸುತ್ತದೆ ಇದನ್ನು ನೋಡಿದರೆ ವಾರ್ಧಕ್ಯದಿಂದಲೂ, ರೋಗದಿಂದಲೂ ಜರ್ಝರಿತವಾದ ದೇಹವುಳ್ಳ ಪ್ರಜಾಪಾಲಕನಾದ ರಾಜನು ತನ್ನ ಪ್ರಬಲವಾದ ಶತ್ರುವನ್ನು ನೋಡಿ ಭಯದಿಂದ ನಡಗುವಂತೆ ನಿನ್ನ ಪರಾಕ್ರಮದ ಮುಂದೆ ಭೂಮಿಯು ನದಗುವಂತೆ ತೋರುತ್ತದೆ.

## English Translation

O Maruts, at your approach ( at whose aproach ) even the earth trembles like a king weak and enfeebled with age through dread of his enemies

ವಿಶೇಷವಿಷಯಗಳು

**ಅಜ್ಮೇಷು— ಅಜ ಗತಿಕ್ಷೇಪಣಯೋಃ । ಗಮನೇಷು ।** ನಿಮ್ಮ ಗಮನಗಳಲ್ಲಿ ಅಥವಾ ಗಮನಗಳಿಂದ ಎಂದರೆ ನೀವು ಭಯಂಕರವಾಗಿ ಬೀಸುತ್ತಾ ಸಮೀಪಕ್ಕೆ ಬರುವಾಗ ಎಂದರ್ಥವು.

**ಜುಜುರ್ವಾನಿವ**— ಜ್ಯಾಷ್ ವಯೋಹಾನೌ । ವಯಸ್ಸಿನಿಂದ ಜೀರ್ಣವಾದ, ಮುದುಕನಾದ, ವಯಸ್ಸಿನಿಂದ ವೃದ್ಧನಾಗಿ ದೇಹಶಕ್ತಿಯಿಲ್ಲದಿರುವ ರಾಜನು ಪ್ರಬಲ ಶತ್ರುಗಳೊಡನೆ ಯುದ್ಧಮಾಡಲು ಸಾಮರ್ಥ್ಯವಿಲ್ಲದೆ ಅವರ ಭಯದಿಂದ ನಡಗುವಂತೆ ಎಂದಭಿಪ್ರಾಯವು.

**ವಿಶ್ಪತಿಃ**— **ವಿಶಾಂ ಪ್ರಜಾನಾಂ ಪತಿಃ ।** ಪ್ರಜಾಪಾಲಕನು ರಾಜನು.

**ಯೊಮೇಷು— ಯಮು ಉಪರಮೇ ।** ಸಮೀಪಕ್ಕೆ ಬರುವ ಗಮನಗಳಿಂದ ಎಂದರೆ ಸಮೀಪಕ್ಕೆ ಬಂದಾಗ.

॥ ವ್ಯಾಕರಣಪ್ರಕ್ರಿಯಾ ॥

**ಅಜ್ಮೇಷು**—ಅಜ ಗತಿಕ್ಷೇಪಣಯೋಃ ಧಾತು. **ಉಣಾದಯೋ ಬಹುಲಮ್** ಎಂದು ಬಹುಲಗ್ರಹಣ ದಿಂದ ಮನ್ ಎಂಬ ಔಣಾದಿಕ ಪ್ರತ್ಯಯ ಬರುತ್ತೆ **ಅಜೇರ್ವ್ಯಘಞಪೋಃ** (ಪಾ. ಸೂ. ೨-೪-೫೬) ಘಞ್, ಅಪ್ ಇವುಗಳನ್ನುಳಿದು ಆರ್ಧಧಾತುಕ ವಿಷಯದಲ್ಲಿ ಅಜ್ ಧಾತುವಿಗೆ ವೀ ಆದೇಶ ಬರುತ್ತೆ ಎಂದು ಅರ್ಥ. ಇಲ್ಲಿ **ವಾಲಿಟಿ** (ಪಾ. ಸೂ. ೨-೪-೫೫) ಎಂಬ ಸೂತ್ರದಿಂದ **ವಾ** ಎಂಬುದನ್ನು ಅನುವರ್ತಿಸುವುದು. ಏವಂಚ ವ್ಯವಸ್ಥಿತ ವಿಭಾಷೆ ಎಂದು ಆಶ್ರಯಿಸುವೆವು. ಅಂದರೆ ವಿಕಲ್ಪದಲ್ಲಿ ಭಾವ-ಅಭಾವ ಎಂದು ಎರಡು ಅಂಶವಿದೆ, ಕೆಲವು ಕಡೆ ಭಾವಾಂಶ ಮಾತ್ರಕ್ಕೂ ಕೆಲವು ಕಡೆ ಅಭಾವಾಂಶ ಮಾತ್ರಕ್ಕೂ, ಮತ್ತೆ ಕೆಲವು ಕಡೆ ಎರಡು ಅಂಶಗಳಿಗೂ ನಿಯತ ವಾಗಿ ಪ್ರವೃತ್ತಿಯು ಬರುತ್ತೆ ಎಂದು ಅರ್ಥ, ಏವಂಚ ಘಞ್, ಅಪ್‌ಗಳು ಪರದಲ್ಲಿದ್ದರೆ ಅಭಾವಾಂಶವೇ ಬರುತ್ತೆ. ಲ್ಯುಟ್, ವಲಾದ್ಯಾರ್ಧಧಾತುಗಳಲ್ಲಿ ಉಭಯಾಂಶಕ್ಕೂ ಪ್ರವೃತ್ತಿ, ಮಿಕ್ಕ ಕಡೆಗಳಲ್ಲಿ ಭಾವಾಂಶಕ್ಕೆ ಪ್ರವೃತ್ತಿ ಎಂದು ಸಿದ್ಧವಾಗುತ್ತೆ ಈ ಸೂತ್ರದಲ್ಲಿ **ಅಘಞಪೋಃ** ಎಂದು ಹೇಳಬೇಕಾದ್ದಿಲ್ಲ ಎಂದು ಮಹಾಭಾಷ್ಯದಲ್ಲಿಯೂ ಶೇಖರ ದಲ್ಲಿಯೂ ಹೇಳಿದೆ. ಪ್ರಕೃತದಲ್ಲಿ ಮನ್ ವಲಾದಿ ಆರ್ಧಧಾತುಕ. ಇಲ್ಲಿ ವೀಭಾವ ವಿಕಲ್ಪಿತವಾದ್ದರಿಂದ ಬರು ವುದಿಲ್ಲ. ನಿತ್ತಾಗಿದ್ದರಿಂದ ಆದ್ಯುದಾತ್ತ.

**ಜುಜುರ್ವಾನ್**—ಜ್ಯೂಷ್ ವಯೋಹಾನೌ, ಲಿಟ್‌ಗೆ ಕ್ವಸುಪ್ರತ್ಯಯ. **ಬಹುಲಂಛಂದಸಿ** (ಪಾ ಸೂ ೭-೧-೧೦೩) ಛಂದಸ್ಸಿನಲ್ಲಿ ಉತ್ವವು ಬಹುಲವಾಗಿ ಬರುತ್ತೆ ಎಂದು ಉತ್ವ, ರಪರತ್ವ, ಜುರ್+ವಸ್, **ವಸ್ವೇಕಾಜಾ- ದ್ಘಸಾಂ** ಎಂಬ ನಿಯಮದಿಂದ ಇಟ್ ಬರುವುದಿಲ್ಲ. ದ್ವಿತ್ವ. ಅಭ್ಯಾಸದ ರ್‌ಗೆ ಲೋಪ. ಜುಜುರ್+ವಸ್, **ಹಲಿಚ** (ಪಾ. ಸೂ. ೮-೨-೭೭) ರೇಫಾಂತ ಅಥವಾ ವಕಾರಾಂತವಾದ ಧಾತುಗಳ ಉಪಧೆಯಲ್ಲಿರುವ ಇಕ್‌ಗೆ ದೀರ್ಘ ಬರುತ್ತೆ ಎಂದು ವಿಹಿತವಾದ ದೀರ್ಘವೂ **ಋಚ್ಛತ್ಯೄತಾಮ್** ಎಂದು ವಿಹಿತವಾದ ಗುಣವೂ ದೀರ್ಘ, ಗುಣ ಎಂಬ ಸಂಜ್ಞೆಯನ್ನು ಮುಂದಿಟ್ಟುಕೊಂಡು ಬರತಕ್ಕವು **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬ ಪರಿಭಾಷೆಯಿಂದ ಅವು ಅನಿತ್ಯಗಳಾಗುವುದರಿಂದ ಇಲ್ಲಿ ಬರುವುದಿಲ್ಲ.

**ವಿಶ್ಪತಿಃ**—ವಿಶಾಂ ಪತಿಃ ಎಂದು ವಿಗ್ರಹ. **ಪತ್ಯಾವೈಶ್ವರ್ಯೇ** (ಪಾ. ಸೂ. ೬-೨-೧೮) ಎಂದು ಪೂರ್ವ ಪದಪ್ರಕೃತಿಸ್ವರವು ಪ್ರಾಪ್ತವಾದರೆ ಅದನ್ನು ಬಾಧಿಸಿ **ಪರಾದಿಶ್ಛಂದಸಿ ಬಹುಲಂ** (ಪಾ. ಸೂ. ೬-೨-೧೯೯) ಎಂದು ಉತ್ತರಪದಕ್ಕೆ ಆದ್ಯುದಾತ್ತ ಬರುತ್ತೆ.

ಭಿಯಾ– **ಸಾವೇಕಾಚಃ**—, ಎಂದು ವಿಭಕ್ತಿಯು ಉದಾತ್ತ.

**ಯಾಮೇಷು**—ಯಮು ಉಪರಮೇ, ಭಾವಾರ್ಥದಲ್ಲಿ ಘಞ್, ಉಪಧಾವೃದ್ಧಿ, ಏವಂಚ ಆಕಾರವನ್ನು ಹೊಂದಿರುವ ಘಞಂತವಾಗುತ್ತೆ. **ಕರ್ಷಾತ್ವತೋ ಘಞಂತ ಉದಾತ್ತಃ** (ಪಾ. ಸೂ. ೬-೧-೧೫೯) ಎಂದು

ಉದಾತ್ತಪ್ರಾಪ್ತವಾದರೆ ಅದನ್ನು ಬಾಧಿಸಿ ವೃಷಾದಿಯಲ್ಲಿ ಈ ಪದವನ್ನು ಪಠಿಸಿರುವುದರಿಂದ **ವೃಷಾದೀನಾಂಚ** ಎಂದು ಆದ್ಯುದಾತ್ತ ಬರುತ್ತೆ.

**ರೇಜತೇ**—ರೇಜೃ ಕಂಪನೇ-ಶಪ್ ಎಂಬ ಅದುಪದೇಶದ ಮುಂದೆ ಇರುವುದರಿಂದ ತೇಗೆ **ತಾಸ್ಯನುದಾತ್ತೇತ್,** ಎಂದು ಅನುದಾತ್ತ ಬರುತ್ತೆ. ಯದ್ವೃತ್ತಯೋಗ ಇರುವುದರಿಂದ ಸರ್ವಾನುದಾತ್ತ ಬರುವುದಿಲ್ಲ. ||೮||



|| ಸಂಹಿತಾಪಾಠಃ ||

ಸ್ಥಿರಂ ಹಿ ಜಾನಮೇಷಾಂ ವಯೋ ಮಾತುರ್ನಿರೇತವೇ।
ಯತ್ಸೀಮನು ದ್ವಿತಾ ಶವಃ ||೯||

|| ಪದಪಾಠಃ ||

ಸ್ಥಿರಂ । ಹಿ । ಜಾನಂ । ಏಷಾಂ । ವಯಃ । ಮಾತುಃ । ನಿಃ ऽ ಏತವೇ ।
ಯತ್ । ಸೀಮ್ । ಅನು । ದ್ವಿತಾ । ಶವಃ ||೯||

|| ಸಾಯಣಭಾಷ್ಯಂ ||

ಏಷಾಂ ಮರುತಾಂ ಜಾನಂ ಜನ್ಮಸ್ಥಾನಮಾಕಾಶಂ ಸ್ಥಿರಂ ಹಿ । ಚಲನರಹಿತಂ ಖಲು । ಮಾತುರ್ಮರುತಾಂ ಜನನೀಸ್ಥಾನೀಯಾದಾಕಾಶಾದ್ವಯಃ ಪಕ್ಷಿಣೋ ನಿರೇತವೇ ನಿರ್ಗಂತುಂ ಸಮರ್ಥಾ ಭವಂತೀತಿ ಶೇಷಃ । ತಾದೃಶಾದಾಕಾಶಾದ್ಭವಜ್ಜನ್ಮೇತಿ ಮರುತಾಂ ಸ್ತುತಿಃ । ಯದ್ಯಸ್ಮಾತ್ಕಾರಣಾಚ್ಛವೋ ಭವದೀಯಂ ಬಲಮನುಕ್ರಮೇಣ ಸೀಂ ಸರ್ವತೋ ದ್ವಿತಾ ದ್ವಿತ್ವೇನ ದ್ಯಾವಾಪೃಥಿವ್ಯೋರ್ವಿಭಜ್ಯ ವರ್ತತೇ । ಅತೋ ಭವದೀಯಂ ಜಾನಂ ಸ್ಥಿರಂ ಹೀತಿ ಪೂರ್ವತ್ರಾನ್ವಯಃ || ಜಾನಂ । ಜನ್ಯತೇಽಸ್ಮಿನ್ನಿತಿ ಜಾನಮಂತರಿಕ್ಷಂ । ಅಧಿಕರಣೇ ಘಞ್ । ಏಷಾಂ । ಇದಮೋಽನ್ವಾದೇಶ ಇತ್ಯಶಾದೇಶೋಽನುದಾತ್ತಃ । ವಿಭಕ್ತಿಶ್ಚ ಸುಪ್ತ್ವಾದನುದಾತ್ತಾ । ನ ಚೋಡಿದಮಿತ್ಯಾದಿನಾ ವಿಭಕ್ತ್ಯುದಾತ್ತತ್ವಂ । ಅಂತೋದಾತ್ತಾದಿದಂಶಬ್ದಾತ್ತಸ್ಯ ವಿಧಾನಾತ್ । ನಿರೇತವೇ । ಇಣ್ ಗತೌ । ತುಮರ್ಥೇ ಸೇಸೇನಿತಿ ತವೇನ್ಪ್ರತ್ಯಯಃ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ ||

॥ ಪ್ರತಿಪದಾರ್ಥ ॥

**ಏಷಾಂ**— ಈ ನಿಮ್ಮ (ಮರುತ್ತುಗಳ) । **ಜಾನಂ**— ಜನ್ಮಸ್ಥಾನವಾದ ಆಕಾಶವು । **ಸ್ಥಿರಂ ಹಿ**— ಚಲನರಹಿತವಾಗಿ ದೃಢವಾಗಿರತಕ್ಕದ್ದು । **ಮಾತುಃ**— (ನಿಮಗೆ) ಉತ್ಪತ್ತಿಸ್ಥಾನವಾದ ಆಕಾಶದಿಂದ । **ವಯಃ**— ಪಕ್ಷಿಗಳು । **ನಿರೇತವೇ**— ಹೊರಕ್ಕೆ ಬಂದು ಸಂಚಾರಮಾಡುವುದಕ್ಕೆ (ಸಮರ್ಥವಾಗುತ್ತವೆ.) । **ಯತ್**—ಏತಕ್ಕೆಂದರೆ । **ಶವಃ**— ನಿಮ್ಮ ಬಲವು । **ಅನು**-ಕ್ರಮವಾಗಿ । **ಸೀಂ**— ಸುತ್ತಲೂ । **ದ್ವಿತಾ**—(ದ್ಯಾವಾಪೃಥಿವಿಗಳೆರಡು ಲೋಕಗಳಲ್ಲೂ) ಎರಡು ಭಾಗವಾಗಿ ವ್ಯಾಪಿಸಿದೆ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ನಿಮ್ಮ ಪರಾಕ್ರಮವು ಅಸಾಧಾರಣವಾದುದು. ಏತಕ್ಕೆಂದರೆ ನಿಮ್ಮ ಜನ್ಮಸ್ಥಾನವಾದ ಆಕಾಶವು ಸ್ವಭಾವವಾಗಿಯೂ ಚಲನರಹಿತವಾಗಿ ಸ್ಥಿರವಾಗಿರತಕ್ಕದ್ದಾದರೂ ಸಹ ನಿಮ್ಮ ಪ್ರಭಾವದಿಂದ ಅದು ಚಲನಕ್ಕೆ ಆಧಾರಭೂತವಾಗುತ್ತದೆ. ಪಕ್ಷಿಗಳು ನಿಮ್ಮ ಉತ್ಪತ್ತಿಸ್ಥಾನವಾದ ಆಕಾಶದಿಂದ ಹೊರಕ್ಕೆ ಬಂದ ಸಂಚಾರಮಾಡಲನುಕೂಲವಾಗುತ್ತದೆ. ನಿಮ್ಮ ಪರಾಕ್ರಮವು ದ್ಯಾವಾಪೃಥಿವಿಗಳೆರಡು ಲೋಕಗಳಲ್ಲೂ ಎರಡು ಭಾಗವಾಗಿ ವ್ಯಾಪಿಸಿದೆ

## English Translation

The sky which is your birth place is firm and does not shake; in that sky the birds are always able to fly; your strength is divided between earth and heaven.

॥ ವಿಶೇಷವಿಷಯಗಳು ॥

**ಜಾನಂ— ಜನ್ಮಸ್ಥಾನಂ । ಜನ್ಯತೇಽಸ್ಮಿನ್ನಿತಿ ಜಾನಮಂತರಿಕ್ಷಂ** । ಮರುದ್ದೇವತೆಗಳ ಜನ್ಮಸ್ಥಾನವು ಆಕಾಶವೆಂದು ಹೇಳಲ್ಪಡುವುದು.

**ವಯಃ— ಪಕ್ಷಿಣಃ** । ಪಕ್ಷಿಗಳು.

**ನಿರೇತವೇ—ನಿರ್ಗಂತುಂ** । ಹೊರಡುವುದಕ್ಕೆ ಎಂದರೆ ಹಾರಿಹೋಗುವುದಕ್ಕೆ

**ದ್ವಿತಾ**— ಎರಡಾಗಿ ಭಾಗಿಸುವ ಎಂದರೆ ಭೂಮಿ ಮತ್ತು ಸ್ವರ್ಗಲೋಕಗಳ ಮಧ್ಯದಲ್ಲಿ ಅಂತರಿಕ್ಷವು ಇರುವುದರಿಂದ ಇದು ಭೂಮಿ ಸ್ವರ್ಗಗಳನ್ನು ಬೇರೆ ಬೇರೆ ಎಂದರೆ ಎರಡಾಗಿ ಮಾಡುವುದು ಎಂಬಭಿಪ್ರಾಯವು.

**ಶವಃ**— ಶಕ್ತಿ, ಸಾಮರ್ಥ್ಯ.

॥ ವ್ಯಾಕರಣಪ್ರಕ್ರಿಯಾ ॥

**ಜಾನಮ್**—ಜನ್ಯತೇ ಅಸ್ಮಿನ್ ಇತಿ ಜಾನಂ. ಇದರಲ್ಲಿ ಉತ್ಪತ್ತಿಯಾಗುತ್ತೆ ಎಂದರ್ಥ. ಉತ್ಪತ್ತಿಗೆ ಆಧಾರವಾದ ಆಕಾಶವು ಈ ಪದದಿಂದ ಬೋಧಿಸಲ್ಪಡುತ್ತೆ. **ಹಲಶ್ಚ** (ಪಾ. ಸೂ. ೩-೩-೧೨೧) ಎಂದು ಅಧಿಕರಣಾರ್ಥದಲ್ಲಿ ಘ ಇಞ್ ಪ್ರತ್ಯಯ.

ಏಷಾಂ—ಇದಮ್ ಶಬ್ದದ ಮುಂದೆ ಷಷ್ಠೀಬಹುವಚನ ಆಮ್. **ತ್ಯದಾದೀನಾಮಃ** (ಪಾ. ಸೂ. ೭-೨-೧೦೨) ವಿಭಕ್ತಿಯು ಪರದಲ್ಲಿದ್ದರೆ ತ್ಯದ್ ಮೊದಲಾಗಿ ದ್ವಿಶಬ್ದದವರೆಗೆ ಇರುವ ಪದಗಳ ಕೊನೆಯ ವರ್ಣಕ್ಕೆ ಅಕಾರ ಬರುತ್ತೆ ಎಂದು ಮಕಾರಕ್ಕೆ ಅಕಾರ. ಇದ+ಆಮ್, **ಇದಮೋಽನ್ವಾದೇಶೇಽಶನುದಾತ್ತ ಸ್ತೃತೀಯಾದೌ** (ಪಾ. ಸೂ. ೨-೪-೩೨) ತೃತೀಯಾದಿ ವಿಭಕ್ತಿಯು ಪರದಲ್ಲಿರುವಾಗ ಅನ್ವಾದೇಶ ವಿಷಯದಲ್ಲಿರುವ ಇದಮ್ ಶಬ್ದಕ್ಕೆ ಅಶ್ ಆದೇಶ ಬರುತ್ತೆ ಅದು ಅನುದಾತ್ತವಾಗುತ್ತೆ ಎಂದು ಇದಗೆ ಅಶ್ ಆದೇಶ. ಶ್ ಇತ್. ಅ+ಆಮ್, **ಕಿಂಚಿತ್ಕಾರ್ಯಂ ವಿಧಾತುಮುಪಾತ್ತಸ್ಯ ಕಾರ್ಯಾಂತರಂ ವಿಧಾತುಂ ಪುನರುಪಾದಾನ ಮನ್ವಾದೇಶಃ** ಅಪೂರ್ವವಾದ ಒಂದು ಕಾರ್ಯವನ್ನು ತಿಳಿಯಪಡಿಸಲು ಉಪಯೋಗಿಸಿದ ಪದಕ್ಕೆ ಮತ್ತೊಂದು ಅಪೂರ್ವ ಕಾರ್ಯವನ್ನು ತಿಳಿಯಪಡಿಸುವುದಕ್ಕಾಗಿ ಗ್ರಹಣಮಾಡುವಿಕೆ ಎಂದರ್ಥ. ಉದಾಹರಣೆ—ಅನೇನ ವ್ಯಾಕರಣಮಧೀತಂ, ಏನಂ ಛಂದೋಽಧ್ಯಾಪಯ. **ಆಮಿ ಸರ್ವನಾಮ್ನಃ ಸುಟ್** (ಪಾ ಸೂ. ೭-೨-೫೨) ಎಂದು ಆಮ್‌ಗೆ ಸುಟ್ ಆಗಮ. **ಬಹುವಚನೇ ಝಲ್ಯೇತ್** (ಪಾ. ಸೂ. ೭-೩-೧೦೩) ಎಂದು ಅಕಾರಕ್ಕೆ ಏಕಾರ. **ಆದೇಶ ಪ್ರತ್ಯಯಯೋಃ** ಇತಿಷತ್ವಂ, ಇಲ್ಲಿ ಅಶ್ ಆದೇಶದಿಂದ ಬಂದ ಅಕಾರವು ಅನುದಾತ್ತ. ಆಮ್ ಸುಪ್ಪಾದ್ದರಿಂದ **ಅನುದಾತ್ತೌಸುಪ್ಪಿತೌ** ಎಂದು ಅನುದಾತ್ತ. ಹಿಗೆ ಏಷಾಂ ಎಂಬುದು ಸರ್ವಾನುದಾತ್ತ. **ಊಡಿದಂ ಪದಾದ್ಯಪ್ಪುಮ್ ರೈದ್ಯುಭ್ಯಃ** (ಪಾ. ಸೂ. ೬-೧-೧೭೧) ಎಂದು ಇದಮ್ ಶಬ್ದದ ಮುಂದೆ ಇರುವ ವಿಭಕ್ತಿಯು ಉದಾತ್ತವಾಗಲಿ ಎನ್ನಬಹುದು. ಈ ಸೂತ್ರದಲ್ಲಿ **ಸಾವೇಕಾಚಃ**—, (ಪಾ. ಸೂ. ೬-೧-೧೬೮) ಇದರಿಂದ **ಏಕಾಚಃ** ಎಂದೂ, **ಅನ್ತೋದಾತ್ತಾತ್**—, (ಪಾ. ಸೂ. ೬-೧-೧೬೯) ಇಲ್ಲಿಂದ **ಅನ್ತೋದಾತ್ತಾತ್** ಎಂದೂ ಎರಡುಪದಗಳು ಅನುವೃತ್ತಗಳಾಗುವುವು. ಏವಂಚ ಅನ್ತೋದಾತ್ತಗಳೂ ಏಕಾಚ್ಕಗಳೂ ಆದ ಊಠ್ ಮೊದಲಾದ ಪದಗಳ ಮುಂದೆ ಇರುವ ವಿಭಕ್ತಿಯು ಉದಾತ್ತವಾಗುತ್ತೆ ಎಂದು ಸೂತ್ರಕ್ಕೆ ಅರ್ಥವಾಗುತ್ತೆ ಇಲ್ಲಿ ಇದಶಬ್ದಕ್ಕೆ ಬಂದ ಅಶ್ ಅನುದಾತ್ತವಾದ್ದರಿಂದ ಅನ್ತೋದಾತ್ತವಾದ ಇದಮ್‌ಶಬ್ದವಿಲ್ಲದ ಕಾರಣ ಆಮ್‌ವಿಭಕ್ತಿಗೆ ಉದಾತ್ತ ಬರುವುದಿಲ್ಲ.

**ನಿರೇತವೇ**—ನಿರ್ ಉಪಸರ್ಗ, ಇಣ್ ಗತೌ. **ತುಮರ್ಥೇ ಸೇಸೇನ್**—, ಎಂಬ ಸೂತ್ರದಿಂದ ತವೇನ್ ಪ್ರತ್ಯಯ, ಗುಣ, **ತಾದೌ ಚ ನಿತಿ ಕೃತ್ಯತೌ** ಎಂಬುದರಿಂದ ನಿರ್‌ಗೆ ಪ್ರಕೃತಿಸ್ವರ ಬರುತ್ತೆ. ॥೯॥



ಸಂಹಿತಾಪಾಠಃ

ಉದು ತ್ಯೇ ಸೂನವೋ ಗಿರಃ ಕಾಷ್ಠಾ ಅಜ್ಮೇಷ್ವತ್ನತ ।
ವಾಶ್ರಾ ಅಭಿಜ್ಞು ಯಾತವೇ ॥೧೦॥

ಪದಪಾಠಃ

ಉತ್ । ಊಂ ಇತಿ । ತ್ಯೇ । ಸೂನವಃ । ಗಿರಃ । ಕಾಷ್ಠಾಃ । ಅಜ್ಮೇಷು ।
ಅತ್ನತ ।

ವಾಶ್ರಾಃ । ಅಭಿಽಜ್ಞು । ಯಾತವೇ ॥ ೧೦ ॥

॥ ಸಾಯಣಭಾಷ್ಯಂ ॥

ತ್ಯೇ ಪೂರ್ವಪ್ರಕೃತಾ ಗಿರಃ ಸೂನವೋ ವಾಚ ಉತ್ಪಾದಕಾ ಮರುತಃ। ವಾಯವೋ ಹಿ ತಾಲ್ವೋಷ್ಠಾದಿಷು ಸಂಚರಂತೋ ವಾಚಮುತ್ಪಾದಯಂತಿ । ಅಜ್ಮೇಷು ಸ್ವಕೀಯೇಷು ಗಮನೇಷು ಸತ್ಸು ಕಾಷ್ಠಾ ಅಪಃ । ಆಪೋಽಪಿ ಕಾಷ್ಠಾ ಉಚ್ಯಂತೇ ಕ್ರಾಂತ್ವಾ ಸ್ಥಿತಾ ಭವಂತಿ । ನಿ. ೨-೧೫ । ಇತಿ ಯಾಸ್ಕಃ। ಉದು ಉತ್ಕರ್ಷೇಣೈವಾತ್ನತ । ಅತನಿಷತ । ವಿಸ್ತಾರಿತವಂತಃ। ಉದಕಂ ವಿಸ್ತಾರ್ಯ ತತ್ಪಾನಾರ್ಥಂ ವಾಶ್ರಾ ಹಂಭಾರವೋಪೇತಾ ಗಾ ಅಭಿಜ್ಞು ಜಾನ್ವಭಿಮುಖಂ ಯಥಾ ಭವತಿ ತಥಾ ಯಾತವೇ ಗಂತುಂ ಪ್ರೇರಿತವಂತ ಇತಿ ಶೇಷಃ॥ ಸೂನವಃ। ಷೂಂಪ್ರೇರಣೇ। ಸುವಃ ಕಿತ್ । ಉ. ೩-೩೫ । ಇತಿ ನುಪ್ರತ್ಯಯಃ। ಕಿತ್ತ್ವಾದ್ಗುಣಾಭಾವಃ। ಅತ್ನತ। ತನು ವಿಸ್ತಾರೇ। ಲಙಿ ಝಸ್ಯಾದಾದೇಶೇ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ತನಿಪತ್ಯೋಶ್ಛಂದಸಿ। ಪಾ. ೬-೪-೯೯ । ಇತ್ಯುಪಧಾಲೋಪಃ। ಅಡಾಗಮಃ। ಅಭಿಜ್ಞು। ಅಭಿಗತೇ ಜಾನುನೀ ಯಸ್ಯ ತದಭಿಜ್ಞು। ಪ್ರಸಂಭ್ಯಾಂ ಜಾನುನೋರ್ಜ್ಞುಃ। ಪಾ. ೫-೪-೧೨೯ । ಇತಿ ವ್ಯತ್ಯಯೇನಾಭಿಪೂರ್ವಸ್ಯಾಪಿ ಜಾನುಶಬ್ದಸ್ಯ ಜ್ಞುಶಬ್ದಾದೇಶಃ ಸಮಾಸಾಂತಃ। ಯಾತವೇ। ತುಮರ್ಥೇ ಸೇಸೇನಿತಿ ತವೇನ್ಪ್ರತ್ಯಯಃ। ನಿತ್ತ್ವಾದಾದ್ಯುದಾತ್ತತ್ವಂ ॥೧೩॥

॥ ಪ್ರತಿಪದಾರ್ಥ ॥

**ತ್ಯೇ**— ಪೂರ್ವ ಪ್ರವೃತ್ತಗಳಾದ ಆ । **ಗಿರಃ ಸೂನವಃ**—ವಾಕ್ಕುಗಳಿಗೆ ಉತ್ಪಾದಕಗಳಾದ ಮರುತ್ತುಗಳು । **ಅಜ್ಮೇಷು**— ತಮ್ಮ ಗಮನಕಾಲಗಳಲ್ಲಿ । **ಕಾಷ್ಠಾಃ**— ನೀರುಗಳನ್ನು । **ಉದು**— ಚೆನ್ನಾಗಿ । **ಅತ್ನತ**— ಹರದಿ ಹರಿಯುವಂತೆ ಮಾಡಿದವು. । **ವಾಶ್ರಾಃ**— (ನೀರಿಗೋಸ್ಕರ) ಶಬ್ದ ಮಾಡುತ್ತಿದ್ದ ಗೋವುಗಳನ್ನು । **ಅಭಿಜ್ಞು**— ಮೊಳಕಾಲು ಪರ್ಯಂತವಾಗಿ । **ಯಾತವೇ**— (ನೀರಿನೊಳಗೆ) ಹೋಗುವಂತೆ ಪ್ರೇರಣೆ ಮಾಡುತ್ತವೆ

॥ ಭಾವಾರ್ಥ ॥

ಮರುತ್ತುಗಳು ಸಕಲ ಪ್ರಾಣಿಗಳ ವಾಗ್ವ್ಯವಹಾರಗಳಿಗೂ ಆಧಾರವಾಗಿವೆ. ಮನುಷ್ಯರಲ್ಲದ ಇತರ ಪ್ರಾಣಿಗಳಿಗೂ ಸಹ ಅವುಗಳ ಹಸಿವು, ಬಾಯಾರಿಕೆ ಮುಂತಾದ ಅನುಭವಗಳನ್ನು ತಿಳಿಯಪಡಿಸಲು ಮರುತ್ತುಗಳ ಸಹಾಯದಿಂದಲೇ ಸಾಧ್ಯ. ಅಷ್ಟೇ ಅಲ್ಲದೆ ಅವುಗಳು ತಮ್ಮ ಅನುಭವವನ್ನು ಶಬ್ದಗಳ ಮೂಲಕ ತಿಳಿಯಪಡಿಸಿದಾಗ ಮರುತ್ತುಗಳು ತಮ್ಮ ಗಮನಗಳಿಂದ ನೀರುಗಳನ್ನು ಚೆನ್ನಾಗಿ ಹರಡಿ ಹರಿಯುವಂತೆ ಮಾಡಿ, ನೀರಿಗೋಸ್ಕರ ಕೂಗುತ್ತಿರುವ ಗೋವುಗಳನ್ನು ಮೊಳಕಾಲಿನವರೆಗೂ ನೀರಿನಲ್ಲಿಳಿದು ನೀರು ಕುಡಿಯುವಂತೆ ಪ್ರೇರಣೆ ಮಾಡುತ್ತವೆ.

English Translation

They are the generators of speech; They spread out waters in their courses; they urge the lowing cattle to enter the water up to their knees to drink

ವಿಶೇಷ ವಿಷಯಗಳು

**ತ್ಯೇ—ತೇ ।** ಆ ಪೂರ್ವೋಕ್ತವಾದ

**ಗಿರಃ ಸೂನವಃ—ವಾಚ ಉತ್ಪಾದಕಾಃ ।** ತಾಲು ಓಷ್ಠ ಮೊದಲಾದ ಬಾಯಿಯೊಳಗಿನ ಅವಯವಗಳಲ್ಲಿ ವಾಯು ಸಂಚಾರದಿಂದ ಮಾತನಾಡುವುದು ಸಾಧ್ಯವು ಎಂದಭಿಪ್ರಾಯವು.

**ಕಾಷ್ಠಾಃ— ಆಪಃ ।** ನೀರು. **ಆಪೋಽಪಿ ಕಾಷ್ಠಾ ಉಚ್ಯಂತೇ** (ನಿ. ೨-೧೫) ಎಂದು ನಿರುಕ್ತವಚನವಿರುವುದರಿಂದ ಕಾಷ್ಠಾಃ ಎಂದರೆ ನೀರು.

**ಅತ್ನತ—ಅತನಿಷತ । ವಿಸ್ತಾರಿತವಂತಃ ।** ಹರಡಿದವು. ನೀರು ವಾಯುವಿನ ಸಹಾಯದಿಂದ ಎಲ್ಲೆಲ್ಲಿಯೂ (ಮಳೆಯ ರೂಪದಿಂದ) ಹರಡುವುದೆಂದಭಿಪ್ರಾಯವು.

**ವಾಶ್ರಾಃ—** ಕೂಗುತ್ತಿರುವ ಗೋವುಗಳು.

**ಅಭಿಜ್ಞು— ಅಭಿಗತೇ ಜಾನುನೀ ಯಸ್ಯ । ಜಾನ್ವಾಭಿಮುಖ್ಯಂ ಯಥಾ ಭವತಿ ತಥಾ ।** ಗೋವುಗಳು ಜಲಾಶಯಗಳಲ್ಲಿ ನೀರನ್ನು ಕುಡಿಯುವುದಕ್ಕೆ ಹೋಗುವಾಗ ತಮ್ಮ ಮೊಳಕಾಲು ಪರ್ಯಂತರ ನೀರಿನೊಳಕ್ಕೆ ಹೋಗಿ ನೀರನ್ನು ಕುಡಿಯುವುದು ಸ್ವಭಾವವು. ಇಲ್ಲಿ ಗೋವುಗಳು ನೀರನ್ನು ಕುಡಿಯುವುದನ್ನು ಮರುತ್ತುಗಳು ಹೇಗೆ ಪ್ರೇರಿಸುವವು ಎಂಬುದು ವಿಶದವಾಗಿಲ್ಲ.

ವ್ಯಾಕರಣಪ್ರಕ್ರಿಯಾ

**ಸೂನವಃ**—ಷೂ, **ಪ್ರೇರಣೇ, ಧಾತ್ವಾದೇಃ ಷಃ ಸಃ** ಎಂದು ಷಕಾರಕ್ಕೆ ಸಕಾರ. **ಸುವಃ ಕಿತ್** (ಉ. ಸೂ. ೩-೩೧೫) ಷೂ ಧಾತು ಮುಂದೆ ನು ಪ್ರತ್ಯಯ ಬರುತ್ತೆ ಅದು ಕಿತ್ ಆಗುತ್ತೆ ಎಂದು ನು ಪ್ರತ್ಯಯ. ಪ್ರತ್ಯಯವು ಕಿತ್. **ಕ್ಙಿತಿಚ** ಎಂದು ಗುಣನಿಷೇಧ.

**ಅತ್ನತ—ತನು ವಿಸ್ತಾರೇ**—ಉಭಯಪದಿ, ಲಙ್, ಝ. **ತನಾದಿ ಕೃಞ್ಭ್ಯಉಃ** ಎಂಬುದರಿಂದ ಬಂದ ಉ ವಿಕರಣಕ್ಕೆ **ಬಹುಲಂ ಛಂದಸಿ** ಎಂಬಲ್ಲಿ ಬಹುಲಗ್ರಹಣದಿಂದ ಲುಕ್, **ಆತ್ಮನೇಪದೇಷ್ವನತಃ** ಎಂದು ಝ್‌ಗೆ ಅತ್ ಆದೇಶ, ತನ್+ಅತ, **ತನಿಪತ್ಯೋಶ್ಛಂದಸಿ** (ಪಾ. ಸೂ. ೬-೪-೯೯) ಛಂದಸ್ಸಿನಲ್ಲಿ ಕಿತ್ ವಾ ಙಿತ್ ಆದ ಪ್ರತ್ಯಯಗಳು ಪರದಲ್ಲಿ ಇದ್ದರೆ ತನ್, ಪತ್‌ಗಳ ಅಕಾರಕ್ಕೆ ಲೋಪ ಬರುತ್ತೆ ಎಂದು ಅಕಾರ ಲೋಪ, ಅಡಾಗಮ.

**ಅಭಿಜ್ಞು**—ಅಭಿಗತೇ ಜಾನುನೀ ಯಸ್ಯ ತತ್, ಅಭಿಮುಖವಾದ ಜಾನುವುಳ್ಳೋಣ ಹೇಗೋ ಹಾಗೆ, ಕ್ರಿಯಾವಿಶೇಷಣ. **ಪ್ರಸಂಭ್ಯಾಂ ಜಾನುನೋ ಜ್ಞುಃ** (ಪಾ. ಸೂ. ೫-೪-೧೨೯) ಬಹುವ್ರೀಹಿ ಸಮಾಸದಲ್ಲಿ ಪ್ರ-ಸಂ ಎಂಬ ಉಪಸರ್ಗಗಳ ಮುಂದೆ ಬರುವ ಜಾನು ಶಬ್ದಕ್ಕೆ ಜ್ಞು ಆದೇಶ ಬರುತ್ತೆ ಎಂದು ಅರ್ಥ. ಛಂದಸ್ಸಾದ್ದರಿಂದ ಅಭಿ ಇರುವಾಗಲೂ ಜ್ಞು ಆದೇಶ ಬರುತ್ತೆ.

**ಯಾತವೇ**—ಯಾ ಪ್ರಾಪಣೇ **ತುಮರ್ಥೇಸೇಸೇನ್—**, ಎಂದು ತವೇನ್ ಪ್ರತ್ಯಯ. ನಿತ್ತಾದ್ದರಿಂದ ಆದ್ಯುದಾತ್ತ. ॥೧೦॥



ಸಂಹಿತಾಪಾಠಃ

ತ್ಯಂ ಚಿದ್ಘಾ ದೀರ್ಘಂ ಪೃಥುಂ ಮಿಹೋ ನಪಾತಮಮೃಧ್ರಂ।
ಪ್ರ ಚ್ಯಾವಯನ್ತಿ ಯಾಮಭಿಃ ॥೧೧॥

ಪದಪಾಠಃ

ತ್ಯಂ । ಚಿತ್ । ಘ । ದೀರ್ಘಂ । ಪೃಥುಂ । ಮಿಹಃ । ನಪಾತಂ । ಅಮೃಧ್ರಂ ।
ಪ್ರ । ಚ್ಯವಯನ್ತಿ । ಯಾಮಽಭಿಃ ॥ ೧೧ ॥

ಸಾಯಣಭಾಷ್ಯಂ

**ತ್ಯಂ ಚಿದ್ಧ ಪ್ರಸಿದ್ಧೋ ಯೋ ಮೇಘಸ್ತಮಪಿ ಮೇಘಂ ಯಾಮಭಿಃ ಸ್ವಕೀಯಗಮನೈಃ ಪ್ರ ಚ್ಯಾವಯಂತಿ । ಮರುತಃ ಪ್ರಕರ್ಷೇಣ ಗಮಯಂತಿ । ಕೀದೃಶಂ । ದೀರ್ಘಮಾಯಾಮೋಪೇತಂ ಪೃಥುಂ ತಿರ್ಯಗ್ವಿಸ್ತೃತಂ ಮಿಹೋ ನಪಾತಂ ಸೇಚನೀಯಸ್ಯ ಜಲಸ್ಯ ನ ಪಾತಯಿತಾರಂ । ವೃಷ್ಟಿಮಕುರ್ವಂತ- ಮಿತ್ಯರ್ಥಃ । ಅಮೃಧ್ರಂ ಕೇನಾಪ್ಯಹಿಂಸ್ಯಂ ॥ ಘ । ಋಚಿ ತುನುಘೇತ್ಯಾದಿನಾ ದೀರ್ಘಃ । ಮಿಹಃ ಮಿಹ ಸೇಚನೇ । ಮೇಹತಿ ಸಿಂಚತೀತಿ ಮಿಟ್ ವೃಷ್ಟಿಃ । ಕ್ವಿಪ್ಚೇತಿ ಕ್ವಿಪ್ । ಸಾವೇಕಾಚ ಇತಿ ವಿಭ- ಕ್ತೇರುದಾತ್ತತ್ವಂ । ನಪಾತಂ । ನ ಪಾತಯತೀತಿ ನಪಾತ್ । ನಭ್ರಾಣ್ನಪಾದಿತ್ಯಾದಿನಾ ನಞಃ ಪ್ರಕೃತಿ- ಭಾವಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಅಮೃಧ್ರಂ । ಶೃಧು ಮೃಧು ಉಂದನೇ । ಮರ್ಧತ್ಯುದ- ಕೇನೋನತ್ತೀತಿ ಮೃಧಃ । ಬಹುಲವಚನಾದೌಣಾದಿಕೋ ರಕ್ಪ್ರತ್ಯಯಃ । ನಞ್ಸಮಾಸೇಽವ್ಯಯ- ಪೂರ್ವಪದಪ್ರಕೃತಿಸ್ವರತ್ವಂ । ಯದ್ವಾ । ಸಂಗ್ರಾಮವಾಚಿನಾ ಮೃಧಶಬ್ದೇನ ಹಿಂಸಾ ಲಕ್ಷ್ಯತೇ । ಮತ್ವರ್ಥೀಯೋ ರಃ । ಪೂರ್ವವತ್ಸ್ವರಸಮಾಸೌ । ಚ್ಯಾವಯಂತಿ । ಚ್ಯುಙ್ ಗತೌ । ಣಿಚಿ ವೃದ್ಧ್ಯಾವಾ- ದೇಶೌ । ಪದಕಾಲೇ ಹ್ರಸ್ವಶ್ಛಾಂದಸಃ ॥**

ಪ್ರತಿಪದಾರ್ಥ

**ದೀರ್ಘಂ**— ವಿಶಾಲವಾಗಿ ಹರಡಿಯೂ । **ಪೃಥುಂ**— ಮಹತ್ತಾಗಿಯೂ । **ಮಿಹಃ ನಪಾತಂ**— ಮಳೆಯನ್ನು ಸುರಿಸದೇ ನೀರನ್ನು ತಡೆದು ನಿಲ್ಲಿಸಿಕೊಂಡಿರತಕ್ಕದ್ದೂ । **ಅಮೃಧ್ರಂ**—ಹಿಂಸಿಸಲ್ಪಡದೇ ಇರತಕ್ಕದ್ದೂ (ತನ್ನ ಸಂಚಾರಕ್ಕೆ ಪ್ರತಿಬಂಧಕವಿಲ್ಲದೇ ಇರತಕ್ಕದ್ದೂ) ಆದ । **ತ್ಯಂ ಚಿದ್ಘ**— ಪ್ರಸಿದ್ಧವಾದ ಯಾವ ಮೇಘ ವುಂಟೋ ಅದನ್ನೂ । **ಯಾಮಭಿಃ**— ತಮ್ಮ ಸಂಚಾರಗಳಿಂದ (ಮರುತ್ತುಗಳು) । **ಪ್ರ ಚ್ಯಾವಯಂತಿ**— ಮುಂದಕ್ಕೆ ಸರಿಯುವಂತೆ ಮಾಡುತ್ತಾರೆ. (ಮಳೆ ಸುರಿಸಲು ಅನುಕೂಲವಾಗುವಂತೆ ಮಾಡುತ್ತಾರೆ)

ಭಾವಾರ್ಥ

ಸಕಲ ಪ್ರಾಣಿಗಳ ಜೀವನಕ್ಕೂ ಅತಿ ಮುಖ್ಯವಾದ ನೀರನ್ನು ಮೇಘವು ಶೇಖರಿಸಿ ಮಳೆಯನ್ನು ತಡೆದು ನಿಲ್ಲಿಸಿಕೊಂಡಿರುವ ಕಾಲದಲ್ಲಿ ಅದನ್ನು ಮಳೆ ಸುರಿಸುವಂತೆ ಮಾಡಲು ಮರುತ್ತುಗಳಲ್ಲದೆ ಇನ್ನಾರಿಂದಲೂ ಸಾಧ್ಯ ವಿಲ್ಲ. ಪ್ರಸಿದ್ಧವಾದ ಮೇಘವು ದೀರ್ಘವಾಗಿಯೂ, ವಿಶಾಲವಾಗಿಯೂ, ಮಹತ್ತಾಗಿಯೂ ಇದ್ದು ಸ್ವೇಚ್ಛೆಯಿಂದ ವಿಹರಿಸುತ್ತಿದೆ. ಅಂತಹ ಮೇಘವನ್ನು ಮರುತ್ತುಗಳು ತಮ್ಮ ಸಂಚಾರ ಕಾಲಗಳಲ್ಲಿ ಮುಂದಕ್ಕೆ ಸರಿಯುವಂತೆ ಮಾಡಿ ಮಳೆರೂಪದಿಂದ ನೀರನ್ನು ಸುರಿಸಿ ಲೋಕೋಪಕಾರ ಮಾಡುತ್ತಾರೆ.

## English Translation

They drive before them in their course, the long, vast, uninjuarable rain-retaining cloud.

ವಿಶೇಷ ವಿಷಯಗಳು

**ಘ**— ಪ್ರಸಿದ್ಧಾರ್ಥವನ್ನು ಸೂಚಿಸುವುದು. ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ಮಿಹಃ ನಪಾತಂ—ಸೇಚನೀಯಸ್ಯ ಜಲಸ್ಯ ನ ಪಾತಯಿತಾರಂ । ವೃಷ್ಟಿಮಕುರ್ವಂತ ಇತ್ಯರ್ಥಃ । ಮಿಹ ಸೇಚನೇ** ॥ ಮಳೆಯನ್ನು ಸುರಿಸುವ

**ಚ್ಯಾವಯಂತಿ—ಗಮಯಂತಿ ।** ಮುಂದೆ ಹೋಗುವಂತೆ ಮಾಡುತ್ತವೆ. Drive before them.

ವ್ಯಾಕರಣಪ್ರಕ್ರಿಯಾ

**ಘ—ಋಚಿ ತು ನು ಘ ಮಕ್ಷು ತಙ್ ಕುತ್ರೋರುಷ್ಯಾಣಾಂ** (ಪಾ. ಸೂ. ೬-೩-೧೩೩) ಎಂದು **ಘ** ಗೆ ದೀರ್ಘ **ಕೃತ್ರಿಮಾಕೃತ್ರಿ ಮಯೋಃ ಕೃತ್ರಿಮಸ್ಯೈವಗ್ರಹಣಂ** ಎಂಬುದರಿಂದ **ತರಪ್ ತಮಪೌ ಘಃ** ಎಂದು ವಿಹಿತವಾದ ಘಗೆ ಗ್ರಹಣ ಉಚಿತ. ಆದರೂ ವೇದದಲ್ಲಿ ಘ ಎಂಬ ಆನುಪೂರ್ವಿಗೇ ದೀರ್ಘವು ದೃಷ್ಟವಾಗಿರುವುದರಿಂದ ಘ ಸಂಜ್ಞೆಗೆ ಗ್ರಹಣ ಇಲ್ಲ.

**ಮಿಹಃ**—ಮಿಹ ಸೇಚನೇ, ಮೋಹತೀತಿಮಿಟ್, ಮಳೆ ಎಂದರ್ಥ. **ಕ್ವಿಪ್ ಚ** ಎಂದು ಕ್ವಿಪ್. ಷಷ್ಠೀ ಏಕವಚನಕ್ಕೆ **ಸಾವೇಕಾಚಃ** ಎಂಬುದರಿಂದ ಉದಾತ್ತ ಬರುತ್ತೆ.

**ನಪಾತಮ್**—ನಪಾತಯತೀತಿ ನಪಾತ್, **ನಭ್ರಾಣ್ನಪಾತ್—**, ಎಂಬುದರಿಂದ ನಞ್‌ಗೆ ಪ್ರಕೃತಿಭಾವ, **ತತ್ಪುರುಷೇತುಲ್ಯಾರ್ಥ—**, ಎಂದು ಅವ್ಯಯ ಪೂರ್ವಪದಪ್ರಕೃತಿಸ್ವರ.

**ಅಮೃಧ್ರಂ**—ಶೃಧು ಮೃಧು ಉನ್ದನೇ. ಮರ್ಧತಿ=ನೀರಿನಿಂದ ನೆನಸುವುದು. **ಉಣಾದಯೋ ಬಹುಲಂ** ಎಂಬಲ್ಲಿ ಬಹುಲಗ್ರಹಣದಿಂದ ಔಣಾದಿಕ ರಕ್ ಪ್ರತ್ಯಯ ಬರುತ್ತೆ. ನಞ್‌ನೊಂದಿಗೆ ಸಮಾಸ, ಹಿಂದಿನಂತೆ ಅವ್ಯಯ ಪೂರ್ವಪದಪ್ರಕೃತಿಸ್ವರ. ಅಥವಾ "ಮೃಧಮಾಸ್ಕಂದನಂ ಸಂಖ್ಯಂ ಸಮೀಕಂ ಸಾಂಪರಾಯಕಂ" ಎಂಬ ಕೋಶದಿಂದ ಮೃಧಶಬ್ದಕ್ಕೆ ಯುದ್ಧ ಎಂದು ಅರ್ಥ. ಇಲ್ಲಿ ಲಕ್ಷಣೆಯಿಂದ ಹಿಂಸೆ ಎಂಬ ಅರ್ಥವನ್ನು ಗ್ರಹಿಸಬೇಕು. ಇದರ ಮುಂದೆ ಮತ್ವರ್ಥದಲ್ಲಿ ರ ಪ್ರತ್ಯಯ, ಛಾಂದಸವಾಗಿ ಅಕಾರಲೋಪ. ಸಮಾಸವೂ ಸ್ವರವೂ ಹಿಂದಿನಂತೆಯೇ.

**ಚ್ಯಾವಯನ್ತಿ—ಚ್ಯುಙ್ ಗತೌ**—ಣಿಚ್, **ಅಚೋಞ್ಣಿತಿ** (ಪಾ. ಸೂ. ೭-೧-೧೧೫) ಎಂದು ವೃದ್ಧಿ, ಉಕಾರಕ್ಕೆ ಔ. ಆವ್ ಆದೇಶ, ಪದವನ್ನು ಬಿಡಿಸುವಾಗ ಛಾಂದಸವಾಗಿ ಹ್ರಸ್ವ ಬರುತ್ತೆ. ॥೧೧॥

---

॥ ಸಂಹಿತಾಪಾಠಃ ॥

ಮರುತೋ ಯದ್ಧ ವೋ ಬಲಂ ಜನಾँ ಅಚುಚ್ಯವೀತನ ।
ಗಿರೀँರಚುಚ್ಯವೀತನ ॥ ೧೨ ॥

॥ ಪದಪಾಠಃ ॥

ಮರುತಃ । ಯತ್ । ಹ । ವಃ । ಬಲಂ । ಜನಾನ್ । ಅಚುಚ್ಯವೀತನ ।
ಗಿರೀನ್ । ಅಚುಚ್ಯವೀತನ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಮರುತೋ ಯದ್ಧ ಯಸ್ಮಾದೇವ ಕಾರಣಾದ್ವೋ ಯುಷ್ಮಾಕಂ ಬಲಮಸ್ತಿ ಅಸ್ಮಾದೇವ ಕಾರಣಾಜ್ಜನಾನ್ಪ್ರಾಣಿನೋಽಚುಚ್ಯವೀತನ । ಸ್ವಸ್ವವ್ಯಾಪಾರೇಷು ಪ್ರೇರಯತ । ತಥಾ ಗಿರೀನ್ಮೇಘಾನ್ ಅಚುಚ್ಯವೀತನ । ಪ್ರೇರಯತ ॥ ಮರುತಃ । ಆಮಂತ್ರಿತಾದ್ಯುದಾತ್ತತ್ವಂ । ಅಚುಚ್ಯವೀತನ । ಚ್ಯವತೇರ್ಲುಙಿ ವ್ಯತ್ಯಯೇನ ಪರಸ್ಮೈಪದಂ । ತಪ್ತನಪ್ತನಥನಾಶ್ಚೇತಿ ತಸ್ಯ ತನಬಾದೇಶಃ । ಬಹುಲಂ ಛಂದಸೀತಿ ತಪಃ ಶ್ಲುಃ । ಬಹುಲಂ ಛಂದಸಿ । ಪಾ- ೭-೩-೯೭ । ಇತೀಡಾಗಮಃ । ಗುಣಾವಾದೇಶೌ । ತಿಙ್ಙತಿಙ ಇತಿ ನಿಘಾತಃ । ಗಿರೀನ್ । ದೀರ್ಘಾದಟಿ ಸಮಾನಪಾದ ಇತಿ ಸಂಹಿತಾಯಾಂ ನಕಾರಸ್ಯ ರುತ್ವಂ । ಅತ್ರಾನುನಾಸಿಕ ಇತೀಕಾರಸ್ಯಾನುನಾಸಿಕಃ ॥

॥ ಪ್ರತಿಪದಾರ್ಥ ॥

**ಮರುತಃ**—ಎಲೈ ಮರುತ್ತುಗಳೇ । **ಯದ್ಧ**—ಯಾವ (ಸ್ವಾಭಾವಿಕವಾದ) ಕಾರಣದಿಂದಲೇ । **ವಃ**—ನಿಮಗೆ । **ಬಲಂ**—ಶಕ್ತಿಯು (ಇದೆಯೋ) ಆ ಕಾರಣದಿಂದಲೇ । **ಜನಾँ**—ಪ್ರಾಣಿಗಳನ್ನು । **ಅಚುಚ್ಯವೀತನ**—(ತಮ್ಮ ತಮ್ಮ ವ್ಯವಹಾರಗಳನ್ನು ನಡೆಸುವಂತೆ) ಪ್ರೇರಿಸಿ । **ಗಿರೀँ**—ಮೇಘಗಳನ್ನು । **ಅಚುಚ್ಯವೀತನ**—(ಮಳೆ ಸುರಿಸಿ ಲೋಕಕ್ಕೆ ನೀರುಕೊಡುವ ತಮ್ಮ ಕೆಲಸಗಳನ್ನು ಮಾಡುವಂತೆ) ಪ್ರೇರಿಸಿ ।

॥ ಭಾವಾರ್ಥ ॥

ಎಲೈ ಮರುತ್ತುಗಳೇ, ಲೋಕದಲ್ಲಿ ಚೇತನಾಚೇತನಗಳಾದ ಸಕಲ ವಸ್ತುಗಳ ವ್ಯವಹಾರಗಳೂ ನಿಮ್ಮ ಪ್ರೇರಣೆಯಿಂದಲೇ ನಡೆಯಬೇಕು. ನಿಮಗೆ ಸಕಲ ಲೋಕವನ್ನೂ ಚೇತನಗೊಳಿಸುವ ಸ್ವಾಭಾವಿಕವಾದ ಶಕ್ತಿಯಿದೆ.

ಆಶಕ್ತಿಯಿರುವುದರಿಂದಲೇ ನೀವು ಎಲ್ಲ ಪ್ರಾಣಿಗಳನ್ನೂ ತಮ್ಮ ತಮ್ಮ ಸ್ವರೂಪಕ್ಕೆ ತಕ್ಕ ವ್ಯವಹಾರಗಳನ್ನು ಮಾಡುವಂತೆಯೂ ಮೋಡಗಳನ್ನು ಸಕಲ ಜೀವನಾಧಾರವಾದ ಮಳೆಯನ್ನು ಸುರಿಸಿ ಲೋಕಕ್ಕೆ ಕ್ಷೇಮವನ್ನುಂಟುಮಾಡುವಂತೆಯೂ ಪ್ರೇರಿಸಿರಿ.

## English Translation

Maruts, you have vigour and therefore invigorate mankind and make the clouds to rain.

### ವಿಶೇಷ ವಿಷಯಗಳು ।

**ಘ**—ಇಲ್ಲಿ ಘಶಬ್ದವು ಏವಾರ್ಥವನ್ನು ಸೂಚಿಸುವುದು. ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ಘಕಾರವು ದೀರ್ಘವಾಗಿರುವುದು.

**ಅಚುಚ್ಯವೀತನ—ಸ್ವಸ್ವವ್ಯಾಪಾರೇಷು ಪ್ರೇರಯತ ।** ಜನರನ್ನೂ ಮೇಘಾದಿಗಳನ್ನೂ ಅವರವರ ವ್ಯಾಪಾರಗಳಲ್ಲಿ ಪ್ರವರ್ತಿಸುವಂತೆ ಪ್ರೇರಿಸಿರಿ.

**ಗಿರೀನ್-ಮೇಘಾನ್ ।** ಅದ್ರಿಃ ಗ್ರಾವಾ ಮೊದಲಾದ ಮೂವತ್ತು ಮೇಘನಾಮಗಳ ಮಧ್ಯದಲ್ಲಿ ಗಿರಿ ಶಬ್ದವು ಪಠಿತವಾಗಿರುವುದರಿಂದ ಗಿರೀನ್ ಎಂದರೆ ಮೇಘಗಳನ್ನು ಎಂದರ್ಥವು.

### ॥ ವ್ಯಾಕರಣಪ್ರಕ್ರಿಯಾ ॥

**ಮರುತಃ—ಮೃಗ್ರೋರುತಿಃ** ಎಂದು ಉತಿ ಪ್ರತ್ಯಯ. **ಆಮನ್ತ್ರಿತಸ್ಯ ಚ** ಎಂಬ ಆರನೇ ಅಧ್ಯಾಯದ ಸೂತ್ರದಿಂದ ಆದ್ಯುದಾತ್ತ.

**ಅಚುಚ್ಯವೀತನ—**ಚ್ಯುಙ್ ಗತೌ ೧ನೇ ಗಣ. ಙಿತ್, **ಅನುದಾತ್ತಙಿತ ಆತ್ಮನೇಪದಂ** (ಪಾ. ಸೂ. ೧-೩-೧೨) ಎಂದು ಆತ್ಮನೇಪದ ಬರಬೇಕು. ಇದಕ್ಕೆ ಬದಲಾಗಿ ಪರಸ್ಮೈಪದ ಬಂದಿದೆ, ಲಙ್, ಮಧ್ಯಮ ಪುರುಷ ಬಹುವಚನ ಥ. ಆದಕ್ಕೆ **ತಸ್ಥಸ್ಥಮಿಪಾಂ—,** ಎಂದು ತ ಆದೇಶ, **ತಪ್ತನಪ್ತನಥನಾಶ್ಚ** (ಪಾ. ಸೂ. ೭-೧-೪೫) ತಗೆ ಈ ಆದೇಶಗಳು ಬರುವುವು ಎಂದು ತನಪ್ ಆದೇಶ. **ಬಹುಲಂ ಛಂದಸಿ** (ಪಾ. ಸೂ ೨-೪-೭೬) ಎಂದು ಶಪ್‌ಗೆ ಶ್ಲು. **ಶ್ಲೌ** ಎಂದು ದ್ವಿತ್ವ. ಚ್ಯು-ಚ್ಯು+ತನ, **ಹಲಾದಿಃ ಶೇಷಃ** ಎಂದು ಮೊದಲನೇ ಯಕಾರಕ್ಕೆ ಲೋಪ. **ಬಹುಲಂ ಛಂದಸಿ** (ಪಾ. ಸೂ. ೭-೩-೯೭) ಎಂದು ತನ ಎಂಬುದಕ್ಕೆ ಆದ್ಯವಯವವಾಗಿ ಈಡಾಗಮ, ಚುಚ್ಯು+ಈತನ, ಅಡಾಗಮ, ಗುಣ, ಅವ್ ಆದೇಶ. ಸರ್ವಾನುದಾತ್ತ ಬರುತ್ತೆ.

**ಗಿರೀನ್—ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ಒಂದೇ ಪಾದದಲ್ಲಿ ದೀರ್ಘವೂ ಅಟ್ಟೂ ಇದ್ದರೆ ಅಟ್‌ನ ಹಿಂದೆ ಇರುವುದೂ ದೀರ್ಘದ ಮುಂದೆ ಇರುವುದೂ ಆದ ನ್‌ಗೆ ಸಂಹಿತಾಕಾಲದಲ್ಲಿ ರು ಆದೇಶ.

ಬರುತ್ತೆ ಎಂದು ರು ಆದೇಶ. **ಅತ್ರಾನುನಾಸಿಕಃ ಪೂರ್ವಸ್ಯತುವಾ** ಎಂದು ರುವಿನ ಹಿಂದೆ ಇರುವುದಕ್ಕೆ ಅನುನಾಸಿಕ. ॥೧೨॥

---

ಸಂಹಿತಾಪಾಠಃ

ಯದ್ಧ ಯಾನ್ತಿ ಮರುತಃ ಸಂ ಹ ಬ್ರುವತೇಽಧ್ವನ್ನಾ ।
ಶೃಣೋತಿ ಕಶ್ಚಿದೇಷಾಂ ॥೧೩॥

ಪದಪಾಠಃ

ಯತ್ । ಹ । ಯಾನ್ತಿ । ಮರುತಃ । ಸಂ । ಹ । ಬ್ರುವತೇ । ಅಧ್ವನ್ । ಆ ।
ಶೃಣೋತಿ । ಕಃ । ಚಿತ್ । ಏಷಾಂ ॥ ೧೩ ॥

ಸಾಯಣಭಾಷ್ಯಂ

ಯದ್ಧ ಯದಾ ಖಲು ಮರುತೋ ಯಾಂತಿ ಗಚ್ಛಂತಿ ತದಾನೀಮಧ್ವನ್ನಾ ಮಾರ್ಗೇ ಸರ್ವತಃ ಸಂ ಬ್ರುವತೇ ಹ । ಸಂಭೂಯ ಧ್ವನಿಮವಶ್ಯಂ ಕುರ್ವಂತಿ । ಏಷಾಂ ಮರುತಾಂ ಸಂಬಂಧಿನಂ ಶಬ್ದಂ ಕಶ್ಚಿತ್ ಯಃ ಕೋಽಪಿ ಶೃಣೋತಿ ॥ ಯಾಂತಿ । ಯಾ ಪ್ರಾಪಣೇ । ಅದಾದಿತ್ವಾಚ್ಛಪೋ ಲುಕ್ । ಝೋಽಂತ ಇತ್ಯಂತಾದೇಶಸ್ಯೋಪದೇಶಿವದ್ಭಾವಾದಂತೀತ್ಯೇತದಾದ್ಯುದಾತ್ತತ್ವಂ । ಧಾತುನಾ ಸಹೈಕಾದೇಶ ಏಕಾದೇಶಸ್ವರಃ । ಯದ್ವೃತ್ತಯೋಗಾದನಿಘಾತಃ । ಬ್ರುವತೇ । ಬ್ರೂಞ್ ವ್ಯಕ್ತಾಯಾಂ ವಾಚಿ । ಝಸ್ಯಾದಾದೇಶೇ ಕೃತೇ ಪರತ್ವಾತ್ಪ್ರಾಪ್ತಸ್ಯ ಗುಣಸ್ಯ ಙಿತ್ತ್ವೇನ ಬಾಧಿತತ್ವಾದುವಙಾದೇಶಃ । ಅಧ್ವನ್ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ಶೃಣೋತಿ । ತಿಪಃ ಪಿತ್ತ್ವಾದನುದಾತ್ತತ್ವೇ ವಿಕರಣಸ್ವರಃ ॥

ಪ್ರತಿಪದಾರ್ಥ

**ಯದ್ಧ**—ಯಾವ ಯಾವಾಗ ಅಥವಾ ಎಲ್ಲೆಲ್ಲಿ । **ಮರುತಃ**—ಮರುತ್ತುಗಳು । **ಯಾಂತಿ**—ಸಂಚಾರ ಮಾಡುತ್ತಾರೆಯೋ (ಆಗೆಲ್ಲ) । **ಅಧ್ವನ್ ಆ**—ದಾರಿಯಲ್ಲಿ ಸುತ್ತಲೂ । **ಸಂಬ್ರುವತೇ ಹ**—ಸೇರಿಕೊಂಡು ಚೆನ್ನಾಗಿ

ಶಬ್ದಮಾಡುತ್ತಾರೆ. | **ಏಷಾಂ**—ಈ ಮರುತ್ತುಗಳ (ಶಬ್ದವನ್ನು) | **ಕಶ್ಚಿತ್**—ಪ್ರತಿಯೊಬ್ಬನೂ (ಎಂದರೆ ಎಲ್ಲರೂ) | **ಶೃಣೋತಿ**—(ಅವಶ್ಯವಾಗಿ) ಕೇಳುತ್ತಾನೆ.

ಭಾವಾರ್ಥ

ಲೋಕಚೇತನಕಾರಿಗಳಾದ ಮರುತ್ತುಗಳು ಸಂಚಾರಮಾಡುವ ಸ್ಥಳಗಳಲ್ಲೆಲ್ಲ ಶಬ್ದಮಾಡಿಕೊಂಡೇ ಸಂಚರಿಸುತ್ತವೆ. ಅವು ಲೋಕವನ್ನೆಲ್ಲ ಸಂಚರಿಸುವುದರಿಂದ ಎಲ್ಲಾ ಕಡೆಯಲ್ಲಿರತಕ್ಕ ಜನಗಳೂ ಅವುಗಳ ಶಬ್ದವನ್ನು ಕೇಳುತ್ತಾರೆ.

English Translation

Wherever the Maruts pass they make great noises in their way; every one hears their noise.

|| ವಿಶೇಷ ವಿಷಯಗಳು ||

ಗಾಳಿಯು ಮಹಾ ಆರ್ಭಟದಿಂದ ಬೀಸುತ್ತಿರುವಾಗ ಅದರ ಶಬ್ದವನ್ನು ಪ್ರತಿಯೊಬ್ಬನೂ ಕೇಳಿಯೇ ಕೇಳುವನು ಎಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ಯಾನ್ತಿ**—ಯಾ ಪ್ರಾಪಣೇ, ಲಟ್, ಝಿ, **ಝೋಽನ್ತಃ** (ಪಾ. ಸೂ. ೭-೧-೩) ಪ್ರತ್ಯಯದ ಅವಯವವಾದ ಝ್‌ಗೆ ಅನ್ತ್ ಆದೇಶ ಬರುತ್ತೆ ಎಂದು ಝ್‌ಗೆ ಅನ್ತ್ ಆದೇಶ, ಈ ಆದೇಶವು ಅಂಗಾಧಿಕಾರದಲ್ಲಿ ವಿಧಿಸಿರುವುದು. ಆದ್ದರಿಂದ ಪ್ರಕೃತಿಪ್ರತ್ಯಯ ಸಾಪೇಕ್ಷವಾಗುವ ಕಾರಣ ಬಹಿರಂಗ. **ಆದ್ಯುದಾತ್ತಶ್ಚ** ಎಂಬುದು ಪ್ರಕೃತಿಯನ್ನು ಅಪೇಕ್ಷಿಸುವುದಿಲ್ಲವಾದ್ದರಿಂದ ಅಂತರಗ, ಏವಂಚ ಅಂತಾದೇಶ ಬರುವುದಕ್ಕೆ ಮುಂಚೆಯೇ ಪ್ರತ್ಯಯಾದ್ಯುದಾತ್ತವು ಬರಬೇಕಾಗುತ್ತೆ. ಆದರೂ **ಆಯನ್ನಾದಿಷೂಪದೇಶವದ್ವಚನಂ ಸ್ವರಸಿದ್ಧ್ಯರ್ಥಂ** ಎಂಬಂತೆ ಅನ್ತ್ ಆದೇಶವೂ ಉಪದೇಶಾವಸ್ಥೆಯಲ್ಲಿಯೇ ಬರುತ್ತೆ. ಅನ್ತ್ ಎಂಬುದು ಪ್ರತ್ಯಯಸ್ವರದಿಂದ ಆದ್ಯುದಾತ್ತ. ಅದಾದಿಯಾದ್ದರಿಂದ ಶಪ್‌ಗೆ ಲುಕ್. ಯಾ+ಅನ್ತಿ, ಸವರ್ಣದೀರ್ಘ, **ಏಕಾದೇಶ ಉದಾತ್ತೇನ** ಎಂದು ಏಕಾದೇಶ ಉದಾತ್ತ.

**ಬ್ರುವತೇ**—ಬ್ರೂಞ್ ವ್ಯಕ್ತಾಯಾಂ ವಾಚಿ, ಲಟ್, ಝ, ಅದಾದಿಯಾದ್ದರಿಂದ ಶಪ್‌ಗೆ ಲುಕ್, **ಆತ್ಮನೇಪದೇಷ್ವನತಃ** ಎಂದು ಝ್‌ಗೆ ಅತ್ ಆದೇಶ, ಟಿಗೆ ಏತ್ವ, ಬ್ರೂ+ಅತೇ, **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂದು ಗುಣಕ್ಕೂ **ಅಚಿಶ್ನುಧಾತು ಭ್ರುವಾಂ ಯ್ವೋರಿಯಙುವಙೌ** (ಪಾ. ಸೂ. ೬-೪-೭೭) ಎಂದು ಉವಙಿಗೂ ಯುಗಪತ್ ಪ್ರಾಪ್ತಿ ಬಂದರೆ **ವಿಪ್ರತಿಷೇಧೇಪರಂ ಕಾರ್ಯಂ** (ಪಾ. ಸೂ. ೧-೪-೨) ಎಂದು ಪರವಾದ ಗುಣವೇ ಬರಬೇಕಾಗುತ್ತೆ. ಝ ವು **ಸಾರ್ವಧಾತುಕಮಪಿತ್** (ಪಾ. ಸೂ.

೧-೨-೪) ಎಂದು ಙಿತ್. ಕ್ಙಿತಿ ಚ (ಪಾ. ಸೂ. ೧-೧-೫) ಎಂದು ಗುಣಕ್ಕೆ ನಿಷೇಧ ಬರುತ್ತೆ. ಆದಕಾರಣ ಉವಙ್ ಆದೇಶವೇ ಬರುತ್ತೆ.

**ಅಧ್ವನ್—ಸುಪಾಂಸುಲುಕ್—**, ಎಂದು ಸಪ್ತಮಿಗೆ ಲುಕ್.

**ಶೃಣೋತಿ**—ಶ್ರು ಶ್ರವಣೇ, ತಿಪ್, **ಶ್ರುವಃ ಶೃ ಚ** (ಪಾ. ಸೂ. ೩-೧-೭೪) ಎಂದು ಶೃ ಆದೇಶವೂ ಶ್ನು ವಿಕರಣವೂ ಬರುತ್ತೆ. ಗುಣ-ಣತ್ವ, ತಿಪ್ ಪಿತ್ತಾದ್ದರಿಂದ ಅನುದಾತ್ತ, ವಿಕರಣಸ್ವರವೇ ನಿಲ್ಲುತ್ತೆ. ॥೧೩॥



॥ ಸಂಹಿತಾಪಾಠಃ ॥

ಪ್ರ ಯಾ॒ತ ಶೀಭ॑ಮಾ॒ಶುಭಿ॑ಃ ಸನ್ತಿ॒ ಕಣ್ವೇ॑ಷು ವೋ॒ ದುವ॑ಃ ।

ತತ್ರೋ॒ ಷು ಮಾ॑ದಯಾಧ್ವೈ ॥೧೪॥

॥ ಪದಪಾಠಃ ॥

ಪ್ರ । ಯಾ॒ತ । ಶೀಭ॑ಂ । ಆ॒ಶುಽಭಿ॑ಃ । ಸನ್ತಿ॒ । ಕಣ್ವೇ॑ಷು । ವ॒ಃ । ದುವ॑ಃ ।

ತ॒ತ್ರೋ ಇತಿ॑ । ಸು । ಮಾ॒ದ॒ಯಾ॒ಧ್ವೈ॒ ॥ ೧೪ ॥

ಸಾಯಣಭಾಷ್ಯಂ

ಹೇ ಮರುತ ಆಶುಭಿರ್ವೇಗವದ್ಭಿಃ ಸ್ವಕೀಯೈರ್ವಾಹನೈಃ ಶೀಭಂ ಶೀಘ್ರಂ ಶೀಭಂ ತೃಪು ತೂಯಮಿತಿ ಕ್ಷಿಪ್ರನಾಮಸು ಪಾಠಾತ್ । ಪ್ರಯಾತ । ಪ್ರಕರ್ಷೇಣ ಕರ್ಮಭೂಮಿಂ ಗಚ್ಛತ । ಕಣ್ವೇಷು ಮೇಧಾವಿಷ್ವಸ್ಮಾಸು ವೋ ಯುಷ್ಮಾಕಂ ದುವೋ ದುವಾಂಸಿ ಪರಿಚರಣಾನಿ ಸಂತಿ । ತತ್ರೋ ಷು ತೇಷ್ವೇವ ಪರಿಚಾರಕೇಷು ಕಣ್ವೇಷು ಮಾಧಯಾಧ್ವೈ । ತೃಪ್ತಾ ಭವತ ॥ ಆಶುಭಿಃ । ಅಶೂ ವ್ಯಾಪ್ತೌ । ಕೃವಾಪಾಜೀತ್ಯಾದಿನಾ ಉಣ್ । ಪ್ರತ್ಯಯಸ್ವರಃ । ಸಂತಿ । ಶ್ನಸೋರಲ್ಲೋಪ ಇತ್ಯಾಕಾರಲೋಪಃ ।

**ಮಾದಯಾಧ್ವೈ । ಮದ ತೃಪ್ತಿಯೋಗೇ । ಚುರಾದಿಃ । ಆಕುಸ್ಮೀಯ ಆತ್ಮನೇಪದೀ । ಲೇಟ್ಯಾಡಾಗಮಃ ಟೇರೇತ್ವಂ । ವೈತೋಽನ್ಯತ್ರ । ಪಾ. ೩-೪-೯೬ । ಇತ್ಯೇಕಾರಸ್ಯೈಕಾರಾದೇಶಃ ॥**

ಪ್ರತಿಪದಾರ್ಥ

**ಆಶುಭಿಃ**—ಎಲೈ ಮರತ್ತುಗಳೇ, ವೇಗವಾದ ಗಮನವುಳ್ಳ ನಿಮ್ಮ ವಾಹನಗಳಿಂದ । **ಶೀಭಂ**—ಜಾಗ್ರತೆಯಾಗಿ । **ಪ್ರಯಾತ**—ಯಜ್ಞಭೂಮಿಗೆ ಸರಿಯಾಗಿ ಬನ್ನಿ । **ಕಣ್ವೇಷು**—ಮೇಧಾವಿಗಳಾದ ಯಜ್ಞಕರ್ತರಲ್ಲಿ । **ವಃ** — ನಿಮಗೆ (ಸೇರಲ್ಪಡುವ) । **ದುವಃ**— ಪೂಜಾದಿಸಾಮಗ್ರಿಗಳು । **ಸಂತಿ**— (ಸಿದ್ಧವಾಗಿ ಇವೆ. । **ತತ್ರೋಷು**— ಆ ಯಜ್ಞಕರ್ತರಲ್ಲೇನೆ, (ಅವರ ವಿಷಯದಲ್ಲಿ) । **ಮಾದಯಾಧ್ವೈ**— ಸಂತೃಪ್ತರಾಗಿರಿ. ।

ಭಾವಾರ್ಥ

ಎಲೈ ಮರುತ್ತುಗಳೇ, ಲೋಕವ್ಯವಹಾರಗಳೆಲ್ಲ ನಿಮ್ಮ ಪ್ರೇರಣೆಯಿಂದಲೇ ನಡೆಯಬೇಕಾದುದರಿಂದ ನೀವು ಯಾವಾಗಲೂ ತೃಪ್ತಿಯಿಂದಿರಬೇಕು. ನಿಮ್ಮ ಸಂತೃಪ್ತಿಗೋಸ್ಕರವಾಗಿ ಮೇಧಾವಿಗಳಾದ ಯಜ್ಞಕರ್ತರು ನಿಮ ಭಾಗಕ್ಕೆ ಸೇರಬೇಕಾದ ಪೂಜಾದಿಸಾಮಗ್ರಿಗಳನ್ನಿಟ್ಟುಕೊಂಡು ಸಿದ್ಧವಾಗಿ ಕಾದಿದ್ದಾರೆ. ವೇಗವಾಗಿ ಸಂಚರಿಸುವ ನಿಮ್ಮ ವಾಹನಗಳಿಂದ ಯಜ್ಞಭೂಮಿಗೆ ದಯಮಾಡಿ ನಿಮ್ಮ ಪೂಜಾದಿಗಳನ್ನು ಸ್ವೀಕರಿಸಿ ಯಜ್ಞಕರ್ತರಲ್ಲಿ ನಿಮ್ಮ ಂತೃಪ್ತಿಯನ್ನು ತೋರಿಸಿ

English Translation

O Maruts, come quickly with your swift moving ( vehicles ), the Kanwas have prepared the offerings ; be pleased with them.

ವಿಶೇಷ ವಿಷಯಗಳು

**ಆಶುಭಿಃ— ಅಶೂ ವ್ಯಾಪ್ತೌ । ವೇಗವದ್ಭಿಃ ಸ್ವಕೀಯೈರ್ವಾಹನೈಃ** ವೇಗವಾಗಿ ಸಂಚರಿಸಬಲ್ಲ ನಿಮ್ಮ ವಾಹನಗಳಿಂದ

**ಶೀಭಂ— ಶೀಘ್ರಂ ।** ನು ಮೊದಲಾದ ಇಪ್ಪತ್ತಾರು ಕ್ಷಿಪ್ರನಾಮಗಳ ಮಧ್ಯದಲ್ಲಿ ಶೀಭಂ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೨-೯) ಶೀಭಂ ಎಂದರೆ ಶೀಘ್ರವಾಗಿ, ಬೇಗನೆ ಎಂದರ್ಥವು.

**ಮಾದಯಾಧ್ವೈ— ಮದ ತೃಪ್ತಿಯೋಗೇ ।** ತೃಪ್ತಿಯನ್ನು ಹೊಂದಿ

॥ ವ್ಯಾಕರಣಪ್ರಕ್ರಿಯಾ ॥

**ಆಶುಭಿಃ**—ಅಶೂ ವ್ಯಾಪ್ತೌ, **ಕೃವಾಪಾಜಿ ಮಿಸ್ವದಿ ಸಾಧ್ಯಶೂಭ್ಯ ಉಣ್** (ಉ. ಸೂ. ೧ ೧) ಎಂದು ಉಣ್ ಪ್ರತ್ಯಯ. **ಆದ್ಯುದಾತ್ತಶ್ಚ** ಎಂದು ಪ್ರತ್ಯಯ ಆದ್ಯುದಾತ್ತ.

**ಸನ್ತಿ**—ಅಸ ಭುವಿ, ಝಿ, ಅನ್ತ್ ಆದೇಶ, ಶಪ್‌ಗೆ ಲುಕ್, ಅಸ್+ಅನ್ತಿ, **ಶ್ನಸೋರಲ್ಲೋಪಃ**(ಪಾ ಸೂ. ೬-೪-೧೧೧) ಕಿತ್ ವಾ ಙಿತ್ ಆದ ಸಾರ್ವಧಾತುಕ ಪರದಲ್ಲಿದ್ದರೆ ಶ್ನ-ಅಸ್ ಇವುಗಳ ಅಕಾರಕ್ಕೆ ಲೋಪ ಬರುತ್ತೆ ಎಂದು ಅಕಾರಕ್ಕೆ ಲೋಪ.

**ಮಾದಯಾಧ್ವೈ**—ಮದ ತೃಪ್ತಿಯೋಗೇ, ೧೦ ನೇ ಗಣ, ಈ ಗಣದಲ್ಲಿ 'ಚಿತ ಸಂಕೇತನೇ' ಎಂಬ ಧಾತುವಿನಿಂದ "ಕುಸ್ಮನಾಮ್ನೋವಾ" ಪರ್ಯಂತ ಇರುವ ಧಾತುಗಳಿಗೆ ಆಕುಸ್ಮೀಯ ಎನ್ನುವರು ಈ ಗಣದ ಧಾತುಗಳ ಮುಂದೆ ಫಲವು ಕರ್ತೃವಿಗೆ ಸೇರದಿದ್ದರೂ ಆತ್ಮನೇಪದ ಬರುತ್ತೆ. ಲೇಟ್, ಆಟ್ ಆಗಮ, ಮಧ್ಯಮ ಪುರುಷ ಬಹುವಚನ ಧ್ವಮ್, ಟಿಗೆ ಏತ್ವ, ಮದ್+ಇ+ಆಧ್ವೇ ಉಪಧಾವೃದ್ಧಿ, ಗುಣ, ಆಯಾದೇಶ ಮಾದಯ್+ ಆಧ್ವೇ. **ವೈತೋನ್ಯತ್ರ** (ಪಾ. ಸೂ. ೩-೪-೯೬) "ಆತಐ" ಎಂಬ ಸೂತ್ರಕ್ಕೆ ವಿಷಯವಾದುದನ್ನು ಬಿಟ್ಟು ಲೇಟ್ಟಿನ ಏಗೆ ವಿಕಲ್ಪವಾಗಿ ಐ ಆದೇಶ ಬರುತ್ತೆ ಎಂದು ಏಗೆ ಐ ಆದೇಶ. ಮಾದಯಾಧ್ವೈ ಎಂದು ಆಗುತ್ತದೆ. ॥೧೪॥



॥ ಸಂಹಿತಾಪಾಠಃ ॥

ಅಸ್ತಿ ಹಿ ಷ್ಮಾ ಮದಾಯ ವಃ ಸ್ಮಸಿ ಷ್ಮಾ ವಯಮೇಷಾಂ।
ವಿಶ್ವಂ ಚಿದಾಯುರ್ಜೀವಸೇ ॥೧೫॥

ಪದಪಾಠಃ

ಅಸ್ತಿ । ಹಿ । ಸ್ಮ । ಮದಾಯ । ವಃ । ಸ್ಮಸಿ । ಸ್ಮ । ವಯಂ । ಏಷಾಂ ।
ವಿಶ್ವಂ । ಚಿತ್ । ಆಯುಃ । ಜೀವಸೇ ॥೧೫॥

॥ ಸಾಯಣಭಾಷ್ಯಂ ॥

ಹೇ ಮರುತೋ ವೋ ಯುಷ್ಮಾಕಂ ಮದಾಯ ತೃಪ್ತ್ಯಯೇಽಸ್ತಿ ಹಿ ಷ್ಮ। ಅಸ್ಮಾಭಿಃ ಪ್ರಯುಜ್ಯಮಾನಂ ಹವಿರ್ವೋ ವಿದ್ಯತೇ ಖಲು। ಏಷಾಂ ಯುಷ್ಮಾಕಂ ಭೃತ್ಯಭೂತಾ ವಯಂ ಸ್ಮಸಿ ಷ್ಮ। ವಿದ್ಯಾಮಹೇ ಖಲು। ಜೀವಸೇ ಜೀವಿತುಂ ವಿಶ್ವಂ ಚಿದಾಯುಃ ಸರ್ವಮಪ್ಯಾಯುಃ ಪ್ರಯಚ್ಛತೇತಿ ಶೇಷಃ॥

**ಸ್ಮ । ನಿಪಾತಸ್ಯ ಚೇತಿ ಸಂಹಿತಾಯಾಂ ದೀರ್ಘಃ । ಸ್ಮಸಿ । ಇದಂತೋ ಮಸಿಃ । ಜೀವಸೇ । ತುಮರ್ಥೇ ಸೇಸೇನಿತ್ಯಸೇಪ್ರತ್ಯಯಃ ॥ ೧೪ ॥**

॥ ಪ್ರತಿಪದಾರ್ಥ ॥

**ವಃ**— (ಎಲೈ ಮರುತ್ತುಗಳೇ) ನಿಮ್ಮ । **ಮದಾಯ**— ಸಂತೃಪ್ತಿಗೋಸ್ಕರ । **ಅಸ್ತಿ ಹಿಷ್ಮ**—(ನಾವು ಸಂಪಾದಿಸಿದ ಹವಿಸ್ಸು) ಸಿದ್ಧವಾಗಿಯೇ ಇದೆ. । **ವಿಷಾಂ**— ನಿಮ್ಮ (ಭಕ್ತರಾಗಿ) । **ವಯಂ**— ನಾವು । **ಸ್ಮ ಸಿಷ್ಮ**— ಸಿದ್ಧವಾಗಿಯೇ ಇದ್ದೇವೆ । **ಜೀವಸೇ**— ನಾವು ಇಲ್ಲಿ ಜೀವಿಸುವುದಕ್ಕೆ । **ವಿಶ್ವಂ ಚಿದಾಯುಃ**— ಸಂಪೂರ್ಣವಾದ ಆಯುಸ್ಸನ್ನು ಕೊಡಿ. ।

॥ ಭಾವಾರ್ಥ ॥

ಎಲೈ ಮರುತ್ತುಗಳೇ, ನಿಮ್ಮ ತೃಪ್ತಿಗಾಗಿ ನಾವು ಹವಿಸ್ಸನ್ನು ಸಂಪಾದಿಸಿ ಸಿದ್ಧವಾಗಿಯೇ ಇಟ್ಟಿದ್ದೇವೆ. ನಿಮ್ಮ ಭಕ್ತರಾಗಿ ನಿಮ್ಮ ಸೇವೆಗಾಗಿ ನಾವು ಯಾವಾಗಲೂ ಸಿದ್ಧರಾಗಿದ್ದೇವೆ. ನಿಮಗೆ ಶಾಶ್ವತವಾದ ತೃಪ್ತಿಕೊಡಲು ಸಹಾಯವಾಗುವಂತೆಯೂ, ನಾವು ದೀರ್ಘಕಾಲ ಜೀವಿಸಲು ಸಾಧ್ಯವಾಗುವಂತೆಯೂ ನಮಗೆ ಸಂಪೂರ್ಣವಾದ ಆಯುಸ್ಸನ್ನು ದಯಪಾಲಿಸಿ.

English Translation

The offering is prepared for your gratification· we are your worshippers; give us long life·

ವಿಶೇಷವಿಷಯಗಳು

**ಹಿ ಸ್ಮ**— ಪ್ರಸಿದ್ಧಾರ್ಥವನ್ನು ಸೂಚಿಸುವವು

**ಸ್ಮಸಿ— ವಿದ್ಯಾಮಹೇ** । ಇಚ್ಛಿಸುತ್ತೇವೆ ಎಂದರೆ ನಿಮ್ಮನ್ನು ಸ್ತುತಿಸುವುದಕ್ಕಾಗಿ ಸಿದ್ಧರಾಗಿರುತ್ತೇವೆ ಎಂದಭಿಪ್ರಾಯವು

**ವಿಶ್ವಂ ಚಿದಾಯುಃ**— ಸಮಸ್ತ ಆಯುಸ್ಸನ್ನು ಎಂದರೆ ಮನುಷ್ಯರಾದ ನಾವು ಜೀವಿಸಬಹುದಾದ ನೂರು ವರ್ಷಗಳ ಅಥವಾ ಅದಕ್ಕೂ ಹೆಚ್ಚಿನ ಆಯುಃಪರಿಮಿತಿಯನ್ನು ಅನುಗ್ರಹಿಸಿ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಸ್ಮ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಮಂತ್ರದಲ್ಲಿ ನಿಪಾತಕ್ಕೆ ದೀರ್ಘ ಬರುತ್ತೆ ಎಂದು ದೀರ್ಘ.

**ಸ್ಮಸಿ**—ಅಸ ಭುವಿ. ಮಸ್, **ಶ್ನಸೋರಲ್ಲೋಪಃ** ಎಂದು ಧಾತ್ವಕಾರಕ್ಕೆ ಲೋಪ. **ಇದನ್ತೋಮಸಿ**

(ಪಾ. ಸೂ. ೭-೧.೪೬) ಮುಸ್‌ಗೆ ಇಕ್ ಆಗಮ ಬರುತ್ತೆ ಎಂದು ನಿಷ್ಕೃಷ್ಟಾರ್ಥ, ಇದರಿಂದ ಇಕ್ ಆಗಮ ಬಂದರೆ ಸ್ಮಸಿ ಎಂದಾಗುತ್ತೆ.

**ಜೀವಸೇ**—ಜೀವ ಪ್ರಾಣಧಾರಣೇ, **ತುಮರ್ಥೇ ಸೇಸೇನ್**—, ಎಂದು ಅಸೇ ಪ್ರತ್ಯಯ. ||೧೫||

ಇಲ್ಲಿಗೆ ೩೭ನೇ ಸೂಕ್ತ ಪೂರ್ಣವು.



# ಮೂವತ್ತೆಂಟನೆಯ ಸೂಕ್ತವು

**ಕದ್ಧ ನೂನಮಿತಿ ಪಂಚದಶರ್ಚಂ ತೃತೀಯಂ ಸೂಕ್ತಂ । ಘೋರಪುತ್ರಃ ಕಣ್ವ ಋಷಿಃ । ಋಷಿಶ್ಚಾನ್ಯಸ್ಮಾದಿತಿ ಪರಿಭಾಷಿತತ್ವಾತ್ । ಪೂರ್ವಸೂಕ್ತೇ ಮಾರುತಂ ಹೀತ್ಯುಕ್ತತ್ವಾದಿದಮಪಿ ಮರುದ್ದೇವತಾಕಂ । ಗಾಯತ್ರಂ ತ್ವಿತ್ಯುಕ್ತತ್ವಾದ್ಗಾಯತ್ರೀಚ್ಛಂದಸ್ಕಂ । ಕದ್ಧೇತ್ಯನುಕ್ರಮಣಿಕಾ । ವಿನಿಯೋಗೋ ಲೈಂಗಿಕಃ ||**

ಅನುವಾದವು— **ಕದ್ಧ ನೂನಂ** ಎಂಬುದು ಈ ಎಂಟನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು ಇದರಲ್ಲಿ ಹದಿನೈದು ಋಕ್ಕುಗಳಿರುವವು. ಇದಕ್ಕೆ ಹಿಂದಿನ ಸೂಕ್ತಕ್ಕೆ ಋಷಿಯಾದ ಘೋರಪುತ್ರನಾದ ಕಣ್ವನೇ ಋಷಿಯು. ಮರುತ್ತುಗಳೇ ದೇವತೆಗಳು. ಗಾಯತ್ರೀಛಂದಸ್ಸು. ವಿನಿಯೋಗವು ಲೈಂಗಿಕವು ಎಂದರೆ ಅರ್ಥಾನುಸಾರವಾಗಿಯೂ ಸಮಯೋಚಿತವಾಗಿಯೂ ಇದರ ವಿನಿಯೋಗವಿರುವುದು.



॥ ಓಂ ॥

## ಸೂಕ್ತ—೩೮

॥ ಮಂಡಲ—೧ ॥ ಅನುವಾಕ—೮ ॥ ಸೂಕ್ತ—೩೮ ॥

॥ ಅಷ್ಟಕ— ೧ ॥ ಅಧ್ಯಾಯ— ೩ ॥ ವರ್ಗ—೧೫, ೧೬, ೧೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೧೫ ॥

॥ ಋಷಿಃ— ಕಣ್ವೋ ಘೌರಃ ॥

॥ ದೇವತಾ— ಮರುತಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಕದ್ಧ ನೂನಂ ಕಧಪ್ರಿಯಃ ಪಿತಾ ಪುತ್ರಂ ನ ಹಸ್ತಯೋಃ ।
ದಧಿಧ್ವೇ ವೃಕ್ತಬರ್ಹಿಷಃ ॥ ೧ ॥

॥ ಪದಪಾಠಃ ॥

ಕತ್ । ಹ । ನೂನಂ । ಕಧಽಪ್ರಿಯಃ । ಪಿತಾ । ಪುತ್ರಂ । ನ । ಹಸ್ತಯೋಃ ।
ದಧಿಧ್ವೇ । ವೃಕ್ತಽಬರ್ಹಿಷಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಕದ್ಧ ಕದಾ ಖಲು ನೂನಮವಶ್ಯಂ ಹಸ್ತಯೋರ್ದಧಿಧ್ವೇ । ಯೂಯಮಸ್ಮಾನ್ಹಸ್ತೇ ಧಾರಯಥ । ತತ್ರ ದೃಷ್ಟಾಂತಃ । ಪಿತಾ ಪುತ್ರಂ ನ ಹಸ್ತಯೋಃ । ಯಥಾ ಲೋಕೇ ಪಿತಾ ಹಸ್ತಯೋಃ ಸ್ವಕೀಯಂ ಪುತ್ರಂ ಧಾರಯತಿ ತದ್ವತ್ । ಕೀದೃಶಾ ಮರುತಃ । ಕಧಪ್ರಿಯಃ ಸ್ತುತಿಪ್ರೀತಾಃ ವೃಕ್ತಬರ್ಹಿಷಃ ವೃಕ್ತಂ ಛಿನ್ನಂ ಬರ್ಹಿರ್ದರ್ಭೋ ಯೇಷಾಂ ಮರುತಾಂ ಯಜಮಾನಾಯ ತೇ ಮರುತ-

**ಸ್ತಥಾವಿಧಾಃ || ಕತ್ | ಕದಾ | ದ್ಸ್ವೋ ಚಾಪರೌ ವರ್ಣವಿಕಾರನಾಶೌ | ಕಾ. ೬-೩-೧೦೯ | ಇತ್ಯುಕ್ತತ್ವಾ-ದಾಕಾರಲೋಪಃ | ಕಧಪ್ರಿಯಃ | ಕಥಾ ಸ್ತುತಿಃ | ತಯಾ ಪ್ರೀಣಂತೀತಿ ಕಧಪ್ರಿಯಃ | ಪ್ರೀಞ್ ಪ್ರೀತೌ | ಕ್ವಿಪ್ | ಪೂರ್ವಪದಸ್ಯ ಙ್ಯಾಪೋಃ ಸಂಜ್ಞಾಚ್ಛಂದಸೋರ್ಬಹುಲಂ | ಪಾ. ೬-೩-೬೩ | ಇತಿ ಹ್ರಸ್ವತ್ವಂ | ಧಕಾರಶ್ಛಾಂದಸಃ | ಆಮಂತ್ರಿತನಿಘಾತಃ | ದಧಿಧ್ವೇ | ದಧಾತೇಶ್ಛಂದಸಿ ಲುಙ್‌ಲಙ್‌ಲಿಟ ಇತಿ ವರ್ತಮಾನೇ ಲಿಟ್ | ಕ್ರಾದಿನಿಯಮಾದಿಟ್ | ಪ್ರತ್ಯಯಸ್ವರಃ | ವೃಕ್ತಬರ್ಹಿಷಃ | ಆಮಂತ್ರಿತ-ನಿಘಾತಃ ||**

ಪ್ರತಿಪದಾರ್ಥ

**ಕಧಪ್ರಿಯಃ**— ಸ್ತೋತ್ರಗಳಿಂದ ಸಂತುಷ್ಟರಾಗತಕ್ಕವರಾಗಿಯೂ, | **ವೃಕ್ತಬರ್ಹಿಷಃ**— (ನಿಮಗೋಸ್ಕರವಾಗಿ) ಪರಿಷ್ಕರಿಸಲ್ಪಟ್ಟ ದರ್ಭಾಸನಗಳುಳ್ಳವರಾಗಿಯೂ ಇರುವ ಮರುತ್ತುಗಳೇ, (ನೀವುಗಳು) | **ಪಿತಾ**-ತಂದೆಯು | **ಹಸ್ತಯೋಃ**— ತನ್ನ ಎರಡು ಕೈಗಳಿಂದಲೂ | **ಪುತ್ರಂ ನ**— (ಪ್ರೇಮದಿಂದ) ಮಗನನ್ನು ಹಿಡಿದೆತ್ತಿಕೊಳ್ಳುವಂತೆ | **ಕದ್ಧ**— ಯಾವಾಗತಾನೇ | **ನೂನಂ**— ಖಂಡಿತವಾಗಿಯೂ | **ದಧಿಧ್ವೇ**— (ಪ್ರೀತಿಯಿಂದ) ನಮ್ಮನ್ನು ನಿಮ್ಮ ಕೈಗಳಿಂದ ಹಿಡಿದೆತ್ತಿಕೊಳ್ಳುವಿರಿ. ?

|| ಭಾವಾರ್ಥ ||

ಎಲೈ ಮರುತ್ತುಗಳೇ, ನೀವು ಸ್ತೋತ್ರಗಳಿಂದ ಸಂತುಷ್ಟರಾಗತಕ್ಕವರು. ನಿಮಗೋಸ್ಕರವಾಗಿ ದರ್ಭಾಸನಗಳು ಸಿದ್ಧವಾಗಿವೆ. ತಂದೆಯಾದವನು ತನ್ನೆರಡು ಕೈಗಳಿಂದಲೂ ಮಗನನ್ನು ಪ್ರೇಮದಿಂದ ಹಿಡಿದೆತ್ತಿಕೊಳ್ಳುವಂತೆ ನೀವುಗಳು ಯಾವಾಗ ನಮ್ಮನ್ನು ನಿಮ್ಮ ಕೈಗಳಿಂದ ಹಿಡಿದೆತ್ತಿಕೊಂಡು ಅಭಿಮಾನವನ್ನು ತೋರಿಸುತ್ತೀರಿ !

English Translation

Maruts, who are fond of praise and for whom a seat of clipped kusa-grass is prepared, when will you take us in your arms as a father does his son ?

|| ವಿಶೇಷವಿಷಯಗಳು ||

**ಕತ್ ಹ— ಕದಾ |** ಯಾವಾಗ ?

**ಕಧಪ್ರಿಯಃ—ಸ್ತುತಿಪ್ರೀತಾಃ |** ಕಧ=ಕಥಾ=ಸ್ತುತಿ, ಸ್ತೋತ್ರಪ್ರಿಯರು. Who love to be praised.

**ವೃಕ್ತಬರ್ಹಿಷಃ**— ಕತ್ತರಿಸಿದ ಬರ್ಹಿ ಎಂಬ ದರ್ಭೆಗಳಿಂದ ಸಿದ್ಧಪಡಿಸಿದ ಆಸನ. ದೇವತೆಗಳು ಯಜ್ಞವೇದಿಕೆಯಲ್ಲಿ ಬಂದು ಕೂಡುವುದಕ್ಕಾಗಿ ದರ್ಭಾಸನವನ್ನು ಸಿದ್ಧಪಡಿಸುವುದು ರೂಢಿಯು.

**ಪಿತಾ ಪುತ್ರಂ ನ ಹಸ್ತಯೋಃ**— ತಂದೆಯಾದವನು ತನ್ನ ಪ್ರೀತಿಪಾತ್ರನಾದ ಪುತ್ರನನ್ನು ಆದರದಿಂದ ಕೈಗಳಿಂದ ಎತ್ತಿಕೊಳ್ಳುವಂತೆ.

ವ್ಯಾಕರಣಪ್ರಕ್ರಿಯಾ

**ಕತ್**—ಕದಾ ಎಂಬುದಕ್ಕೆ ಬದಲಾಗಿ ಈ ಶಬ್ದ ಬಂದಿದೆ.

**ದ್ವೌ ಚಾಪರೌ ವರ್ಣವಿಕಾರನಾಶೌ** (ಕಾಶಿ. ೬-೩-೧೦೯) ಒಂದು ಅಕ್ಷರ ಹೊಸದಾಗಿ ಸೇರುವುದು, ಇರುವ ಅಕ್ಷರಗಳು ಹಿಂದು ಮುಂದಾಗುವುದು ಇವುಗಳಲ್ಲದೆ ವರ್ಣಗಳಿಗೆ ವಿಕಾರ ಎಂದರೆ ಇರುವ ಅಕ್ಷರಕ್ಕೆ ಬದಲಾಗಿ ಮತ್ತೊಂದು ಅಕ್ಷರ ಬರುವಿಕೆ, ವರ್ಣನಾಶ ಎಂದರೆ ಇರುವ ಅಕ್ಷರಗಲ್ಲಿ ಒಂದನ್ನು ತಳ್ಳಿಬಿಡುವುದು ಈ ಎರಡು ಕಾರ್ಯ ಪೃಷೋದರಾದಿಯಲ್ಲಿರುವ ಶಬ್ದಗಳಿಗೆ ಬರುತ್ತೆ ಎಂದು ಕಾಶಿಕಾಗ್ರಂಥಕ್ಕೆ ಅರ್ಥ. ಇದರಿಂದ ಕದಾಶಬ್ದದ ಆಕಾರಕ್ಕೆ ಲೋಪ.

**ಕಥಪ್ರಿಯಃ**—ಕಥಾ ಎಂದರೆ ಸ್ತುತಿ, ಕಥಯಾ ಪ್ರೀಣನ್ತೀತಿ ಕಥಪ್ರಿಯಃ, ಪ್ರೀಞ್ ಪ್ರೀತೌ ಧಾತು ಮುಂದೆ ಕ್ವಿಪ್ ಪ್ರತ್ಯಯ. **ಙ್ಯಾಪೋಃ ಸಂಜ್ಞಾಛಂದಸೋರ್ಬಹುಲಮ್** (ಪಾ. ಸೂ. ೬-೩-೬೩) ಸಂಜ್ಞೆಯಲ್ಲಿ ಅಥವಾ ಛಂದಸ್ಸಿನಲ್ಲಿ ಉತ್ತರಪದ ಪರದಲ್ಲಿದ್ದರೆ ಙೀ ಆಪ್‌ಗಳಿಗೆ ಹ್ರಸ್ವ ಬರುತ್ತೆ ಎಂದು ಆಪ್‌ಗೆ ಹ್ರಸ್ವ. ಧಕಾರಕ್ಕೆ ಥಕಾರವು ಛಾಂದಸವಾಗಿ ಬರುತ್ತೆ. ಕಥಪ್ರೀಃ ಎಂದು ಏಕವಚನದಲ್ಲಿ ರೂಪ. ಆಮನ್ತ್ರಿತಾನುದಾತ್ತ.

**ದಧಿಧ್ವೇ**—ಡುಧಾಞ್ ಧಾರಣಪೋಷಣಯೋಃ, **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಧಾತ್ವರ್ಥಗಳಿಗೆ ಸಂಬಂಧ ತೋರುವಾಗ ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ಧಾತು ಮುಂದೆ ಲಿಟ್ ಬರುತ್ತೆ ಎಂದು ವರ್ತಮಾನಾರ್ಥದಲ್ಲಿ ಲಿಟ್. ಮಧ್ಯಮಪುರುಷ ಬಹುವಚನ ಧ್ವಮ್. ಟಿಗೆ ಏತ್ವ. **ಕೃ ಸೃ ಭೃ ವೃ ಸ್ತು ದ್ರು ಶ್ರುವೋಲಿಟಿ** (ಪಾ ಸೂ. ೭-೨-೧೩) ಕೃ-ಸೃ-ಭೃಗಳು ಅನುದಾತ್ತೋಪದೇಶಗಳು 'ಏಕಾಚ ಉಪದೇಶೇ—' ಎಂಬುದರಿಂದ ಇಟ್ಟಿಗೆ ನಿಷೇಧ ಸಿದ್ಧವಾಗುತ್ತೆ. ಇದು ಪ್ರಕೃತ್ಯಾಶ್ರಯವಾದ ಇಣ್ಣಿಷೇಧ, ವೃಧಾತ್ವ ಉದಾತ್ತ. ಇವರಲ್ಲಿ 'ಶ್ರ್ಯುಕಃ ಕಿತಿ' ಎಂದು ಇಣ್ಣಿಷೇಧ ಬರುತ್ತೆ. ಇದು ಪ್ರತ್ಯಯಾಶ್ರಯವಾದ ನಿಷೇಧ. ಹೀಗೆ ಇಣ್ಣಿಷೇಧಸಿದ್ಧವಾಗುವಾಗ **ಸಿದ್ಧೇಸತ್ಯಾರಭ್ಯಮಾಣೋ ವಿಧಿರ್ನಿಯಮಾಯ ಭವತಿ** ಎಂಬಂತೆ ಕೃಸೃಭೃವ ಗ್ರಹಣವು ನಿಯಾಮಕವಾಗುತ್ತೆ. ಲಿಟ್ಟಿನಲ್ಲಿ ಪ್ರಕೃತ್ಯಾಶ್ರಯ ಪ್ರತ್ಯಯಾಶ್ರಯವಾದ ಎಲ್ಲಾ ಇಣ್ಣಿಷೇಧಗಳೂ ಬರುವ ಪಕ್ಷಕ್ಕೆ ಕ್ರಾದಿ ನಾಲ್ಕು ಧಾತುಗಳಿಗೇ ಬರುತ್ತೆ. ಮಿಕ್ಕ ಧಾತುಗಳಲ್ಲಿ ಲಿಟ್ಟಿಗೆ ಇಣ್ಣಿಷೇಧ ಬರುವುದಿಲ್ಲ ಎಂಬುದೇ ನಿಯಮಾಕಾರ. ಇದನ್ನೇ ಕ್ರಾದಿನಿಯಮ ಎನ್ನುವರು. ಇದರಿಂದ ಕ್ರಾದಿಯಲ್ಲಿ ಸೇರದ ಧಾ-ದಾತು ಮುಂದಿರುವ ಲಿಟ್‌ಗೆ ಇಟ್ ಬರುತ್ತೆ, ಪ್ರತ್ಯಯಸ್ವರ.

**ವೃಕ್ತಬರ್ಹಿಷಃ**—ವೃಕ್ತಂ=ಕತ್ತರಿಸಲ್ಪಟ್ಟ, ಬರ್ಹಿಃ=ದರ್ಭೆಯು, ಯೇಷಾಂತೇ ಎಂದು ಬಹುವ್ರೀಹಿ. ಆಷ್ಟಮಿಕಸೂತ್ರದಿಂದ ಆಮನ್ತ್ರಿತಕ್ಕೆ ಅನುದಾತ್ತ ಬರುತ್ತೆ. ||೧||



॥ ಸಂಹಿತಾಪಾಠಃ ॥

ಕ್ವ ನೂನಂ ಕದ್ವೋ ಅರ್ಥಂ ಗನ್ತಾ ದಿವೋ ನ ಪೃಥಿವ್ಯಾಃ ।
ಕ್ವ ವೋ ಗಾವೋ ನ ರಣ್ಯನ್ತಿ ॥ ೨ ॥

॥ ಪದಪಾಠಃ ॥

ಕ್ವ । ನೂನಂ । ಕತ್ । ವಃ । ಅರ್ಥಂ । ಗನ್ತ । ದಿವಃ । ನ । ಪೃಥಿವ್ಯಾಃ ।
ಕ್ವ । ವಃ । ಗಾವಃ । ನ । ರಣ್ಯನ್ತಿ ॥ ೨ ॥

ಸಾಯಣಭಾಷ್ಯಂ

ಹೇ ಮರುತೋ ನೂನ ಮಿದಾನೀಂ ಕ್ವ । ಯೂಯಂ ಕುತ್ರ ಸ್ಥಿತಾಃ । ಕತ್ ಕದಾ ವೋ ಯುಷ್ಮಾಕಮರ್ಥಮರಣಂ ದೇವಯಜನದೇಶೇ ಗಮನಂ । ವಿಲಂಬಂ ಮಾ ಕುರುತೇತ್ಯರ್ಥಃ । ದಿವೋ ಗಂತ । ದ್ಯುಲೋಕಾದ್ಗಚ್ಛಥ । ಪೃಥಿವ್ಯಾ ನ ಗಂತ । ಭೂಲೋಕಾನ್ಮಾ ಗಚ್ಛತ । ವೋ ಯುಷ್ಮಾನ್ ಕ್ವ ರಣ್ಯಂತಿ । ದೇವಯಜನರೂಪಾಯಾಃ ಪೃಥಿವ್ಯಾ ಅನ್ಯತ್ರ ಕುತ್ರ ಶಬ್ದಯಂತಿ । ಯಜಮಾನಾಃ ಸ್ತುವಂತಿ । ತತ್ರ ದೃಷ್ಟಾಂತಃ । ಗಾವೋ ನ । ಯಥಾ ಗಾವೋ ರಣಂತಿ । ಶಬ್ದಯಂತಿ । ತದ್ವತ್ ॥ ಕ್ವ । ಕಿಂ ಶಬ್ದಾತ್ಸಪ್ತಮ್ಯಂತಾತ್ಕಿಮೋಽತ್ । ಪಾ. ೫-೩-೧೨ । ಇತ್ಯತ್ಪ್ರತ್ಯಯಃ । ಕ್ವಾತಿ । ಪಾ. ೭-೨-೧೦೫ । ಇತಿ ಕಿಮಃ ಕ್ವಾದೇಶಃ । ತಿತ್ಸ್ವರಿತ ಇತಿ ಸ್ವರಿತತ್ವಂ । ಅರ್ಥಂ । ಋು ಗತೌ । ಉಷಿಕುಷಿಗಾರ್ತಿಭ್ಯಃ ಸ್ಥನ್ । ಉ. ೨-೪ । ಇತಿ ಭಾವೇ ಥನ್ । ನಿತ್ತ್ವಾದಾದ್ಯುದಾತ್ತತ್ವಂ । ಗಂತ । ಗಮೇರ್ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಥಾದೇಶಸ್ಯ ತಸ್ಯ ತಪ್ತನಪ್ತನಥನಾಶ್ಚೇತಿ ತಬಾದೇಶಃ । ಅತ ಏವ ಙಿತ್ತ್ವಾಭಾವಾದನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪೋ ನ ಭವತಿ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘತ್ವಂ । ದಿವಃ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಪೃಥಿವ್ಯಾಃ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ । ರಣ್ಯಂತಿ । ರಣತಿಃ ಶಬ್ದಾರ್ಥಃ । ವ್ಯತ್ಯಯೇನ ಶ್ಯನ್ ॥

॥ ಪ್ರತಿಪದಾರ್ಥ ॥

(**ಹೇ ಮರುತಃ**— ಎಲೈ ಮರುತ್ತುಗಳೇ) । **ನೂನಂ**— ನಿಶ್ಚಯವಾಗಿಯೂ । (**ಇದಾನೀಂ**— ಈಗ) । **ಕ್ವ**— (ನೀವು) ಎಲ್ಲಿದ್ದೀರಿ ? । **ವಃ**— ನಿಮ್ಮ । **ಅರ್ಥಂ**— (ಯಜ್ಞಭೂಮಿಯಕಡೆ) ಗಮನವು । **ಕತ್**-

ಯಾವಾಗ ? । **ದಿವಃ**— ದ್ಯುಲೋಕದಿಂದ । **ಗಂತ**— (ಭೂಮಿಯಕಡೆಗೆ) ಹೊರಡಿರಿ. । **ಪೃಥಿವ್ಯಾಃ**— ಭೂಲೋಕದಿಂದ (ಹೊರಕ್ಕೆ) । **ನ**— ಹೊರಡಬೇಡಿ । **ಗಾವಃ ನ**— ಹಸುಗಳು ಶಬ್ದಮಾಡುವಂತೆ । **ವಃ**— ನಿಮ್ಮನ್ನು ಕುರಿತು । **ಕ್ವ**— (ನಮ್ಮ ಯಜ್ಞಭೂಮಿಯಲ್ಲಲ್ಲದೆ) ಇನ್ನೆಲ್ಲಿ । **ರಣ್ಯಂತಿ**— ಶಬ್ದಮಾಡುತ್ತಾ ಸ್ತೋತ್ರ ಮಾಡುತ್ತಿದ್ದಾರೆ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ನೀವು ನಿಶ್ಚಯವಾಗಿಯೂ ಈಗ ಎಲ್ಲಿದ್ದೀರಿ? ಯಜ್ಞಭೂಮಿಯಕಡೆಗೆ ನಿಮ್ಮ ಗಮನವು ಯಾವಾಗ ? ಸ್ವರ್ಗಲೋಕದಿಂದ ಭೂಲೋಕಕ್ಕೆ ಬನ್ನಿ. ಭೂಮಿಯಿಂದ ಬರಬೇಡಿ. ಹಸುಗಳು ಶಬ್ದ ಮಾಡುವಂತೆ ಯಾವ ಯಜ್ಞಭೂಮಿಯಲ್ಲಿ ಯಜಮಾನರು ಶಬ್ದಮಾಡುತ್ತಾ ಸ್ತೋತ್ರಮಾಡುತ್ತಿದ್ದಾರೆ ?

English Translation

Maruts, where indeed are you at present ? When do you come here? Depart from heaven and not from the earth. Where do they worship you with sounds of praise as the lowing of the cattle ?

॥ ವಿಶೇಷವಿಷಯಗಳು ॥

**ಅರ್ಥಂ— ಋ ಗತೌ । ಅರ್ಥಂ ಅರಣಂ ಗಮನಂ ।** ಆಗಮನ, ಬರುವಿಕೆ.

**ನ ಗಂತ—ನ ಗಚ್ಛತ** ಇಲ್ಲಿ ಋಷಿಯು ಮರುದ್ದೇವತೆಗಳನ್ನು ಸ್ವರ್ಗಲೋಕದಿಂದ ಬರಬೇಕೆಂದೂ ಭೂಮಿಯಿಂದ ಬೇಡವೆಂದೂ ಪ್ರಾರ್ಥಿಸಿದ್ದಾನೆ. ಏಕೆಂದರೆ ಭೂಮಿಯಮೇಲೆ ಇರುವ ಮರುದ್ದೇವತೆಗಳ ಸ್ವರೂಪವು ಬಹಳ ವೇಗವಾಗಿಯೂ, ಭಯಂಕರವಾಗಿಯೂ, ವಾಸಸ್ಥಾನಗಳಾದ ಗೃಹಾದಿಗಳಿಗೆ ಅಪಾಯವನ್ನುಂಟುಮಾಡುವುದಾಗಿಯೂ ಇರುವುದರಿಂದ ಭೂಮಿಯಮೇಲೆ ತೋರುವ (ಎಂದರೆ ಗುಡುಗು, ಸಿಡಿಲು, ಮಿಂಚು ಇವುಗಳಿಂದ ಕೂಡಿದ ಮೇಘಗಳೊಂದಿಗೆ ಇರುವ) ರೂಪದಿಂದ ಬರಬೇಡವೆಂದೂ ಸ್ವರ್ಗಲೋಕದಲ್ಲಿ ಪ್ರಕಾಶಮಾನವಾಗಿ ಬೆಳಗುವ ತಮ್ಮ ನಿಜ ರೂಪದಿಂದ ಇಲ್ಲಿಗೆ ಬರಬೇಕೆಂದೂ ಪ್ರಾರ್ಥಿಸಿರಬಹುದು.

**ಕ್ವ ವಃ ಗಾವಃ ನ ರಣ್ಯಂತಿ—** ಯಜಮಾನರೂ ಇತರರೂ ಈ ಸ್ಥಳದಲ್ಲಲ್ಲದೆ ಮತ್ತೆಲ್ಲಿ ನಿಮ್ಮನ್ನು ಘಟ್ಟಿಯಾದ ಶಬ್ದದಿಂದ ಗೋವುಗಳು ಕೂಗುವಂತೆ ಸ್ತುತಿಸುವರು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಕ್ವ**—ಕಿಮ್ ಶಬ್ದಪ್ರಕೃತಿಕ ಸಪ್ತಮ್ಯಂತದ ಮುಂದೆ **ಕಿಮೋಽತ್** (ಪಾ. ಸೂ. ೫-೩-೧೨) ಸಪ್ತಮ್ಯಂತವಾದ ಕಿಮ್‌ಶಬ್ದದ ಮುಂದೆ ವಿಕಲ್ಪವಾಗಿ **ಅತ್** ಬರುತ್ತೆ ಎಂದು ಅತ್, ಸಪ್ತಮಿಗೆ ಲುಕ್, ಕಿಮ್+ಅ, **ಕ್ವಾತಿ** (ಪಾ. ಸೂ. ೭-೨-೧೦೫) ಅತ್ ಪರದಲ್ಲಿದ್ದರೆ ಕಿಮ್‌ಗೆ ಕ್ವ ಆದೇಶ ಬರುತ್ತೆ ಎಂದು ಕಿಮ್‌ಗೆ ಕ್ವ ಆದೇಶ. ಕ್ವ+ಅ, **ಯಸ್ಯೇತಿಚ** ಎಂದು ಕ್ವಶಬ್ದದ ಅಕಾರಕ್ಕೆ ಲೋಪ, ಪ್ರತ್ಯಯ ತಿತ್, ಸ್ವರಿತಸ್ವರ ಬರುತ್ತೆ.

**ಅರ್ಥಮ್**— ಋ ಗತೌ. **ಉಷಿಕುಷಿಗಾರ್ತಿಭ್ಯಸ್ಥನ್** (ಪಾ. ಸೂ. ೨-೧೬೧) ಎಂದು ಥನ್ ಪ್ರತ್ಯಯ, ಗುಣ, ರಪರತ್ವ. ಪ್ರತ್ಯಯವು ನಿತ್, ಆದ್ಯುದಾತ್ತ ಬರುತ್ತೆ.

**ಗನ್ತಾ**— ಗಮ್ಲೃ ಗತೌ ಲೋಟ್, ಥ ಆದೇಶ. ಶಪ್‌ಗೆ **ಬಹುಲಂಛಂದಸಿ** (ಪಾ. ಸೂ. ೨-೪-೭೩) ಎಂದು ಲುಕ್, ಲಜ್ವದ್ಭಾವ, ತ ಆದೇಶ. ಇದಕ್ಕೆ **ತಪ್ತನಪ್ತನಥನಾಶ್ಚ** ಎಂದು ತಪ್ ಆದೇಶ. ಹೀಗೆ ಪ್ರತ್ಯಯ ಪಿತ್ತಾದ್ದರಿಂದ **ಸಾರ್ವಧಾತುಕ ಮಪಿತ್** ಎಂದು ಙಿತ್ವ ಬರುವುದಿಲ್ಲ. ಆದಕಾರಣ **ಅನುದಾತ್ತೋಪದೇಶ—,** ಎಂದು ಮ್‌ಗೆ ಲೋಪ ಬರುವುದಿಲ್ಲ. ಪ್ರತ್ಯಯ ಪಿತ್ತಾದ್ದರಿಂದ ಅನುದಾತ್ತ, ಧಾತುಸ್ವರ ನಿಲ್ಲುತ್ತೆ. **ದ್ವ್ಯಚೋಽತಸ್ತಿಙಃ** (ಪಾ. ಸೂ.೬-೩-೧೩೫) ಎಂದು ಸಂಹಿತಾಕಾಲದಲ್ಲಿ ದೀರ್ಘ.

**ಪೃಥಿವ್ಯಾಃ**— ಪ್ರಥ ಪ್ರಖ್ಯಾನೆ, **ಪ್ರಥೇಃ ಷಿವನ್ ಸಂಪ್ರಸಾರಣಂಚ** (ಉ. ಸೂ. ೧-೧೪೮) ಎಂದು ಷಿವನ್, **ಷಿದ್ಗೌರಾದಿಭ್ಯಶ್ಚ** ಎಂದು ಙೀಷ್, ಇದು ಪ್ರತ್ಯಯಸ್ವರದಿಂದ ಉದಾತ್ತ. ಙಸಿ ಪ್ರತ್ಯಯ **ಆಣ್ನದ್ಯಾಃ** (ಪಾ. ಸೂ. ೭-೩-೧೧೨) ಎಂದು ಇಡಾಗಮ. **ಆಟಶ್ಚ** (ಪಾ. ಸೂ. ೬-೧-೯೦) ಎಂದು ವೃದ್ಧಿ, ಪೃಥಿವೀ+ಆಸ್, ಯಣಾದೇಶ, ಇದು ಉದಾತ್ತದ ಸ್ಥಾನದಲ್ಲಿ ಬಂದಿದೆ. ವ್ಯಂಜನಪೂರ್ವಕವೂ ಆಗಿದೆ. **ಉದಾತ್ತಯಣೋ ಹಲ್ಪೂರ್ವಾತ್** (ಪಾ. ಸೂ ೬-೧-೧೭೪) ಉದಾತ್ತದ ಸ್ಥಾನದಲ್ಲಿ ಬಂದ ಯಾವ ಯಣ್ ಇದೆಯೋ ಅದು ವ್ಯಂಜನ ಪೂರ್ವಕವಾಗಿದ್ದರೆ ಅದರ ಮುಂದೆ ಇರುವ ನದೀಸಂಜ್ಞಕವೂ ಅಜಾದಿ ಶಸಾದಿ ವಿಭಕ್ತಿಯೂ ಸಹ ಉದಾತ್ತವಾಗುತ್ತೆ ಎಂದು ವಿಭಕ್ತಿ ಉದಾತ್ತ.

**ರಣ್ಯನ್ತಿ**—ರಣಶಬ್ದಾರ್ಥಃ, ೧ನೇ ಗಣ. ಶಪ್‌ಗೆ ಬದಲಾಗಿ ಶ್ಯನ್ ಬಂದಿದೆ. ॥೨॥

---

। ಸಂಹಿತಾಪಾಠಃ ।

ಕ್ವ॑ ವಃ ಸು॒ಮ್ನಾ ನವ್ಯಾಂ᳚ಸಿ॒ ಮರು॑ತಃ॒ ಕ್ವ॑ ಸುವಿ॒ತಾ ।
ಕ್ವೋ॒೩॒ ವಿಶ್ವಾ᳚ನಿ॒ ಸೌಭ॑ಗಾ ॥ ೩ ॥

। ಪದಪಾಠಃ ।

ಕ್ವ॑ । ವಃ॒ । ಸು॒ಮ್ನಾ । ನವ್ಯಾಂ᳚ಸಿ । ಮರು॑ತಃ । ಕ್ವ॑ । ಸು॒ವಿ॒ತಾ ।
ಕ್ವೋ॒೩॒ ಇತಿ॑ । ವಿಶ್ವಾ᳚ನಿ । ಸೌಭ॑ಗಾ ॥ ೩ ॥

|| ಸಾಯಣಭಾಷ್ಯಂ ||

**ಹೇ ಮರುತೋ ವೋ ಯುಷ್ಮಾಕಂ ಸಂಬಂಧೀನಿ ನವ್ಯಾಂಸಿ ನವತರಾಣಿ ಸುಮ್ನಾ ಪ್ರಜಾಪಶುರೂಪಾಣಿ ಧನಾನಿ । ಪ್ರಜಾ ವೈ ಪಶವಃ ಸುಮ್ನಂ । ತೈ. ಸಂ. ೫-೪-೬-೬ । ಇತಿ ಶ್ರುತ್ಯಂತರಾತ್ । ಕ್ವ ಕುತ್ರ ವರ್ತಂತೇ । ತಥಾ ಸುವಿತಾ ಶೋಭನಾನಿ ಪ್ರಾಪ್ಯಾಣಿ ಮಣಿಮುಕ್ತಾದೀನಿ ಭವದೀಯಾನಿ ಕ್ವ ಕುತ್ರ ವರ್ತಂತೇ । ವಿಶ್ವಾನಿ ಸರ್ವಾಣಿ ಸೌಭಗಾ ಸೌಭಾಗ್ಯರೂಪಾಣಿ ಗಜಾಶ್ವಾದೀನಿ ಕ್ವೋ ಕುತ್ರ ವಾ ವರ್ತಂತೇ । ಭವದೀಯೈಃ ಸುಮ್ನಾದಿಭಿಃ ಸರ್ವೈಃ ಸಹಾಗಂತವ್ಯಮಿತ್ಯರ್ಥಃ ॥ ಸುಮ್ನಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ನವ್ಯಾಂಸಿ । ನವಶಬ್ದಾದೀಯಸುನೀಕಾರಲೋಪಶ್ಛಂದಸಃ । ಸುವಿತಾ । ಸುಪೂ ಇತಾನಿ ಸುವಿತಾನಿ । ತನ್ವಾದೀನಾಂ ಛಂದಸಿ ಬಹುಲಮುಪಸಂಖ್ಯಾನಂ । ಪಾ. ೬-೪-೭೭-೧ । ಇತ್ಯುವಙಾದೇಶಃ । ಸೌಭಗಾ । ಸುಭಗಾನ್ಮಂತ್ರೇ ಇತಿ ತಸ್ಯ ಭಾವ ಇತ್ಯರ್ಥೇಽಞ್ । ಪೂರ್ವವಚ್ಛೇರ್ಲೋಪಃ ॥**

|| ಪ್ರತಿಪದಾರ್ಥ ||

**ಮರುತಃ**— ಎಲೈ ಮರುತ್ತುಗಳೇ । **ವಃ**—ನಿಮ್ಮ (ಸ್ವಂತಗಳಾದ) । **ನವ್ಯಾಂಸಿ**— ಬಹಳ ನೂತನಗಳಾದ । **ಸುಮ್ನಾ**— ಪ್ರಜಾಪಶುರೂಪಗಳಾದ ಐಶ್ವರ್ಯಗಳು । **ಕ್ವ**— ಎಲ್ಲಿವೆ ? । **ಸುವಿತಾ**—ಅಮೂಲ್ಯಗಳಾದ ನಿಮ್ಮ ವಜ್ರವೈಡೂರ್ಯಾದಿ ಐಶ್ವರ್ಯಗಳು । **ಕ್ವ**— ಎಲ್ಲಿವೆ ? । **ವಿಶ್ವಾನಿ**—ಸಮಸ್ತವಾದ । **ಸೌಭಗಾ**—ಮಂಗಳಕರಗಳಾದ ನಿಮ್ಮ ಗಜಾಶ್ವಾದಿ ಐಶ್ವರ್ಯಗಳು । **ಕ್ವೋ**— ಎಲ್ಲಿವೆ. (ಸಕಲ ಐಶ್ವರ್ಯಗಳೊಡನೆಯೂ ನಮ್ಮ ಯಜ್ಞಭೂಮಿಗೆ ದಯಮಾಡಿ) ।

ಭಾವಾರ್ಥ

ಎಲೈ ಮರುತ್ತುಗಳೇ, ನಿಮ್ಮ ಅತ್ಯಂತ ನೂತನಗಳಾದ ಪ್ರಜಾಪಶುರೂಪಗಳಾದ ಐಶ್ವರ್ಯಗಳು ಎಲ್ಲಿ? ಅತುಲ್ಯಗಳಾದ ನಿಮ್ಮ ವಜ್ರವೈಡೂರ್ಯಾದಿ ಐಶ್ವರ್ಯಗಳು ಎಲ್ಲಿ? ಮಂಗಳಕರಗಳಾದ ನಿಮ್ಮ ಸಮಸ್ತ ಗಜಾಶ್ವಾದಿ ಐಶ್ವರ್ಯಗಳು ಎಲ್ಲಿ? (ಸಕಲ ಐಶ್ವರ್ಯಗಳೊಡನೆಯೂ ನಮ್ಮ ಯಜ್ಞಭೂಮಿಗೆ ಬನ್ನಿ)

English Translation

O Maruts, where are your new treasures ? Where are your valuables ? Where are all your gifts of prosperity ?

ವಿಶೇಷವಿಷಯಗಳು

**ನವ್ಯಾಂಸಿ—ನವತರಣಾನಿ, ನವೀಯಾಂಸಿ ।** ಹೊಸದಾದ

**ಸುಮ್ನಾ— ಸುಮ್ನಾನಿ ।** ಪ್ರಜಾ ಪಶು ಮೊದಲಾದ ಸಂಪತ್ತುಗಳು **ಪ್ರಜಾ ವೈ ಪಶವಃ ಸುಮ್ನಂ—**

ಎಂದರೆ **ಪುತ್ರಪೌತ್ರಾದಿ** ಸಂತತಿಗಳು ಅಥವಾ ಪ್ರಜೆಗಳೂ, **ಗೋಮಹಿಷ್ಯಾದಿ** ಪಶುಗಳೂ ಸಂಪತ್ತುಗಳೆಂದೂ **ಹೇಳಲ್ಪಡುವುದು** ಎಂದು ಶೃತಿವಾಕ್ಯವಿರುವುದು. (ತೈ. ಸಂ. ೫-೪-೬-೬) **ಈ ಕಾಲದಲ್ಲಿಯೂ** ಸಹ ನಾಗರಿಕ ರಲ್ಲದ ಜನರು ತಮ್ಮಲ್ಲಿರುವ ಹಸುಗಳು, ಕುರಿ, ಆಡು, ಕುದುರೆ ಮೊದಲಾದ ಪಶುಸಂಪತ್ತಿನಿಂದಲೇ ಸಮಾಜದಲ್ಲಿ ಅವರವರ **ಸ್ಥಾನಮಾನಗಳನ್ನೂ**, ಐಶ್ವರ್ಯಾದಿಗಳನ್ನೂ ಪರಿಗಣಿಸುವರು.

**ಸುವಿತಾ— ಶೋಭನಾನಿ ಪ್ರಾಪ್ಯಾಣಿ ಮಣಿಮುಕ್ತಾದೀನಿ** । ಎಲ್ಲರೂ ಬಹುವಾಗಿ ಅಪೇಕ್ಷಿಸುವ ಅಮೂಲ್ಯವಸ್ತುಗಳು.

**ಸೌಭಗಾ—** ಸೌಭಾಗ್ಯಗಳು, ಗಜಾಶ್ವಾದಿಸಂಪತ್ತುಗಳು.

॥ ವ್ಯಾಕರಣಪ್ರಕ್ರಿಯಾ ॥

**ಸುಮ್ನಾ—ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂದು ಶಿಗೆ ಲೋಪ. ಸುಮ್ನಾನಿ ಎಂಬುದಕ್ಕೆ ಬದಲಾಗಿ ಈಪದ ಬಂದಿದೆ.

**ನವ್ಯಾಂಸಿ**—ನವಶಬ್ದದ ಮುಂದೆ **ದ್ವಿವಚನ ವಿಭಜ್ಯೋಪಪದೇತರಬೀಯಸುನೌ** (ಪಾ. ಸೂ ೫-೩-೫೭) ಎಂದು ಈಯಸುನ್, **ಯಸ್ಯೇತಿಚ** ಎಂದು ವ ಎಂಬಲ್ಲಿಯ ಅಕಾರಕ್ಕೆ ಲೋಪ. ಪ್ರತ್ಯಯದ ಈಗೆ ಛಾಂದಸವಾಗಿ ಲೋಪ.

**ಸುವಿತಾ**—ಸುಷ್ಠು ಇತಾನಿ ಎಂದು ವಿಗ್ರಹ. **ಅಚಿ ಶ್ನು ಧಾತುಭ್ರುವಾಂ—**, ಎಂಬ ಸೂತ್ರದಲ್ಲಿ **ಇಯಜಾದಿ ಪ್ರಕರಣೇ ತನ್ವಾದೀನಾಂ ಛಂದಸಿ ಬಹುಲಮುಪಸಂಖ್ಯಾನಂ** ಎಂಬ ವಚನ ಇದೆ. ಇಯಜ್ ಉವಜಾದೇಶವನ್ನು ವಿಧಿಸುವ ಪ್ರಕರಣದಲ್ಲಿ **ತನ್ವಾದೀನಾಂ ಛಂದಸಿ ಬಹುಲಂ** ತನು ಮೊದಲಾದ ಪದಗಳಿಗೆ ಛಂದಸ್ಸಿನಲ್ಲಿ ಬಹುಲವಾಗಿ ಇಯಜ್ ಉವಜ್‌ಗಳು ಬರುತ್ತವೆ ಎಂದು ಪಠಿಸಬೇಕು ಎಂದರ್ಥ, ಇದರಿಂದ ಸು ಎಂಬ ಉಪಸರ್ಗಕ್ಕೆ ಉವಜ್ ಸುವಿತಾನಿ ಎಂದಾಗುತ್ತೆ. ಶಿಗೆ ಹಿಂದಿನಂತೆ ಲೋಪ.

**ಸೌಭಗಾ—ಪ್ರಾಣಭೃಜ್ಜಾತಿ ವಯೋವಚನೋದ್ಗಾತ್ರಾದಿಭ್ಯೋಽಞ್** (ಪಾ. ಸೂ. ೫ ೧-೧೨೯) ಎಂಬ ಸೂತ್ರದಲ್ಲಿರುವ ಉದ್ಗಾತ್ರಾದಿಗಣದಲ್ಲಿ ' ಸುಭಗ-ಮನ್ತ್ರ ಎಂಬ ಪದಗಳು ಪಠಿತವಾಗಿವೆ. ಆದ್ದರಿಂದ ಸುಭಗ ಶಬ್ದದ ಮುಂದೆ ಭಾವಾರ್ಥದಲ್ಲಿ ಅಞ್. ಆದಿವೃದ್ಧಿ, ಶಿ ಲೋಪವು ಹಿಂದಿನಂತೆ. ॥೩॥

ಸಂಹಿತಾಪಾಠಃ

ಯದ್ಯೂಯಂ ಪೃಶ್ನಿಮಾತರೋ ಮರ್ತಾಸಃ ಸ್ಯಾತನ ।
ಸ್ತೋತಾ ವೋ ಅಮೃತಃ ಸ್ಯಾತ್ ॥ ೪ ॥

॥ ಪದಪಾಠಃ ॥

ಯತ್ । ಯೂಯಂ । ಪೃಶ್ನಿऽಮಾತರಃ । ಮರ್ತಾಸಃ । ಸ್ಯಾತನ ।
ಸ್ತೋತಾ । ವಃ । ಅಮೃತಃ । ಸ್ಯಾತ್ ॥ ೪ ॥

ಸಾಯಣಭಾಷ್ಯಂ

ಹೇ ಪೃಶ್ನಿನಾಮಕಧೇನುಪುತ್ರಾ ಮರುತೋ ಯೂಯಂ ಯದ್ಯಪಿ ಮರ್ತಾಸೋ ಮನುಷ್ಯಾಃ ಸ್ಯಾತನ ಭವೇತ ತಥಾಪಿ ವೋ ಯುಷ್ಮಾಕಂ ಸ್ತೋತಾ ಯಜಮಾನೋಽಮೃತಃ ಸ್ಯಾತ್ । ದೇವೋ ಭವೇತ್ ॥ ಪೃಶ್ನಿಮಾತರಃ । ಪೃಶ್ನಿರ್ಮಾತಾ ಯೇಷಾಂ ತೇ । ಸಮಾಸಾಂತವಿಧೇರನಿತ್ಯತ್ವಾನ್ನದ್ಯೃತಶ್ಚ । ಪಾ. ೫-೪-೧೫೩ । ಇತಿ ಕಬಭಾವಃ । ಮರ್ತಾಸಃ । ಅಸಿಹಸೀತ್ಯಾದಿನಾ ಮ್ರಿಯತೇಸ್ತನ್ಪ್ರತ್ಯಯಃ । ಆಜ್ಜಸೇರಸುಕ್ । ಸ್ಯಾತನ । ಅಸ್ತೇರ್ಲಿಙಿ ತಸ್ಯ । ತಪ್ತನಪ್ತನಥನಾಶ್ಚೇತಿ ತನಾದೇಶಃ । ಯಾಸುಟ ಉದಾತ್ತತ್ವಂ । ಅಮೃತಃ । ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಪೃಶ್ನಿಮಾತರಃ**—ಪೃಶ್ನಿಯೆಂಬ ಧೇನುವಿನ ಮಕ್ಕಳಾದ ಮರುತ್ತುಗಳೇ । **ಯೂಯಂ**—ನೀವುಗಳು । **ಮರ್ತಾಸಃ**—ಮನುಷ್ಯರಾಗಿ । **ಯದ್ಯಪಿ ಸ್ಯಾತನ**—ಒಂದು ವೇಳೆ ಆಗಿರಬಹುದು (ಆದರೆ) । **ವಃ**—ನಿಮ್ಮ । **ಸ್ತೋತಾ**—ಗುಣಗಾನಮಾಡತಕ್ಕ ಭಕ್ತನು । **ಅಮೃತಃ**—ಅಮರ್ತ್ಯನಾಗಿ । **ಸ್ಯಾತ್**—ಆಗಲಿ.

ಭಾವಾರ್ಥ

ಪೃಶ್ನಿಯೆಂಬ ಧೇನುವಿನ ಮಕ್ಕಳಾದ ಎಲೈ ಮರುತ್ತುಗಳೇ, ನೀವುಗಳು ಒಂದು ವೇಳೆ ಮನುಷ್ಯಗುಂಪಿಗೆ ಸೇರಿದ್ದರೂ ಸಹ ನಿಮ್ಮ ಗುಣಗಾನಮಾಡತಕ್ಕ ಮರ್ತ್ಯರು ಅಮರ್ತ್ಯರೇ ಆಗುವರು.

## English Translation

Sons of Prisni, if you had been mortals your praiser (worshipper) would have become immortal.

### ವಿಶೇಷ ವಿಷಯಗಳು

ಈ ಋಕ್ಕಿನ ಅರ್ಥವು ಸ್ವಲ್ಪ ತೊಡಕಾಗಿರುವುದು. ಮುಖ್ಯಾಭಿಪ್ರಾಯವೇನೆಂದರೆ—ಎಲೈ ಮರುದ್ದೇವತೆಗಳೇ ನೀವು ಒಂದು ವೇಳೆ ಮರ್ತ್ಯರಾಗಿದ್ದರೂ (ಮರಣಕ್ಕೆ ತುತ್ತಾಗುವ ಮನುಷ್ಯರಾಗಿದ್ದರೂ) ನಿಮ್ಮ ಅಸಾಧಾರಣವಾದ ಗುಣಗಳನ್ನು ಗಾನಮಾಡುವ ನಮ್ಮಂತಹ ಮನುಷ್ಯರು ನಿಮ್ಮ ಗುಣಗಾನದ ಮಹಿಮೆಯಿಂದ ಮರಣರಹಿತರಾದ ಅಮರ್ತ್ಯರೇ (ದೇವತೆಗಳೇ) ಆಗುವರು. ಮರುತ್ತುಗಳ ಶಕ್ತಿಯು ಅದ್ಭುತವಾದುದು ಎಂಬುದನ್ನು ವಿವರಿಸುವುದಕ್ಕಾಗಿ ಋಷಿಯು ಈ ವಿಧವಾದ ಸಾದೃಶ್ಯವನ್ನು ಹೇಳಿರುವನು.

**ಪೃಶ್ನಿಮಾತರಃ**—ಪೃಶ್ನಿ ಎಂಬ ದೇವಲೋಕದ ಧೇನುವೇ ಮಾತೃವಾಗಿವುಳ್ಳ ಮರುದ್ದೇವತೆಗಳು. ಮರುದ್ದೇವತೆಗಳು ಪೃಶ್ನಿಯ ಪುತ್ರರೆಂದು ಪ್ರಸಿದ್ಧವು.

**ಮರ್ತಾಸಃ—ಮರ್ತ್ಯಾಃ** । ಮರಣಕ್ಕೆ ಈಡಾಗುವವರು ಎಂದರೆ ಮನುಷ್ಯರು.

**ಅಮೃತಃ—ಮರಣರಹಿತಃ ದೇವಃ** । ಮರಣರಹಿತರಾದ ದೇವನು.

### ವ್ಯಾಕರಣಪ್ರಕ್ರಿಯಾ

**ಪೃಶ್ನಿ ಮಾತರಃ**—ಪೃಶ್ನಿಃ ಮಾತಾ ಯೇಷಾಂ ತೇ ಎಂದು ಬಹುವ್ರೀಹಿ. ಪೃಶ್ನಿಮಾತೃ ಎಂಬುದು ಋಕಾರಾಂತ. **ನದ್ಯೃತಶ್ಚ** (ಪಾ. ಸೂ. ೫-೪-೧೫೩) ನದೀಸಂಜ್ಞಕವನ್ನು ಅಥವಾ ಋಕಾರಾಂತವನ್ನು ಉತ್ತರ ಪದದಲ್ಲಿ ಹೊಂದಿರುವ ಬಹುವ್ರೀಹಿಗೆ ಕಪ್ ಬರುತ್ತೆ ಅದು ಸಮಾಸಾಂತವಾಗುತ್ತೆ ಎಂದು ಕಪ್ ಪ್ರಾಪ್ತವಾಗುತ್ತೆ ಆದರೆ **ಪ್ರತೇರಂಶ್ವಾದಯಸ್ತತ್ಪುರುಷೇ** (ಪಾ. ಸೂ. ೬-೨-೧೯೩) ತತ್ಪುರುಷ ಸಮಾಸದಲ್ಲಿ ಪ್ರತಿ ಶಬ್ದಕ್ಕಿಂತಲೂ ಪರದಲ್ಲಿರುವ ಅಂಶ್ವಾದಿಗಣ ಪಠಿತಶಬ್ದಗಳು ಅಂತೋದಾತ್ತಗಳಾಗುವುವು ಎಂದರ್ಥ. ಈ ಗಣದಲ್ಲಿ ರಾಜನ್ ಶಬ್ದ ಪಾಠ ಇದೆ. **ರಾಜಾಹಸ್ಸಖಿಭ್ಯಷ್ಟಚ್** (ಪಾ. ಸೂ. ೫-೪-೯೧) ಎಂದು ರಾಜನ್ ಶಬ್ದಾಂತ ತತ್ಪುರುಷದಲ್ಲಿ ಟಚ್ ಬರುತ್ತೆ. **ಏವಂಚ ಚಿತಃ** (ಪಾ. ಸೂ. ೬-೧-೧೬೩) ಎಂದು ಅಂತೋದಾತ್ತವು ಸಿದ್ಧವಾಗುವುದು. ಆದ್ದರಿಂದ ಈ ಗಣದಲ್ಲಿ ರಾಜನ್ ಶಬ್ದಪಾಠವು ವ್ಯರ್ಥವಾಗಿ **ಸಮಾಸಾಂತವಿಧಿರನಿತ್ಯಃ** (ಪರಿಭಾ. ೮೯) ಸಮಾಸಾಂತ ವಿಧಿಯು ಅನಿತ್ಯವಾದುದು ಎಂದು ಜ್ಞಾಪಿಸುವುದು. ಅಥವಾ **ಋಕ್ಪೂರಬ್ಧೂಃ ಪಥಾ ಮಾನಕ್ಷೇ** (ಪಾ. ಸೂ. ೫-೪-೭೪) ಎಂಬ ಸೂತ್ರದಲ್ಲಿ ಪಥಾನಾಂ ಎಂದು—ಹೇಳದೆ ಸಮಾಸಾಂತಪ್ರತ್ಯಯವಿಲ್ಲದೇ ನಿರ್ದೇಶಮಾಡಿರುವುದರಿಂದ **ಸಮಾಸಾಂತವಿಧಿರನಿತ್ಯಃ** ಎಂದು ಜ್ಞಾಪಿತವಾಗುತ್ತೆ. ಏವಂಚ ಪ್ರಕೃತದಲ್ಲಿ ಈ ಪರಿಭಾಷೆಯಿಂದ ಕಪ್ ಬರುವುದಿಲ್ಲ.

**ಮರ್ತಾಸಃ**—ಮೃಙ್ ಪ್ರಾಣತ್ಯಾಗೇ, **(ಅಸಿ) ಹಸಿಮೃ—**, (ಉ. ಸೂ. ೩-೩೬೬) ಎಂದು ತನ್ ಪ್ರತ್ಯಯ, ಗುಣ, ರಪರತ್ವ, ಜಸ್, **ಆಜ್ಜಸೇರಸುಕ್** ಎಂದು ಅಸುಗಾಗಮ.

**ಸ್ಯಾತನ**—ಅಸ ಭುವಿ, ಲಿಙ್, ಮಧ್ಯಮಪುರುಷ ಥ, ಇದಕ್ಕೆ **ತಸ್ಥಸ್ಥ ಮಿಪಾಂ—**, ಎಂದು ತ ಆದೇಶ. ಇದಕ್ಕೆ **ತಪ್ತನಪ್ತನಥನಾಶ್ಚ** ಎಂದು ತನ ಆದೇಶ. ಅದಾದಿಯಾದ್ದರಿಂದ ಶಪ್‌ಗೆ ಲುಕ್. **ಯಾಸುಟ್ಪರ ಸ್ಮೈಪದೇಷೂದಾತ್ತೋಙಿಚ್ಚ** (ಪಾ. ಸೂ. ೩-೪-೧೦೩) ಎಂದು ಯಾಸುಟ್, ಅಸ್+ಯಾಸ್‌ತನ, ಸಲೋಪ, **ಶ್ನಸೋ ರಲ್ಲೋಪಃ** ಎಂದು ಧಾತ್ವಕಾರಕ್ಕೆ **ಲೋಪ.** ಯಾಸುಟ್ ಉದಾತ್ತ.

**ಅಮೃತಃ—ನಙೋಜರಮರಮಿತ್ರಮೃತಾಃ** (ಪಾ. ಸೂ. ೬-೨-೧೧೬) ನಙ್‌ನ ಮುಂದೆ ಇರುವ ಉತ್ತರಪದಗಳಾದ ಈ ಶಬ್ದಗಳು ಆದ್ಯುದಾತ್ತಗಳಾಗುವುವು ಎಂದು ಆದ್ಯುದಾತ್ತ. ॥೪॥

---

ಸಂಹಿತಾಪಾಠಃ

ಮಾ ವೋ ಮೃಗೋ ನ ಯವಸೇ ಜರಿತಾ ಭೂದಜೋಷ್ಯಃ ।

ಪಥಾ ಯಮಸ್ಯ ಗಾದುಪ ॥ ೫ ॥

॥ ಪದಪಾಠಃ ॥

**ಮಾ । ವಃ । ಮೃಗಃ । ನ । ಯವಸೇ । ಜರಿತಾ । ಭೂತ್ । ಅಜೋಷ್ಯಃ ।**

**ಪಥಾ । ಯಮಸ್ಯ । ಗಾತ್ । ಉಪ ॥ ೫ ॥**

ಸಾಯಣಭಾಷ್ಯ

**ಹೇ ಮರುತೋ ವೋ ಯುಷ್ಮಾಕಂ ಜರಿತಾ ಸ್ತೋತಾಜೋಷ್ಯೋಽಸೇವ್ಯೋ ಮಾ ಭೂತ್ । ತತ್ರ ದೃಷ್ಟಾಂತಃ । ಮೃಗೋ ನ ಯವಸೇ । ಯಥಾ ತೃಣೇ ಭಕ್ಷಣೀಯೇ ಮೃಗಃ ಕದಾಚಿದಪ್ಯಸೇವ್ಯೋ ನ ಭವತಿ ಕಿಂತು ಸರ್ವದಾ ತೃಣಂ ಭಕ್ಷಯತಿ ತದ್ವತ್ । ಕಿಂಚ ಸ ಸ್ತೋತಾ ಯಮಸ್ಯ ಪಥಾ ಯಮ-**

**ಲೋಕಸಂಬಂಧಿಮಾರ್ಗೇಣ ಮೋಪ ಗಾತ್ । ಮಾ ಗಚ್ಛತು । ತಸ್ಯ ಮರಣಂ ಮಾ ಭೂದಿತ್ಯರ್ಥಃ । ಜರಿತಾ । ಜ್ಯಾಷ್ ವಯೋಹಾನೌ । ಸ್ತುತಿಕರ್ಮೇತಿ ಯಾಸ್ಕಃ । ನಿ. ೧೦-೮ । ತೃಚೀಡಾಗಮಃ । ಚಿತ್ತ್ವಾದಂತೋದಾತ್ತತ್ವಂ ಭೂತ್ । ಲುಙಿ ಗಾತಿಸ್ಥೇತಿ ಸಿಚೋ ಲುಕ್ । ನ ಮಾಙ್ಯೋಗ ಇತ್ಯಡಭಾವಃ । ಅಜೋಷ್ಯಃ । ಜುಷೀ ಪ್ರೀತಿಸೇವನಯೋಃ । ಋಹಲೋರ್ಣ್ಯದಿತಿ ಕರ್ಮಣಿ ಣ್ಯತ್ । ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ಪಥಾ । ತೃತೀಯೈಕವಚನೇ। ಭಸ್ಯ ಟೇರ್ಲೋಪಃ । ಪಾ. ೭-೧-೮೮ । ಇತಿ ಟಿಲೋಪಃ । ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ । ಗಾತ್ । ಇಣೋ ಗಾ ಲುಙೀತಿ ಗಾದೇಶಃ । ಗಾತಿಸ್ಥೇತಿ ಸಿಚೋ ಲುಕ್ । ಪೂರ್ವವದಡಭಾವಃ ॥೧೪॥**

ಪ್ರತಿಪದಾರ್ಥ

**ಯವಸೇ**— (ಎಲೈ ಮರುತ್ತುಗಳೇ ತನ್ನ ಜೀವನಾಧಾರವಾದ) ಹುಲ್ಲುಗಾವಲಿನ ವಿಷಯದಲ್ಲಿ **ಮೃಗೋನ**— (ಜಿಂಕೆಯು) **ಮೃಗವು** ಅನಾದರಣೆಯನ್ನು ತೋರಿಸದಿರುವಂತೆ । **ವಃ**— ನಿಮ್ಮ । **ಜರಿತಾ**— ಭಕ್ತನು । **ಅಜೋಷ್ಯಃ**—(ಭಕ್ತಿಯಿಲ್ಲದೆ) ಸೇವಾರಹಿತನಾಗಿ । **ಮಾ ಭೂತ್**—ಆಗದಿರಲಿ (ಮತ್ತು)। **ಯಮಸ್ಯ-ಪಥಾ**— ಯಮನ ಲೋಕಕ್ಕೆ ಹೋಗುವ ದಾರಿಯಿಂದ । **ಮಾ ಉಪ ಗಾತ್**—ಹೋಗದಿರಲಿ. ।

ಭಾವಾರ್ಥ

ಎಲೈ ಮರುತ್ತುಗಳೇ, ಮೃಗವು ತನ್ನ ಜೀವನಾಧಾರವಾದ ಹುಲ್ಲುಗಾವಲಿನ ವಿಷಯದಲ್ಲಿ ಅನಾದರಣೆಯನ್ನು ತೋರಿಸದಿರುವಂತೆ ನಿಮ್ಮ ಭಕ್ತನೂ ನಿಮ್ಮಲ್ಲಿ ಭಕ್ತಿ ಇಡದೆಯೂ ಸೇವಾರಹಿತನಾಗಿಯೂ ಆಗದಿರಲಿ. ಮತ್ತು ಯಮನ ಲೋಕಕ್ಕೆ ಹೋಗುವ ದಾರಿಯಲ್ಲಿ ಹೋಗದಿರಲಿ.

English Translation

Never may your worshipper be indifferent to you as a deer ( or animal ) is never indifferent to pasture, so that he may not tread the path of Yama.

ವಿಶೇಷ ವಿಷಯ

**ಯವಸೇ**—ಮೇಯುವುದಕ್ಕೆ ಅನುಕೂಲವಾದ ಹುಲ್ಲಿನಿಂದ ಕೂಡಿದ ಪ್ರದೇಶ, ಹುಲ್ಲುಗಾವಲು

**ಜರಿತಾ—ಸ್ತೋತಾ** । ಸ್ತೋತ್ರಮಾಡುವವನು.

**ಅಜೋಷ್ಯಃ**—ಸ್ತೋತ್ರಮಾಡದಿರುವವನು.

**ಪಥಾ ಯಮಸ್ಯ**—ಯಮಲೋಕದ ದಾರಿ. ಯಮಲೋಕದ ದಾರಿಯನ್ನು ತುಳಿಯುವುದೆಂದರೆ ಮೃತನಾಗುವುದು, ಸಾಯುವುದು.

ಮುಖ್ಯಾಭಿಪ್ರಾಯ—ಜಲತೃಣಸಮೃದ್ಧವಾದ ಹುಲ್ಲುಗಾವಲನ್ನು ಹುಲ್ಲುಮೇಯುವ ಯಾವ ಮೃಗವೇ ಆಗಲೀ ಅಲಕ್ಷ್ಯಮಾಡುವುದಿಲ್ಲ. ಅಲ್ಲಿ ಮೇಯದಿರುವುದಿಲ್ಲ. ಅದರಂತೆ ನಿಮ್ಮನ್ನು ಸ್ತೋತ್ರಮಾಡುವ ಮನುಷ್ಯನು ಅನಾದರಣೆಯಿಂದ ಸ್ತೋತ್ರಮಾಡದೆ ಇರದಿರಲಿ, ಎಂದರೆ ಸ್ತೋತ್ರಮಾಡಲಿ. ಅಂತಹ ಮನುಷ್ಯನು ಯಮನ ಮಾರ್ಗವನ್ನು ಹಿಡಿಯದಿರಲಿ, ಎಂದರೆ ಮೃತ್ಯುವಶನಾಗದಿರಲಿ.

॥ ವ್ಯಾಕರಣಪ್ರಕ್ರಿಯಾ ॥

**ಜರಿತಾ**—ಜೄಷ್ ವಯೋಹಾನೌ. **ಸ್ತುತಿಕರ್ಮಾ** (ನಿರು. ೧೦-೮) ಎಂದು ಯಾಸ್ಕರು ಹೇಳಿರುವುದರಿಂದ ಇಲ್ಲಿ ಸ್ತುತಿ ಎಂಬ ಕ್ರಿಯೆ ಅರ್ಥ. **ಣ್ವುಲ್ ತೃಚೌ** (ಪಾ. ಸೂ. ೩-೧-೧೩೩) ಎಂದು ತೃಚ್, ಇದಕ್ಕೆ ಇಟ್ ಆಗಮ. **ಚಿತಃ** ಎಂದು ಅಂತೋದಾತ್ತ.

**ಭೂತ್**—ಭೂ ಸತ್ತಾಯಾಂ, ಲುಙ್, **ನಮಾಙ್ಯೋಗೇ** (ಪಾ. ಸೂ. ೬-೪-೭೪) ಮಾಙ್‌ನ ಯೋಗ ಇದ್ದರೆ ಅಟ್ ಆಟ್‌ಗಳು ಬರುವುದಿಲ್ಲ ಎಂದು ಅಟ್ ಆಗಮಕ್ಕೆ ನಿಷೇಧ. ತಿಪ್, **ಇತಶ್ಚ** ಎಂದು ಇಕಾರಕ್ಕೆ ಲೋಪ. ಚ್ಲಿಗೆ ಸಿಚ್, **ಗಾತಿಸ್ಥಾಘುಪಾಭೂಭ್ಯಃ ಸಿಚಃ ಪರಸ್ಮೈಪದೇಷು** (ಪಾ. ಸೂ. ೨-೪-೭೭) ಇವುಗಳ ಮುಂದೆ ಇರುವ ಸಿಚ್‌ಗೆ ಲುಕ್ ಬರುತ್ತೆ ಎಂದು ಸಿಚ್‌ಗೆ ಲುಕ್.

**ಅಜೋಷ್ಯಃ**—ಜುಷೀ ಪ್ರೀತಿಸೇವನಯೋಃ **ಋಹಲೋರ್ಣ್ಯತ್** (ಪಾ. ಸೂ ೩-೧-೧೨೪) ಎಂದು ಣ್ಯತ್, ಉಪಧಾಗುಣ, 'ನ ಜೋಷ್ಯಃ' ಎಂದು ನಙ್‌ಸಮಾಸ. **ತತ್ಪುರುಷೇ ತುಲ್ಯಾರ್ಥ—,** ಎಂದು ಅವ್ಯಯ ಪೂರ್ವಪದಪ್ರಕೃತಿಸ್ವರ ಬರುತ್ತೆ.

**ಪಥಾ**—ಪಥಿನ್ ಶಬ್ದದ ಮುಂದೆ ತೃತೀಯಾ ಏಕವಚನ ಟಾಪ್ರತ್ಯಯ. ಪಥಿನ್+ಆ, **ಭಸ್ಯಟೇರ್ಲೋಪಃ** (ಪಾ. ಸೂ. ೭-೧-೮೮) ಭಸಂಜ್ಞೆ ಹೊಂದಿರುವ ಪಥಿನ್, ಮಥಿನ್, ಋಭುಕ್ಷಿನ್ ಇವುಗಳ ಟಿಗೆ ಲೋಪ ಬರುತ್ತೆ ಎಂದು ಇನ್‌ಗೆ ಲೋಪ. **ಅನುದಾತ್ತಸ್ಯಚ ಯತ್ರೋದಾತ್ತ ಲೋಪಃ** (ಪಾ. ಸೂ. ೬-೧-೧೬೧) ಎಂದು ಇನ್ ಎಂಬ ಉದಾತ್ತಲೋಪಕ್ಕೆ ನಿಮಿತ್ತವಾದ ವಿಭಕ್ತಿಯು ಉದಾತ್ತವಾಗುತ್ತೆ.

**ಗಾತ್**—ಇಣ್ ಗತೌ, ಲುಙ್, ತಿಪ್, ಇಕಾರಲೋಪ, **ಇಣೋಗಾಲುಙಿ** (ಪಾ. ಸೂ. ೨-೪-೪೫) ಲುಙ್ ಪರವಲ್ಲಿದ್ದರೆ ಇಣ್ ಧಾತುವಿಗೆ ಗಾ ಆದೇಶ ಬರುತ್ತೆ ಎಂದು ಗಾ ಆದೇಶ. **ಗಾತಿಸ್ಥಾ—,** 'ಗಾಪಾವಿಹೇಣಾದೇಶ ಪಿಬತೀಗೃಹ್ಯೇತೇ' ಎಂದು ಹೇಳಿದೆ. ಇದರಿಂದ ಸಿಚ್‌ಗೆ ಲುಕ್, ಹಿಂದಿನಂತೆಯೇ ಅಟ್ ಬರುವುದಿಲ್ಲ. ॥೫॥



ಮೋ ಷು ಣಃ ಪರಾಪರಾ ನಿರ್ಋತಿರ್ದುರ್ಹಣಾ ವಧೀತ್ ।
ಪದೀಷ್ಟ ತೃಷ್ಣಯಾ ಸಹ ॥ ೬ ॥

॥ ಸಂಹಿತಾಪಾಠಃ ॥

ಮೋ ಇತಿ । ಸು । ನಃ । ಪರಾಽಪರಾ । ನಿಃಽಋತಿಃ । ದುಃಽಹನಾ ।
ವಧೀತ್ ।
ಪದೀಷ್ಟ । ತೃಷ್ಣಯಾ । ಸಹ ॥ ೬ ॥

ಸಾಯಣಭಾಷ್ಯಂ

ಹೇ ಮರುತೋ ನೋಽಸ್ಮಾನ್ ನಿರ್ಋತಿಃ ರಕ್ಷೋಜಾತಿದೇವತಾ ಮೋ ಷು ವಧೀತ್ । ಸರ್ವಥಾ ವಧಂ ಮಾ ಕಾರ್ಷೀತ್ । ಕೀದೃಶೀ ! ಪರಾಪರಾ ಉತ್ಕೃಷ್ಟಾದಪ್ಯುತ್ಕೃಷ್ಟಾ । ಅತಿಬಲೇತ್ಯರ್ಥಃ । ಅತ ಏವ ದುರ್ಹಣಾ ಕೇನಾಪಿ ಹಂತುಂ ದುಃಶಕ್ಯಾ । ಸಾ ನಿರ್ಋತಿಸ್ತೃಷ್ಣಯಾ ಸಹ ಪದೀಷ್ಟ । ಪತತು । ಅಸ್ಮದೀಯಾ ತೃಷ್ಣಾಬಾಧಿಕಾ ನಿರ್ಋತಿಶ್ಚ ವಿನಶ್ಯತ್ವಿತ್ಯರ್ಥಃ ॥ ಮೋ ಷು ಣಃ । ಸುಞ ಇತಿ ಷತ್ವಂ । ನಶ್ಚ ಧಾತುಸ್ಥೋರುಷಭ್ಯ ಇತಿ ಣತ್ವಂ । ದುರ್ಹಣಾ । ಈಷದ್ದುಃಸುಷ್ವಿತ್ಯಾದಿನಾ ಹಂತೇಃ ಕರ್ಮಣಿ ಖಲ್ । ಲಿತ್ಸ್ವರೇಣ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ವಧೀತ್ । ಲುಙಿ ಹಂತೇರ್ಲುಙಿ ಚ। ಪಾ. ೨-೪-೪೩ । ಇತಿ ವಧಾದೇಶಃ । ಸಿಚೀಡಾಗಮಃ । ವಧಾದೇಶಸ್ಯಾದಂತತ್ವಾದೇಕಾಚ ಉಪದೇಶ ಇತೀಟ್ಪ್ರತಿಷೇಧೋ ನ ಭವತಿ । ಅತೋ ಲೋಪೇ ಸತಿ ತಸ್ಯ ಸ್ಥಾನಿವತ್ತ್ವಾದತೋ ಹಲಾದೇಃ । ಪಾ. ೭-೨-೭ । ಇತಿ ವೃದ್ಧ್ಯಭಾವಃ । ಇಟ ಈಟಿ । ಪಾ. ೮-೨-೨೮ । ಇತಿ ಸಿಚೋ ಲೋಪಃ । ಪದೀಷ್ಟ । ಪದ ಗತೌ । ಆಶೀರ್ಲಿಙಿ ಛಂದಸ್ಯುಭಯಥೇತಿ ಸಾರ್ವಧಾತುಕತ್ವಾತ್ಸಲೋಪಃ । ಆರ್ಧಧಾತುಕತ್ವಾತ್ಸುಡಾಗಮಃ । ಪ್ರತ್ಯಯಸ್ವರಃ । ತೃಷ್ಣಯಾ । ಞಿತೃಷಾ ಪಿಪಾಸಾಯಾಂ । ತೃಷಿಶುಷಿರಸಿಭ್ಯಃ ಕಿಚ್ಚ । ಉ. ೩-೧೨ । ಇತಿ ನಪ್ರತ್ಯಯಃ । ನಿದಿತ್ಯನುವೃತ್ತೇರಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಪರಾಪರಾ— (ಎಲೈ ಮರುತ್ತುಗಳೇ) ಅತ್ಯಂತ ಬಲಶಾಲಿಗಳಿಗಿಂತಲೂ ಬಲಶಾಲಿಯಾಗಿಯೂ (ಅದ್ದರಿಂದಲೇ) । **ದುರ್ಹಣಾ**— ಯಾರಿಂದಲೂ ಕೊಲ್ಲಲು ಸಾಧ್ಯವಿಲ್ಲದೆಯೂ ಇರುವ । **ನಿರ್ಋತಿಃ**— ರಾಕ್ಷಸಾಧಿದೇವತೆಯು । **ಮೋ ಷು ವಧೀತ್**— ನಮ್ಮನ್ನು ಖಂಡಿತ ಕೊಲ್ಲದಿರಲಿ. । (**ಸಾ**—ಆ ದೇವತೆಯು) । **ತೃಷ್ಣಯಾ ಸಹ**— (ನಮ್ಮ) ದುರಾಸೆಗಳೊಡನೆ । **ಪದೀಷ್ಟ**— (ಕೆಳಕ್ಕೆ) ಬಿದ್ದುಹೋಗಲಿ. (ನಾಶವಾಗಲಿ) ।

ಭಾವಾರ್ಥ

ಎಲೈ ಮರುತ್ತುಗಳೇ, ಅತ್ಯಂತ ಬಲಶಾಲಿಗಿಂತಲೂ ಬಲಶಾಲಿಯಾಗಿಯೂ ಅದ್ದರಿಂದಲೇ ಯಾರಿಂದಲೂ ಕೊಲ್ಲಲು ಸಾಧ್ಯವಿಲ್ಲದೆಯೂ ಇರುವ ನಿರ್ಋತಿಯೆಂಬ ರಾಕ್ಷಸಾಧಿದೇವತೆಯು ನಮ್ಮನ್ನು ಖಂಡಿತ ಕೊಲ್ಲದಿರಲಿ. ಆ ದೇವತೆಯು ನಮ್ಮ ದುರಾಸೆಗಳೊಡನೆ ಕೆಳಕ್ಕೆ ಬಿದ್ದು ನಾಶವಾಗಲಿ.

English Translation

Let not the most powerful and indestructible Nirriti destroy us; let him perish with our evil desires.

|| ವಿಶೇಷ ವಿಷಯಗಳು ||

**ಪರಾಪರಾ— ಉತ್ಕೃಷ್ಟಾದುತ್ಕೃಷ್ಟಾ |** ಅತಿಬಲಾ | ಅತ್ಯಂತ ಬಲಶಾಲಿಯಾದ.

**ನಿರ್ಋತಿಃ—** ರಕ್ಷೋಜಾತಿಗೆ ಸೇರಿದ ದೇವತೆಯು. ರಾಕ್ಷಸರು ಮನುಷ್ಯರಿಗೆ ಕೇಡನ್ನುಂಟುಮಾಡುವುದು ಸ್ವಭಾವವು. ಅದರಂತೆ ಆ ರಾಕ್ಷಸಗುಂಪಿಗೆ ಸೇರಿದ ನಿರ್ಋತಿಯು ನಮ್ಮನ್ನು ಹಿಂಸಿಸದಿರಲಿ ಎಂದಭಿಪ್ರಾಯವು.

**ದುರ್ಹಣಾ— ಕೇನಾಪಿ ಹಂತುಂ ದುಶ್ಶಕ್ಯಾ |** ಯಾರಿಂದಲೂ ಕೊಲ್ಲಲ್ಪಡಲು ಅಸಾಧ್ಯವಾದ

**ಪದೀಷ್ಟ— ಪತತು |** ಬೀಳಲಿ, ನಾಶವಾಗಲಿ

**ತೃಷ್ಣಯಾ—** ಆಸೆ, ದುರಾಸೆ, ಕೆಟ್ಟ ಅಪೇಕ್ಷೆಗಳು evil desires

ವ್ಯಾಕರಣಪ್ರಕ್ರಿಯಾ

**ಮೋ ಷು ಣಃ—** 'ಊರ್ಧ್ವ ಊ ಷು ಣಃ' (ಋ. ಸಂ. ೧-೩೬-೧೩) ರಲ್ಲಿ ವಿವರಿಸಲಾಗಿದೆ.

**ದುರ್ಹಣಾ—** ಹನ ಹಿಂಸಾಗತ್ಯೋಃ **ಈಷದ್ದುಸ್ಸುಷು ಕೃಚ್ಛ್ರಾಕೃಚ್ಛ್ರಾರ್ಥೇಷು ಖಲ್** (ಪಾ. ಸೂ. ೩-೩-೧೨೬) ಕೃಚ್ಛ್ರ, ಅಕೃಚ್ಛ್ರ ಎಂಬ ಅರ್ಥವನ್ನು ಬೋಧಿಸುವ ಈಷತ್, ದುಸ್, ಸುಗಳು ಉಪಪದವಾಗಿದ್ದರೆ ಭಾವಾರ್ಥದಲ್ಲಿಯೂ ಕರ್ಮಾರ್ಥದಲ್ಲಿಯೂ ಧಾತುಗಳ ಮುಂದೆ ಖಲ್ ಬರುತ್ತೆ ಎಂದು ಅರ್ಥ. ಸಾಮಾನ್ಯವಾಗಿ ಅರ್ಥಕ್ಕೆ ನಿರ್ದೇಶವಿದ್ದರೂ ಯೋಗ್ಯತಾವಶದಿಂದ ವಿಷಯವಿಭಾಗವು ಏರ್ಪಡುತ್ತದೆ. ದುರ್ ಎಂಬುದು ಕೃಚ್ಛ್ರಾರ್ಥದಲ್ಲಿಯೇ ಉಪಪದವಾಗುತ್ತೆ. ಮಿಕ್ಕವು ಅಕೃಚ್ಛ್ರಾರ್ಥದಲ್ಲಿಯೇ ಉಪಪದವಾಗುತ್ತವೆ ಇದರಿಂದ ಖಲ್ ಬಂದರೆ ದುಸ್+ಹನ್+ಅ. **ಸಸಜುಷೋರುಃ** ಎಂದು ಸ್‌ಗೆ ರುತ್ವ. **ಅಜಾದ್ಯತಷ್ಟಾಪ್** (ಪಾ. ಸೂ. ೪-೧-೪) ಅಜಾದಿಗಣಕ್ಕೆ ಸೇರಿದ ಶಬ್ದಗಳು, ಅಕಾರಾಂತಶಬ್ದಗಳು ಇವುಗಳ ಸ್ತ್ರೀತ್ವ ತೋರುವಾಗ ಟಾಪ್ ಬರುತ್ತೆ ಎಂದು ಟಾಪ್, ಸವರ್ಣದೀರ್ಘ, **ಸುದುರೋಃ ಪ್ರತಿಷೇಧೋನುಮ್ವಿಧಿ ತತ್ವಣತ್ವ ಷತ್ವೇಷು** (ಪಾ. ಸೂ. ೧-೪-೬೦-೮) ಎಂದು ಣತ್ವವನ್ನು ಮಾಡುವಾಗ ದುರ್‌ಗೆ ಉಪಸರ್ಗಸಂಜ್ಞೆಯು ಪ್ರತಿಷೇಧಿಸಲ್ಪಟ್ಟಿದೆ.

ಈ ಪ್ರತಿಷೇಧವು ಛಂದಸ್ಸಾದ್ದರಿಂದ ಇಲ್ಲಿ ಬರುವುದಿಲ್ಲ. ಆದ್ದರಿಂದ **ಹನ್ತೇಃ** (ಪಾ. ಸೂ. ೮-೪-೨೨) ಉಪಸರ್ಗದಲ್ಲಿರುವ ರೇಫ ಷಕಾರಗಳ ಮುಂದೆ ಇರುವ ನಕಾರಕ್ಕೆ ಣಕಾರ ಬರುತ್ತೆ ಎಂದು ಣತ್ವವು ಬರುತ್ತೆ. **ಲಿತಿ** (ಪಾ. ಸೂ, ೬-೧-೧೯೩) ಎಂದು ಪ್ರತ್ಯಯದ ಹಿಂದೆ ಇರುವುದು ಉದಾತ್ತ.

**ವಧೀತ್**—ಹನ ಹಿಂಸಾಗತ್ಯೋಃ ಅದಾದಿ, ಲುಙ್. **ಲುಙಿ ಚ** (ಪಾ. ಸೂ. ೨-೪-೪೩) ಲುಙ್ ಪರದಲ್ಲಿದ್ದರೆ ಹನ್ ಧಾತುವಿಗೆ ವಧ ಎಂಬ ಅಕಾರಾಂತವಾದ ಆದೇಶ ಬರುತ್ತೆ ಎಂದು ಹನ್‌ಗೆ ವಧ ಆದೇಶ. **ಚ್ಲೇಸ್ಸಿಚ್** (ಪಾ. ಸೂ. ೩-೧-೪೪) ಎಂದು ಸಿಚ್, ಇಡಾಗಮ, **ಮನ್ಯಹನ್ನಾಪ್** ಎಂದು ಅನುದಾತ್ತೋಪದೇಶ ಕಾರಿಕೆಯಲ್ಲಿ ಹನ್‌ಗೆ ಪಾಠ ಇದೆ. ಅದು ಅನುದಾತ್ತೋಪದೇಶ. **ಏಕಾಚ ಉಪದೇಶೇಽನುದಾತ್ತಾತ್** (ಪಾ. ಸೂ. ೭-೨-೧೦) ಉಪದೇಶದಲ್ಲಿ ಯಾವ ಧಾತುವು ಏಕಾಚ್ಕವೂ ಅನುದಾತ್ತವೂ ಆಗಿದೆಯೋ ಅದರ ಮುಂದೆ ಇರುವ ವಲಾದಿಯಾದ ಆರ್ಧಧಾತುಕಕ್ಕೆ ಇಡಾಗಮ ಬರುವುದಿಲ್ಲ ಎಂದು ಇಟ್‌ಗೆ ನಿಷೇಧವು ಯದ್ಯಪಿ ಪ್ರಾಪ್ತವಾಗುತ್ತೆ. ಆದರೆ ಈ ಸೂತ್ರದಲ್ಲಿ **ಅಚಃ** ಎಂದಿಷ್ಟು ಹೇಳಿದರೂ ಇದು ಏಕವಚನಾಂತವಾದ್ದರಿಂದ ಆ ಏಕತ್ವವನ್ನು ವಿವಕ್ಷಿಸಿ ಮತ್ವರ್ಥಲಕ್ಷಣೆಯಿಂದ ಅಜ್ವತಃ ಎಂದು ಅರ್ಥವನ್ನು ಹೇಳಬಹುದು. ಹೀಗೆ ಹೇಳಿದರೆ ಒಂದು ಅಜ್ಯುಕ್ತ ಎಂದು ಅರ್ಥವು ಸಿದ್ಧವೇ ಆಗುತ್ತೆ. ಹೀಗಿರುವಾಗ **ಏಕಾಚಃ** ಎಂದು ಏಕಪದಪ್ರಯೋಗವು ವ್ಯರ್ಥವಾಗುತ್ತೆ. ಈ ಏಕಪದಪ್ರಯೋಗ ಸಾಮರ್ಥ್ಯದಿಂದ ಎಲ್ಲಾ ಉಪದೇಶಗಳಲ್ಲಿಯೂ ಯಾವುದು ಏಕಾಚ್ಕವೇ ಆಗಿದೆಯೋ ಯಾವ ಉಪದೇಶದಲ್ಲಿಯೂ ಅನೇಕಾಚ್ಕವಾಗುವುದಿಲ್ಲವೋ ಅಂತಹ ಧಾತು ಮುಂದೆ ಇರುವ ವಾಲಾದ್ಯಾರ್ಧಧಾತುಕಕ್ಕೆ ಇಟ್ ಬರುವುದಿಲ್ಲ ಎಂದು ಏರ್ಪಡುತ್ತೆ. ಉಪದೇಶಗಳು ಸ್ಥಾನ್ಯುಪದೇಶ, ಆದೇಶೋಪದೇಶ ಎಂದು ಎರಡಿವೆ ಇಲ್ಲಿ ಸ್ಥಾನ್ಯುಪದೇಶದಲ್ಲಿ ಏಕಾಚ್ಕವಾದರೂ ವಧ ಎಂಬ ಆದೇಶೋಪದೇಶದಲ್ಲಿ ಅನೇಕಾಚ್ಕವಾಗುತ್ತೆ. ಆದ್ದರಿಂದ ಇಟ್‌ಗೆ ಇಲ್ಲಿ ನಿಷೇಧ ಬರುವುದಿಲ್ಲ “ ಅಚ ಇತ್ಯೇಕತ್ವವಿವಕ್ಷಯಾ ತದ್ವತೋ ಗ್ರಹಣೇನ ಚ ಸಿದ್ಧೇ ಏಕಗ್ರಹಣಸಾಮರ್ಥ್ಯಾದನೇಕಾಚ್ಕೋಪದೇಶೋ ವ್ಯಾವರ್ತ್ಯತೇ । ತೇನ ವಧೇರ್ಹಸ್ತ್ಯುಪದೇಶೇ ಏಕಾಜ್ಕೋಽಪಿ ನ ನಿಷೇಧಃ । ಆದೇಶೋಪದೇಶೇಽನೇಕಾಚ್ತ್ವಾತ್ ” ಎಂದು ಕೌಮುದಿಯಲ್ಲಿ ಹೇಳಿರುವರು. ಹೀಗೆ ಇಡಾಗಮಕ್ಕೆ ವಾರಣೆಯಾಯಿತು. ಇನ್ನು ವೃದ್ಧಿಗೆ ವಾರಣೆಯನ್ನು ಮಾಡುವೆವು. ವಧ+ಇಸ್+ಲಿಙ್, **ಅತೋ ಲೋಪಃ** (ಪಾ. ಸೂ. ೬-೪-೪೮) ಆರ್ಧಧಾತುಕದ ಉಪದೇಶಕಾಲದಲ್ಲಿ ಯಾವುದು ಹ್ರಸ್ವಾಕಾರಾಂತವೋ ಅದರ ಅಕಾರಕ್ಕೆ ಆರ್ಧಧಾತುಕ ಪರದಲ್ಲಿರುವಾಗ **ಲೋಪ ಬರುತ್ತೆ** ಎಂದು ಅಕಾರಕ್ಕೆ ಲೋಪ, ವಧ್+ಇಸ್+ಲಿಙ್ **ಅತೋಹಲಾದೇರ್ಲಘೋಃ** (ಪಾ. ಸೂ. ೭-೨-೭) ವ್ಯಂಜನಾದಿಯಾದ ಯಾವ ಅಂಗವಿದೆಯೋ ಆ ಅಂಗದ ಅವಯವವಾದ ಹ್ರಸ್ವಾಕಾರಕ್ಕೆ ಇಡಾದಿಯೂ ಪರಸ್ಮೈಪದಪರಕವೂ ಆದ ಸಿಚ್ ಪರದಲ್ಲಿರುವಾಗ ವಿಕಲ್ಪವಾಗಿ ವೃದ್ಧಿ ಬರುತ್ತೆ ಎಂದು ವಧ್‌ನ ಅಕಾರಕ್ಕೆ ವೃದ್ಧಿಯು ಪ್ರಾಪ್ತವಾಗುತ್ತೆ. ಆದರೆ ವೃದ್ಧಿಯನ್ನು ಮಾಡುವಾಗ ಅಕಾರಕ್ಕೆ ಬಂದ ಲೋಪಕ್ಕೆ ಸ್ಥಾನಿವದ್ಭಾವ ಬರುತ್ತೆ. **ಅಚಃ ಪರಸ್ಮಿನ್ಪೂರ್ವವಿಧೌ** (ಪಾ. ಸೂ. ೧-೧-೫೭) ಪರವನ್ನು ನಿಮಿತ್ತವಾಡಿಕೊಂಡು ಬಂದುದೂ ಅಚ್ಚಿನ ಸ್ಥಾನದಲ್ಲಿ ಬಂದುದೂ ಆದ ಆದೇಶವು ಸ್ಥಾನಿಯಾದ ಅಚ್ಚಿಗಿಂತಲೂ ಹಿಂದೆ ಇರುವುದಕ್ಕೆ ಕಾರ್ಯವನ್ನು ಮಾಡುವಾಗ ಸ್ಥಾನಿವದ್ಭಾವವನ್ನು ಹೊಂದುವುದು ಇಲ್ಲಿ ಪರದಲ್ಲಿರುವ ಆರ್ಧಧಾತುಕವನ್ನು ನಿಮಿತ್ತವಾಡಿಕೊಂಡು ಅಕಾರಕ್ಕೆ ಲೋಪ ಬಂದಿದೆ. ಸ್ಥಾನಿಯಾದ ಅಕಾರಕ್ಕಿಂತ ಪೂರ್ವದಲ್ಲಿರುವ ಅಕಾರಕ್ಕೆ ವೃದ್ಧಿರೂಪ ಕಾರ್ಯವನ್ನು ಮಾಡುವಾಗ ಸ್ಥಾನಿವದ್ಭಾವವನ್ನು ಹೊಂದುವುದು ಎಂದರೆ ಸ್ಥಾನಿಯಾದ ಅಕಾರ ಇದ್ದಂತೆ ಆಗುತ್ತೆ. ವಧ+ಇಸ್+ಲಿಙ್ ಎಂದು

ಇರುವಂತೆ ಆಗುತ್ತೆ. ಈ ಅಕಾರದಿಂದ ವ್ಯವಧಾನ ಬರುವುದರಿಂದ ಇಡಾದಿಸಿಚ್ಚು ಪರವಾಗುವುದಿಲ್ಲ. ಆದ್ದರಿಂದ ವೃದ್ಧಿ ಬರುವುದಿಲ್ಲ. ಲಿಙ್‌ಗೆ ತಿಪ್. **ಇತಶ್ಚ** (ಪಾ. ಸೂ. ೩-೪-೧೦೦) ಎಂದು ಇಕಾರಕ್ಕೆ ಲೋಪ. **ಅಸ್ತಿಸಿಚೋಽಪೃಕ್ತೇ** (ಪಾ. ಸೂ. ೭-೩-೯೬) ವಿದ್ಯಮಾನವಾದ ಸಿಚ್, ಅಸ್ ಧಾತು ಇವುಗಳ ಮುಂದೆ ಇರುವ ಅಪೃಕ್ತವಾದ ವ್ಯಂಜನಕ್ಕೆ ಈಟ್ ಆಗಮ ಬರುತ್ತೆ ಎಂದರ್ಥ ಒಂದೇ ವರ್ಣ ಇರುವ ಪ್ರತ್ಯಯಕ್ಕೆ ಅಪೃಕ್ತ ಎಂದು ಹೆಸರು. ಇದರಿಂದ ತ್‌ಗೆ ಈಟ್ ಆಗಮ. ವರ್ಧ್+ಇಸ್+ಈತ್. **ಇಟ ಈಟಿ** (ಪಾ. ಸೂ. ೮-೨-೨೮) ಇಟ್‌ಗಿಂತ ಪರದಲ್ಲಿರುವುದೂ, ಈಟ್ಟಿನ ಹಿಂದೆ ಇರುವುದೂ ಆದ ಸಿಚ್‌ಗೆ ಲೋಪ ಬರುತ್ತೆ ಎಂದು ಸಿಚ್‌ಗೆ ಲೋಪ. ವರ್ಧ್+ಇ+ಈತ್, ಇ ಈಕಾರಗಳಿಗೆ **ಅಕಃಸವರ್ಣೇ ದೀರ್ಘಃ** (ಪಾ. ಸೂ. ೬-೧-೧೦೧) ಎಂದು ಸವರ್ಣದೀರ್ಘವನ್ನು ಮಾಡುವಾಗ **ಪೂರ್ವತ್ರಾಸಿದ್ಧಮ್** (ಪಾ ಸೂ. ೮-೨-೧) ಸಪಾದ ಸಪ್ತಾಧ್ಯಾಯಿಯ ಶಾಸ್ತ್ರವನ್ನು ಮಾಡುವಾಗ ತ್ರಿಪಾದಿಯ ಶಾಸ್ತ್ರವು ಅಸಿದ್ಧವಾಗುತ್ತೆ ಎಂದು ಆರನೇ ಅಧ್ಯಾಯದ ಸವರ್ಣದೀರ್ಘಮಾಡುವಾಗ ಎಂಟನೇ ಅಧ್ಯಾಯ ಎರಡನೇ ಪಾದದ ಸೂತ್ರದಿಂದ ಬರುವ ಸಿಜ್ಲೋಪವು ಅಸಿದ್ಧವಾಗುತ್ತೆ. ಆದ್ದರಿಂದ ಸವರ್ಣದೀರ್ಘವು ಹೇಗೆ ಬರುವುದು ಎಂದರೆ **ಸಿಜ್ಲೋಪ ಏಕಾದೇಶೇ ಸಿದ್ಧೋವಾಚ್ಯಃ** ಏಕಾದೇಶವನ್ನು ಮಾಡುವಾಗ ಸಿಚ್ಚಿನ ಲೋಪವು ಸಿದ್ಧವಾಗುತ್ತೆ ಎಂದು ಹೇಳಿರುವುದರಿಂದ ಸಿಜ್ಲೋಪವು ಅಸಿದ್ಧವಾಗುವುದಿಲ್ಲ. ಸವರ್ಣದೀರ್ಘ ಬಂದರೆ ವರ್ಧ್+ಈತ್=ವರ್ಧೀತ್. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪-೭೫) ಮಾಙ್ ಯೋಗ ಇಲ್ಲದೇ ಇದ್ದರೂ ಛಂದಸ್ಸಿನಲ್ಲಿ ಅಟ್-ಆಟ್‌ಗಳಿಗೆ ನಿಷೇಧ ಬಹುಲವಾಗಿ ಬರುತ್ತೆ ಎಂದು ಅಡಾಗಮ ಬರುವುದಿಲ್ಲ.

**ಪದೀಷ್ಟ**—ಪದ ಗತೌ, ದಿವಾದಿಧಾತು, ಇದರ ಮುಂದೆ ಆಶೀರ್ಲಿಙ್ ಅದಕ್ಕೆ ತ ಆದೇಶ **ಲಿಙಸ್ಸೀಯುಟ್** (ಪಾ. ಸೂ ೩-೪-೧೦೨) ಆತ್ಮನೇಪದದಲ್ಲಿ ಲಿಙ್‌ಗೆ ಸೀಯುಟ್ ಆಗಮ ಬರುತ್ತೆ ಎಂದು ಸೀಯುಡಾಗಮ. ಪದ್+ಸೀಯ್ ತ. **ಸುಟ್ ತಿಥೋಃ** (ಪಾ. ಸೂ ೩-೪-೧೦೭) ಲಿಙ್‌ನ ಸ್ಥಾನದಲ್ಲಿ ಬಂದ ತಕಾರ ಥಕಾರಗಳಿಗೆ ಸುಟ್ ಆಗಮ ಬರುತ್ತೆ ಎಂದು ತಗೆ ಸುಟ್. ಪದ್+ಸೀಯ್+ಸ್‌ತ, **ಛಂದಸ್ಯುಭಯಥಾ** (ಪಾ. ಸೂ. ೩-೪-೧೭) ಧಾತ್ವಧಿಕಾರದಲ್ಲಿ ವಿಹಿತವಾದ ಪ್ರತ್ಯಯವು ಛಂದಸ್ಸಿನಲ್ಲಿ ಸಾರ್ವಧಾತುಕಸಂಜ್ಞಕವೂ ಆರ್ಧಧಾತುಕ ಸಂಜ್ಞಕವೂ ಆಗುತ್ತೆ ಎಂದು ಸಾರ್ವಧಾತುಕಸಂಜ್ಞೆಯು ಲಿಙ್‌ಗೆ ಇದೆ. **ಸೀಯ್ಸ್‌ತ** ಇದು ಇಷ್ಟೂ **ಯದಾಗಮಾಸ್ತ-ದ್ಗುಣೀಭೂತಾಸ್ತದ್ಗ್ರಹಣೇನ ಗೃಹ್ಯಂತೇ** (ಪರಿಭಾ ೧೧) ಯಾವುದಕ್ಕೆ ಆಗಮವು ಬಂದಿದೆಯೋ ಅದಕ್ಕೆ ಅದು ಉಪಸರ್ಜನವಾಗುವುದರಿಂದ ಆ ಆಗಮದಿಂದ ಕೂಡಿರುವುದನ್ನೂ ಅದು ಎಂದೇ ಗ್ರಹಿಸಬೇಕು ಎಂದು ಲಿಙ್ ಎಂದು ಭಾವಿಸಲ್ಪಡುತ್ತೆ. **ಲಿಙಸ್ಸಲೋಪೋಽನನ್ತ್ಯಸ್ಯ** (ಪಾ. ಸೂ ೭-೨-೭೯) ಸಾರ್ವಧಾತುಕಸಂಜ್ಞೆಯನ್ನು ಹೊಂದಿರುವ ಲಿಙ್‌ನ ಸಂಬಂಧಿಯಾದ ಕೊನೆಯಲ್ಲಿಲ್ಲದ ಸಕಾರಕ್ಕೆ ಲೋಪ ಬರುತ್ತೆ ಎಂದು ಸೀಯುಟ್‌ನ ಸಕಾರಕ್ಕೆ ಲೋಪ. ಆರ್ಧಧಾತುಕ ಸಂಜ್ಞೆ ಇರುವುದರಿಂದ ಸುಟ್ ಆಗಮದಿಂದ ಬಂದ ಸಕಾರಕ್ಕೆ ಲೋಪ ಬರುವುದಿಲ್ಲ ಪದ್+ಈಯ್ ಸ್‌ತ, **ಲೋಪೋ ವ್ಯೋರ್ವಲಿ** (ಪಾ. ಸೂ ೬-೧-೬೬) ವಕಾರ ಯಕಾರಗಳಿಗೆ ವಲ್ ಪರದಲ್ಲಿದ್ದರೆ ಲೋಪ ಬರುತ್ತೆ ಎಂದು ಸ್‌ನ ಹಿಂದೆ ಇರುವ ಯ್‌ಗೆ ಲೋಪ. **ಆದೇಶಪ್ರತ್ಯಯಯೋಃ** (ಪಾ ಸೂ. ೮-೩-೫೯) ಇಣ್, ಕವರ್ಗಗಳ ಮುಂದೆ ಇರುವ ಆದೇಶರೂಪ ಸಕಾರಕ್ಕೂ ಪ್ರತ್ಯಯಾವಯವವಾದ ಸಕಾರಕ್ಕೂ ಷತ್ವ ಬರುತ್ತೆ

ಎಂದು ಸಕಾರಕ್ಕೆ ಷಕಾರ, ಪದ್+ಈಷ್+ತ, **ಷ್ಟುನಾಷ್ಟುಃ** (ಪಾ. ಸೂ. ೮-೪-೪೧) ಷಕಾರ ಟವರ್ಗಗಳ ಯೋಗ ವಿದ್ದರೆ ಸಕಾರ ತವರ್ಗಗಳಿಗೆ ಕ್ರಮವಾಗಿ ಷಕಾರ ಟವರ್ಗಗಳು ಬರುವುವು ಎಂದು ತವರ್ಗದ ಮೊದಲನೆಯ ಅಕ್ಷರ ವಾದ ತಕಾರಕ್ಕೆ ಟವರ್ಗದ ಮೊದಲನೆಯ ಅಕ್ಷರವಾದ ಟಕಾರ, ಪದ್+ಈಷ್+ಟ=ಪದೀಷ್ಟ ಎಂದಾಗುತ್ತೆ. ಲೋಕ ದಲ್ಲಿ ಪತ್ಸೀಷ್ಟ ಎಂದು ರೂಪವಾಗುತ್ತೆ. ಇದು ಮೂರನೇ ಪಾದದ ಆದಿಯಲ್ಲಿದೆ, **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುವುದಿಲ್ಲ. ಪ್ರತ್ಯಯಸ್ವರದಿಂದ ತ ಉದಾತ್ತ.

**ತೃಷ್ಣಯಾ**—ಞಿತೃಷಾ ಪಿಪಾಸಾಯಾಂ **ತುಷಿಶುಷಿರಸಿಭ್ಯಃ ಕಿಚ್ಚ** (ಉ. ಸೂ. ೩-೨೯೩) **ಕ್ಯಾವ್ಯಾಜ್ಯಾ........ನಿತ್** (ಉ. ಸೂ. ೩-೨೯೦) ಇದರಿಂದ ನಿತ್ ಎಂದು ಅನುವೃತ್ತವಾಗುತ್ತೆ. ಏವಂಚ ಈ ಧಾತುಗಳ ಮುಂದೆ ನಪ್ರತ್ಯಯ ಬರುತ್ತೆ ಅದು ಕಿತ್ತೂ ನಿತ್ತೂ ಆಗುತ್ತೆ ಎಂದು ಸೂತ್ರದ ಅರ್ಥ. ಇದರಿಂದ ನ ಪ್ರತ್ಯಯ, ತೃಷ್+ನ. ಪ್ರತ್ಯಯ ಕಿತ್ ಆದ್ದರಿಂದ ಗುಣಕ್ಕೆ ನಿಷೇಧ, ನಿತ್ ಆದ್ದರಿಂದ ಆದ್ಯುದಾತ್ತ, ಟಾಪ್, ತೃತೀಯಾ ಏಕವಚನ. || ೬ ||



ಸಂಹಿತಾಪಾಠಃ

ಸತ್ಯಂ ತ್ವೇಷಾ ಅಮವಂತೋ ಧನ್ವಂಚಿದಾ ರುದ್ರಿಯಾಸಃ।
ಮಿಹಂ ಕೃಣ್ವಂತ್ಯವಾತಾಂ || ೭ ||

ಪದಪಾಠಃ

ಸತ್ಯಂ । ತ್ವೇಷಾಃ । ಅಮಽವನ್ತಃ । ಧನ್ವನ್ । ಚಿತ್ । ಆ । ರುದ್ರಿಯಾಸಃ ।
ಮಿಹಂ । ಕೃಣ್ವನ್ತಿ । ಅವಾತಾಂ || ೭ ||

ಸಾಯಣಭಾಷ್ಯಂ

**ಧನ್ವನ್ ಚಿತ್ ಮರುದೇಶೇಽಪಿ ರುದ್ರಿಯಾಸೋ ರುದ್ರೇಣ ಪಾಲಿತತ್ವಾತ್ತದೀಯಾ ಮರುತ ಆ ಸರ್ವತೋಽವಾತಾಂ ವಾಯುರಹಿತಾಂ ಮಿಹಂ ವೃಷ್ಟಿಂ ಕುರ್ವಂತಿ । ತದೇತತ್ಸತ್ಯಂ । ಕೀದೃಶಾ ರುದ್ರಿಯಾಸಃ । ತ್ವೇಷಾ ದೀಪ್ತಾ ಅಮವಂತೋ ಬಲವಂತಃ । ಮರುತಾಂ ರುದ್ರಪಾಲನಮಾಖ್ಯಾನೇಷು ಪ್ರಸಿದ್ಧಂ ॥ ಧನ್ವನ್ । ರಿವಿ ರವಿ ಧವಿ ಗತ್ಯರ್ಥಾಃ । ಇದಿತ್ವಾನ್ನುಮ್ । ಕನಿನ್ಯುವೃಷಿತಕ್ಷೀತ್ಯಾದಿನಾ ಕನಿನ್ । ನಿತ್ವಾದಾದ್ಯುದಾತ್ತತ್ವಂ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ರುದ್ರಿಯಾಸಃ । ರುದ್ರಸ್ಯೇಮೇ ರುದ್ರಿಯಾಃ । ತಸ್ಯೇದಮಿತ್ಯರ್ಥೇ ಘಃ । ಆಜ್ಜಸೇರಸುಕ್ । ಮಿಹಂ । ಮಿಹ ಸೇಚನೇ। ಕ್ವಿಪ್ಚೇತಿ ಕ್ವಿಪ್ ಕೃಣ್ವಂತಿ । ಕೃವಿ ಹಿಂಸಾಕರಣಯೋಶ್ಚ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ತತ್ಸನ್ನಿಯೋಗೇನ ವಕಾರಸ್ಯ ಚಾಕಾರಾದೇಶಃ । ಅತೋ ಲೋಪೇನ ಲುಪ್ತಸ್ಯಸ್ಥಾನಿವದ್ಭಾವಾಲ್ಲಘೂಪಧಗುಣಾಭಾವಃ ॥**

॥ ಪ್ರತಿಪದಾರ್ಥ ॥

**ತ್ವೇಷಾಃ—** ಪ್ರಕಾಶವಮಾನರಾಗಿಯೂ । **ಅಮವಂತಃ—** ಬಲಶಾಲಿಗಳಾಗಿಯೂ । **ರುದ್ರಿಯಾಸಃ—** ರುದ್ರನಿಂದ ಪೋಷಿತರಾದುದರಿಂದ ಅವನಿಗೆ ಸೇರಿದವರಾಗಿಯೂ ಇರುವ ಮರುತ್ತುಗಳು । **ಧನ್ವನ್ ಚಿತ್—**ಮರುಭೂಮಿಯಲ್ಲೂ ಸಹ । **ಆ—** ಸುತ್ತಲೂ । **ಅವಾತಾಂ—** ವಾಯುರಹಿತವಾದ । **ಮಿಹಂ—** ಮಳೆಯನ್ನು । **ಕೃಣ್ವಂತಿ—** ಸುರಿಸುತ್ತಾರೆ. । **ಸತ್ಯಂ—** (ಇದು) ಖಂಡಿತವು.

ಭಾವಾರ್ಥ

ಪ್ರಕಾಶಮಾನರೂ, ಶಕ್ತಿಯುತರೂ ಆದ ರುದ್ರಪುತ್ರರು ಎಂದರೆ ಮರುದ್ದೇವತೆಗಳು ಮರುಭೂಮಿಯಲ್ಲಿಯೂ ಸಹ ಗಾಳಿಯಿಲ್ಲದೆ ಮಳೆಯನ್ನು ಸುರಿಸುತ್ತಾರೆ. ಇದು ಸತ್ಯವು.

English Translation

The brilliant and mighty Maruts, cherished by Rudra send down rain without wind ( even ) upon the desert.

ವಿಶೇಷ ವಿಷಯಗಳು

**ಧನ್ವನ್ ಚಿತ್— ಮರುದೇಶೇಽಪಿ** । ಮಳೆ ಬೀಳದಿರುವ ಮರುಭೂಮಿ desert. ಧನ್ವನ್ ಶಬ್ದಕ್ಕೆ ಯಾಸ್ಕರು **ಧನ್ವಾಂತರಿಕ್ಷಂ ಧನ್ವಂತ್ಯಸ್ಮಾದಾಪಃ** ಧನ್ವ ಎಂದರೆ ಅಂತರಿಕ್ಷವು ಮಳೆಯು ಇದರ (ಅಂತರಿಕ್ಷದ)

ಮೂಲಕ ಬೀಳುವುದರಿಂದ ಧನ್ವ ಎಂದರೆ ಅಂತರಿಕ್ಷವೆಂದು ಹೇಳಿರುವರು. (ನಿ. ೫-೫) ಭಾಷ್ಯಕಾರರು ಮರುಭೂಮಿ ಯೆಂದು ಅರ್ಥವಿವರಣೆ ಮಾಡಿರುವರು.

**ರುದ್ರಿಯಾಸಃ— ರುದ್ರಸ್ಯ ಇಮೇ ರುದ್ರಪಾಲಿತಾ ಇತ್ಯರ್ಥಃ ।** ಮರುತ್ತುಗಳು ರುದ್ರನಿಂದ ಪಾಲಿತ ರಾದವರೆಂದೂ ಕೆಲವು ಸಂದರ್ಭಗಳಲ್ಲಿ ಇವರು ರುದ್ರಪುತ್ರರೆಂದೂ ವರ್ಣನೆ ಇರುವುದು. ಈ ವಿಷಯದಲ್ಲಿ—

(೧) **ಪ್ರ ಯೇ ಶುಂಭಂತೇ ಜನಯೋ ನ ಸಪ್ತಯೋ ಯಾಮನ್ರುದ್ರಸ್ಯಸೂನವಃ ಸುದಂಸಸಃ ।**
(ಋ. ಸಂ. ೧-೮೫-೧)

(೨) **ಇದಂ ಪಿತ್ರೇ ಮರುತಾಮುಚ್ಯತೇ ವಚಃ ಸ್ವಾದೋಃ ಸ್ವಾದೀಯೋ ರುದ್ರಾಯ ವರ್ಧನಂ ॥**
(ಋ. ಸಂ. ೧-೧೧೪-೬)

ಎಂಬ ಋಕ್ಕುಗಳು ಈ ವಿಷಯವನ್ನು ಸಮರ್ಥಿಸುವುದು.

**ಮಿಹಂ—ಸೇಚನಂ ।** ವೃಷ್ಟಿಯನ್ನು, ಮಳೆಯನ್ನು.

**ಅವಾತಾಂ-- ವಾಯುರಹಿತಾಂ ।** ಗಾಳಿಯ ಸಹಾಯವಿಲ್ಲದಿದ್ದರೂ ; ಈ ಶಬ್ದವನ್ನು ಇಲ್ಲಿ ಉಪಯೋಗಿ ಸಿರುವುದರ ಆಶಯವು ಸ್ಪಷ್ಟವಾಗಿಲ್ಲ.

ವ್ಯಾಕರಣಪ್ರಕ್ರಿಯಾ

**ಧನ್ವನ್**—ಧವಿ ರವಿ ಧವಿ ಗತ್ಯರ್ಥಾಃ, ಇದಿತ್. **ಇದಿತೋ ನುಮ್ ಧಾತೋಃ** (ಪಾ. ಸೂ. ೭-೧-೫೮) ಇದಿತ್ತಾದ ಧಾತುವಿನ ಅಂತ್ಯಸ್ವರದ ಮುಂದೆ ನುಮ್ ಆಗಮ ಬರುತ್ತೆ ಎಂದು ನುಮ್ ಆಗಮ. ಇದರಲ್ಲಿ ನ್ ಮಾತ್ರ ನಿಲ್ಲುವುದು. ಧನ್ವ್ ಎಂದಾಯಿತು. **ಕನಿ ನ್ಯು ವೃಷಿತಕ್ಷಿರಾಜಿ ಧನ್ವಿ ದ್ಯು ಪ್ರತಿದಿವಃ** (ಉ. ಸೂ. ೧-೧೫೪) ಈ ಧಾತುಗಳ ಮುಂದೆ ಕನಿನ್ ಪ್ರತ್ಯಯ ಬರುತ್ತೆ ಎಂದು ಕನಿನ್, ಇದರಲ್ಲಿ ಅನ್ ಉಳಿಯುತ್ತೆ. ಧನ್ವ್+ಅನ್-ಧನ್ವನ್, ಪ್ರತ್ಯಯವು ನಿತ್, ಆದ್ದರಿಂದ ಪ್ರತ್ಯಯಾಂತವು ಆದ್ಯುದಾತ್ತ. **ಸುಪಾಂಸುಲುಕ್**— ಎಂದು ಸಪ್ತಮಿಗೆ ಲುಕ್.

**ರುದ್ರಿಯಾಸಃ**—ರುದ್ರಸ್ಯ ಇಮೇ ರುದ್ರಿಯಾಃ, **ತಸ್ಯೇದಂ** ಎಂಬ ಅರ್ಥದಲ್ಲಿ ಘ ಪ್ರತ್ಯಯ. **ಆಯನೇ-ಯೀನೀಯಿಯಃ**—, ಎಂದು ಇಯ್ ಆದೇಶ. **ಯಸ್ಯೇತಿಚ** ಎಂದು ಅಕಾರಲೋಪ. ಜಸ್, ಅದಕ್ಕೆ **ಆಜ್ಜಸೇರಸುಕ್** ಅಸುಕ್ ಆಗಮ.

**ಮಿಹಮ್**— ಮಿಹ ಸೇಚನೇ. **ಕ್ವಿಪ್ ಚ** ಎಂದು ಕ್ವಿಪ್. ದ್ವಿತೀಯಾಏಕವಚನಾಂತ.

**ಕೃಣ್ವಂತಿ**— ಕೃವಿ ಹಿಂಸಾಕರಣಯೋಶ್ಚ. ಲಟ್, ಝಿ. **ಝೋಂತಃ** ಎಂದು ಅನ್ತಿ ಆದೇಶ. ಇದಿತ್ತಾಗಿದ್ದ ದ್ದರಿಂದ ನುಮ್. ಕೃನ್ವ್+ಅನ್ತಿ. **ಧಿನ್ವಿಕೃಣ್ವ್ಯೋರಚ** (ಪಾ. ಸೂ. ೩-೧-೮೦) ಶಬ್ವಿಷಯದಲ್ಲಿ ಧಿನ್ವ್ ಕೃನ್ವ್ ಇವು

ಗಳ ಮುಂದೆ ಉಪ್ರತ್ಯಯವೂ ಇವುಗಳ ಕೊನೆಯ ವರ್ಣಕ್ಕೆ ಅಕಾರವೂ ಬರುತ್ತೆ. ಎಂದು ಉಪ್ರತ್ಯಯ ಅಕಾರಗಳು ಬಂದರೆ ಧಿನ್+ಅ+ಉ+ಅನ್ತಿ, **ಅತೋಲೋಪಃ** (ಪಾ. ಸೂ ೬-೪-೪೮) ಎಂದು, ಉಪ್ರತ್ಯಯವನ್ನು ನಿಮಿತ್ತ ಮಾಡಿಕೊಂಡು ಅದರ ಹಿಂದೆ ಇರುವ ಅಕಾರಕ್ಕೆ ಲೋಪ, ಈಗ **ಪುಗಂತಲಘೂಪಧಸ್ಯಚ** (ಪಾ. ಸೂ ೭-೩-೮೬) ಪುಕ್ ಎಂಬುದು ಒಂದು ಆಗಮ. ಪುಕ್ ಅನ್ತಃ ಯಸ್ಯಸಃ ಪುಗನ್ತಃ, ಲಘ್ವೀ ಉಪಧಾ ಯಸ್ಯ ಸಃ ಲಘೂಪಧಃ, ಎಂದು ವಿಗ್ರಹ. ಸಾರ್ವಧಾತುಕಾರ್ಧಧಾತುಕಪ್ರತ್ಯಯಗಳು ಪರದಲ್ಲಿದ್ದರೆ ಪುಗಂತ ಅಥವಾ ಲಘೂಪಧವಾದ ಅಂಗದ ಇಕ್‌ಗೆ ಗುಣ ಬರುತ್ತೆ ಎಂದು ಧಿನ್ ಎಂಬ ಲಘೂಪಧದ ಇಕಾರಕ್ಕೆ ಗುಣವು ಪ್ರಾಪ್ತವಾಗುತ್ತೆ. ಆದರೆ **ಅತೋಲೋಪಃ** ಎಂಬುದರಿಂದ ಲೋಪವನ್ನು ಹೊಂದಿದ ಅಕಾರಕ್ಕೆ **ಅಚಃಪರಸ್ಮಿನ್ಪೂರ್ವವಿಧೌ** (**ಪಾ.** ಸೂ. ೧-೧-೫೭) ಎಂದು ಸ್ಥಾನಿವದ್ಭಾವ ಬರುತ್ತೆ. ಧಿನ್+ಅ+ಉ, ಎಂದು ಇದ್ದಂತೆ ಆಗುತ್ತೆ. ಈಗ ಇಕ್ ಆರ್ಧಧಾತುಕಾವ್ಯವಹಿತಪರಕವಾಗುವುದಿಲ್ಲ. ಆದ್ದರಿಂದ ಗುಣ ಬರುವುದಿಲ್ಲ

ಯದ್ಯಪಿ ಸ್ಥಾನಿವದ್ಭಾವ ಬರದೇ ಇದ್ದರೂ ನಕಾರವು ಮಧ್ಯೆ ಇರುವುದರಿಂದ ಇಕ್‌ಗೆ ಆರ್ಧಧಾತುಕ ಪರಕತ್ವವಿಲ್ಲ. ಆದ್ದರಿಂದ ಗುಣಕ್ಕೆ ಹೇಗೆ ಪ್ರಾಪ್ತಿ ಎಂದು ಸಂದೇಹ ಬರುವುದು ಸಹಜ, ಲಘೂಪಧಕ್ಕೆ ಗುಣ ಬರುವ ಕಡೆಗಳಲ್ಲೆಲ್ಲಾ ಒಂದು ವರ್ಣಕ್ಕೆ ವ್ಯವಧಾನವು ಅವಶ್ಯವಾಗಿ ಇದ್ದೇ ಇರುತ್ತೆ. ಆದ್ದರಿಂದ **ಯೇನ ನಾವ್ಯವಧಾನಂ ತೇನ ವ್ಯವಹಿತೇಪಿ**=ಯಾವುದರಿಂದ ಅವಶ್ಯವ್ಯವಧಾನವು ಸಂಭವಿಸುವುದೋ ಅದರಿಂದ ವ್ಯವಧಾನವಿದ್ದರೂ ಶಾಸ್ತ್ರವು ಪ್ರವರ್ತಿಸುವುದು, ಎಂದು ಹೇಳಿರುವುದರಿಂದ ಒಂದು ವರ್ಣದಿಂದ ವ್ಯವಧಾನವಿದ್ದರೂ ಲಘೂಪಧಗುಣ ಬರುತ್ತೆ. ಎರಡು ವರ್ಣಗಳಿಂದ ವವ್ಯಧಾನವಿದ್ದರೆ ಲಘೂಪಧಗುಣ ಬರುವುದಿಲ್ಲ. ಏವಂಚ ಸ್ಥಾನಿವದ್ಭಾವ ಬಂದರೆ ಎರಡು ವರ್ಣಗಳಿಂದ ವ್ಯವಧಾನ ಬರುವುದರಿಂದ ಲಘೂಪಧಗುಣ ಬರುವುದಿಲ್ಲ.

ಇನ್ನು ಅನ್ತಿ ಎಂಬುದನ್ನು ನಿಮಿತ್ತಮಾಡಿಕೊಂಡು ಉಪ್ರತ್ಯಯಕ್ಕೆ **ಸಾರ್ವಧಾತುಕಾರ್ಧಧಾತುಕಯೋಃ।** (ಪಾ. ಸೂ ೭-೩-೮೪) ಎಂದು ಗುಣ ಬರಲಿ ಎಂದರೆ. **ಸಾರ್ವಧಾತುಕಮಪಿತ್** ಎಂದು ಅನ್ತಿಯು ಙಿತ್ ಆಗುತ್ತೆ. ಏವಂಚ **ಕ್ಙಿತಿಚ** (ಪಾ. ೧-೧-೫) ಎಂದು ನಿಷೇಧ ಬರುವಕಾರಣ ಉಕಾರಕ್ಕೆ ಗುಣ ಬರುವುದಿಲ್ಲ. ಧಿನು+ಅನ್ತಿ, **ಇಕೋಯಣಚೀ** (ಪಾ. ಸೂ ೬ ೧-೭೭) ಎಂದು ಯಣಾದೇಶ, ಎಂದರೆ ಉಕಾರಕ್ಕೆ ವಕಾರ, ಧಿನ್ವನ್ತಿ, **ಋವರ್ಣಾನ್ನಸ್ಯ ಣತ್ವಂ ವಾಚ್ಯಮ್** ಎಂದು ನಕಾರಕ್ಕೆ ಣಕಾರ. ಧಿಣ್ವನ್ತಿ ಎಂದು ಆಗುತ್ತದೆ. ॥ ೭ ॥



॥ ಸಂಹಿತಾಪಾಠಃ॥

ವಾಶ್ರೇವ ವಿದ್ಯುನ್ಮಿಮಾತಿ ವತ್ಸಂ ನ ಮಾತಾ ಸಿಷಕ್ತಿ।
ಯದೇಷಾಂ ವೃಷ್ಟಿರಸರ್ಜಿ ॥ ೮ ॥

ಪದಪಾಠಃ

ವಾಶ್ರಾऽಇವ । ವಿऽದ್ಯುತ್ । ಮಿಮಾತಿ । ವತ್ಸಂ । ನ । ಮಾತಾ । ಸಿಸಕ್ತಿ ।
ಯತ್ । ಏಷಾಂ । ವೃಷ್ಟಿಃ । ಅಸರ್ಜಿ ॥ ೮ ॥

ಸಾಯಣಭಾಷ್ಯಂ

ಕಾರೀರ್ಯಾಂ ಮಾರುತಂ ಸಪ್ತಕಪಾಲಮಿತ್ಯಸ್ಯ ಹವಿಷೋ ವಾಶ್ರೇವ ವಿದ್ಯುದಿತ್ಯೇಷಾನುವಾಕ್ಯಾ। ವರ್ಷಕಾಮೇಷ್ಟಿರಿತಿ ಖಂಡೇ ಸೂತ್ರಿತಂ । ವಾಶ್ರೇವ ವಿದ್ಯುನ್ಮಿಮಾತಿ ಪರ್ವತಶ್ಚಿನ್ಮಹಿ ವೃದ್ಧೋ ಬಿಭಾಯ । ಆ. ೨-೧೩ । ಇತಿ ॥

ವಾಶ್ರೇವ ಶಬ್ದಯುಕ್ತಾ ಪ್ರಸ್ತುತಸ್ತನವತೀ ಧೇನುರಿವ ವಿದ್ಯುನ್ಮೇಘಸ್ಥಾ ದೃಶ್ಯಮಾನಾ ಸತೀ ಮಿಮಾತಿ । ಶಬ್ದಂ ಕರೋತಿ । ವಿದ್ಯುದ್ವೇಲಾಯಾಂ ಹಿ ಮೇಘಗರ್ಜನಂ ಪ್ರಸಿದ್ಧಂ । ಮಾತಾ ಧೇನುರ್ವತ್ಸಂ ನ ವತ್ಸಮಿವ ಸಿಷಕ್ತಿ । ಇಯಂ ವಿದ್ಯುನ್ಮರುತಃ ಸೇವತೇ । ಸಿಷಕ್ತಿಃ ಸೇವನಾರ್ಥಃ । ಸಿಷಕ್ತು ಸಚತ ಇತಿ ಸೇವಮಾನಸ್ಯ । ನಿ ೩-೨೧ । ಇತಿ ಯಾಸ್ಕೇನೋಕ್ತತ್ವಾತ್ । ಯದ್ಯಸ್ಮಾತ್ಕಾರಣಾದೇಷಾಂ ಮರುತಾಂ ಸಂಬಂಧಿನೀ ವೃಷ್ಟಿರಸರ್ಜಿ ಗರ್ಜನಸಹಿತೇ ವಿದ್ಯುತ್ಕಾಲೇ ವೃಷ್ಟಾ ಭವತಿ । ತಸ್ಮಾದ್ವಿದ್ಯುತೋ ಮರುತ್ಸೇವನಮುಪಪನ್ನಂ ॥ ವಾಶ್ರೇವ । ವಾಶೃ ಶಬ್ದೇ ಸ್ಫಾಯಿತಂಚೀತ್ಯಾದಿನಾ ರಕ್ । ಮಿಮಾತಿ । ಮಾಙ್ಮಾನೇ-ಶಬ್ದೇ ಚ । ವ್ಯತ್ಯಯೇನ ಪರಸ್ಮೈಪದಂ । ಜುಹೋತ್ಯಾದಿತ್ವಾತ್ ಶ್ಲುಃ । ಭೃಞಾಮಿತ್ । ಪಾ. ೭.೪.೭೬ । ಇತ್ಯಭ್ಯಾಸಸ್ಯೇತ್ವಂ । ಸಿಷಕ್ತಿ । ಷಚ ಸಮವಾಯೇ । ಲಟಿ ಬಹುಲಂ ಛಂದಸೀತಿ ಶಪಃ ಶ್ಲುಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಅಸರ್ಜಿ । ಸೃಜ ವಿಸರ್ಗೇ । ಕರ್ಮಣಿ ಲುಙ್ । ಚಿಣ್ ಭಾವಕರ್ಮಣೋಃ । ಪಾ. ೩.೧.೬೬ । ಇತಿ ಚಿಣ್ । ಚಿಣೋ ಲುಕ್ । ಪಾ. ೬-೪.೧೦೪ । ಇತಿ ತಶಬ್ದಸ್ಯ ಲುಕ್ । ಗುಣಃ । ಅಡಾಗಮ ಉದಾತ್ತಃ । ಯದ್ವೃತ್ತಯೋಗಾದನಿಘಾತಃ ॥

ಪ್ರತಿಪದಾರ್ಥ

**ವಾಶ್ರಾ ಇವ**— (ಮಾತೃಪ್ರೇಮದಿಂದ) ಕೂಗಿಕೊಂಡು ಶಬ್ದಮಾಡುವುದೂ (ಮತ್ತು ಉಕ್ಕಿಹರಿಯುವ ಹಾಲುಳ್ಳದ್ದೂ ಆದ) ಧೇನುವಿನಂತೆ । **ವಿದ್ಯುತ್**— ಮಿಂಚು (ಮೇಘ ಮಧ್ಯದಲ್ಲಿ ಕಾಣಿಸಿಕೊಂಡು) । **ಮಿಮಾತಿ**-ಶಬ್ದವನ್ನು ಮಾಡುತ್ತದೆ. । **ಮಾತಾ**— ತಾಯಿಯಾದ ಹಸುವು । **ವತ್ಸಂ ನ**— ಕರುವನ್ನು ಸೇವಿಸುವಂತೆ । **ಸಿಸಕ್ತಿ**— (ಮಿಂಚು ಮರುತ್ತುಗಳನ್ನು) ಸೇವಿಸುತ್ತದೆ. । **ಯತ್**— ಯಾವ ಕಾರಣದಿಂದ (ವಿದ್ಯುತ್ತು ಮರುತ್ತುಗಳನ್ನು ಸೇವಿಸುವುದರಿಂದ) । **ವೃಷ್ಟಿಃ**— ಮಳೆಯು । **ಅಸರ್ಜಿ**— ಸುರಿಸಲ್ಪಡುತ್ತದೆ. ।

ಭಾವಾರ್ಥ

ಹಸುವು ತನ್ನ ಕರುವಿಗಾಗಿ ಘಟ್ಟಿಯಾಗಿ ಕೂಗುತ್ತಾ ಅದನ್ನು ಹಿಂಬಾಲಿಸುವಂತೆ, ಮೇಘ ಮಧ್ಯದಲ್ಲಿರುವ ಮಿಂಚು ಘರ್ಜನೆ ಮಾಡುತ್ತದೆ. ಅದರಿಂದ ಮಳೆಯು ಸುರಿಯುತ್ತದೆ.

## English Translation

Like a parent cow that bellows for its calf, the lightning roars and hence the rain is set free by the Maruts

॥ ವಿಶೇಷವಿಷಯಗಳು ॥

ಕಾರೀರಿಯೆಂಬ ವೃಷ್ಟಿಕಾಮೇಷ್ಟಿಯಾಗದಲ್ಲಿ ಮರುದ್ದೇವತೆಗಳ ಸಪ್ತಕಪಾಲಸಹಿತವಾದ ಪುರೋಡಾಶವನ್ನು ಹೋಮ ಮಾಡುವಾಗ **ವಾಶ್ರೇವ ವಿದ್ಯುತ್** ಎಂಬ ಈ ಋಕ್ಕನ್ನು ಪುರೋನುವಾಕ್ಯಾ ಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ವರ್ಷಕಾಮೇಷ್ಟಿ ಎಂಬ ಖಂಡದಲ್ಲಿ ವಾಶ್ರೇವ ವಿದ್ಯುನ್ಮಿಮಾತಿ (ಋ. ಸಂ.-೧-೩೮-೮) ಪರ್ಜನ್ಯಾಯ ಪ್ರಗಾಯತ (ಋ. ಸಂ. ೫-೬೦-೩) ಎಂಬ ಸೂತ್ರದಿಂದ ವಿವೃತವಾಗಿರುವುದು.

**ವಾಶ್ರೇವ ಮಾತಾ ವತ್ಸಂ ನ— ಶಬ್ದಯುಕ್ತಾ ಧೇನುರಿವ ।** ಕರುವನ್ನು ಕೂಗಿಕೊಂಡು ಹೋಗುತ್ತಿರುವ ಹಸುವಿನಂತೆ

ಇಲ್ಲಿ ಹಸುವು ತನ್ನ ಮೊಲೆಯಲ್ಲಿ ಹಾಲನ್ನು ತುಂಬಿಕೊಂಡು ತನ್ನ ಕರುವನ್ನು ಕೂಗುತ್ತಾ ಹೋಗಿ ಅದಕ್ಕೆ ಹಾಲು ಕುಡಿಸುವಂತೆ ಮರುದ್ದೇವತೆಗಳು ಮೇಘ ಮಧ್ಯದಲ್ಲಿ ಮಿಂಚು ಶಬ್ದ ಮಾಡುತ್ತಿರುವಾಗ ಮಳೆಯನ್ನು ಸುರಿಸುವರು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ವಾಶ್ರೇವ—** ವಾಶೃ ಶಬ್ದೇ ದಿವಾದಿ. **ಸ್ಫಾಯಿ ತಞ್ಚಿ ವಞ್ಚಿ ಶಕಿ ಕ್ಷಿಪಿ ಕ್ಷುದಿ ಸೃಪಿ ತೃಪಿ ದೃಪಿ ವನ್ದ್ಯುನ್ದಿ ಶ್ವಿತಿ ವೃತ್ಯಜಿ ನೀಪದ ಮದಿ ಮುದಿ ಖಿದಿ ಛಿದಿ ಭಿದಿ ಮನ್ದಿ ಚನ್ದಿ ದಹಿ ದಸಿ ದಮ್ಭಿ ವಸಿ ವಾಶಿ ಶೀಙ್ ಹಸಿ ಸಿಧಿ ಶುಭಿಭ್ಯೋ ರಕ್** (ಉ. ಸೂ ೨-೧೭೦) ಈ ೩೨ ಧಾತುಗಳ ಮುಂದೆ ರಕ್ ಪ್ರತ್ಯಯ ಬರುತ್ತೆ ಎಂದು ರಕ್, ಟಾಪ್, ಸವರ್ಣದೀರ್ಘ, ವಾಶ್ರಾ ಇವ ವಾಶ್ರೇವ ಎಂದು ಇವ ಶಬ್ದದೊಂದಿಗೆ ನಿತ್ಯ ಸಮಾಸ

**ಮಿಮಾತಿ—**ಮಾಙ್ ಮಾನೇ ಶಬ್ದೇ ಚ. ಙಿತ್ ಆದ್ದರಿಂದ **ಅನುದಾತ್ತ ಙಿತ ಆತ್ಮನೇ ಪದಮ್** (ಪಾ. ಸೂ. ೧-೩-೧೨) ಎಂದು ಆತ್ಮನೇಪದವು ನ್ಯಾಯವಾಗಿ ಬರಬೇಕು. ಇಲ್ಲಿ ಅದಕ್ಕೆ ಬದಲಾಗಿ ಪರಸ್ಮೈಪದ ಬಂದಿದೆ. ಲಟ್ಟಿಗೆ ತಿಪ್, **ಜುಹೋತ್ಯಾದಿಭ್ಯಃ ಶ್ಲುಃ** (ಪಾ. ಸೂ. ೨-೪-೭೫) ಈ ಗಣದ ಧಾತುಗಳ ಮುಂದೆ ಇರುವ ಶಪ್‌ಗೆ ಶ್ಲು ಬರುತ್ತೆ ಎಂದು ಶಪ್‌ಗೆ ಶ್ಲು (ಲೋಪ) ಬರುತ್ತೆ. **ಶ್ಲೌ** (ಪಾ- ಸೂ. ೬-೧-೧೦) ಶ್ಲು ಬಂದ ಸ್ಥಳದಲ್ಲಿ ಧಾತುವಿಗೆ ದ್ವಿತ್ವ ಬರುತ್ತೆ ಎಂದು ದ್ವಿತ್ವ, ಮಾಮಾ+ತಿ, **ಹ್ರಸ್ವಃ** ಎಂದು ಅಭ್ಯಾಸಕ್ಕೆ ಹ್ರಸ್ವ. **ಭೃಞಾಮಿತ್** (ಪಾ. ಸೂ. ೭-೪-೭೬) ಭೃಞಾಂ ಎಂದು ಬಹುವಚನದಿಂದ ಕಪಿಂಜಲಾಧಿಕರಣ ನ್ಯಾಯವನ್ನನುಸರಿಸಿ ಭೃಞ್ ಮೊದಲುಗೊಂಡು ಮೂರು ಧಾತುವಿಗೆ ಗ್ರಹಣ, ಭೃಞ್, ಮಾಙ್, ಓಹಾಙ್ ಈ ಮೂರು ಧಾತುಗಳ ಅಭ್ಯಾಸಕ್ಕೆ ಇಕಾರಾದೇಶ ಬರುತ್ತೆ ಎಂದು ಮೊದಲನೆ ಮ ಶಬ್ದದ ಅಕಾರಕ್ಕೆ ಇಕಾರ, ಮಿಮಾತಿ ಎಂದಾಗುತ್ತೆ.

**ಸಿಷಕ್ತಿ**—ಷಚ ಸಮವಾಯೇ. ಲಟ್ಟಿಗೆ ತಿಪ್. **ಬಹುಲಂ ಛಂದಸಿ** (ಪಾ. ಸೂ. ೨-೪-೭೬) ಛಂದಸ್ಸಿನಲ್ಲಿ ಶಪ್‌ಗೆ ಬಹುಲವಾಗಿ ಶ್ಲು ಬರುತ್ತೆ ಎಂದು ಶ್ಲು. ಧಾತುವಿಗೆ ದ್ವಿತ್ವ ಸಚ್+ಸಚ್+ತಿ ಅಭ್ಯಾಸದ ಚ್‌ಗೆ ಲೋಪ. **ಬಹುಲಂ ಛಂದಸಿ** (ಪಾ. ಸೂ ೭-೪-೭೮) ಛಂದಸ್ಸಿನಲ್ಲಿ ಅಭ್ಯಾಸಕ್ಕೆ ಇಕಾರ ಬರುತ್ತೆ ಎಂದು ಅಭ್ಯಾಸಕ್ಕೆ ಇಕಾರ, ಸಿಸಚ್+ತಿ. **ಚೋಃ ಕುಃ** (ಪಾ. ಸೂ. ೮-೨-೩೦) ಪದಾಂತ ವಿಷಯದಲ್ಲಿ ಝಲ್ ಪರದಲ್ಲಿದ್ದರೂ ಚವರ್ಗಕ್ಕೆ ಕವರ್ಗ ಬರುತ್ತೆ ಎಂದು ಚ್‌ಗೆ ಕ್ ಬರುತ್ತೆ ಸಿಸಕ್+ತಿ, ಷಚ್ ಧಾತು ಷಕಾರಕ್ಕೆ **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂದು ಸಕಾರಾದೇಶ ಬರುತ್ತೆ. **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೯) ಎಂದು ಇಕಾರದ ಮುಂದೆ ಇರುವ ಸಕಾರಕ್ಕೆ ಷಕಾರ. ಸಿಷಕ್ತಿ ಎಂದು ರೂಪವಾಗುತ್ತೆ

**ಅಸರ್ಜಿ**—ಸೃಜ ವಿಸರ್ಗೇ. ಕರ್ಮಾರ್ಥದಲ್ಲಿ ಲುಙ್, **ಭಾವಕರ್ಮಣೋಃ** (ಪಾ.ಸೂ ೧-೩-೧೩) ಭಾವಾರ್ಥ ಅಥವಾ ಕರ್ಮಾರ್ಥದಲ್ಲಿ ಬಂದ ಲಕಾರದ ಸ್ಥಾನದಲ್ಲಿ ಆತ್ಮನೇಪದ ಬರುತ್ತೆ ಎಂದು ಆತ್ಮನೇಪದ ಬರುವುದು. ಏವಂಚ ಲುಙ್‌ಗೆ ತ. ಸೃಜ್+ತ. **ಚ್ಲಿ ಲುಙಿ** (ಪಾ. ಸೂ ೩-೧-೪೩) ಎಂದು ಚ್ಲಿ. ಸೃಜ್+ಚ್ಲಿ+ತ. **ಚಿಣ್ ಭಾವ ಕರ್ಮಣೋಃ** (ಪಾ. ಸೂ. ೩-೧-೬೬) ಭಾವ ಅಥವಾ ಕರ್ಮ ಎಂಬ ಅರ್ಥದಲ್ಲಿರುವ ತ ಶಬ್ದವು ಪರದಲ್ಲಿದ್ದರೆ ಚ್ಲಿಗೆ ಚಿಣ್ ಬರುತ್ತೆ ಎಂದು ಚ್ಲಿಗೆ ಚಿಣ್. ಇದರಲ್ಲಿ ಇ ಮಾತ್ರ ಉಳಿಯುತ್ತೆ. ಸೃಜ್+ಇ+ತ **ಚಿಣೋ ಲುಕ್** (ಪಾ. ಸೂ. ೬-೪-೧೦೪) ಚಿಣ್‌ನ ಮುಂದೆ ಇರುವ ತ ಶಬ್ದಕ್ಕೆ ಲುಕ್ ಬರುತ್ತೆ ಎಂದು ತಗೆ ಲುಕ್, **ಪುಗಂತಲಘೂಪಧಸ್ಯ ಚ** ಎಂದು ಋಗೆ ಗುಣ ಅರ್ ಬರುತ್ತೆ. ಸರ್ಜ್+ಇ, **ಲುಙ್‌ಲಙ್‌ಲೃಙ್‌ಕ್ಷ್ವಡುದಾತ್ತಃ** (ಪಾ ಸೂ. ೬-೪-೭೧) ಎಂದು ಉದಾತ್ತವಾದ ಅಟ್ ಆಗಮವು ಧಾತುವಿನ ಆದಿಗೆ ಬರುತ್ತೆ ಅಸರ್ಜಿ ಎಂದಾಗುತ್ತೆ. **ಯದ್ವೃತ್ತಾನ್ನಿತ್ಯಂ** ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ. ॥೮॥



॥ ಸಂಹಿತಾಪಾಠಃ ॥

ದಿವಾ ಚಿತ್ತಮಃ ಕೃಣ್ವನ್ತಿ ಪರ್ಜನ್ಯೇನೋದವಾಹೇನ ।
ಯತ್ಪೃಥಿವೀಂ ವ್ಯುನ್ದನ್ತಿ ॥ ೯ ॥

॥ ಪದಪಾಠಃ ॥

ದಿವಾ । ಚಿತ್ । ತಮಃ । ಕೃಣ್ವನ್ತಿ । ಪರ್ಜನ್ಯೇನ । ಉದಽವಾಹೇನ ।
ಯತ್ । ಪೃಥಿವೀಂ । ವಿಽಉನ್ದನ್ತಿ ॥ ೯ ॥

ಸಾಯಣಭಾಷ್ಯಂ

**ತೇ ಮರುತ ಉದವಾಹೇನೋದಕಧಾರಿಣಾ ಪರ್ಜನ್ಯೇನ ಮೇಘೇನ ಸೂರ್ಯಮಾಚ್ಛಾದ್ಯ ದಿವಾ ಚಿದಹನ್ಯಪಿ ತಮಃ ಕೃಣ್ವಂತಿ । ಅಂಧಕಾರಂ ಕುರ್ವಂತಿ ಯದ್ಯದಾ ಪೃಥಿವೀಂ ಭೂಮಿಂ ವ್ಯುಂದಂತಿ । ವಿಶೇಷೇಣ ಕ್ಲೇದಯಂತಿ । ತದಾನೀಮತಿವೃಷ್ಟಿಕಾಲೇ ತಮಃ ಕುರ್ವಂತೀತಿ ಪೂರ್ವತ್ರಾನ್ವಯಃ ॥ ಉದವಾಹೇನ । ಉದಕಾನಿ ವಹತೀತ್ಯುದವಾಹಃ । ಕರ್ಮಣ್ಯಣ್ । ಮೇಘವಿಶೇಷಸ್ಯೇಯಂ ಸಂಜ್ಞಾ । ಉದಕಸ್ಯೋದಃ ಸಂಜ್ಞಾಯಾಂ । ಪಾ. ೬. ೩. ೫೭ । ಇತ್ಯುದಕಶಬ್ದಸ್ಯೋದಭಾವಃ । ಕೃದುತ್ತರಪದಪ್ರಕೃತಿಸ್ವರತ್ವಂ । ವ್ಯುಂದಂತಿ । ಉಂದೀ ಕ್ಲೇದನೇ । ರುಧಾದಿತ್ವಾತ್ ಶ್ನಮ್ । ಶ್ನಾನ್ನಲೋಪಃ । ಪಾ. ೬-೪-೨೩ । ಇತಿ ನಲೋಪಃ । ಯದ್ವೃತ್ತಯೋಗಾದನಿಘಾತಃ ॥**

ಪ್ರತಿಪದಾರ್ಥ

(**ಮರುತಃ**—ಮರುತ್ತುಗಳು) । **ಯತ್**—ಯಾವಾಗ । **ಪೃಥಿವೀಂ**—ಭೂಮಿಯನ್ನು । **ವ್ಯುಂದಂತಿ**-(ಪ್ರವಾಹರೂಪದ ಮಳೆಯಿಂದ) ತುಂಬಿ ತೋಯುವಂತೆ ಮಾಡುತ್ತಾರೋ (ಆಗ; ತತ್ಪೂರ್ವದಲ್ಲಿ) । **ಉದವಾಹೇನ** - ನೀರನ್ನು ಹೊತ್ತುಕೊಂಡಿರತಕ್ಕ । **ಪರ್ಜನ್ಯೇನ**—ಮೇಘದಿಂದ । **ದಿವಾ ಚಿತ್**—ಹಗಲಲ್ಲೂ ಕೂಡ । **ತಮಃ ಕೃಣ್ವಂತಿ**—ಕಗ್ಗತ್ತಲನ್ನುಂಟುಮಾಡುತ್ತಾರೆ

॥ ಭಾವಾರ್ಥ ॥

ಮರುತ್ತುಗಳು ಭೂಮಿಯನ್ನು ಪ್ರವಾಹರೂಪದ ಮಳೆಯಿಂದ ತುಂಬಿತೋಯುವಂತೆ ಮಾಡುವುದಕ್ಕೆ ಪೂರ್ವದಲ್ಲಿ ನೀರನ್ನು ಹೊತ್ತುಕೊಂಡಿರತಕ್ಕ ಮೇಘದಿಂದ ಹಗಲಲ್ಲೂ ಕೂಡ ಕಗ್ಗತ್ತಲನ್ನುಂಟುಮಾಡುತ್ತಾರೆ.

English Translation

Even in the day they create darkness with the water-bearing cloud when they drench the earth.

॥ ವಿಶೇಷ ವಿಷಯಗಳು ॥

ಕಪ್ಪಾದ ಮೋಡಗಳು ಅಂತರಿಕ್ಷವನ್ನು ವ್ಯಾಪಿಸಿರುವಾಗ ಹಗಲಿನಲ್ಲಿಯೂ ಕೂಡ ಕತ್ತಲೆ ಕವಿದಿರುವುದು. ಅಂತಹ ಕಾಲದಲ್ಲಿ ಮರುತ್ತುಗಳು ಮಳೆಹುಯ್ಯುವಂತೆ ಮಾಡಿ ಭೂಮಿಯನ್ನು ನೀರಿನಿಂದ ನೆನೆಯುವಂತೆ ಮಾಡುತ್ತಾರೆ ಎಂದು ಮುಖ್ಯಾಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಕೃಣ್ವನ್ತಿ**—ವ್ಯವಹಿತ ಪೂರ್ವಮಂತ್ರದಲ್ಲಿ ವಿವೃತವಾಗಿದೆ.

**ಉದವಾಹೇನ**—ವಹ ಪ್ರಾಪಣೇ, ಉದಕಾನಿ ವಹತೀತ್ಯುದವಾಹಃ ಎಂದು ವಿಗ್ರಹ. **ಕರ್ಮಣ್ಯಣ್** (ಪಾ. ಸೂ. ೩-೨-೧) ಕರ್ಮವಾಚಕವಾದ ಸುಬಂತವು ಉಪಪದವಾಗಿರುವಾಗ ಧಾತು ಮುಂದೆ ಅಣ್ ಪ್ರತ್ಯಯ

ಬರುತ್ತೆ ಎಂದು ವಹ್‌ಧಾತು ಮುಂದೆ ಅಣ್‌ಪ್ರತ್ಯಯ, ವಿಗ್ರಹವಾಕ್ಯವು ಲೌಕಿಕ, ಅಲೌಕಿಕ ಎಂದು ಇಬ್ಬಗೆಯಾಗಿದೆ. ಲೋಕದಲ್ಲಿ ಎಲ್ಲರೂ ಪ್ರಯೋಗ ಮಾಡುತ್ತಿರುವ ವಿಗ್ರಹವಾಕ್ಯಕ್ಕೆ ಲೌಕಿಕ ವಿಗ್ರಹವಾಕ್ಯ ಎನ್ನುವರು. ಪ್ರಕೃತಿ ಪ್ರತ್ಯಯಗಳನ್ನು ಬಿಡಿಸಿ ಶಾಸ್ತ್ರಸಂಚಾರಕ್ಕಾಗಿ ವೈಯ್ಯಾಕರಣರು ಮಾತ್ರ ಪ್ರಯೋಗಿಸುವ ವಿಗ್ರಹವಾಕ್ಯಕ್ಕೆ ಅಲೌಕಿಕ ಎನ್ನುವರು, ಲೌಕಿಕ ವಿಗ್ರಹವಾಕ್ಯದಲ್ಲಿ ಉದಕಾನಿ ವಹತಿ ಎಂದು ಇದ್ದರೂ, ಅಲೌಕಿಕ ವಿಗ್ರಹವಾಕ್ಯದಲ್ಲಿ ಉದಕ+ ಅಸ್+ವಹ್+ಅಣ್ ಎಂದು ಷಷ್ಠೀವಿಭಕ್ತಿ ಪ್ರತ್ಯಯವೇ ಬರುತ್ತೆ. ಏಕೆಂದರೆ, ಲೌಕಿಕ ವಿಗ್ರಹವಾಕ್ಯದಲ್ಲಿ ಕೃದಂತ ಶಬ್ದಕ್ಕೆ ಪ್ರಯೋಗ ಇಲ್ಲ. ಅಲೌಕಿಕ ವಿಗ್ರಹವಾಕ್ಯದಲ್ಲಿ ವಹ್+ಅಣ್ ಎಂದು ಕೃದಂತಕ್ಕೆ ಪ್ರಯೋಗ ಇದೆ. ಆದ್ದರಿಂದ **ಕರ್ತೃಕರ್ಮಣೋಃ ಕೃತಿ** (ಪಾ. ಸೂ೨-೩-೬೫) ಕೃತ್ತಿಗೆ ಪ್ರಕೃತಿಯಾದ ಧಾತುವನ್ನು ಕುರಿತು ಯಾವುದು ಕರ್ತೃವಾಚಕವಾಗುತ್ತೋ ಅಥವಾ ಕರ್ಮವಾಚಕವಾಗುತ್ತೋ ಅದರ ಮುಂದೆ ಷಷ್ಠೀ ವಿಭಕ್ತಿ ಬರುತ್ತೆ ಎಂದು, ಅಣ್ ಪ್ರತ್ಯಯಪ್ರಕೃತಿಯಾದ ವಹ್ ಧಾತು ಕರ್ಮವಾದ ಉದಕಶಬ್ದದ ಮುಂದೆ ಷಷ್ಠೀ ವಿಭಕ್ತಿ ಬರುತ್ತೆ.

**ಅತ ಉಪಧಾಯಾಃ** ( ಪಾ. ಸೂ ೭-೧-೯೧ ) ಞಿತ್-ವಾ ಣಿತ್ ಆದ ಪ್ರತ್ಯಯವು ಪರದಲ್ಲಿದ್ದರೆ ಉಪಧಾಭೂತವಾದ ಹ್ರಸ್ವಾಕಾರಕ್ಕೆ ವೃದ್ಧಿ ಬರುತ್ತೆ ಎಂದು ವಹ್ ನ ಅಕಾರಕ್ಕೆ ವೃದ್ಧಿಸಂಜ್ಞಕವಾದ ಆಕಾರ ಬರುತ್ತೆ. ಉದಕ। ಅಸ್+ವಾಹ.

**ತತ್ರೋಪಪದಂ ಸಪ್ತಮಿಸ್ಥಂ** (ಪಾ. ಸೂ ೩-೧-೯೨) ಸನ್ನಿಹಿತವಾದ ಧಾತ್ವಧಿಕಾರದಲ್ಲಿ ಯಾವ ಸಪ್ತಮ್ಯಂತ ಪದ ಇದೆಯೋ ಅದರಿಂದ ಬೋಧಿತವಾಗುವ ಯಾವ ಅರ್ಥವಿದೆಯೋ ಆ ಅರ್ಥವನ್ನು ಬೋಧಿಸುವ ಪದವು ಉಪಪದವಾಗುತ್ತೆ. ಎಂದು ಸೂತ್ರಾರ್ಥ. ಕರ್ಮಣಿ-ಎಂಬುದು ಸನ್ನಿಹಿತ ಧಾತ್ವಧಿಕಾರದಲ್ಲಿರುವ ಸಪ್ತಮ್ಯಂತ ಪದ. ಇದರಿಂದ ಕರ್ಮಸಾಮಾನ್ಯಕ್ಕೂ ಬೋಧ ಬರುವುದರಿಂದ ಉದಕ ರೂಪ ಕರ್ಮವೂ ಈ ಪದದಿಂದ ಬೋಧಿತ ವಾಗುತ್ತೆ. ಉದಕ ಎಂಬ ಅರ್ಥವನ್ನು ಬೋಧಿಸುವ ಪದವು ಉದಕ ಅಸ್ ಎಂಬುದು ಅದಕ್ಕೆ ಈ ಸೂತ್ರದಿಂದ ಉಪ ಪದ ಸಂಜ್ಞೆ ಬರುತ್ತೆ.

**ಉಪಪದ ಮತಿಙ್** (ಪಾ. ಸೂ ೨-೨-೧೯) ಉಪಪದವು ತಿಙ್ಞಂತ ಭಿನ್ನವಾದ ಸಮರ್ಥದೊಂದಿಗೆ ಸಮಾಸವನ್ನು ಹೊಂದುತ್ತೆ ಅದು ತತ್ಪುರುಷವಾಗುತ್ತೆ ಎಂದು ವಾಹ ಎಂಬ ಕೃದಂತವಾದ ಸಮರ್ಥದೊಡನೆ ಉದಕ+ ಅಸ್ ಎಂಬ ಉಪಪದಕ್ಕೆ ಸಮಾಸ ಬರುತ್ತೆ. **ಸುಪೋಧಾತು ಪ್ರಾತಿಪದಿಕಯೋಃ** (ಪಾ. ಸೂ) ಎಂದು ಅಸ್‌ಗೆ ಲೋಪ, ಉದಕವಾಹ ಎಂದು ಆಯಿತು. ಇದು ಮೇಘ ವಿಶೇಷಕ್ಕೆ ಸಂಜ್ಞೆ. **ಉದಕಸ್ಯೋದಃಸಂಜ್ಞಾಯಾಂ** (ಪಾ. ಸೂ ೬-೩-೫೭) ಸಂಜ್ಞೆ ತೋರುವಾಗ ಉತ್ತರ ಪದದ ಹಿಂದೆ ಇರುವ ಉದಕ ಪದಕ್ಕೆ ಉದ ಆದೇಶ ಬರುತ್ತೆ ಎಂದು ಉದಕ ಎಂಬುದಕ್ಕೆ ಉದ ಆದೇಶ.

ವಾಹ ಎಂಬ ಕೃದಂತವು ಪ್ರತ್ಯಯ ಸ್ವರದಿಂದ ಅಂತೋದಾತ್ತ ಸಮಾಸಾನಂತರ **ಗತಿಕಾರಕೋಪಪದಾ-ತ್ಕೃತ್** ಎಂಬುದರಿಂದ ಕೃದುತ್ತರ ಪದಕ್ಕೆ ಪ್ರಕೃತಿಸ್ವರ ಬರುವುದರಿಂದ ಇದೇ ಸ್ವರ ನಿಲ್ಲುತ್ತೆ.

**ವ್ಯುನ್ದನ್ತಿ**— ವಿ ಉಪಸರ್ಗ, ಉನ್ದೀ ಕ್ಲೇದನೇ ರುಧಾದಿ ಧಾತು. ಲಟ್ಟಿಗೆ ಝಿ. ಅದಕ್ಕೆ ಅನ್ತ್ ಆದೇಶ, ವಿ+ಉನ್ದ್+ಅನ್ತಿ. **ರುಧಾದಿಭ್ಯಃ ಶ್ನಮ್** (ಪಾ. ಸೂ ೩-೧-೭೮) ರುಧಾದಿಧಾತುಗಳ ಅಂತ್ಯಸ್ವರದ ಮುಂದೆ ಶ್ನಮ್ ಬರುತ್ತೆ ಎಂದು ಶ್ನಮ್. ವಿ+ ಉನನ್ದ್+ ಅನ್ತಿ. ಈಗ **ಶ್ನಾನ್ನಲೋಪಃ** (ಪಾ. ಸೂ. ೬-೪-೨೩) ಶ್ನಮ್ ನ ಮುಂದೆ ಇರುವ ನಕಾರಕ್ಕೆ ಲೋಪ ಬರುತ್ತೆ ಎಂದು ಧಾತ್ವವಯವವಾದ ನಕಾರಕ್ಕೆ ಲೋಪ. **ಶ್ನಸೋ-ರಲ್ಲೋಪಃ** (ಪಾ. ಸೂ ೬-೪-೧೧೧) ಕಿತ್ ವಾ ಙಿತ್ ಆದ ಸಾರ್ವಧಾತುಕ ಪರದಲ್ಲಿದ್ದರೆ ಶ್ನಪ್ರತ್ಯಯ ಅಸ್ ಧಾತು ಇವುಗಳ ಅಕಾರಕ್ಕೆ ಲೋಪ ಬರುತ್ತೆ ಎಂದು ಪ್ರತ್ಯಯದ ಅಕಾರಕ್ಕೆ ಲೋಪ. ವಿ ಯ ಇಕಾರಕ್ಕೆ ಯಣಾದೇಶ. ವ್ಯುನ್ದನ್ತಿ ಎಂದು ಆಗುತ್ತದೆ.

**ಯತ್ಪೃಥಿವೀಂ** ಎಂದು ಯದ್ವೃತ್ತಯೋಗ ಇದೆ. ಆದ್ದರಿಂದ **ಯದ್ವೃತ್ತಾನ್ನಿತ್ಯಮ್** ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ. ॥ ೯ ॥

---

॥ ಸಾಯಣಭಾಷ್ಯಂ ॥

ಅಧ ಸ್ವನಾನ್ಮರುತಾಂ ವಿಶ್ವಮಾ ಸದ್ಮ ಪಾರ್ಥಿವಂ ।
ಅರೇಜನ್ತ ಪ್ರ ಮಾನುಷಾಃ ॥ ೧೦ ॥

ಪದಪಾಠ

ಅಧ । ಸ್ವನಾತ್ । ಮರುತಾಂ । ವಿಶ್ವಂ । ಆ । ಸದ್ಮ । ಪಾರ್ಥಿವಂ ।
ಅರೇಜನ್ತ । ಪ್ರ । ಮಾನುಷಾಃ ॥ ೧೦ ॥

॥ ಸಾಯಣಭಾಷ್ಯಂ ॥

ಮರುತಾಂ ಸಂಬಂಧಿನಃ ಸ್ವನಾದಧ ಧ್ವನೇರ್ಗರ್ಜನರೂಪಾದನಂತರಂ ಪಾರ್ಥಿವಂ ಪೃಥಿವೀಸಂಬಂಧಿ ವಿಶ್ವಂ ಸದ್ಮ ಸರ್ವಂ ಗೃಹಮಾ ಸಮಂತಾದರೇಜತೇತಿ ಶೇಷಃ । ತಥಾ ಮಾನುಷಾ ಗೃಹವರ್ತಿನೋ

**ಮನುಷ್ಯಾ ಅಪಿ ಪ್ರಾರೇಜಂತ । ಪ್ರಕರ್ಷೇಣ ಕಂಪಿತವಂತಃ ॥ ಅಧ । ಛಾಂದಸಂ ಧತ್ವಂ। ಸದ್ಮ । ಷದ್ಲೃ ವಿಶರಣಗತ್ಯವಸಾದನೇಷು । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ಪಾರ್ಥಿವಂ । ಪೃಥಿವ್ಯಾಃ ಸಂಬಂಧಿ । ಪೃಥಿವ್ಯಾ ಞಾಞೌ । ಪಾ. ೪-೧-೮೫-೨ । ಇತಿ ಪ್ರಾಗ್ದೀವ್ಯತೀಯೋಽಞ್ಪ್ರತ್ಯಯಃ । ಞಿತ್ತ್ವಾದಾದ್ಯುದಾತ್ತತ್ವಂ । ಅರೇಜಂತ । ರೇಜೃ ಕಂಪನೇ ॥** ॥ ೧೬ ॥

ಪ್ರತಿಪದಾರ್ಥ

**ಮರುತಾಂ**-- ಮರುತ್ತುಗಳ । **ಸ್ವನಾದಧ**—ಗರ್ಜನ ರೂಪವಾದ ಶಬ್ದವಾದೊಡನೆಯೇ । **ಪಾರ್ಥಿವಂ**—ಭೂಲೋಕಕ್ಕೆ ಸೇರಿದ (ಅಲ್ಲಿರತಕ್ಕ) । **ವಿಶ್ವಂ ಸದ್ಮ**—ಪ್ರತಿಯೊಂದು ಮನೆಯೂ ಕೂಡ । **ಆ (ಅರೇಜತ)**—ಸುತ್ತಲೂ ಕಂಪಿಸಿತು. (ಅದರಂತೆಯೇ) । **ಮಾನುಷಾಃ**—(ಮನೆಯಲ್ಲಿರತಕ್ಕ) ಸಕಲ ಮನುಷ್ಯರೂ ಕೂಡ । **ಪ್ರಾರೇಜಂತ**—ಸಂಪೂರ್ಣವಾಗಿ ನಡುಗಿದರು.

ಭಾವಾರ್ಥ

ಮೇಘಗಳ ಮೂಲಕ ಮರುತ್ತುಗಳ ಗರ್ಜನರೂಪವಾದ ಶಬ್ದವಾದೊಡನೆಯೇ ಭೂಲೋಕದಲ್ಲಿರತಕ್ಕ ಪ್ರತಿಯೊಂದು ಮನೆಯೂ ನಡಗುತ್ತದೆ. ಅದರಂತೆಯೇ ಆ ಮನೆಯಲ್ಲಿರತಕ್ಕ ಸಕಲ ಮಾನವರೂ ಸಂಪೂರ್ಣವಾಗಿ ನಡುಗುತ್ತಾರೆ.

English Translation

At the roaring of the Maruts, every house on the earth shakes and men also greatly tremble.

ವಿಶೇಷ ವಿಷಯಗಳು

**ಸ್ವನಾತ್**—ಶಬ್ದದಿಂದ ಅಥವಾ ಘರ್ಜನೆಯಿಂದ ಮಳೆಯು ಮುಯ್ಯುವಾಗ ಗಾಳಿಯು ವೇಗವಾಗಿಯೂ ಶಬ್ದಸಹಿತ ಭಯಂಕರವಾಗಿಯೂ ಬೀಸುವುದು.

**ಅರೇಜಂತ**—ಮನೆಗಳೂ ಗಾಳಿಯ ಹೊಡೆತವನ್ನು ತಾಳಲಾರದೆ ಅಲ್ಲಾಡುವವು. ಮನುಷ್ಯರು ಮಳೆಯ ನೀರಿನಿಂದ ನೆನೆದು ಗಾಳಿಯ ಹೊಡೆತಕ್ಕೆ ಸಿಕ್ಕಿ ಚಳಿಯಿಂದ ನಡಗುವರೆಂದಭಿಪ್ರಾಯವು. ಹಿಂದಿನ ಋಕ್ಕುಗಳಲ್ಲಿಯೂ ಈ ಋಕ್ಕಿನಲ್ಲಿಯೂ ಸಿಡಿಲು, ಮಿಂಚು, ಕಪ್ಪು ಮೋಡಗಳು ಇವುಗಳಿಂದ ಸಹಿತವಾದ ಮುಂಗಾರು ಮಳೆಯ ವರ್ಣನೆ ಇರುವುದು.

ವ್ಯಾಕರಣಪ್ರಕ್ರಿಯಾ

**ಅಧ**—ಅಥಶಬ್ದದ ಥಕಾರಕ್ಕೆ ಛಾಂದಸವಾಗಿ ಧಕಾರ ಬಂದಿದೆ.

**ಸದ್ಮ**—ಷದ್ಲೃ ವಿಶರಣಗತ್ಯವಸಾದನೇಷು **ಧಾತ್ವಾದೇಃ ಷಃ ಸಃ** ಎಂಬ ಷಕಾರಕ್ಕೆ ಸಕಾರ. **ಅನ್ಯೇ**

**ಭ್ಯೋಽಪಿ ದೃಶ್ಯನ್ತೇ** (ಪಾ. ಸೂ. ೩-೨-೭೫) ಮನಿನ್, ಕ್ವನಿಪ್, ವನಿಪ್, ವಿಚ್, ಈ ನಾಲ್ಕು ಪ್ರತ್ಯಯಗಳು ಧಾತುಗಳ ಮುಂದೆ ಬರುವುವು ಎಂದು ಮನಿನ್ ಪ್ರತ್ಯಯ, ನಿತ್ತಾದ್ದರಿಂದ ಪ್ರತ್ಯಯಾಂತ ಆದ್ಯುದಾತ್ತ.

**ಪಾರ್ಥಿವಮ್** ಪ್ರಥ ಪ್ರಖ್ಯಾನೇ, **ಪ್ರಥೇಃ ಷಿವನ್ ಸಂಪ್ರಸಾರಣಂ ಚ** (ಉ. ಸೂ. ೧-೧೪೭) ಪ್ರಥ ಧಾತು ಮುಂದೆ ಷಿವನ್ ಪ್ರತ್ಯಯವೂ, ಪ್ರಥ್ ಧಾತು ರೇಫಕ್ಕೆ ಸಂಪ್ರಸಾರಣದಿಂದ ಋಕಾರವೂ ಬರುತ್ತೆ ಎಂದು ಅವು ಬಂದರೆ ಪೃಥಿವ್ ಎಂದಾಗುತ್ತೆ. **ಷಿದ್ಗೌರಾದಿಭ್ಯಶ್ಚ** (ಪಾ. ಸೂ. ೪-೧-೪೧) ಷಿತ್ತಾದ ಧಾತು ಮತ್ತು ಗೌರಾದಿಗಣಕ್ಕೆ ಸೇರಿದ ಧಾತು ಇವುಗಳ ಮುಂದೆ ಙೀಷ್ ಬರುತ್ತೆ ಎಂದು ಙೀಷ್, ಪೃಥಿವೀ ಎಂದಾಯಿತು. **ಪೃಥಿವ್ಯಾ ಞಾಞೌ** (ಪಾ. ಸೂ. ೪-೧-೮೫-೨) ಪ್ರಾಗ್ದೀವ್ಯತೀಯಾರ್ಥದಲ್ಲಿ ಪೃಥಿವೀ ಶಬ್ದದ ಮುಂದೆ ಞ-ಅಞ ಎಂಬ ಪ್ರತ್ಯಯಗಳು ಬರುವುವು ಎಂದು ವಾರ್ತಿಕದ ಅರ್ಥ. ಇದರಿಂದ ಅಞ್—ಬಂದರೆ ಪೃಥಿವೀ+ಅ-**ಯಸ್ಯೇತಿ ಚ** ಎಂದು ಈಗೆ ಲೋಪ, **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಞಿತ್ ಅಥವಾ ಣಿತ್ ಆದ ಪ್ರತ್ಯಯ ಪರದಲ್ಲಿದ್ದರೆ ಪ್ರಕೃತಿಯಲ್ಲಿರುವ ಅಚ್ಚುಗಳ ಸಮುದಾಯದ ಮಧ್ಯದಲ್ಲಿ ಮೊದಲನೆಯ ಅಚ್‌ಗೆ ವೃದ್ಧಿ ಬರುತ್ತೆ ಎಂದು ಋಕಾರಕ್ಕೆ ಆರ್ ಎಂಬ ವೃದ್ಧಿ, ಪಾರ್ಥಿವ ಎಂದು ಆಯಿತು. ತದ್ಧಿತಪ್ರತ್ಯಯವು ಞಿತ್. **ಞ್ನಿತ್ಯಾದಿರ್ನಿತ್ಯಮ್** ಎಂದು ಆದ್ಯುದಾತ್ತ ಬರುತ್ತೆ. ದ್ವಿತೀಯಾ ಏಕವಚನಾಂತ.

**ಅರೇಜನ್ತ**—ರೇಜೃ ಕಂಪನೇ. ಲಙ್, ಝ, **ಝೋಽನ್ತಃ** ಎಂದು ಅನ್ತ್ ಆದೇಶ, ಶಪ್, ಅಡಾಗಮ. ॥೧೦॥

---

॥ ಸಂಹಿತಾಪಾಠಃ ॥

ಮರುತೋ ವೀಳುಪಾಣಿಭಿಶ್ಚಿತ್ರಾ ರೋಧಸ್ವತೀರನು ।
ಯಾತೇಮಖಿದ್ರಯಾಮಭಿಃ ॥ ೧೧ ॥

॥ ಪದಪಾಠಃ ॥

ಮರುತಃ । ವೀಳುಪಾಣಿಽಭಿಃ । ಚಿತ್ರಾಃ । ರೋಧಸ್ವತೀಃ । ಅನು ।
ಯಾತ । ಈಂ । ಅಖಿದ್ರಯಾಮಽಭಿಃ ॥ ೧೧ ॥

॥ ಸಾಯಣಭಾಷ್ಯಂ ॥

**ಹೇ ಮರುತೋ ಯೂಯಂ ವೀಳುಪಾಣಿಭಿರ್ದೃಢಹಸ್ತೈಃ ಸಹಿತಾಃ ಸಂತೋ ರೋಧಸ್ವತೀರನು ಕೂಲಯುಕ್ತಾ ನದೀರನುಲಕ್ಷ್ಯಾಖಿದ್ರಯಾಮಭಿರಚ್ಛಿನ್ನಗಮನೈರ್ಯಾತೇಂ । ಗಚ್ಛತೈವ ॥ ಮರುತಃ । ಆಮಂತ್ರಿತಾದ್ಯುದಾತ್ತತ್ವಂ । ವೀಳುಪಾಣಿಭಿಃ । ವೀಡ್ವಿತಿ ಬಲನಾಮ । ವೀಳು ಚ್ಯೌತ್ನಮಿತಿ ತನ್ನಾಮಸು ಪಾಠಾತ್ । ತೇನ ಚ ತದ್ವಾಲ್ಲಕ್ಷ್ಯತೇ । ವೀಳವಶ್ಚ ತೇ ಪಾಣಯಶ್ಚ । ಸಮಾಸಸ್ಯೇತ್ಯಂತೋದಾತ್ತತ್ವಂ । ರೋಧಸ್ವತೀಃ । ರುಧಿರ್ ಆವರಣೇ । ರುಣದ್ಧಿ ಸ್ರೋತ ಇತಿ ರೋಧಃ ಕೂಲಂ । ರೋಧಃ ಕೂಲಂ ನಿರುಣದ್ಧಿ ಸ್ರೋತಃ । ನಿ. ೬-೧ । ಇತ್ಯುಕ್ತತ್ವಾತ್ । ಅಸುನೋ ನಿತ್ತ್ವಾದಾದ್ಯುದಾತ್ತತ್ವಂ । ತದ್ಯುಕ್ತಾ ರೋಧಸ್ವತ್ಯಃ । ಮಾದುಪಧಾಯಾ ಇತಿ ಮತುಪೋ ವತ್ವಂ । ಉಗಿತಶ್ಚೇತಿ ಙೀಪ್ । ಮತುಬ್ಙೀಪೋಃ ಪಿತ್ತ್ವಾದನುದಾತ್ತತ್ವೇಽಸುನಃ ಸ್ವರ ಏವ ಶಿಷ್ಯತೇ । ಯಾತ । ಯಾ ಪ್ರಾಪಣೇ । ಅದಾದಿತ್ವಾಚ್ಛಪೋ ಲುಕ್ । ಈಂ । ಚಾದಯೋಽನುದಾತ್ತಾ ಇತ್ಯನುದಾತ್ತತ್ವಂ । ಗುಣ ಏಕಾದೇಶ ಉದಾತ್ತೇನೋದಾತ್ತ ಇತ್ಯುದಾತ್ತತ್ವಂ । ಅಖಿದ್ರಯಾಮಭಿಃ । ಖಿದ ದೈನ್ಯೇ । ಸ್ಫಾಯಿತಂಚೀತ್ಯಾದಿನಾ ರಕ್ । ಖಿದ್ರಂ ಯಾಂತೀತಿ ಖಿದ್ರಯಾಮಾನಃ । ನ ಖಿದ್ರಯಾಮಾನೋಽಖಿದ್ರಯಾಮಾನಃ । ತೈಃ । ಅವ್ಯಯಪೂರ್ವ-ಪದಪ್ರಕೃತಿಸ್ವರತ್ವಂ ॥**

॥ ಪ್ರತಿಪದಾರ್ಥ ॥

**ಮರುತಃ**—ಎಲೈ ಮರುತ್ತುಗಳೇ (ನೀವುಗಳು) । **ವೀಳುಪಾಣಿಭಿಃ**— ಸಮರ್ಥಗಳಾದ ಕೈಗಳುಳ್ಳವರಾಗಿ **ಚಿತ್ರಾಃ**—(ನಾನಾವಿಧವಾದ ವೃಕ್ಷಗಳಿಂದಲೂ, ಲತೆಗಳಿಂದಲೂ ಕೂಡಿರುವುದರಿಂದ) ಮನೋಹರಗಳಾಗಿರತಕ್ಕ । **ರೋಧಸ್ವತೀಃ ಅನು**— ದಡಗಳುಳ್ಳ ನದಿಗಳ ಉದ್ದಕ್ಕೂ । **ಅಖಿದ್ರಯಾಮಭಿಃ**—ಪ್ರತಿಬಂಧಕವಿಲ್ಲದೇ ಇರತಕ್ಕ ಗಮನಗಳಿಂದ । **ಯಾತಂ**—ಖಂಡಿತ ಸಂಚರಿಸಿರಿ.

ಭಾವಾರ್ಥ

ಎಲೈ ಮರುತ್ತುಗಳೇ, ನೀವುಗಳು ದೃಢಹಸ್ತಗಳಿಂದ (ಪಾದಗಳಿಂದ ?) ಯುಕ್ತರಾಗಿ ನಾನಾವಿಧವಾದ ವೃಕ್ಷಗಳಿಂದಲೂ ಲತೆಗಳಿಂದಲೂ ಕೂಡಿ ಮನೋಹರಗಳಾಗಿರತಕ್ಕ ದಡಗಳುಳ್ಳ ನದಿಗಳ ಉದ್ದಕ್ಕೂ ಪ್ರತಿಬಂಧಕವಿಲ್ಲದೇ ಸಂಚರಿಸಿರಿ

English Translation

Maruts with strong hands (legs?) come along the beautiful banks of the rivers with unbroken speed.

ವಿಶೇಷವಿಷಯಗಳು

**ವೀಳುಪಾಣಿಭಿಃ— ದೃಢಹಸ್ತೈಃ** ಪಾಣಿಶಬ್ದವು ಹಸ್ತವೆಂಬ ಅರ್ಥವನ್ನು ಸೂಚಿಸುವುದಾಗಿದ್ದರೂ ಇಲ್ಲಿ ಪಾದಗಳು ಎಂಬ ಅರ್ಥವೇ ಭಾಸವಾಗುವುದು. ಏಕೆಂದರೆ ಇಲ್ಲಿ ಮರುತ್ತುಗಳ ಗಮನವು ನಿರ್ದೇಶಿಸಲ್ಪಟ್ಟಿರುವುದ

ರಿಂದಲೂ ಜನರೂ ಪ್ರಾಣಿಗಳೂ ತಮ್ಮ ಕಾಲುಗಳಿಂದಲೇ ಸಂಚರಿಸುವುದರಿಂದಲೂ ಸಂಚಾರಮಾಡುವಾಗ ಹಸ್ತಗಳಿಂದ ಎಂದು ಹೇಳುವುದು ಅಸಂಭವವು. ಋಷಿಯ ಆಶಯವು ಪಾದಗಳಿಂದೇ ಇರಬಹುದು. ಈ ವಿಷಯದಲ್ಲಿ—

**ಸೇದಗ್ನಿರಗ್ನೀಂ ರತ್ಯೆಸ್ತ್ವನ್ಯಾನ್ ಯತ್ರ ವಾಜೀ ತನಯೋ ವೀಳುಪಾಣಿಃ ।**
( ಋ. ಸಂ. ೭-೧-೧೪ )

ಎಂಬ ಋಕ್ಕಿನಲ್ಲಿ ಪಾಣಿಶಬ್ದಕ್ಕೆ ಪಾದಗಳೆಂದು ಅರ್ಥವನ್ನೇ ಮಾಡಬೇಕಾಗಿರುವುದು.

**ರೋಧಸ್ವತೀಃ**— ತೀರಗಳಿಂದ ಸಹಿತವಾದ ನದಿಗಳು ಎಂದರೆ ನದೀತೀರಗಳು, ನದಿಯ ದಡಗಳು । **ಅಛಿದ್ರಯಾಮಭಿಃ — ಅಛಿದ್ರಯಾಮಭಿಃ ।** ಅವಿಚ್ಛಿನ್ನಗಮನಗಳಿಂದ, ತಡೆಯಿಲ್ಲದ ಸಂಚಾರಗಳಿಂದ, with unobstructed or unbroken progress.

ವ್ಯಾಕರಣಪ್ರಕ್ರಿಯಾ

**ವೀಳುಪಾಣಿಭಿಃ—ವೀಳು ಚ್ಯಾತ್ನಮ್** (ನಿರು ೫-೯-೧೪) ಎಂಬ ನಿರುಕ್ತದಲ್ಲಿ ಬಲನಾಮಗಳ ಮಧ್ಯದಲ್ಲಿ ವೀಡು ಎಂದು ಪಠಿಸಿರುವರು ಆದ್ದರಿಂದ ಇದಕ್ಕೆ ಬಲ ಎಂದು ಅರ್ಥ. ಇಷ್ಟೇ ಅರ್ಥವನ್ನು ಗ್ರಹಿಸಿದರೆ ಪಾಣಿಶಬ್ದದೊಂದಿಗೆ ಅನ್ವಯವು ಬಾಧಿತವಾಗುತ್ತೆ. ಆದುದರಿಂದ ಲಕ್ಷಣಾವೃತ್ತಿಯಿಂದ ಬಲವುಳ್ಳ ಎಂಬ ಅರ್ಥವನ್ನು ಗ್ರಹಿಸಬೇಕು ಬಲವುಳ್ಳ ಕೈಗಳಿಂದ ಕೂಡಿದವರಾಗಿ ಎಂದು ಈ ಪದಕ್ಕೆ ಅರ್ಥವು ಹೊಂದುತ್ತದೆ. ' ಗಂಗಾಯಾಂಘೋಷಃ, ಇದಕ್ಕೆ ಗಂಗಾನದಿಯಲ್ಲಿ ಗೊಲ್ಲರಹಳ್ಳಿ ಎಂಬ ಅರ್ಥಬಾಧಿತವಾಗುತ್ತೆ. ಆದ್ದರಿಂದ ಇಲ್ಲಿ ಗಂಗಾಪದಕ್ಕೆ ಗಂಗಾತೀರ ಎಂದು ಲಕ್ಷಣಾವೃತ್ತಿಯಿಂದ ಅರ್ಥವನ್ನು ಹೇಳುವರು. ಇದರಂತೆ ಇಲ್ಲಿಯೂ ನಿರುಕ್ತದಲ್ಲಿ ಹೇಳಿರುವ ಅರ್ಥವು ಬಾಧಿತವಾಗುವುದರಿಂದ ಲಕ್ಷಣೆಯನ್ನು ಆಶ್ರಯಿಸಬೇಕು- **ವಿಶೇಷಣಂ ವಿಶೇಷ್ಯೇಣ ಬಹುಲಮ್** (ಪಾ. ಸೂ. ೨-೧-೫೭) ವಿಶೇಷಣ ವಾಚಕಪದವು ಸಮಾನಾಧಿಕರಣವಾದ ವಿಶೇಷ್ಯದೊಂದಿಗೆ ಸಮಾಸವನ್ನು ಹೊಂದುತ್ತೆ. ಅದು ತತ್ಪುರುಷವಾಗುತ್ತದೆ ಎಂದು, ತತ್ಪುರುಷ ಸಮಾಸ, **ತತ್ಪುರುಷಸ್ಸಮಾನಾಧಿಕರಣಃ ಕರ್ಮಧಾರಯಃ** (ಪಾ. ಸೂ. ೧-೨-೪೨) ಎಂಬ ಸೂತ್ರದ ಪ್ರಕಾರ ಇದಕ್ಕೆ ಕರ್ಮಧಾರಯ ಸಮಾಸ ಎನ್ನುವರು. **ಸಮಾಸಸ್ಯ** (ಪಾ. ಸೂ. ೬-೧-೨೨೩) ಸಮಾಸದ ಕೊನೆಯ ವರ್ಣವು ಉದಾತ್ತವಾಗುತ್ತೆ ಎಂದು ಅಂತೋದಾತ್ತ ಬರುತ್ತೆ.

**ರೋಧಸ್ವತೀಃ**—ರುಧಿರ್ ಆವರಣೇ ರುಧಾದಿಧಾತು, ಆವರಣ ಎಂದರೆ ತಡೆಯುವುದು. ಯಾವುದನ್ನು ಎಂದು ಕೇಳಿದರೆ ಅರ್ಥಕ್ಕೆ ಅನುಗುಣವಾಗಿ ಪ್ರವಾಹವನ್ನು ಎಂದು ಏರ್ಪಡುತ್ತೆ. ರುಣದ್ಧಿ ಇತಿ ರೋಧಃ ಎಂದು ವಿಗ್ರಹವು **ರೋಧಃ ಕೂಲಂ ನಿರುಣದ್ಧಿ ಸ್ರೋತಃ** (ನಿ ೬-೧) ರೋಧಃ ಎಂದರೆ ತೀರ ಎಂದು ಅರ್ಥ, ಏತಕ್ಕೆಂದರೆ ಅದು ಪ್ರವಾಹವನ್ನು ತಡೆಯುವುದು ಎಂದು ನಿರುಕ್ತಕ್ಕೆ ಅರ್ಥ. ಈ ನಿರುಕ್ತದಿಂದ ಪೂರ್ವೋಕ್ತವಾದ ಅರ್ಥವು ದೃಢವಾಗುತ್ತೆ. **ಸರ್ವಧಾತುಭ್ಯೋಽಸುನ್** (ಉ ಸೂ. ೪-೬-೨೮) ಎಂದು ಅಸುನ್. ರುಧ್+ಅಸ್, **ಪುಗಂತ ಲಘೂಪಧಸ್ಯ ಚ** (ಪಾ ಸೂ ೭-೩-೮೬) ಎಂದು ಲಘೂಪಧಗುಣ. ಅಸುನ್ ನಿತ್‌ಪ್ರತ್ಯಯಾಂತವು

ಆದ್ಯುದಾತ್ತ, ರೋಧಃ ಆಸಾಂ ಅಸ್ತಿ=ಈ ನದಿಗಳಿಗೆ ದಡವಿದೆ ಎಂದು ವಿಗ್ರಹ. **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್** (ಪಾ. ಸೂ. ೫-೨-೯೪) ಎಂದು ಮತುಪ್. ರೋಧಸ್+ಮತ್, ರೋಧಸ್ ಎಂಬುದು ಅಕಾರೋಪಧಕ. ಆದ್ದರಿಂದ **ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ** (ಪಾ. ಸೂ. ೮-೨-೯) ಮವರ್ಣಾಂತ ಅಥವಾ ಅವರ್ಣೋಪಧಕ ಆದ ಶಬ್ದದ ಮುಂದೆ ಇರುವ ಮತುಪ್ ಪ್ರತ್ಯಯದ ಮಕಾರಕ್ಕೆ ವಕಾರ ಬರುತ್ತೆ ಎಂದು ಮ್‌ಗೆ-ವ್ ಬರುತ್ತೆ. ಮತುಪ್ ಪ್ರತ್ಯಯದ ಉಕಾರಕ್ಕೆ ಇತ್ಸಂಜ್ಞೆ ಬಂದಿರುವುದರಿಂದ ಅದು ಉಗಿತ್ ರೋಧಸ್ವತ್ ಎಂಬುದು ಉಗಿದಂತ. **ಉಗಿತಶ್ಚ** (ಪಾ. ಸೂ. ೪-೧-೬) ಸ್ತ್ರೀಲಿಂಗದಲ್ಲಿ ಉಗಿದಂತವಾದ ಪ್ರಾತಿಪದಿಕದ ಮುಂದೆ ಙೀಪ್ ಬರುತ್ತೆ ಎಂದು ಙೀಪ್, ಮತುಪ್-ಙೀಪ್ ಎರಡೂ ಪಿತ್ ಆದ್ದರಿಂದ **ಅನುದಾತ್ತೌಸುಪ್ಪಿತೌ** ಎಂದು ಅವು ಅನುದಾತ್ತಗಳು.

**ಯಾತ**—ಯಾ ಪ್ರಾಪಣೇ ಅದಾದಿ, ಲೋಟಿಗೆ ಥ, ಲಜ್ವದ್ಭಾವ ಬರುತ್ತೆ **ತಸ್ಥಸ್ಥಮಿಪಾಂ** ಎಂದು ತ ಆದೇಶ. **ಅದಿಪ್ರಭೃತಿಭ್ಯಃ ಶಪಃ** ಎಂದು ಶಪ್‌ಗೆ ಲುಕ್. ಪಾದದ ಆದಿಯಲ್ಲಿರುವುದರಿಂದ ಸರ್ವಾನುದಾತ್ತ ಬರುವುದಿಲ್ಲ. ಪ್ರತ್ಯಯಸ್ವರದಿಂದ ತ ಉದಾತ್ತ.

**ಈಮ್**—ಇದು ಚಾದಿಗಣದಲ್ಲಿದೆ. **ಚಾದಯೋಽನುದಾತ್ತಾಃ** (ಫಿ. ಸೂ. ೮೪) ಎಂದು ಈಮ್ ಎಂಬುದು. ಅನುದಾತ್ತ. ಯಾತ+ಈಮ್ ಇವಕ್ಕೆ ಸಂಹಿತಾಕಾಲದಲ್ಲಿ **ಆದ್ಗುಣಃ** (ಪಾ. ಸೂ. ೬-೧-೮೭) ಅ, ಆಕಾರಗಳ ಮುಂದೆ ಅಸವರ್ಣ ಸ್ವರಪರದಲ್ಲಿದ್ದರೆ ಪೂರ್ವಪರಸ್ಥಾನಗಳಿಗೆ ಗುಣವು ಏಕಾದೇಶವಾಗಿ ಬರುತ್ತೆ ಎಂಬುದ ರಿಂದ ಕಂಠತಾಲುಸ್ಥಾನಿಕಗಳಾದ ಅಕಾರ ಈಕಾರಗಳ ಸ್ಥಾನದಲ್ಲಿ ಕಂಠತಾಲು ಸ್ಥಾನಿಕವೂ ಗುಣಸಂಜ್ಞಕವೂ ಆದ ಏಕಾರ ಏಕಾದೇಶವಾಗಿ ಬರುತ್ತದೆ. ಯಾತೇಮ್ ಎಂದು ಆಗುತ್ತದೆ. ಇದು ಉದಾತ್ತ ಮತ್ತು ಅನುದಾತ್ತಗಳ ಸ್ಥಾನದಲ್ಲಿ ಬಂದ ಏಕಾದೇಶ ಆದ್ದರಿಂದ **ಏಕಾದೇಶ ಉದಾತ್ತೇನೋದಾತ್ತಃ** ಎಂದು ಉದಾತ್ತವಾಗುತ್ತದೆ.

**ಅಖಿದ್ರಯಾಮಭಿಃ**—ಖಿದ ದೈನ್ಯೇ. **ಸ್ಫಾಯಿತಞ್ಚಿ—**, ಎಂಬ ಸೂತ್ರದಿಂದ ರಕ್‌ಪ್ರತ್ಯಯ. ಈ ಸೂತ್ರವನ್ನು ಇದೇ ಸೂಕ್ತದ ೮ನೇ ಮಂತ್ರದಲ್ಲಿ ಪೂರ್ಣವಾಗಿ ಕೊಟ್ಟಿರುವೆವು. ಯಾ ಪ್ರಾಪಣೇ ಖಿದ್ರಂ ಯಾನ್ತಿ ಇತಿ ಖಿದ್ರಯಾಮಾನಃ, **ಅನ್ಯೇಭ್ಯೋಽಪಿದೃಶ್ಯಂತೇ** ಎಂದು ಮನಿನ್ ಪ್ರತ್ಯಯ, ನ ಖಿದ್ರಯಾಮಾನಃ ಎಂದು ನಞ್ ಸಮಾಸ. **ನಲೋಪೋನಞಃ** ಎಂದು ನ್‌ಗೆ ಲೋಪ. ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತೆ. ॥೧೧॥

॥ ಸಂಹಿತಾಪಾಠಃ ॥

ಸ್ಥಿರಾ ವಃ ಸನ್ತು ನೇಮಯೋ ರಥಾ ಅಶ್ವಾಸ ಏಷಾಂ।
ಸುಸಂಸ್ಕೃತಾ ಅಭೀಶವಃ ॥೧೨॥

|| ಪದಪಾಠಃ ||

ಸ್ಥಿರಾಃ । ವಃ । ಸನ್ತು । ನೇಮಯಃ । ರಥಾಃ । ಅಶ್ವಾಸಃ । ಏಷಾಂ ।
ಸುऽಸಂಸ್ಕೃತಾಃ । ಅಭೀಶವಃ ॥ ೧೨ ॥

ಸಾಯಣಭಾಷ್ಯಂ

**ಹೇ ಮರುತ ಏಷಾಂ ವೋ ಯುಷ್ಮಾಕಂ ನೇಮಯೋ ರಥಚಕ್ರವಲಯಾಃ ಸ್ಥಿರಾಃ ಸಂತು । ತಥಾ ರಥಾ ಅಶ್ವಾಸೋಽಶ್ವಾಶ್ಚ ಸ್ಥಿರಾಃ ಸಂತು । ಅಭೀಶವೋಽಂಗುಲಯಃ । ಅಭೀಶವೋ ದೀಧಿತಯ ಇತಿ ತನ್ನಾಮಸು ಪಾಠಾತ್ । ಸುಸಂಸ್ಕೃತಾ ಅಶ್ವಬಂಧನರಜ್ಜುಪರಿಗ್ರಹಣೇ ಸ್ವಲಂಕೃತಾಃ ಸಾವಧಾನಾಃ ಸಂತು ॥ ಸುಸಂಸ್ಕೃತಾಃ । ಸಂಪೂರ್ವಾತ್ಕರೋತೇಃ ಕರ್ಮಣಿ ಕ್ತಃ । ಸಂಪರ್ಯುಪೇಭ್ಯಃ । ಪಾ. ೬-೧-೧೩೭ । ಇತಿ ಸುಟ್ । ಪುನಃ ಸುಶಬ್ದೇನ ಪ್ರಾದಿಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ಅಭೀಶವಃ । ಅಭಿಪೂರ್ವಾದಶ್ನೋತೇಃ ಕೃವಾಪಾಜೀತ್ಯಾದಿನೋಣ್ । ವರ್ಣವ್ಯತ್ಯಯೇನಾಕಾರಸ್ಯೇಕಾರಃ । ಉಕ್ತಂ ಚ । ವರ್ಣಾಗಮೋ ವರ್ಣವಿಪರ್ಯಯಶ್ಚ । ಕಾ. ೬-೩-೧೦೯ । ಇತಿ । ಅಭೀಶವೋಽಭ್ಯಶ್ನುವತೇ ಕರ್ಮಾಣೀತಿ ನಿರುಕ್ತಂ । ನಿ. ೩-೯ ॥**

ಪ್ರತಿಪದಾರ್ಥ

**ಏಷಾಂ ವಃ**— (ಎಲೈ ಮರುತ್ತುಗಳೇ) ಈ ನಿಮ್ಮ । **ನೇಮಯಃ**—ರಥಚಕ್ರಗಳ ಹೊರವಲಯಗಳು । **ಸ್ಥಿರಾಃ**—ಭದ್ರವಾಗಿ । **ಸಂತು**—ಇರಲಿ. (ಹಾಗೆಯೇ) । **ರಥಾಃ**—ರಥಗಳೂ । **ಅಶ್ವಾಸಃ**—ಕುದುರೆಗಳೂ (ಸ್ಥಿರವಾಗಿರಲಿ)। **ಅಭೀಶವಃ**—( ನಿಮ್ಮ) ಉಗುರುಗಳು । **ಸುಸಂಸ್ಕೃತಾಃ**—(ಕುದುರೆಗಳ ಕಡಿವಾಣಗಳನ್ನು ಹಿಡಿದುಕೊಳ್ಳಲು ಯೋಗ್ಯವಾದ ) ಅಲಂಕಾರಗಳುಳ್ಳವಾಗಿಯೂ ನುರಿತವುಗಳಾಗಿಯೂ ( ಇರಲಿ).

|| ಭಾವಾರ್ಥ ||

ಎಲೈ ಮರುತ್ತುಗಳೇ ನಿಮ್ಮ ರಥಚಕ್ರಗಳ ಹೊರವಲಯಗಳು ಭದ್ರವಾಗಿರಲಿ. ನಿಮ್ಮ ರಥಗಳೂ ಕುದುರೆಗಳೂ ಸ್ಥಿರವಾಗಿರಲಿ. ನಿಮ್ಮ ಶಕ್ತಿಗೆ ತಕ್ಕಂತೆ ರಮ್ಯವಾಗಿ ಇರುವ ನಿಮ್ಮ ಕೈಗಳ ಉಗುರುಗಳು ಕುದುರೆಗಳ ಕಡಿವಾಣಗಳನ್ನು ಹಿಡಿದುಕೊಳ್ಳಲು ಯೋಗ್ಯವಾದ ಅಲಂಕಾರಗಳುಳ್ಳವಾಗಿಯೂ ನುರಿತವುಗಳಾಗಿಯೂ ಇರಲಿ.

English Translation

May the fellies of your wheels be firm ; may your chariots and their horses be steady and your fingers well-skilled in holding the reins

**ನೇಮಯಃ**—ಚಕ್ರದ ಹೊರವಲಯಗಳು the fellies of a chariot wheel ; the outer rims of the wheels. ನೇಮಿಶಬ್ದವು ಋಗ್ವೇದದ ಅನೇಕ ಋಕ್ಕುಗಳಲ್ಲಿ ಪಠಿತವಾಗಿರುವುದು.

**ಸೇದು ರಾಜಾ ಕ್ಷಯತಿ ಚರ್ಷಣೀನಾಮರಾನ್ನ ನೇಮಿಃ ಪರಿ ತಾ ಬಭೂವ ॥**
( ಋ. ಸಂ. ೧-೩೨-೧೫ )

**ಯತ್ಸೀಮನು ಕ್ರತುನಾ ವಿಶ್ವಥಾ ವಿಭುರರಾನ್ನ ನೇಮಿಃ ಪರಿಭೂರಜಾಯಥಾಃ ॥**
( ಋ. ಸೂ. ೧-೧೪೧-೯ )

**ಪರಿ ವಿಶ್ವಾನಿ ಕಾವ್ಯಾ ನೇಮಿಶ್ಚಕ್ರಮಿವಾಭವತ್ ।**
(ಋ. ಸಂ. ೨-೫-೩)

**ಅಗ್ನೇ ನೇಮಿರರಾँ ಇವ ದೇವಾँಸ್ತ್ವಂ ಪರಿಭೂರಸಿ**
(ಋ. ಸಂ ೫-೧೩-೬)

**ಆ ವ ಇಂದ್ರಂ ಪುರುಹೂತಂ ನಮೇ ಗಿರಾ ನೇಮಿಂ ತಷ್ಟೇವ ಸದ್ರ್ವಂ ॥**
( ಋ. ಸಂ. ೬-೩೨-೨೦ )

**ತಂ ನೇಮಿಮೃಭವೋ ಯಥಾನಮಸ್ವ ಸಹೂತಿಭಿಃ ॥**
( ಋ. ಸಂ ೮-೭೫-೫ )

ಇತ್ಯಾದಿ. ಈ ನೇಮಿಯು ಸದ್ರು ಎಂಬ ಘಟ್ಟಿಯಾದ ಮರದಿಂದ ಮಾಡಲ್ಪಟ್ಟು ಬಗ್ಗಿರುವುದು

**ಸು ಸಂಸ್ಕೃತಾಃ**—ಚೆನ್ನಾಗಿ ಪಳಗಿದ, well-trained, well-skilled & c

**ಅಭೀಶವಃ**—ಅಭೀಶವಃ ಎಂದರೆ ಬಾಹು (ನಿ. ೩-೮) ಕಿರಣ (ನಿ. ೨-೧೫) ಎಂದೂ ಅರ್ಥವಿರುವುದು ಆದರೆ ಅಭೀಶವಃ ಎಂಬ ಶಬ್ದವು ಅಗ್ರುವಃ ಅಣ್ವ್ಯಃ ಮೊದಲಾದ ಇಪ್ಪತ್ತೆರಡು ಅಂಗುಲಿನಾಮಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ ಭಾಷ್ಯಕಾರರು ಈ ಋಕ್ಕಿನಲ್ಲಿರುವ ಅಭೀಶವಃ ಎಂಬ ಶಬ್ದಕ್ಕೆ ಬೆರಳುಗಳು ಎಂಬ ಅರ್ಥವನ್ನೇ ಸ್ವೀಕರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಸುಸಂಸ್ಕೃತಾಃ**—ಡುಕೃಞ್ ಕರಣೇ, ಸಂ ಉಪಸರ್ಗಪೂರ್ವಕನಾದ ಈ ಧಾತು ಮುಂದೆ ಕರ್ಮಾರ್ಥದಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂದು ಕ್ತ ಪ್ರತ್ಯಯ, ಸಂ+ಕೃ+ತ **ಸಂಪರಿಭ್ಯಾಂ ಕರೋತೌ ಭೂಷಣೇ** (ಪಾ. ಸೂ. ೬-೧-೧೩೭) ಸಂ ಪರಿ ಎಂಬ ಉಪಸರ್ಗಗಳ ಮುಂದೆ ಇರುವ ಕೃ ಧಾತುವಿಗೆ ಸುಟ್ ಆಗಮವು ಭೂಷಣಾರ್ಥ ತೋರುವಾಗ ಬರುತ್ತೆ ಎಂದು ಸುಟ್, ವೃತ್ತಿಕಾರರು **ಸಂಪರ್ಯುಪೇಭ್ಯಃ** ಎಂದು ಸೂತ್ರವನ್ನು ಪಠಿಸುವರು. ಇದು ಮಹಾಭಾಷ್ಯಕ್ಕೆ ಸಮ್ಮತವಾಗುವದಲ್ಲ. **ಸುಟ್ಕಾತ್ಪೂರ್ವಃ** (ಪಾ. ಸೂ. ೬-೧-೧೩೫) ನೇ ಸೂತ್ರದಲ್ಲಿ 'ಸಂಪರಿಭ್ಯಾಮಿತಿನೈಷಾ ಪಂಚಮೀ । ಕಾ ತರ್ಹಿ ? ತೃತೀಯಾ ।' ಎಂದು ಮಹಾಭಾಷ್ಯದಲ್ಲಿದೆ. ಕೆಲವರು

**ಉಪಾತ್ಪ್ರತಿಯತ್ನ—**, ಎಂಬ ಸೂತ್ರದಲ್ಲಿ ಚ ಶಬ್ದವನ್ನು ಪಠಿಸಿ ಉಪ ಎಂಬ ಉಪಸರ್ಗವಿದ್ದರೂ ಭೂಷಣಾರ್ಥದಲ್ಲಿಯೂ ಸಂಬಂಧಾರ್ಥದಲ್ಲಿಯೂ ಸುಡಾಗಮವನ್ನು ಉಪಪಾದಿಸಿ ವೃತ್ತ್ಯುಕ್ತವಾದ ಉಪಶಬ್ದ ಪಾಠದ ಫಲವನ್ನು ಭಾಷ್ಯಮತದಲ್ಲಿಯೂ ಉಪಪಾದಿಸುವರು. ಶೇಖರಕಾರರು ಇದನ್ನು ಒಪ್ಪುವುದಿಲ್ಲ. 'ಕೇಚಿತ್ತು ಭೂಷಣ ಸಂಬಂಧಯೋಃ ಉಪಾತ್ಪರಸ್ಯ ಸುಟಂ ನೇಚ್ಛಂತಿ, ಚಂ ಚ ನಪಠನ್ತಿ' ಎಂಬ ಶೇಖರಗ್ರಂಥದಿಂದ ಹಿಂದೆ ಹೇಳಿದ ಅಂಶಗಳು ವಿಶದವಾಗುವುವು.

**ಅಭೀಶವಃ—**ಅಶೂ ವ್ಯಾಪ್ತೌ, ಅಭಿ ಉಪಸರ್ಗ, **ಕೃವಾಪಾಜಿ ಮಿಸ್ವದಿ ಸಾಧ್ಯಶೂಭ್ಯ ಉಣ್** (ಉ. ಸೂ. ೧-೧) ಎಂಬುದರಿಂದ ಅಶ್ ಧಾತು ಮುಂದೆ ಉಣ್‌ಪ್ರತ್ಯಯ, **ಪೃಷೋದರಾದೀನಿ ಯಥೋಪದಿಷ್ಟಂ** (ಪಾ. ಸೂ. ೬-೩-೧೦೯) ಎಂಬಲ್ಲಿ ಕಾಶಿಕಾಕಾರರು, 'ವರ್ಣಾಗಮೋ ವರ್ಣವಿಪರ್ಯಯಶ್ಚ ದ್ವೌಚಾಪರೌ ವರ್ಣವಿಕಾರನಾಶೌ। ಧಾತೋಸ್ತದರ್ಥಾತಿಶಯೇನ ಯೋಗಸ್ತದುಚ್ಯತೇ ಪಂಚವಿಧಂ ನಿರುಕ್ತಂ॥ ಎಂದಿರುವರು ಇಲ್ಲಿ ಅಕಾರಕ್ಕೆ ಇಕಾರರೂಪ ವಿಕಾರವು ಬಂದಿದೆ. 'ಭವೇದ್ವರ್ಣಾಗಮಾದ್ಧಂಸಃ ಸಿಂಹೋವರ್ಣವಿಪರ್ಯಯಾತ್। ಗೂಢೋತ್ಮಾ ವರ್ಣವಿಕೃತೇಃ ವರ್ಣನಾಶಾತ್ಪೃಷೋದರಮ್' ಎಂದು ಕೌಮುದಿಯಲ್ಲಿ ವರ್ಣಾಗಮಾದಿಗಳಿಗೆ ಉದಾಹರಣೆಯನ್ನಿತ್ತಿರುವರು. ಗೂಢಃ ಆತ್ಮಾ ಯಸ್ಯ ಸಃ ಎಂದು ಬಹುವ್ರೀಹಿಯಲ್ಲಿ ಆಕಾರದ ಸ್ಥಾನದಲ್ಲಿ ಉಕಾರ ಬಂದಿದೆ. ಆದ್ದರಿಂದ ಇದು ವರ್ಣವಿಕಾರಕ್ಕೆ ಉದಾಹರಣೆ. ವರ್ಣವಿಪರ್ಯಯಕ್ಕೆ ಉದಾಹರಣೆಯು ಇದಲ್ಲ. ಆದ್ದರಿಂದ ಇಲ್ಲಿ ಅಕಾರಕ್ಕೆ ಇಕಾರರೂಪ ವಿಕಾರ ಬಂದಿದೆ ಎಂದು ಹೇಳುವುದು ಉಚಿತವಾಗಿದೆ. **ಅಭೀಶವಃ ಅಶ್ನುವತೇ ಕರ್ಮಾಣಿ** (ನಿ. ೩-೯) ಯಾವುವು ಕೆಲಸಗಳನ್ನು ಹೊಂದುವುವೋ ಎಂದರೆ ಮಾಡುತ್ತವೆಯೋ ಅವು ಅಭೀಶವಪದದಿಂದ ಬೋಧಿಸಲ್ಪಡುವುವು. ಕೆಲಸವನ್ನು ಕೈಗಳು ಮಾಡುವುದು ಪ್ರಸಿದ್ಧವಾಗಿದೆ. ಆದ್ದರಿಂದ ಅಭೀಶವಃ ಎಂದರೆ ಕೈಗಳು ಎಂದು ಅರ್ಥ. ಇಲ್ಲಿ ನಿರುಕ್ತಕಾರರು ಅಶುಧಾತುವಿನಿಂದ ಹಿಂದೆ ಹೇಳಿದಂತೆ ಈ ರೂಪವು ನಿಷನ್ನವಾಗುವುದು ಎಂದು ಅಭಿಪ್ರಾಯಪಟ್ಟಿರುವರು. ॥೧೨॥

---

॥ ಸಂಹಿತಾಪಾಠಃ ॥

ಅಚ್ಛಾ ವದಾ ತನಾ ಗಿರಾ ಜರಾಯೈ ಬ್ರಹ್ಮಣಸ್ಪತಿಂ।
ಅಗ್ನಿಂ ಮಿತ್ರಂ ನ ದರ್ಶತಂ ॥೧೩॥

॥ ಪದಪಾಠಃ ॥

**ಅಚ್ಛ । ವದ । ತನಾ । ಗಿರಾ । ಜರಾಯೈ । ಬ್ರಹ್ಮಣಃ । ಪತಿಂ ।**
**ಅಗ್ನಿಂ । ಮಿತ್ರಂ । ನ । ದರ್ಶತಂ ॥ ೧೩ ॥**

ಸಂಹಿತಾಪಾಠಃ

**ಹೇ ಋತ್ವಿಕ್ಸಮೂಹ ತನಾ ತನಯಾ ದೇವತಾಸ್ವರೂಪಂ ಪ್ರಕಾಶಯಂತ್ಯಾ ಗಿರಾ ವಾಚಾ ಬ್ರಹ್ಮಣಸ್ಪತಿಂ ಮಂತ್ರಸ್ಯ ಹವಿರ್ಲಕ್ಷಣಸ್ಯಾನ್ನಸ್ಯ ವಾ ಪಾಲಕಂ ಮರುದ್ಗಣಮಗ್ನಿಂ ದರ್ಶತಂ ದರ್ಶನೀಯಂ ಮಿತ್ರಂ ನ ಮಿತ್ರಮಪಿ ಜರಾಯೈ ಸ್ತೋತುಮಚ್ಛಾಭಿಮುಖ್ಯೇನ ವದ । ಬ್ರೂಹಿ ॥ ಅಚ್ಛ । ನಿಪಾತಸ್ಯ ಚೇತಿ ಸಂಹಿತಾಯಾಂ ದೀರ್ಘತ್ವಂ । ವದ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ತನಾ । ತನು ವಿಸ್ತಾರೇ । ತನೋತಿ ದೇವತಾಮಾಹಾತ್ಮ್ಯಂ ವಿಸ್ತಾರಯತೀತಿ ತನಾ । ಪಚಾದ್ಯಚ್ । ವೃಷಾದಿತ್ವಾದಾದ್ಯುದಾತ್ತತ್ವಂ । ತೃತೀಯಾಯಾ ಡಾದೇಶಃ । ಗಿರಾ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಬ್ರಹ್ಮಣಃ । ಷಷ್ಠ್ಯಾಃ । ಪತಿಪುತ್ರೇತಿ ಸಂಹಿತಾಯಾಂ ಸತ್ವಂ ॥**

॥ ಪ್ರತಿಪದಾರ್ಥ ॥

ತನಾ— (ಎಲೈ ಋತ್ವಿಕ್ಕುಗಳೇ ದೇವತಾಸ್ವರೂಪವನ್ನು) ವರ್ಣಿಸಲು ಯೋಗ್ಯವಾದ । **ಗಿರಾ—** ವಾಕ್ಕಿನಿಂದ । **ಬ್ರಹ್ಮಣಸ್ಪತಿಂ—**ಮಂತ್ರಕ್ಕೂ ಮತ್ತು ಹವಿಸ್ಸಿನ ರೂಪದಲ್ಲಿರುವ ಅನ್ನಕ್ಕೂ ರಕ್ಷಕವಾದ ಮರುದ್ಗಣವನ್ನು । **ಅಗ್ನಿಂ**—ಅಗ್ನಿಯನ್ನೂ । **ದರ್ಶತಂ—**ಮನೋಹರವಾದ ರೂಪವುಳ್ಳ । **ಮಿತ್ರಂ**—ಮಿತ್ರನನ್ನು ಕುರಿತು । **ಜರಾಯೈ**— ಸ್ತೋತ್ರಮಾಡುವುದಕ್ಕಾಗಿ । **ಅಚ್ಛ**— (ಆ ದೇವತೆಗಳ) ಅಭಿಮುಖವಾಗಿ । **ವದ**—ಸ್ಪಷ್ಟವಾಗಿ (ಸ್ತೋತ್ರವನ್ನು) ಹೇಳಿರಿ.

ಭಾವಾರ್ಥ

ಎಲೈ ಋತ್ವಿಕ್ಕುಗಳೇ ! ಸ್ವರೂಪಗಳನ್ನು ವರ್ಣಿಸಲು ಯೋಗ್ಯವಾದ ವಾಕ್ಕುಗಳಿಂದ ಮಂತ್ರಕ್ಕೂ ಮತ್ತು ಹವಿಸ್ಸಿನ ರೂಪದಲ್ಲಿರುವ ಅನ್ನಕ್ಕೂ ರಕ್ಷಕವಾದ ಮರುದ್ಗಣವನ್ನೂ, ಅಗ್ನಿಯನ್ನೂ, ಮನೋಹರವಾದ ರೂಪವುಳ್ಳ ಮಿತ್ರನನ್ನೂ ಸಹ ಆಯಾ ದೇವತೆಯ ಅಭಿಮುಖವಾಗಿ ನಿಂತು ನಿಮ್ಮ ಸ್ತೋತ್ರಗಳನ್ನು ಸ್ಪಷ್ಟವಾಗಿ ಪಠಿಸಿರಿ.

English Translation

Sing forth in uninterrupted speech in order to glorify Brahmanaspati (or the Maruts, lords of prayer or of the Sacrificial food) and Agni as well as the handsome Mitra.

ವಿಶೇಷ ವಿಷಯಗಳು

**ಅಚ್ಛಾ ವದ—ಆಭಿಮುಖ್ಯೇನ ವದ ।** ವಿಶೇಷವಾಗಿ ಸ್ತೋತ್ರಮಾಡಿ

**ತನಾ—ತನಯಾ, ದೇವತಾಸ್ವರೂಪಂ ಪ್ರಕಾಶಯಂತ್ಯಾ ।** ವಿಸ್ತಾರವಾದ ಅಥವಾ ದೇವತಾಸ್ವರೂಪವನ್ನು ಪ್ರಕಾಶಪಡಿಸುವ

**ಜರಾಯೈ—ಸ್ತೋತುಂ ।** ಸ್ತೋತ್ರಮಾಡುವುದಕ್ಕೆ

**ಬ್ರಹ್ಮಣಃ ಪತಿಂ**—ಬಹ್ಮನೆಂದರೆ ಸ್ತೋತ್ರವೆಂದೂ, ಅನ್ನವೆಂದೂ ಅರ್ಥವು. ಬ್ರಹ್ಮಣಸ್ಪತಿಯೆಂದರೆ ಸ್ತೋತ್ರಕ್ಕೆ ಅಥವಾ ಅನ್ನಕ್ಕೆ ಅಧಿಪತಿಯಾದ ಮರುತ್ಸಮೂಹವೆಂದು ಭಾಷ್ಯಕಾರರು ಅರ್ಥ ವಿವರಣೆ ಮಾಡಿರುವರು. ಈ ಶಬ್ದಕ್ಕೆ ಬ್ರಹ್ಮಣಸ್ಪತಿಯೆಂಬ ದೇವತೆಯೆಂದು ಬೇಕಾದರೂ ಅರ್ಥವನ್ನು ಹೇಳಬಹುದು

**ದರ್ಶತಂ—ದರ್ಶನೀಯಂ ।** ನೋಡುವುದಕ್ಕೆ ಸುಂದರನಾದ

ವ್ಯಾಕರಣಪ್ರಕ್ರಿಯಾ

**ಅಚ್ಛ**—ಇದು ನಿಪಾತ. **ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಮಂತ್ರದಲ್ಲಿ ನಿಪಾತಕ್ಕೆ ದೀರ್ಘ ಬರುತ್ತೆ ಎಂದು ದೀರ್ಘ ಬರುವುದು.

**ವದ**—ವದ ವ್ಯಕ್ತಾಯಾಂ ವಾಚಿ, ಲೋಟಿಗೆ ಸಿಪ್, ಹಿ ಆದೇಶ. ಶಪ್ ವದ್+ಅ+ಹಿ. **ಅತೋ ಹೇಃ** (ಪಾ. ಸೂ. ೬-೪-೧೦೫) ಹ್ರಸ್ವಾಕಾರದ ಮುಂದೆ ಇರುವ ಹಿಗೆ ಲುಕ್ ಬರುತ್ತೆ ಎಂದು ಹಿಗೆ ಲುಕ್. **ದ್ವ್ಯಚೋಽತಸ್ತಿಙಃ** (ಪಾ. ಸೂ. ೬-೩-೧೩೫) ಋಗ್ರೂಪವಾದ ಮಂತ್ರದಲ್ಲಿ ಎರಡು ಸ್ವರಗಳನ್ನು ಹೊಂದಿರುವ ತಿಙಂತದ ಅಕಾರಕ್ಕೆ ದೀರ್ಘ ಬರುತ್ತೆ ಎಂದು ದೀರ್ಘ.

**ತನಾ**—ತನು ವಿಸ್ತಾರೇ ತನಾದಿಯಲ್ಲಿ ಮೊದಲನೆಯ ಧಾತು. ತನೋತಿ=ವಿಸ್ತರಿಸುವುದು ಎಂದು ಅರ್ಥ. ಏನನ್ನು ವಿಸ್ತರಿಸುವುದು ಎಂದು ಕರ್ಮಾಕಾಂಕ್ಷೆ ಬಂದರೆ ದೇವತಾಮಾಹಾತ್ಮ್ಯವನ್ನು ಎಂದು ಪ್ರಕರಣಕ್ಕೆ ಅನುಗುಣವಾಗಿ ಏರ್ಪಡುತ್ತದೆ. ಇದನ್ನೇ ವೇದಭಾಷ್ಯದಲ್ಲಿ 'ತನೋತಿ=(ದೇವತಾ ಮಾಹಾತ್ಮ್ಯಂ) ವಿಸ್ತಾರಯತೀತಿ ತನಾ' ಎಂದು ಹೇಳಿರುವರು. **ನಂದಿಗ್ರಹಿಪಚಾದಿಭ್ಯೋಲ್ಯುಣಿನ್ಯಚಃ** (ಪಾ. ಸೂ. ೩-೧-೧೩೪) 'ಯಥಾಸಂಖ್ಯಮನುದೇಶಸ್ಸಮಾನಾಂ' ಎಂಬ ಪರಿಭಾಷೆಯಿಂದ ನಂದ್ಯಾದಿಗಳಿಗೆ ಲ್ಯು, ಗ್ರಹ್ಯಾದಿಗಳಿಗೆ ಣಿನಿ, ಪಚಾದಿಗಳಿಗೆ ಅಚ್ ಪ್ರತ್ಯಯ ಬರುತ್ತೆ ಎಂದು ಸೂತ್ರದ ಅರ್ಥವಾಗುತ್ತ. ತನ್ ಧಾತು ಮುಂದೆ ಪಚಾದಿ ಲಕ್ಷಣವಾದ ಅಚ್ ಬಂದರೆ ತನ್+ಅ=ತನ ಎಂದು ಆಗುತ್ತೆ. ಇದು ವೃಷಾದಿಯಲ್ಲಿದೆ. **ವೃಷಾದೀನಾಂಚ** (ಪಾ. ಸೂ. ೬-೧-೨೦೩) ವೃಷಾದಿಯು ಆಕೃತಿಗಣ ಎಂದರೆ ಪ್ರತಿಯೊಂದು ಗಣಶಬ್ದಗಳನ್ನು ಇಷ್ಟೇ ಎಂದು ಪರಿಗಣಿಸಿರುವರು. ಹಾಗೆ ಈ ಗಣದ ಶಬ್ದಗಳನ್ನೆಲ್ಲಾ ಪರಿಗಣಿಸಿಲ್ಲ. ಕೃತ್ಯಾ=ಅವಯವ ವಿಶೇಷೇಣ, ಗಣ್ಯತೇ=ಪರಿಗಣ್ಯತೇ, ಇತ್ಯಾಕೃತಿಗಣಃ,

ಆ ಶಬ್ದದ ಜಾತಿಯನ್ನು ನೋಡಿ ಇದು ಈ ಗಣಕ್ಕೆ ಸೇರಿದ್ದು ಎಂದು ಹೇಳಿಕೊಳ್ಳಬೇಕು. ಅಂದರೆ ಯಾವ ಶಬ್ದಗಳಿಗೆ ಆದ್ಯುದಾತ್ತವು ಪ್ರಾಮಾಣಿಕವೋ ಅದು ಬೇರೆ ಸೂತ್ರದಿಂದ ಸಿದ್ಧವಾಗುವುದಿಲ್ಲವೋ ಆ ಶಬ್ದಗಳೆಲ್ಲವೂ ಈ ಗಣಕ್ಕೆ ಸೇರಿದವುಗಳು ಎಂದು ಅರ್ಥ, ಇದರಿಂದ ತನ ಎಂಬುದು ಆದ್ಯುದಾತ್ತ. ತೃತೀಯಾ ಏಕವಚನಕ್ಕೆ **ಸುಪಾಂಸು ಲುಕ್—,** ಎಂದು ಡಾ ಆದೇಶ, ಡಕಾರಕ್ಕೆ ಇತ್ಸಂಜ್ಞೆ. **ಲೋಪ, ತನ+ಆ, ಡಿತ್ಕರಣ** ಸಾಮರ್ಥ್ಯ ದಿಂದ ತನಶಬ್ದದ ಅಕಾರರೂಪವಾದ ಟಿಗೆ ಲೋಪ. ತನ್+ಆ=ತನಾ ಎಂದು ಆಗುತ್ತೆ.

**ಗಿರಾ—**ಗೄ ನಿಗರಣೇ **ಕ್ವಿಪ್ ಚ** ಎಂದು ಕ್ವಿಪ್, **ಋತ ಇದ್ಧಾತೋಃ** (ಪಾ. ಸೂ. ೭-೧-೧೦೦) ಋಕಾರಾಂತವಾದ ಧಾತುವಿನ ಅಂಗಕ್ಕೆ ಇಕಾರ ಬರುತ್ತೆ ಎಂದು ಋಗೆ ಇಕಾರವು ರೇಫ ಶಿರಸ್ಕವಾಗಿ ಬರುತ್ತೆ. ಗಿರ್ ಎಂದು ಆಯಿತು. ತೃತೀಯಾ ಏಕವಚನ ಟಾಪ್ರತ್ಯಯ ಗಿರ್+ಆ=ಗಿರಾ. ಸಪ್ತಮೀ ಬಹುವಚನ ಸುಪ್ ಬಂದರೆ ಗೀರ್ಷು ಎಂದಾಗುತ್ತೆ. ಇಲ್ಲಿ **ಹಲಿಚ** (ಪಾ. ಸೂ. ೮-೨-೭೭) ಹಲ್ ಪರದಲ್ಲಿರುವಾಗ ರೇಫಾಂತ ಅಥವಾ ವಕಾರಾಂತವಾದ ಧಾತುವಿನ ಉಪಧಾವರ್ಣವಾದ ಇಕ್‌ಗೆ ದೀರ್ಘ ಬರುತ್ತೆ ಎಂಬ ಎಂಟನೇ ಅಧ್ಯಾಯದ ಸೂತ್ರದಿಂದ ದೀರ್ಘ ಬಂದಿದೆ. **ಸಾವೇಕಾಚಃ—,** ಎಂಬ ಸ್ವರವನ್ನು ಮಾಡುವಾಗ **ಪೂರ್ವತ್ರಾಸಿದ್ಧಮ್** (ಪಾ. ಸೂ. ೮-೨-೧) ಎಂದು ಈ ದೀರ್ಘವು ಅಸಿದ್ಧವಾಗುವುದರಿಂದ ಗಿರ್ ಎಂಬ ಆನುಪೂರ್ವಿಯು ಸಪ್ತಮೀ ಬಹುವಚನದಲ್ಲಿ ಸ್ವರವಿಧಾಯಕ ಶಾಸ್ತ್ರದೃಷ್ಟ್ಯಾ ಇರುವುದು. ಈ ಗಿರ್ ಎಂಬ ಆನುಪೂರ್ವಿಯ ಮುಂದೆ ಟಾ ಎಂಬ ತೃತೀಯಾ ವಿಭಕ್ತಿ ಇದೆ. ಇದಕ್ಕೆ **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ. ಸೂ. ೬-೧-೧೬೮) ಸು ಎಂಬ ಸಪ್ತಮೀ ಬಹುವಚನ ಪರದಲ್ಲಿರುವಾಗ ಯಾವ ಅರ್ಥವುಳ್ಳ, ಯಾವ ಆನುಪೂರ್ವಿಕವಾದ ಏಕಾಚ್ಕರೂಪ ವಿದೆಯೋ ಆ ಅರ್ಥವುಳ್ಳ ಆ ಆನುಪೂರ್ವಿಕವಾದ ಏಕಾಚ್ಕರೂಪದ ಮುಂದೆ ಇರುವ ತೃತೀಯಾದಿ ವಿಭಕ್ತಿಗೆ ಉದಾತ್ತ ಬರುತ್ತೆ ಎಂದು ಸೂತ್ರಾರ್ಥ. 'ಸೌಯದರ್ಥವಿಶಿಷ್ಟನೇಕಾಜ್ರೂಪಂ ತದರ್ಥವಿಶಿಷ್ಟಾತ್ತದೇಕಾ ಜ್ರೂಪಾತ್ಪರಾವಿಭಕ್ತಿರಿತಿ ಫಲಿತಮ್' ಎಂದು ಶೇಖರಕಾರರು ಹೇಳಿರುವರು. ಈ ಸೂತ್ರದಿಂದ ಗಿರ್ ಶಬ್ದದ ಮುಂದೆ ಇರುವ ಟಾ ಎಂಬುದು ಉದಾತ್ತ. ಇಲ್ಲಿ ಸು ಎಂಬುದರಿಂದ ಪ್ರಥಮೈಕವಚನವನ್ನು ಗ್ರಹಿಸಬೇಕೇ ಅಥವಾ ಸಪ್ತಮೀ ಬಹುವಚನವನ್ನು ಗ್ರಹಿಸಬೇಕೇ ಎಂದು ಸಂಶಯ ಬರುತ್ತೆ. ಇದೇ ಸೂತ್ರಭಾಷ್ಯದಲ್ಲಿ **ಸಾವಿತಿ ಕಿಮಿದಂ ಪ್ರಥಮೈಕವಚನಸ್ಯಗ್ರಹಣಮಾಹೋಸ್ವಿತ್ಸಪ್ತಮೀ ಬಹುವಚನಸ್ಯ, ಕುತಸ್ಸನ್ದೇಹಃ। ಸಮಾನೋನಿರ್ದೇಶಃ। ಸಪ್ತಮೀ ಬಹುವಚನಸ್ಯಗ್ರಹಣಂ। ಕಥಂ ಜ್ಞಾಯತೇ?। ಯದಯಂ ನಗೋಶ್ವನ್ಸಾವವರ್ಣೇತಿ ಗೋಶುನೋಃ ಪ್ರತಿಷೇಧಂಶಾಸ್ತಿ** ಎಂದಿದೆ. ಹೀಗೆ ಸಪ್ತಮೀ ಬಹುವಚನ ಗ್ರಹಣ ಎಂಬುದಕ್ಕೆ ಪ್ರಮಾಣ ವನ್ನು ಹೇಳಿದ್ದಾಯಿತು. ಮುಂದೆ ಹೇಳುವ ರೂಪಗ್ರಹಣ ವಿವಕ್ಷೆಗೂ ಇದೇ ಭಾಷ್ಯವು ಪ್ರಮಾಣವೆಂದರಿಯಬೇಕು. ಇನ್ನು ಪ್ರಯೋಜನವನ್ನು ನಿರೂಪಿಸಬೇಕು. ಯಾ ಧಾತು ಮುಂದೆ ಶತೃಪ್ರತ್ಯಯ ಬಂದರೆ ಯಾನ್ ಎಂದು ಪ್ರಥಮೈಕವಚನದಲ್ಲಿಯೂ, ಯಾತ್ಸು ಎಂದು ಸಪ್ತಮೀ ಬಹುವಚನದಲ್ಲಿಯೂ, ಯಾತಾ-ಯಾದ್ಭ್ಯಾಂ ಎಂದು ತೃತೀಯಾ ವಿಭಕ್ತಿಯಲ್ಲೂ ರೂಪಗಳಾಗುವುವು. ಪ್ರಥಮೈಕವಚನ ಎಂದು ಗ್ರಹಿಸಿದರೆ ಪ್ರಥಮೈಕವಚನದಲ್ಲಿರುವ ಯಾನ್‌ಎಂಬ ಅಥವಾ ಸಂಯೋಗಾಂತಲೋಪಕ್ಕೆ ಅಸಿದ್ಧತ್ವ ಬಂದರೆ ಯಾನ್ತ್ ಎಂಬ ರೂಪಇದೆ. ಅದು ತೃತೀಯಾ ವಿಭಕ್ತಿಯಲ್ಲಿಲ್ಲ. ಆದ್ದರಿಂದ ಟಾ-ಭ್ಯಾಂಗಳು ಉದಾತ್ತವಾಗಲಾರವು. ಸಪ್ತಮೀ ಎಂದು ಗ್ರಹಿಸಿದರೆ ಯಾತ್ಸು

ಎಂಬಲ್ಲಿರುವ ಯಾತ್ ಎಂಬುದು ಯಾತಾ ಎಂಬಲ್ಲಿದೆ, ಜಶ್ತ್ವವು ಅಸಿದ್ಧವಾಗುವುದರಿಂದ ಯಾದ್ಭ್ಯಾಂ ಎಂಬಲ್ಲಿ ಯಾತ್ ರೂಪ ಇದೆ. ಆದ್ದರಿಂದ ಉದಾತ್ತವು ಸಿದ್ಧವಾಗುತ್ತೆ. ಸೌ ಎಂಬ ಪದವೇ ಬೇಡ ಎಂದರೆ ರಾಜ್ಞಾ ಎಂಬಲ್ಲಿ ವಿಭಕ್ತಿಯು ಏಕಾಚ್ಕದ ಮುಂದೆ ಇರುವುದರಿಂದ ಉದಾತ್ತವು ಬರಬೇಕಾಗುತ್ತೆ. ರಾಜಸು ಎಂಬ ಸಪ್ತಮಿ ಯಲ್ಲಿ ಏಕಾಚ್ಕವಾಗಿಲ್ಲ. ಆದ್ದರಿಂದ ಸೌಯು ಏಕಾಚ್ ತತಃ ಪರನಾಗುವುದಿಲ್ಲವಾದ್ದರಿಂದ ಸೌ ಎಂದು ಹೇಳಿದರೆ ವಿಭಕ್ತಿಗೆ ಉದಾತ್ತ ಬರುವುದಿಲ್ಲ. ಇನ್ನು ಏಕಾಚೋ ವಿಹಿತಾ ವಿಭಕ್ತಿಃ ಉದಾತ್ತಾಭವತಿ ಎಂದರೆ ಏಕಾಚ್ಕದ ಮುಂದೆ ವಿಹಿತವಾದ ವಿಭಕ್ತಿಯು ಉದಾತ್ತವಾಗುತ್ತೆ ಎಂದು ಹೇಳುವೆವು. ರಾಜನ್ ಶಬ್ದವು ಅನೇಕಾಚ್ಕವಾಗುವುದ ರಿಂದ ಇದರ ಮುಂದೆ ವಿಹಿತವಾದ ವಿಭಕ್ತಿಯು ಏಕಾಚ್ಕದ ಮುಂದೆ ವಿಹಿತವಾದುದು ಆಗುವುದಿಲ್ಲ ಎನ್ನಬಹುದು. ಈ ಪಕ್ಷದಲ್ಲಿ ದೋಷವಿಲ್ಲದಿದ್ದರೂ ಹೀಗೆ ಅರ್ಥವನ್ನು ಹೇಳಲು ಪ್ರಮಾಣವಿಲ್ಲದೇ ಇರುವುದರಿಂದ ಹೀಗೆ ಅರ್ಥ ಹೇಳಲು ಸಾಧ್ಯವಿಲ್ಲ.

ಏಕಾಚಃ ಎಂಬುದನ್ನು ಈ ಸೂತ್ರದಲ್ಲಿ ಹೇಳದೆ ಇದ್ದರೆ ರಾಜ್ಞಾ ಎಂಬಲ್ಲಿಯೇ ಉದಾತ್ತ ಬರಬೇಕಾಗುತ್ತೆ. ಈಗ ಸಪ್ತಮೀ ಬಹುವಚನದಲ್ಲಿ ಯಾವುದು ಇದೆಯೋ ಅದರ ಮುಂದೆ ಇರುವ ವಿಭಕ್ತಿಯು ಉದಾತ್ತವಾಗುತ್ತೆ ಎಂದು ಸೂತ್ರಾರ್ಥವಾಗುತ್ತೆ. ದ್ವಿಶಬ್ದವು ನಿತ್ಯದ್ವಿವಚನಾಂತವಾದ್ದರಿಂದ ಇದರ ಮುಂದೆ ಸಪ್ತಮೀ ಬರುವುದಿಲ್ಲ. ಆದ್ದರಿಂದ ದ್ವಾಭ್ಯಾಂ ಎಂಬಲ್ಲಿ ಈ ಸೂತ್ರವು ಪ್ರವರ್ತಿಸದೇ ಇರುವುದಕ್ಕಾಗಿ ಸೌ ಎಂಬುದು ಆವಶ್ಯಕ. ಏಕಾಚಃ ಎಂದು ಹೇಳಿ ದರೆ ಸಪ್ತಮೀ ಬಹುವಚನದಲ್ಲಿ ಏಕಾಚ್ಕವಾದ ರೂಪವು ಇಲ್ಲದ ಕಾರಣ ರಾಜ್ಞಾ ಎಂಬಲ್ಲಿ ವಿಭಕ್ತಿಗೆ ಉದಾತ್ತ ಬರು ವುದಿಲ್ಲ. ರೂಪಗ್ರಹಣವನ್ನು ವಿವಕ್ಷಿಸದೆ, ಸುಪರದಲ್ಲಿರುವಾಗ ಯಾವ ಏಕಾಚ್ಕವಿದೆಯೋ ಅದರ ಮುಂದೆ ಇರುವ ವಿಭಕ್ತಿಯು ಉದಾತ್ತವಾಗುತ್ತೆ ಎಂದು ಅರ್ಥವನ್ನು ಹೇಳಿದರೆ ದೋಷಭ್ಯಾಂ ಎಂಬಲ್ಲಿ ವಿಭಕ್ತಿಗೆ ಉದಾತ್ತ ಬರಬೇ ಕಾಗುತ್ತೆ. ಸಪ್ತಮೀ ಬಹುವಚನದಲ್ಲಿ ದೋಃಷು ಎಂದು ರೂಪ. ಅಲ್ಲಿ ದೋಸ್ ಎಂದು ಏಕಾಚ್ಕರೂಪಗ್ರಹಣ ವಿವಕ್ಷೆ ಮಾಡದೆ ಇದ್ದರೆ ಸಪ್ತಮೀ ಬಹುವಚನದಲ್ಲಿ ಏಕಾಚ್ಕವಾದ ದೋಶ್ಶಬ್ದದ ಮುಂದೆ ಇರುವುದರಿಂದ ಉದಾತ್ತ ಬರಬೇಕಾಗುತ್ತೆ. ರೂಪಗ್ರಹಣವನ್ನು ವಿವಕ್ಷಿಸಿದರೆ ದೋಸ್ ಎಂಬ ರೂಪವು ಭ್ಯಾಂಪರದಲ್ಲಿರುವಾಗ ಇಲ್ಲ. ಆದ್ದರಿಂದ ಉದಾತ್ತ ಬರುವುದಿಲ್ಲ. ರೂಪಗ್ರಹಣವನ್ನು ವಿವಕ್ಷಿಸಿದರೂ ದೋಷಭ್ಯಾಂ ಎಂಬಲ್ಲಿ ಉದಾತ್ತ ಬರಬೇಕಾಗುತ್ತೆ. ಹೇಗೆಂದರೆ ದೋಸ್ ಶಬ್ದದ ಮುಂದೆ ಭ್ಯಾಮ್ ಬಂದರೆ **ಪದ್ದನ್ನೋಮಾಸ್**—ಎಂದು ದೋಷನ್ ಆದೇಶವು ಬರುತ್ತೆ. ಈ ದೋಷನ್ ಎಂಬುದು ಏಕಾಚ್ಕವಾದ ದೋಸ್ ಶಬ್ದಕ್ಕೆ ಬಂದಿದೆ. ಆದ್ದರಿಂದ **ಸ್ಥಾನಿವದಾದೇಶಃ**—ಎಂದು ಸ್ಥಾನಿವದ್ಭಾವದಿಂದ ಸಪ್ತಮೀ ಬಹುವಚನದಲ್ಲಿ ದೃಷ್ಟವಾದ ದೋಸ್ ಶಬ್ದರೂಪತ್ವವನ್ನು ಹರಬಹುದು. ಆದ್ದರಿಂದ ಉದಾತ್ತ ಬರಬೇಕಾಗುತ್ತೆ ಎಂದರೆ, ಲಕ್ಷ್ಯಾನುರೋಧದಿಂದ ಏಕಾಚಃ ಎಂಬುದಕ್ಕೆ ಆವರ್ತಿ ಮಾಡುವೆವು. ಏವಂಚ ಸಪ್ತಮೀ ಬಹುವಚನದಲ್ಲಿ ಯಾವ ಏಕಾಚ್ಕ ರೂಪವಿದೆಯೋ ಅಂತಹ ಏಕಾಚ್ಕವಾಗಿಯೇ ಇರುವ ರೂಪದ ಮುಂದೆ ಇರುವ ವಿಭಕ್ತಿಯು ಉದಾತ್ತವಾಗುತ್ತೆ ಎಂದು ಅರ್ಥಹೇಳುವೆವು. ಇಲ್ಲಿ ಸ್ಥಾನಿವದ್ಭಾವದಿಂದ ಏಕಾಚ್ಕದ ಮುಂದೆ ಇರುವುದಾದರೂ ದೋಷು ಎಂಬ ಅನೇಕಾಚ್ಕದ ಮುಂದೆ ಇರತಕ್ಕದ್ದೂ ಆಗುತ್ತೆ. ಏವಂಚ ಏಕಾಚ್ಕದ ಮುಂದೆಯೇ ಇರುವುದಾಗುವುದಿಲ್ಲ. ಆದ್ದರಿಂದ ವಿಭಕ್ತಿಗೆ ಉದಾತ್ತ ಬರುವುದಿಲ್ಲ. ರೂಪಗ್ರಹಣ ವಿವಕ್ಷೆಗೆ ಇನ್ನೊಂದು ಪ್ರಯೋಜನವನ್ನೂ ಹೇಳಬಹುದು. ಕೇಸು ಎಂದು ಸಪ್ತಮಿಯಲ್ಲಿ ಏಕಚ್ಕವಾಗಿರುವ ಕೇ ಎಂಬ

ರೂಪವು ಕಾಭ್ಯಾಂ ಎಂಬಲ್ಲಿ ಇಲ್ಲ. ಆದರಿಂದ ಇಲ್ಲಿ ಉದಾತ್ತ ಇರುವದಿಲ್ಲ. ರೂಪಗ್ರಹಣವನ್ನು ವಿವಕ್ಷಿಸದೇ ಇದ್ದರೆ ಕಿಮ್ ಶಬ್ದವು ಸಪ್ತಮೀ ಬಹುವಚನದಲ್ಲಿ ಏಕಾಚ್ಕವಾಗಿರುವದರಿಂದ ಕಿಮ್ ಶಬ್ದದ ಮುಂದೆ ಇರುವ ವಿಭಕ್ತಿಗೆ ಉದಾತ್ತ ಬರಬೇಕಾಗುತ್ತೆ. ಹೀಗೆ ಅರ್ಥಹೇಳಿದರೂ ಅನ್ವಾದೇಶ ವಿಷಯದಲ್ಲಿ ಸ್ತ್ರೀಲಿಂಗ ವಿಷಯವಾಗ ಆಭ್ಯಾಂ ಎಂಬಲ್ಲಿಯೂ ಏಭಿಃ ಏಷಾಂ ಎಂಬಲ್ಲಿಯೂ **ಸಾವೇಕಾಚಃ,** ಎಂಬುದು ಬರುವುದರಿಂದ ವಿಭಕ್ತಿಯು ಉದಾತ್ತವಾಗ ಬೇಕಾಗುತ್ತೆ. ಆಸು+ಏಷು ಎಂದು ಸಪ್ತಮಿಯಲ್ಲಿ ರೂಪವಾದ್ದರಿಂದ, ಸಪ್ತಮೀ ಬಹುವಚನೇ ಯ ಏಕಾಚ್ ತತಃ ಪರತ್ವವು ಸಂಭವಿಸುತ್ತೆ, ಏವಂಚ ಇಲ್ಲಿ ಸರ್ವಾನುದಾತ್ತವು ಹೇಗೆ ಬರುತ್ತೆ, ಎಂದರೆ ಅಲ್ಲಿ ವೇದದಲ್ಲಿ ಛಾಂದಸವಾಗಿಯೇ ಸರ್ವಾನುದಾತ್ತವನ್ನು ಉಪಪಾದಿಸಬೇಕು. ಲೋಕದಲ್ಲಿ ವಿಭಕ್ತಿಯು ಉದಾತ್ತವೇ ಆಗುವುದು.

**ಬ್ರಹ್ಮಣಃ—ಷಷ್ಠ್ಯಾಃಪತಿ ಪುತ್ರ ಪೃಷ್ಠಪಾರಪದಪಯಸ್ಪೋಷೇಷು** (ಪಾ. ಸೂ. ೮-೩-೫೩) ಪತ್ಯಾದಿಶಬ್ದಗಳು ಪರದಲ್ಲಿರುವಾಗ ಷಷ್ಠೀವಿಭಕ್ತಿ ಸಂಬಂಧವಾದ ವಿಸರ್ಗಕ್ಕೆ ಸಕಾರಾದೇಶ ಬರುತ್ತೆ ಎಂದು ಸಂಹಿತಾಕಾಲದಲ್ಲಿ ವಿಸರ್ಗಕ್ಕೆ ಸಕಾರಾದೇಶ. ॥೧೩॥

---

ಸಂಹಿತಾಪಾಠಃ

ಮಿಮೀಹಿ ಶ್ಲೋಕಮಾಸ್ಯೇ ಪರ್ಜನ್ಯ ಇವ ತತನಃ ।
ಗಾಯ ಗಾಯತ್ರಮುಕ್ಥ್ಯಂ ॥೧೪॥

ಪದಪಾಠಃ

ಮಿಮೀಹಿ । ಶ್ಲೋಕಂ । ಆಸ್ಯೇ । ಪರ್ಜನ್ಯಃऽಇವ । ತತನಃ ।
ಗಾಯ । ಗಾಯತ್ರಂ । ಉಕ್ಥ್ಯಂ ॥ ೧೪ ॥

ಸಾಯಣಭಾಷ್ಯಂ

**ಹೇ ಋತ್ವಿಕ್ಸಮೂಹ ಆಸ್ಯೇ ಸ್ವಕೀಯಮುಖೇ ಶ್ಲೋಕಂ ಸ್ತೋತ್ರಂ ಮಿಮೀಹಿ । ನಿರ್ಮಿತಂ ಕುರು । ತಂ ಚ ಶ್ಲೋಕಂ ತತನಃ । ವಿಸ್ತಾರಯ । ತತ್ರ ದೃಷ್ಟಾಂತಃ । ಪರ್ಜನ್ಯ ಇವ । ಯಥಾ**

**ಮೇಘೋ ವೃಷ್ಟಿಂ ವಿಸ್ತಾರಯತಿ ತದ್ವತ್ । ಉಕ್ಥ್ಯಂ ಶಸ್ತ್ರಯೋಗ್ಯಂ ಗಾಯತ್ರಂ ಗಾಯತ್ರೀಚ್ಛಂದಸ್ಕಂ ಸೂಕ್ತಂ ಗಾಯ । ಪಠ ॥ ಮಿಮೀಹಿ । ಮಾಙ್ ಮಾನೇ । ಜೌಹೋತ್ಯಾದಿಕಃ । ವ್ಯತ್ಯಯೇನ ಪರಸ್ಮೈಪದಂ । ಭೃಞಾಮಿದಿತ್ಯಭ್ಯಾಸಸ್ಯೇತ್ವಂ । ಆಸ್ಯೇ । ಅಸು ಕ್ಷೇಪಣೇ । ಅಸ್ಯತೇ ಕ್ಷಿಪ್ಯತೇಽಸ್ಮಿನ್ನಿತ್ಯಾಸ್ಯಂ । ಕೃತ್ಯಲ್ಯುಟೋ ಬಹುಲಂ । ಪಾ. ೩-೩-೧೧೩ । ಇತ್ಯಧಿಕರಣೇ ಣ್ಯತ್ । ತಿತ್ಸ್ವರಿತಮಿತಿ ಸ್ವರಿತತ್ವಂ । ತತನಃ । ತನು ವಿಸ್ತಾರೇ । ಲೇಟಿ ಸಿಪಿ ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ಲೇಟೋಽಡಾಟಾವಿತ್ಯಡಾಗಮಃ । ಇತಶ್ಚ ಲೋಪಃ ಇತೀಕಾರಲೋಪಃ । ಗಾಯತ್ರಂ । ಗಾಯತ್ರ್ಯಾಃ ಸಂಬಂಧಿ ತಸ್ಯೇದಮಿತ್ಯಣ್ । ಯದ್ವಾ । ಗಾಯತಸ್ತ್ರಾಯತ ಇತಿ ಗಾಯತ್ರಂ । ಆತೋಽನುಪಸರ್ಗೇ ಕಃ ॥**

॥ ಪ್ರತಿಪದಾರ್ಥ ॥

**ಆಸ್ಯೇ**—ನಿನ್ನ ಮುಖದಲ್ಲಿ (ದಿಂದ)। **ಶ್ಲೋಕಂ**—ಸ್ತೋತ್ರವನ್ನು । **ಮಿಮೀಹಿ**—ಸೃಷ್ಟಿಸು (ನಿರ್ಮಿಸು) (**ತಂ ಚ ಶ್ಲೋಕಂ**— ಆ ಸ್ತೋತ್ರವನ್ನು) । **ಪರ್ಜನ್ಯ ಇವ** - ಪರ್ಜನ್ಯನು ಮಳೆಯನ್ನು ಸುರಿಸಿ ನೀರನು ಹರಡುವಂತೆ । **ತತನಃ**—ವಿಸ್ತರಿಸಿ ಹಾಡು । **ಉಕ್ಥ್ಯಂ**—ಸ್ತೋತ್ರಕ್ಕೆ ಯೋಗ್ಯವಾದ । **ಗಾಯತ್ರಂ**—ಗಾಯತ್ರೀ ಛಂದಸ್ಸಿನಲ್ಲಿರತಕ್ಕ ಸೂಕ್ತವನ್ನು । **ಗಾಯ**—ಪಠಿಸು.

ಭಾವಾರ್ಥ

ನಿನ್ನ ಮುಖದಿಂದ ಸ್ತೋತ್ರವನ್ನು ರಚಿಸಿ ಪರ್ಜನ್ಯನು ಮಳೆಯನ್ನು ಸುರಿಸಿ ನೀರನ್ನು ಹರಡುವಂತೆ ಆ ಸ್ತೋತ್ರವನ್ನು ವಿಸ್ತರಿಸಿ ಹಾಡು. ಸ್ತೋತ್ರಕ್ಕೆ ಯೋಗ್ಯವಾದ ಗಾಯತ್ರೀ ಛಂದಸ್ಸಿನಲ್ಲಿರತಕ್ಕ ಸೂಕ್ತವನ್ನು ಪಠಿಸು.

English Translation

Compose a verse in your mouth, spread it out like a cloud spreading rain ; chant that verse like a verse of Gayatri metre.

॥ ವಿಶೇಷವಿಷಯಗಳು ॥

**ಮಿಮೀಹಿ**—ನಿರ್ಮಿಸು, ರಚಿಸು, compose.

**ಶ್ಲೋಕ**—ಸ್ತೋತ್ರ, ಸೂಕ್ತ, ವಾಕ್ಯ. ಶ್ಲೋಕಃ ಧಾರಾ ಮೊದಲಾದ ಐವತ್ತೇಳು ವಾಙ್ನಾಮಗಳ ಮಧ್ಯದಲ್ಲಿ ಶ್ಲೋಕಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೨-೨೩) ಶ್ಲೋಕವೆಂದರೆ ಸ್ತುತಿರೂಪವಾದ ವಾಕ್ಯವು.

**ಪರ್ಜನ್ಯ ಇವ ತತನಃ**—ಮಳೆಯು ಭೂಮಿಯಮೇಲೆ ನೀರನ್ನು ಸುರಿಸಲು ಆ ನೀರು ಎಲ್ಲಾ ಪ್ರದೇಶದಲ್ಲಿ ವಿಸ್ತಾರವಾಗಿ ಹರಡುವಂತೆ ನೀನು ರಚಿಸಿದ ಸ್ತೋತ್ರರೂಪವಾದ ವಾಕ್ಯವನ್ನು ವಿಸ್ತಾರಮಾಡು ಎಂದಭಿಪ್ರಾಯವು.

**ಗಾಯತ್ರಂ ಉಕ್ಥ್ಯಂ**— ಉಕ್ಥ್ಯವೆಂದರೆ ಶಸ್ತ್ರಮಂತ್ರಗಳನ್ನು, ದೇವತೆಗಳನ್ನು ಸ್ತೋತ್ರಮಾಡುವ ಗಾಯತ್ರೀ ಛಂದಸ್ಸಿನ ಋಕ್ಕುಗಳನ್ನು ಪಠಿಸು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಮಿಮೀಹಿ**— ಮಾಙ್ ಮಾನೇ ಜುಹೋತ್ಯಾದಿಯಲ್ಲಿರುವ ಧಾತು. ಇದು ಙಿತ್, **ಅನುದಾತ್ತ ಙಿತ ಆತ್ಮನೇ ಪದಮ್** (ಪಾ. ಸೂ. ೧-೩-೧೨) ಎಂದು ಆತ್ಮನೇಪದವು ನ್ಯಾಯವಾಗಿ ಬರಬೇಕು. ಆದರೂ ಇದಕ್ಕೆ ಬದಲಾಗಿ **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂದು ಪರಸ್ಮೈಪದ ಬರುತ್ತೆ. ಲೋಟ್ ಮಧ್ಯಮ ಪುರುಷ ಸಿಪ್. **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಎಂದು ಹಿ ಆದೇಶ. **ಅಪಿಚ್ಚ** ಎಂದು ಹೇಳಿರುವುದರಿಂದ **ಸಾರ್ವಧಾತುಕಮಪಿತ್** (ಪಾ. ಸೂ. ೧-೨-೪) ಪಿತ್ ಅಲ್ಲದ ಸಾರ್ವಧಾತುಕವು ಙಿತ್‌ನಂತೆ ಆಗುತ್ತೆ ಎಂದು ಙಿತ್ ಆಗುತ್ತೆ. ಶಪ್‌ಗೆ **ಜುಹೋತ್ಯಾದಿಭ್ಯಃ ಶ್ಲುಃ** ಎಂದು ಶ್ಲು (ಲೋಪ) ಬರುತ್ತೆ. **ಶ್ಲೌ** (ಪಾ. ಸೂ. ೬-೧-೧೦) ಎಂದು ದ್ವಿತ್ವ-ಮಾ+ಮಾ+ಹಿ. **ಹ್ರಸ್ವಃ** (ಪಾ. ೭-೪-೫೯) ಎಂದು ಅಭ್ಯಾಸಕ್ಕೆ ಹ್ರಸ್ವ. **ಭೃಞಾಮಿತ್** (ಪಾ. ಸೂ. ೭-೪-೭೬) ಎಂದು ಅಭ್ಯಾಸಕ್ಕೆ ಇತ್ವ. **ಅಲೋಂತ್ಯಸ್ಯ** (ಪಾ. ಸೂ ೧-೧-೫೨) ಕಾರ್ಯವಿಧಾಯಕ ಶಾಸ್ತ್ರದಲ್ಲಿರುವ ಸ್ಥಾನಷಷ್ಠ್ಯಂತಕ್ಕೆ ವಿಹಿತವಾದ ಕಾರ್ಯಗಳು ಆ ಷಷ್ಠ್ಯಂತಪದಬೋಧ್ಯವಾದ ಶಬ್ದದ ಕೊನೆಯ ವರ್ಣಕ್ಕೆ ಬರುವುವು ಎಂದು ಅಭ್ಯಾಸದ ಕೊನೆಯ ವರ್ಣಕ್ಕೆ ಇಕಾರ- **ನಾನರ್ಥಕೇಽಲೋಽನ್ತ್ಯವಿಧಿರನಭ್ಯಾಸವಿಕಾರೇ** (ಪರಿಭಾ. ೧೦೬) ಅರ್ಥವು ಇಲ್ಲದಿರುವ ಕಡೆಯಲ್ಲಿ **ಅಲೋಽನ್ತ್ಯಸ್ಯ** ಎಂಬುದು ಪ್ರವರ್ತಿಸುವುದಿಲ್ಲ. ಆದರೆ, ಅಭ್ಯಾಸಕ್ಕೆ ಅರ್ಥವಿಲ್ಲದೇ ಇದ್ದರೂ ಅಲ್ಲಿ ಈ ನಿಯಮ ಇಲ್ಲ. ಅಲ್ಲಿ **ಅಲೋಽನ್ತ್ಯಸ್ಯ** ಎಂಬುದು ಪ್ರವರ್ತಿಸಿಯೇ ತೀರುವದು ಎಂದು ಪರಿಭಾಷಾರ್ಥ. ದ್ವಿತ್ವ ಬಂದ ಮೇಲೆ ಸಮುದಾಯಕ್ಕೆ ಅರ್ಥವಿದೆಯೇ ವಿನಾ ಅದರ ಏಕದೇಶವಾದ ಅಭ್ಯಾಸಕ್ಕೆ ಅರ್ಥವಿಲ್ಲ. ಆದರೂ **ಅನಭ್ಯಾಸವಿಕಾರೇ** ಎಂದಿರುವದರಿಂದ ಇಲ್ಲಿ **ಅಲೋಽನ್ತ್ಯಸ್ಯ** ಎಂಬುದು ಪ್ರವರ್ತಿಸುವುದು. ಏವಂಚ ಮ ಎಂಬಲ್ಲಿರುವ ಅಕಾರಕ್ಕೆ ಇಕಾರ ಬರುತ್ತೆ. ಮ ಎಂಬ ವಿಶಿಷ್ಟಕ್ಕೆ ಇಕಾರ ಬರುವದಿಲ್ಲ. ಮಿ+ಮಾ+ಹಿ ಈಗ **ಈಹಲ್ಯಘೋಃ** (ಪಾ. ಸೂ. ೬-೪-೧೧೩) ಶ್ನಾ-ಅಭ್ಯಸ್ತ ಇವುಗಳ ಆಕಾರಕ್ಕೆ ಕಿತ್ ಙಿತ್ ಆದ ಸಾರ್ವಧಾತುಕ ಪರದಲ್ಲಿರುವಾಗ ಈತ್ವ ಬರುತ್ತೆ ಎಂದು ಆಕಾರಕ್ಕೆ ಈಕಾರ. ಮಿಮೀಹಿ ಎಂದು ಆಗುತ್ತೆ. ಇದು ಪಾದದ ಆದಿಯಲ್ಲಿರುವುದರಿಂದ ಸರ್ವಾನುದಾತ್ತ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಹಿ ಉದಾತ್ತ.

**ಅಸ್ಯೇ**— ಅಸು ಕ್ಷೇಪಣೇ ಅಸ್ಯತೇ-ಕ್ಷಿಪ್ಯತೇ ಅಸ್ಮಿನ್ನಿತ್ಯಾಸ್ಯಂ, ತಿನ್ನಲು ಯೋಗ್ಯವಾದ ಪದಾರ್ಥಗಳು ಇದರಲ್ಲಿ ಹಾಕಲ್ಪಡುತ್ತವೆ ಎಂದು ವಿಗ್ರಹವಾಕ್ಯದ ಅರ್ಥ. **ಕೃತ್ಯಲ್ಯುಟೋ ಬಹುಲಂ** (ಪಾ. ಸೂ. ೩-೩-೧೧೩) **ಕೃತ್ಯಾಃ** (ಪಾ. ೩-೧-೯೫) ಎಂದು ಅಧಿಕಾರಮಾಡಿಕೊಂಡು ವಿಹಿತವಾಗಿರುವ ಪ್ರತ್ಯಯಗಳಿಗೆ ಕೃತ್ಯಪ್ರತ್ಯಯಗಳೆನ್ನುವರು. ಈ ಕೃತ್ಯಪ್ರತ್ಯಯಗಳೂ ಲ್ಯುಟ್ ಪ್ರತ್ಯಯವೂ ಬಹುಲವಾಗಿ ಬರುತ್ತವೆ. ಅಂದರೆ ಯಾವ ಅರ್ಥದಲ್ಲಿ ವಿಹಿತವಾಗಿವೆಯೋ ಅದಕ್ಕಿಂತ ಬೇರೆ ಅರ್ಥದಲ್ಲಿಯೂ ಬರುವುವು ಎಂದು ಅರ್ಥ. ಣ್ಯತ್ ಪ್ರತ್ಯಯವು **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಭಾವ, ಕರ್ಮ-ಅರ್ಥ ಎಂಬ ಅರ್ಥಗಳಲ್ಲಿ ವಿಹಿತವಾಗಿದೆ. ಆದರೂ ಬಹುಲಗ್ರಹಣದಿಂದ ಅಧಿಕರಣಾರ್ಥದಲ್ಲಿ ಣ್ಯತ್ ಬರುತ್ತೆ. **ಅತ ಉಪಧಾಯಾಃ** (ಪಾ ಸೂ. ೭-೨-೧೧೬) ಎಂದು ಅಕಾರಕ್ಕೆ ಆ ಎಂಬ ವೃದ್ಧಿ ಬರುತ್ತೆ. ಆಸ್+ಯ=ಆಸ್ಯ **ತಿತ್ಸ್ವರಿತಮ್** (ಪಾ. ಸೂ. ೬-೧-೧೮೫) 'ಕರ್ಷಾತ್ವತೋ ಘಞಂತ ಉದಾತ್ತಃ, ಎಂಬ ಸೂತ್ರದಿಂದ ಅಂತಃ ಎಂದು ಸಂಬಂಧಿಸುವುದು.

ಏವಂಚ ತಕಾರೇತ್ಸಂಜ್ಞಕಪ್ರತ್ಯಯದ ಕೊನೆಯ ವರ್ಣವು ಸ್ವರಿತವಾಗುವುದು ಎಂದು ಪ್ರತ್ಯಯದ ಅಕಾರವು ಸ್ವರಿತವಾಗುತ್ತೆ.

**ತತನಃ**—ತನುವಿಸ್ತಾರೇ **ಲಿಙರ್ಥೇ ಲೇಟ್** (ಪಾ. ಸೂ. ೩-೪-೭) 'ವಿಧಿ ನಿಮನ್ತ್ರಣಾ—' ಮತ್ತು 'ಹೇತುಹೇತುಮತೋರ್ಲಿಙ್' ಎಂಬ ಸೂತ್ರಗಳಲ್ಲಿ ಲಿಙ್ ಪ್ರತ್ಯಯವು ಯಾವ ಅರ್ಥಗಳಲ್ಲಿ ವಿಹಿತವಾಗಿದೆಯೋ ಆ ಅರ್ಥಗಳಲ್ಲಿ ಛಂದಸ್ಸಿನಲ್ಲಿ ಲೇಟ್ ಬರುತ್ತೆ ಎಂದು ಲೇಟ್, ಅದರ ಸ್ಥಾನದಲ್ಲಿ ಮಧ್ಯಮಪುರುಷ ಏಕವಚನ ಸಿಪ್. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂದು ಸಿಪ್‌ಗೆ ಅಟ್ ಆಗಮ. **ಇತಶ್ಚಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂದು ಸಿಪ್‌ನ ಇಕಾರಕ್ಕೆ ಲೋಪ. **ಬಹುಲಂ ಛಂದಸಿ** (ಪಾ. ಸೂ. ೨-೪-೭೬) ಎಂದು ಶಪ್‌ಗೆ ಶ್ಲು, ದ್ವಿತ್ವ. **ತನ್+ತನ್+ಅಸ್. ಹಲಾದಿಃಶೇಷಃ** ಎಂದು ಅಭ್ಯಾಸದಲ್ಲಿರುವ ನ್‌ಗೆ ಲೋಪ, ತತನಸ್, ಸಕಾರಕ್ಕೆ ರುತ್ವ ವಿಸರ್ಗಗಳು.

**ಗಾಯತ್ರಮ್**—ಗಾಯತ್ರ್ಯಾಃ ಇದಮ್ ಎಂದು ವಿಗ್ರಹ. **ತಸ್ಯೇದಮ್** (ಪಾ. ಸೂ. ೪-೩-೧೨೦) ಪ್ರಾತಿಪದಿಕಪ್ರಕೃತಿಕ ಷಷ್ಠ್ಯಂತದ ಮುಂದೆ ಇದಮ್ ಎಂಬ ಅರ್ಥದಲ್ಲಿ ಅಣ್ ಮೊದಲಾದ ಐದು ಮಹೋತ್ಸರ್ಗಗಳೂ, ಘಾದಿಪ್ರತ್ಯಯಗಳೂ ಬರುವವು ಎಂದು ಸೂತ್ರಾರ್ಥ. ಶೇಖರಕಾರರ ಮತದಂತೆ ತಸ್ಯೇದಂ ಎಂದಿಷ್ಟೂ ಅರ್ಥನಿರ್ದೇಶ ಪರ. **ಶೇಷೇ** ಎಂದು ಅನುವೃತ್ತವಾಗುತ್ತೆ. 'ಉಪಯುಕ್ತಾದನ್ಯಃ ಶೇಷಃ' ಈ ಸೂತ್ರಕ್ಕಿಂತ ಮೊದಲು ಉಪಯುಕ್ತವಾಗಿರುವ ಅರ್ಥಗಳಿಗಿಂತಲೂ ಬೇರೆಯಾದ ಅರ್ಥಗಳಿಗೆ ಶೇಷ ಎಂದು ಹೇಳುವರು. ಅಪತ್ಯಾದಿ ಚತುರ್ಥ್ಯಂತವಾದ ಅರ್ಥಗಳು ಹಿಂದೆ ಹೇಳಲ್ಪಟ್ಟವೆ. ಏವಂಚ ಕೃತಸಂಧಿಕಾರ್ಯಕವಾದ ಸಮರ್ಥ ಪ್ರಾತಿಪದಿಕದ ಮುಂದೆ ಶೇಷವಾದ ತಸ್ಯೇದಂ ಎಂಬ ಅರ್ಥದಲ್ಲಿ ಅಣಾದಿಪ್ರತ್ಯಯಗಳು ಬರುವುವು ಎಂದು ಸೂತ್ರಾರ್ಥ. ಲಕ್ಷಣಾವೃತ್ತಿಯು ಜಘನ್ಯ (ಕೀಳುದರ್ಜೆಯದು) ವಾದ್ದರಿಂದ ಪ್ರಾತಿಪದಿಕಪದಕ್ಕೆ ಪ್ರಾತಿಪದಿಕ ಪ್ರಕೃತಿಕ ಎಂದು ಅರ್ಥಹೇಳಕೂಡದು. **ಘಕಾಲತನೇಷು ಕಾಲನಾಮ್ನಃ** (ಪಾ. ಸೂ. ೬-೩-೧೭) ಎಂಬ ಸೂತ್ರದಲ್ಲಿ ತರಪ್ ತಮಪ್ ಎಂಬ ತದ್ಧಿತಗಳು ಪರದಲ್ಲಿರುವಾಗ ಸಪ್ತಮಿಗೆ ಅಲುಕ್ಕನ್ನು ಹೇಳಿರುವದರಿಂದ, ಸುಪ್‌ನಿಂದ ವ್ಯವಧಾನವಿದ್ದರೂ ತದ್ಧಿತಪ್ರತ್ಯಯ ಬರುತ್ತೆ. ಆಸುಪ್ ಉಪಸ್ಥಿತವಾದ್ದರಿಂದ ಷಷ್ಠ್ಯಂತವೆಂದೇ ಗ್ರಹಿಸಬೇಕು ಎಂದು ಶೇಖರಕಾರರ ಅಭಿಪ್ರಾಯ. ಪ್ರಕೃತ ಈ ಸೂತ್ರದಿಂದ ಅಣ್ ಬಂದರೆ ಗಾಯತ್ರೀ+ಅ. **ಯಸ್ಯೇತಿಚ** ಎಂದು ಈಕಾರಕ್ಕೆ ಲೋಪ. ಇದು ಒಂದು ವಿಧ. ಕೈಗೈ ಶಬ್ದೇ ಧಾತು. ಅದರ ಮುಂದೆ ಲಟ್, ಶತೃ. ಶಪ್ ಆಯಾದೇಶ ಪರರೂಪಗಳು, ಗಾಯತ್, ಗಾಯತಃ ತ್ರಾಯತೇ ಎಂದು ವಿಗ್ರಹ. ತ್ರೈಙ್ ಪಾಲನೇ ಧಾತು, **ಆದೇ ಚ ಉಪದೇಶೇಽಶಿತಿ** (ಪಾ. ಸೂ. ೬-೧-೪೫) ಎಂದು ಐಕಾರಕ್ಕೆ ಆಕಾರಾದೇಶ. **ಆತೋಽನುಪಸರ್ಗೇಕಃ** ಪಾ. ಸೂ. ೩-೨-೩) ಉಪಸರ್ಗವಲ್ಲದ ಸುಬಂತವು ಉಪಪದವಾಗಿರುವಾಗ ಆಕಾರಾಂತವಾದ ಧಾತುವಿನ ಮುಂದೆ ಕ ಪ್ರತ್ಯಯ ಬರುತ್ತೆ ಎಂದು ಕ ಪ್ರತ್ಯಯ. ತ್ರಾ+ಅ. **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಎಂದು ಆಕಾರಕ್ಕೆ ಲೋಪ. ಗಾಯತ್+ತ್ರ-ಗಾಯತ್ರ. ಒಂದು ತ್‌ಗೆ ಛಾಂದಸವಾಗಿ ಲೋಪ ದ್ವಿತೀಯಾಏಕವಚನ ಅಮ್. ಗಾಯತ್ರ+ಅಮ್. **ಅಮಿಪೂರ್ವಃ** (ಪಾ. ಸೂ. ೬-೧-೧೦೭) ಎಂದು ಪೂರ್ವರೂಪ ಗಾಯತ್ರಮ್ ಎಂದು ರೂಪವಾಗುತ್ತೆ. ||೧೪||

|| ಸಂಹಿತಾಪಾಠಃ ||

ವನ್ದಸ್ವ ಮಾರುತಂ ಗಣಂ ತ್ವೇಷಂ ಪನಸ್ಯುಮರ್ಕಿಣಂ |
ಅಸ್ಮೇ ವೃದ್ಧಾ ಅಸನ್ನಿಹ || ೧೫ ||

|| ಪದಪಾಠಃ ||

ವನ್ದಸ್ವ | ಮಾರುತಂ | ಗಣಂ | ತ್ವೇಷಂ | ಪನಸ್ಯುಂ | ಅರ್ಕಿಣಂ |
ಅಸ್ಮೇ ಇತಿ | ವೃದ್ಧಾಃ | ಅಸನ್ | ಇಹ || ೧೫ ||

|| ಸಂಹಿತಾಪಾಠಃ ||

**ಹೇ ಋತ್ವಿಕ್ಸಂಘ ಮಾರುತಂ ಮರುತ್ಸಂಬಂಧಿನಂ ಗಣಂ ಸಮೂಹಂ ವಂದಸ್ವ | ನಮುಸ್ಕುರು ಸ್ತುಹಿ ವಾ | ಕೀದೃಶಂ ಗಣಂ | ತ್ವೇಷಂ ದೀಪ್ತಂ, ಪನಸ್ಯುಂ ಸ್ತುತಿಯೋಗ್ಯಂ, ಅರ್ಕಿಣಮರ್ಚನೋ-ಪೇತಂ | ಅಸ್ಮೇ ಅಸ್ಮಾಕಮಿಹಾಸ್ಮಿನ್ಕರ್ಮಣಿ ವೃದ್ಧಾಃ ಅಸನ್ | ಮರುತಃ ಪ್ರವೃದ್ಧಾ ಭವಂತು || ವಂದಸ್ವ | ವದಿ ಅಭಿವಾದನಸ್ತುತ್ಯೋಃ | ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ | ಪನಸ್ಯುಂ | ಪನ ಚೇತಿ ಸ್ತುತ್ಯರ್ಥೋ ಧಾತುಃ | ಅಸುನ್ | ಪನಃ ಸ್ತೋತ್ರಮಾತ್ಮನ ಇಚ್ಛತೀತಿ ಪನಸ್ಯುಃ | ಸುಪ ಆತ್ಮನಃ ಕ್ಯಚ್ | ಕ್ಯಾಚ್ಛಂದಸೀತ್ಯುಪ್ರತ್ಯಯಃ | ಅರ್ಕಿಣಂ | ಋಚ ಸ್ತುತೌ ಪುಂಸಿ ಸಂಜ್ಞಾಯಾಮಿತಿ ಘಃ | ಅರ್ಕೋಽಸ್ಯಾಸ್ತೀತ್ಯರ್ಕೀ | ಅತ ಇನಿಠನೌ | ಅಸನ್ | ಬಹುಲಂ ಛಂದಸೀತಿ ಶಪೋ ಲುಗಭಾವಃ | ಇತಶ್ಚ ಲೋಪ ಇತೀಕಾರಲೋಪಃ | ತಿಙ್ಙತಿಙ ಇತಿ ನಿಘಾತಃ ||೧೭||**

ಪ್ರತಿಪದಾರ್ಥ

ಎಲೈ ಋತ್ವಿಕ್ಸಮೂಹವೇ | **ತ್ವೇಷಂ**—ತೇಜಸ್ಸಿನಿಂದ ಕೂಡಿದ್ದೂ | **ಪನಸ್ಯುಂ**—ಸ್ತುತಿಯೋಗ್ಯವಾಗಿರ ತಕ್ಕದ್ದೂ | **ಅರ್ಕಿಣಂ**—ಪೂಜಾರ್ಹವಾದುದೂ ಆದ | **ಮಾರುತಂ ಗಣಂ**-ಮರುತ್ತುಗಳ ಸಂಘವನ್ನು | **ವಂದಸ್ವ**-ನಮಸ್ಕರಿಸು ಅಥವಾ ಸ್ತುತಿಸು | **ಅಸ್ಮೇ**—ನಮ್ಮ | **ಇಹ**—ಈ ಯಜ್ಞಕರ್ಮದಲ್ಲಿ | **ವೃದ್ಧಾ ಅಸನ್**—ಆ ಮರುದ್ದೇವತೆಗಳು ವೃದ್ಧಿಯನ್ನು ಹೊಂದಲಿ (ಪ್ರಕಾಶಿಸಲಿ).

|| ಭಾವಾರ್ಥ ||

ಎಲೈ ಋತ್ವಿಕ್ಕುಗಳೇ, ತೇಜಸ್ಸಿನಿಂದ ಕೂಡಿದವರೂ, ಸ್ತುತಿಯೋಗ್ಯರೂ, ಪೂಜಾರ್ಹರೂ ಆದ ಮರುದ್ದೇವತೆಗಳನ್ನು ನಮಸ್ಕರಿಸಿ ಅಥವಾ ಸ್ತುತಿಸಿ. ಈ ನಮ್ಮ ಯಜ್ಞಕರ್ಮದಲ್ಲಿ ಮರುತ್ತುಗಳು ವೃದ್ಧಿಯನ್ನು ಹೊಂದಿ ನಮ್ಮ ಯಜ್ಞವು ಸಾಂಗವಾಗಿ ನೆರವೇರುವಂತೆ ಮಾಡಲಿ.

## English Translation

Glorify the host of Maruts, brilliant, deserving of praise and adoration; may they be pleased in this our worship.

### ವಿಶೇಷ ವಿಷಯಗಳು

**ಪನಸ್ಯುಂ—ಪನಃ ಸ್ತೋತ್ರಮಾತ್ಮನ ಇಚ್ಛತೀತಿ ಪನಸ್ಯುಃ ।** ಸ್ತೋತ್ರಾಭಿಲಾಷಿ, ಸ್ತೋತ್ರಾರ್ಹ, ಸ್ತುತಿಸಲ್ಪಡುವುದಕ್ಕೆ ಯೋಗ್ಯ

**ಅರ್ಕಿಣಂ—ಋಚ ಸ್ತುತೌ । ಅರ್ಕಃ ಮಂತ್ರಃ । ಅರ್ಕೋ ಮಂತ್ರೋ ಭವತೀತಿ ಯಾಸ್ಕಃ** (ನಿ. ೫-೪) ಅರ್ಕವೆಂದರೆ ಮಂತ್ರವು, ಸ್ತೋತ್ರವು. **ಅರ್ಕೋಽಸ್ಯಾಸ್ತೀತ್ಯರ್ಕೀ ತಂ**—ಸ್ತೋತ್ರವುಳ್ಳ ಎಂದರೆ ಸ್ತೋತ್ರದಿಂದ ಸ್ತುತಿಸಲ್ಪಡುವ, ಸ್ತುತಿಯೋಗ್ಯನಾದ ಎಂದರ್ಥವು.

**ಅಸ್ಮೇ—ಅಸ್ಮಾಕಂ ।** ನಮ್ಮ; ಋಗ್ವೇದದಲ್ಲಿ ಅನೇಕ ಕಡೆ ಅಸ್ಮಾಕಂ ಎಂಬ ಶಬ್ದಕ್ಕೆ ಬದಲಾಗಿ ಅಸ್ಮೇ ಎಂಬ ಶಬ್ದಪ್ರಯೋಗವಿರುವುದು.

**ವೃಧಾ ಅಸನ್— ಪ್ರವೃಧಾ ಭವತು ।** ಪ್ರವೃದ್ಧರಾಗಲಿ ಎಂದರೆ ಸ್ತುತಿಸಲ್ಪಡಲಿ. ಪ್ರಕಾಶಮಾನರಾಗಿ ಬೆಳಗಲಿ.

### ವ್ಯಾಕರಣಪ್ರಕ್ರಿಯಾ

**ವನ್ದಸ್ವ**—ವದಿ ಅಭಿವಾದನಸ್ತುತ್ಯೋಃ, ಇದಿತ್, **ಇದಿತೋನುಮ್ ಧಾತೋಃ** ಎಂದು ನುಮ್ ಆಗಮ, ಆತ್ಮನೇಪದಿ, ಲೋಟ್ ಮಧ್ಯಮಪುರುಷಏಕವಚನ ಥಾಸ್. **ಥಾಸಸ್ಸೇ** ಎಂದು ಸೇಆದೇಶ, **ಸವಾಭ್ಯಾಂ ವಾಮೌ** ಎಂದು ಏಕಾರಕ್ಕೆ ವಕಾರ, ಶಪ್, ಇದು ಪಿತ್ತಾದ್ದರಿಂದ ಅನುದಾತ್ತ. ಸ್ವ ಎಂಬುದು ಲಕಾರದ ಸ್ಥಾನದಲ್ಲಿ ಬಂದ ಸಾರ್ವಧಾತುಕ. ಅದುಪದೇಶವಾದ ಶಪ್‌ನ ಮುಂದೆ ಇದೆ. ಅದುಪದೇಶ ಎಂದರೆ ಉಪದೇಶಕಾಲದಲ್ಲಿ ಅಕಾರಾಂತವಾದುದು. ಶಪ್ ಉಪದೇಶದಲ್ಲಿ ಪಕಾರಾಂತ. ಇದು ಹೇಗೆ ಅದುಪದೇಶವಾಗುತ್ತೆ. **ಅನೇಕಾಂತಾ ಅನುಬಂಧಾಃ** (ಪರಿಭಾ ೪) ಇತ್ಸಂಜ್ಞಕವಾದ ವರ್ಣಗಳು ಅವಯವಗಳಾಗಲಾರವು ಎಂದು ಪ್ ಎಂಬುದು ಅವಯವವಾಗುವುದಿಲ್ಲ ಎಂದ ಮೇಲೆ ಅಕಾರಾಂತವಾದ ಉಪದೇಶವಾಗುತ್ತೆ. ಇದರ ಮುಂದೆ ಇರುವ ಸ್ವಗೆ **ತಾಸ್ಯನು-ದಾತ್ತೇತ್,** ಎಂದು ಅನುದಾತ್ತ ಬರುತ್ತೆ ಧಾತುಸ್ವರವೇ ನಿಲ್ಲುವುದು.

**ಪನಸ್ಯುಮ್**—ಪಣವ್ಯವಹಾರೇ ಸ್ತುತೌಚ ೧ನೇ ಗಣದಲ್ಲಿದೆ. ಪನ ಚ ಎಂದು ಪನಧಾತುವನ್ನು ಇಲ್ಲಿ ಪಠಿಸಿರುವುದು. ಇಲ್ಲಿ ಸ್ತುತಿ ಎಂಬ ಅರ್ಥವು ವಿವಕ್ಷಿತವು. **ಸರ್ವಧಾತುಭ್ಯೋಽಸುನ್** (ಉ. ಸೂ. ೪-೬೨೮) ಎಂದು ಅಸುನ್. ಪನಸ್ ಶಬ್ದ. ಪನಃ=ಸ್ತೋತ್ರವನ್ನು, ಆತ್ಮನ ಇಚ್ಛತಿ-ತನಗಾಗಿ ಅಪೇಕ್ಷಿಸುವನು ಎಂದು ವಿವಕ್ಷಿಸಿದಾಗ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ತನಗಾಗಿ ಯಾವುದನ್ನು ಅಪೇಕ್ಷಿಸುವನೋ ಅಂತಹ ಕರ್ಮವನ್ನು ಹೇಳುವ ಸುಬಂತದ ಮುಂದೆ ಇಚ್ಛತಿ ಎಂಬ ಅರ್ಥದಲ್ಲಿ ಕ್ಯಚ್ ವಿಕಲ್ಪನಾಗಿ ಬರುತ್ತೆ ಎಂದು ಕ್ಯಚ್

ಪ್ರತ್ಯಯ. ಪನಸ್ಯ ಎಂದಾಯಿತು. **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಕ್ಯ ಪದದಿಂದ ಕ್ಯಚ್-ಕ್ಯಷ್-ಕ್ಯಙ್ ಈ ಮೂರಕ್ಕೂ ಗ್ರಹಣ. ಛಂದಸ್ಸಿನಲ್ಲಿ ತಾಚ್ಛೀಲ್ಯಾದ್ಯರ್ಥಗಳು ತೋರುವಾಗ ಕ್ಯಪ್ರತ್ಯಯಾಂತದ ಮುಂದೆ ಉಪ್ರತ್ಯಯ ಬರುತ್ತೆ ಎಂದು ಉಪ್ರತ್ಯಯ. ಪನಸ್ಯು ಎಂಬುದಕ್ಕೆ ಸ್ತೋತ್ರವನ್ನು ತನಗಾಗಿ ಇಚ್ಛಿಸುವಿಕೆಯೇ ಸ್ವಭಾವವಾಗಿ ಉಳ್ಳ ಎಂದು ಅರ್ಥ.

**ಅರ್ಕಿಣಮ್**—ಋಚ ಸ್ತುತೌ ತುದಾದಿ. **ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ** ( ಪಾ. ಸೂ. ೪-೩-೧೧೮) ಎಂದು ಘ ಪ್ರತ್ಯಯ. ಈ ಪ್ರತ್ಯಯದ ಘ್‌ಗೆ ಇತ್ಸಂಜ್ಞೆ ಇದೆ. ಋಚ್+ಅ. **ಚಜೋಃ ಕು ಘಿಣ್ಯ-ತೋಃ** (ಪಾ. ಸೂ. ೭-೩-೫೨) ಘಿತ್ ವಾ ಣ್ಯತ್ ಇವು ಪರದಲ್ಲಿದ್ದರೆ ಚಕಾರ ಜಕಾರಗಳಿಗೆ ಕುತ್ವ ಬರುತ್ತೆ ಎಂದು ಚ್‌ಗೆ ಕ್ ಬರುತ್ತೆ. ಋಕ್+ಅ. ಲಘೂಪಧಗುಣದಿಂದ ಋಗೆ ಅರ್ ಬರುತ್ತೆ ಅರ್ಕಪದದಿಂದ ಸ್ತೋತ್ರದಿಂದ ಕೂಡಿರುವ ಪೂಜೆಯು ಇಲ್ಲಿ ಗ್ರಹಿಸಲ್ಪಡುತ್ತೆ. ಅರ್ಕಃ ಅಸ್ಯ ಅಸ್ತಿ ಎಂದರೆ ಪೂಜೆಯು ಇವನಿಗೆ ಇದೆ ಎಂಬ ಅರ್ಥವನ್ನು ವಿವಕ್ಷಿಸಿದರೆ **ಅತ ಇನಿಠನೌ** (ಪಾ. ಸೂ. ೫-೨ ೧೧೫) ಅದಂತವಾದ ಪ್ರಾತಿಪದಿಕದ ಮುಂದೆ ಮತುಪ್ ಪ್ರತ್ಯಯದ ಅರ್ಥದಲ್ಲಿ ಇನಿ-ಠನ್ ಪ್ರತ್ಯಯಗಳು ಬರುವವು ಎಂದು ಸೂತ್ರಾರ್ಥ. ಇದರಿಂದ ಇನಿಪ್ರತ್ಯಯ. ಯದ್ಯಪಿ **ಏಕಾಕ್ಷರಾತ್ಕೃತೋ ಜಾತೇಃ ಸಪ್ತಮ್ಯಾಂಚ ನತೌಸ್ಮೃತೌ**- (ಪಾ. ಸೂ. ೫-೨೧೧೫-೨) ಎಂದು ಮಹಾಭಾಷ್ಯದಲ್ಲಿದೆ. ಒಂದು ಅಕ್ಷರವುಳ್ಳ ಶಬ್ದ, ಕೃತ್‌ಪ್ರತ್ಯಯಾಂತ, ಜಾತಿವಾಚಕ, ಇವುಗಳ ಮುಂದೆಯೂ ಸಪ್ತಮ್ಯರ್ಥದಲ್ಲಿಯೂ ಇನಿ ಠನ್ ಪ್ರತ್ಯಯಗಳು ಬರುವುದಿಲ್ಲ, ಎಂದು ಅರ್ಥ. ಅರ್ಕ ಎಂಬುದು ಕೃತ್ಪ್ರತ್ಯಯಾಂತು ಇದರ ಮುಂದೆ ಹೇಗೆ ಇನಿ ಪ್ರತ್ಯಯ ಬರುವುದು, ಎಂದರೆ, ಕೃತೋಜಾತೇಃ ಎಂಬಲ್ಲಿ ಹಿಂದೆ ಹೇಳಿದಂತೆ ಅರ್ಥವನ್ನು ಹೇಳುವುದಿಲ್ಲ. ಕೃತಃ ಎಂಬುದು ಜಾತೇಃ ಎಂಬುದಕ್ಕೆ ವಿಶೇಷಣ ಏವಂಚ ಕೃದಂತವಾದ ಯಾವ ಜಾತಿವಾಚಕವಿದೆಯೋ ಅದರ ಮುಂದೆ ಇನಿಠನ್‌ಗಳು ಬರುವುದಿಲ್ಲ ಎಂದು ಹೇಳುವೆವು. ಇಲ್ಲಿ ಅರ್ಕ ಶಬ್ದವು ಕೃದಂತವಾದರೂ ಜಾತಿ ವಾಚಕವಲ್ಲ. ಆದ್ದರಿಂದ ಇನಿಠನ್‌ಗಳಿಗೆ ನಿಷೇಧ ಬರುವುದಿಲ್ಲ. ಎಂದು ಹೇಳಬಹುದು. ವಸ್ತುತಃ ಈ ವಚನವು ಪ್ರಾಯಿಕ. ಎಂದರೆ ಹೆಚ್ಚು ಸ್ಥಳಗಳಲ್ಲಿ ಬಂದರೂ ಕೆಲವು ಕಡೆಗಳಲ್ಲಿ ಬರುವುದಿಲ್ಲ. ಆದ್ದರಿಂದ ಇಲ್ಲಿ ಈ ನಿಷೇಧ ಬರುವುದಿಲ್ಲ. ಏವಂಚ ಮೊದಲು ಹೇಳಿದಂತೆಯೇ ಅರ್ಥವನ್ನು ಹೇಳಬಹುದು. ಸ್ವವಾನ್, ಎಂದು ಏಕಾಕ್ಷರಾತ್ ಎಂಬುದಕ್ಕೂ, ಕಾರಕವಾನ್ ಎಂದು ಕೃತಃ ಎಂಬುದಕ್ಕೂ, ವೃಕ್ಷವಾನ್ ಎಂದು ಜಾತೇಃ ಎಂಬುದಕ್ಕೂ, ದಂಡಾಃ ಅಸ್ಯಾಂ ಶಾಲಾಯಾಂ ಸನ್ತಿ ದಂಡವಾನ್ ಎಂದು ಸಪ್ತಮ್ಯಾಂ ಎಂಬುದಕ್ಕೂ ಉದಾಹರಣೆಗಳನ್ನು ಭಾಷ್ಯದಲ್ಲಿತ್ತಿರುವರು.

**ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್** ಎಂಬ ಸೂತ್ರದಲ್ಲಿರುವ ಇತಿ ಶಬ್ದವನ್ನು ಇಲ್ಲಿ ಪ್ರತಿಯೊಂದಕ್ಕೂ ಸಂಬಂಧಿಸುವುದು. ಇತಿ ಶಬ್ದದಿಂದ ವಿಷಯ ವಿಶೇಷ ನಿಯಮವು ಏರ್ಪಡುತ್ತೆ. ಇತಿ ಶಬ್ದೋ ಲೌಕಿಕೀಂ ವಿವಕ್ಷಾ ಮನುಸಾರಯತಿ, ಲೋಕದ ಪ್ರಸಿದ್ಧಿಯನ್ನು ಇತಿ ಶಬ್ದವು ಬೋಧಿಸುತ್ತೆ. ಏವಂಚ ಕೃದಂತದ ಮುಂದೆಯೂ ಕ್ವಚಿತ್ ಇನಿಠನ್‌ಗಳು ಬರುವುವು. ಉದಾಹರಣೆ ಕಾರ್ಯಿ ಎಂದು, ವೃತ್ತಿಕಾರಾದಿಗಳು ಅಭಿಪ್ರಾಯ ಪಡುವರು.

**ಅಸನ್**—ಅಸ ಭುವಿ ಅದಾದಿಧಾತು. **ಬಹುಲಂ ಛಂದಸಿ** ಎಂದು ಶಪ್‌ಗೆ ಲುಕ್ ಬರುವುದಿಲ್ಲ. ಲೇಟ್ ಝಿ. ಅನ್ತ್ ಆದೇಶ. **ಇತಶ್ಚ ಲೋಪಃ ಪರಸ್ಮೈಪದೇಷು**—ಎಂದು ಇಕಾರಕ್ಕೆ ಲೋಪ । **ಸಂಯೋಗಾಂತಸ್ಯ ಲೋಪಃ**—ಎಂದು ಶ್‌ಗೆ ಲೋಪ । **ತಿಙ್ಙತಿಙಃ**—ಎಂದು ಸರ್ವಾನುದಾತ್ತ ॥ ೧೫ ॥



# ಮೂವತ್ತೊಂಭತ್ತನೆಯ ಸೂಕ್ತವು

---

**ಪ್ರಯದಿತ್ಥೇತಿ ದಶರ್ಚಂ ಚತುರ್ಥಂ ಸೂಕ್ತಂ। ಘೋರಪುತ್ರಸ್ಯ ಕಣ್ವಸ್ಯಾರ್ಷಂ। ಮರುದ್ದೇವತಾಕಂ। ಯುಜಃ ಸತೋಬೃಹತ್ಯಃ। ಅಯುಜೋ ಬೃಹತ್ಯಃ। ಪ್ರ ಯದ್ದಶ ಪ್ರಾಗಾಥಂ ತ್ವಿತ್ಯನುಕ್ರಮಣಿಕಾ। ಗತೋ ವಿನಿಯೋಗಃ।**

ಅನುವಾದವು— **ಪ್ರ ಯದಿತ್ಥಾ** ಎಂಬುದು ಎಂಟನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಘೋರಪುತ್ರನಾದ ಕಣ್ವನು ಋಷಿಯು, ಮರುತ್ತುಗಳೇ ದೇವತೆಗಳು. ಪ್ರಾಗಾಥಂ ಎಂಬುದು ಛಂದಸ್ಸು ಎಂದರೆ ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀ ಛಂದಸ್ಸಿನವು, ಅಸಮಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಸಿನವು. **ಪ್ರ ಯದ್ದಶ ಪ್ರಾಗಾಥಂ**— ಎಂದು ಅನುಕ್ರಮಣಿಕೆಯಲ್ಲಿ ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿರುವುದು.



॥ ಓಂ ॥

## ಸೂಕ್ತ—೩೯

॥ ಮಂಡಲ—೧ ॥ ಅನುವಾಕ—೮ ॥ ಸೂಕ್ತ—೩೯ ॥

॥ ಅಷ್ಟಕ—೧ ॥ ಅಧ್ಯಾಯ—೩ ॥ ವರ್ಗ—೧೮, ೧೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೧೦ ॥

॥ ಋಷಿಃ— ಕಣ್ವೋ ಘೌರಃ ॥

॥ ದೇವತಾ— ಮರುತಃ ॥

॥ ಛಂದಃ—ಪ್ರಾಗಾಥಂ ಬಾರ್ಹತಂ ॥ ೧, ೩, ೫, ೭, ೯, ಬೃಹತೀ । ೨, ೪, ೬, ೮, ೧೦ ಸತೋಬೃಹತೀ ॥

॥ ಸಂಹಿತಾಪಾಠಃ ॥

ಪ್ರ ಯದಿತ್ಥಾ ಪರಾವತಃ ಶೋಚಿರ್ನ ಮಾನಮಸ್ಯಥ ।
ಕಸ್ಯ ಕ್ರತ್ವಾ ಮರುತಃ ಕಸ್ಯ ವರ್ಪಸಾ ಕಂ ಯಾಥ ಕಂ ಹ
ಧೂತಯಃ ॥ ೧ ॥

ಪದಪಾಠಃ

ಪ್ರ । ಯತ್ । ಇತ್ಥಾ । ಪರಾಽವತಃ । ಶೋಚಿಃ । ನ । ಮಾನಂ । ಅಸ್ಯಥ ।
ಕಸ್ಯ । ಕ್ರತ್ವಾ । ಮರುತಃ । ಕಸ್ಯ । ವರ್ಪಸಾ । ಕಂ । ಯಾಥ । ಕಂ । ಹ ।
ಧೂತಯಃ ॥ ೧ ॥

ಸಾಯಣಭಾಷ್ಯಂ

ಹೇ ಧೂತಯಃ ಸ್ಥಾವರಾದೀನಾಂ ಕಂಪನಕಾರಿಣೋ ಮರುತೋ ಯದ್ಯದಾ ಮಾನಂ ಮನನೀಯಂ ಯುಷ್ಮದ್ಬಲಂ ಪರಾವತೋ ದೂರಾತ್ । ಆರೇ ಪರಾವತ ಇತಿ ದೂರನಾಮಸು ಪಾಠಾತ್ ।

ಇತ್ಥಾ ಸ್ಮಾದಂತರಿಕ್ಷಾತ್ಪಾಸ್ಯಥ ಭೂಮೌ ಪ್ರಕ್ಷಿಪಥ । ತತ್ರ ದೃಷ್ಟಾಂತಃ । ಶೋಚಿರ್ನ ತೇಜ ಇವ । ಯಥಾ ಸೂರ್ಯಸ್ಯ ತೇಜೋಽಂತರಿಕ್ಷಾದ್ಭೂಮೌ ಪ್ರಕ್ಷಿಪ್ಯತೇ ತದ್ವತ್ । ತದಾನೀಂ ಯೂಯಂ ಕಸ್ಯ ಯಜಮಾನಸ್ಯ ಕ್ರತ್ವಾ ಕ್ರತುನಾ ಸಂಗಚ್ಛಧ್ವ ಇತಿ ಶೇಷಃ । ತಥಾ ಕಸ್ಯ ಯಜಮಾನಸ್ಯ ವರ್ಪಸಾ ಸ್ತೋತ್ರೇಣ ಸಂಗಚ್ಛಧ್ವೇ । ಕಂ ಯಜಮಾನಮುದ್ದಿಶ್ಯ ಯಾಥ । ದೇವಯಜನದೇಶೇ ಗಚ್ಛಥ । ಕಂ ಹ ಕಂ ಖಲು ಯಜಮಾನಮನುಗೃಹ್ಣೀಥೇತಿ ಶೇಷಃ ॥ ಇತ್ಥಾ । ಥಾ ಹೇತೌ ಚ ಚ್ಛಂದಸಿ । ಪಾ. ಸೂ. ೫-೩-೨೬ । ಇತೀದಂಶಬ್ದಾತ್ಪ್ರಕಾರವಚನೇ ಥಾಪ್ರತ್ಯಯಃ । ಯದಿ ತತ್ರೇದಂಶಬ್ದಸ್ಯ ನಾನುವೃತ್ತಿಸ್ತರ್ಹಿ ಥಮುಪ್ರತ್ಯಯಾಂತಾದಿದಂಶಬ್ದಾದುತ್ತರಸ್ಯಾ ವಿಭಕ್ತೇರ್ವ್ಯತ್ಯಯೇನ ಸುಪಾಂ ಸುಲುಗಿತಿ ಡಾದೇಶಃ । ಪ್ರಥಮಪಕ್ಷೇ ಪ್ರತ್ಯಯಸ್ವರಃ । ದ್ವಿತೀಯಪಕ್ಷೇ ಉದಾತ್ತನಿವೃತ್ತಿಸ್ವರಃ । ಅಸ್ಯಥ । ಅಸುಕ್ಷೇಪಣೇ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಶ್ಯನೋ ನಿತ್ತ್ವಾದಾದ್ಯುದಾತ್ತತ್ವಂ । ಯದ್ವೃತ್ತಯೋ- ಗಾದನಿಘಾತಃ । ಕ್ರತ್ವಾ । ಜಸಾದಿಷು ಚ್ಛಂದಸಿ ವಾ ವಚನಂ । ಪಾ. ಸೂ. ೭-೩-೧೦೯-೧ । ಇತಿ ನಾಭಾವಸ್ಯ ವಿಕಲ್ಪಿತತ್ವಾದಭಾವಃ । ವರ್ಪಸಾ । ವೃಜ್ ಸಂಭಕ್ತೌ । ವೃಙ್ಶೀಙ್ಭ್ಯಾಂ ರೂಪಸ್ವಾಂಗಯೋಃ ಪುಕ್ಚ । ಉ. ೪-೨೦೦ । ಇತ್ಯಸುನ್ । ತತ್ಸನ್ನಿಯೋಗೇನ ಪುಗಾಗಮಶ್ಚ । ನಿತ್ತ್ವಾದಾದ್ಯುದಾತ್ತತ್ವಂ । ಅತ್ರ ರೂಪಾಭಿಧಾಯಿನಾ ವರ್ಪಸ್‌ಶಬ್ದೇನ ದೇವತಾಸ್ವರೂಪಪ್ರಕಾಶಕಂ ಸ್ತೋತ್ರಂ ಲಕ್ಷ್ಯತೇ, ಕ್ರತುನಾ ಸಾಹಚರ್ಯಾತ್ ॥

॥ ಪ್ರತಿಪದಾರ್ಥ ॥

**ಧೂತಯಃ**— (ನಿಶ್ಚಲವಾದ ವಸ್ತುಗಳನ್ನೂ) ಕಂಪಿಸುವಂತೆ ಮಾಡತಕ್ಕವರಾದ । **ಮರುತಃ**— ಎಲೈ ಮರುತ್ತುಗಳೇ । **ಯತ್**—ಯಾವಾಗ । **ಮಾನಂ**— ಪೂಜ್ಯವಾದ ನಿಮ್ಮ ಬಲವನ್ನು । **ಪರಾವತಃ**— ಬಹಳ ದೂರದೇಶವಾದ । **ಇತ್ಥಾಂ**— ಈ ಅಂತರಿಕ್ಷದಿಂದ । **ಶೋಚಿರ್ನ**— ಸೂರ್ಯನು ಕಿರಣವನ್ನು ಹರಡುವಂತೆ । **ಅಸ್ಯಥ**— ಭೂಮಿಯಲ್ಲಿ ಹರಡಿಸುತ್ತೀರಿ ? । **ಕಸ್ಯ**—ಯಾವ ಯಜಮಾನನ । **ಕ್ರತ್ವಾ**— ಯಜ್ಞಕ್ಕೆ ಹೋಗುವಿರಿ ?) । **ಕಸ್ಯ**— ಯಾವ ಯಜ್ಞಕರ್ತನ । **ವರ್ಪಸಾ**— ಸ್ತೋತ್ರದಿಂದ (ತೃಪ್ತರಾಗುವಿರಿ) **ಕಂ**— ಯಾವ ಯಜಮಾನನನ್ನುದ್ದೇಶಿಸಿ । **ಯಾಥ**—(ಯಜ್ಞಭೂಮಿಗೆ) ಹೋಗುತ್ತೀರಿ ? । **ಕಂ ಹ**—ಯಾವ ನನ್ನು (ಅನುಗ್ರಹಿಸುತ್ತೀರಿ ?)

ಭಾವಾರ್ಥ

ಅಚಲವಾದ ವಸ್ತುಗಳನ್ನು ಕಂಪಿಸುವಂತೆ ಮಾಡುವ ಬಲವಿರುವ ಎಲೈ ಮರುದ್ದೇವತೆಗಳೇ, ಸೂರ್ಯನ ಕಿರಣವು ಅಂತರಿಕ್ಷದಿಂದ ಬಿದ್ದು ಲೋಕಕ್ಕೆಲ್ಲಾ ಹರಡುವಂತೆ ನಿಮ್ಮ ಪೂಜ್ಯವಾದ ಶಕ್ತಿಯು ಅಂತರಿಕ್ಷದಿಂದ ಸಕಲ ಲೋಕಕ್ಕೂ ಹರಡುವುದು. ಈಗ ನೀವು ಯಾವ ಯಜಮಾನನ ಯಜ್ಞಕ್ಕೆ ಹೋಗುವಿರಿ ? ಯಾವ ಯಜ್ಞಕರ್ತನ ಸ್ತೋತ್ರದಿಂದ ತೃಪ್ತರಾಗುವಿರಿ ? ಯಾವ ಯಜಮಾನನನ್ನುದ್ದೇಶಿಸಿ ಯಜ್ಞಭೂಮಿಗೆ ಹೋಗುತ್ತೀರಿ ? ಯಾವ ನನ್ನು ಅನುಗ್ರಹಿಸುತ್ತೀರಿ ?

## English Translation

O Maruts, you make all things tremble; you direct your awful power downwards from afar, as light descends from the heaven; by whose worship, by whose praise are you attracted? To what place of sacrifice or to whom indeed do you repair?

॥ ವಿಶೇಷ ವಿಷಯಗಳು ॥

ಈ ಋಕ್ಕಿನ ಅರ್ಥವು ತೊಡಕಾಗಿರುವುದು. ಮರುದ್ದೇವತೆಗಳ ಶಕ್ತಿಯು ಅಪಾರವಾದದ್ದು. ಅದು ಬಹು ದೂರದಲ್ಲಿರುವ ಅಂತರಿಕ್ಷದಿಂದ ಕೆಳಮುಖವಾಗಿ ಹೊರಹೊರಟು ಸೂರ್ಯನ ಕಿರಣಗಳಂತೆ ಭೂಮಿಯನ್ನು ವ್ಯಾಪಿಸು ವುದು. ಇಂತಹ ಶಕ್ತಿಯುಳ್ಳ ಮರುದ್ದೇವತೆಗಳೇ. ಈಗ ನೀವು ಯಾವ ಯಜಮಾನನ ಯಜ್ಞಭೂಮಿಗೆ ಹೋಗುವಿರಿ? ಯಾರನ್ನು ಅನುಗ್ರಹಿಸಲು ಎಲ್ಲಿಗೆ ಹೋಗುವಿರಿ? ಎಂದು ಮುಖ್ಯಾಭಿಪ್ರಾಯವು. ಮೇಲಿನ ಅಭಿಪ್ರಾಯದಲ್ಲಿ ಎಲ್ಲಿಗೆ ಹೋಗಿರುವಿರಿ ಎಂದು ಋಷಿಯು ಪ್ರಶ್ನೆ ಮಾಡುವಾಗ ಮರುತ್ತುಗಳ ಆರ್ಭಟವಿಲ್ಲದೆ ಮಳೆಯೂ ಇಲ್ಲದೆ ಶಾಂತ ಪರಿಸ್ಥಿತಿಯು ಇದ್ದಿರಬೇಕು. ಆದುದರಿಂದ ಮರುದ್ದೇವತೆಗಳು ಎಲ್ಲಿಗೆ ಹೋಗಿರುವರೆಂದು ಪ್ರಶ್ನೆ ಮಾಡುವನು. ಹಿಂದೆ ಎಂದರೆ ೩೫ನೇ ಸೂಕ್ತದ—೭ನೇ ಋಕ್ಕಿನಲ್ಲಿ ಹಿರಣ್ಯಸ್ತೂಪಋಷಿಯು ರಾತ್ರಿಕಾಲದಲ್ಲಿ ಸವಿತೃ (ಸೂರ್ಯ) ನನ್ನುದ್ದೇಶಿಸಿ ಈಗ ಸೂರ್ಯನು ಎಲ್ಲಿರುವನು? ಯಾವ ಲೋಕವನ್ನು ಬೆಳಗುತ್ತಿರುವನು? ಎಂಬ ಇದೇ ವಿಧವಾದ ಪ್ರಶ್ನೆಯನ್ನು ಮಾಡಿರುವನು. ಪ್ರತ್ಯಕ್ಷವಾಗಿ ಕಾಣಿಸುವ ಸೂರ್ಯ, ಮರುತ್ತುಗಳು ಮೊದಲಾದ ದೇವತೆಗಳು ಅಕಾಲ ದಲ್ಲಿ ತಮಗೆ ಕಾಣಿಸದಿರುವಾಗ ಅವರು ಎಲ್ಲಿಗೆ ಹೋದರು? ಈಗ ಅವರು ಎಲ್ಲಿರುವರು? ಎಂದು ಮುಂತಾದ ಪ್ರಶ್ನೆಗಳನ್ನು ಆಶ್ಚರ್ಯಚಕಿತರಾಗಿ ಮಾಡುವುದು ಸಹಜವೇ ಆಗಿರುವುದು.

**ಪರಾವತಃ**—ಆಕೆ, ಪರಾಕೇ ಮೊದಲಾದ ಐದು ದೂರನಾಮಗಳಲ್ಲಿ ಪರಾವತಃ ಎಂಬ ಶಬ್ದವು ಪಠಿತವಾಗಿ ರುವುದರಿಂದ (ನಿ.೩-೨೦) ಪರಾವತಃ ಎಂದರೆ ದೂರದಿಂದ ಎಂದರ್ಥವು. ಗಾಳಿಯು ಅಂತರಿಕ್ಷದಲ್ಲಿ ಬಹುದೂರದಿಂದ ಬೀಸುತ್ತಾ ಬರುವುದೆಂದಭಿಪ್ರಾಯವು.

**ಶೋಚಿರ್ನ**— ತೇಜಸ್ಸಿನಂತೆ ಎಂದರೆ ಸೂರ್ಯನ ಬೆಳಕು ಬಹುದೂರದಿಂದ ಭೂಮಿಗೆ ಬರುವಂತೆ ಎಂದು ದೃಷ್ಟಾಂತಾಭಿಪ್ರಾಯವು.

**ವರ್ಪಸಾ— ಸ್ತೋತ್ರೇಣ । ವೃಜ್ ಸಂಭಕ್ತೌ ।** ಸ್ತೋತ್ರದಿಂದ

**ಧೂತಯಃ—ಸ್ಥಾಮಾದೀನಾಂ ಕಂಪನಕಾರಿಣಃ ।** ಸ್ಥಿರವಾದ ಗೃಹಾದಿಗಳನ್ನೂ ವೃಕ್ಷಾದಿಗಳನ್ನೂ ತಮ್ಮ ಶಕ್ತಿಸಾಮರ್ಥ್ಯಗಳಿಂದ ಕಂಪಿಸುವಂತೆ (ಅಲ್ಲಾಡುವಂತೆ) ಮಾಡುವವರು.

॥ ವ್ಯಾಕರಣಪ್ರಕ್ರಿಯಾ ॥

**ಪ್ರ—ಉಪಸರ್ಗಾಶ್ಚಾಭಿವರ್ಜಂ**— ( ಫಿ. ಸೂ. ೮೨ ) ಅಭಿ ಎಂಬುದನ್ನು ಬಿಟ್ಟು ಉಪಸರ್ಗಗಳು ಆದ್ಯುದಾತ್ತಗಳಾಗುವುವು ಎಂದು ಆದ್ಯುದಾತ್ತ.

**ಇತ್ಥಾ**—**ಥಾ ಹೇತೌ ಚ ಛಂದಸಿ** (ಪಾ. ಸೂ. ೫-೩-೨೬) ಇದಮಸ್ಥಮುಃ ಎಂಬ ಸೂತ್ರದಿಂದ ಇದಮಃ ಎಂದೂ ಕಿಮಶ್ಚ ಎಂಬ ಸೂತ್ರದಿಂದ ಕಿಮಃ ಎಂದೂ ಅನುವೃತ್ತಿಯಿಂದ ಬರುವುದು. ಏವಂಚ ಛಂದಸ್ಸಿನಲ್ಲಿ ಕಿಮ್. ಇದಮ್ ಶಬ್ದಗಳ ಮುಂದೆ ಹೇತ್ವರ್ಥದಲ್ಲಿಯೂ ಪ್ರಕಾರಾರ್ಥದಲ್ಲಿಯೂ ಥಾ ಪ್ರತ್ಯಯ ಬರುತ್ತೆ ಎಂದು ಥಾ ಪ್ರತ್ಯಯ. ಇದಮ್+ಥಾ. **ಇದಮ ಇಶ್** ಎಂದು ಇಶ್ ಆದೇಶ ಪ್ರಾಪ್ತವಾದರೆ ಅದನ್ನು ಬಾಧಿಸಿ **ಏತೇತೌ ರಥೋಃ** (ಪಾ. ಸೂ. ೫-೩-೪)ರೇಫಾದಿ ಅಥವಾ ಥಕಾರಾದಿಯಾದ ಪ್ರಾಗ್ದಿಶೀಯ ಪ್ರತ್ಯಯವು ಪರದಲ್ಲಿದ್ದರೆ ಇದಮ್ ಶಬ್ದಕ್ಕೆ ಏತ ಇತ್ ಎಂಬ ಆದೇಶಗಳು ಬರುವುವು ಎಂದು **ಇತ್** ಆದೇಶ. ಇತ್+ಥಾ ಇತ್ಥಾ ಎಂದು ರೂಪವಾಗುತ್ತೆ. ಇಲ್ಲಿ **ಕಿಮಶ್ಚ** ಎಂಬ ಹಿಂದಿನ ಸೂತ್ರಕ್ಕೆ ಮಾತ್ರವೇ ಅನುವೃತ್ತಿ, ಅದರ ಹಿಂದಿನ ಸೂತ್ರದಲ್ಲಿರುವ ಇದಮ್‌ಗೆ ಅನುವೃತ್ತಿ ಇಲ್ಲ ಏಕೆಂದರೆ ಅದಕ್ಕೆ **ಕಿಮಶ್ಚ** ಎಂಬಲ್ಲಿ ಅನುವೃತ್ತಿ ಇಲ್ಲದೇ ಇರುವುದರಿಂದ ಇಲ್ಲಿಗೆ ಅನುವೃತ್ತಿ ಮಾಡಲು. ಸಾಧ್ಯವಿಲ್ಲ ಎನ್ನುವ ಪಕ್ಷದಲ್ಲಿ ಮೇಲೆ ಹೇಳಿದ ರೀತಿಯು ಸರಿಹೋಗುವುದಿಲ್ಲ ಆಗ **ಇದಮಸ್ಥಮುಃ**— (ಪಾ ಸೂ. ೫-೩-೨೪) ಎಂದು ಥಮು ಪ್ರತ್ಯಯಾಂತವಾದ ಇತ್ಥಮ್ ಶಬ್ದದಮುಂದೆ ಬರುವ ವಿಭಕ್ತಿಗೆ **ಸುಪಾಂಸುಲುಕ್** ಎಂದು ಡಾ ಆದೇಶ. ಟಿ ಲೋಪ ಎಂದು ಇತ್ಥಾ ಎಂದು ಆಗುತ್ತದೆ.ಮೊದಲನೆಯ ಪಕ್ಷದಲ್ಲಿ ಪ್ರತ್ಯಯಸ್ವರದಿಂದ ಅಂತೋದಾತ್ತ. ಎರಡನೆಯ ಪಕ್ಷದಲ್ಲಿ **ಅನುದಾತ್ತಸ್ಯಚ ಯತ್ರೋದಾತ್ತಲೋಪಃ** ಎಂಬ ಉದಾತ್ತ ನಿವೃತ್ತಿಸ್ವರದಿಂದ ವಿಭಕ್ತಿಯು ಉದಾತ್ತವಾಗುತ್ತೆ. ಆದ್ದರಿಂದ ಅಂತೋದಾತ್ತ.

**ಅಸ್ಯಥ**—ಅಸುಕ್ಷೇಪಣೇ ದಿವಾದಿ, ಲೋಟ್, ಮಧ್ಯಮ ಪುರುಷ ಥ ಪ್ರತ್ಯಯ, **ದಿವಾದಿಭ್ಯಃಶ್ಯನ್** ಎಂದು ಶ್ಯನ್, **ಅನೇಕಾಂತಾ ಅನುಬಂಧಾಃ** ಎಂಬ ಪರಿಭಾಷೆಯನ್ನನುಸರಿಸಿ ಇದು ಅದುಪದೇಶ. ಏಕಾಂತ ಪಕ್ಷದಲ್ಲಿ ಅನುಬಂಧ ವಿನಿರ್ಮುಕ್ತಪದಾರ್ಥಕ್ಕೇ ಉಪಸ್ಥಿತಿಯಾದ್ದರಿಂದ ಅದುಪದೇಶವಾಗುತ್ತೆ. ಇದರ ಮುಂದೆ ಇರುವ ಲ ಸ್ಥಾನಿಕ ಸಾರ್ವಧಾತುಕವು **ತಾಸ್ಯನುದಾತ್ತೇತ್,** ಎಂದು ಅನುದಾತ್ತ, ಶ್ಯನ್ ನಿತ್ತಾಗದ್ದರಿಂದ ಶ್ಯನ್ ಪ್ರತ್ಯಯಾಂತವು ಆದ್ಯುದಾತ್ತ, ಯದ್ವೃತ್ತಯೋಗ ಇರುವುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಕ್ರತ್ವಾ**—**ಜಸಾದಿಷು ಛಂದಸಿ ವಾ ವಚನಂ ಪ್ರಾಙ್ಣೌ ಚಙ್ಯುಪಧಾಯಾಃ** (ಪಾ. ಸೂ. ೭-೩-೧೦೯-೧) ಈ ಪ್ರಕರಣದಲ್ಲಿ **ಣೌ ಚಙ್ಯು ಪಧಾಯಾಃ** ಎಂಬ ಸೂತ್ರದವರೆಗೆ ವಿಧಿಸಿರುವ ಕಾರ್ಯಗಳು ಛಂದಸ್ಸಿನಲ್ಲಿ ವಿಕಲ್ಪವಾಗಿ ಬರುವುವು ಎಂದು ಹೇಳಿರುವುದರಿಂದ **ಆಙೋನಾಸ್ತ್ರಿಯಾಂ** ಎಂಬುದರಿಂದ ಟಾ ವಿಭಕ್ತಿಗೆ ನಾ ಆದೇಶ ಬರುವುದಿಲ್ಲ. ಯಣಾದೇಶ.

**ವರ್ಪಸಾ**—**ವೃಙ್ ಶೀಙ್‌ಭ್ಯಾಂ ರೂಪಸ್ವಾಂಗಯೋಃ ಪುಕ್ಚ** (ಉ. ಸೂ ) ವೃಙ್, ಶೀಙ್ ಧಾತುಗಳ ಮುಂದೆ ರೂಪ-ಸ್ವಾಂಗ ಎಂಬ ಅರ್ಥಗಳಲ್ಲಿ ಅಸುನ್ ಬರುತ್ತೆ, ಪ್ರಕೃತಿಗೆ **ಪುಕ್** ಆಗಮವೂ ಬರುತ್ತೆ ಎಂದು ಅವು ಬಂದರೆ ವೃಪ್+ಅಸ್, ಲಘೂಪಧಗುಣ-ವರ್ಪಸ್ ಎಂದಾಯಿತು. ತೃತೀಯಾ ಏಕವಚನಾಂತ. ಇಲ್ಲಿ ರೂಪ ಶಬ್ದಕ್ಕೆ ಲಕ್ಷಣೆಯಿಂದ ರೂಪಪ್ರಕಾಶಕವಾದ ಸ್ತೋತ್ರ ಎಂಬ ಅರ್ಥವನ್ನು ಕ್ರತು ಶಬ್ದಸಾಹಚರ್ಯ ಇರುವುದರಿಂದ ಹೇಳಬೇಕು ॥ ೧ ॥



ಸಂಹಿತಾಪಾಠಃ

ಸ್ಥಿರಾ ವಃ ಸನ್ತ್ವಾಯುಧಾ ಪರಾಣುದೇ ವೀಳೂ ಉತ ಪ್ರತಿಷ್ಕಭೇ ।
ಯುಷ್ಮಾಕಮಸ್ತು ತವಿಷೀ ಪನೀಯಸೀ ಮಾ ಮರ್ತ್ಯಸ್ಯ
ಮಾಯಿನಃ ॥ ೨ ॥

॥ ಪದಪಾಠಃ ॥

ಸ್ಥಿರಾ । ವಃ । ಸನ್ತು । ಆಯುಧಾ । ಪರಾಽನುದೇ । ವೀಳು । ಉತ ।
ಪ್ರತಿಸ್ಕಭೇ ।
ಯುಷ್ಮಾಕಂ । ಅಸ್ತು । ತವಿಷೀ । ಪನೀಯಸೀ । ಮಾ । ಮರ್ತ್ಯಸ್ಯ ।
ಮಾಯಿನಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಮರುತೋ ವ ಆಯುಧಾ ಯುಷ್ಮಾಕಮಾಯುಧಾನಿ ಪರಾಣುದೇ ಶತ್ರೂಣಾಮಪನೋದನಾಯ ಸ್ಥಿರಾ ಸಂತು ಸ್ಥಿರಾಣಿ ಭವಂತು । ಉತಾಪಿ ಚ ಪ್ರತಿಷ್ಕಭೇ ಶತ್ರೂಣಾಂ ಪ್ರತಿಬಂಧಾಯ ವೀಳು ಸಂತು । ದೃಢಾನಿ ಸಂತು । ಯುಷ್ಮಾಕಂ ತವಿಷೀ ಬಲಂ ಪನೀಯಸೀ ಅತಿಶಯೇನ ಸ್ತೋತವ್ಯಂ ಭವತು । ಮಾಯಿನೋಽಸ್ಮಾಸು ಚ್ಛದ್ಮಚಾರಿಣೋ ಮರ್ತ್ಯಸ್ಯ ಮನುಷ್ಯಸ್ಯ ಶತ್ರೋರ್ಮಾ । ಬಲಂ ಮಾ ಭವತು ॥ ಸ್ಥಿರಾ । ಆಯುಧಾ । ಉಭಯತ್ರ ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಪರಾಣುದೇ । ಣುದ ಪ್ರೇರಣೇ । ಸಂಪದಾದಿಲಕ್ಷಣಃ ಕ್ವಿಪ್ । ಉಪಸರ್ಗಾದಸಮಾಸೇಽಪಿ । ಪಾ. ೮-೪-೧೪ । ಇತಿ ಣತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ವೀಳು । ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ । ಈದೂದೇತ್ವಾದಿತ್ವಾತ್ಪ್ರಕೃತಿಭಾವಃ । ಪಾ. ೬-೧-೧೨೭ । ಪ್ರತಿಷ್ಕಭೇ । ಸ್ಕಂಭುಃ ಸೌತ್ರೋ ಧಾತುಃ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಅನಿದಿತಾಮಿತಿ ನಲೋಪಃ । ಪನೀಯಸೀ । ಪನತಿಃ ಸ್ತುತ್ಯರ್ಥಃ । ಅಸ್ಮಾದೌಣಾದಿಕಃ ಕರ್ಮಣ್ಯಸುನ್ । ತತ ಈಯಸುನಿ ಟೇರಿತಿ ಟಿಲೋಪಃ । ಉಗಿತ-

**ಶ್ಚೇತಿ ಙೀಪ್ | ಈಯಸುನೋ ನಿತ್ತ್ವಾದಾದ್ಯುದಾತ್ತತ್ವಂ | ಮಾಯಿನಃ | ಮಾಯಾಶಬ್ದಸ್ಯ ವ್ರೀಹ್ಯಾದಿಷು ಪಾಠಾತ್ ವ್ರೀಹ್ಯಾದಿಭ್ಯಶ್ಚೇತಿ ಮತ್ವರ್ಥೀಯ ಇನಿಃ ||**

|| ಪ್ರತಿಪದಾರ್ಥ ||

**ಮರುತಃ**—ಎಲೈ ಮರುತ್ತುಗಳೇ | **ವಃ**—ನಿಮ್ಮ | **ಆಯುಧಾ**—ಆಯುಧಗಳು | **ಪರಾಣುದೇ**—ಶತ್ರುಗಳನ್ನು ಓಡಿಸಲು | **ಸ್ಥಿರಾ**—ಭದ್ರವಾಗಿ | **ಸಂತು**—ಇರಲಿ | **ಉತ**—ಮತ್ತು | **ಪ್ರತಿಷ್ಕಭೇ**—ಶತ್ರುಗಳನ್ನು ನಿರೋಧಿಸುವುದಕ್ಕೂ | **ವೀಳು**—ಬಲವುಳ್ಳವುಗಳಾಗಿ (ಇರಲಿ) | **ಯುಷ್ಮಾಕಂ**—ನಿಮ್ಮ | **ತವಿಷೀ**—ಬಲವು **ಪನೀಯಸೀ**—ಅತ್ಯಂತ ಸ್ತೋತ್ರಾರ್ಹವಾಗಿರಲಿ | **ಮಾಯಿನಃ**—(ನಮಗೆ) ಮೋಸಮಾಡತಕ್ಕ | **ಮರ್ತ್ಯಸ್ಯ**—ಮಾನವ ರೂಪಿಯಾದ ಶತ್ರುವಿನ (ಬಲವು) **ಮಾ**—(ಸ್ತೋತ್ರಾರ್ಹವಾಗಿ) ಇಲ್ಲದಿರಲಿ.

ಭಾವಾರ್ಥ

ಎಲೈ ಮರುತ್ತುಗಳೇ, ನಮ್ಮ ಪ್ರಬಲವಾದ ಶತ್ರುಗಳನ್ನು ಓಡಿಸುವುದಕ್ಕೆ ನಿಮ್ಮ ಆಯುಧಗಳು ಭದ್ರವಾಗಿರಲಿ. ಅವರನ್ನು ನಿರೋಧಿಸುವ ಬಲವುಳ್ಳದ್ದಾಗಿರಲಿ. ನಿಮ್ಮ ಬಲವು ಸ್ತೋತ್ರಾರ್ಹವಾಗಿರಲಿ. ನಮಗೆ ಮೋಸ ಮಾಡತಕ್ಕ ಮಾನವರೂಪಿಯಾದ ಶತ್ರುವಿಗೆ ಬಲವಿಲ್ಲದಂತಾಗಲಿ.

## English Translation

May your weapons be steady, may they be strong to drive away or resist the enemy ; may your strength merit praise, not that of a treacherous mortal

| ವಿಶೇಷವಿಷಯಗಳು ||

**ಪರಾಣುದೇ—ಣುದ ಪ್ರೇರಣೇ |** ಶತ್ರುಗಳನ್ನು ಎದುರಿಸುವ ವಿಷಯದಲ್ಲಿ.

**ವೀಳು—ವೀಡು** ದೃಢವಾಗಿ, steady.

**ಪ್ರತಿಷ್ಕಭೇ—ಶತ್ರೂಣಾಂ ಪ್ರತಿಬಂಧಾಯ |** ಶತ್ರು ನಿವಾರಣೆಗಾಗಿ.

**ತವಿಷೀ—ಬಲಂ |** ಬಲವು, ಶಕ್ತಿಸಾಮರ್ಥ್ಯಾದಿಗಳು

**ಪನೀಯಸೀ—ಪನತಿಃ ಸ್ತುತ್ಯರ್ಥಃ | ಅತಿಶಯೇನ ಸ್ತೋತವ್ಯಾ ಭವತು |** ಬಹಳವಾಗಿ ಸ್ತುತಿಯೋಗ್ಯವಾದದ್ದಾಗಲಿ.

**ಮಾಯಿನಃ—ಛದ್ಮಚಾರಿಣೋ ಮನುಷ್ಯಸ್ಯ |** ಮೋಸಮಾಡುವ ಕೆಟ್ಟ ಮನುಷ್ಯನ, treacherous or vily person.

॥ ವ್ಯಾಕರಣಪ್ರಕ್ರಿಯಾ ॥

**ಸ್ಥಿರಾ—ಆಯುಧಾ** ಈ ಎರಡು ಕಡೆಯಲ್ಲಿಯೂ **ಶೇಶ್ಛಂದಸಿ ಬಹುಲಂ** ಎಂದು ಶಿಗೆ ಲೋಪ ಬಂದಿದೆ.

**ಪರಾಣುದೇ**—ಣುದಪ್ರೇರಣೇ **ಸಂಪದಾದಿಭ್ಯಃ ಕ್ವಿಪ್** ಎಂದು ಕ್ವಿಪ್ ಪ್ರತ್ಯಯ, **ಉಪಸರ್ಗಾದ ಸಮಾಸೇಽಪಿ ಣೋಪದೇಶಸ್ಯ** (ಪಾ. ಸೂ. ೮-೪-೧೪) ಸಮಾಸ ಬಂದಿದ್ದರೂ ಬರದೇ ಇದ್ದರೂ ಉಪಸರ್ಗ ದಲ್ಲಿರುವ ರೇಫಷಕಾರಗಳ ಮುಂದೆ ಇರುವ ನಕಾರಕ್ಕೆ ಣಕಾರ ಬರುತ್ತೆ ಎಂದು, ನಕಾರಕ್ಕೆ ಣಕಾರ ಬರುತ್ತೆ. ಇಲ್ಲಿ ಣುದಧಾತುಣಕಾರಕ್ಕೆ **ಣೋನಃ** ಎಂಬ ಸೂತ್ರದಿಂದ ನಕಾರ ಬರುತ್ತೆ. ಇದಕ್ಕೆ ಪುನಃ ಣತ್ವ.

**ಣೋಪದೇಶಾಸ್ತ್ವನರ್ದ-ನಾಟಿ-ನಾಥ್-ನಾಧ್-ನನ್ದ್-ನಕ್ಕ-ನೄ-ನೃತಃ**—ಈ ಎಂಟು ಧಾತುಗಳನ್ನು ಬಿಟ್ಟು ಮಿಕ್ಕ ಧಾತುಗಳು ಣಕಾರಾದಿಯಾಗಿದ್ದರೂ, ಅಥವಾ ಅದಕ್ಕೆ ನಕಾರ ಬಂದು, ನಕಾರಾದಿಯಾಗಿದ್ದರೂ, ಅವು ಣೋಪದೇಶಗಳೆಂದು ತಿಳಿಯಬೇಕು. ಪರಾಣುದ್ ಎಂಬಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವೀಳು—ಸುಪಾಂ ಸುಲುಕ್**—, ಎಂದು ವಿಭಕ್ತಿಗೆ ಲುಕ್. ಸಂಹಿತಾಕಾಲದಲ್ಲಿ ವೀಳು। ಉತ ಎಂದಿರು ವಾಗ **ಈಷಾ ಅಕ್ಷಾದಿಷು ಛಂದಸಿ ಪ್ರಕೃತಿಭಾವಮಾತ್ರಮ್** (ಪಾ· ಸೂ·೬·೧·೧೨೭) ಎಂದು ಪ್ರಕೃತಿಭಾವ ಬರುತ್ತೆ.

**ಪ್ರತಿಷ್ಕಭೇ**—ಈಗ ಇರುವ ಧಾತುಪಾಠದಲ್ಲಿ ಸ್ಕಮ್ಭುಧಾತುವಿಗೆ ಪಾಠ ಇಲ್ಲ. ಆದರೆ ಸೂತ್ರಗಳಲ್ಲಿ ಈ ಧಾತುವನ್ನು ಪಾಣಿನಿಮಹರ್ಷಿಗಳು ವ್ಯವಹರಿಸಿರುವರು. **ಗ್ರಸಿತಸ್ಕಭಿತ**—, (ಪಾ. ಸೂ. ೭-೨-೩೪) ಎಂಬ ಸೂತ್ರದಲ್ಲಿ ಸ್ಕಭಿತ ಎಂದು ಸ್ಕಂಭುಧಾತುನಿರ್ದೇಶ ಇದೆ. ಸ್ಕಂಭು ರೋಧನೇ ಎಂದು ಇದರ ಅರ್ಥ. ಇದರ ಮುಂದೆ ಸಂಪದಾದಿಲಕ್ಷಣವಾದಕ್ವಿಪ್. **ಅನಿದಿತಾಂ ಹಲ ಉಪಧಾಯಾಃ ಕ್ಙಿತಿ** (ಪಾ. ಸೂ. ೬-೪-೨೪) ನಕಾರಕ್ಕೆ ಲೋಪ.

**ಪನೀಯಸೀ**—ಪನಚ ಎಂದು ಸ್ತುತ್ಯರ್ಥದಲ್ಲಿ ಈ ಧಾತುವನ್ನು ಪಠಿಸಿರುವರು. ಇದರ ಮುಂದೆ ಕರ್ಮಾರ್ಥದಲ್ಲಿ ಔಣಾದಿಕವಾದ ಅಸುನ್ ಪ್ರತ್ಯಯ. ಅತಿಶಯಾರ್ಥವನ್ನು ವಿವಕ್ಷಿಸಿದಾಗ **ದ್ವಿವಚನವಿಭಜ್ಯೋಪ-ಪದೇ ತರಬೀಯಸುನೌ** ಎಂದು ಈಯಸುನ್. **ಟೇಃ** ಎಂದು ಅಸ್ ಎಂಬ ಟಿಗೆ ಲೋಪ. ಪನೀಯಸ್ ಎಂಬುದು ಉಗಿದಂತ, **ಉಗಿತಶ್ಚ** (ಪಾ. ಸೂ. ೬-೩-೪೫) ಉಗಿದಂತವಾದ ಪ್ರಾತಿಪದಿಕದ ಮುಂದೆ ಸ್ತ್ರೀಲಿಂಗದಲ್ಲಿ ಙೀಪ್ ಬರುತ್ತೆ ಎಂದು ಙೀಪ್. ಈಯಸುನ್ ನಿತ್, ಆದ್ದರಿಂದ ಆದ್ಯುದಾತ್ತ ಬರುತ್ತೆ.

**ಮಾಯಿನಃ—ವ್ರೀಹ್ಯಾದಿಭ್ಯಶ್ಚ** (ಪಾ. ಸೂ. ೫-೨-೧೧೬) ಈ ಗಣಪಠಿತವಾದ ಶಬ್ದಗಳ ಮುಂದೆ ಇನಿಠನ್‌ಪ್ರತ್ಯಯಗಳು ಬರುವುವು ಎಂದು, ಇನಿಪ್ರತ್ಯಯ ಬರುತ್ತೆ. **ಅನ್ಯೇಭ್ಯ ಉಭಯಂ** ಎಂದು ಹೇಳಿರು ವುದರಿಂದ ಎರಡು ಪ್ರತ್ಯಯಗಳೂ ಬರುವುವು. **ಅಸ್ಮಾಯಾಮೇಧಾ**—, ಎಂದು ವಿನಿಯೂ ಬರುವುದು, ಏವಂಚ ಮಾಯಾವೀ, ಮಾಯೀ, ಮಾಯಿಕಃ ಎಂದು ರೂಪಗಳಾಗುವುವು. ವ್ರೀಹ್ಯಾದಿಗಣದಲ್ಲಿ 'ವ್ರೀಹಿ-ಮಾಯಾ' ಎಂದು ಮಾಯಾಶಬ್ದವು ಪಠಿತವಾಗಿದೆ. ॥೨॥

॥ ಸಂಹಿತಾಪಾಠಃ ॥

ಪರಾ ಹ ಯತ್ಸ್ಥಿರಂ ಹಥ ನರೋ ವರ್ತಯಥಾ ಗುರು।
ವಿ ಯಾಥನ ವನಿನಃ ಪೃಥಿವ್ಯಾ ವ್ಯಾಶಾಃ ಪರ್ವತಾನಾಂ ॥ ೩ ॥

॥ ಪದಪಾಠಃ ॥

ಪರಾ । ಹ । ಯತ್ । ಸ್ಥಿರಂ । ಹಥ । ನರಃ । ವರ್ತಯಥ । ಗುರು ।
ವಿ । ಯಾಥನ । ವನಿನಃ । ಪೃಥಿವ್ಯಾಃ । ವಿ । ಆಶಾಃ । ಪರ್ವತಾನಾಂ ॥ ೩ ॥

ಸಾಯಣಭಾಷ್ಯಂ

ಹೇ ನರೋ ನೇತಾರೋ ಮರುತೋ ಯದ್ಯದಾ ಸ್ಥಿರಂ ವಸು ಪರಾಹಥ ವೃಕ್ಷಾದಿಕಂ ಪರಾಹತಂ ಭಗ್ನಂ ಕುರುಥ। ಗುರು ಪಾಷಾಣಾದಿಕಂ ಗುರುತ್ವೋಪೇತಂ ವರ್ತಯಥ ಪ್ರೇರಯಥ। ತದಾನೀಂ ಪೃಥಿವ್ಯಾಃ ಸಂಬಂಧಿನೋ ವನಿನೋ ವನವತೋ ವೃಕ್ಷಾನ್ವಿಯಾಥನ। ವಿಯುಜ್ಯ ಮಧ್ಯೇ ಗಚ್ಛಥ। ಅರಣ್ಯಗತಾನಾಂ ನಿಬಿಡಾನಾಂ ವೃಕ್ಷಾಣಾಂ ಮಧ್ಯೇ ಯಸ್ಯ ಕಸ್ಯಾಪಿ ವೃಕ್ಷಸ್ಯ ಭಗ್ನತ್ವಾದಿತರವೃಕ್ಷಾಣಾಂ ಪರಸ್ಪರವಿಯೋಗೇನ ಪ್ರೌಢೋ ಮಾರ್ಗೋ ಭವತಿ। ತಥಾ ಪರ್ವತಾನಾಮಾಶಾಃ ಪರ್ವತಪಾರ್ಶ್ವದಿಶೋ ವಿಯಾಥನ। ವಿಯುಜ್ಯ ಗಚ್ಛಥ॥ ಹಥ॥ ಹನ ಹಿಂಸಾಗತ್ಯೋಃ ಅನುದಾತ್ತೋಪದೇಶೇತ್ಯಾದಿನಾ ಅನುನಾಸಿಕಲೋಪಃ। ಯದ್ವೃತ್ತಯೋಗಾದನಿಘಾತಃ। ನರಃ ಪಾದಾದಿತ್ವಾದಾಮಂತ್ರಿತನಿಘಾತಾಭಾವಃ। ವರ್ತಯಥ। ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಣಿಚಃ ಸ್ವರ ಏವ ಶಿಷ್ಯತೇ। ಯಚ್ಛಬ್ದಾನುಷಂಗಾನ್ನಿಘಾತಾಭಾವಃ। ಯಾಥನ। ತಪ್ತನಪ್ತನಥನಾಶ್ಚೇತಿ ಥನಾದೇಶಃ॥

ಪ್ರತಿಪದಾರ್ಥ

**ನರಃ**—ಮಾರ್ಗದರ್ಶಿಗಳಾದ। ಎಲೈ ಮರುತ್ತುಗಳೇ। **ಯತ್**—ಯಾವಾಗ। **ಸ್ಥಿರಂ**— ಭದ್ರವಾಗಿ ನಿಂತಿರುವ ನಿಶ್ಚಲವಾದ (ವೃಕ್ಷಾದಿಗಳನ್ನು)। **ಪರಾ ಹಥ**—ಉರುಳಿಸುತ್ತೀರೋ (ಮತ್ತು)। **ಗುರು**—(ಬಂಡೆ ಮುಂತಾದ) ಭಾರವಾದ ವಸ್ತುಗಳನ್ನು। **ವರ್ತಯಥ**—ಚಲಿಸುವಂತೆ ಮಾಡುತ್ತೀರೋ (ಆಗ)। **ಪೃಥಿವ್ಯಾಃ**—ಭೂಮಿಗೆ ಸೇರಿದ। **ವನಿನಃ**—ವನವೃಕ್ಷಗಳನ್ನು। **ವಿಯಾಥನ**—ಬಿಡಿಸಿಕೊಂಡು ಮಧ್ಯೆ ಸಂಚರಿಸುತ್ತೀರಿ (ಹಾಗೆಯೇ, **ಪರ್ವತಾನಾಂ**—ಪರ್ವತಗಳ। **ಆಶಾಃ**—(ಇಕ್ಕಟ್ಟಾದ ಕಣಿವೆಮಾರ್ಗಗಳ) ದಿಕ್ಕುಗಳನ್ನು। **ವಿ-(ಯಾಥನ)**—ಬಿಡಿಸಿಕೊಂಡು ಸಂಚರಿಸುತ್ತೀರಿ

॥ ಭಾವಾರ್ಥ ॥

ಎಲೈ ನಾಯಕರಾದ ಮರುದ್ದೇವತೆಗಳೇ, ನೀವು ಸ್ಥಿರವಾದ ವೃಕ್ಷಾದಿಗಳನ್ನು ಉರುಳಿಸುತ್ತೀರಿ. ಬಂಡೆ ಮುಂತಾದ ಭಾರವಾದ ವಸ್ತುಗಳನ್ನು ಚಲಿಸುವಂತೆ ಮಾಡುತ್ತೀರಿ. ವನವೃಕ್ಷಗಳನ್ನೂ ನಿಮ್ಮ ವೇಗದಿಂದ ಭಗ್ನಮಾಡುತ್ತಾ ಪರ್ವತಗಳ ಇಕ್ಕಟ್ಟಾದ ಕಣಿವೆ ಮಾರ್ಗಗಳನ್ನೂ ಬಿಡಿಸಿಕೊಡು ಸುಲಭವಾಗಿಯೂ ಸ್ವತಂತ್ರವಾಗಿಯೂ ಸಂಚರಿಸುತ್ತೀರಿ.

## English Translation

O leaders of men, (Maruts) whenever you move you demolist what is stable, scatter what is heavy, then make your way through the forest trees of earth and through the regions of the mountains.

ವಿಶೇಷವಿಷಯಗಳು

**ಮುಖ್ಯಾಭಿಪ್ರಾಯವು**—ಮರುದ್ದೇವತೆಗಳು ಸಂಚರಿಸುವಾಗ ಅವರಿಗೆ ಯಾವುದೂ ತಡೆಯಿಲ್ಲ. ಭೂಮಿಯಲ್ಲಿ ಚೆನ್ನಾಗಿ ಬೆಳೆದು ಸ್ಥಿರವಾಗಿ ನಿಂತಿರುವ ದೊಡ್ಡ ದೊಡ್ಡ ವೃಕ್ಷಗಳನ್ನು ಬುಡಸಹಿತ ಉರುಳಿಸುವರು. ಭಾರವಾದ ಪದಾರ್ಥಗಳೂ ಗೃಹಾದಿಗಳೂ ಗಾಳಿಯ ಹೊಡೆತದಿಂದ ಅಲ್ಲೋಲಕಲ್ಲೋಲವಾಗುವುವು. ಭೂಮಿಯಲ್ಲಿರುವ ವನಗಳಲ್ಲಿ ದಟ್ಟವಾಗಿ ಬೆಳೆದಿರುವ ವೃಕ್ಷಗಳ ಗುಂಪಿನಲ್ಲಿ ಬೀಸುವಾಗ ಅನೇಕ ಮರಗಳನ್ನು ಕೆಡವಿ ದಾರಿಮಾಡಿಕೊಂಡು ನುಗ್ಗಿಹೋಗುವರು. ಪರ್ವತ ಪ್ರದೇಶಗಳಲ್ಲಿಯೂ ಇಕ್ಕಟ್ಟಾದ ಕಣಿವೆಗಳಲ್ಲಿಯೂ ದಾರಿಮಾಡಿಕೊಂಡು ಹೋಗುವರು.

**ಪರಾ ಹಥ—ಹನ ಹಿಂಸಾಗತ್ಯೋಃ । ಭಗ್ನಂ ಕುರುಥ ।** ಭಗ್ನಮಾಡುವಿರಿ, ಮುರಿದುಹಾಕುವಿರಿ.

**ನರಃ**—ಋಕಾರಾಂತ ನೃಶಬ್ದದ ಪ್ರಥಮಾ ಬಹುವಚನವು. ನಾಯಕರು, ಮನುಷ್ಯರಿಗೆ ಮಾರ್ಗದರ್ಶಕರು.

**ಗುರು**—ಅತ್ಯಂತ ಭಾರವಾದ ಕಲ್ಲು, ಗೃಹ ಮೊದಲಾದ ವಸ್ತುಗಳು

**ವಿ ಯಾಥನ—ವಿಯುಜ್ಯ ಮಧ್ಯೇ ಗಚ್ಛಥ । ಆರಣ್ಯಗತಾನಾಂ ನಿಬಿಡಾನಾಂ ವೃಕ್ಷಾಣಾಂ ಮಧ್ಯೇ ಯಸ್ಯ ಕಸ್ಯಾಪಿ ವೃಕ್ಷಸ್ಯ ಭಗ್ನತ್ವಾದಿತರ ವೃಕ್ಷಾಣಾಂ ಪರಸ್ಪರವಿಯೋಗೇನ ಪ್ರೌಢೋ ಮಾರ್ಗೋ ಭವತಿ ।** ಬಿಡಿಸಿಕೊಂಡು ಮಧ್ಯದಲ್ಲಿ ಹೋಗುವಿರಿ ಎಂದರೆ ಕಾಡಿನಲ್ಲಿ ನಿಬಿಡವಾಗಿ ಬೆಳೆದಿರತಕ್ಕ ವೃಕ್ಷಗಳ ಗುಂಪಿನಲ್ಲಿ ಕೆಲವು ಮರಗಳನ್ನು ಉರುಳಿಸಿ ದಾರಿಮಾಡಿಕೊಂಡು ಹೋಗುವಿರಿ ಎಂದು ಅಭಿಪ್ರಾಯವು.

**ಆಶಾಃ ಪರ್ವತಾನಾಂ**—ಪರ್ವತದ ತಪ್ಪಲುಗಳು ಅಥವಾ ಪರ್ವತಗಳ ಮಧ್ಯೆ ಇರುವ ಇಕ್ಕಟ್ಟಾದ ಕಣಿವೆ ಪ್ರದೇಶಗಳು.

ವ್ಯಾಕರಣಪ್ರಕ್ರಿಯಾ

**ಹಥ**—ಹನಹಿಂಸಾಗತ್ಯೋಃ, ಲಟ್ಟಿಗೆ ಥ, ಶಪ್‌ಗೆ ಲುಕ್, **ಅನುದಾತ್ತೋಪದೇಶ—**, ಎಂದು ನಕಾರಕ್ಕೆ **ಲೋಪ.** ಯದ್ವೃತ್ತಯೋಗ ಇರುವುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ನರಃ**—ಪಾದಾದಿಯಲ್ಲಿದೆ, ಆಷ್ಟಮಿಕಾಮನ್ತ್ರಿತಾನುದಾತ್ತ ಬರುವುದಿಲ್ಲ.

**ವರ್ತಯಥ**—ಶಪ್ ಪಿತ್ತಾದ್ದರಿಂದ ಅನುದಾತ್ತ. ಇದರ ಮುಂದೆ ಇರುವ ಲಸ್ಥಾನಿಕ ಸಾರ್ವಧಾತುಕವು **ತಾಸ್ಯನುದಾತ್ತೇತ್—**, ಎಂದು ಅನುದಾತ್ತ ಪರಿಶಿಷ್ಟವಾದ್ದರಿಂದ ಣಿಚ್‌ಸ್ವರ ಉಳಿಯುತ್ತೆ. **ಯತ್‌ಸ್ಥಿರಂ** ಎಂಬಲ್ಲಿರುವ ಯತ್ ಎಂಬ ಪದವನ್ನು ಇಲ್ಲಿಯೂ ಅನ್ವಯಿಸಿಕೊಳ್ಳಬೇಕು. ಏವಂಚ **ಯದ್ವೃತ್ತಾನ್ನಿತ್ಯಂ** ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ.

**ಯಾಥನ**—ಯಾ ಪ್ರಾಪಣೇ, ಲೋಟ್ ಮಧ್ಯಮ ಧ, ತ ಆದೇಶ. **ತಪ್ತನಪ್ತನಥನಾಶ್ಚ** ಎಂದು ಥನ ಆದೇಶ.

**ವನಿನಃ**—ವನಮೇಷಾಮಸ್ತಿ ಎಂದು ವಿಗ್ರಹ, ಇನಿಪ್ರತ್ಯಯ.

**ಪೃಥಿವ್ಯಾಃ**—ಪ್ರಥಧಾತು ಮುಂದೆ ಷಿವನ್‌ಪ್ರತ್ಯಯ. **ಷಿದ್ಗೌರಾದಿಭ್ಯಶ್ಚ** ಎಂದು ಙೀಷ್ ಉದಾತ್ತ, ಷಷ್ಠೀವಿಭಕ್ತಿ ಙಸ್, ಯಣಾದೇಶ. **ಉದಾತ್ತಯಣೋ ಹಲ್ಪೂರ್ವಾತ್** ಎಂದು ವಿಭಕ್ತಿಯು ಉದಾತ್ತ. ॥೩॥



॥ ಸಂಹಿತಾಪಾಠಃ ॥

ನಹಿ ವಃ ಶತ್ರುರ್ವಿವಿದೇ ಅಧಿ ದ್ಯವಿ ನ ಭೂಮ್ಯಾಂ ರಿಶಾದಸಃ ।
ಯುಷ್ಮಾಕಮಸ್ತು ತವಿಷೀ ತನಾ ಯುಜಾ ರುದ್ರಾಸೋ ನೂ
ಚಿದಾಧೃಷೇ ॥ ೪ ॥

॥ ಪದಪಾಠಃ ॥

ನಹಿ । ವಃ । ಶತ್ರುಃ । ವಿವಿದೇ । ಅಧಿ । ದ್ಯವಿ । ನ । ಭೂಮ್ಯಾಂ ।
ರಿಶಾದಸಃ ।
ಯುಷ್ಮಾಕಂ । ಅಸ್ತು । ತವಿಷೀ । ತನಾ । ಯುಜಾ । ರುದ್ರಾಸಃ । ನು ।
ಚಿತ್ । ಆಽಧೃಷೇ ॥ ೪ ॥

ಸಾಯಣಭಾಷ್ಯಂ

ಹೇ ರಿಶಾದಸಃ ಶತ್ರುಹಿಂಸಕಾ ಮರುತೋಽಧಿದ್ಯವಿ ದ್ಯುಲೋಕಸ್ಯೋಪರಿ ವೋ ಯುಷ್ಮಾಕಂ ಶತ್ರುರ್ನಹಿ ವಿವಿದೇ । ನ ಚ ಬಭೂವ । ತಥಾ ಭೂಮ್ಯಾಮಪಿ ಶತ್ರುರ್ನ ಬಭೂವ । ಹೇ ರುದ್ರಾಸೋ ರುದ್ರಪುತ್ರಾ ಮರುತೋ ಯುಷ್ಮಾಕಮೇಕೋನಪಂಚಾಶತ್ಸಂಖ್ಯಾನಾಂ ಭವತಾಂ ಯುಜಾ ಯೋಗೇನ ಪರಸ್ಪರೈಕಮತ್ಯೇನಾಧೃಷೇ ವೈರಿಣಾಂ ಸರ್ವತೋ ಧರ್ಷಣಾಯ ತವಿಷೀ ಬಲಂ ನೂ ಚಿತ್ ಕ್ಷಿಪ್ರಮೇವ ತನಾಸ್ತು । ವಿಸ್ತೃತಾ ಭವತು ॥ ವಿವಿದೇ । ವಿದ ಸತ್ತಾಯಾಂ ಲಿಟಿ ಪ್ರತ್ಯಯಸ್ವರಃ । ದ್ಯವಿ ನಹಿ ವಿವಿದೇ ಭೂಮ್ಯಾಂ ಚ ನ ವಿವಿದ ಇತಿ ಚಶಬ್ದಾರ್ಥಪ್ರತೀತೇಶ್ಚಾದಿಲೋಪೇ ವಿಭಾಷೇತಿ ಪ್ರಥಮಾಯಾಸ್ತಿಙ್ವಿಭಕ್ತೇರ್ನಿಘಾತಪ್ರತಿಷೇಧಃ । ಪ್ರಾಥಮ್ಯಂ ಚಾನುಷಕ್ತಕ್ರಿಯಾಪೇಕ್ಷಯಾ । ರಿಶಾದಸಃ । ರಿಶ ಹಿಂಸಾಯಾಂ । ರಿಶಂತಿ ಹಿಂಸಂತೀತಿ ರಿಶಾಃ । ಇಗುಪಧಲಕ್ಷಣಃ ಕಃ । ತಾನದಂತೀತಿ ರಿಶಾದಸಃ । ಅಸುನ್ । ಆಮಂತ್ರಿತನಿಘಾತಃ । ಯುಜಾ । ಯುಜಿರ್ ಯೋಗೇ । ಋತ್ವಿಗಿತ್ಯಾದಿನಾ ಕ್ವಿನ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ರುದ್ರಾಸಃ । ರುದ್ರಶಬ್ದೇನ ತತ್ಸಂಬಂಧಿನೋ ಮರುತೋ ಲಕ್ಷ್ಯಂತೇ । ಆಜ್ಜಸೇರಸುಕ್ । ನೂ ಚಿತ್ । ಋಚಿ ತುನುಘೇತ್ಯಾದಿನಾ ದೀರ್ಘಃ । ಆಧೃಷೇ । ಞಿಧೃಷಾ ಪ್ರಾಗಲ್ಭ್ಯೇ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ರಿಶಾದಸಃ**—ಶತ್ರುಹಿಂಸಕರಾದ ಮರುತ್ತುಗಳೇ । **ಅಧಿದ್ಯವಿ**—ದ್ಯುಲೋಕದಮೇಲೆ । **ವಃ**—ನಿಮಗೆ **ಶತ್ರುಃ**—ಶತ್ರುವು । **ನ ಹಿ ವಿವಿದೇ**—ಇರುವ ಸಮಾಚಾರವೇ ಇಲ್ಲ । **ಭೂಮ್ಯಾಂ**—ಭೂಮಿಯಲ್ಲೂ ಕೂಡ । **ನ ಬಭೂವ**—ಇಲ್ಲವೇ ಇಲ್ಲ । **ರುದ್ರಾಸಃ**—ರುದ್ರಪುತ್ರರಾದ ಎಲೈ ಮರುತ್ತುಗಳೇ । **ಯುಷ್ಮಾಕಂ**— (೪೯ ಸಂಖ್ಯೆಯುಳ್ಳ) ನಿಮ್ಮೆಲ್ಲರ । **ಯುಜಾ**— ಐಕಮತ್ಯದಿಂದ । **ಆಧೃಷೇ**—ಸುತ್ತಲೂ ಶತ್ರುನಾಶಕ್ಕಾಗಿ । **ತವಿಷೀ**—(ನಿಮ್ಮ) ಬಲವು । **ನೂಚಿತ್**— ಜಾಗ್ರತೆಯಾಗಿಯೇ । **ತನಾ ಅಸ್ತು**—ವೃದ್ಧಿಹೊಂದಲಿ

ಭಾವಾರ್ಥ

ಶತ್ರುಹಿಂಸಕರಾದ ಎಲೈ ಮರುತ್ತುಗಳೇ, ನಿಮಗೆ ದ್ಯುಲೋಕದಲ್ಲಾಗಲಿ ಭೂಲೋಕದಲ್ಲಾಗಲಿ ಶತ್ರುಗಳಿರುವ ಅವಕಾಶವೇ ಇಲ್ಲ. ಎಲೈರುದ್ರಪುತ್ರರಾದ ಮರುದ್ದೇವತೆಗಳೇ ನಲವತ್ತೊಂಭತ್ತು ಮಂದಿಗಳಿರುವ ನಿಮ್ಮ ಸಂಘಟಿತ ವಾದ ಶಕ್ತಿಯು ಶತ್ರುನಾಶಕ್ಕಾಗಿ ಜಾಗ್ರತೆ ಇನ್ನೂ ವೃದ್ಧಿಹೊಂದಲಿ.

English Translation

O distroyers of the wicked, there exists no adversary of yours above heavens, nor upon this earth, O Sons of Rudras, may four collective strength be quickly exerted to humble your enemies

|| ವಿಶೇಷ ವಿಷಯಗಳು ||

**ರಿಶಾದಸಃ—ರಿಶ ಹಿಂಸಾಯಾಂ । ರಿಶಂತಿ ಹಿಂಸಂತೀತಿ ರಿಶಾಃ ಶತ್ರವಃ ತಾನದಂತೀತಿ ರಿಶಾದಸಃ ।** ರಿಶಧಾತುವಿಗೆ ಹಿಂಸೆಮಾಡುವುದು ಎಂದರ್ಥವಿರುವುದು. ಹಿಂಸೆಮಾಡುವವರು ಶತ್ರುಗಳು. ಇವರು ಭಕ್ಷಿಸುವವರು ಅಥವಾ ನಾಶಮಾಡುವವರಾದ್ದರಿಂದ **ರಿಶಾದಸಃ**—ಶತ್ರುನಾಶಕರು ಎಂದರ್ಥವು.

**ಅಧಿ ದ್ಯವಿ—ದ್ಯುಲೋಕಸ್ಯೋಪರಿ ।** ಸ್ವರ್ಗದಮೇಲುಭಾಗದಲ್ಲಿ ಅಥವಾ ಮೇಲು ಭಾಗದಲ್ಲಿರುವ ಸ್ವರ್ಗದಲ್ಲಿಯೂ ಕೂಡ

**ತವಿಷೀ**—ಬಲವು, ಶಕ್ತಿಯು

**ತನಾ—ತನು ವಿಸ್ತಾರೇ । ವಿಸ್ತೃತಾ ।** ವಿಸ್ತಾರವಾಗಿ ಆಗಲಿ ಎಂದರೆ ಅಭಿವೃದ್ಧಿಗೊಳ್ಳಲಿ ಹೆಚ್ಚಾಗಲಿ. ತನಾ ಎಂಬ ಶಬ್ದವು ಋಗ್ವೇದದಲ್ಲಿ ವಿಶೇಷವಾಗಿ ಬಳಕೆಯಲ್ಲಿರುವುದು.

**ಯುಜಾ—ಯೋಗೇನ ಪರಸ್ಪರೈಕಮತ್ಯೇನ ।** ಮರುತ್ತುಗಳು ನಲವತ್ತೊಂಭತ್ತು ಮಂದಿ ಇರುವರೆಂದು ಪುರಾಣಾದಿಗಳಲ್ಲಿ ಹೇಳಿದೆ. ಋಗ್ವೇದದಲ್ಲಿ ಪ್ರಕಾರಾಂತರವಾಗಿ ಇವರ ವರ್ಣನೆ ಇದೆ. ೩೭ನೇ ಸೂಕ್ತದ ೧ನೇ ಋಕ್ಕಿನಲ್ಲಿ ಈ ವಿಷಯವಾಗಿ ನಾವು ಬರೆದಿರುವ ವಿವರಣೆಯನ್ನು ನೋಡಿ

**ರುದ್ರಾಸಃ**—ಮರುತ್ತುಗಳು ರುದ್ರಪುತ್ರರೆಂದು ಋಗ್ವೇದದಲ್ಲಿ ಅನೇಕ ಕಡೆ ವರ್ಣನೆ ಇರುವುದು. ಈ ವಿಷಯವನ್ನು ನಾವು ಹಿಂದೆಯೇ ವಿವರಿಸಿದೇವೆ.

ವ್ಯಾಕರಣಪ್ರಕ್ರಿಯಾ

**ನಹಿ—ಅಭಾವೇ ನಹ್ಯನೋನಾಪಿ** (ಅಮರ. ಅ. ವ.) ಎಂದು ನಹಿ ಎಂಬುದು ಅಭಾವದ ಬೋಧಕವು. ಇದು ನಿಪಾತ. **ಏವಾದೀನಾಮನ್ತಃ** ಎಂದು ಏವಾದಿಗಣದಲ್ಲಿ ಸೇರಿಸಿ ಅಂತೋದಾತ್ತವನ್ನು ಹೇಳಬಹುದು.

ಅಥವಾ **ಸಹ ಸುಪಾ** (ಪಾ. ಸೂ. ೨-೧-೪) ಎಂಬಲ್ಲಿ ಸಹ ಎಂದು ಯೋಗವಿಭಾಗಮಾಡಿರುವರು. ಸುಬಂತವು ಸಮರ್ಥಸುಬಂತದೊಂದಿಗೆ ಸಮಾಸವನ್ನು ಹೊಂದುತ್ತೆ ಎಂದು ಇದರ ಅರ್ಥ. ನ ಹಿ ಇವುಗಳೆರಡಕ್ಕೂ ಈ ಸೂತ್ರದಿಂದ ಸಮಾಸ. **ಸಮಾಸಸ್ಯ** (ಪಾ. ಸೂ. ೬-೧-೨೨೩) ಸಮಾಸದ ಕೊನೆಯು ಉದಾತ್ತವಾಗುವುದು ಎಂದು ಅಂತೋದಾತ್ತ.

**ವಃ—ಬಹುವಚನಸ್ಯ ವಸ್ನಸೌ** (ಪಾ. ಸೂ. ೮-೧-೨೧) ಎಂದು ಷಷ್ಠೀಬಹುವಚನಾಂತವಾದ ಯುಷ್ಮಾಕಂ ಎಂಬುದಕ್ಕೆ ಅನುದಾತ್ತವಾದ ವಸ್ ಆದೇಶ.

**ವಿವಿದೇ—**ವಿದ ಸತ್ತಾಯಾಂ. ದಿವಾದಿ ಆತ್ಮನೇಪದಿ. ಲಿಟ್ಟಿನಲ್ಲಿ ಬರುವ ತಗೆ ಏಶ್. ದ್ವಿತ್ವಾಭ್ಯಾಸ ಲೋಪಗಳು. ಲಘೂಪಧಗುಣಕ್ಕೆ ನಿಷೇಧ. ವಿವಿದೇ ಎಂದು ಆಗುತ್ತದೆ. 'ದ್ಯಾವಿ ನ ಹಿ ವಿವಿದೇ—ಭೂಮ್ಯಾಂಚ ನ ಹಿ ವಿವಿದೇ' ಎಂದು ಚ ಶಬ್ದದ ಅರ್ಥಕ್ಕೆ ಪ್ರತೀತಿ ಇದೆ ಆದರೆಚ ಶಬ್ದಕ್ಕೆ ಪ್ರಯೋಗ ಇಲ್ಲ. ಎರಡನೇ ತಿಙಂತವು ಋಕ್ಕಿನಲ್ಲಿ ಇಲ್ಲ. ಆದರೂ ಮೊದಲು ಹೇಳಿರುವ ತಿಙಂತವನ್ನೇ ಆವರ್ತಿಮಾಡಿಕೊಂಡು ಎರಡನೇವಾಕ್ಯ ದಲ್ಲಿ ಸೇರಿಸಿಕೊಳ್ಳಬೇಕು. ಈ ಸೇರಿಸಿಕೊಂಡ ತಿಙಂತವು ಎರಡನೆಯದು. ಮನ್ತ್ರದಲ್ಲಿರುವುದು ಮೊದಲನೆಯದು, **ಚಾದಿಲೋಪೇ ವಿಭಾಷಾ** (ಪಾ. ಸೂ. ೮-೧-೬೩) ಚಾದಿಗಳಿಗೆ ಲೋಪ ಬಂದಿದ್ದರೆ ಪ್ರಥಮೋಚ್ಚರಿತವಾದ ತಿಙಂತವು ವಿಕಲ್ಪವಾಗಿ ಅನುದಾತ್ತವಾಗುವುದಿಲ್ಲ ಎಂದು ಮೊದಲನೆಯದಕ್ಕೆ ಅನುದಾತ್ತ ನಿಷೇಧ.

**ನ—**ನಿಪಾತವಾದ್ದರಿಂದ ಆದ್ಯುದಾತ್ತ.

**ರಿಶಾದಸಃ—**ರಿಶ ಹಿಂಸಾಯಾಂ. ರಿಶನ್ತಿ ಹಿಂಸನ್ತೀತಿ ರಿಶಾಃ, ಹಿಂಸೆಕೊಡುವ ಶತ್ರುಗಳು ಎಂದು ಅರ್ಥ. **ಇಗುಪಧಜ್ಞಾಪ್ರೀಕಿರಃ ಕಃ** (ಪಾ ಸೂ. ೩-೧-೧೩೫) ಇಕ್=ಇ-ಉ-ಋ-ಲೃ, ಇವು ಉಪಾಂತ್ಯದಲ್ಲಿದ್ದರೆ ಅವುಗಳ ಮುಂದೆಯೂ, ಜ್ಞಾ ಮೊದಲಾದ ಧಾತುಗಳ ಮುಂದೆಯೂ ಕ ಪ್ರತ್ಯಯ ಬರುತ್ತೆ ಎಂದು ಕಪ್ರತ್ಯಯ. ಪ್ರತ್ಯಯ ಕಿತ್, ಲಘೂಪಧಗುಣಕ್ಕೆ ನಿಷೇಧ. ಅದಭಕ್ಷಣೇ ಧಾತು, ರಿಶಾನ್ ಅದನ್ತಿ ಎಂದರೆ ಶತ್ರುಗಳನ್ನು ತಿನ್ನುವುವು ಎಂದರೆ ನಾಶಪಡಿಸುವುವು ಎಂದು ಅರ್ಥ. **ಸರ್ವಧಾತುಭ್ಯೋಽಸುನ್** (ಉ. ಸೂ. ೪-೬-೨೮) ಎಂದು ಅಸುನ್, ಆಷ್ಟಮಿಕಾಮನ್ತ್ರಿತಾನುದಾತ್ತ ಬರುತ್ತೆ.

**ಯುಜಾ—**ಯುಜಿರ್ ಯೋಗೇ, **ಋತ್ವಿಗ್ದಧೃಕ್ಸ್ರಗ್ದಿಗುಷ್ಣಿಗಞ್ಚು ಯುಜಿಕ್ರುಞ್ಚಾಂ ಚ** (ಪಾ. ಸೂ. ೩-೨-೫೯) ಎಂದು ಕ್ವಿನ್ ಪ್ರತ್ಯಯ. ತೃತೀಯಾ ಏಕವಚನ ಟಾ. **ಸಾವೇಕಾಚಃ—**, ಎಂದು ವಿಭಕ್ತಿಯು ಉದಾತ್ತವಾಗುತ್ತೆ. ಯುಜ್ ಕ್ಷು ಎಂದು ಸಪ್ತಮಿ ಬಹುವಚನದಲ್ಲಿ ಏಕಾಚ್ಕವಾಗಿದೆ.

**ರುದ್ರಾಸಃ—**ರೋದಯತೀತಿ ರುದ್ರಃ. **ರೋದೇರ್ಣಿಲುಕ್ಚ** (ಉ. ಸೂ. ೨-೧೭೯) ರುದಿರ್ ಅಶ್ರು ವಿಮೋಚನೇ. ಣಿಚ್ಪ್ರತ್ಯಯಾಂತವಾದ ಈ ಧಾತುವಿನ ಮುಂದೆ ರಕ್ ಪ್ರತ್ಯಯ ಬರುತ್ತೆ. ಮತ್ತು ಣಿಗೆ ಲುಕ್ ಬರುತ್ತೆ. ಅವು ಬಂದರೆ ರುದ್ರ ಎಂದು ಆಗುತ್ತೆ. ಇಲ್ಲಿ ಲಕ್ಷಣಾವೃತ್ತಿಯಿಂದ ರುದ್ರನ ಸಂಬಂಧಿಯಾದ ಮರುತ್ತುಗಳು ಈ ಪದದಿಂದ ಬೋಧಿತವಾಗುತ್ತವೆ. ಜಸ್‌ಗೆ ಅಸುಕ್ ಆಗಮ,

**ಸೂ— ಋಚಿ ತುನುಘಮಕ್ಷು ತಙ್ಕುತ್ರೋರುಷ್ಯಾಣಾಮ್** (ಪಾ. ಸೂ. ೬-೩-೧೩೩) ಋಗ್ರೂಪವಾದ ಮಂತ್ರದಲ್ಲಿ ಈ ಶಬ್ದಗಳಿಗೆ ದೀರ್ಘ ಬರುತ್ತೆ ಎಂದು ದೀರ್ಘ.

**ಆಧೃಷೇ**— ಞಿ ಧೃಷಾ ಪ್ರಾಗಲ್ಭ್ಯೇ ಧಾತು. **ಸಂಪದಾದಿಭ್ಯಃ ಕ್ವಿಪ್** ಎಂದು ಭಾವಾರ್ಥದಲ್ಲಿ ಕ್ವಿಪ್ ಪ್ರತ್ಯಯ. ಆಙ್ನೊಂದಿಗೆ ಸಮಾಸ ಕೃದುತ್ತರಪದಪ್ರಕೃತಿಸ್ವರ. ||೪||

---

ಸಂಹಿತಾಪಾಠಃ

ಪ್ರ ವೇಪಯನ್ತಿ ಪರ್ವತಾನ್ವಿ ವಿಞ್ಚನ್ತಿ ವನಸ್ಪತೀನ್ ।
ಪ್ರೋ ಆರತ ಮರುತೋ ದುರ್ಮದಾ ಇವ ದೇವಾಸಃ ಸರ್ವ-
ಯಾ ವಿಶಾ ॥ ೫ ॥

ಪದಪಾಠಃ

ಪ್ರ । ವೇಪಯನ್ತಿ । ಪರ್ವತಾನ್ । ವಿ । ವಿಞ್ಚನ್ತಿ । ವನಸ್ಪತೀನ್ ।
ಪ್ರೋ ಇತಿ । ಆರತ । ಮರುತಃ । ದುರ್ಮದಾಃಽಇವ । ದೇವಾಸಃ ।
ಸರ್ವಯಾ । ವಿಶಾ ॥ ೫ ॥

|| ಸಾಯಣಭಾಷ್ಯಂ ||

ಪರ್ವತಾನ್ ಮೇರುಹಿಮವದಾದೀನ್ ಪ್ರವೇಪಯಂತಿ । ಮರುತಃ ಪ್ರಕರ್ಷೇಣ ಕಂಪಯಂತಿ । ವನಸ್ಪತೀನ್ ವಟಾಂಶ್ವಾಶ್ವತ್ಥಾದೀಂಶ್ಚ ವಿಂಚಂತಿ । ಪರಸ್ಪರವಿಯುಕ್ತಾನ್ಕುರ್ವಂತಿ । ಹೇ ಮರುತೋ ದೇವಾಸೋ ದೇವಾಃ ಸರ್ವಯಾ ವಿಶಾ ಪ್ರಜಯಾ ಸಹಿತಾ ಯೂಯಂ ಪ್ರೋ ಆರತ । ಪ್ರಕರ್ಷೇಣೈವ ಸರ್ವತೋ ಗಚ್ಛತ । ತತ್ರ ದೃಷ್ಟಾಂತಃ । ದುರ್ಮದಾ ಇವ । ಯಥಾ ಮದೋನ್ಮತ್ತಾಃ ಸ್ವೇಚ್ಛಯಾ ಸರ್ವತಃ ಕ್ರೀಡಂತಿ ತದ್ವತ್ ॥ ವೇಪಯಂತಿ । ಟುವೇಪೃ ಕಂಪನೇ । ವೇಪಮಾನಾನ್ ಪ್ರಯುಂಜತೇ ।

**ಹೇತುಮಣ್ಣಿಚ್ । ಏಂಚಂತಿ । ಏಚಿರ್ ಪೃಥಗ್ಭಾವೇ । ರುಧಾದಿತ್ವಾತ್ ಶ್ನಮ್ । ಶ್ನಸೋರಲ್ಲೋಪ ಇತ್ಯಕಾರಲೋಪಃ । ವನಸ್ಪತೀನ್ । ವನಾನಾಂ ಪತಯೋ ವನಸ್ಪತಯಃ । ಪಾರಸ್ಕರಾದಿತ್ವಾತ್ಸುಟ್ । ವನಸ್ಪತಿಶಬ್ದಾವಾದ್ಯುದಾತ್ತೌ । ಉಭೇ ವನಸ್ಪತ್ಯಾದಿಷು ಯುಗಪದಿತಿ ಪೂರ್ವೋತ್ತರಪದಯೋರ್ಯುಗಪತ್ಪ್ರಕೃತಿಸ್ವರತ್ವಂ । ಆರತ । ಋು ಗತೌ । ಲಙಿ ಮಧ್ಯಮಬಹುವಚನೇ ಬಹುಲಂ ಛಂದಸೀತಿ ಶಪೋ ಲುಗಭಾವಃ । ಯದ್ವಾ ಲುಙ್ । ಸರ್ತಿಶಾಸ್ತ್ಯರ್ತಿಭ್ಯಶ್ಚ । ಪಾ. ೩-೧-೫೬ । ಇತ್ಯಙ್ । ಆಡಜಾದೀನಾಮಿತ್ಯಾಡಾಗಮಃ । ಆಟಶ್ಚ । ಪಾ. ೬-೧-೯೦ । ಇತಿ ವೃದ್ಧಿಃ । ದೇವಾಸಃ । ಅಮಂತ್ರಿತಾದ್ಯುದಾತ್ತತ್ವಂ । ಸರ್ವಯಾ । ಸರ್ವಸ್ಯ ಸುಪಿ । ಪಾ. ೬-೧-೧೯೧ । ಇತ್ಯಾದ್ಯುದಾತ್ತತ್ವಂ । ವಿಶಾ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ॥೧೮॥**

॥ ಪ್ರತಿಪದಾರ್ಥ ॥

(**ಮರುತಃ**—ಮರುತ್ತುಗಳು) । **ಪರ್ವತಾನ್**—ಮೇರು ಹಿಮವದಾದಿಪರ್ವತಗಳನ್ನು । **ಪ್ರವೇಪಯಂತಿ**—ಚೆನ್ನಾಗಿ ಕಂಪಿಸುವಂತೆ ಮಾಡುತ್ತಾರೆ । **ವನಸ್ಪತೀನ್**—(ಒಟ್ಟಿಗೆ ಬೆಳೆದಿರುವ) ಆಲ, ಅರಳಿ ಮುಂತಾದ ವನವೃಕ್ಷಗಳನ್ನು । **ವಿ ಏಂಚಂತಿ**—ಬೇರೆ ಬೇರೆಯಾಗುವಂತೆ ಮಾಡುತ್ತಾರೆ । **ದೇವಾಸಃ, ಮರುತಃ**—ದೇವತಾರೂಪರಾದ ಎಲೈ ಮರುತ್ತುಗಳೇ । **ಸರ್ವಯಾ ವಿಶಾ**—( ನಿಮ್ಮ) ಸಮಸ್ತ ಪ್ರಜಾಸಮುದಾಯದೊಂದಿಗೆ ಕೂಡಿಕೊಂಡು । **ದುರ್ಮದಾ ಇವ**—ಆವೇಶದಿಂದ ಕೂಡಿದವರು ಸ್ವತಂತ್ರರಾಗಿ ಸಂಚರಿಸಿ ನಲಿದು ಕ್ರೀಡಿಸುವಂತೆ । **ಪ್ರೋ ಆರತ**—ಸುತ್ತಲೂ ಸ್ವತಂತ್ರರಾಗಿ ಸಂಚರಿಸಿ.

ಭಾವಾರ್ಥ

ಮರುದ್ದೇವತೆಗಳು ಅಚಲಗಳಾದ ಮೇರುಹಿಮವದಾದಿಪರ್ವತಗಳನ್ನು ಚೆನ್ನಾಗಿ ಕಂಪಿಸುವಂತೆ ಮಾಡುತ್ತಾರೆ. ಒಟ್ಟಿಗೆ ಬೆಳೆದಿರುವ ಆಲ, ಅರಳಿ ಮುಂತಾದ ವನವೃಕ್ಷಗಳನ್ನು ಬೇರೆಬೇರೆಯಾಗುವಂತೆ ಮಾಡುತ್ತಾರೆ. ಎಲೈ ದೇವತಾರೂಪರಾದ ಮರುತ್ತುಗಳೇ ನೀವು ಸ್ವತಂತ್ರರು. ಮದೋನ್ಮತ್ತರಾದ ಜನರು ಸ್ವೇಚ್ಛೆಯಿಂದ ನಲಿದು ಕ್ರೀಡಿಸುವಂತೆ ನೀವೂ ಸಹ ಸುತ್ತಲೂ ವಿಹರಿಸುತ್ತಾ ಸಂಚರಿಸಿ.

English Translation

They make the mountains tremble ; They slit as under the forest trees ; divine Maruts go wether you wlll with all your progeny like men in to vicated.

ವಿಶೇಷವಿಷಯಗಳು

**ಮುಖ್ಯಾಭಿಪ್ರಾಯವು**— ಮರುತ್ತುಗಳ ಶಕ್ತಿಯು ಅಪಾರವಾದುದರಿಂದ ಅವರು ಪರ್ವತಗಳನ್ನು ಅಲ್ಲಾಡುವಂತೆ ಮಾಡುವರು. ದಟ್ಟವಾಗಿ ಬೆಳೆದಿರುವ ವೃಕ್ಷಾದಿಗಳೂ ಗಾಳಿಯ ಹೊಡೆತಕ್ಕೆ ಸಿಕ್ಕಿ ಬೇರೆಬೇರೆ

ಯಾಗುವವು. ಎಲೈ ದೇವತೆಗಳಾದ ಮರುತ್ತುಗಳೇ ನಿಮ್ಮ ಗುಂಪಿನಲ್ಲಿರುವ ಸಮಸ್ತರೊಡನೆಯೂ ಕೂಡಿ ಮದೋನ್ಮತ್ತನಾದ ಮನುಷ್ಯನು ಯಾವ ತಡೆಯೂ ಇಲ್ಲದೆ ಮನಸ್ಸು ಬಂದಂತೆ ಸಂಚರಿಸುವಂತೆ ನೀವು ಯಾವ ಪ್ರತಿಬಂಧಕವೂ ಇಲ್ಲದೆ ಸ್ವೇಚ್ಛೆಯಾಗಿ ವಿಹರಿಸಿ.

**ದುರ್ಮದಾ ಇವ**— ಮದೋನ್ಮತ್ತರಾದ ಮನುಷ್ಯರಂತೆ ಮಾದಕದ್ರವ್ಯವನ್ನು ಪಾನಮಾಡಿ ಬುದ್ಧಿ ಸ್ವಾಧೀನವಿಲ್ಲದೆ ಎಲ್ಲೆಂದರೆ ಅಲ್ಲಿ ಸಂಚರಿಸುವ ಮನುಷ್ಯರು. ಅಥವಾ ಅಹಂಕಾರದಿಂದಲೂ ಧೂರ್ತತನದಿಂದಲೂ ಗರ್ವಿಸಿ ಯಾರನ್ನೂ ಲಕ್ಷ್ಯಮಾಡದೆ ಮನಸ್ಸು ಬಂದಂತೆ ವಿಹರಿಸುವ ಜನರು.

**ಸರ್ವಯಾ ವಿಶಾ**—ಸಮಸ್ತ ಪ್ರಜೆಯಿಂದ ; ಇಲ್ಲಿ ಸಮಸ್ತ ಪ್ರಜೆಯೆಂದರೆ ಮರುದ್ದೇವತೆಗಳ ಅನುಚರರು. ಅಥವಾ ನಲವತ್ತೊಂಭತ್ತು ಮಂದಿಗಳೂ ಒಟ್ಟುಗೂಡಿ ಆಗುವ ಮರುತ್ಸಮೂಹವು.

ವ್ಯಾಕರಣಪ್ರಕ್ರಿಯಾ

**ಪ್ರ**— **ಉಪಸರ್ಗಾಶ್ಚಾಭಿವರ್ಜಂ** ಎಂದು ಆದ್ಯುದಾತ್ತ.

**ವೇಪಯನ್ತಿ**—ಟುವೇಪೃ ಕಂಪನೇ ೧ನೇಗಣದ ಧಾತು. ಆತ್ಮನೇಪದಿ. ವೇಪತೇ ಎಂದು ಲಟ್ಟಿನಲ್ಲಿ ರೂಪ 'ಪರ್ವತಾಃ ವೇಪಂತೇ' ಎಂದರೆ ಪರ್ವತಗಳು ಅಲ್ಲಾಡುವುವು. ಮರುತ್ತುಗಳು ಪರ್ವತಗಳನ್ನು ಅಲ್ಲಾಡುವಂತೆ ಪ್ರೇರಿಸುವುವು ಎಂದು ಅರ್ಥವನ್ನು ವಿವಕ್ಷಿಸಬೇಕು. **ಹೇತುಮತಿ ಚ** (ಪಾ. ಸೂ. ೩-೧-೨೬) ಹೇತುಃ=ಪ್ರಯೋಜಕನು ಅಸ್ಯ ಅಸ್ತಿ ಆಧಾರನಾಗಿ ಈ ವ್ಯಾಪಾರಕ್ಕೆ ಇರುವನು, ಎಂದು ವಿಗ್ರಹ. ಏವಂಚ ಪ್ರಯೋಜಕನಲ್ಲಿರುವ ಪ್ರೇರಣಾದಿವ್ಯಾಪಾರವು ವಾಚ್ಯವಾದಾಗ ಧಾತುಗಳ ಮುಂದೆ ಣಿಚ್ ಬರುತ್ತೆ ಎಂದು ಸೂತ್ರಾರ್ಥ. ಕರ್ತೃವಿಗೆ ಯಾರು ಪ್ರಯೋಜಕನೋ ಎಂದರೆ ಪ್ರೇರಕನೋ ಅವನಿಗೆ ಹೇತು ಎಂದು ಪಾಣಿನಿಮಹರ್ಷಿಗಳ ಸಂಕೇತ. ಇದರಿಂದ ಣಿಚ್ ಬಂದರೆ ವೇಪ್+ಇ, ಫಲವು ಮತ್ತೊಬ್ಬರಿಗೆ ಸೇರುವಾಗ **ಣಿಚಶ್ಚ** (ಪಾ. ಸೂ. ೧-೩-೭೪) ಎಂದು ಆತ್ಮನೇಪದ ಬರುವುದಿಲ್ಲ. ಪರಸ್ಮೈಪದದಲ್ಲಿ ಲಟ್ಟಿಗೆ ಝಿ. ಅನ್ತಾದೇಶ, ಶಪ್ ಗುಣಾಯಾದೇಶಗಳು ವೇಪಯನ್ತಿ ಎಂದು ಆಗುತ್ತದೆ.

**ವಿಞ್ಚನ್ತಿ**—ವಿಚಿರ್ ಪೃಥಗ್ಭಾವೇ ಧಾತು. ಝಿ ಗೆ ಅನ್ತ್ ಆದೇಶ. **ರುಧಾದಿಭ್ಯಃ ಶ್ನಮ್** (ಪಾ. ಸೂ ೩-೧-೭೮) ಎಂದು ಶ್ನಮ್. ವಿನಚ್+ಅನ್ತಿ, **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಕಿತ್ ಅಥವಾ ಙಿತ್ ಆದ ಸಾರ್ವಧಾತುಕ ಪರದಲ್ಲಿದ್ದರೆ ಶ್ನ-ಅಸ್ ಧಾತು ಇವುಗಳ ಅಕಾರಕ್ಕೆ ಲೋಪ ಬರುತ್ತೆ ಎಂದು ಶ್ನಪ್ರತ್ಯಯದ ಅಕಾರಕ್ಕೆ ಲೋಪ. ವಿನ್‌ಚ್+ಅನ್ತಿ. **ನಶ್ಚಾಪದಾನ್ತಸ್ಯಝಲಿ** (ಪಾ. ಸೂ. ೮-೩-೨೪) ಎಂದು ಝಲ್ ವರ್ಣ ಪರದಲ್ಲಿದ್ದರೆ ಪದಾಂತದಲ್ಲಿಲ್ಲದ ನಕಾರ ಮಕಾರಗಳಿಗೆ ಅನುಸ್ವಾರ ಬರುತ್ತೆ ಎಂದು ನ್‌ಗೆ ಅನುಸ್ವಾರ. ವಿಂಚ್+ಅನ್ತಿ **ಅನುಸ್ವಾರಸ್ಯ ಯಯಿ ಪರಸವರ್ಣಃ** (ಪಾ. ಸೂ. ೮-೪-೫೮) ಎಂದು ಚ್‌ಗೆ ಸವರ್ಣವೂ ಅನುನಾಸಿಕವೂ ಆದ ಚವರ್ಗದ ಐದನೆಯ ಅಕ್ಷರ ಬರುತ್ತೆ. ವಿಞ್ಚನ್ತಿ ಎಂದು ರೂಪವಾಗುತ್ತೆ

**ವನಸ್ಪತೀನ್**—ವನಾನಾಂ ಪತಯಃ ತಾನ್ ಎಂದು ವಿಗ್ರಹ. **ಪಾರಸ್ಕರ ಪ್ರಭೃತೀನಿ ಚ ಸಂಜ್ಞಾಯಾಂ** (ಪಾ. ಸೂ.೬-೧-೧೫೭) ಪಾರಸ್ಕರಾದಿಗಣಕ್ಕೆ ಸೇರಿದ ಶಬ್ದಗಳು ಸುಟ್ ಆಗಮವುಳ್ಳವುಗಳಾಗಿ ಸಂಜ್ಞೆ ತೋರುವಾಗ ನಿಪಾತಿಸಲ್ಪಡುತ್ತವೆ. ಪಾರಸ್ಕರಾದಿಗಣವು ಆಕೃತಿಗಣ. ಇದರಿಂದ ಪತಿಶಬ್ದಕ್ಕೆ ಸುಟ್ ಬಂದರೆ ವನಸ್ಪತಿಎಂದು ಆಗುತ್ತದೆ. **ನಬ್ವಿಷಯಸ್ಯಾನಿ ಸಂತಸ್ಯ** (ಫಿ. ಸೂ. ೨೬) ಎಂಗು ನಪುಂಸಕಲಿಂಗವಾದ ವನಶಬ್ದವು ಆಗ್ಯುದಾತ್ತ. **ಪಾತೇರ್ಡತಿಃ** (ಉ. ಸೂ. ೪-೫೭) ಎಂದು ಡತಿಪ್ರತ್ಯಯಾಂತವಾದ ಪತಿಶಬ್ದವು ಪ್ರತ್ಯಯಸ್ವರದಿಂದ ಆದ್ಯುದಾತ್ತ, ಇವೆರಡಕ್ಕೂ ಸಮಾಸ ಬಂದಮೇಲೆ **ಉಭೇ ವನಸ್ಪತ್ಯಾದಿಷು ಯುಗಪತ್** (ಪಾ. ಸೂ. ೬-೨-೧೪೦) ವನಸ್ಪತ್ಯಾದಿ ಗಣಕ್ಕೆ ಸೇರಿದ ಶಬ್ದಗಳಲ್ಲಿ ಪೂರ್ವೋತ್ತರಪದಗಳೆರಡಕ್ಕೂ ಒಂದೇ ಕಾಲದಲ್ಲಿ ಪ್ರಕೃತಿಸ್ವರ ಬರುತ್ತೆ ಎಂದು ಉಭಯಪದಪ್ರಕೃತಿಸ್ವರ ಬರುತ್ತದೆ

**ಆರತ**—ಋ ಗತೌ, ಲಙ್, ಮಧ್ಯಮಪುರುಷ ಬಹುವಚನ ಥ. ಅದಕ್ಕೆ ತ ಆದೇಶ. ಜುಹೋತ್ಯಾದಿ ಯಾದ್ದರಿಂದ ಶಪ್‌ಗೆ ಶ್ಲು ಬರಬೇಕು. ಆದರೂ **ಬಹುಲಂ ಛಂದಸಿ** (ಪಾ. ಸೂ. ೨-೪-೭೬) ಎಂದು ಶಪ್‌ಗೆ ಶ್ಲು ಬರುವುದಿಲ್ಲ. ಋ+ಅ+ತ, ಆಡಾಗಮ, **ಸಾರ್ವಧಾತುಕ—,** ಎಂದು ಗುಣ. ಆ+ಅರ್+ತ, **ಆಟಶ್ಚ** ಎಂದು ವೃದ್ಧಿ, ಆರತ ಎಂದು ಆಗುತ್ತೆ. ಅಥವಾ ಋ ಧಾತು ಮುಂದೆ ಲುಙ್, ಮಧ್ಯಮಬಹುವಚನದ ಥಗೆ ತ ಆದೇಶ. ಚ್ಲಿ, **ಸರ್ತಿ ಶಾಸ್ತ್ಯರ್ತಿಭ್ಯಶ್ಚ** (ಪಾ. ಸೂ. ೩-೧-೫೬) ಈ ಧಾತುಗಳ ಮುಂದೆ ಇರುವ ಚ್ಲಿಗೆ ಅಙ್ ಬರುತ್ತೆ, ಎಂದು ಅಙ್. **ಋದೃಶೋಽಙಿಗುಣಃ** ( ಪಾ. ೭-೪-೧೬) ಅಙ್ ಪರದಲ್ಲಿದ್ದರೆ ಋವರ್ಣಾಂತ ಧಾತುಗಳಿಗೂ, ದೃಶ್ ಧಾತುವಿಗೂ ಗುಣ ಬರುತ್ತೆ ಎಂದು ಗುಣ. ಅರ್+ಅ+ತ. **ಆಡಜಾದೀನಾಮ್** (ಪಾ. ಸೂ. ೬-೪-೭೨) ಅಜಾದಿಯಾದ ಧಾತುಗಳಿಗೆ ಲುಙ್ ಲಙ್ ಲೃಙ್‌ಗಳು ಪರದಲ್ಲಿದ್ದರೆ ಆಟ್ ಆಗಮ ಬರುತ್ತೆ ಎಂದು ಆಟ್ ಬಂದರೆ ಆ+ಅರ್+ಅ+ತ. **ಆಟಶ್ಚ** (ಪಾ. ಸೂ. ೬-೧-೯೦) ಆಟ್‌ಗೆ ಅಚ್ ಪರದಲ್ಲಿದ್ದರೆ ಪೂರ್ವಪರಗಳಿಗೆ ವೃದ್ಧಿಯು ಏಕಾದೇಶವಾಗಿ ಬರುತ್ತೆ ಎಂದು ವೃದ್ಧಿ ಬರುತ್ತೆ. ಆರತ ಎಂದು ರೂಪವಾಗುತ್ತೆ. ಈ ಪಕ್ಷದಲ್ಲಿ ಛಾಂದಸತ್ವಾ ಶ್ರಯಣಪರಿಕ್ಲೇಶ ಇಲ್ಲ. ಈ ರೂಪವನ್ನು ಲೋಕದಲ್ಲಿಯೂ ಪ್ರಯೋಗಿಸಬಹುದು. ಮೊದಲು ಹೇಳಿದಂತೆ ಪ್ರಕ್ರಿಯೆಯನ್ನು ಹೇಳಿದರೆ ಅದು ವೇದದಲ್ಲಿ ಮಾತ್ರ ಸಾಧುವಾಗುತ್ತೆ.

**ದೇವಾಸಃ**— ಸಂಬೋಧನಪ್ರಥಮಾಬಹುವಚನಾಂತ. **ಆಜ್ಜಸೇರಸುಕ್** ಎಂದು ಅಸುಗಾಗಮ. ಚತುರ್ಥಪಾದಾದಿಯಲ್ಲಿರುವುದರಿಂದ ಆಷ್ಟಮಿಕಾಮನ್ತ್ರಿತಾನುದಾತ್ತ ಬರುವುದಿಲ್ಲ. **ಆಮನ್ತ್ರಿತಸ್ಯ ಚ** ಎಂಬ ಆರನೇ ಅಧ್ಯಾಯದ ಸೂತ್ರದಿಂದ ಆದ್ಯುದಾತ್ತ ಬರುತ್ತೆ.

**ಸರ್ವಯಾ—ಸರ್ವಸ್ಯ ಸುಪಿ** (ಪಾ. ಸೂ. ೬-೧-೧೯೧) ಸುಪ್ ಪರದಲ್ಲಿರುವಾಗ ಸರ್ವಶಬ್ದದ ಆದಿಯು ಉದಾತ್ತವಾಗುತ್ತದೆ ಎಂದು ಆದ್ಯುದಾತ್ತ ಬರುತ್ತದೆ.

**ವಿಶಾ** - ವಿಶ ಪ್ರವೇಶನೇ ಧಾತು. ಕ್ವಿಪ್, ತೃತೀಯಾಏಕವಚನ ಟಾಪ್ರತ್ಯಯ. **ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** ಎಂದು ವಿಭಕ್ತಿಗೆ ಆಗ್ಯುದಾತ್ತ ಬರುತ್ತದೆ. ॥೫॥

॥ ಸಂಹಿತಾಪಾಠಃ

ಉಪೋ ರಥೇಷು ಪೃಷತೀರಯುಗ್ಧ್ವಂ ಪ್ರಷ್ಟಿರ್ವಹತಿ ರೋಹಿತಃ ।
ಆ ವೋ ಯಾಮಾಯ ಪೃಥಿವೀ ಚಿದಶ್ರೋದಬೀಭಯನ್ತ ಮಾ-
ನುಷಾಃ ॥ ೬ ॥

ಉಪೋ ಇತಿ । ರಥೇಷು । ಪೃಷತೀಃ । ಅಯುಗ್ಧ್ವಂ । ಪ್ರಷ್ಟಿಃ । ವಹತಿ ।
ರೋಹಿತಃ ।
ಆ । ವಃ । ಯಾಮಾಯ । ಪೃಥಿವೀ । ಚಿತ್ । ಅಶ್ರೋತ್ । ಅಬೀಭಯನ್ತ ।
ಮಾನುಷಾಃ ॥ ೬ ॥

ಸಾಯಣಭಾಷ್ಯಂ

ಹೇ ಮರುತೋ ರಥೇಷು ಭವದೀಯೇಷು ಪೃಷತೀರ್ಬಿಂದುಯುಕ್ತಾ ಮೃಗೀರುಪೋ ಸಾಮೀಪ್ಯೇನೈವಾಯುಗ್ಧ್ವಂ । ಯೋಜಿತವಂತಃ । ಪ್ರಷ್ಟಿರೇತತ್ಸಂಜ್ಞಕೋ ವಾಹನತ್ರಯಮಧ್ಯವರ್ತೀ ಮೃಗವಿಶೇಷೋ ರೋಹಿತೋ ಮೃಗಾವಾಂತರಜಾತಿರ್ಲೋಹಿತವರ್ಣೋ ವಹತಿ । ರಥಂ ನಯತಿ । ವೋ ಯುಷ್ಮಾಕಂ ಯಾಮಾಯ ಗಮನಾಯ ಪೃಥಿವೀ ಚಿತ್ ಅಂತರಿಕ್ಷಮಪ್ಯಾಶ್ರೋತ್ । ಆಭಿಮುಖ್ಯೇನಾಶೃಣೋತ್ । ಅನುಜಾನಾತೀತ್ಯರ್ಥಃ । ಪೃಥಿವೀತ್ಯಂತರಿಕ್ಷನಾಮ । ಪೃಥಿವೀ ಭೂಃ ಸ್ವಯಂಭ್ವಿತಿ ತನ್ನಾಮಸು ಪಾಠಾತ್ । ಮಾನುಷಾಃ ಭೂಲೋಕವರ್ತಿನಃ ಪುರುಷಾಃ ಅಬೀಭಯಂತ । ಸ್ವಯಂ ಭೀತಾಃ ಸಂತೋಽನ್ಯೇಷಾಮಪಿ ಭೀತಿಮುತ್ಪಾದಿತವಂತಃ ॥ ಉಪೋ ಇತಿ ನಿಪಾತದ್ವಯಸಮುದಾಯಾತ್ಮಕಮನ್ಯನ್ನಿಪಾತಾಂತರಂ । ಓತ್ । ಪಾ. ೧-೧-೧೫ । ಇತಿಪ್ರಗೃಹ್ಯತ್ವಂ । ಅಯುಗ್ಧ್ವಂ । ಲುಙಿ ಝಲೋ ಝಲಿ । ಪಾ. ೮-೨-೨೬ । ಇತಿ ಸಕಾರಸ್ಯ ಲೋಪಃ । ಚೋಃ ಕುರಿತಿ ಕುತ್ವಂ । ರೋಹಿತಃ । ರುಹೇ ರಶ್ಚ ಲೋ ವಾ । ಉ. ೩-೯೪ । ಇತೀತನ್ಪ್ರತ್ಯಯಾಂತಃ । ನಿತ್ತ್ವಾದಾದ್ಯುದಾತ್ತಃ । ಯಾಮಾಯ । ಯಮೇರ್ಭಾವೇ ಘಞ್ । ಕರ್ಷಾತ್ವತ ಇತ್ಯಂತೋದಾತ್ತತ್ವೇ ಪ್ರಾಪ್ತೇ ವೃಷಾದಿಷು ಪಾಠಾದಾದ್ಯುದಾತ್ತತ್ವಂ । ಅಶ್ರೋತ್ । ಶ್ರು ಶ್ರವಣೇ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಅಬೀಭಯಂತ । ಞಿಭೀ ಭಯೇ । ಅಸ್ಮಾಣ್ಣ್ಯಂತಾಲ್ಲುಙಿ ಭೀಸ್ಮ್ಯೋರ್ಹೇತುಭಯೇ । ಪಾ. ೧-೩-೬೮ । ಇತ್ಯಾತ್ಮನೇ-

**ಪದಂ । ಬಿಭೇತೇರ್ಹೇತುಭಯೇ ಷುಕ್ । ಪಾ. ೭-೩-೪೦ । ಇತಿ ಷುಕ್ ಪ್ರಾಪ್ನೋತಿ । ತನ್ನ ಕ್ರಿಯತೇ । ಆಗಮಾನುಶಾಸನಸ್ಯಾನಿತ್ಯತ್ವಾತ್ । ಣೌ ಚಙ್ಯುಪಧಾಯಾ ಹ್ರಸ್ವತ್ವಾದಿ । ಪಾ.೭-೪-೧ ॥**

ಪ್ರತಿಪದಾರ್ಥ

(**ಮರುತಃ**—ಎಲೈ ಮರುತ್ತುಗಳೇ) । **ರಥೇಷು**—ನಿಮ್ಮ ರಥಗಳಲ್ಲಿ । **ಪೃಷತೀಃ**—ಬಿಂದುರೂಪವಾದ ಮಚ್ಚೆಗಳುಳ್ಳ ಹೆಣ್ಣುಜಿಂಕೆಗಳನ್ನು । **ಉಪೋ**—ಒತ್ತಾಗಿ ಸೇರಿಸಿ । **ಅಯುಗ್ಧ್ವಂ**— ನೊಗಕ್ಕೆ ಕಟ್ಟಿದ್ದೀರಿ (ಅವುಗಳಲ್ಲಿ) । **ರೋಹಿತಃ**—ಕೆಂಪು ಬಣ್ಣವುಳ್ಳದ್ದೂ । **ಪ್ರಷ್ಟಿಃ**—(ವಾಹನತ್ರಯದ ಮಧ್ಯೆ ಕಟ್ಟೆರತಕ್ಕ) ಪ್ರಷ್ಟಿ ಯೆಂಬ ಮೃಗವೂ । **ವಹತಿ**—(ರಥವನ್ನು) ಎಳೆಯಲು ಸಹಾಯ ಮಾಡುತ್ತದೆ । **ವಃ**—ನಿಮ್ಮ । **ಯಾಮಾಯ**—ಗಮನಕ್ಕೆ । **ಪೃಥಿವೀಚಿತ್**—ಅಂತರಿಕ್ಷವೂಕೂಡ । **ಆ ಅಶ್ರೋತ್**—ಅನುಜ್ಞೆ (ಅವಕಾಶ) ಯನ್ನು ಕೊಡುತ್ತದೆ । **ಮಾನುಷಾಃ**—ಮನುಷ್ಯರು (ನಿಮ್ಮ ಗಮನದಿಂದ) । **ಅಬೀಭಯಂತ**—ಭಯಪಡುತ್ತಾರೆ. ಇತರರಿಗೂ ಭಯ ವನ್ನುಂಟು ಮಾಡುತ್ತಾರೆ.

॥ ಭಾವಾರ್ಥ ॥

ಎಲೈ ಮರುತ್ತುಗಳೇ ನಿಮ್ಮ ರಥಕ್ಕೆ ಮಚ್ಚೆಗಳಿಂದ ಕೂಡಿದ ಹೆಣ್ಣುಜಿಂಕೆಗಳನ್ನು ಹೂಡಿದ್ದೀರಿ. ಅವುಗಳ ಮಧ್ಯದಲ್ಲಿರುವ ಕೆಂಪುಬಣ್ಣದ ಪ್ರಷ್ಟಿ ಎಂಬ ಮೃಗವೂ ನಿಮ್ಮ ವಾಹನವನ್ನು ಎಳೆಯುವುದು. ನಿಮ್ಮ ಗಮನಕ್ಕೆ ಅಂತರಿಕ್ಷವೂ ಅವಕಾಶವನ್ನು ಈವುದು. ವೇಗವಾಗಿ ಬರುವ ನಿಮ್ಮ ಗಮನವನ್ನು ಕಂಡು ಮನುಷ್ಯರು ಭಯ ಪಡುವುದಲ್ಲದೆ ತಮ್ಮ ಜತೆಯಲ್ಲಿರುವವರಿಗೂ ಭಯವನ್ನುಂಟುಮಾಡುತ್ತಾರೆ.

English Translation

You have harnessed the spotted deer to your chariot; the red deer yoked between them helps to drag the car; the firmament makes way for you and men tremble through fear at your approach.

ವಿಶೇಷ ವಿಷಯಗಳು

**ಪೃಷತೀಃ**—ಮರುದ್ದೇವತೆಗಳ ರಥಕ್ಕೆ ಕುದುರೆಗಳನ್ನು ಹೂಡುವುದಿಲ್ಲ. ಪೃಷತೀಃ ಎಂಬ ಮಚ್ಚೆಗಳುಳ್ಳ ಹೆಣ್ಣುಜಿಂಕೆಗಳನ್ನು ಹೂಡುವರು. ಈ ವಿಷಯದಲ್ಲಿ ಯಾಸ್ಕರು ತಮ್ಮ ನಿರುಕ್ತದಲ್ಲಿ ದೇವತೆಗಳ ವಾಹನಗಳನ್ನು ಹೇಳುವ ಸಂದರ್ಭದಲ್ಲಿ—

**ಹರೀ ಇಂದ್ರಸ್ಯ । ರೋಹಿತೋಽಗ್ನೇಃ । ಹರಿತ ಆದಿತ್ಯಸ್ಯ । ರಾಸಭಾವಶ್ವಿನೋಃ । ಅಜಾಃ ಪೂಷ್ಣಃ । ಪೃಷತ್ಯೋಮರುತಾಂ । ಅರುಣ್ಯೋ ಗಾವ ಉಷಸಃ । ಶ್ಯಾವಾಃ ಸವಿತುಃ । ವಿಶ್ವರೂಪಾ**

**ಬೃಹಸ್ಪತೇಃ । ನಿಯುತೋ ವಾಯೋರಿತಿ ।** (ನಿ. ೨-೩೮) ಎಂದು ಹೇಳಿರುವುದರಿಂದ ಮರುದ್ದೇವತೆಗಳ ರಥಾಶ್ವಗಳಿಗೆ ಪೃಷತೀಃ ಎಂದರೆ ಮಚ್ಚೆಗಳುಳ್ಳ ಎರಡು ಹೆಣ್ಣು ಜಿಂಕೆಗಳು.

**ರೋಹಿತಃ**—ಜಿಂಕೆಗಳಲ್ಲಿ ಕೆಂಪುವರ್ಣದ ಒಂದು ಜಾತಿವಿಶೇಷವು. ಪೃಷತೀ ಎಂಬ ಮಚ್ಚೆಗಳುಳ್ಳ ಜಿಂಕೆಗಳ ಜಾತಿಗೆ ಸೇರಿದ ಬೇರೊಂದು ಜಾತಿಯ ಮೃಗವಿಶೇಷವು.

**ಪೃಥಿವೀಚಿತ್ ಅಶ್ರೋತ್**—ಅಂಬರಂ, ವಿಯತ್ ಮೊದಲಾದ ಹದಿನಾರು ಅಂತರಿಕ್ಷನಾಮಗಳ ಮಧ್ಯದಲ್ಲಿ ಪೃಥಿವೀಶಬ್ದವು ಪಠಿತವಾಗಿರುವುದರಿಂದ ಪೃಥಿವೀ ಎಂದರೆ ಇಲ್ಲಿ ವಾಯುಮಾರ್ಗವಾದ ಅಂತರಿಕ್ಷವು. ಚಿತ್ ಅಶ್ರೋತ್ ಎಂದರೆ ಅನುಜಾನಾತಿ, ಅನುಜ್ಞೆ ಅಥವಾ ಅವಕಾಶವನ್ನು ಕೊಡುವುದು ಎಂದು ಅಭಿಪ್ರಾಯವು

ವ್ಯಾಕರಣಪ್ರಕ್ರಿಯಾ

**ಉಪೋ**—ಉಪ-ಉ ಎಂಬ ಎರಡು ನಿಪಾತಗಳಿಗೆ **ಆದ್ಗುಣಃ** ಎಂದು ಗುಣ ಬಂದರೆ ಉಪೋ ಎಂದು ರೂಪವಾಗುತ್ತೆ. ಹೀಗೆ ಎರಡು ನಿಪಾತಗಳ ಸಮುದಾಯರೂಪವಾದ ಬೇರೊಂದು ಹೊಸನಿಪಾತ ಉಪೋ ಎಂಬುದು. **ಓತ್** (ಪಾ. ಸೂ. ೧-೧-೧೫) ಓಕಾರಾಂತವಾದ ನಿಪಾತವು ಪ್ರಗೃಹ್ಯಸಂಜ್ಞೆಯನ್ನು ಹೊಂದುತ್ತೆ ಎಂಬುದರಿಂದ ಪ್ರಗೃಹ್ಯಸಂಜ್ಞೆ ಇದೆ ಎಂದು ವೇದಭಾಷ್ಯದಲ್ಲಿದೆ ಆದರೆ ಈ ಪ್ರಗೃಹ್ಯಸಂಜ್ಞೆ ಬಂದುದಕ್ಕೆ ಇಲ್ಲಿ ಪ್ರಯೋಜನವಿಲ್ಲ. ಸ್ವರವು ಪರದಲ್ಲಿದ್ದರೆ **ಪ್ಲುತಪ್ರಗೃಹ್ಯಾ ಅಚಿ ನಿತ್ಯಮ್** (ಪಾ. ಸೂ. ೬-೧-೧೨೫) ಅಚ್ ಪರದಲ್ಲಿದ್ದರೆ ಪ್ಲುತ ಮತ್ತು ಪ್ರಗೃಹ್ಯಗಳು ಪ್ರಕೃತಿಭಾವವನ್ನು ಹೊಂದುವುವು ಎಂದು ಹೇಳಿದೆ. ಇಲ್ಲಿ ಸ್ವರಪರದಲ್ಲಿಲ್ಲವಾದ್ದರಿಂದ ಪ್ರಗೃಹ್ಯಸಂಜ್ಞೋಪಪಾದನೆಗೆ ಫಲವಿಲ್ಲ.

**ಅಯುಗ್ಧ್ವಮ್**—ಯುಜಿರ್ ಯೋಗೇ, ಇರ್‌ಗೆ ಇತ್ಸಂಜ್ಞೆ, ಲುಙ್, ಚ್ಲಿ, **ಇರಿತೋವಾ** (೩-೧-೫೭) ಇರ್ ಇತ್ಸಂಜ್ಞೆ ಹೊಂದಿದ್ದರೆ ಆ ಧಾತುವಿನ ಮುಂದೆ ಇರುವ ಚ್ಲಿಗೆ ಅಙ್ ವಿಕಲ್ಪವಾಗಿ ಬರುತ್ತೆ ಎಂದು ಅಙ್ ವಿಕಲ್ಪಿತವಾಗಿದೆ. **ಚ್ಲೇಸ್ಸಿಚ್** ಎಂದು ಸಿಚ್. ಅಡಾಗಮ ಅಯುಜ್+ಸ್+ಲುಙ್+ಧ್ವಮ್. **ಝಲೋಝಲಿ** (ಪಾ. ಸೂ. ೮-೨-೨೬) ಝಲ್ ಪರದಲ್ಲಿರುವಾಗ ಝಲ್ಲಿಗಿಂತಲೂ ಪರದಲ್ಲಿರುವ ಸ್‌ಗೆ ಲೋಪ ಬರುತ್ತೆ ಎಂದು ಸ್‌ಗೆ ಲೋಪ. ಅಯುಜ್+ಧ್ವಂ **ಚೋಃ ಕುಃ** (ಪಾ. ಸೂ. ೮-೨-೩೦) ಚವರ್ಗಕ್ಕೆ ಕವರ್ಗವು, ಝಲ್ ಪರವಿದ್ದರೂ ಪದಾಂತವಿಷಯದಲ್ಲಿಯೂ ಬರುತ್ತೆ ಎಂದು ಜ್, ಗೆ ಗ್ ಬರುತ್ತದೆ. ಅಯುಗ್ಧ್ವಮ್ ಎಂದು ಆಗುತ್ತದೆ.

**ರೋಹಿತಃ**—ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ. **ರುಹೇರಶ್ಚ ಲೋವಾ** (ಉ. ಸೂ. ೩-೭೪೪) ಈ ಧಾತುವಿನ ಮುಂದೆ ಇತನ್ ಪ್ರತ್ಯಯ ಬರುತ್ತೆ. ರೇಫಕ್ಕೆ ವಿಕಲ್ಪವಾಗಿ ಲಕಾರವೂ ಬರುತ್ತೆ ಎಂದು ಇತನ್ ಪ್ರತ್ಯಯ. ಲಘೂಪಧಗುಣ. ವಿಕಲ್ಪವಾದ್ದರಿಂದ ಲಕಾರಾದೇಶ ಬರುವುದಿಲ್ಲ. ಪ್ರತ್ಯಯವು ನಿತ್ತಾದ್ದರಿಂದ ಆದ್ಯುದಾತ್ತ ಬರುತ್ತದೆ.

**ಯೊಮೂಯಿ**—ಯಮು ಉಪರಮೇ. **ಹಲಶ್ಚ** (ಪಾ. ಸೂ. ೩-೩-೧೨೧) ಎಂದು ಭಾವಾರ್ಥದಲ್ಲಿ ಘಞ್ ಪ್ರತ್ಯಯ ಬರುತ್ತದೆ. ಉಪಧಾವೃದ್ಧಿ, ಯಾಮ್+ಅ, **ಕರ್ಷಾತ್ವತೋಘಞಾನ್ತ ಉದಾತ್ತಃ** (ಪಾ. ಸೂ. ೬-೧-೧೫೯) ಘಞಂತವಾದ ಕರ್ಷಧಾತು ಅಥವಾ ಘಞಂತವಾದ ಆಕಾರವುಳ್ಳ ಧಾತು, ಇವುಗಳ ಕೊನೆಯ ವರ್ಣವು ಉದಾತ್ತವಾಗುತ್ತೆ ಎಂದು ಯಾಮ ಶಬ್ದಕ್ಕೆ ಅಂತೋದಾತ್ತವು ಪ್ರಾಪ್ತವಾಗುವುದು. ಅದನ್ನು ಬಾಧಿಸಿ **ವೃಷಾದೀನಾಂ ಚ** (ಪಾ. ಸೂ- ೬-೧-೨೦೩) ಎಂದು ಆದ್ಯುದಾತ್ತ ಬರುತ್ತೆ.

**ಅಶ್ರೋತ್**—ಶ್ರು ಶ್ರವಣೇ ಧಾತು. ಲಙ್‌ಗೆ ತಿಪ್. **ಇತಶ್ಚ** ಎಂದು ಇಕಾರಕ್ಕೆ ಲೋಪ, ಅಡಾಗಮ, **ಶ್ರುವಃ ಶೃಚ** (ಪಾ. ಸೂ. ೩-೧-೭೪) ಎಂದು ಶ್ನುವಿಕರಣ. ಅದಕ್ಕೆ **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂದು ಲುಕ್. **ಸನ್ನಿಯೋಗಶಿಷ್ಟಾನಾಮನ್ಯತರಾಪಾಯೇ ಉಭಯೋರಪ್ಯಪಾಯಃ** (ಪರಿಭಾ ೮೮) ಒಟ್ಟಿಗೆ ವಿಹಿತವಾಗಿರುವ ಆದೇಶಗಳ ಮಧ್ಯದಲ್ಲಿ ಒಂದಕ್ಕೆ ನಿವೃತ್ತಿಬಂದರೆ ಎಲ್ಲಕ್ಕೂ ನಿವೃತ್ತಿ ಬರುತ್ತೆ ಎಂದು ಪರಿಭಾಷೆಯ ಮುಖ್ಯಾರ್ಥ. ಇಲ್ಲಿ ಶ್ನುವಿಕರಣ ಮತ್ತು ಶೃಆದೇಶಗಳು ಒಂದೇ ಸೂತ್ರದಿಂದ ಒಟ್ಟಿಗೆ ವಿಹಿತ ವಾಗಿವೆ. ಹಿಂದೆ ಹೇಳಿದಂತೆ ವಿಕರಣಕ್ಕೆ ನಿವೃತ್ತಿ ಬರುವುದರಿಂದ ಶೃಆದೇಶಕ್ಕೂ ನಿವೃತ್ತಿಯಾಗುತ್ತೆ. **ಸಾರ್ವಧಾತುಕಾ—,** ಎಂದು ಗುಣ. ಅಶೃಣೋತ್ ಎಂಬುದಕ್ಕೆ ಬದಲಾಗಿ ಅಶ್ರೋತ್ ಎಂದು ಬಂದಿದೆ.

**ಅಬೀಭಯನ್ತ**—ಞಿಭೀಭಯೇ ಧಾತು. **ಹೇತುಮತಿ ಚ** (ಪಾ. ಸೂ. ೩-೧-೨೬) ಪ್ರಯೋಜಕನ ವ್ಯಾಪಾರವಾದ ಪ್ರೇಷಣಾದಿಗಳು ವಾಚ್ಯವಾದ ಧಾತುವಿನ ಮುಂದೆ ಣಿಚ್ ಬರುತ್ತೆ ಎಂದು ಣಿಚ್. ಇದರ ಮುಂದೆ ಲುಙ್. **ಭೀಸ್ಮ್ಯೋರ್ಹೇತುಭಯೇ** (ಪಾ. ಸೂ. ೧-೩-೬೮) ಇಲ್ಲಿ ಭಯಗ್ರಹಣವು ಸ್ಮಯ ಎಂಬ ಅರ್ಥಕ್ಕೂ, ಉಪಲಕ್ಷಣ. ಪ್ರಯೋಜಕನಿಂದ ಭಯಸ್ಮಯಗಳು ಉಂಟಾದರೆ, ಆತ್ಮನೇಪದ ಬರುತ್ತೆ ಎಂದು ಸೂತ್ರಾರ್ಥ ಧಾತ್ವರ್ಥಫಲವು ಕರ್ತೃವಿಗೆ ಸೇರುವ ಪಕ್ಷಕ್ಕೆ **ಣಿಚಶ್ಚ** (ಪಾ. ಸೂ. ೧-೩-೭೪) ಕ್ರಿಯಾಫಲವು ಕರ್ತೃಗಾಮಿ ಯಾದರೆ ಣಿಜಂತದ ಮುಂದೆ ಆತ್ಮನೇಪದ ಬರುತ್ತೆ ಎಂಬುದರಿಂದಲೇ ಆತ್ಮನೇಪದ ಬರುತ್ತೆ, ಕ್ರಿಯಾಫಲವು ಮತ್ತೊಬ್ಬರಿಗೆ ಸೇರುವ ಪಕ್ಷಕ್ಕೆ ಈ ಸೂತ್ರದಿಂದ ಆತ್ಮನೇಪದ ಬರುತ್ತೆ. ಝುಗೆ ಅನ್ತ ಆದೇಶ. ಭೀ+ಇ+ಅನ್ತ. ಅಚೋಞ್ಣಿತಿ ಎಂದು ಈಕಾರಕ್ಕೆ ವೃದ್ಧಿ. ಭೈ+ಇ+ಅನ್ತ. **ಬಿಭೇತೇರ್ಹೇತುಭಯೇ** (ಪಾ. ಸೂ. ೬-೧-೫೬) ಪ್ರಯೋಜಕನಿಂದ ಭಯವು ತೋರುವ ಪಕ್ಷಕ್ಕೆ ಭೀಧಾತುವಿನ ಏಚ್ಚಿಗೆ ಆಕಾರವು ವಿಕಲ್ಪವಾಗಿ ಬರುತ್ತೆ ಎಂದು ವಿಕಲ್ಪವಾದ್ದರಿಂದ ಇಲ್ಲಿ ಆಕಾರ ಬರುವುದಿಲ್ಲ. ಆದರೆ **ಭೀಯೋ ಹೇತು ಭಯೇ ಷುಕ್** (ಪಾ. ಸೂ. ೭-೩-೪೦) ಪ್ರಯೋಜಕನಿಂದ ಭಯವು ತೋರಿದರೆ ಣಿಚ್‌ನ ಹಿಂದೆ ಇರುವ ಈಕಾರಾಂತವಾದ ಭೀಧಾತುವಿಗೆ ಷುಕ್ ಬರುತ್ತೆ ಎಂದು, ವೃದ್ಧಿ ಬರುವುದಕ್ಕೆ ಮುಂಚೆಯೇ ಷುಕ್ ಪ್ರಾಪ್ತವಾಗುತ್ತೆ. ಆದರೂ **ಆಗಮ ಶಾಸ್ತ್ರಮನಿತ್ಯಮ್** (ಪರಿಭಾ ೯೬) ಎಂದು ಷುಗಾಗಮವು ಅನಿತ್ಯವಾದ್ದರಿಂದ ಇಲ್ಲಿ ಬರುವುದಿಲ್ಲ. ಚ್ಲಿಗೆ **ಣಿಶ್ರಿ ದ್ರುಸ್ರುಭ್ಯಃ ಕರ್ತರಿ ಚಙ್** (ಪಾ. ಸೂ. ೩-೧-೪೮) ಎಂದು ಚಙ್ ಬರುತ್ತೆ. **ಣಿಚ್ಯಚ ಆದೇಶೋ ನ ಸ್ಯಾತ್ ದ್ವಿತ್ವೇ ಕರ್ತವ್ಯೇ ;** ಇದು **ಓಃ ಪುಯಣ್ಜ್ಯಪರೇ** (ಪಾ. ಸೂ. ೭-೪-೮೦) ಎಂಬಲ್ಲಿ ವರ್ಗಪ್ರತ್ಯಾಹಾರಜಗ್ರಹಣದಿಂದ ಜ್ಞಾಪಿತವಾದ ವಚನ. **ವೋಪದೇವನೇ ಮೊದಲಾದವರು** ' ಉವರ್ಣಾದೇಶ ಏವ ಸ್ಥಾನಿವತ್ಸ್ಯಾನ್ನಾನ್ಯಃ,' ಎಂದು ಹೇಳುವರು. ಆದರೂ **ಅಚಿಕೀರ್ತತ್** ಎಂಬಲ್ಲಿ ಸ್ಥಾನಿವದ್ಭಾವವನ್ನು ಆಶಂಕಿಸಿ ಉತ್ತರಭಾಗದಲ್ಲಿ ಅವರ್ಣವಿಲ್ಲದೇ ಇರುವುದರಿಂದ ಸ್ಥಾನಿವದ್ಭಾವವು ಬರುವುದಿಲ್ಲ ಎಂದು ಹೇಳಿರುವ ಮಹಾಭಾಷ್ಯವನ್ನು ಪರ್ಯಾಲೋಚಿಸಿದರೆ ವೋಪದೇವಾದಿಗಳ ಮತವು

ಸರಿಯಲ್ಲ ಎಂದು ಏರ್ಪಡುತ್ತದೆ, ಏವಂಚ ಪ್ರಕ್ರಿಯಾಕಾಲದಲ್ಲಿಯೋ, ಪರಿನಿಷ್ಠಿತವಾಗಿರುವಾಗಲೋ ಉತ್ತರ ಖಂಡದಲ್ಲಿ ಅವರ್ಣವಿದ್ದರೆ **ಣಿಚ್ಯೈಚ ಆದೇಶ.** ಎಂಬ ವಚನವು ಪ್ರವರ್ತಿಸುವುದು. **ಣಿಚ್ಯೈಚ ಆದೇಶಃ ಸ್ಥಾನಿವತ್ ಸ್ಯಾತ್ ದ್ವಿತ್ವೇ ಕರ್ತವ್ಯೇ** ಎಂದು ವಚನವನ್ನು ವರ್ಗಪ್ರತ್ಯಾಹಾರಜಗ್ರಹಣದಿಂದ ಜ್ಞಾಪಿಸಬಹುದು. ಆದೇಶ ನಿಷೇಧಪಕ್ಷಕ್ಕೂ, ಸ್ಥಾನಿವಧ್ಭಾವಪಕ್ಷಕ್ಕೂ ಫಲದಲ್ಲಿ ವ್ಯತ್ಯಾಸವಿಲ್ಲ. ಇದರಿಂದ ನಿಷೇಧ ಬರುವುದರಿಂದ ದ್ವಿತ್ವ ಮಾಡುವಾಗ ವೃದ್ಧಿ ಬರುವುದಿಲ್ಲ. **ಚಙಿ** (ಪಾ. ಸೂ. ೬-೧-೧೧) ಎಂದು ಭೀಗೆ ದ್ವಿತ್ವ, ಭೀ+ ಭೀ+ ಇ+ಅ+ಅನ್ತ ಈಗ **ಅಚೋ ಞ್ಣಿತಿ** (ಪಾ. ಸೂ. ೭-೨-೧೧೫) ಈಗೆ ವೃದ್ಧಿ ಐಕಾರ. **ಣೇರನಿಟಿ** (ಪಾ. ಸೂ. ೬-೪-೫೧) ಇಡಾದಿಯಲ್ಲದ ಆರ್ಧಧಾತುಕ ಪರದಲ್ಲಿರುವಾಗ ಣಿಚ್‌ಗೆ ಲೋಪ ಬರುತ್ತೆ ಎಂದು ಣಿಚ್‌ಗೆ ಲೋಪ. **ಏಚೋಽಯವಾಯಾವಃ** (ಪಾ. ಸೂ. ೬-೧-೭೮) ಎಂದು ಐಗೆ ಆಯ್ ಆದೇಶ- **ಹ್ರಸ್ವಃ** (ಪಾ. ಸೂ- ೭-೪-೫೯) ಎಂದು ಅಭ್ಯಾಸಕ್ಕೆ ಹ್ರಸ್ವ. ಜಶ್ತ್ವ. ಬಿ+ಭಾಯ್+ಅ+ಅನ್ತ. **ಣೌ ಚಙ್ಯುಪಧಾಯಾ ಹ್ರಸ್ವಃ** (೭-೪-೧) ಚಙ್ ಪರಕವಾದ ಣಿಚ್ಚನ್ನು ಪರದಲ್ಲಿ ಹೊಂದಿರುವ ಯಾವ ಅಂಗವಿದೆಯೋ ಅದರ ಉಪಧೆಗೆ ಹ್ರಸ್ವ ಬರುತ್ತೆ ಎಂದು ಹ್ರಸ್ವ. ಣಿಚ್ ಲೋಪ ಬಂದಿದ್ದರೂ ಸ್ಥಾನಿವದ್ಭಾವದಿಂದ ಅದು ಇದೆ ಎಂದು ಭಾವಿಸಬೇಕು. **ಸನ್ವಲ್ಲಘುನಿ ಚಙ್‌ಪರೇಽನಗ್ಲೋಪೇ** (ಪಾ. ಸೂ. ೭-೪-೯೩) ಚಙ್‌ಪರಕವಾದಣಿಚ್ ಪ್ರತ್ಯಯವನ್ನು ಪರದಲ್ಲಿ ಹೊಂದಿರುವ ಅಂಗದ ಲಘು ಪರಕವಾದ ಅಭ್ಯಾಸಕ್ಕೆ ಸನ್‌ನಲ್ಲಿ ಕಾರ್ಯಬರುವಂತೆ ಕಾರ್ಯವು ಣಿಚ್ ನಿಮಿತ್ತಕವಾದ ಅಗ್ಲೋಪ ಬರದೇ ಇದ್ದರೆ ಬರುತ್ತೆ ಎಂದು ಒಂದು ಅರ್ಥ. ಣಿ ನಿಮಿತ್ತಕವಾದ ಅಗ್ಲೋಪವು ಬರದೇ ಇದ್ದರೆ ಅಂಗಸಂಜ್ಞಾನಿಮಿತ್ತಭೂತಚಙ್ ಪರಕಣಿಪರಕವಾದ ಯಾದ ಲಘು ಇದೆಯೋ ಅದನ್ನು ಪರದಲ್ಲಿ ಹೊಂದಿರುವ ಅಂಗಾವಯವವಾದ ಅಭ್ಯಾಸಕ್ಕೆ ಸನ್‌ನಲ್ಲಿ ಕಾರ್ಯ ಬರುವಂತೆ ಕಾರ್ಯಬರುತ್ತೆ ಎಂದು ಮತ್ತೊಂದು ಅರ್ಥ. ಇದಕ್ಕೆ ಸನ್ವದ್ಭಾವ ಎಂದು ಹೆಸರು. **ದೀರ್ಘೋ ಲಘೋಃ** (ಪಾ. ಸೂ. ೭-೪-೯೪) ಸನ್ವದ್ಭಾವವಿಷಯದಲ್ಲಿ ಅಭ್ಯಾಸದಲ್ಲಿರುವ ಲಘು ವರ್ಣಕ್ಕೆ ದೀರ್ಘ ಬರುತ್ತೆ ಎಂದು ಅರ್ಥ. ಇಲ್ಲಿ **ಲಘುನಿ ಚಙ್‌ಪರೇಽನಗ್ಲೋಪೇ** ಎಂಬುದನ್ನು ಅನುವೃತ್ತಿಮಾಡಿಕೊಂಡು ಹಿಂದಿನಂತೆಯೇ ಎರಡು ವಿಧವಾಗಿ ಅರ್ಥ ಹೇಳಬೇಕು, ಈ ಎರಡು ಅರ್ಥಗಳಿಗೂ ಅನೇಕಾಚ್ಕಧಾತುಗಳಲ್ಲಿ ವ್ಯತ್ಯಾಸ ತೋರುತ್ತೆ. ಇಲ್ಲಿ ವ್ಯತ್ಯಾಸ ತೋರುವುದಿಲ್ಲ. ಇದರಿಂದ ದೀರ್ಘ ಬಂದರೆ ಬೀಭಯ್+ಅ+ಅನ್ತ, ಅಡಾಗಮ, ಪರರೂಪ. ಅಬೀಭಯನ್ತ ಎಂದು ರೂಪವಾಗುತ್ತದೆ.

**ಮಾನುಷಾಃ—ಮನೋರ್ಜಾತಾವಞ್ಯತೌ ಷುಕ್ಚ** (ಪಾ. ಸೂ. ೪-೧-೧೬೧) ಎಂದು ಅಞ್ ಪ್ರತ್ಯಯ. ಷುಗಾಗಮ. ||೬||



॥ ಸಂಹಿತಾಪಾಠಃ ॥

ಆ ವೋ ಮಕ್ಷೂ ತನಾಯ ಕಂ ರುದ್ರಾ ಅವೋ ವೃಣೀವಹೇ ।
ಗಂತಾ ನೂನಂ ನೋಽವಸಾ ಯಥಾ ಪುರೇತ್ಥಾ ಕಣ್ವಾಯ-
ಬಿಭ್ಯುಷೇ ॥ ೭ ॥

॥ ಪದಪಾಠಃ ॥

ಆ । ವಃ । ಮಕ್ಷು । ತನಾಯ । ಕಂ । ರುದ್ರಾಃ । ಅವಃ । ವೃಣೀಮಹೇ ।
ಗಂತ । ನೂನಂ । ನಃ । ಅವಸಾ । ಯಥಾ । ಪುರಾ । ಇತ್ಥಾ । ಕಣ್ವಾಯ ।
ಬಿಭ್ಯುಷೇ ॥ ೭ ॥

ಸಾಯಣಭಾಷ್ಯಂ

ಹೇ ರುದ್ರಾ ರುದ್ರಪುತ್ರಾ ಮರುತಃ ತನಾಯ ಕಂ ಅಸ್ಮದೀಯಪುತ್ರಾರ್ಥಂ ಮಕ್ಷು ಶೀಘ್ರಂ ವೋ ಯುಷ್ಮದೀಯಮವೋ ರಕ್ಷಣಮಾವೃಣೀಮಹೇ । ಸರ್ವತಃ ಪ್ರಾರ್ಥಯಾಮಹೇ । ಮಕ್ಷ್ವಿತಿ ಕ್ಷಿಪ್ರನಾಮ । ನು ಮಕ್ಷ್ವಿತಿ ತನ್ನಾಮಸು ಪಠಿತತ್ವಾತ್ । ಪುರಾ ಪೂರ್ವಸ್ಮಿನ್ಕಾಲೇ ಕರ್ಮಾಂತರೇಷು ನೋಽವಸಾಸ್ಮದೀಯರಕ್ಷಣೇನ ನಿಮಿತ್ತೇನ ಯೂಯಂ ಯಥಾ ಪ್ರಾಪ್ತವಂತಃ । ಇತ್ಥಾನೇನ ಪ್ರಕಾರೇಣ ಬಿಭ್ಯುಷೇ ಭೀತಿಯುಕ್ತಾಯ ಕಣ್ವಾಯ ಮೇಧಾವಿನೇ ಯಜಮಾನಾಯ ತದನುಗ್ರಹಾರ್ಥಂ ನೂನಂ ಕ್ಷಿಪ್ರಂ ಗಂತ । ಪ್ರಾಪ್ನುತ ॥ ಮಕ್ಷು । ಋಚಿ ತುನುಘಮಕ್ಷುತಙ್ಕುತ್ರೋರುಷ್ಯಾಣಾಮಿತಿ ದೀರ್ಘಃ । ತನಾಯ । ತನೋತೀತಿ ತನಃ । ಪಚಾದ್ಯಚ್ । ವೃಷಾದಿತ್ವಾದಾದ್ಯುದಾತ್ತತ್ವಂ । ಯದ್ವಾ ತನಯಶಬ್ದೇಽಯಚ್ ಇತ್ಯಸ್ಯ ಲೋಪಶ್ಛಾಂದಸಃ । ಕಮಿತ್ಯೇತತ್ಪಾದಾಂತೇ ಪ್ರಯುಜ್ಯಮಾನಂ ಪಾದಪೂರಣಂ । ಶಿಶಿರಂ ಜೀವನಾಯ ಕಮಿತಿವತ್ । ಉಕ್ತಂ ಚ । ಅಥಾಪಿ ಪಾದಪೂರಣಾಃ ಕಮೀಮಿದ್ವಿತೀತಿ । ರುದ್ರಾಃ । ರೋದಯಂತೀತಿ ರುದ್ರಾಃ । ರೋದೇರ್ಣಿಲುಕ್ಚ । ಉ. ೨ ೨೨ । ಇತಿ ರಕ್ಪ್ರತ್ಯಯಃ । ಆಮಂತ್ರಿತಾದ್ಯುದಾತ್ತತ್ವಂ । ಪಾದಾದಿತ್ವಾನ್ನಿಘಾತಾಭಾವಃ । ಗಂತ । ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ತಪ್ತನಬಿತ್ಯಾದಿನಾ ತಬಾದೇಶಃ । ಅತಃ ಪಿತ್ತ್ವಾದನುನಾಸಿಕಲೋಪಾಭಾವಃ । ಬಿಭ್ಯುಷೇ । ಬಿಭೇತೇರ್ಲಿಟಃ ಕ್ವಸುಃ । ವಸ್ವೇಕಾಜಾದ್ಘಸಾಮಿತಿ ನಿಯಮಾದಿಡಭಾವಃ । ಚತುರ್ಥ್ಯೇಕವಚನೇ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಪರಪೂರ್ವತ್ವಂ । ಶಾಸಿವಸಿಘಸೀನಾಂ ಚೇತಿ ಷತ್ವಂ ॥

ಪ್ರತಿಪದಾರ್ಥ

**ರುದ್ರಾಃ**— ರುದ್ರಪುತ್ರರಾದ ಮರುತ್ತುಗಳೇ, | **ತನಾಯ ಕಂ**— ನಮ್ಮ ಪುತ್ರರಿಗಾಗಿ | **ಮಕ್ಷು**— ಜಾಗ್ರತೆಯಾಗಿ | **ವಃ**— ನಿಮ್ಮ | **ಅವಃ**— ರಕ್ಷಣೆಯನ್ನು | **ಆ ವೃಣೀಮಹೇ**— ಅಪೇಕ್ಷಿಸುತ್ತೇವೆ. | **ಪುರಾ**- ಹಿಂದೆ ಯಜ್ಞಕಾಲದಲ್ಲಿ | **ನಃ**— ನಮ್ಮ | **ಅವಸಾ**— ರಕ್ಷಣೆಗಾಗಿ | **ಯಥಾ**— ಯಾವರೀತಿ ಬಂದಿರೋ | **ಇತ್ಥಾ**— ಅದೇ ಪ್ರಕಾರ | **ಬಿಭ್ಯುಷೇ**— (ಭಕ್ತಿಪೂರ್ವಕವಾದ) ಭೀತಿಯಿಂದ ಕೂಡಿದ | **ಕಣ್ವಾಯ**—ಮೇಧಾವಿಯಾದ ಯಜಮಾನನಿಗೆ ಅಥವಾ ಕಣ್ವಋಷಿಯನ್ನು ಅನುಗ್ರಹಿಸುವುದಕ್ಕೆ | **ನೂನಂ**— ಶೀಘ್ರವಾಗಿ | **ಗಂತ**- ಬನ್ನಿರಿ. |

ಭಾವಾರ್ಥ

ಎಲೈ ರುದ್ರಪುತ್ರರಾದ ಮರುತ್ತುಗಳೇ, ನಮ್ಮ ಪುತ್ರರ ರಕ್ಷಣಾರ್ಥವಾಗಿ ನಿಮ್ಮನ್ನು ಪ್ರಾರ್ಥಿಸಿಕೊಳ್ಳುತ್ತೇವೆ. ನಮ್ಮ ಪ್ರಾರ್ಥನೆಯನ್ನಂಗೀಕರಿಸಿ ಹಿಂದೆ ನಮ್ಮ ಯಜ್ಞಕಾಲದಲ್ಲಿ ನಮ್ಮ ರಕ್ಷಣೆಗೋಸ್ಕರ ಯಾವರೀತಿ ಬಂದಿದ್ದಿರೋ ಈಗಲೂ ಸಹ ಅದೇ ಪ್ರಕಾರ, ಭಯಭಕ್ತಿಗಳಿಂದ ಕೂಡಿ ಪೂಜೆ ಮಾಡತಕ್ಕ ಮೇಧಾವಿಯಾದ ಯಜಮಾನನಿಗೆ ಅಥವಾ ಈಗ ಸ್ತೋತ್ರಮಾಡುತ್ತಿರುವ ಕಣ್ವಋಷಿಗೆ ಅನುಗ್ರಹ ಮಾಡುವುದಕ್ಕಾಗಿ ಶೀಘ್ರವಾಗಿ ಇಲ್ಲಿಗೆ ಬನ್ನಿರಿ

English Translation

O Sons of Rudra, we entreat your protection quickly for the sake of our progeny ; come quickly to the timid Kanwa ( or to the sacrificer ) as you came formerly for our protection.

|| ವಿಶೇಷ ವಿಷಯಗಳು ||

**ಮಕ್ಷು**-- ನು, ಮಕ್ಷು (ಮಂಕ್ಷು) ಮೊದಲಾದ ಇಪ್ಪತ್ತಾರು ಕ್ಷಿಪ್ರನಾಮಗಳ ಮಧ್ಯದಲ್ಲಿ ಮಕ್ಷುಶಬ್ದವು ಪಠಿತವಾಗಿರುವುದರಿಂದ ಮಕ್ಷು ಎಂದರೆ ಶೀಘ್ರವಾಗಿ, ಬೇಗನೆ ಎಂದರ್ಥವು.

**ತನಾಯ—ತನೋತೀತಿ ತನಃ ಪುತ್ರಃ** | ಪುತ್ರನಿಗಾಗಿ ಎಂದರೆ ಪುತ್ರಾದಿಸಂತತಿ ರಕ್ಷಣೆಗಾಗಿ.

**ರುದ್ರಾಃ—ರುದ್ರಪುತ್ರಾಃ** | ರುದ್ರಪುತ್ರರಾದ ಮರುತ್ತುಗಳು. ಇಲ್ಲಿ ರುದ್ರಪುತ್ರರೆಂದು ಹೇಳುವ ರುದ್ರಿಯಾಸಃ ಎಂಬ ಶಬ್ದಕ್ಕೆ ಬದಲಾಗಿ ರುದ್ರಾಃ ಎಂಬ ಶಬ್ದವನ್ನೇ ಉಪಯೋಗಿಸಿದೆ.

**ಬಿಭ್ಯುಷೇ— ಭೀತಿಯುಕ್ತಾಯ,** | ಭಯಪಡುತ್ತಿರುವ, ಕಾರಣಾಂತರದಿಂದ ಭಯಪಡುತ್ತಿರುವ ಕಣ್ವಋಷಿಯನ್ನು ರಕ್ಷಣೆಮಾಡಬೇಕೆಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಮಕ್ಷೂ—ಋಚಿ ತು ನು ಘಮಕ್ಷುತಙ್‌ಕುತ್ರೋರುಷ್ಯಾಣಾಂ** (ಪಾ. ಸೂ. ೬-೩-೧೩೩) ಎಂದು ಮಕ್ಷು ಶಬ್ದಕ್ಕೆ ದೀರ್ಘ.

**ತನಾಯ**—ತನೋತಿ ಇತಿ ತನಃ ಎಂದು ವಿಗ್ರಹ. ತನು ವಿಸ್ತಾರೇ ಧಾತು, ಪಚಾದಿ ಲಕ್ಷಣವಾದ ಅಚ್ ಪ್ರತ್ಯಯ. ವಂಶವನ್ನು ವಿಸ್ತರಿಸುವುದರಿಂದ ತನಶಬ್ದಕ್ಕೆ ಪುತ್ರ ಎಂದು ಅರ್ಥ. ಚತುರ್ಥೀಏಕವಚನ. ಇದು ಒಂದು ವಿಧವಾದ ಪ್ರಕ್ರಿಯೆ. ತನಯಶಬ್ದದಲ್ಲಿ ಮಧ್ಯೆ ಇರುವ ಅಯ್‌ಗೆ ಲೋಪ, ಅಥವಾ ಕೊನೆಯಲ್ಲಿರುವ ಯಶಬ್ದಕ್ಕೆ ಲೋಪ. ಎರಡು ಪ್ರಕಾರದಲ್ಲಿಯೂ ಲೋಪವಿಧಾಯಕವಾದ ಶಾಸ್ತ್ರವಿಲ್ಲ. ಛಾಂದಸವಾಗಿ ಲೋಪ ಬರುತ್ತೆ. ಈ ಪಕ್ಷದಲ್ಲಿ ಪ್ರಸಿದ್ಧವಾದ ಅರ್ಥಕ್ಕೆ ಗ್ರಹಣ ಬರುತ್ತೆ. ರೂಪನಿಷ್ಪತ್ತಿಯು ಕ್ಲಿಷ್ಟ, ಮೊದಲನೆ ಪಕ್ಷದಲ್ಲಿ ಪುತ್ರ ಎಂಬ ಅರ್ಥದಲ್ಲಿ ತನಶಬ್ದವು ಪ್ರಸಿದ್ಧವಲ್ಲ. **ವೃಷಾದೀನಾಂ ಚ** ಎಂದು ತನಶಬ್ದ ಆದ್ಯುದಾತ್ತ.

**ಕಮ್**—ಇದು ಪಾದದ ಪೂರ್ತಿಗಾಗಿ ಪಾದದ ಕೊನೆಯಲ್ಲಿ ಪ್ರಯೋಗಿಸತಕ್ಕ ಪದ. **ಶಿಶಿರಂ ಜೀವನಾಯ ಕಮ್** ಎಂಬಲ್ಲಿಯೂ ಕಮ್ ಎಂಬುದು ಪಾದಪೂರಣೆಗಾಗಿ ಪ್ರಯುಕ್ತವಾಗಿದೆ. **ಅಥಾಪಿ ಪಾದಪೂರಣಾಃ ಕಮೀಮಿದ್ವಿತಿ** (ನಿರು ೧-೯) ಎಂಬ ನಿರುಕ್ತದಲ್ಲಿ ಕಮ್-ಈಮ್-ಇತ್ ಮೊದಲಾದುವು ಪಾದಪೂರಣೆಗಾಗಿ ಸೇರಿಸತಕ್ಕವು ಎಂದು ಹೇಳಿದೆ.

**ರುದ್ರಾಃ**—ರುದಿರ್ ಅಶ್ರುವಿಮೋಚನೇ ಧಾತು, ರೋದಯನ್ತೀತಿ ರುದ್ರಾಃ. **ರೋದೇರ್ಣಿಲುಕ್ಚ** (ಉ. ಸೂ. ೨-೧೭೯) ಎಂಬುದರಿಂದ ರಕ್ ಪ್ರತ್ಯಯ. ಣಿಚ್ ಲುಕ್. ಇಲ್ಲಿ ಲಕ್ಷಣಾವೃತ್ತಿಯಿಂದ ರುದ್ರಪುತ್ರರಾದ ಮರುತ್ತುಗಳಿಗೆ ಗ್ರಹಣ. **ಸೋಽರೋದೀದ್ಯದರೋದೀತ್ತದ್ರುದ್ರಸ್ಯ ರುದ್ರತ್ವಂ** ಎಂಬ ಶ್ರುತಿಯಲ್ಲಿ ಅರೋದೀತ್ ಎಂಬುದಕ್ಕೆ ಅಂತರ್ಭಾವಿತಣ್ಯರ್ಥವನ್ನು ಹೇಳಬೇಕು. ರೋದನವನ್ನು ಮಾಡಿಸಿದನು ಎಂದು ಅರ್ಥ. ಆದ್ದರಿಂದ ಮೇಲೆ ಹೇಳಿದ ವ್ಯುತ್ಪತ್ತಿಗೆ ಶ್ರುತಿವಿರೋಧ ಇಲ್ಲ ಎಂದು ಕೆಲವರು ಹೇಳುವರು.

**ಗನ್ತ**—ಗಮ್ಲೃ ಗತೌ ಧಾತು ಲೋಟ್ ಮಧ್ಯಮಬಹುವಚನ ಥಗೆ ತ ಆದೇಶ. **ಬಹುಲಂ ಛಂದಸಿ** ಎಂದು ಶಪ್‌ಗೆ ಲುಕ್- **ತಪ್ತನಪ್ತನಥನಾಶ್ಚ** ಎಂದು ತಗೆ ತನಪ್ ಆದೇಶ. ಅದು ಪಿತ್, ಆದ್ದರಿಂದ **ಸಾರ್ವಧಾತುಕಮಪಿತ್** ಎಂದು ಙಿತ್ ಆಗುವುದಿಲ್ಲ. **ಅನುದಾತ್ತೋಪದೇಶ ವನತಿ ತನೋತ್ಯಾದೀನಾಮನುನಾಸಿಕಲೋಪೋಝಲಿ ಕ್ಙಿತಿ** (ಪಾ. ಸೂ. ೬-೪-೩೭) ಎಂದು ಅನುನಾಸಿಕವಾದ ಮ್‌ಗೆ ಲೋಪಬರುವುದಿಲ್ಲ.

**ಬಿಭ್ಯುಷೇ**—ಞಿಭೀ ಭಯೇ ಧಾತು. ಲಿಟ್, **ಕ್ವಸುಶ್ಚ** ಎಂದು ಕ್ವಸು ಪ್ರತ್ಯಯ. ದ್ವಿತ್ವಹ್ರಸ್ವಜಶ್ತ್ವಗಳು **ವಸ್ವೇಕಾಜಾದ್ಘಸಾಂ** ಎಂಬ ನಿಯಮದಿಂದ ವಸ್‌ಗೆ ಇಟ್ ಬರುವುದಿಲ್ಲ. ಈನಿಯಮವನ್ನು ಹಿಂದೆ ವಿವರಿಸಿದೆ. ಚತುರ್ಥೀಏಕವಚನ ಙೇಃಪ್ರತ್ಯಯ, **ವಸೋಸ್ಸಂಪ್ರಸಾರಣಂ** ಎಂದು ಸಂಪ್ರಸಾರಣದಿಂದ ವ್‌ಗೆ ಉಕಾರ, **ಸಂಪ್ರಸಾರಣಾಚ್ಚ** ಎಂದು ಪೂರ್ವರೂಪ. **ಆದೇಶಪ್ರತ್ಯಯಯೋಃ** ಎಂದು ಸಕಾರಕ್ಕೆ ಷಕಾರ. **ಶಾಸಿವಸಿ--**, ಎಂಬುದು ಇಲ್ಲಿ ಬರುವುದಿಲ್ಲ ಎಂದು ಹಿಂದೆ ಅನೇಕಾವರ್ತಿ ಸಯುಕ್ತಿಕವಾಗಿ ಉಪಪಾದಿಸಲಾಗಿದೆ.॥೬॥

ಸಂಹಿತಾಪಾಠಃ

ಯುಷ್ಮೇಷಿತೋ ಮರುತೋ ಮರ್ತ್ಯೇಷಿತ ಆ ಯೋ ನೋ ಅಭ್ವ-
ಈಷತೇ ।
ವಿ ತಂ ಯುಯೋತ ಶವಸಾ ವ್ಯೋಜಸಾ ವಿ ಯುಷ್ಮಾಕಾಭಿರೂ-
ತಿಭಿಃ ॥ ೮ ॥

॥ ಪದಪಾಠಃ ॥

ಯುಷ್ಮಾಽಇಷಿತಃ । ಮರುತಃ । ಮರ್ತ್ಯಽಇಷಿತಃ । ಆ । ಯಃ । ನಃ ।
ಅಭ್ವಃ । ಈಷತೇ ।
ವಿ । ತಂ । ಯುಯೋತ । ಶವಸಾ । ವಿ । ಓಜಸಾ । ವಿ । ಯುಷ್ಮಾಕಾಭಿಃ ।
ಊತಿಽಭಿಃ ॥ ೮ ॥

ಸಾಯಣಭಾಷ್ಯಂ

ಹೇ ಮರುತೋ ಯೋ ಯಃ ಕಶ್ಚಿದಭ್ವಃ ಶತ್ರುರ್ಯುಷ್ಮೇಷಿತೋ ಯುಷ್ಮಾಭಿಃ ಪ್ರೇಷಿತೋ ಮರ್ತ್ಯೇಷಿತೋ ಮಾರಕೈರನ್ಯೈರ್ವಾ ಪ್ರೇಷಿತಃ ಸನ್ ನೋಽಸ್ಮಾನ್ಪ್ರತಿ ಆ ಈಷತೇ ಆಭಿಮುಖ್ಯೇನ ಪ್ರಾಪ್ನೋತಿ । ತಂ ಶತ್ರುಂ ಶವಸಾಽನ್ನೇನ ವಿ ಯುಯೋತ । ವಿಭಕ್ತಂ ಕುರುತ । ತಥೌಜಸಾ ಬಲೇನ ವಿ ಯುಯೋತ । ಯುಷ್ಮಾಕಾಭಿರೂತಿಭಿರ್ಯುಷ್ಮತ್ಸಂಬಂಧಿಭೀ ರಕ್ಷಣೈಶ್ಚ ವಿ ಯುಯೋತ ॥ ಯುಷ್ಮೇ-ಷಿತಃ । ಯುಷ್ಮಾಭಿರಿಷಿತಃ ಸುಬ್ಲುಕಿ ಪ್ರತ್ಯಯಲಕ್ಷಣೇನ ಯುಷ್ಮದಸ್ಮದೋರನಾದೇಶ ಇತ್ಯಾತ್ವಂ । ನ ಚ ನ ಲುಮತಾಂಗಸ್ಯೇತಿ ಪ್ರತಿಷೇಧಃ । ಇಕೋಽಚಿ ವಿಭಕ್ತೌ । ಪಾ. ೭-೧-೭೩ । ಇತ್ಯತ್ರಾಜ್ಗ್ರಹಣೇನ ತಸ್ಯ ಪಾಕ್ಷಿಕತ್ವೋಕ್ತೇಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಮರ್ತ್ಯೇಷಿತಃ । ಪೂರ್ವವತ್ । ಅಭ್ವಃ । ಆಭವತೀತ್ಯಭ್ವಃ ಶತ್ರುಃ । ಪೃಷೋದರಾದಿತ್ವಾದಭಿಮತರೂಪಸ್ವರಸಿದ್ಧಿಃ । ಈಷತೇ । ಈಷ ಗತಿಹಿಂಸಾದರ್ಶನೇಷು । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಯುಯೋತ । ಯು ಮಿಶ್ರಣಾಮಿಶ್ರಣಯೋಃ । ಲೋಣ್ಮಧ್ಯಮಬಹುವಚನೇ ಬಹುಲಂ ಛಂದಸೀತಿ ಶಪಃ ಶ್ಲುಃ । ತಪ್ತನಪ್ತನಥನಾಶ್ಚೇತಿ ತಬಾದೇಶಃ । ಪಿತ್ತ್ವಾದ್ಗುಣಃ । ಯುಷ್ಮಾಕಾಭಿಃ । ಯುಷ್ಮತ್ಸಂ-ಬಂಧಿನೀಭಿಃ । ತಸ್ಮಿನ್ನಣಿ ಚ ಯುಷ್ಮಾಕಾಸ್ಮಾಕೌ । ಪಾ. ೪-೩-೨ । ಇತಿ ಯುಷ್ಮಚ್ಛಬ್ದಸ್ಯ ಯುಷ್ಮಾಕಾ-ದೇಶಃ । ಟಾಪ್ಯಾವೃದ್ಧಿಃ ಛಾಂದಸತ್ವಾನ್ನ ಕ್ರಿಯೇತೇ । ಊತಿಭಿಃ । ಅವತೇಃ ಕ್ತಿನಿ ಜ್ವರತ್ವರೇತ್ಯಾದಿನಾ ಊಠ್ । ಊತಿಯೂತೀತ್ಯಾದಿನಾ ಕ್ತಿನ ಉದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಮರುತಃ**— ಎಲೈ ಮರುತ್ತುಗಳೇ, । **ಯಃ**— ಯಾವನಾದರೂ । **ಅಭ್ವಃ**— ಶತ್ರುವು । **ಯುಷ್ಮೇಷಿತಃ**— ನಿಮ್ಮಿಂದ ಪ್ರೇರಿತನಾಗಿ (ಯಾಗಲಿ) । **ಮರ್ತ್ಯೇಷಿತಃ**— (ಇತರ) ಯಾವ ಮನುಷ್ಯರೂಪಶತ್ರುವಿನಿಂದಾಗಲಿ ಪ್ರೇರಿತನಾಗಿ । **ನಃ**— ನಮ್ಮನ್ನು ಕುರಿತು (ನಮ್ಮ ಮೇಲೆ) । **ಆ ಈಷತೇ**— ಮೇಲೆ ಬಿದ್ದು ಎದುರಿಸುತ್ತಾನೋ । **ತಂ**— ಆ ಶತ್ರುವನ್ನು । **ಶವಸಾ**— ಅನ್ನದಿಂದ । **ವಿ ಯುಯೋತ**— ರಹಿತನನ್ನಾಗಿ ಮಾಡಿ (ಎಂದರೆ ಅವನಿಗೆ ಅನ್ನವನ್ನು ಕೊಡಬೇಡಿ) । **ಓಜಸಾ** – ಶಕ್ತಿಯಿಂದ । **ವಿ (ಯುಯೋತ)**—ಬೇರೆ ಮಾಡಿ (ಶಕ್ತಿಯನ್ನು ಕೊಡಬೇಡಿ) । **ಯುಷ್ಮಾಕಾಭಿರೂತಿಭಿಃ**—ನಿಮ್ಮಿಂದಾಗುವ ರಕ್ಷಣೆಯಿಂದ । **ವಿ ಯುಯೋತ** ಬಿಡಿಸಿ ಬೇರೆಮಾಡಿ (ರಕ್ಷಣೆ ಮಾಡಬೇಡಿ )

ಭಾವಾರ್ಥ

ಎಲೈ ಮರುತ್ತುಗಳೇ, ನಮ್ಮ ಮೇಲೆ ಬಿದ್ದು ನಮಗೆ ಹಿಂಸೆಕೊಡುವ ಶತ್ರುವು ನಿಮ್ಮ ಸಹಾಯವನ್ನು ಪಡೆದಾಗಲಿ ಅಥವಾ ಇತರ ಮಾನವರೂಪದ ಶತ್ರುವಿನ ಸಹಾಯವನ್ನು ಪಡೆದಾಗಲಿ ನಮ್ಮನ್ನು ಹಿಂಸಿಸಲು ಬಂದಾಗ ಅಂತಹ ಶತ್ರುವಿಗೆ ಅನ್ನವನ್ನೂ, ಶಕ್ತಿಯನ್ನೂ, ನಿಮ್ಮ ರಕ್ಷಣೆಯನ್ನೂ ಸಂಪೂರ್ಣವಾಗಿ ತಪ್ಪಿಸಿರಿ.

English Translation

O Maruts, if any adversary instigated by you or by man attacks us deprive him of food, strength and your assistance.

॥ ವಿಶೇಷವಿಷಯಗಳು ॥

ಮುಖ್ಯಾಭಿಪ್ರಾಯವು—ಎಲೈ ಮರುದ್ದೇವತೆಗಳೇ, ಯಾವ ಮನುಷ್ಯನು ನಿಮ್ಮ ಬೆಂಬಲದಿಂದಾಗಲಿ ಅಥವಾ ಇತರರ ಪ್ರೇರಣೆಯಿಂದಾಗಲಿ ನಮ್ಮನ್ನು ಶತ್ರುಭಾವದಿಂದ ಎದುರಿಸುವನೋ ಅಂತಹ ಮನುಷ್ಯನಿಗೆ ನೀವು ಅನ್ನವನ್ನೂ, ಬಲವನ್ನೂ ಕೊಡಬೇಡಿ. ಅವನಿಗೆ ನೀವು ಯಾವವಿಧವಾದ ಸಹಾಯವನ್ನೂ ಮಾಡಬೇಡಿ.

**ಯುಷ್ಮೇಷಿತಃ—ಯುಷ್ಮಾಭಿಃ ಪ್ರೇಷಿತಃ** । ನಿಮ್ಮಿಂದ ಕಳುಹಿಸಲ್ಪಟ್ಟ ಅಥವಾ ನಿಮ್ಮಿಂದ ಪ್ರೇರಿತನಾದ, ನಿಮ್ಮ ಬೆಂಬಲವಿರುವ.

**ಮರ್ತ್ಯೇಷಿತಃ—ಮಾರಕೈರನ್ಯೈರ್ವಾ ಪ್ರೇಷಿತಃ** । ನಮ್ಮನ್ನು ಕೊಲ್ಲಬೇಕೆಂದು ಅಪೇಕ್ಷಿಸುವ ಯಾವ ಮನುಷ್ಯನಿಂದ ಪ್ರೇರಿತನಾದ ನಮ್ಮ ಶತ್ರುವು ಎಂದರ್ಥವು.

**ಅಭ್ವಃ**— ಮಹತ್ ಬ್ರಧ್ನಃ ಮೊದಲಾದ ಇಪ್ಪತ್ತೈದು ಮಹನ್ನಾಮಗಳ ಮಧ್ಯದಲ್ಲಿ ಅಭ್ವಃ ಎಂಬ ಶಬ್ದವು ಪಠಿತವಾಗಿರುವುದರಿಂದ ಅಭ್ವಃ ಎಂದರೆ ಹೆಚ್ಚು ಶಕ್ತಿಯುಳ್ಳ ಮನುಷ್ಯನು. (ನಿ. ೩-೧೩) ಇಲ್ಲಿ ಶತ್ರುವಾದವನು ಎಂಬ ಅಭಿಪ್ರಾಯವು ಸೂಚಿತವಾಗಿರುವುದು.

**ವಿತಂ ಯುಯೋತ ಶವಸಾ**— ಅವನನ್ನು ಅನ್ನದಿಂದ ರಹಿತನನ್ನಾಗಿ ಮಾಡಿ ಎಂದರೆ ಅವನಿಗೆ ಅನ್ನಾದ್ಯಾಹಾರಗಳನ್ನು ಕೊಡಬೇಡಿ.

**ಯುಷ್ಮಾಕಾಭಿಃ— ಯುಷ್ಮತ್ಸಂಬಂಧಿಭಿಃ।** ನಿಮ್ಮ ಸಂಬಂಧವಾದ ಎಂದರೆ ನಿಮ್ಮ ಅಥವಾ ನೀವು ಕೊಡಬಹುದಾದ.

ವ್ಯಾಕರಣಪ್ರಕ್ರಿಯಾ

**ಯುಷ್ಮೇಷಿತಃ**— ಇಷ ಗತೌ ದಿವಾದಿ. ಇಷ ಇಚ್ಛಾಯಾಂ ತುದಾದಿ, ಇಷ ಆಭೀಕ್ಷ್ಣ್ಯೇ ಕ್ರ್ಯಾದಿ ಈ ಮೂರು ಇಷ ಧಾತುಗಳಿವೆ. ಕೆಲವರು ತುದಾದಿಯಲ್ಲಿರುವ ಧಾತುವನ್ನು ಇಷು ಇಚ್ಛಾಯಾಂ ಎಂದು ಉದಿತ್ತಾಗಿ ಪಠಿಸುವರು. ಈ ಉದಿತ್ವಕ್ಕೆ ಪ್ರಯೋಜನವಿಲ್ಲದೇ ಇರುವುದರಿಂದ ಇಷ ಎಂದು ಹೇಳುವುದೇ ಸರಿ **ತೀಷಸಹಲುಭ ರುಷರಿಷಃ** (ಪಾ. ಸೂ. ೭-೨-೪೮) ಇಷು ಎಂದು ಪಠಿಸಬೇಕಾಗಿಲ್ಲ. ಈ ಸೂತ್ರದಲ್ಲಿ **ಇಷೇಸ್ತ-ಕಾರೇ ಶ್ಯನ್‌ಪ್ರತ್ಯಯಾತ್ಪ್ರತಿಷೇಧಃ.** ಶ್ಯನ್‌ಪ್ರತ್ಯಯವು ಯಾವ ಧಾತು ಮುಂದೆ ಬರುವುದೋ ಅಂತಹ ಇಷ್ ಧಾತು ಮುಂದೆ ತಕಾರಾದಿಪ್ರತ್ಯಯಪರದಲ್ಲಿದ್ದರೆ ಇಡ್ವಿಕಲ್ಪಕ್ಕೆ ಪ್ರತಿಷೇಧವನ್ನು ಹೇಳಬೇಕು ಎಂದು ವಾರ್ತಿಕದ ಅರ್ಥ. ಇದರಿಂದ ಇಲ್ಲಿ ನಿತ್ಯವಾಗಿ ಇಟ್ ಬರುತ್ತೆ. ಇಷ ಗತೌ ಎಂಬುದಕ್ಕೆ ಇಲ್ಲಿ ಗ್ರಹಣ. ಕ್ತಪ್ರತ್ಯಯ ಬಂದರೆ ಇಷಿತ ಎಂದು ಆಗುತ್ತದೆ. ಯುಷ್ಮಾಭಿಃ ಇಷಿತಃ, ಎಂದು ಸಮಾಸ. **ಸುಪೋಧಾತುಪ್ರಾತಿಪದಿಕಯೋಃ** (ಪಾ. ಸೂ. ೨-೪-೭೧) ಎಂದು ಸುಪ್ಪುಗಳಿಗೆ ಲುಕ್. ಯುಷ್ಮದ್+ಇಷಿತ ಎಂದು ಇದೆ. **ಪ್ರತ್ಯಯಲೋಪೇ ಪ್ರತ್ಯಯ ಲಕ್ಷಣಮ್** (ಪಾ. ಸೂ. ೧-೧-೬೨) ಪ್ರತ್ಯಯಕ್ಕೆ ಲೋಪ ಬಂದಿದ್ದರೂ ಅದು ಇದ್ದಂತೆ ಭಾವಿಸಿ ಆಪ್ರತ್ಯಯ ನಿಮಿತ್ತವಾದ ಕಾರ್ಯವು ಬರುವುದು ಎಂದು ಭಿಸ್ ಇದ್ದಂತೆ ಭಾವಿಸಬೇಕು. ಇಲ್ಲಿ **ಲುಕ್** ಎಂಬ ಶಬ್ದವನ್ನು ಉಚ್ಚರಿಸಿ ಲೋಪ ಬಂದಿದೆ. **ನ ಲುಮತಾಂಗಸ್ಯ** (ಪಾ. ಸೂ. ೧-೧-೬೩) ಲುಃ ಅಸ್ಯ ಅಸ್ತೀತಿ ಲುಮಾನ್. ತೇನ ಎಂದು ವಿಗ್ರಹ. ಲು ಎಂಬುದನ್ನೊಳಗೊಂಡ ಲುಕ್-ಶ್ಲು-ಲುಪ್ ಎಂಬ ಪದಗಳನ್ನು ಉಚ್ಚರಿಸಿ ಎಲ್ಲಿ ಪ್ರತ್ಯಯಕ್ಕೆ ಲೋಪ ಬಂದಿದೆಯೋ ಅಲ್ಲಿ ಪ್ರತ್ಯಯವಿದ್ದಂತೆ ಭಾವಿಸಿ ಲುಪ್ತಪ್ರತ್ಯಯನಿಮಿತ್ತಕವಾದ ಕಾರ್ಯವು ಬರುವುದಿಲ್ಲ ಎಂದು ಪ್ರತ್ಯಯ ಲಕ್ಷಣಕ್ಕೆ ನಿಷೇಧವು ಪ್ರಾಪ್ತವಾದರೂ ಇದು ಅನಿತ್ಯವಾದ್ದರಿಂದ ಇಲ್ಲಿ ಬರುವುದಿಲ್ಲ. **ಇಕೋಽಚಿ ವಿಭಕ್ತೌ** (ಪಾ. ಸೂ. ೭-೧-೭೩) ಅಜಾದಿವಿಭಕ್ತಿಯು ಪರದಲ್ಲಿದ್ದರೆ ಇಗಂತವಾದ ನಪುಂಸಕಲಿಂಗದ ಅಂಗಕ್ಕೆ ನುಮ್ ಆಗಮ ಬರುತ್ತೆ ಎಂದು ಸೂತ್ರಾರ್ಥ. ಉದಾಹರಣೆ, ವಾರಿಣೀ. ಈ ಸೂತ್ರದಲ್ಲಿ **ಅಚಿ** ಎಂದು ಹೇಳಿರುವುದು ಏತಕ್ಕೆ?. ಹಲಾದಿ ವಿಭಕ್ತಿಯಲ್ಲಿ ನುಮ್ ವಾರಣೆಗಾಗಿ ಅಲ್ಲವೆ ? ಭ್ಯಾಮ್ ನೊದಲಾದ ಪ್ರತ್ಯಯಗಳು ಪರದಲ್ಲಿದ್ದರೆ ನುಮಾಗಮ ಬಂದರೂ, **ಸ್ವಾದಿಷ್ವಸರ್ವನಾಮಸ್ಥಾನೇ** (ಪಾ. ಸೂ. ೧-೪-೧೭) ಎಂದು ಪದ ಸಂಜ್ಞೆ ಇರುವುದರಿಂದ **ನಲೋಪಃ ಪ್ರಾತಿಪದಿಕಾಂತಸ್ಯ** (ಪಾ. ಸೂ. ೮-೨-೭) ಎಂದು ನಕಾರಕ್ಕೆ ಲೋಪ ಬರುವುದರಿಂದ ಇಷ್ಟರೂಪ ಸಿದ್ಧವಾಗುತ್ತದೆ. ಇನ್ನು ಸಂಬೋಧನಪ್ರಥಮಾಏಕವಚನದಲ್ಲಿ ನುಮ್ ಬಂದರೆ ಇದಕ್ಕೆ **ನಙಿ ಸಂಬುದ್ಧ್ಯೋಃ** (ಪಾ. ಸೂ. ೮-೨-೮) ಎಂದು ನಕಾರಲೋಪಕ್ಕೆ ನಿಷೇಧ ಇರುವುದರಿಂದ ನುಮ್‌ಗೆ ಶ್ರವಣ ಬರಬೇಕಾಗುತ್ತೆ ಎಂದು ಹೇಳಬೇಕು. ಆದರೆ ಇಲ್ಲಿ **ಸ್ವಮೋರ್ನಪುಂಸಕಾತ್** (ಪಾ. ಸೂ. ೭-೧-೨೩) ನಪುಂಸಕ ಲಿಂಗವಾದ ಅಂಗದ ಮುಂದೆ ಇರುವ ಸು-ಅಮ್‌ಗಳಿಗೆ ಲುಕ್ ಬರುತ್ತೆ ಎಂದು ವಿಭಕ್ತಿಗೆ ಲುಕ್

ಬರುತ್ತೆ. ಏವಂಚ ವಿಭಕ್ತಿಪರವಾಗುವುದಿಲ್ಲ. ಪ್ರತ್ಯಯ ಲಕ್ಷಣವು, **ನಲುಮತಾ—,** ಎಂಬ ನಿಷೇಧವಿರುವುದ ರಿಂದ ಬರಲಾರದು. ಹೀಗೆ **ಆಚಿ** ಎಂಬುದು ವ್ಯರ್ಥವಾಗಿ **ನಲುಮತೇತಿ ನಿಷೋಧೋಽನಿತ್ಯಃ** ಎಂದು ಜ್ಞಾಪಿಸು ವುದು. ಈಗ ಅನಿತ್ಯವಾದ್ದರಿಂದ **ನಲುಮತಾ—,** ಎಂಬ ನಿಷೇಧ ಬರದೇ ಹೋದರೆ ವಿಭಕ್ತಿಯು ಪರವಾಗುವುದ ರಿಂದ ನುಮ್ ಬರಬೇಕಾಗುತ್ತದೆ. ಆದ್ದರಿಂದ **ಆಚಿ** ಎಂಬುದು ಸಾರ್ಥಕವಾಗುವುದು. ಪ್ರಕೃತದಲ್ಲಿ **ನಲುಮತಾ—,** ಎಂಬುದು ಅನಿತ್ಯವಾದ್ದರಿಂದ ಇಲ್ಲಿ ಬರುವುದಿಲ್ಲ. ಪ್ರತ್ಯಯಲಕ್ಷಣದಿಂದ ಪ್ರತ್ಯಯವು ಪರದಲ್ಲಿರುವಂತೆ ಭಾವಿಸ ಬಹುದು. ಆದ್ದರಿಂದ **ಯುಷ್ಮದಸ್ಮದೋರನಾದೇಶೇ** (ಪಾ. ಸೂ. ೭-೨ ೮೬) ಅಜಾದಿಯಲ್ಲದ ವಿಭಕ್ತಿಯು ಪರದಲ್ಲಿದ್ದರೆ ಯುಷ್ಮದ್, ಅಸ್ಮದ್ ಇವುಗಳ ದಕಾರಕ್ಕೆ ಆಕಾರ ಬರುತ್ತೆ ಎಂದು ದ್‌ಗೆ ಆಕಾರ. ಸವರ್ಣದೀರ್ಘ. ಯುಷ್ಮಾ+ಇಷಿತ, ಗುಣ, ಯುಷ್ಮೇಷಿತ ಎಂದು ಸಿದ್ಧವಾಗುತ್ತೆ. **ತೃತೀಯಾ ಕರ್ಮಣಿ** (ಪಾ. ಸೂ. ೬-೨-೪೮) ಎಂಬ ಪೂರ್ವಪದಪ್ರಕೃತಿಸ್ವರವು ಬರುತ್ತೆ.

**ಮರ್ತ್ಯೇಷಿತಃ**—ಇಷಿತಃ ಎಂಬುದಕ್ಕೆ ಮೊದಲಿನಂತೆಯೇ ಪ್ರಕ್ರಿಯೆ. ಪೂರ್ವಪದಪ್ರಕೃತಿಸ್ವರವೂ ಮೊದಲಿನಂತೆಯೇ ಬರುತ್ತೆ.

**ಅಭ್ವಃ**—ಅಭವತೀತ್ಯಭ್ವಃ ಎಂದು ವಿಗ್ರಹ ಶತ್ರು ಎಂದು ಅರ್ಥ. ಪೃಷೋದರಾದಿಯಲ್ಲಿ ಈ ಶಬ್ದ ವನ್ನು ಪಠಿಸಿ ಈ ರೂಪವನ್ನು ನಿಷ್ಪತ್ತಿಮಾಡಬೇಕು.

**ಈಷತೇ**—ಈಷ ಗತಿಹಿಂಸಾದರ್ಶನೇಷು ಧಾತು. ೧ನೇಗಣ. ಆತ್ಮನೇಪದಿ. ಲಟ್, ತ, ಏತ್ವ, ಶಪ್, ಈಷ್+ಅ+ತೇ. ಲಘೂಪಧವಲ್ಲದುದರಿಂದ ಗುಣ ಬರುವುದಿಲ್ಲ. ಪಿತ್ತಾದ್ದರಿಂದ ಶಪ್ ಅನುದಾತ್ತ. ಧಾತುಸ್ವರವೇ ನಿಲ್ಲುವುದು.

**ಯುಯೋತ**—ಯು ಮಿಶ್ರಣಾಮಿಶ್ರಣಯೋಃ ಅದಾದಿ. ಲೋಟ್ ಮಧ್ಯಮಪುರುಷಬಹುವಚನದಲ್ಲಿ ಥ ಪ್ರತ್ಯಯಕ್ಕೆ **ತಸ್ಥಸ್ಥ—,** ಎಂದು ತ ಆದೇಶ. ಇದಕ್ಕೆ **ತಪ್ತನಪ್ತನಥನಾಶ್ಚ** ಎಂದು ತಪ್ ಆದೇಶ. ಶಪ್‌ಗೆ **ಬಹುಲಂ ಛಂದಸಿ** (ಪಾ. ಸೂ. ೨-೪-೭೬) ಎಂದು ಶ್ಲು ಬರುತ್ತೆ. **ಶ್ಲೌ** ಎಂದು ದ್ವಿತ್ವ. ಯು+ಯು+ತ. ತಪ್ ಆದೇಶ ಪಿತ್, ಆದ್ದರಿಂದ ಗುಣ ನಿಷೇಧ ಬರುವುದಿಲ್ಲ **ಸಾರ್ವಧಾತುಕಾ—,** ಎಂದು ಗುಣ. ಯುಯೋತ ಎಂದಾಗುತ್ತದೆ.

**ಯುಷ್ಮಾಕಾಭಿಃ**—ಯುಷ್ಮಾಕಂ ಇಮಾಃ ಎಂದು ವಿಗ್ರಹ. **ಯುಷ್ಮದಸ್ಮದೋರನ್ಯತರಸ್ಯಾಂ ಖಞ್ಚ** (ಪಾ. ಸೂ. ೪-೩-೧) ಅಪತ್ಯಾದಿ ಚತುರ್ಥ್ಯಂತಾತಿರಿಕ್ತವಾದ ಅರ್ಥಗಳಲ್ಲಿ ಯುಷ್ಮದ್ ಅಸ್ಮದ್‌ಶಬ್ದಗಳ ಮುಂದೆ ಖಞ್-ಛ ಪ್ರತ್ಯಯಗಳು ವಿಕಲ್ಪವಾಗಿ ಬರುವುವು ಎಂದು ಅನ್ಯತರಸ್ಯಾಂ ಗ್ರಹಣವಿರುವುದರಿಂದ ಈಪ್ರತ್ಯಯಗಳು ಬರದ ಪಕ್ಷದಲ್ಲಿ **ತಸ್ಯೇದಮ್** (ಪಾ. ಸೂ. ೪-೩-೧೨೦) ಎಂಬುದರಿಂದ ಅಣ್ ಪ್ರತ್ಯಯ ಬರುತ್ತದೆ. **ಪಾರೇ ಮಧ್ಯೇ ಷಷ್ಠ್ಯಾ ವಾ** (ಪಾ. ಸೂ. ೨-೧-೧೮) ಎಂಬಲ್ಲಿ ವಾ ಗ್ರಹಣದಿಂದ **ಯತ್ರೋತ್ಸರ್ಗಾಪವಾದೌ ಮಹಾ-ವಿಭಾಷಯಾ ವಿಕಲ್ಪ್ಯೇತೇ ತತ್ರಾಪವಾದೇನ ಮುಕ್ತೇ ಪುನರುತ್ಸರ್ಗೋ ನ ಪ್ರವರ್ತತೇ** ಎಂದು ಜ್ಞಾಪಿತ ವಾಗಿದೆ. ಇಲ್ಲಿ ಅನ್ಯತರಸ್ಯಾಂ ಗ್ರಹಣವಿರುವುದರಿಂದ ಇದು ಮಹಾವಿಭಾಷಯಾ ವಿಕಲ್ಪಿತವಾಗುವುದಿಲ್ಲ. ಆದ್ದರಿಂದ

ಉತ್ಸರ್ಗಶಾಸ್ತ್ರದಿಂದ ಅಣ್ ಬರುತ್ತದೆ. **ತಸ್ಮಿನ್ನಣಿ ಚ ಯುಷ್ಮಾಕಾಸ್ಮಾಕೌ** (ಪಾ. ಸೂ. ೪-೩-೨) ಖಞ್-ಅಣ್ ಇವು ಪರನಲ್ಲಿರುವಾಗ ಯುಷ್ಮದ್-ಅಸ್ಮದ್ ಶಬ್ದಗಳಿಗೆ ಕ್ರಮವಾಗಿ ಯುಷ್ಮಾಕ-ಅಸ್ಮಾಕ ಎಂಬ ಆದೇಶಗಳು ಬರುವುವು ಎಂದು ಯುಷ್ಮಾಕ ಎಂಬ ಆದೇಶವು ಬರುತ್ತದೆ. ಯುಷ್ಮಾಕ।ಅ. **ಯಸ್ಯೇತಿಚ** ಎಂದು ಅಕಾರಕ್ಕೆ ಲೋಪ. ಸ್ತ್ರೀತ್ವ ತೋರುವುದರಿಂದ **ಟಿಡ್ಢಾಣಞ್—,** ಎಂದು ಬರುವ ಙೀಪ್ ಪ್ರತ್ಯಯವೂ, **ತದ್ಧಿತೇಷ್ವಚಾಮಾದೇಃ** ಎಂದು ಪ್ರಾಪ್ತವಾಗುವ ಆದಿವೃದ್ಧಿಯೂ, **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ** (ಪರಿಭಾ ೩೫) ಎಂದು ಛಂದಸ್ಸಿನಲ್ಲಿ ವಿಕಲ್ಪವಾಗಿ ಎಲ್ಲಾ ವಿಧಿಗಳೂ ಬರುವುದರಿಂದ ಇಲ್ಲಿ ಬರುವುದಿಲ್ಲ. **ಅಜಾದ್ಯತಷ್ಟಾಪ್** ಎಂದು ಟಾಪ್. ಭಿಸ್-ರುತ್ವ-ವಿಸರ್ಗ. ಯುಷ್ಮಾಕಾಭಿಃ ಎಂದು ರೂಪವಾಗುತ್ತದೆ.

**ಊತಿಭಿಃ**—ಅವ ರಕ್ಷಣೇ, **ಸ್ತ್ರಿಯಾಂ ಕ್ತಿನ್** ಎಂದು ಕ್ತಿನ್. **ಜ್ವರತ್ವರಸ್ರಿವ್ಯವಿ—,** ಎಂದು ಅವ್‌ಗೆ ಊಠ್. **ಊತಿಯೂತಿ—,** ಎಂದು ಉದಾತ್ತ. ॥೮॥



॥ ಸಂಹಿತಾಪಾಠಃ ॥

ಅಸಾಮಿ ಹಿ ಪ್ರಯಜ್ಯವಃ ಕಣ್ವಂ ದದ ಪ್ರಚೇತಸಃ ।
ಅಸಾಮಿಭಿರ್ಮರುತ ಆ ನ ಊತಿಭಿರ್ಗಂತಾ ವೃಷ್ಟಿಂ ನ ವಿದ್ಯುತಃ ॥

॥ ಪದಪಾಠಃ ॥

ಅಸಾಮಿ । ಹಿ । ಪ್ರಽಯಜ್ಯವಃ । ಕಣ್ವಂ । ದದ । ಪ್ರಽಚೇತಸಃ ।
ಅಸಾಮಿಽಭಿಃ । ಮರುತಃ । ಆ । ನಃ । ಊತಿಽಭಿಃ । ಗಂತ । ವೃಷ್ಟಿಂ ।
ನ । ವಿಽದ್ಯುತಃ ॥ ೯ ॥

॥ ಸಾಯಣಭಾಷ್ಯಂ ॥

**ಅಸಾಮಿ ಹಿ ಸಂಪೂರ್ಣಮೇವ ಯಥಾ ಭವತಿ ತಥಾ ಪ್ರಯಜ್ಯವಃ ಪ್ರಕರ್ಷೇಣ ಯಷ್ಟವ್ಯಾಃ ಪ್ರಚೇತಸಃ ಪ್ರಕೃಷ್ಟಜ್ಞಾನಯುಕ್ತಾ ಹೇ ಮರುತಃ ಕಣ್ವಂ ಮೇಧಾವಿನಂ ಯಜಮಾನಮೇತನ್ನಾಮಕಮೃಷಿಂ ವಾ ದದ । ಧಾರಯತ । ಹಿ ಯಸ್ಮಾದ್ಯೂಯಂ ಕಣ್ವನಾಮಕಮೃಷಿಂ ಧಾರಿತವಂತಸ್ತಸ್ಮಾತ್ಕಾರಣಾದಸಾಮಿಭಿರೂತಿಭಿಃ ಸಂಪೂರ್ಣೈ ರಕ್ಷಣೈರ್ನೋಽಸ್ಮಾನ್ ಪ್ರತ್ಯಾ ಗಂತ । ಆಗಚ್ಛತ । ತತ್ರ ದೃಷ್ಟಾಂತಃ । ವೃಷ್ಟಿಂ ನ ವಿದ್ಯುತಃ । ಯಥಾ ವಿದ್ಯುತೋ ವೃಷ್ಟಿಂ ಗಚ್ಛಂತಿ ತದ್ವತ್ ॥ ಅಸಾಮಿ । ಸಾಮ್ಯರ್ಧಂ । ನ ಸಾಮಿ ಅಸಾಮಿ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಪ್ರಯಜ್ಯವಃ । ಪ್ರಕರ್ಷೇಣ ಯಷ್ಟವ್ಯಾಃ । ಯಜಿಮನಿಶುಂಧಿದಸಿಜನಿಭ್ಯೋ ಯುಃ । ಉ. ೩–೨೦ । ಇತಿ ಕರ್ಮಣಿ ಯುಪ್ರತ್ಯಯಃ । ಆಮಂತ್ರಿತನಿಘಾತಃ । ದದ । ಡುದಾಞ್ ದಾನೇ । ಲೋಣ್ಮಧ್ಯಮಬಹುವಚನಸ್ಯ ತಿಙಾಂ ತಿಙೋ ಭವಂತೀತಿ ಲಙಾತ್ಮನೇಪದಪ್ರಥಮಪುರುಷಬಹುವಚನಾದೇಶಃ । ಶ್ಲೌ ದ್ವಿರ್ಭಾವೇ ಸತಿ ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ಲೋಪಸ್ತ ಆತ್ಮನೇಪದೇಷು । ಪಾ. ೭–೧–೪೧ । ಇತಿ ತಲೋಪಃ । ಅತೋ ಗುಣ ಇತಿ ಪರರೂಪತ್ವಂ । ಛಂದಸ್ಯುಭಯಥೇತ್ಯಾರ್ಧಧಾತುಕತ್ವಾದಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ನ ಭವತಿ ಕಿಂತು ಪ್ರತ್ಯಯಸ್ವರ ಏವ । ಹಿ ಚೇತಿ ನಿಘಾತಪ್ರತಿಷೇಧಃ । ಪ್ರಚೇತಸಃ । ಪ್ರಕೃಷ್ಟಂ ಚೇತೋ ಯೇಷಾಂ । ಆಮಂತ್ರಿತನಿಘಾತಃ । ಗಂತ । ಗಮೇರ್ಲೋಣ್ಮಧ್ಯಮಬಹುವಚನಸ್ಯ ತಸ್ಯ ತಬಾದೇಶಃ । ಬಹುಲಂ ಛಂದಸೀತಿ ಶಪೋ ಲುಕ್ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಪಾದಾದಿತ್ವಾನ್ನಿಘಾತಾಭಾವಃ । ದ್ವ್ಯಚೋತಸ್ತಿಙ ಇತಿ ಸಂಹಿತಾಯಾಂ ದೀರ್ಘತ್ವಂ । ವಿದ್ಯುತಃ । ವಿದ್ಯೋತತ ಇತಿ ವಿದ್ಯುತ್ । ಭ್ರಾಜಭಾಸೇತ್ಯಾದಿನಾ । ಪಾ. ೩–೨–೧೭೭ । ಕ್ವಿಪ್ ॥**

॥ ಪ್ರತಿಪದಾರ್ಥ ॥

**ಅಸಾಮಿ ಹಿ**— ಸಂಪೂರ್ಣವಾಗಿ । **ಪ್ರಯಜ್ಯವಃ**— ಉತ್ಕೃಷ್ಟವಾದ ಪೂಜೆಗೆ ಅರ್ಹರಾಗಿಯೂ । **ಪ್ರಚೇತಸಃ**— ಶ್ರೇಷ್ಠವಾದ ಜ್ಞಾನದೊಡಗೂಡಿಯೂ ಇರುವ । **ಮರುತಃ**— ಎಲೈ ಮರುತ್ತುಗಳೇ । **ಕಣ್ವಂ**— ಮೇಧಾವಿಯಾದ ಯಜಮಾನನನ್ನು (ಅಥವಾ ಕಣ್ವಋಷಿಯನ್ನು) । **ದದ**— (ಆಶ್ರಯಕೊಟ್ಟು) ಎತ್ತಿಹಿಡಿಯಿರಿ. । **ಹಿ**— ನೀವು ಆಶ್ರಯಕೊಟ್ಟಿರುವುದರಿಂದ । **ಅಸಾಮಿಭಿಃ**— ಸಂಪೂರ್ಣವಾದ । **ಊತಿಭಿಃ**—(ನಮ್ಮನ್ನು) ರಕ್ಷಿಸುವ ಸಲಕರಣೆಗಳೊಡನೆ । **ವಿದ್ಯುತಃ**— ಮಿಂಚುಗಳು । **ವೃಷ್ಟಿಂ ನ**— ಮಳೆಯನ್ನು ಸೇರಿ (ನಮ್ಮಲ್ಲಿ ಬರುಬರುವಂತೆ) । **ನಃ**—ನಮ್ಮ ಕಡೆಗೆ । **ಆ ಗಂತ**— ಬನ್ನಿರಿ. ।

ಭಾವಾರ್ಥ

ಸಂಪೂರ್ಣವಾದ ಮತ್ತು ಉತ್ಕೃಷ್ಟವಾದ ಯಜ್ಞಾನುಷ್ಠಾನಗಳಿಂದ ಆರಾಧಿಸಲ್ಪಡುವ ಎಲೈ ಮರುದ್ದೇವತೆಗಳೇ, ನೀವು ಉತ್ತಮಪ್ರಜ್ಞಾವಂತರು. ಯಜಮಾನನಾದ ಕಣ್ವಋಷಿಗೆ ಭರವಸೆಯನ್ನು ನೀಡಿ. ಅನಂತರ ಮಿಂಚು ಮಳೆಯನ್ನು ಅನುಸರಿಸಿ ಬರುವಂತೆ ನೀವು ನಿಮ್ಮ ರಕ್ಷಣೆಗಳೊಡನೆ ನಮ್ಮ ಬಳಿಗೆ ಬನ್ನಿ.

## English Translation

Wise Maruts, who are to be unreservedly worshipped, support Kanwa ( the sacrificer ); come to us, Maruts, with complete protection as the lightnings bring the rain.

### ವಿಶೇಷ ವಿಷಯಗಳು

**ಅಸಾಮಿ**— ಸಾಮಿ ಎಂದರೆ ಅರ್ಧವು. ಅಸಾಮಿ ಎಂದರೆ ಅರ್ಧವಲ್ಲದ್ದು, ಸಂಪೂರ್ಣವಾದದ್ದು.

**ಪ್ರಯಜ್ಯವಃ— ಪ್ರಕರ್ಷೇಣ ಯಷ್ಟವ್ಯಾಃ** । ಚೆನ್ನಾಗಿ ಆರಾಧಿಸಲ್ಪಡಲು ಯೋಗ್ಯರಾದವರು.

**ದದ—ಧಾರಯತ** । ಭರವಸೆ ನೀಡಿ, ಆಶ್ರಯವನ್ನು ಕೊಟ್ಟು ಕಾಪಾಡಿ.

**ಪ್ರಚೇತಸಃ— ಪ್ರಕೃಷ್ಟಂ ಚೇತೋ ಯೇಷಾಂ ತೇ । ಪ್ರಕೃಷ್ಟ ಜ್ಞಾನಯುಕ್ತಾಃ** । ಉತ್ತಮವಾದ ಜ್ಞಾನವುಳ್ಳವರು.

**ವೃಷ್ಟಿಂ ನ ವಿದ್ಯುತಃ**— ಮಳೆಯಿಲ್ಲದೆ ಮಿಂಚು ಇರುವುದಿಲ್ಲ. ಆದುದರಿಂದ ಮಿಂಚುಗಳು ಕಾಣಿಸಿದಲ್ಲಿ ಮಳೆ ಬರುವುದು ಎಂದು ಪ್ರಸಿದ್ಧವು. ಆದುದರಿಂದ ಮಿಂಚುಗಳು ಮಳೆಯನ್ನು ತರುವಂತೆ ಮರುತ್ತುಗಳಾದ ನೀವು ನಮಗೆ ರಕ್ಷಣೆಗಳನ್ನು ತಂದುಕೊಡಿರೆಂದು ಋಷಿಯು ಈ ದೃಷ್ಟಾಂತವನ್ನು ಉಪಯೋಗಿಸಿರುವನು.

### ವ್ಯಾಕರಣಪ್ರಕ್ರಿಯಾ

**ಅಸಾಮಿ**-- ಸಾಮಿ ಎಂಬುದಕ್ಕೆ ಅರ್ಧ ಎಂದು ಅರ್ಥ. ನ ಸಾಮಿ ಎಂದು ನಞ್‌ಸಮಾಸ. ನ್‌ಗೆ ಲೋಪ **ತತ್ಪುರುಷೇ ತುಲ್ಯಾರ್ಥ**—, ಎಂದು ಅವ್ಯಯ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಪ್ರಯಜ್ಯವಃ**—ಯಜ ದೇವಪೂಜಾದೌ, **ಯಜಿ ಮನಿಶುನ್ಧಿ ದಸಿ ಜನಿಭ್ಯೋಯುಚ್** (ಉ. ಸೂ. ೩-೨೦೦) ಈ ಧಾತುಗಳ ಮುಂದೆ ಯುಚ್ ಪ್ರತ್ಯಯ ಬರುತ್ತದೆ ಎಂದು ಯುಚ್. ಉದಿತ್ತಾದ ಯು ಶಬ್ದಕ್ಕೆ **ಯುವೋರನಾಕೌ** ಎಂಬಲ್ಲಿ ಗ್ರಹಣ. ಆದ್ದರಿಂದ ಯುಗೆ ಅನ ಆದೇಶ ಬರುವುದಿಲ್ಲ. ಪ್ರಯಜ್ಯ ಶಬ್ದದ ಮುಂದೆ ಜಸ್. **ಜಸಿಚ** (ಪಾ ಸೂ. ೭-೩-೧೦೯) ಎಂದು ಗುಣ, ಅವಾದೇಶ, **ಆಮನ್ತ್ರಿತಸ್ಯ ಚ** ಎಂದು ಸರ್ವಾನುದಾತ್ತ.

**ದದ**— ಡುದಾಞ್ ದಾನೇ ಲೋಟ್ ಮಧ್ಯಮಪುರುಷ ಬಹುವಚನವಾದ ಧ್ವಮ್ ಪ್ರತ್ಯಯಕ್ಕೆ **ತಿಜಾಂ-ತಿಜಸೋ ಭವನ್ತಿ** (ಪಾ. ಸು. ೭-೧-೩೯) ತಿಙ್ ಪ್ರತ್ಯಯಗಳ ಸ್ಥಾನದಲ್ಲಿ ವಿವಕ್ಷಿತವಾದ ತಿಙ್‌ಪ್ರತ್ಯಯಗಳು ಬರುವುವು ಎಂದು ಲಜಾತ್ಮನೇಪದ ಬಹುವಚನವಾದ ಝ ಆದೇಶ ಧಾ+ಝ. **ಜುಹೋತ್ಯಾದಿಭ್ಯಃ ಶ್ಲುಃ** ಎಂದು ಶಪ್‌ಗೆ ಶ್ಲು ಬರುತ್ತೆ. ದ್ವಿತ್ವ, ಅಭ್ಯಾಸಕ್ಕೆ ಹ್ರಸ್ವ **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಪ್ರಸ್ವಾಕಾರದ ಮುಂದೆ ಇಲ್ಲದೇ ಇರುವ ಆತ್ಮನೇಪದದ ಝ್‌ಗೆ ಅತ್ ಆದೇಶ ಬರುತ್ತೆ ಎಂದು ಝ್‌ಗೆ ಅತ್ ಆದೇಶ, **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಕಿತ್ ಙಿತ್ ಆದ ಸಾರ್ವಧಾತುಕ ಪರದಲ್ಲಿರುವಾಗ ಶ್ನ ಅಭ್ಯಸ್ತ ಇವುಗಳ ಆಕಾರಕ್ಕೆ ಲೋಪ ಬರುತ್ತೆ ಎಂದು ಆಕಾರಕ್ಕೆ ಲೋಪ. ದದ್+ಅತ. **ಲೋಪಸ್ತ ಆತ್ಮನೇಪದೇಷು** (ಪಾ. ೭-೧-೪೧) ಛಂದಸ್ಸಿನಲ್ಲಿ ಆತ್ಮನೇಪದಪ್ರತ್ಯಯದ ತ್‌ಗೆ ಲೋಪ ಬರುತ್ತೆ ಎಂದು ತ್‌ಗೆ ಲೋಪ.

ದದ್+ಅ+ಅ. **ಅತೋಗುಣೇ** (ಪಾ.ಸೂ. ೬-೧-೯೭) ಎಂದು ಪರರೂಪದಿಂದ ಎರಡು ಅಕಾರಗಳ ಸ್ಥಾನದಲ್ಲಿ ಒಂದೇ ಅಕಾರ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಧಾತ್ವಧಿಕಾರದಲ್ಲಿ ವಿಹಿತವಾದ ಪ್ರತ್ಯಯಗಳು ಛಂದಸ್ಸಿನಲ್ಲಿ ಸಾರ್ವಧಾತುಕಸಂಜ್ಞಿಕಗಳೂ ಆರ್ಧಧಾತುಕಸಂಜ್ಞಿಕಗಳೂ ಆಗುವುವು ಎಂದು ಆರ್ಧಧಾತುಕ ಸಂಜ್ಞೆ ಬರುತ್ತೆ. ಆದ್ದರಿಂದ **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಇಡ್ಭಿನ್ನವಾದ ಅಜಾದಿಲಸ್ಥಾನಿಕ ಸಾರ್ವಧಾತುಕ ಪರದಲ್ಲಿರುವಾಗ ಅಭ್ಯಸ್ತಗಳ ಆದಿಯು ಉದಾತ್ತವಾಗುತ್ತೆ ಎಂದು ಆದ್ಯುದಾತ್ತ ಬರುವುದಿಲ್ಲ. **ಹಿಚ** (ಪಾ. ಸೂ. ೮-೧-೩೪) ಸರ್ವಾನುದಾತ್ತಕ್ಕೆ ಪ್ರತಿಷೇಧ. ಪ್ರತ್ಯಯಸ್ವರ ಬರುತ್ತೆ.

**ಪ್ರಚೇತಸಃ**—ಪ್ರಕೃಷ್ಟಂ ಚೇತಃ ಯೇಷಾಂ ತೇ, ಉತ್ಕೃಷ್ಟವಾದ ಬುದ್ಧಿಯುಳ್ಳವರು ಎಂದು ಅರ್ಥ. **ಆಮನ್ತ್ರಿತಸ್ಯ ಚ** ಎಂದು ಸರ್ವಾನುದಾತ್ತ ಬರುತ್ತದೆ.

**ಗನ್ತ**—ಗಮ್ಲೃ ಗತೌ—ಲೋಟ್ ಮಧ್ಯಮಪುರುಷ ಧ. ಲಙ್ವದ್ಭಾವ ಇರುವುದರಿಂದ, **ತಸ್ಥಸ್ಥ**— ಎಂದು ತ ಆದೇಶ. **ತಪ್ತನಪ್ತ**—, ಎಂದು ತಗೆ ತಪ್ ಆದೇಶ. **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂದು ಶಪ್‌ಗೆ ಲುಕ್. ತಪ್ ಎಂಬುದು ಪಿತ್ ಆದ್ದರಿಂದ ಙಿತ್ತಾಗುವುದಿಲ್ಲ. **ಅನುದಾತ್ತೋಪದೇಶ—,** ಎಂದು ಅನುನಾಸಿಕಕ್ಕೆ ಲೋಪ ಬರುವುದಿಲ್ಲ. ಪ್ರತ್ಯಯವು ಪಿತ್ ಆದ್ದರಿಂದ ಅನುದಾತ್ತ. ಧಾತುಸ್ವರ ಉಳಿಯುತ್ತದೆ. ನಾಲ್ಕನೇ ಪಾದದ ಆದಿಯಲ್ಲಿದೆ. ಆದ್ದರಿಂದ **ಅಪಾದಾದೌ** ಎಂದು ಪ್ರತಿಷೇಧ ಬರುವುದರಿಂದ ಸರ್ವಾನುದಾತ್ತ ಬರುವುದಿಲ್ಲ. **ದ್ವ್ಯಚೋಽತಸ್ತಿಙಃ** (ಪಾ. ಸೂ. ೬-೩-೧೩೫) ಎಂದು ಸಂಹಿತಾಕಾಲದಲ್ಲಿ ದೀರ್ಘ ಬರುತ್ತದೆ.

**ವಿದ್ಯುತಃ** - ವಿದ್ಯೋತತೇ ಇತಿ ವಿದ್ಯುತ್ ಎಂದು ವಿಗ್ರಹ. ಚೆನ್ನಾಗಿ ಪ್ರಕಾಶಿಸುವುದು ಎಂದು ಅರ್ಥ. **ಭ್ರಾಜ ಭಾಸ ಧುರ್ವಿದ್ಯುತೋರ್ಜಿ ಪೄಜು ಗ್ರಾವಸ್ತುವಃ ಕ್ವಿಪ್** (ಪಾ. ಸೂ ೩-೨-೧೭೭) ಭ್ರಾಜ-ಭಾಸ-ಧುರ್ವಿ-ದ್ಯುತ-ಊರ್ಜಿ-ಪೄ-ಜು-ಗ್ರಾವಸ್ತು, ಈ ಎಂಟರ ಮುಂದೆ ಕ್ವಿಪ್ ಪ್ರತ್ಯಯವು ತಚ್ಛೀಲಾದ್ಯರ್ಥಗಳಲ್ಲಿ ಬರುತ್ತೆ ಎಂದು ವಿ ಉಪಸರ್ಗಪೂರ್ವಕವಾದ ದ್ಯುತ ಧಾತು ಮುಂದೆ ಕ್ವಿಪ್ ಪ್ರತ್ಯಯ ಬರುತ್ತದೆ. ||೯||



ಸಂಹಿತಾಪಾಠಃ

ಅಸಾಮ್ಯೋಜೋ ಬಿಭೃಥಾ ಸುದಾನವೋಽಸಾಮಿ ಧೂತಯಃ ಶವಃ ।

ಋಷಿದ್ವಿಷೇ ಮರುತಃ ಪರಿಮನ್ಯವ ಇಷುಂ ನ ಸೃಜತ ದ್ವಿಷಂ ॥

॥ ಪದಪಾಠಃ ॥

ಅಸಾಮಿ । ಓಜಃ । ಬಿಭೃಥ । ಸುऽದಾನವಃ । ಅಸಾಮಿ । ಧೂತಯಃ ।
ಶವಃ ।
ಋಷಿऽದ್ವಿಷೇ । ಮರುತಃ । ಪರಿऽಮನ್ಯವೇ । ಇಷುಂ । ನ । ಸೃಜತ ।
ದ್ವಿಷಂ ॥ ೧೦ ॥

ಸಾಯಣಭಾಷ್ಯಂ

ಹೇ ಸುದಾನವಃ ಶೋಭನದಾನೋಪೇತಾ ಮರುತಃ ಅಸಾಮಿ ಸಂಪೂರ್ಣಮೋಜೋ ಬಲಂ ಬಿಭೃಥ । ಧಾರಯಥ । ಹೇ ಧೂತಯಃ ಕಂಪನಕಾರಿಣೋ ಮರುತಃ ಅಸಾಮಿ ಸಂಪೂರ್ಣಂ ಶವೋ ಬಲಂ । ಪರಿಮನ್ಯವೇ ಕೋಪಪರಿವೃತಾಯ ಋಷಿದ್ವಿಷೇ ಋಷೀಣಾಂ ದ್ವೇಷಂ ಕುರ್ವತೇ ಶತ್ರವೇ ತದ್ವಿನಾಶಾರ್ಥಂ ದ್ವಿಷಂ ದ್ವೇಷಕಾರಿಣಂ ಹಂತಾರಂ ಸೃಜತ । ತತ್ರ ದೃಷ್ಟಾಂತಃ । ಇಷುಂ ನ । ಯಥಾ ಶತ್ರೋರುಪರಿ ಬಾಣಂ ಮುಂಚೇತಿ ತದ್ವತ್ । ಅತ್ರ ನಿರುಕ್ತಂ । ಅಸಾಮಿ ಸಾಮಿಪ್ರತಿಷಿದ್ಧಂ ಸಾಮಿ ಸ್ಯತೇಃ । ಅಸಾಮ್ಯೋಜೋ ಬಿಭೃಥಾ ಸುದಾನವಃ । ಅಸುಸಮಾಪ್ತಂ ಬಲಂ ಬಿಭೃಥ । ಕಲ್ಯಾಣದಾನಾಃ । ನಿ. ೬-೨೩ । ಇತಿ ॥ ಬಿಭೃಥ । ಡುಭೃಞ್ ಧಾರಣಪೋಷಣಯೋಃ ಜುಹೋತ್ಯಾದಿತ್ವಾತ್ ಶ್ಲುಃ । ಭೃಞಾಮಿದಿತ್ಯಭ್ಯಾಸಸ್ಯೇತ್ವಂ । ಋಷಿದ್ವಿಷೇ । ಋಷೀನ್ ದ್ವೇಷ್ಟೀತಿ ಋಷಿದ್ವಿಟ್ । ಸತ್ಸೂದ್ವಿಷೇತ್ಯಾದಿನಾ ಕ್ವಿಪ್ । ಪರಿಮನ್ಯವೇ । ಮನ್ಯುನಾ ಪರಿವೃತಃ ಪರಿಮನ್ಯುಃ । ಪ್ರಾದಿಸಮಾಸೇ ಪರೇರಭಿತೋಭಾವಿಮಂಡಲಂ । ಪಾ. ೬-೨-೧೮೨ । ಇತ್ಯುತ್ತರಪದಾಂತೋದಾತ್ತತ್ವಂ । ಇಷುಂ । ಇಷು ಗತೌ । ಇಷ್ಯತಿ ಗಚ್ಛತೀತೀಷುಃ । ಇಷೇಃ ಕಿಚ್ಚ । ಉ. ೧-೧೪ । ಇತ್ಯುಪ್ರತ್ಯಯಃ । ಧಾನ್ಯೇ ನಿದಿತ್ಯನುವೃತ್ತೇರ್ನಿತ್ತ್ವಾದಾದ್ಯುದಾತ್ತತ್ವಂ । ಸೃಜತ । ಸೃಜ ವಿಸರ್ಗೇ । ವಿಕರಣಸ್ಯ ಙಿತ್ತ್ವಾದ್ಗುಣಾಭಾವಃ । ದ್ವಿಷಂ ಕ್ವಿಪ್ಚೇತಿ ಕ್ವಿಪ್ ॥ ೧೩ ॥

ಪ್ರತಿಪದಾರ್ಥ

**ಸುದಾನವಃ**— ಮಂಗಳಕರವಾಗಿಯೂ (ಸಮೃದ್ಧವಾಗಿಯೂ) ಇರುವ ದಾನಗಳಿಂದ ಕೂಡಿದವರಾದ । **ಮರುತಃ**— ಎಲೈ ಮರುತ್ತುಗಳೇ । **ಅಸಾಮಿ**— ಸಂಪೂರ್ಣವಾಗಿ । ಓಜಃ —(ನಿಮ್ಮ) ಬಲವನ್ನು । **ಬಿಭೃಥ**— ಹೊಂದಿದ್ದೀರಿ. । **ಧೂತಯಃ**— ಕಂಪನವನ್ನುಂಟುಮಾಡುವ ಎಲೈ ಮರುತ್ತುಗಳೇ । **ಅಸಾಮಿ**— ಸಂಪೂರ್ಣವಾಗಿ । **ಶವಃ** — (ನಿಮ್ಮ) ಶಕ್ತಿಯನ್ನು । **ಪರಿಮನ್ಯವೇ**— ಕೋಪದಿಂದೊಡಗೂಡಿ । **ಋಷಿದ್ವಿಷೇ**— ಋಷಿಗಳನ್ನು ದ್ವೇಷಿಸುತ್ತಲೂ ಇರುವ ಶತ್ರುವಿನ ಮೇಲೆ (ಅವನ ನಾಶಕ್ಕಾಗಿ) । ಇಷುಂ ನ — ಹರಿತವಾದ ಬಾಣವನ್ನು ಬಿಡುವಂತೆ । **ದ್ವಿಷಂ**— ನಾಶಕರವಾದ ನಿಮ್ಮ ದ್ವೇಷವನ್ನು (ಕೋಪವನ್ನು) । ಸೃಜತ— ಶತ್ರುವಿನಮೇಲೆ ಬಿಡಿ ।

ಭಾವಾರ್ಥ

ಎಲೈ ಮರುತ್ತುಗಳೇ, ನೀವು ಒಳ್ಳೆಯ ದಾನಶೀಲರು, ನಿಮ್ಮ ಬಲವು ಅತಿಶಯವಾದುದು. ಹರಿತವಾದ ಬಾಣವು ಶತ್ರುವನ್ನು ನಾಶಮಾಡಲು ಉಪಯೋಗಿಸುವಂತೆ ಋಷಿಗಳನ್ನು ಹಿಂಸಿಸಿ ದ್ವೇಷಿಸುವ ಶತ್ರುವಿನ ಮೇಲೆ ನಿಮ್ಮ ದ್ವೇಷರೂಪವಾದ ಕೋಪವನ್ನು ಪ್ರಯೋಗಿಸಿ.

English Translation

O most liberal givers, you possess perfect vigor ; shakers of the (earth), you possess undiminished strength. O Maruts, let loose your anger, like an arrow, upon the wrathfull enemy of the Rishis.

|| ವಿಶೇಷ ವಿಷಯಗಳು ||

**ಅಸಾಮ್ಯೋಜಃ**— ಸಂಪೂರ್ಣವಾದ ಬಲ. perfect strength

**ಸುದಾನವಃ**— givers of plenty, ಬಹಳವಾದ ಇಷ್ಟಾರ್ಥಗಳನ್ನು ಕೊಡುವವರು.

**ಧೂತಯಃ**— ವೃಕ್ಷಾದಿಗಳನ್ನು ಕಂಪಿಸುವಂತೆ ಮಾಡುವವರು.

**ಋಷಿದ್ವಿಷೇ ಪರಿಮನ್ಯವೇ**— ಕೋಪದಿಂದ ಕೂಡಿ ಋಷಿಗಳನ್ನು ದ್ವೇಷಿಸುತ್ತಿರುವ ಅಥವಾ ಹಿಂಸಿಸುತ್ತಿರುವ ಶತ್ರುಗಳು.

**ಇಷುಂ ನ ಸೃಜತ ದ್ವಿಷಂ**— ಶತ್ರುವಿನ ಮೇಲೆ ಬಾಣವನ್ನು ಹೇಗೆ ಬಿಡುವರೋ ಅದರಂತೆ ನಿಮ್ಮ ದ್ವೇಷ ಅಥವಾ ಕೋಪವನ್ನು ಋಷಿದ್ವೇಷಿಗಳ ಮೇಲೆ ಪ್ರಯೋಗಿಸಿ ಎಂದು ಪ್ರಾರ್ಥನೆಯು.

|| ವ್ಯಾಕರಣಪ್ರಕ್ರಿಯಾ ||

**ಬಿಭೃಥ**-- ಡುಭೃಞ್ ಧಾರಣಪೋಷಣಯೋಃ-ಲಟ್. ಇದು ಞಿತ್ತಾದ್ದರಿಂದ ಉಭಯಪದಿ. ಪರಸ್ಮೈಪದ ಮಧ್ಯಮ ಬಹುವಚನ ಥ. ಶಪ್‌ಗೆ **ಜುಹೊತ್ಯಾದಿಭ್ಯಃ ಶ್ಲುಃ** (ಪಾ. ಸೂ. ೨-೪-೭೫) ಎಂದು ಶ್ಲು-ದ್ವಿತ್ವ ಭೃ+ಭೃ+ಥ. **ಉರತ್** (ಪಾ. ಸೂ. ೭-೪-೬೬) ಪ್ರತ್ಯಯ ಪರದಲ್ಲಿರುವಾಗ ಅಭ್ಯಾಸದ ಋಗೆ ಅಕಾರ ಬರುತ್ತೆ ಎಂದು ಬರುವ ಅಕಾರವು ರೇಫಶಿರಸ್ಕವಾಗಿ ಬರುತ್ತೆ. **ಹಲಾದಿಃ ಶೇಷಃ** ಎಂದು ರೇಫಕ್ಕೆ ಲೋಪ ಜಶ್ತ್ವ. **ಭೃಞಾಮಿತ್** (ಪಾ. ಸೂ. ೭-೪-೭೬) ಭೃಞ್-ಮಾಙ್-ಓಹಾಙ್ ಇವುಗಳ ಅಭ್ಯಾಸಕ್ಕೆ ಇತ್ವ ಬರುತ್ತೆ ಎಂದು ಅಭ್ಯಾಸಕ್ಕೆ ಇತ್ವ ಬಿಭೃಥ ಎಂದು ಆಗುತ್ತದೆ.

**ಋಷಿದ್ವಿಷೇ**— ಋಷೀನ್ ದ್ವೇಷ್ಟೀತಿ ಋಷಿದ್ವಿಟ್. **ಸತ್ಸೂದ್ವಿಷ** ಎಂದು ಕ್ವಿಪ್‌ಪ್ರತ್ಯಯ.

**ಪರಿಮನ್ಯವೇ**—ಮನ್ಯುನಾ ಪರಿವೃತಃ, **ಕುಗತಿಪ್ರಾದಯಃ** (ಪಾ. ಸೂ. ೨-೨-೧೮) ಎಂದು ಸಮಾಸ ಯದ್ಯಪಿ **ಪರ್ಯಾದಯೋ ಗ್ಲಾನಾದ್ಯರ್ಥೇ ಚತುರ್ಥ್ಯಾ** ಎಂದು ಚತುರ್ಥೀವಿಭಕ್ತ್ಯಂತದೊಂದಿಗೆ ಸಮಾಸ ಬರುತ್ತೆ ಎಂದು ವಾರ್ತಿಕಕಾರರು ಹೇಳಿರುವರು. ಆದರೂ ಗ್ಲಾನಾದ್ಯರ್ಥಗಳಲ್ಲಿ ಸೇರದ ಪರಿವೃತ ಮೊದಲಾದ ಅರ್ಥ ಗಳಲ್ಲಿ ಬೇರೆ ವಿಭಕ್ತ್ಯಂತದೊಂದಿಗೂ ಸಮಾಸ ಬರುತ್ತದೆ. ಪರಿತಃ ಮನ್ಯುಃ ಯಸ್ಯಸಃ ಎಂದು ಬಹುವ್ರೀಹಿಯನ್ನಾ ದರೂ ಹೇಳಬಹುದು. **ಪರೇರಭಿತೋ ಭಾವಿ ಮಂಡಲಂ** (ಪಾ. ಸೂ. ೬-೨-೧೮೨) ಅಭಿತಃ=ಉಭಯತಃ, ಸರ್ವತೋ ವಾ ಭವತೀತಿ ಅಭಿತೋಭಾವಿ, **ಸುಪ್ಯಜಾತೌ**—, ಎಂದು ಣಿನಿ ಪ್ರತ್ಯಯಾಂತವಾದ ಶಬ್ದ. ನವ ಮೊದಲಾದುವುಗಳಲ್ಲಿ ಎರಡು ಕಡೆಯಲ್ಲಿಯೂ ಇರುವ ಕೂಲ ಎಂದಾಗಲೀ, ಮನುಷ್ಯನ ಸುತ್ತಲೂ ವ್ಯಾಪಿಸಿರುದಿ ಕೋಪ ಮೊದಲಾದುವಾಗಲೀ ಈ ಪದದಿಂದ ಬೋಧಿತವಾಗುತ್ತೆ. ಪರಿ ಎಂಬ ಉಪಸರ್ಗದ ಮುಂದೆ ಇರುವ ಅಭಿತೋಭಾವ್ಯರ್ಥಕ ಶಬ್ದವೂ, ಮಂಡಲಶಬ್ದವೂ ಅಂತೋದಾತ್ತವಾಗುವುದು ಎಂದು ಸೂತ್ರಾರ್ಥ, ಇದರಿಂದ ಮನ್ಯು ಎಂಬುದು ಅಂತೋದಾತ್ತ

**ಇಷುಮ್**—ಇಷಗತೌ, ದಿವಾದಿ, ಇಷು ಎಂದು ಉದಿತ್ಕರಣವು ಬೇಕಿಲ್ಲ ಎಂದು ಈ ಸೂಕ್ತ ೮ ನೇ ಮಂತ್ರ ದಲ್ಲಿ ನಿರೂಪಿಸಿದೆ. ಇಷ್ಯತಿ-ಗಚ್ಛತಿ ಎಂದರೆ ಬಿಟ್ಟ ಒಡನೆಯೇ ಬಹುದೂರ ಹೋಗತಕ್ಕ ಬಾಣ ಎಂದು ಅರ್ಥ. **ಇಷೇಃ ಕಿಚ್ಚ** (ಉ. ಸೂ. ೧-೧೩) **ಧಾನ್ಯೇ ನಿತ್** (ಉ. ಸೂ. ೧-೯) ರಿಂದ ನಿತ್ ಎಂದು ಅನುವೃತ್ತವಾಗುತ್ತದೆ. ಇಷಗತೌ ಧಾತು ಮುಂದೆ ಉ ಪ್ರತ್ಯಯ ಬರುತ್ತೆ. ಅದು ಕಿತ್ ಮತ್ತು ನಿತ್ ಆಗುತ್ತೆ ಎಂದು ಸೂತ್ರಾರ್ಥ. ಪ್ರತ್ಯಯ ಕಿತ್ ಆದ್ದರಿಂದ ಲಘೂಪಧಗುಣ ಬರುವುದಿಲ್ಲ. ನಿತ್ ಆದ್ದರಿಂದ ಪ್ರತ್ಯಯಾಂತ ಶಬ್ದ ಆದ್ಯುದಾತ್ತ ವಾಗುತ್ತದೆ. **ಉನ್ದೇ ರಿಚ್ಚಾದೇಃ** ಎಂಬ ಸೂತ್ರದ ಮುಂದೆ **ಈಷೇಃಕಿಚ್ಚ** (ಉ. ಸೂ. ೧-೧೩) ಎಂದು ಈಗಿರುವ ಉಣಾದಿಸೂತ್ರಗಳಲ್ಲಿ ಪಾಠ ಇದೆ. ಈ ಪಾಠವನ್ನೇ ಇಟ್ಟು ವ್ಯಾಖ್ಯಾಕಾರರು ವಿವರಿಸಿದ್ದಾರೆ. ಈಷಗತಿ ಹಿಂಸಾದರ್ಶನೇಷು ಎಂಬ ಧಾತು ಮುಂದೆ ಉಪ್ರತ್ಯಯ ಬರುತ್ತೆ ಅದು ಕಿತ್ ಮತ್ತು ನಿತ್ ಆಗುತ್ತೆ. ಅಲ್ಲದೆ ಧಾತು ವಿನ ಮೊದಲನೇ ಅಕ್ಷರವಾದ ಈಗೆ ಇ ಬರುತ್ತೆ ಎಂದು ಸೂತ್ರಾರ್ಥವಾಗುತ್ತದೆ. ಈಷಧಾತು ೧ನೇ ಗಣದಲ್ಲಿ ಈ ಮೂರು ಅರ್ಥಗಳಲ್ಲಿ ಪಠಿತವಾಗಿದೆ. ಈಷತೇ, ಗಚ್ಛತಿ ಅಥವಾ ಹಿನಸ್ತಿ ಅಥವಾ ನ ವೃಶ್ಯತೇ ಎಂಬ ಮೂರು ಅರ್ಥ ಗಳನ್ನೂ ಹೇಳಬಹುದು. ಬೇಗ ಹೋಗುತ್ತೆ, ಶತ್ರುಗಳನ್ನು ಕೊಲ್ಲುತ್ತದೆ. ತಾನು ಹೋಗುವ ವೇಗಾತಿಶಯದಿಂದ ಕಾಣಿಸುವುದಿಲ್ಲ. ಈ ಮೂರು ಅರ್ಥಗಳಲ್ಲಿ ಯಾವ ಅರ್ಥವನ್ನು ವಿವಕ್ಷೆಮಾಡಿದರೂ ಇಷು ಶಬ್ದವು ನಿಷ್ಪನ್ನ ವಾಗುತ್ತದೆ.

**ಸೃಜತ**— ಸೃಜ ವಿಸರ್ಗೇ ತುದಾದಿ. ಲೋಟ್ ಮಧ್ಯಮ ಸಗೆ ತ ಆದೇಶ. **ತುದಾದಿಭ್ಯಃ ಶಃ** ಎಂದು ಶ ವಿಕರಣ, ಇದು ಙಿತ್ತಾಗುವುದರಿಂದ ಪೂರ್ವಕ್ಕೆ ಗುಣ ಬರುವುದಿಲ್ಲ.

**ದ್ವಿಷಮ್**—ದ್ವಿಷ ಅಪ್ರೀತೌ ಅದಾದಿ. **ಕ್ವಿಪ್ ಚ** ಎಂದು ಕ್ವಿಪ್ ಪ್ರತ್ಯಯ ॥೧೦॥

ಇಲ್ಲಿಗೆ ೩೯ ನೇ ಸೂಕ್ತ ಮುಗಿಯಿತು



# ನಲವತ್ತನೆಯ ಸೂಕ್ತವು

---

**ಉತ್ತಿಷ್ಠೇತ್ಯಷ್ಟರ್ಚಂ ಪಂಚಮಂ ಸೂಕ್ತಂ ಕಣ್ವಸ್ಯಾರ್ಷಂ ಬಾರ್ಹತಂ। ಯುಜಃ ಸತೋ-ಬೃಹತ್ಯಃ। ಅಯುಜೋ ಬೃಹತ್ಯಃ। ಬ್ರಹ್ಮಣಸ್ಪತಿದೇವತಾಕಂ। ಅನುಕ್ರಮ್ಯತೇ ಚ। ಉತ್ತಿಷ್ಠಾಷ್ಟೌ ಬ್ರಾಹ್ಮಣಸ್ಪತ್ಯಮಿತಿ॥ ಸೂಕ್ತವಿನಿಯೋಗೋ ಲೈಂಗಿಕಃ। ಚತುರ್ವಿಂಶೇಽಹನಿ ಮರುತ್ವತೀಯೇ ಪ್ರಾಕೃತಾದ್ಬ್ರಾಹ್ಮಣಸ್ಪತ್ಯಾತ್ಪ್ರಗಾಥಾತ್ಪೂರ್ವಮುತ್ತಿಷ್ಠ ಬ್ರಹ್ಮಣಸ್ಪತ ಇತ್ಯಯಂ ಪ್ರಗಾಥಃ। ಮರುತ್ವ-ತೀಯೆ ಇತಿ ಖಂಡೇ ಸೂತ್ರಿತಂ। ಪ್ರೈತು ಬ್ರಹ್ಮಣಸ್ಪತಿರುತ್ತಿಷ್ಠ ಬ್ರಹ್ಮಣಸ್ಪತೆ ಇತಿ ಬ್ರಾಹ್ಮಣಸ್ಪತ್ಯಾ-ವಾವಪತೇ ಪೂರ್ವೌ ನಿತ್ಯಾತ್। ಆ. ೭-೩। ಇತಿ॥ ಆದ್ಯಾ ತು ಪ್ರವರ್ಗ್ಯೇಽಪ್ಯಭಿಷ್ಟವೇ ವಿನಿಯುಕ್ತಾ। ಉತ್ತಿಷ್ಠ ಬ್ರಹ್ಮಣಸ್ಪತ ಇತ್ಯೇತಾಮುಕ್ತ್ವಾವತಿಷ್ಠತೇ। ಆ. ೪-೭। ಇತಿ ಸೂತ್ರಿತತ್ವಾತ್॥**

ಅನುವಾದವು— **ಉತ್ತಿಷ್ಠ ಬ್ರಹ್ಮಣಸ್ಪತೇ** ಎಂಬುದು ಈ ಎಂಟನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀಛಂದಸ್ಸಿನವು; ಅಸಮ ಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಸಿನವು. ಈ ಸೂಕ್ತಕ್ಕೆ ಬ್ರಹ್ಮಣಸ್ಪತಿಯೇ ದೇವತೆಯು. ಅನುಕ್ರಮಣಿಕೆ ಯಲ್ಲಿ— **ಉತ್ತಿಷ್ಠಾಷ್ಟೌ ಬ್ರಾಹ್ಮಣಸ್ಪತ್ಯಮಿತಿ**— ಉತ್ತಿಷ್ಠ ಎಂಬ ಎಂಟುಋಕ್ಕಿನ ಸೂಕ್ತವು ಬ್ರಹ್ಮಣಸ್ಪತಿದೇವತಾ ಕವು, ಎಂದಿರುವುದು. ಸೂಕ್ತವಿನಿಯೋಗವು ಲೈಂಗಿಕವು, ಮತ್ತು ಸೋಮಯಾಗದ ಇಪ್ಪತ್ತುನಾಲ್ಕನೆಯ ದಿನದಲ್ಲಿ ಮರುತ್ವತೀಯಶಸ್ತ್ರಮಂತ್ರಪಠನ ಮಾಡುವಾಗ ಬ್ರಹ್ಮಣಸ್ಪತಿ ಸಂಬಂಧವಾದ ಪ್ರಾಗಾಥಛಂದಸ್ಸಿನ ಋಕ್ಕುಗಳಿಗಾಗಿ ಈ **ಉತ್ತಿಷ್ಠ ಬ್ರಹ್ಮಣಸ್ಪತೇ** ಎಂಬ ಸೂಕ್ತವನ್ನು ಪಠಿಸುವರು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ಮರುತ್ವತೀಯೆ** ಎಂಬ ಖಂಡದಲ್ಲಿ **ಪ್ರೈತು ಬ್ರಹ್ಮಣಸ್ಪತಿ** (ಋ. ಸ. ೧-೪೦-೩) **ರುತ್ತಿಷ್ಠ ಬ್ರಹ್ಮಣಸ್ಪತ** (ಪಾ. ಸೂ. ೧-೪೦-೧) **ಇತಿ ಬ್ರಹ್ಮಣಸ್ಪತ್ಯಾವಾವಪತೇ ಪೂರ್ವೌ ನಿತ್ಯಾತ್।** ಎಂಬ ಸೂಕ್ತದಿಂದ ವಿವೃತ ವಾಗಿರುವುದು. (ಆ. ೭-೩) ಈ ಸೂಕ್ತದ ಮೊದಲನೆಯ ಋಕ್ಕಿಗೆ ಪ್ರವರ್ಗ್ಯ ಮತ್ತು ಅಭಿಷ್ಟವ ಯಾಗಗಳಲ್ಲಿ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ (ಆ. ೪-೭) **ಉತ್ತಿಷ್ಠ ಬ್ರಹ್ಮಣಸ್ಪತ ಇತ್ಯೇತಮುಕ್ತ್ವಾವ-ತಿಷ್ಠತೇ** ಎಂಬ ಸೂತ್ರದಿಂದ ವಿಸ್ತೃತವಾಗಿರುವುದು.

॥ ಓಂ ॥

## ಸೂಕ್ತ—೪೦

॥ ಮಂಡಲ—೧ ॥ ಅನುವಾಕ—೮ ॥ ಸೂಕ್ತ—೪೦ ॥

॥ ಅಷ್ಟಕ— ೧ ॥ ಅಧ್ಯಾಯ— ೩ ॥ ವರ್ಗ—೨೦, ೨೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೮ ॥

॥ ಋಷಿಃ— ಕಣ್ವೋ ಘೌರಃ ॥

॥ ದೇವತಾ— ಬ್ರಹ್ಮಣಸ್ಪತಿಃ ॥

॥ ಛಂದಃ— ಪ್ರಾಗಾಥಂ ಬಾರ್ಹತಂ ॥ ೧, ೩, ೫, ೭, ಬೃಹತೀ । ೨, ೪, ೬, ೮, ಸತೋಬೃಹತೀ ॥

॥ ಸಂಹಿತಾಪಾಠಃ ॥

ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇಮಹೇ ।
ಉಪ ಪ್ರ ಯಂತು ಮರುತಃ ಸುದಾನವ ಇಂದ್ರ ಪ್ರಾಶೂರ್ಭವಾ
ಸಚಾ ॥ ೧ ॥

॥ ಪದಪಾಠಃ ॥

ಉತ್ । ತಿಷ್ಠ । ಬ್ರಹ್ಮಣಃ । ಪತೇ । ದೇವಽಯಂತಃ । ತ್ವಾ । ಈಮಹೇ ।
ಉಪ । ಪ್ರ । ಯಂತು । ಮರುತಃ । ಸುಽದಾನವಃ । ಇಂದ್ರ । ಪ್ರಾಶೂಃ ।
ಭವ । ಸಚಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ಬ್ರಹ್ಮಣಸ್ಪತೇ ಏತನ್ನಾಮಕ ದೇವ ಉತ್ತಿಷ್ಠ । ಅಸ್ಮದನುಗ್ರಹಾಯ ತ್ವದೀಯನಿವಾಸಾದುತ್ಥಾನಂ ಕುರು । ದೇವಯಂತೋ ದೇವಾನ್ ಕಾಮಯಮಾನಾ ವಯಂ ತ್ವಾ ತ್ವಾಮೀಮಹೇ । ಯಾಚಾಮಹೇ । ಸುದಾನವಃ ಶೋಭನದಾನಯುಕ್ತಾ ಮರುತ ಉಪ ಪ್ರ ಯಂತು । ಸಮೀಪೇ ಪ್ರಕರ್ಷೇಣ ಗಚ್ಛಂತು । ಹೇ ಇಂದ್ರ ತ್ವಂ ಸಚಾ ಬ್ರಹ್ಮಣಸ್ಪತಿನಾ ಸಹ ಪ್ರಾಶೂಃ ಸೋಮಸ್ಯ ಪ್ರಾಶಕೋ ಭವ । ಯದ್ವಾ । ವೃತ್ರಸ್ಯ ಹಿಂಸಕೋ ಭವ ॥ ಉತ್ತಿಷ್ಠ । ಊರ್ಧ್ವಕರ್ಮಕತ್ವಾದಾತ್ಮನೇಪದಾಭಾವಃ । ಪಾ. ೧-೩-೨೪ । ಬ್ರಹ್ಮಣಸ್ಪತೇ । ಸುಬಾಮಂತ್ರಿತೇ ಇತಿ ಪರಾಂಗವದ್ಭಾವಾತ್ ಷಷ್ಠ್ಯಾಮಂತ್ರಿತಸಮುದಾಯಕಸ್ಯಾಷ್ಟಮಿಕಂ ಸರ್ವಾನುದಾತ್ತತ್ವಂ । ದೇವಯಂತಃ । ದೇವಾನಾತ್ಮನ ಇಚ್ಛಂತಃ । ಸುಪ ಆತ್ಮನಃ ಕ್ಯಚ್ । ನ ಛಂದಸ್ಯಪುತ್ರಸ್ಯೇತೀತ್ವಸ್ಯೇವ ದೀರ್ಘಸ್ಯಾಪಿ ನಿಷೇಧಃ । ಅಶ್ವಾಘಸ್ಯಾದಿತಿ ಪುನರಾತ್ವವಿಧಾನಸಾಮರ್ಥ್ಯಾತ್ । ಈಮಹ ಇತ್ಯಾದಯೋ ಗತಾಃ । ಪ್ರಾಶೂಃ । ಶೄ ಹಿಂಸಾಯಾಂ । ಪ್ರಕರ್ಷೇಣ ಸಮಂತಾತ್ ಶೃಣಾತಿ ಹಿನಸ್ತೀತಿ ಪ್ರಾಶೂಃ । ಬಹುಲಂ ಛಂದಸೀತ್ಯುತ್ವಂ । ರ್ವೋರುಪಧಾಯಾ ಇತಿ ದೀರ್ಘಃ । ಕೃದುತ್ತರಪದಪ್ರಕೃತಿಸ್ವರತ್ವಂ । ಭವ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘತ್ವಂ ॥

॥ ಪ್ರತಿಪದಾರ್ಥ ॥

**ಬ್ರಹ್ಮಣಸ್ಪತೇ**—ದೇವನಾದ ಬ್ರಹ್ಮಣಸ್ಪತಿಯೇ । **ಉತ್ತಿಷ್ಠ**—(ನಮಗೆ ಅನುಗ್ರಹ ಮಾಡುವುದಕ್ಕಾಗಿ) ಎದ್ದೇಳು. । **ದೇವಯಂತಃ**— ದೇವತೆಗಳ (ಸಹಾಯವನ್ನು) ಅಪೇಕ್ಷಿಸುವ ನಾವುಗಳು । **ತ್ವಾ**—ನಿನ್ನನ್ನು । **ಈಮಹೇ**— ಪ್ರಾರ್ಥಿಸುತ್ತೇವೆ. । **ಸುದಾನವಃ**—ಶುಭಕರವಾದ ದಾನವುಳ್ಳವರಾದ । **ಮರುತಃ**—ಮರುತ್ತುಗಳು । **ಉಪ ಪ್ರ ಯಂತು**— (ನಮ್ಮ) ಅತ್ಯಂತ ಸಮೀಪಕ್ಕೆ ಬರಲಿ । **ಇಂದ್ರ**— ಎಲೈ ಇಂದ್ರನೇ (ನೀನು) । **ಸಚಾ**— ಬ್ರಹ್ಮಣಸ್ಪತಿಯೊಡನೆ । **ಪ್ರಾಶೂಃ**— ಸೋಮರಸವನ್ನು ಪಾನಮಾಡುವವನಾಗಿ ಅಥವಾ ವೃತ್ರಾಸುರನ ನಾಶಕನಾಗಿ । **ಭವ**— ಆಗು ।

॥ ಭಾವಾರ್ಥ ॥

ಎಲೈ ಬ್ರಹ್ಮಣಸ್ಪತಿಯೇ, ನಮಗೆ ಅನುಗ್ರಹ ಮಾಡುವುದಕ್ಕಾಗಿ ಸ್ವಸ್ಥಾನದಿಂದ ಎದ್ದೇಳು. ನಿನ್ನ ರಕ್ಷಣೆಯನ್ನು ಕೊಡು ಎಂದು ದೇವತೆಗಳ ಸಹಾಯವನ್ನು ಅಪೇಕ್ಷಿಸುವ ನಾವು ನಿನ್ನನ್ನು ಪ್ರಾರ್ಥಿಸುತ್ತೇವೆ. ಮಂಗಳಕರಗಳಾಗಿಯೂ ಉದಾರವಾಗಿಯೂ ನಮಗೆ ದಾನಗಳನ್ನು ಕೊಡತಕ್ಕ ಮರುತ್ತುಗಳು ನಮ್ಮ ಸಮೀಪಕ್ಕೆ ಬರಲಿ. ಎಲೈ ಇಂದ್ರನೇ, ಬ್ರಹ್ಮಣಸ್ಪತಿಯೊಡನೆ ಸೋಮರಸವನ್ನು ಪಾನಮಾಡು ಅಥವಾ ವೃತ್ರಾಸುರನ ನಾಶಕನಾಗಿ ಆಗು.

## English Translation

Rise up, Brahmanaspati; we who desire to worship the gods Solicit you; may the liberal Maruts also come up with you; and Indra, be a partaker of the libation.

ವಿಶೇಷವಿಷಯಗಳು

**ಬ್ರಹ್ಮಣಸ್ಪತೇ**—ಈ ಸೂಕ್ತಕ್ಕೆ ಬ್ರಹ್ಮಣಸ್ಪತಿಯು ದೇವತೆಯು. ಈ ಬ್ರಹ್ಮಣಸ್ಪತಿಯು ಯಾರು ? ದೇವತೆಗಳಲ್ಲಿ ಇವನ ಸ್ಥಾನಮಾನಗಳೇನು ಎಂಬುವುದನ್ನು ಸೂಕ್ಷ್ಮವಾಗಿ ವಿವರಿಸುವೆವು. ಯಾಸ್ಕಮಹರ್ಷಿಯು ನಿರುಕ್ತದಲ್ಲಿ (ನಿ. ೧೦–೧೪) ಬ್ರಹ್ಮಣಸ್ಪತಿಯ ವಿಚಾರವಾಗಿ ಈ ರೀತಿ ಹೇಳಿರುವರು.

**ಬ್ರಹ್ಮಣಸ್ಪತಿಃ । ಬ್ರಹ್ಮಣಸ್ಪತಿರ್ಬ್ರಹ್ಮಣಃ ಪಾತಾ ವಾ ಪಾಲಯಿತಾ ವಾ ॥**

ಇಲ್ಲಿ ಬ್ರಹ್ಮಶಬ್ದಕ್ಕೆ ಅನ್ನವೆಂದೂ ಧನವೆಂದೂ ಸ್ತೋತ್ರವೆಂದೂ ಅರ್ಥವಾಗುವುದು. (ನಿ. ೩-೯) ಆದುದರಿಂದ **ಬ್ರಹ್ಮಣಃ ಪಾತಾ** ಎಂದರೆ **ಅನ್ನಸ್ಯ ಪಾತಾ** ಅನ್ನಕ್ಕೆ (ಆಹಾರಕ್ಕೆ) ಸ್ವಾಮಿಯು ಅಥವಾ ಅಧಿಪತಿಯು ಎಂದರ್ಥವು. ಬ್ರಹ್ಮಣಸ್ಪತಿಯು ಹೇಗೆ ಅನ್ನಕ್ಕೆ ಅಧಿಪತಿಯು ಎಂದರೆ ಯಾಸ್ಕರು ಉದಾಹರಣೆಗಾಗಿ—

**ಅಶ್ಮಾಸ್ಯಮವತಂ ಬ್ರಹ್ಮಣಸ್ಪತಿರ್ಮಧುಧಾರಮಭಿ ಯಮೋಜಸಾತೃಣತ್ ।**
**ತಮೇವ ವಿಶ್ವೇ ಪಪಿರೇ ಸ್ವರ್ದೃಶೋ ಬಹುಸಾಕಂ ಸಿಸಿಚುರುತ್ಸಮುದ್ರಿಣಂ ॥**
(ಋ. ಸ. ೭-೨೪-೪)

ಎಂಬ ಋಕ್ಕನ್ನು ಕೊಟ್ಟು ಅದಕ್ಕೆ—

**ಅಶನವಂತಮಾಸ್ಯಂತನವಂತಮವಾತಿತಂ ಬ್ರಹ್ಮಣಸ್ಪತಿರ್ಮಧುಧಾರಮಭಿಯಮೋಜಸಾ ಬಲೇನಾಭ್ಯತೃಣತ್ತಮೇವ ಸರ್ವೇ ಪಿಬಂತಿ ರಶ್ಮಯಃ ಸೂರ್ಯದೃಶೋ ಬಹ್ವೇನಂ ಸಹ ಸಿಂಚಂತ್ಯುತ್ಸಮುದ್ರಿಣಮುದಕವಂತಂ** (ನಿ. ೧೦-೧೩)

ಎಂದು ನಿರುಕ್ತವನ್ನು ಹೇಳಿರುವರು. ಮುಖ್ಯಾಭಿಪ್ರಾಯವೇನೆಂದರೆ, ಈ ಬ್ರಹ್ಮಣಸ್ಪತಿಯು ಸೂರ್ಯರಶ್ಮಿಗಳ ಸಹಾಯದಿಂದ ಮೇಘಗಳು ಸಮುದ್ರೋದಕವನ್ನು ಪಾನಮಾಡಿ ಆ ಉದಕವನ್ನು ವಿಶೇಷವಾಗಿ ಭೂಮಿಯ ಮೇಲೆ ಮಳೆಯಾಗಿ ಬೀಳುವಂತೆ ಮಾಡುವುದರಿಂದ ಮಳೆಯಿಂದ ಓಷಧಿವನಸ್ಪತಿಗಳೂ, ಓಷಧಿವನಸ್ಪತಿಗಳಿಂದ ಅನ್ನಾದ್ಯಾಹಾರವೂ ಲಭಿಸುವುದೆಂದೂ, ಆದುದರಿಂದ ಬ್ರಹ್ಮಣಸ್ಪತಿಯು ಅನ್ನಕ್ಕೆ ಪಾಲಕನು ಎಂದರ್ಥವು. ಬ್ರಹ್ಮ ಶಬ್ದಕ್ಕೆ ಸ್ತೋತ್ರವೆಂದೂ ಧನವೆಂದೂ ಅರ್ಥಮಾಡುವಾಗ ಬ್ರಹ್ಮಣಸ್ಪತಿಯು ಮಂತ್ರಕ್ಕೆ ಅಧಿಪತಿಯು. ಮತ್ತು ಧನಕ್ಕೆ ಅಧಿಪತಿಯು ಎಂದು ಹೇಳಬೇಕು. ಭಾಷ್ಯಕಾರರು ಈ ಅರ್ಥವನ್ನೇ ಮೇಲೆ ಉದಾಹರಿಸಿರುವ ಋಕ್ಕಿಗೆ ವ್ಯಾಖ್ಯಾನ ಮಾಡುವಾಗ ಹೇಳಿರುವರು.

ಬ್ರಹ್ಮಣಸ್ಪತಿಯ ಪರವಾದ ಮಂತ್ರಗಳು ಋಗ್ವೇದದಲ್ಲಿ ವಿಶೇಷವಾಗಿವೆ. ಆ ಮಂತ್ರಗಳಲ್ಲಿ ಬ್ರಹ್ಮಣ ಸ್ಪತಿಯು ಧನವನ್ನೂ ಅನ್ನವನ್ನೂ ಕೊಡುವನೆಂದು ಹೇಳಿದೆ. ಈ ಬ್ರಹ್ಮಣಸ್ಪತಿಯು ಪ್ರತ್ಯೇಕ ದೇವತೆಯೋ ಅಥವಾ ಅಗ್ನಿಯ ರೂಪಾಂತರವೇ ಎಂದು ಅನೇಕರು ಸಂಶಯಪಡುವರು. ಅಗ್ನಿ ಮೊದಲಾದ ಇತರ ದೇವತೆ

ಗಳೂ ಸಹ ಧನವನ್ನೂ ಅನ್ನವನ್ನೂ ಕೊಡುವವರಾದುದರಿಂದ ಬ್ರಹ್ಮಣಸ್ಪತಿಯು ಅಗ್ನಿಯ ಒಂದು ವಿಶೇಷ ರೂಪವೆಂದು ಕೆಲವರ ವಾದವು. ಯಾಸ್ಕರು ಈ ವಿಷಯದಲ್ಲಿ ಮೌನವಾಗಿರುವರು ಎಂದರೆ ಸ್ಪಷ್ಟವಾಗಿ ಏನನ್ನೂ ಹೇಳಿರುವುದಿಲ್ಲ. ಬ್ರಹ್ಮಣಸ್ಪತಿಯ ಪರವಾದ ಋಕ್ಕುಗಳಲ್ಲಿಯೂ ಈ ದೇವತೆಯು ಅಗ್ನಿಯ ರೂಪಾಂತರವೆಂದು ಹೇಳಲು ಸಾಕಾದಷ್ಟು ಆಧಾರಗಳಿಲ್ಲ. ಆದುದರಿಂದ ಬ್ರಹ್ಮಣಸ್ಪತಿಯು ಇಂದ್ರಾಗ್ನಿಗಳಂತೆ ಒಂದು ಪ್ರತ್ಯೇಕ ದೇವತೆಯೆಂದು ಧಾರಾಳವಾಗಿ ಹೇಳಬಹುದು.

**ಉಪ ಪ್ರ ಯಂತು ಮರುತಃ**—ಮರುದ್ದೇವತೆಗಳೂ ನಿನ್ನ ಸಮೀಪದಲ್ಲಿ ಎಂದರೆ ಜತೆಯಲ್ಲಿಯೇ ಬರಲಿ.

**ಪ್ರಾಶೂಃ—ಸೋಮಸ್ಯ ಪ್ರಾಶಕಃ।** ಸೋಮರಸವನ್ನು ಪ್ರಾಶನ ಮಾಡುವವನು ಎಂದರೆ ಪಾನ ಮಾಡುವವನು.

**ಸಚಾ**— ಸಹಿತನಾಗಿ ಎಂದರೆ ಬ್ರಹ್ಮಣಸ್ಪತಿಯಿಂದ ಸಹಿತನಾಗಿ.

ವ್ಯಾಕರಣಪ್ರಕ್ರಿಯಾ

**ಉತ್ತಿಷ್ಠ—ಉದೋಽನೂರ್ಧ್ವಕರ್ಮಣಿ** (ಪಾ. ಸೂ. ೧-೩-೨೪) ಊರ್ಧ್ವದೇಶಸಂಯೋಗಾನುಕೂಲ ಕ್ರಿಯಾಭಿನ್ನವಾದ ಕ್ರಿಯೆಯನ್ನು ಹೇಳುವ ಸ್ಥಾಧಾತುವು ಉದ್ ಎಂಬ ಉಪಸರ್ಗದ ಮುಂದೆ ಇದ್ದರೆ ಆ ಸ್ಥಾಧಾತು ಮುಂದೆ ಇರುವ ಲಕಾರಕ್ಕೆ ಆತ್ಮನೇ ಪದ ಬರುತ್ತೆ ಎಂದು ಸೂತ್ರಾರ್ಥ. ಇಲ್ಲಿ ಬ್ರಹ್ಮಣಸ್ಪತಿ ಎಂಬ ದೇವತೆಯು ಸ್ವಸ್ಥಾನದಿಂದ ಮೇಲಕ್ಕೆ ಎದ್ದರೆ ಊರ್ಧ್ವದೇಶ ಸಂಯೋಗವಾಗುತ್ತೆ. ಆದ್ದರಿಂದ ಈ ಸ್ಥಾಧಾತು ಊರ್ಧ್ವದೇಶ ಸಂಯೋಗಾನುಕೂಲಕ್ರಿಯಾವಾಚಿಯಾಗುತ್ತೆ. ಏವಂಚ ಈ ಸೂತ್ರದಿಂದ ಆತ್ಮನೇಪದವು ಬರುವುದಿಲ್ಲ. ಅಂದ ಮೇಲೆ ಪರಸ್ಮೈಪದವೇ ಬರುತ್ತದೆ. ಷ್ಠಾ ಗತಿನಿವೃತ್ತೌ ೧ನೇ ಗಣ. ಧಾತ್ವಾದಿಷಕಾರಕ್ಕೆ ಸಕಾರ. ರಕಾರಕ್ಕೆ ನಿವೃತ್ತಿ. ಲೋಟ್, ಸಿಪ್, ಹಿ ಆದೇಶ, ಶಪ್, **ಪಾಘ್ರಾಧ್ಮಾ—,** ಎಂದು ತಿಷ್ಠ ಆದೇಶ ಸ್ಥಾಧಾತುವಿಗೆ ಬರುತ್ತೆ. ತಿಷ್ಠ+ಅ+ಹಿ. **ಅತೋಹೇಃ** ಎಂದು ಹಿಗೆ ಲುಕ್, ಅದಂತಾದೇಶಪಕ್ಷದಲ್ಲಿ ಪರರೂಪ. ಉದ್ ಉಪಸರ್ಗ ಸೇರಿ ದರೆ ಉತ್ತಿಷ್ಠ ಎಂದಾಗುತ್ತೆ.

**ಬ್ರಹ್ಮಣಸ್ಪತೇ—**ಬ್ರಹ್ಮಣಃ ಪತಿಃ, ಬ್ರಹ್ಮಣಸ್ಪತಿಃ, ತಸ್ಯಸಂಬುದ್ಧಿಃ **ಷಷ್ಠ್ಯಾಃಪತಿಪುತ್ರ ಪೃಷ್ಠಪಾರಪದ ಪಯಸ್ಪೋಷೇಷು** (ಪಾ. ಸೂ. ೮-೩-೫೩) ಎಂದು ಷಷ್ಠೀವಿಭಕ್ತಿಸಂಬಂಧಿವಿಸರ್ಗಕ್ಕೆ ಸಕಾರಾದೇಶ. ಇಲ್ಲಿ ಪತೇ ಎಂಬುದು ಆಮನ್ತ್ರಿತ. ಸ್ವರವನ್ನು ಮಾಡುವಾಗ **ಸುಬಾಮನ್ತ್ರಿತೇ ಪರಾಂಗವತ್ಸ್ವರೇ** ಎಂದು ಬ್ರಹ್ಮಣಃ ಎಂಬುದು ಪತೇ ಎಂಬುದಕ್ಕೆ ಅಂಗವಾಗುತ್ತದೆ. ಏವಂಚ ಬ್ರಹ್ಮಣಸ್ಪತೇ ಎಂಬುದಕ್ಕೆ **ಆಮನ್ತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ಸರ್ವಾನುದಾತ್ತ ಬರುತ್ತದೆ.

**ದೇವಯನ್ತಃ**—ದೇವಾನ್ ಆತ್ಮನ ಇಚ್ಛಂತಃ ಎಂದು ವಿಗ್ರಹ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂದು ಕ್ಯಚ್ ಪ್ರತ್ಯಯ. **ಅಕೃತ್ಸಾರ್ವಧಾತುಕಯೋಃ** (ಪಾ. ಸೂ. ೭-೪-೨೫) **ಕ್ಯಚಿ ಚ** (ಪಾ. ಸೂ. ೭-೪-೩೩) **ನ ಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂದು ಸೂತ್ರಗಳ ಕ್ರಮ ಇದೆ 'ಅನಂತರಸ್ಯವಿಧಿರ್ವಾ

ಭವತಿ ಪ್ರತಿಷೇಧೋ ವಾ ' ಎಂಬ ಪರಿಭಾಷೆಯಿಂದ **ನ ಛಂದಂಸಿ** ಎಂಬ ನಿಷೇಧವು ತನಗೆ ಸಮೀಪದಲ್ಲಿರುವ **ಕ್ಯಚಿಚ** ಎಂಬ **ಈತ್ವಕ್ಕೆ** ಮಾತ್ರ ನಿಷೇಧಕ ಎಂದು ಏರ್ಪಡುತ್ತದೆ. ಹೀಗಾದರೆ ಅಶ್ವಾಯನ್ತಃ ಎಂಬಲ್ಲಿ **ಅಕೃತ್ಸಾರ್ವ—,** ಎಂದು ದೀರ್ಘ ಬಂದು ಅಶ್ವಾಯನ್ತಃ ಎಂಬ ರೂಪವಾಗುವುದರಿಂದ **ಅಶ್ವಾಘಸ್ಯಾತ್** (ಪಾ. ಸೂ. ೭-೪-೩೭) ಎಂದು ಆತ್ವವಿಧಿಯು ವ್ಯರ್ಥವಾಗುತ್ತದೆ. ಇದು ವ್ಯರ್ಥವಾಗಿ **ನ ಛಂದಸಿ—,** ಎಂಬುದು ಕ್ಯಚ್ ಪರದಲ್ಲಿರುವಾಗ ಯಾವ ಯಾವುದು ಬರುವುದೋ ಅದೆಲ್ಲಕ್ಕೂ ನಿಷೇಧಕ. **ಅನಂತರಸ್ಯ—,** ಎಂಬ ಪರಿಭಾಷೆಯು ಇಲ್ಲಿ ಬರುವುದಿಲ್ಲ ಎಂದು ಜ್ಞಾಪಿಸುತ್ತದೆ. ಏವಂಚ ದೇವ+ಯ ಎಂಬಲ್ಲಿ **ನಛಂದಸಿ—,** ಎಂಬುದರಿಂದ ಈತ್ವದೀರ್ಘಗಳೆರಡಕ್ಕೂ ನಿಷೇಧ ಬರುತ್ತದೆ.

**ಈಮಹೇ—** ಈ ಪದವನ್ನು ಮೊದಲುಗೊಂಡು ಇಂದ್ರ ಎಂಬಲ್ಲಿಯ ವರೆಗಿನ ಪದಗಳಿಗೆ ಪ್ರಕ್ರಿಯೆಯನ್ನು ಹಿಂದೆಯೇ ಹೇಳಿದೆ.

**ಪ್ರಾಶೂಃ—** ಶ್ೃ ಹಿಂಸಾಯಾಂ ಕ್ರ್ಯಾದಿ. ಪ್ರಕರ್ಷೇಣ ಆಸಮನ್ತಾತ್ ಹಿನಸ್ತಿ ಎಂದು ವಿಗ್ರಹ. **ಬಹುಲಂ ಛಂದಸಿ** (ಪಾ. ಸೂ. ೭-೧-೧೦೩) ಛಂದಸ್ಸಿನಲ್ಲಿ ಉತ್ವವು ಬಹುಲವಾಗಿ ಬರುತ್ತೆ ಎಂದು ಋಗೆ ಉಕಾರಾದೇಶವು ರೇಫ ಶಿರಸ್ಕವಾಗಿ ಬರುತ್ತೆ. ಪ್ರಾಶುರ್, ಸುಪ್ರತ್ಯಯ. **ಹಲ್ಙ್ಯಾಭ್ಯಃ—,** ಎಂದು ಸುಲೋಪ. **ರ್ವೋರುಪಧಾಯಾ-ದೀರ್ಘ ಇಕಃ** (ಪಾ. ಸೂ. ೮-೨-೭೬) ಪದಾಂತವಿಷಯದಲ್ಲಿ ರೇಫಾಂತ ಅಥವಾ ವಕಾರಾಂತವಾದ ಧಾತುವಿನ ಉಪಧಾಭೂತವಾದ ಇಕ್‌ಗೆ ದೀರ್ಘ ಬರುತ್ತೆಎಂದು ದೀರ್ಘ. ಪ್ರಾಶೂರ್. **ಖರವಸಾನಯೋಃ—,** ಎಂದು ವಿಸರ್ಗ.

**ಭವ—** ಭೂ ಸತ್ತಾಯಾಂ ಲೋಟ್ ಮಧ್ಯಮ ಏಕವಚನ. ಸಂಹಿತಾಕಾಲದಲ್ಲಿ **ದ್ವ್ಯಚೋಽತಸ್ತಿಙಃ** ಎಂದು ದೀರ್ಘ ಬರುತ್ತೆ. ॥೧॥



॥ ಸಂಹಿತಾಪಾಠಃ ॥

ತ್ವಾಮಿದ್ಧಿ ಸಹಸಸ್ಪುತ್ರ ಮರ್ತ್ಯ ಉಪಬ್ರೂತೇ ಧನೇ ಹಿತೇ।
ಸುವೀರ್ಯಂ ಮರುತ ಆ ಸ್ವಶ್ವ್ಯಂ ದಧೀತ ಯೋ ವ ಆಚಕೇ॥

॥ ಪದಪಾಠಃ ॥

ತ್ವಾಂ । ಇತ್ । ಹಿ । ಸಹಸಃ । ಪುತ್ರ । ಮರ್ತ್ಯಃ । ಉಪಽಬ್ರೂತೇ । ಧನೇ ।
ಹಿತೇ ।

ಸುಽವೀರ್ಯಂ । ಮರುತಃ । ಆ । ಸುಽಅಶ್ವ್ಯಂ । ದಧೀತ । ಯಃ ।
ವಃ । ಆಽಚಕೇ ॥ ೨ ॥

ಸಾಯಣಭಾಷ್ಯಂ

ಹೇ ಸಹಸಸ್ಪುತ್ರ ಬಲಸ್ಯ ಬಹುಪಾಲಕ ಬ್ರಹ್ಮಣಸ್ಪತೇ । ಪುತ್ರಃ ಪುರು ತ್ರಾಯತೇ ನಿಪರಣಾದ್ವೇತಿ ನಿರುಕ್ತಂ । ನಿ. ೨-೧೧ । ಮರ್ತ್ಯೋ ಮನುಷ್ಯೋ ಹಿತೇ ಶತ್ರುಷು ಪ್ರಕ್ಷಿಪ್ತೇ ಧನೇ ನಿಮಿತ್ತಭೂತೇ ಸತಿ ತ್ವಾಮಿತ್ । ತ್ವಾಮೇವೋಪಬ್ರೂತೇ ಹಿ । ಸಮೀಪಂ ಪ್ರಾಪ್ಯ ಸ್ತೌತಿ ಖಲು । ತದ್ಧನಸಂಪಾದನಾಯ ಪ್ರಾರ್ಥಯತ ಇತ್ಯರ್ಥಃ । ಹೇ ಮರುತೋ ಯೋ ಧನಾರ್ಥೀ ಮರ್ತ್ಯೋ ವೋ ಯುಷ್ಮಾನ್ ಬ್ರಹ್ಮಣಸ್ಪತಿಸಹಿತಾನಾಚಕೇ ಸ್ತೌತಿ। ಸ ಮರ್ತ್ಯಃ ಸ್ವಶ್ವ್ಯಂ ಶೋಭನಾಶ್ವಯುಕ್ತಂ ಸುವೀರ್ಯಂ ಶೋಭನವೀರ್ಯಯುಕ್ತಂ ಚ ಧನಂ ದಧೀತ । ಧಾರಯೇತ್ ॥ ಸಹಸಸ್ಪುತ್ರ । ಬ್ರಹ್ಮಣಸ್ಪತ ಇತಿವತ್ । ಷಷ್ಠ್ಯಾಃ ಪತಿಪುತ್ರೇತಿ ವಿಸರ್ಜನೀಯಸ್ಯ ಸತ್ವಂ । ಉಪಬ್ರೂತೇ । ಹಿ ಚೇತಿ ನಿಘಾತಪ್ರತಿಷೇಧಃ । ತಿಙಿ ಚೋದಾತ್ತವತೀತಿ ಗತೇರನುದಾತ್ತತ್ವಂ । ಹಿತೇ । ನಿಷ್ಠಾಯಾಂ ದಧಾತೇರ್ಹಿರಿತಿ ಹಿರಾದೇಶಃ । ಸುವೀರ್ಯಂ । ಶೋಭನಂ ವೀರ್ಯಂ ಯಸ್ಯೇತಿ ಬಹುವ್ರೀಹೌ ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ । ಸ್ವಶ್ವ್ಯಂ । ಅಶ್ವಾನಾಂ ಸಮೂಹೋಽಶ್ವೀಯಂ । ಕೇಶಾಶ್ವಾಭ್ಯಾಂ ಯಞ್ಛಾವನ್ಯತರಸ್ಯಾಂ । ಪಾ. ೪-೨-೪೮ । ಇತಿ ಸಮೂಹಾರ್ಥೇ ಛಪ್ರತ್ಯಯಃ । ಛಸ್ಯ ಈಯಾದೇಶಃ । ಶೋಭನಮಶ್ವೀಯಂ ಯಸ್ಯ ತತ್ ಸ್ವಶ್ವ್ಯಂ । ಈಕಾರಲೋಪಶ್ಛಾಂದಸಃ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ದಧೀತ । ಸೀಯುಟಃ ಸಕಾರಲೋಪೇ ಸತ್ಯಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಪಾದಾದಿತ್ವಾನ್ನಿಘಾತಾಭಾವಃ । ಆಚಕೇ । ಕೈ ಗೈ ರೈ ಶಬ್ದೇ । ಆದೇಚ ಇತ್ಯಾತ್ವಂ । ಲಿಟಿ ದ್ವಿರ್ವಚನೇಽಭ್ಯಾಸಸ್ಯ ಹ್ರಸ್ವಚುತ್ವೇ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಪ್ರತ್ಯಯಸ್ವರಃ । ಯದ್ವೃತ್ತಯೋಗಾದನಿಘಾತಃ ॥

ಪ್ರತಿಪದಾರ್ಥ

**ಸಹಸಸ್ಪುತ್ರ**— ಬಲದ ಪಾಲಕನಾದ ಎಲೈ ಬ್ರಹ್ಮಣಸ್ಪತಿಯೇ । **ಮರ್ತ್ಯಃ**— ಮಾನವನು । **ಹಿತೇ**-(ಶತ್ರುವಿನಲ್ಲಿ) ಇಟ್ಟಿರತಕ್ಕ । **ಧನೇ**— ಧನದ ಉದ್ದಿಶ್ಯವಿರಲಾಗಿ । **ತ್ವಾಮಿತ್**—ನಿನ್ನನ್ನೇ । **ಉಪ ಬ್ರೂತೇ**— ಸಮೀಪಿಸಿ ಸ್ತೋತ್ರಮಾಡುತ್ತಾನೆ. । **ಮರುತಃ**—ಎಲೈ ಮರುತ್ತುಗಳೇ । **ಯಃ**—ಧನಾಪೇಕ್ಷಿಯಾದ ಯಾವ ಮಾನವನು । **ವಃ**—(ಬ್ರಹ್ಮಣಸ್ಪತಿಯೊಡನೆ ಇರುವ) ನಿಮ್ಮನ್ನು । **ಆ ಚಕೇ**—ಸ್ತೋತ್ರಮಾಡುತ್ತಾನೋ (ಅವನು)। **ಸ್ವಶ್ವ್ಯಂ** – ಶ್ರೇಷ್ಠವಾದ ಕುದುರೆಯೊಡಗೂಡಿಯೂ । **ಸುವೀರ್ಯಂ**— ಉತ್ಕೃಷ್ಟವಾದ ವೀರ್ಯದೊಡಗೂಡಿಯೂ ಇರತಕ್ಕ ಧನವನ್ನು । **ದಧೀತ**— ಹೊಂದಲಿ. ।

ಭಾವಾರ್ಥ

ಎಲೈ ಬ್ರಹ್ಮಣಸ್ಪತಿಯೇ, ನೀನು ಶಕ್ತಿಯ ಪಾಲಕನು. ಎಂದರೆ ಅತ್ಯಂತಬಲಶಾಲಿಯು ನಿನ್ನ ಶಕ್ತಿಯ ಸಹಾಯದಿಂದ ಶತ್ರುವಿನಲ್ಲಿರುವ ಧನದ ಉದ್ದಿಶ್ಯವಾಗಿ ನಿನ್ನನ್ನು ಸಮೀಪಿಸಿ ನಿನ್ನ ಸ್ತೋತ್ರವನ್ನು ಮಾಡುತ್ತಾನೆ. ಎಲೈ ಮರುತ್ತುಗಳೇ, ಶಕ್ತಿರಕ್ಷಕನಾದ ಬ್ರಹ್ಮಣಸ್ಪತಿಯೊಡನೆ ನೀವು ಇರುವುದರಿಂದ ಧನಾಪೇಕ್ಷಿಯಾದ ಯಾವ ಮಾನವನು ನಿಮ್ಮನ್ನು ಸ್ತೋತ್ರ ಮಾಡುತ್ತಾನೋ ಅವನು ಶ್ರೇಷ್ಠವಾದ ಕುದುರೆ, ಉತ್ಕೃಷ್ಟವಾದ ವೀರ್ಯ ಮತ್ತು ಧನವನ್ನು ಸಹ ಹೊಂದುವನು.

English Translation

O Son of strength, ( Brahmanaspati ) the mortal worships you with praises for the sake of wealth abandoned by the enemy , Maruts, may he who praises you obtain (wealth consisting of) excellent horses and great strength.

ವಿಶೇಷ ವಿಷಯಗಳು

**ಸಹಸಸ್ಪುತ್ರ**—ಬಲದ ಅಥವಾ ಶಕ್ತಿಯ ಪುತ್ರನು. ಈ ಶಬ್ದವು ಅಗ್ನಿಯ ಪರವಾಗಿ ಉಪಯೋಗಿಸುವುದು ವಿಶೇಷ ರೂಢಿ ಇದ್ದರೂ ಇಂದ್ರನ ಪರವಾಗಿಯೂ, ಇಲ್ಲಿ ಬ್ರಹ್ಮಣಸ್ಪತಿಯ ಪರವಾಗಿಯೂ ಉಪಯೋಗಿಸಲ್ಪಟ್ಟಿರುವುದು. ಭಾಷ್ಯಕಾರರು ಈ ಋಕ್ಕಿನಲ್ಲಿ ಪುತ್ರಶಬ್ದಕ್ಕೆ, ಯಾಸ್ಕರ— **ಪುತ್ರಃ ಪುರುತ್ರಾಯತೇ ನಿಪರಣಾದ್ವಾ** (ನಿ. ೨-೧೧) ಎಂಬ ನಿರ್ವಚನದ ಪ್ರಕಾರವಾಗಿ ಪಾಲಕನೆಂದು ಅರ್ಥ ವಿವರಣೆಮಾಡಿರುವರು. ಬಲದ ಪಾಲಕ ಎಂದರೆ ಬಲವನ್ನು ಕೊಡುವವನು ಎಂದರ್ಥವು.

**ಉಪ ಬ್ರೂತೇ**—ಸಮೀಪಂ ಪ್ರಾಪ್ಯ ಸ್ತೌತಿ । ನಿನ್ನ ಸಮೀಪಕ್ಕೆ ಬಂದು ಸ್ತೋತ್ರ ಮಾಡುತ್ತಾನೆ.

**ಹಿತೇ**—ಧಾ ಧಾತುವಿನಿಂದ ನಿಷ್ಪನ್ನವಾದ ಶಬ್ದ. ಇಡಲ್ಪಟ್ಟ ಎಂದರೆ ಯುದ್ಧದಲ್ಲಿ ಶತ್ರುಗಳು ಸೋತು ಓಡಿಹೋಗುವಾಗ ಬಿಟ್ಟ ಧನವು ಎಂದರೆ ಅಶ್ವರಥಾದಿಗಳು, ಧನ ಮುಂತಾದ ವಸ್ತುಗಳು

**ಸ್ವಶ್ವ್ಯಂ—ಶೋಭನಾಶ್ವಯುಕ್ತತ್ವಂ ।** ಉತ್ತಮವಾದ ಕುದುರೆಗಳ ಲಾಭವು

**ಆ ದಧೀತ—ಧಾರಯೇತ್ । ನಿಸ್ಸಂಶಯಂ ಪ್ರಾಪ್ನುಯಾತ್**— ಖಂಡಿತವಾಗಿಯೂ ಹೊಂದುವನು.

**ಯೋ ವ ಆ ಚಕೇ**—ನಿಮ್ಮನ್ನು ಸ್ತುತಿಸಲಪೇಕ್ಷಿಸುವನು, ಎಂದರೆ ನಿಮ್ಮನ್ನು ಸ್ತುತಿಸುವನು

ವ್ಯಾಕರಣಪ್ರಕ್ರಿಯಾ

**ಸಹಸಸ್ಪುತ್ರ**—ಷಹ ಮರ್ಷಣೇ. ಔಣಾದಿಕವಾದ ಅಸುನ್ ಪ್ರತ್ಯಯ. ಪುರು ತ್ರಾಯತೇ ಇತಿ ಪುತ್ರಃ ತಸ್ಯ ಸಂಬುದ್ಧಿಃ, ತ್ರೈಙ್ ಪಾಲನೇ **ಆತೋಽನು ಪಸರ್ಗೇಕಃ** ಎಂದು ಕ ಪ್ರತ್ಯಯ ಆಕಾರಲೋಪ. ಬ್ರಹ್ಮಣ ಸ್ಪತೀ ಎಂಬಲ್ಲಿ ಹೇಳಿದ ಹಾಗೆ ವಿಸರ್ಗಕ್ಕೆ ಸಕಾರಾದೇಶವೂ ಸರ್ವಾನುದಾತ್ತವೂ ಬರುತ್ತದೆ.

**ಉಪಬ್ರೂತೇ**—ಬ್ರೂಞ್ ವ್ಯಕ್ತಾಯಾಂ ವಾಚಿ ಅದಾದಿ. ಉಭಯಪದಿ. ಇಲ್ಲಿ ಆತ್ಮನೇಪದಪ್ರತ್ಯಯ ಬಂದಿದೆ. ಶಪ್‌ಗೆ ಲುಕ್. **ಹಿಚ**-ಹಿ ಎಂಬುದರಿಂದ ಯೋಗ ಇದ್ದರೆ ತಿಙಂತವು ಸರ್ವಾನುದಾತ್ತವಾಗುವುದಿಲ್ಲ ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ. ತೇ ಎಂಬುದು ಪ್ರತ್ಯಯ ಸ್ವರದಿಂದ ಉದಾತ್ತ. **ತಿಙಿ ಚೋದಾತ್ತವತಿ** (ಪಾ. ಸೂ. ೮-೧-೭೧) ಉದಾತ್ತವುಳ್ಳ ತಿಙಂತವು ಪರದಲ್ಲಿದ್ದರೆ ಗತಿಸಂಜ್ಞಕವು ಸರ್ವಾನುದಾತ್ತವಾಗುತ್ತೆ ಎಂಬುದರಿಂದ ಉಪ ಎಂಬುದು ಅನುದಾತ್ತ. **ನಿಪಾತಾ ಆದ್ಯುದಾತ್ತಾಃ** ಎಂಬುದು ಇಲ್ಲಿ ಬರುವುದಿಲ್ಲ ಏಕೆಂದರೆ-**ನಿಪಾತಾ ಆದ್ಯುದಾತ್ತಾಃ** ಎಂಬುದಕ್ಕೆ **ತಿಙಿಚೋ**—ಎಂಬ ಸೂತ್ರವು ಅಪವಾದವಾದುದು. 'ಆ ಮನ್ದ್ರೈರಿನ್ದ್ರ ಹರಿಭಿರ್ಯಾಹಿ' ಇಲ್ಲಿ ರಕ್‌ಪ್ರತ್ಯಯಾಂತವಾದ ಮನ್ದ್ರಶಬ್ದ ಉದಾತ್ತ. ಇದು ಪರದಲ್ಲಿರುವಾಗ ಆ ಎಂಬುದಕ್ಕೆ ಅನುದಾತ್ತವಾರಣೆಗಾಗಿ ತಿಙ್ ಎಂಬುದು ಈ ಸೂತ್ರದಲ್ಲಿ ಬೇಕಿಲ್ಲ. **ಯತ್ಕ್ರಿಯಾಯುಕ್ತಾಃ ಪ್ರಾದಯಸ್ತಂ ಪ್ರತ್ಯೇವ ಗತ್ಯುಪಸರ್ಗ ಸಂಜ್ಞಾಃ** ಪ್ರ ಮೊದಲಾದುವು ಯಾವ ಕ್ರಿಯೆಯೊಂದಿಗೆ ಅನ್ವಯಿಸುವುವೋ ಆ ಕ್ರಿಯೆಯನ್ನು ಕುರಿತು ಗತಿ ಉಪಸರ್ಗ ಎಂಬ ಸಂಜ್ಞೆಯುಳ್ಳವುಗಳಾಗುವುವು. ಏವಂಚ **ಗತಿರ್ಗತೌ** ಎಂಬ ಹಿಂದಿನ **ಸೂತ್ರ**ದಿಂದ ಗತಿಃ ಎಂದು ಅನುವೃತ್ತಿಸಲು, ಆ ಗತಿಪದದಿಂದ ಸ್ವಸಂಬಂಧಯೋಗ್ಯವಾದ ಕ್ರಿಯಾವಾಚಕವು ಆಕ್ಷಿಪ್ತವಾಗುತ್ತದೆ. ಕೃದಂತದಲ್ಲಿ ಕೃತ್ಸ್ವರ, ಥಾಥಾದಿಸ್ವರ, ಗತಿಸ್ವರಗಳು ಬರಲಾಗಿ ಗತಿಯು ಅನುದಾತ್ತವೇ ಆಗುವುದರಿಂದ ಅಲ್ಲಿ ಅತಿ ಪ್ರಸಂಗ ಇಲ್ಲ. ಅಂತು ಉದಾತ್ತವುಳ್ಳ ಕ್ರಿಯಾವಾಚಿಯು ಪರದಲ್ಲಿದ್ದರೆ ಗತಿಯು ಅನುದಾತ್ತವಾಗುತ್ತೆ ಎಂದು ಅರ್ಥವಾಗುತ್ತೆ. ಮನ್ದ್ರಶಬ್ದವು ಕ್ರಿಯಾವಾಚಿಯಲ್ಲದುದರಿಂದ ಅಲ್ಲಿ ಅನುದಾತ್ತ ಬರಲಾರದು. ಅದ್ದರಿಂದ ತಿಙಿ ಎಂಬುದು ಈ ಸೂತ್ರದಲ್ಲಿ ಏತಕ್ಕೆ ಎಂದು ಸಂಶಯ ಬರುತ್ತೆ. ತಿಙಿ ಎಂದು ಇಲ್ಲದೇ ಇದ್ದರೆ ಧಾತುವು ಉದಾತ್ತವಾಗಿರುವಾಗಲೇ ಈ ಸೂತ್ರ ಪ್ರವರ್ತಿಸುವುದು. ಪ್ರತ್ಯಯವು ಉದಾತ್ತವಾಗಿದ್ದರೆ ಪ್ರವರ್ತಿಸಲಾರದು. ಪ್ರಕೃತದಲ್ಲಿ ಪ್ರತ್ಯಯವು ಉದಾತ್ತವಾಗಿರುವುದರಿಂದ ಗತಿಗೆ ಅನುದಾತ್ತ ಬರದೇ ಹೋಗುವುದು. ಆದ್ದರಿಂದ ತಿಙಿ ಎಂದು ಹೇಳಿದೆ. ಹೀಗೆ ಹೇಳಿದರೆ ತಿಙ್ ಪ್ರತ್ಯಯಾಂತದಲ್ಲಿ ಧಾತುಪ್ರತ್ಯಯಗಳಲ್ಲಿ ಯಾವುದು ಉದಾತ್ತವಾಗಿದ್ದರೂ ಈ ಸೂತ್ರ ಪ್ರವರ್ತಿಸುವುದು. **ತಿಙ್‌ಗ್ರಹಣಮುದಾತ್ತವತಃ ಪರಿಮಾಣಾರ್ಥಂ** ಎಂದು ಕೌಮುದಿಯಲ್ಲಿ ಹೇಳಿರುವರು. ಇದಕ್ಕಾಗಿ ತಿಙಿ ಎಂದು ಹೇಳಬೇಕು.

**ಹಿತೇ**—ಡುಧಾಞ್ ಧಾರಣಪೋಷಣಯೋಃ, ಜುಹೋತ್ಯಾದಿ. **ನಿಷ್ಠಾ** ಎಂದು **ಕ್ತ** ಪ್ರತ್ಯಯ. **ದಧಾತೇರ್ಹಿಃ** (ಪಾ. ಸೂ. ೭-೪-೪೨) ತಕಾರಾದಿಯಾದ **ಕಿತ್** ಪ್ರತ್ಯಯ ಪರದಲ್ಲಿದ್ದರೆ ಧಾ ಧಾತುವಿಗೆ ಹಿ ಆದೇಶ ಬರುತ್ತೆ ಎಂದು ಹಿ ಆದೇಶ.

**ಸುವೀರ್ಯಮ್**—ಶೋಭನಂ ವೀರ್ಯಂ ಯಸ್ಯ ಸಃ ಎಂದು ಬಹುವ್ರೀಹಿ. **ವೀರವೀರ್ಯೌ ಚ** (ಪಾ. ಸೂ. ೬-೨-೧೨) ಛಂದಸ್ಸಿನಲ್ಲಿ ಬಹುವ್ರೀಹಿ ಸಮಾಸ ಬಂದಿದ್ದರೆ ಸು ಶಬ್ದಕ್ಕಿಂತಲೂ ಪರದಲ್ಲಿರುವ ವೀರ-ವೀರ್ಯ ಎಂಬ ಪದಗಳು ಆದ್ಯುದಾತ್ತಗಳಾಗುವುವು. ಎಂದು ವೀ ಉದಾತ್ತ. ೧೦ ನೇಗಣದ ವೀರ ವಿಕ್ರಾಂತೌ ಧಾತು ಮುಂದೆ ಪಚಾದಿ ಲಕ್ಷಣವಾದ ಅಚ್ ಪ್ರತ್ಯಯ ಬಂದರೆ ವೀರ ಎಂದಾಗುತ್ತೆ. ಅದೇ ಧಾತು ಮುಂದೆ **ಅಚೋಯತ್** ಎಂಬುದರಿಂದ ಅಥವಾ **ತತ್ರಸಾಧುಃ** ಎಂಬುದರಿಂದ ಯತ್ ಬಂದರೆ ವೀರ್ಯ ಎಂದು ರೂಪಗಳಾಗುವುವು ಎಂದು ತಿಳಿಯುವುದು.

**ಸ್ವಶ್ವ್ಯಮ್**—ಅಶ್ವಾನಾಂ ಸಮೂಹಃ ಎಂದು ವಿಗ್ರಹ ಕುದುರೆಗಳ ಗುಂಪು ಎಂದು ಅರ್ಥ. **ಕೇಶಾಶ್ವಾಭ್ಯಾಂ ಯಞ್ ಛಾವನ್ಯತರಸ್ಯಾಮ್** (ಪಾ. ಸೂ. ೪-೨-೪೮) ಕೇಶ-ಅಶ್ವ ಈ ಶಬ್ದಗಳ ಮುಂದೆ ಸಮೂಹ ಎಂಬ ಅರ್ಥದಲ್ಲಿ ಕ್ರಮವಾಗಿ ಯಞ್ ಛ ಪ್ರತ್ಯಯಗಳು ಬರುವುವು. ಎಂದು ಅರ್ಥ. ಇದರಿಂದ ಅಶ್ವ ಶಬ್ದದ ಮುಂದೆ ಛ ಪ್ರತ್ಯಯ, **ಆಯನೇಯೀನೀಯಿಯಃ—,** (ಪಾ ಸೂ. ೭-೧-೨) ಎಂದು ಛಗೆ ಈಯ್ ಆದೇಶ. ಶೋಭನಂ ಅಶ್ವೀಯಂ ಯಸ್ಯ ತತ್ ಎಂದು ಬಹುವ್ರೀಹಿ. ಒಳ್ಳೆಯ ಕುದುರೆ ಸಮೂಹದಿಂದ ಕೂಡಿದ ಎಂದು ಅರ್ಥ. ಈಕಾರಕ್ಕೆ ಛಾಂದಸವಾಗಿ ಲೋಪ ಬರುತ್ತದೆ. **ಪರಾದಿಶ್ಛಂದಸಿ ಬಹುಲಂ** ಎಂದು ಉತ್ತರಪದವು ಆದ್ಯುದಾತ್ತ.

**ದಧೀತ**—ಡುಧಾಞ್ ಧಾರಣಪೋಷಣಯೋಃ **ಲಿಙಸ್ಸೀಯುಟ್** ಎಂದು ವಿಧಿ ಲಿಙ್‌ಗೆ ಸೀಯುಟ್ ಆಗಮ. ಲಿಙ್‌ಗೆ ತ ಆದೇಶ. ಧಾ+ಸೀಯ್+ತ, ಶಪ್ ಗೆ ಶ್ಲು. ದ್ವಿತ್ವ ಹ್ರಸ್ವ ಜಶ್ತ್ವಗಳು. **ಲಿಙಸ್ಸಲೋಪೋನನ್ತ್ಯಸ್ಯ** ಎಂದು ಸೀಯುಟ್‌ನ ಸಕಾರಕ್ಕೆ ಲೋಪ. **ಸುಟ್‌ತಿಥೋಃ** (ಪಾ. ಸೂ. ೩-೪-೧೦೭) ಎಂದು ಬರುವ ಸಕಾರಕ್ಕೂ ಹಿಂದಿನಂತೆ ಲೋಪ. **ಶ್ನಾಭ್ಯಸ್ತಯೋರಾತಃ** ಎಂದು ಆಕಾರಕ್ಕೆ ಈಕಾರಾದೇಶ ಯ ಲೋಪ. **ಅಭ್ಯಸ್ತಾನಾಮಾದಿಃ** ಎಂದು ಆದ್ಯುದಾತ್ತ ಬರುತ್ತದೆ. ೪ನೇ ಪಾದದ ಆದಿಯಲ್ಲಿದೆ. **ಅಪಾದಾದೌ** ಎಂದು ನಿಷೇಧ ಬರುವುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಆ ಚಕೇ**— ಕೈ ಗೈ ಶಬ್ದೇ ೧ನೇ ಗಣ. **ಆದೇಚ ಉಪದೇಶೇಽಶಿತಿ** ಎಂದು ಐಗೆ ಆಕಾರ. **ವ್ಯತ್ಯಯೋಬಹುಲಂ** ಎಂದು ಪರಸ್ಮೈಪದಕ್ಕೆ ಬದಲಾಗಿ ಆತ್ಮನೇಪದ ಬಂದಿದೆ. ಲಿಟ್ಟಿಗೆ ತ. ಏಶ್, ದ್ವಿತ್ವ, ಕಾ+ಕಾ+ಏ. ಅಭ್ಯಾಸಕ್ಕೆ ಹ್ರಸ್ವ. **ಕುಹೋಶ್ಚುಃ** ಎಂದು ಕಕಾರಕ್ಕೆ ಚಕಾರ. ಚಕಾ+ಏ **ಆತೋ ಲೋಪ ಇಟಿಚ** (ಪಾ. ಸೂ. ೬-೪-೬೪) ಕಿತ್ ವಾ ಙಿತ್ ಆದ ಅಜಾದ್ಯಾರ್ಧಧಾತುಕ, ಇಟ್ ಇವು ಪರದಲ್ಲಿದ್ದರೆ ಆಕಾರಕ್ಕೆ ಲೋಪ ಬರುತ್ತೆ ಎಂದು ಆಕಾರಲೋಪ, ಪ್ರತ್ಯಯಸ್ವರ ಬರುತ್ತದೆ. **ಯೋ ವ ಆ ಚಕೇ** ಯೋ ಎಂಬ ಯದ್ವೃತ್ತಯೋಗ ಇರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ. **ಪೂಜ-**

**ನಾತ್ಪೂಜಿತ—**, ಎಂಬ ಸೂತ್ರದಲ್ಲಿ ಪುನಃ ಪೂಜಿತಗ್ರಹಣದಿಂದ **ಅತ್ರ ಪ್ರಕರಣೇ ಪಂಚಮೀನಿರ್ದೇಶೇಽಪಿ ನಾನಂತರ್ಯಮಿಷ್ಯತೇ** ಎಂದು ಜ್ಞಾಪಿತವಾಗಿದೆ. ಇದನ್ನು ಹಿಂದೆಯೇ ವಿವರಿಸಲಾಗಿದೆ. ಏವಂಚ ವ ಎಂಬುದರಿಂದ ವ್ಯವಧಾನ ಇದ್ದರೂ **ಯದ್ವೃತ್ತಾನ್ನಿತ್ಯಮ್** ಎಂಬುದು ಬರಬಹುದು. ||೨||

|| ಸಂಹಿತಾಪಾಠಃ ||

ಪ್ರೈತು ಬ್ರಹ್ಮಣಸ್ಪತಿಃ ಪ್ರ ದೇವ್ಯೇತು ಸೂನೃತಾ ।
ಅಚ್ಛಾ ವೀರಂ ನರ್ಯಂ ಪಂಕ್ತಿರಾಧಸಂ ದೇವಾ ಯಜ್ಞಂ
ನಯಂತು ನಃ ॥ ೩ ॥

ಪದಪಾಠಃ

ಪ್ರ । ಏತು । ಬ್ರಹ್ಮಣಃ । ಪತಿಃ । ಪ್ರ । ದೇವೀ । ಏತು । ಸೂನೃತಾ ।
ಅಚ್ಛ । ವೀರಂ । ನರ್ಯಂ । ಪಂಕ್ತಿಽರಾಧಸಂ । ದೇವಾಃ । ಯಜ್ಞಂ ।
ನಯಂತು । ನಃ ॥ ೩ ॥

ಸಾಯಣಭಾಷ್ಯಂ

ಚತುರ್ವಿಂಶೇಽಹನಿ ಮರುತ್ವತೀಯೆ ಉತ್ತಿಷ್ಠ ಬ್ರಹ್ಮಣಸ್ಪತ ಇತ್ಯಸ್ಮಾತ್ಪ್ರಗಾಥಾತ್ಪೂರ್ವಂ ಪ್ರೈತು ಬ್ರಹ್ಮಣಸ್ಪತಿರಿತ್ಯಯಂ ಪ್ರಗಾಥೋ ವಿನಿಯುಕ್ತಃ । ಸೂತ್ರಂ ತೂತ್ತಿಷ್ಠ ಬ್ರಹ್ಮಣಸ್ಪತ ಇತ್ಯತ್ರೈವೋದಾಹೃತಂ ॥ ಮಹಾವೀರಮಾದಾಯ ಶಾಲಾಂ ಪ್ರತಿಗಚ್ಛತ್ಸು ಪ್ರೈತು ಬ್ರಹ್ಮಣಸ್ಪತಿರಿತ್ಯೇತಾಂ ಪಠನ್ ಹೋತಾನುಗಚ್ಛೇತ್ । ಸೂತ್ರಂ ಚ । ಪ್ರೈತು ಬ್ರಹ್ಮಣಸ್ಪತಿರಿತ್ಯನುವ್ರಜೇತ್ । ಆ. ೪-೬ । ಇತಿ ॥ ಏಷೈವಾಗ್ನೀಷೋಮೀಯಪ್ರಣಯನೇಽಪಿ ನಿಯುಕ್ತಾ । ಸೂತ್ರಿತಂ ಚ । ಪ್ರೈತು ಬ್ರಹ್ಮಣಸ್ಪತಿ-ರ್ಹೋತಾ ದೇವೋ ಅಮರ್ತ್ಯಃ । ಆ. ೪-೧೦ । ಇತಿ ॥

ಬ್ರಹ್ಮಣಸ್ಪತಿರ್ದೇವಃ ಪ್ರೈತು । ಅಸ್ಮಾನ್ಪ್ರಾಪ್ನೋತು । ಸೂನೃತಾ ದೇವೀ ಪ್ರಿಯಸತ್ಯರೂಪಾ ವಾಗ್ದೇವತಾ ಪ್ರೈತು । ಅಸ್ಮಾನ್ಪ್ರಾಪ್ನೋತು । ದೇವಾ ಬ್ರಹ್ಮಣಸ್ಪತ್ಯಾದಯೋ ದೇವತಾ ವೀರಂ ಶತ್ರುಂ ನಿಃಶೇಷೇಣ ದೂರೇ ಪ್ರೇರಯಂತು। ತಂ ನರ್ಯಂ ಮನುಷ್ಯೇಭ್ಯೋ ಹಿತಂ ಪಂಕ್ತಿರಾಧಸಂ ಪ್ರಾಹ್ಮಣೋಕ್ತ-ಹವಿಷ್ಪಂಕ್ತ್ಯಾದಿಭಿಃ ಸಮೃದ್ಧಂ ಯಜ್ಞಂ ಪ್ರತಿ ನೋಽಸ್ಮಾನ್ ಅಚ್ಛಾಭಿಮುಖ್ಯೇನ ನಯಂತು ॥ ಪ್ರೈತು । ಏಙಿ ಪರರೂಪಂ । ಪಾ. ೬-೧-೯೪ । ಇತಿ ಪರರೂಪೇ ಪ್ರಾಪ್ತೆ ಏತ್ಯೇಧತ್ಯೂಠ್ಸು । ಪಾ. ೬-೧.೮೯ । ಇತಿ ವೃದ್ಧಿಃ । ದೇವ್ಯೇತ್ವಿತ್ಯತ್ರೋದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯೇತಿ ಸ್ವರಿತತ್ವಂ ।

**ನರ್ಯಂ । ನರೇಭ್ಯೋ ಹಿತಂ । ಪ್ರಾಕ್ಕ್ರೀತೀಯ ಉಗವಾದಿಲಕ್ಷಣೋ ಯತ್ಪ್ರತ್ಯಯೋ ದ್ರಷ್ಟವ್ಯಃ । ಪಾ. ೫-೧-೨ । ಪಂಕ್ತಿರಾಧಸಂ । ಪಂಕ್ತಿಭೀ ರಾಧ್ನೋತಿ ಪಂಕ್ತಿರಾಧಾಃ । ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚ । ಉ. ೪-೨೨೬ । ಇತ್ಯಸುನ್ ಪೂರ್ವಪದಪ್ರಕೃತಿಸ್ವರತ್ವಂ ಚ । ಯಜ್ಞಂ । ಯಜಯಾಚೇತ್ಯಾದಿನಾ ಯಜತೇರ್ನಙ್ ॥**

॥ ಪ್ರತಿಪದಾರ್ಥ ॥

**ಬ್ರಹ್ಮಣಸ್ಪತಿಃ**—ದೇವನಾದ ಬ್ರಹ್ಮಣಸ್ಪತಿಯು । **ಪ್ರೈತು**—ನಮ್ಮ ಸಮಿಾಪಕ್ಕೆ ಬರಲಿ । **ಸೂನೃತಾ**—ಪ್ರಿಯವಾಗಿಯೂ ಸತ್ಯರೂಪವಾಗಿಯೂ ಇರುವ । **ದೇವೀ**—ವಾಗ್ದೇವತೆಯು । **ಪ್ರೈತು**—ನಮ್ಮ ಸಮಿಾಪಕ್ಕೆ ಬರಲಿ । **ದೇವಾಃ**—ಬ್ರಹ್ಮಣಸ್ಪತಿಯೇ ಮುಂತಾದ ದೇವತೆಗಳು । **ವೀರಂ**—ಬಲಶಾಲಿಯಾದ ಶತ್ರುವನ್ನು (ದೂರಕ್ಕೆ ಓಡಿಸಲಿ) । **ನರ್ಯಂ**—ಮಾನವರಿಗೆ ಒಳ್ಳೆಯದನ್ನು ಮಾಡುವುದಾಗಿಯೂ । **ಪಂಕ್ತಿರಾಧಸಂ**—(ಬ್ರಾಹ್ಮಣೋಕ್ತವಾದ) ಹವಿಸ್ಸಿನ ಪಂಕ್ತಿಗಳಿಂದ ತುಂಬಿದ್ದಾಗಿಯೂ ಇರುವ । **ಯಜ್ಞಂ ಅಚ್ಛ**—ಯಜ್ಞಕ್ಕೆ ಅಭಿಮುಖವಾಗಿ । **ನಃ**—ನಮ್ಮನ್ನು । **ನಯಂತು**—ಕರೆದುಕೊಂಡುಹೋಗಲಿ.

ಭಾವಾರ್ಥ

ದೇವನಾದ ಬ್ರಹ್ಮಣಸ್ಪತಿಯೂ, ಸತ್ಯಪ್ರಿಯರೂಪಳಾಗಿರುವ ವಾಗ್ದೇವತೆಯೂ ಮತ್ತು ಇತರ ದೇವತೆಗಳೂ ಸಹ ನಮ್ಮ ಸಮಿಾಪಕ್ಕೆ ದಯಮಾಡಿ ಯಜ್ಞವಿಘ್ನಕಾರಿಯಾಗಿಯೂ ಬಲಶಾಲಿಯಾಗಿಯೂ ಇರುವ ಶತ್ರುವನ್ನು ದೂರಕ್ಕೆ ಓಡಿಸಲಿ. ನಮಗೆ ಒಳ್ಳೆಯದನ್ನು ಮಾಡುವ ಬ್ರಾಹ್ಮಣೋಕ್ತವಾದ ಹವಿಸ್ಸಿನ ಪಂಕ್ತಿಗಳಿಂದ ತುಂಬಿರುವ ಯಜ್ಞಕ್ಕೆ ಅಭಿಮುಖವಾಗಿ ನಮ್ಮನ್ನು ಸುರಕ್ಷಿತವಾಗಿ ಕರೆದುಕೊಂಡುಹೋಗಲಿ.

## English Translation

May Brahmanaspathi approach us ; may the goddess of speech who always speaks the truth come to us ; may the Gods drive away every enemy and conduct us to the sacrifice which is benifical to man and which is well supplied with five fold oblations.

॥ ವಿಶೇಷವಿಷಯಗಳು ॥

ಯಜ್ಞದ ಇಪ್ಪತ್ತನಾಲ್ಕನೆಯ ದಿವಸದಲ್ಲಿ ಮರುತ್ವತೀಯಶಸ್ತ್ರಮಂತ್ರಪಠನ ಸಂದರ್ಭದಲ್ಲಿ ಪ್ರಗಾಥ (ಬೃಹತೀ) ಛಂದಸ್ಸಿನ ಋಕ್ಕುಗಳ ಪಠನಕ್ಕಾಗಿ **ಉತ್ತಿಷ್ಠ ಬ್ರಹ್ಮಣಸ್ಪತೇ** ಮತ್ತು **ಪ್ರೈತು ಬ್ರಹ್ಮಣಸ್ಪತಿಃ** ಎಂಬ ಋಕ್ಕುಗಳನ್ನು ಪಠಿಸಬೇಕೆಂದು ವಿನಿಯೋಗವನ್ನು ಇಲ್ಲಿಯೇ ( ಈ ಸೂಕ್ತದ ಪೀಠಿಕೆ) ಹೇಳಿರುವೆವು. ಪ್ರವರ್ಗ್ಯವೆಂಬ ಯಾಗದಲ್ಲಿ ಹೋತೃವು ಮಹಾವೀರವೆಂಬ, ಯಜ್ಞದಲ್ಲಿ ಉಪಯೋಗಿಸುವ ದೊಡ್ಡ ಮಣ್ಣಿನ ಪಾತ್ರೆಯನ್ನು (ಮಡಕೆಯನ್ನು) ಯಜ್ಞಶಾಲೆಗೆ ತೆಗೆದುಕೊಂಡು ಹೋಗುವಾಗ **ಪ್ರೈತು ಬ್ರಹ್ಮಣಸ್ಪತಿಃ** ಎಂಬ ಈ ಋಕ್ಕನ್ನು

ಪಠಿಸುತ್ತಾ ಹೋಗಬೇಕೆಂದು ಆಶ್ವಲಾಯನಶ್ರೌತ ಸೂತ್ರದಲ್ಲಿ (ಅ. ೪-೭) **ಪ್ರೈತು ಬ್ರಹ್ಮಣಸ್ಪತಿರಿತ್ಯನುವ್ರಜೇತ್** ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು. ಅಗ್ನಿಷೋಮೀಯಪ್ರಣಯನದಲ್ಲಿಯೂ ಈ ಋಕ್ಕಿನ ವಿನಿಯೋಗ ವಿರುವುದೆಂದು ಆಶ್ವಲಾಯನಶ್ರೌತಸೂತ್ರದ (ಅ. ೪-೧೦) **ಪ್ರೈತು ಬ್ರಹ್ಮಣಸ್ಪತಿರ್ಹೋತಾ ದೇವೋ ಅಮರ್ತ್ಯಃ** ಎಂಬ ಸೂತ್ರದಿಂದ ವಿವೃತವಾಗಿರುವುದು.

**ಸೂನೃತಾ**— ಸೂನೃತಾಶಬ್ದಕ್ಕೆ ಉಷೋದೇವತೆಯೆಂದೂ (ನಿ. ೨-೧೯) ಅನ್ನವೆಂದೂ (ನಿ. ೩-೯) ಅರ್ಥಗಳಿದ್ದರೂ ಈ ಋಕ್ಕಿನಲ್ಲಿ ದೇವಿ ಎಂಬ ಶಬ್ದಕ್ಕೆ ವಿಶೇಷಣವಾಗಿರುವುದರಿಂದ ಭಾಷ್ಯಕಾರರು ಪ್ರಿಯಸತ್ಯರೂಪಾ ವಾಗ್ದೇವತಾ ಎಂದು ಅರ್ಥಮಾಡಿರುವರು.

ವೀರಂ— ಈ ಶಬ್ದಕ್ಕೆ ಭಾಷ್ಯಕಾರರು ಶತ್ರುಂ, ಪರಾಕ್ರಮಯುಕ್ತನಾದ ಶತ್ರುವನ್ನು ಎಂದರ್ಥಮಾಡಿರುವರು.

**ನರ್ಯಂ— ನರೇಭ್ಯೋ ಹಿತಂ ।** ಮನುಷ್ಯರಿಗೆ ಹಿತವನ್ನುಂಟುಮಾಡುವ (ಯಜ್ಞ)

**ಪಂಕ್ತಿರಾಧಸಂ— ಬ್ರಾಹ್ಮಣೋಕ್ತಹವಿಷ್ಪಂಕ್ತ್ಯಾದಿಭಿಃ ಸಮೃದ್ಧಂ ।** ಐತರೇಯಾದಿ ಬ್ರಾಹ್ಮಣಗಳಲ್ಲಿ ಹೇಳಿರುವ ಪ್ರಕಾರ ನಾನಾವಿಧ ಹವಿಸ್ಸಿನಿಂದ ಯುಕ್ತವಾದ ಪಂಕ್ತಿಶಬ್ದಕ್ಕೆ ಐದು ಎಂದರ್ಥವಿರುವುದು. ರಾಧಸ್ ಶಬ್ದಕ್ಕೆ ಧನವೆಂದರ್ಥವು. ಐದುವಿಧವಾದ ಧನಗಳುಳ್ಳ ಅಥವಾ ಹವಿಸ್ಸಿನರೂಪದಿಂದಿರುವ ಧನವುಳ್ಳ ಎಂಬರ್ಥ ವನ್ನು ಹೇಳಬಹುದು. **ಪಂಕ್ತಿರಾಧಸಂ** ಎಂಬ ಶಬ್ದವು ಈ ಋಕ್ಕಿನಲ್ಲಲ್ಲದೆ ಋಗ್ವೇದದಲ್ಲಿ ಇನ್ನೆಲ್ಲಿಯೂ ಪಠಿತ ವಾಗಿರುವುದಿಲ್ಲ. ಆದುದರಿಂದ ಈ ಶಬ್ದಕ್ಕೆ ಸರಿಯಾದ ಅರ್ಥವನ್ನು ಹೇಳುವುದು ಕಷ್ಟಸಾಧ್ಯವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಪ್ರೈತು**— ಇಣ್ ಗತೌ, ಲೋಟ್ ಪ್ರಥಮಪುರುಷ ಏಕವಚನದಲ್ಲಿ ಏತು ಎಂದು ಆಗುತ್ತದೆ. ಪ್ರ+ಏತು ಎಂದಿರುವಾಗ **ಏಙಿಪರರೂಪಮ್** (ಪಾ. ಸೂ. ೬-೧-೯೪) ಅವರ್ಣಾಂತವಾದ ಉಪಸರ್ಗದ ಮುಂದೆ ಏಙಾದಿ ಧಾತು ಪರದಲ್ಲಿದ್ದರೆ ಪೂರ್ವಪರವರ್ಣಗಳಿಗೆ ಪರರೂಪವು ಏಕಾದೇಶವಾಗಿ ಬರುತ್ತೆ ಎಂದು ಪರರೂಪವು ಪ್ರಾಪ್ತವಾದರೆ ಅದನ್ನು ಬಾಧಿಸಿ **ಏತ್ಯೇಧತ್ಯೂಠ್ಸು** (ಪಾ. ಸೂ. ೬-೧-೮೯) ಅವರ್ಣದ ಮುಂದೆ ಏಜಾದಿಯಾದ ಇಣ್ ಧಾತು ಅಥವಾ ಏಜಾದಿಯಾದ ಏಧಧಾತು ಇವು ಇದ್ದರೂ ಊಠ್ ಇದ್ದರೂ ಪೂರ್ವಪರಸ್ಥಾನಗಳಿಗೆ ವೃದ್ಧಿಯು ಏಕಾದೇಶ ವಾಗಿ ಬರುವುದು ಎಂದು ವೃದ್ಧಿ ಬರುತ್ತದೆ, ಆ-ಐ-ಔಗಳಿಗೆ ವೃದ್ಧಿಸಂಜ್ಞೆ ಇದೆ. ಆದರೂ ಕಂಠತಾಲುಸ್ಥಾನಿಕ ಗಳಾದ ಅ+ಏ ಇವುಗಳ ಸ್ಥಾನದಲ್ಲಿ ಕಂಠತಾಲು ಸ್ಥಾನಿಕವೂ ವೃದ್ಧಿಸಂಜ್ಞಕವೂ ಆದ ಐ ಬರುತ್ತದೆ.

**ದೇವ್ಯೇತು**— ದೇವೀ+ಏತು **ಇಕೋಯಣಚಿ** (ಪಾ. ಸೂ. ೬-೧-೭೭) ಎಂದು ಈಗೆ ಯ್ ಆದೇಶ. ದೇವೀಶಬ್ದವು ಅಂತೋದಾತ್ತ. **ಉದಾತ್ತಸ್ವರಿತಯೋ ರ್ಯಣಸ್ಸ್ವರಿತೋನುದಾತ್ತಸ್ಯ** (ಪಾ. ಸೂ. ೮-೨-೪) ಸಂಹಿತಾಕಾಲದಲ್ಲಿ ಉದಾತ್ತ ವಾ ಸ್ವರಿತಗಳ ಸ್ಥಾನದಲ್ಲಿ ಬಂದ ಯಣ್‌ನ ಮುಂದೆ ಇರುವ ಅನುದಾತ್ತಕ್ಕೆ ಸ್ವರಿತ ಬರುತ್ತದೆ ಎಂದು ಸ್ವರಿತವು ಏಗೆ ಬರುತ್ತದೆ.

**ನರ್ಯಮ್**—ನರೇಭ್ಯೋಹಿತವಮ್ ಎಂದು ವಿಗ್ರಹ. **ಉಗವಾದಿಭ್ಯೋಯತ್** (ಪಾ. ಸೂ. ೫-೧-೨) ಉಕಾರಾಂತ ಶಬ್ದ ಗವಾದಿಗಣಕ್ಕೆ ಸೇರಿದ ಶಬ್ದ ಇವುಗಳ ಮುಂದೆ **ತೇನಕ್ರೀತಂ** ಎಂಬಲ್ಲಿಯವರೆಗೆ ಹೇಳಿರುವ ಅರ್ಥ ಗಳಲ್ಲಿ ಯತ್ ಪ್ರತ್ಯಯು ಬರುತ್ತೆ ಎಂದು ಅರ್ಥ. ಈ ಸೂತ್ರ ಪ್ರತ್ಯಯ ವಿಶೇಷ ನಿರ್ದೇಶ ಇಲ್ಲದೇ ಇರುವ ಮುಂದಿನ ಅರ್ಥ ನಿರ್ದೇಶ ಇರುವ ಸೂತ್ರಗಳಲ್ಲಿ ಸಂಬಂಧಿಸುತ್ತದೆ. ಏವಂಚ **ತಸ್ಮೈಹಿತಂ** (ಪಾ. ಸೂ. ೫-೧-೫) ಎಂಬಲ್ಲಿಯೂ **ಉಗವಾದಿಭ್ಯೋಯತ್** ಎಂಬುದು ಸಂಬಂಧಿಸುತ್ತೆ- ಉವರ್ಣಾಂತ, ಗವಾದಿಗಣಕ್ಕೆ ಸೇರಿದ ಶಬ್ದಪ್ರಕೃತಿಕವಾದ ಚತುರ್ಥ್ಯಂತದ ಮುಂದೆ ಹಿತಂ ಎಂಬ ಅರ್ಥದಲ್ಲಿ ಯತ್ ಬರುತ್ತೆ ಎಂದು ಸೂತ್ರಾರ್ಥ ಇದರಿಂದ ಯತ್ ಬಂದರೆ ನರ+ಯ, ಯಸ್ಯೇತಿಚ ಎಂದು ಅಕಾರಕ್ಕೆ ಲೋಪ.

**ಪಙ್ಕ್ತಿರಾಧಸಮ್—ಪಙ್ಕ್ತಿವಿಂಶತಿ—,** (ಪಾ. ಸೂ, ೫-೧-೫೯) ಎಂಬ ಸೂತ್ರದಲ್ಲಿ ತಿಪ್ರತ್ಯಯಾಂತ ವಾಗಿ ಪಙ್ಕ್ತಿಶಬ್ದವು ನಿಪಾತಿತವಾಗಿದೆ. ಪಞ್ಚನ್+ತಿ, ಟಿಗೆ ಲೋಪ, ಪನ್‌ಚ್+ತಿ, **ಚೋಃಕುಃ** ಎಂದು ಚ್‌ಗೆ ಕ್, ಅನುಸ್ವಾರ ಪರಸವರ್ಣಗಳು, ಪಞ್ಚಪರಿಮಾಣಮಸ್ಯ ಪಙ್ಕ್ತಿಃ ಎಂದು ವಿಗ್ರಹ, ಈ ಅವಯವಾರ್ಥವು ವ್ಯುತ್ಪತ್ತಿಗೆ ಮಾತ್ರ ರೂಢಿಶಬ್ದವಾದ್ದರಿಂದ ಅನೇಕ ಅರ್ಥಗಳಲ್ಲಿ ಈ ಶಬ್ದಕ್ಕೆ ಪ್ರಯೋಗ ಇದೆ. ಸಾಲು-ಹತ್ತು ಎಂಬ ಸಂಖ್ಯೆ—ಛಂದಸ್ಸು ಮೊದಲಾದ ಅರ್ಥಗಳು ಈ ಪದದಿಂದ ಬೋಧಿತವಾಗುವುವು. ಪಙ್ಕ್ತಿಭಿಃ ರಾಧ್ನೋತಿ ಎಂದು ವಿಗ್ರಹ. ಕಾರಕ ಉಪಪದವಾಗಿದೆ. **ಗತಿಕಾರಕೋಪಪದಯೋಃ ಪೂರ್ವಪದಪ್ರಕೃತಿಸ್ವರತ್ವಂ ಚ** (ಉ. ಸೂ. ೪-೬೭೭) ಗತಿ ಅಥವಾ ಕಾರಕ ಇವು ಉಪಪದವಾಗಿದ್ದರೆ ಧಾತುಗಳ ಮುಂದೆ ಅಸಿ ಪ್ರತ್ಯಯ ಬರುತ್ತದೆ. ಪೂರ್ವಪದಪ್ರಕೃತಿಸ್ವರವೂ ಬರುತ್ತದೆ ಎಂದು ರಾಧ ಸಂಸಿದ್ಧೌ ಧಾತು ಮುಂದೆ ಅಸಿಪ್ರತ್ಯಯ, ಪೂರ್ವ ಪದಪ್ರಕೃತಿಸ್ವರ ಬರುತ್ತದೆ.

**ಯಜ್ಞಮ್**—ಯಜ ದೇವಪೂಜಾದೌ **ಯಜಯಾಚ ಯತ ವಿಚ್ಛ ಪ್ರಚ್ಛ ರಕ್ಷೋನಙ್** (ಪಾ. ಸೂ ೩-೩-೯೦) ಎಂದು ನಙ್ ಪ್ರತ್ಯಯ. ಯಜ್+ನ **ಸ್ತೋಃ ಶ್ಚುನಾಶ್ಚುಃ** ಎಂದು ನ್‌ಗೆ ಚವರ್ಗ ಪಂಚಮ, **ಜಞೋರ್ಜ್ಞಃ,** ಯಜ್ಞ ಎಂದು ಆಗುತ್ತದೆ. ॥೩॥

---

ಸಂಹಿತಾಪಾಠಃ

ಯೋ ವಾಘತೇ ದದಾತಿ ಸೂನರಂ ವಸು ಸ ಧತ್ತೇ ಅಕ್ಷಿತಿ ಶ್ರವಃ ।
ತಸ್ಮಾ ಇಳಾಂ ಸುವೀರಾಮಾ ಯಜಾಮಹೇ ಸುಪ್ರತೂರ್ತಿಮನೇಹಸಂ ॥ ೪ ॥

ಪದಪಾಠಃ

ಯಃ । ವಾಘತೇ । ದದಾತಿ । ಸೂನರಂ । ವಸು । ಸಃ । ಧತ್ತೇ । ಅಕ್ಷಿತಿ ।
ಶ್ರವಃ ।
ತಸ್ಮೈ । ಇಳಾಂ । ಸುಽವೀರಾಂ । ಆ । ಯಜಾಮಹೇ । ಸುಽಪ್ರತೂರ್ತಿಂ ।
ಅನೇಹಸಂ ॥ ೪ ॥

ಸಾಯಣಭಾಷ್ಯಂ

ಯೋ ಯಜಮಾನೋ ವಾಘತೇ ಋತ್ವಿಜೇ ಸೂನರಂ ಸುಷ್ಠು ನೇತವ್ಯಂ ವಸು ಧನಂ ದದಾತಿ ಸ ಯಜಮಾನೋ ಬ್ರಹ್ಮಣಸ್ಪತೇಃ ಪ್ರಸಾದಾದಕ್ಷಿತಿ ಕ್ಷಯರಹಿತಂ ಶ್ರವೋಽನ್ನಂ ಧತ್ತೇ। ಧಾರಯತಿ। ತಸ್ಮೈ ತಾದೃಶಯಜಮಾನಾಯೇಳಾಮೇತನ್ನಾಮಧೇಯಾಂ ಮನೋಃ ಪುತ್ರೀಂ। ಇಳಾ ವೈ ಮಾನವೀ ಯಜ್ಞಾನುಕಾಶಿನ್ಯಾಸೀದಿತಿ ಶ್ರುತ್ಯಂತರಾತ್। ಆ ಯಜಾಮಹೇ। ವಯಮೃತ್ವಿಜಃ ಸರ್ವತೋ ಯಜಾಮಃ। ಕೀದೃಶೀಮಿಳಾಂ। ಸುವೀರಾಂ ಶೋಭನೈರ್ವೀರೈರ್ಭಟೈರ್ಯುಕ್ತಾಂ ಸುಪ್ರತೂರ್ತಿಂ ಸುಷ್ಠು ಪ್ರಕರ್ಷೇಣ ಹಿಂಸಾಕಾರಿಣೀಂ ಅನೇಹಸಂ ಕೇನಾಪ್ಯಹಿಂಸ್ಯಾಂ॥ ದದಾತಿ। ಅನುದಾತ್ತೇ ಚೇತ್ಯಭ್ಯಸ್ತಸ್ಯಾದ್ಯುದಾತ್ತತ್ವಂ। ಯದ್ವೃತ್ತಯೋಗಾದನಿಘಾತಃ। ಸೂನರಂ। ಸುಖೇನ ನೀಯತ ಇತಿ ಸೂನರಂ। ಈಷದ್ದುಃಸುಷ್ವಿತಿ ಖಲ್। ನಿಪಾತಸ್ಯ ಚೇತ್ಯುಪಸರ್ಗಸ್ಯ ದೀರ್ಘತ್ವಂ। ಅಕ್ಷಿತಿ। ಕ್ಷಯೋ ನಾಸ್ತ್ಯಸ್ಯೇತ್ಯಕ್ಷಿತಿ। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ। ನಞ್ಸುಭ್ಯಾಮಿತಿ ತು ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ವಚನಾನ್ನ ಪ್ರವರ್ತತೇ। ಶ್ರವಃ। ಶ್ರೂಯತ ಇತಿ ಶ್ರವಃ। ಶ್ರು ಶ್ರವಣೇ। ಅಸುನೋ ನಿತ್ತ್ವಾದಾದ್ಯುದಾತ್ತತ್ವಂ। ಸುವೀರಾಂ। ಶೋಭನಾ ವೀರಾ ಯಸ್ಯಾಃ ಸಾ ಸುವೀರಾ। ತಾಂ। ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ। ಸುಪ್ರತೂರ್ತಿಂ। ತುರ್ವೀ ಹಿಂಸಾರ್ಥಃ। ಪ್ರಪೂರ್ವಾದಸ್ಮಾದ್ಭಾವೇ ಕ್ತಿನ್। ಶೋಭನಾ ಪ್ರತೂರ್ತಿಃ ಶತ್ರೂಣಾಂ ಹಿಂಸನಂ ಯಸ್ಯಾಃ ಸಾ। ತಾಂ। ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ। ।ಕೃತ್ವಾದಿರ್ವಾ ದ್ರಷ್ಟವ್ಯಃ। ಅನೇಹಸಂ। ನ ಹನ್ಯತ ಇತ್ಯನೇಹಾಃ। ನಞಿ ಹನ ಏಹ ಚ। ಉ. ೪-೨೨೩। ಇತ್ಯಸುನ್ಪ್ರತ್ಯಯೋ ಧಾತೋರೇಹಾದೇಶಶ್ಚ। ನಲೋಪೋ ನಞಃ। ಪಾ. ೬-೩-೭೩। ಇತಿ ನಕಾರಸ್ಯ ಲೋಪಃ। ತಸ್ಮಾನ್ನುಡಚಿ। ಪಾ. ೬-೩-೭೪। ಇತಿ ನುಟ್ ॥

ಪ್ರತಿಪದಾರ್ಥ

**ಯಃ**— ಯಾವ ಯಜಮಾನನು । **ವಾಘತೇ**— ಋತ್ವಿಕ್ಕಿಗೆ । **ಸೂನರಂ**— ಸಂತೋಷದಿಂದ ಸ್ವೀಕರಿಸಲ್ಪಡುವ । **ವಸು**—ಧನವನ್ನು । **ದದಾತಿ**— ಕೊಡುತ್ತಾನೋ । **ಸಃ**— ಆ ಯಜಮಾನನು (ಬ್ರಹ್ಮಣಸ್ಪತಿಯ ಅನುಗ್ರಹದಿಂದ) । **ಅಕ್ಷಿತಿ**— ನಾಶರಹಿತವಾದ । **ಶ್ರವಃ**— ಅನ್ನವನ್ನು । **ಧತ್ತೇ**— ಹೊಂದುತ್ತಾನೆ. । **ತಸ್ಮೈ**— ಆ ಯಜಮಾನನಿಗೋಸ್ಕರ । **ಸುವೀರಾಂ**— ಶ್ರೇಷ್ಠರಾಗಿಯೂ ವೀರರಾಗಿಯೂ ಇರುವ ಭಟರೊಡಗೂಡಿರುವಳೂ । **ಸುಪ್ರತೂರ್ತಿಂ**— (ಶತ್ರುಗಳನ್ನು) ಚೆನ್ನಾಗಿ ಹಿಂಸಿಸುವವಳೂ । **ಅನೇಹಸಂ**— ಇತರರಿಂದ ಹಿಂಸಿಸಲ್ಪಡದೆ ಇರತಕ್ಕವಳೂ ಆದ । **ಇಳಾಂ**— (ಮನುವಿನ ಪುತ್ರಿಯಾದ) ಇಳಾದೇವಿಯನ್ನು ಉದ್ದೇಶಿಸಿ । **ಆ ಯಜಾಮಹೇ**— ಚೆನ್ನಾಗಿ ಯಜ್ಞಮಾಡುತ್ತೇವೆ ।

॥ ಭಾವಾರ್ಥ ॥

ಯಜಮಾನನು ಯಜ್ಞಮಾಡುವಾಗ ಅವನ ಯಜ್ಞಕ್ಕೆ ಸಹಾಯವಾಗಿರುವ ಋತ್ವಿಕ್ಕುಗಳಿಗೆ ಸಮೃದ್ಧವಾದ ಧನದಾನವನ್ನು ಮಾಡಿದರೆ ಅವರು ಸಂತೋಷದಿಂದ ಸ್ವೀಕರಿಸುವರು. ಅಂತಹ ದಾನಮಾಡುವ ಯಜಮಾನನು ಬ್ರಹ್ಮಣಸ್ಪತಿಯ ಅನುಗ್ರಹದಿಂದ ನಾಶರಹಿತವಾದ ಅನ್ನವನ್ನು ಹೊಂದುತ್ತಾನೆ. ಶತ್ರುಕಾಟವನ್ನು ನಾಶಮಾಡುವ ಇಳಾದೇವಿಯು ಅತ್ಯಂತ ಶ್ರೇಷ್ಠರಾಗಿಯೂ ವೀರರಾಗಿಯೂ ಇರುವ ಭಟರಿಂದ ಕೂಡಿರುವುದರಿಂದ ಶತ್ರುಗಳು ಅವಳನ್ನು ಹಿಂಸಿಸಲಾಗುವುದಿಲ್ಲ. ಅವಳು ಸಂಪೂರ್ಣವಾಗಿ ಶತ್ರುಗಳ ನಾಶವನ್ನು ಮಾಡಬಲ್ಲಳು. ಹೀಗೆ ನಿರ್ವಿಘ್ನವಾಗಿ ಯಜ್ಞವನ್ನು ನೆರವೇರಿಸಲು ಸಹಾಯಮಾಡುವ ಮನುಪುತ್ರಿಯಾದ ಇಳಾದೇವಿಯನ್ನು ಉದ್ದೇಶಿಸಿ ಯಜಮಾನನಿಗೋಸ್ಕರ ನಾವು ಯಜ್ಞ ಮಾಡುತ್ತೇವೆ.

## English Translation

He who presents to the priest wealth fit to be accepted recieves inexhaustible wealth ; for him, therefore we worship Ila possessed of brave worriors, who inflicts injuries on enemies but cannot be herself injured.

ವಿಶೇಷ ವಿಷಯ

**ವಾಘತೇ—ಋತ್ವಿಜೇ** । ಭಾರತಾಃ ಕರವಃ ಮೊದಲಾದ ಎಂಟು ಋತ್ವಿಙ್ನಾಮಗಳ ಮಧ್ಯದಲ್ಲಿ ವಾಘತಃ ಎಂಬ ಶಬ್ದವು ಪಠಿತವಾಗಿರುವುದರಿಂದ ವಾಘತೇ ಎಂದರೆ ಋತ್ವಿಜನಿಗೆ ಎಂದರ್ಥವು. (ನಿ ೩-೧೮)

**ಸೂನರಂ—ಸುಖೇನ ನೀಯತೆ ಇತಿ ಸೂನರಂ** । ಸುಲಭವಾಗಿ ಸಾಗಿಸಲು ಅನುಕೂಲವಾದ.

**ಅಕ್ಷಿತಿ—ಕ್ಷಯೋ ನಾಸ್ತ್ಯಸ್ಯೇತಿ ಅಕ್ಷಿತಿ** । ಕ್ಷಯರಹಿತವಾದ, ಯಾವಾಗಲೂ ಕಮ್ಮಿಯಾಗದ, ಬಹು ಹೆಚ್ಚಾದ

**ಇಳಾಂ**— ಇಳಾ ಶಬ್ದಕ್ಕೆ ಪೃಥಿವಿಯೆಂದೂ ( ನಿ. ೨-೫ ) ವಾಕ್ಯವೆಂದೂ ( ನಿ. ೨-೨೩ ) ಅನ್ನವೆಂದೂ ( ನಿ. ೩-೯ ) ಹಸುವೆಂದೂ ( ನಿ. ೩-೯ ) ಇಳಾ ಎಂಬ ದೇವತೆಯೆಂದೂ (ನಿ. ೧೧-೪೮) ಅನೇಕಾರ್ಥಗಳಿರುವವು. ಇಲ್ಲಿ ಇಳಾ ಎಂಬ ದೇವತೆಯನ್ನೇ ಉದ್ದೇಶಿಸಿ ಅರ್ಥಮಾಡಬೇಕು.

**ಸುವೀರಾಂ—ಶೋಭನಾ ವೀರಾ ಯಸ್ಯಾಃ ಸಾ ಸುವೀರಾ ತಾಂ । ಶೋಭನೈರ್ಭಟೈರ್ಯುಕ್ತಾಂ ।** ಶೂರರಾದ ಯುದ್ಧಭಟರಿಂದ ಯುಕ್ತಳಾದ ಇಳಾದೇವಿಯೆಂದರ್ಥವು.

**ಸುಪ್ರತೂರ್ತಿಂ—ತುರ್ವಿ ಹಿಂಸಾರ್ಥಃ । ಶೋಭನಾ ಪ್ರತೂರ್ತಿಃ ಶತ್ರೂಣಾಂ ಹಿಂಸನಂ ಯಸ್ಯಾಃ ಸಾ ತಾಂ । ಪ್ರಕರ್ಷೇಣ ಶತ್ರೂಣಾಂ ಹಿಂಸಾಕಾರಿಣೀಂ ।** ಶತ್ರುಗಳನ್ನು ಬಹಳವಾಗಿ ಹಿಂಸೆಮಾಡುವ ಎಂದರೆ ನಾಶಮಾಡುವ

**ಅನೇಹಸಂ—ನ ಹನ್ಯತ ಇತ್ಯನೇಹಾಃ । ಕೇನಾಪ್ಯಹಿಂಸ್ಯಾಂ।** ಯಾರಿಂದಲೂ ಹಿಂಸಿಸಲ್ಪಡಲು ಸಾಧ್ಯವಿಲ್ಲದ, ಅಪ್ರತಿಹತಳಾದ. **ಸುವೀರಾಂ, ಸುಪ್ರತೂರ್ತಿಂ, ಅನೇಹಸಂ** ಎಂಬ ಶಬ್ದಗಳು ಇಳಾಂ ಎಂಬ ಶಬ್ದಕ್ಕೆ ವಿಶೇಷಣಗಳು.

॥ ವ್ಯಾಕರಣಪ್ರಕ್ರಿಯಾ ॥

**ದದಾತಿ**—ಡುದಾಞ್ ದಾನೇ, ಲಟ್ ತಿಪ್, ಶಪ್‌ಗೆ ಶ್ಲು-ದ್ವಿತ್ವ-ಹ್ರಸ್ವ-ದದಾತಿ, ತಿಪ್ ಪಿತ್ತಾಗ್ದರಿಂದ ಅನುದಾತ್ತ. **ಅನುದಾತ್ತೇಚ** (ಪಾ. ಸೂ. ೬-೧-೧೯೦) ನ ವಿದ್ಯತೇ ಉದಾತ್ತಃ ಯಸ್ಮಿನ್‌ಸಃ ಅನುದಾತ್ತಃ, ತಸ್ಮಿನ್ ಎಂದು ಬಹುವ್ರೀಹಿ, ಉದಾತ್ತವಿಲ್ಲದಿರುವ ಲಸ್ಥಾನಿಕ (ಸ್ಥಾನಿಕ) ಸಾರ್ವಧಾತುಕ ಪರದಲ್ಲಿದ್ದರೆ ಅಭ್ಯಸ್ತದ ಆದಿಗೆ ಉದಾತ್ತ ಬರುತ್ತೆ ಎಂದು ಆದ್ಯುದಾತ್ತ ಬರುವುದು. 'ಮಾಹಿಸ್ಮದಾಶ್' ಎಂಬಲ್ಲಿ ನಿತ್ಯವಾದ್ದರಿಂದ ಇಕಾರ ಲೋಪಮಾಡಿದ ಮೇಲೆಯೂ ಆದ್ಯುದಾತ್ತ ಬರುವುದಕ್ಕಾಗಿ ಅನುದಾತ್ತೇ ಎಂಬುದಕ್ಕೆ ಆ ರೀತಿ ಅರ್ಥವನ್ನು ಹೇಳಿದೆ. ಯದ್ವೃತ್ತಯೋಗ ಇರುವುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಸೂನರಮ್**—ಣ್ಯ ನಯೇ ಕ್ರ್ಯಾದಿ. ಸುಖೇನ ನೀಯತೇ ಇತಿ ಸೂನರಮ್ **ಈಷದ್ದುಸ್ಸುಷು ಕೃಚ್ಛ್ರಾಕೃಚ್ಛ್ರಾರ್ಥೇಷು ಖಲ್** (ಪಾ. ಸೂ. ೩-೩-೧೨೬) ಎಂದು ಖಲ್ ಪ್ರತ್ಯಯ. **ಸಾರ್ವಧಾ—,** ಎಂದು ಗುಣ, **ನಿಪಾತಸ್ಯ ಚ** (ಪಾ ಸೂ. ೬-೩-೧೩೬) ಎಂದು ಸಂಹಿತಾಕಾಲದಲ್ಲಿ ಸು ದೀರ್ಘವು ಬರುತ್ತೆ.

**ಅಕ್ಷಿತಿ**—ಕ್ಷಿ ಕ್ಷಯೇ ಅಕರ್ಮಕ ೧ನೇ ಗಣ. ಕ್ತಿನ್ ಪ್ರತ್ಯಯ. ನ ವಿದ್ಯತೇ ಕ್ಷಿತಿಃ ಕ್ಷಯಃ ಯಸ್ಯ ತತ್ ಎಂದು ಬಹುವ್ರೀಹಿ. **ನಞ್‌ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದು **ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ** (ಪರಿಭಾ ೩೫) ಎಂದು ವಿಕಲ್ಪವಾದ್ದರಿಂದ ಇಲ್ಲಿ ಬರುವುದಿಲ್ಲ. **ಬಹುವ್ರೀಹೌ ಪ್ರಕೃತ್ಯಾ—,** (ಪಾ. ಸೂ. ೬-೨-೧) ಎಂದು ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಶ್ರವಃ—ಶ್ರೂಯತೇ ಇತಿ ಶ್ರವಃ ಎಂದು ವಿಗ್ರಹ. **ಸರ್ವಧಾತುಭ್ಯೋಽಸುನ್** ಎಂದು ಅಸುನ್ ಪ್ರತ್ಯಯ ಶ್ರು ಶ್ರವಣೇಧಾತು ಮುಂದೆ ಬರುತ್ತದೆ. ಇದು ನಿತ್ತಾದ್ದರಿಂದ ಆದ್ಯುದಾತ್ತ.

**ಸುವಿರಾಮ್**—ಶೋಭನಾಃ ವೀರಾಃ ಯಸ್ಯಾಂ ಸಾ. ಸುವೀರಾ ಶ್ರೇಷ್ಠರಾದ ವೀರಭಟರಿಂದ ಕೂಡಿದವಳು ಎಂದು ಅರ್ಥ. ದ್ವಿತೀಯಾ ಏಕವಚನದಲ್ಲಿ, ಸುವೀರಾಂ ಎಂದು ಆಗುತ್ತದೆ. **ವೀರ ವೀರ್ಯೌ ಚ** ಎಂದು ಉತ್ತರ ಪದಕ್ಕೆ ಆದ್ಯುದಾತ್ತ ಬರುತ್ತದೆ.

**ಸುಪ್ರತೂರ್ತಿಮ್**— ತುರ್ವೀ ಹಿಂಸಾರ್ಥಃ ೧ನೇ ಗಣ. ಪ್ರ ಉಪಸರ್ಗಪೂರ್ವಕವಾದ ಈ ಧಾತು ಮುಂದೆ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಶೋಭನಾ=ಶ್ರೇಷ್ಠವಾದ ಅಂದರೆ ಹೆಚ್ಚಾದ, ಪ್ರತೂರ್ತಿಃ=ಶತ್ರುಗಳ ಹಿಂಸೆಯು, ಯಸ್ಯಾಂ ಸಾ=ಯಾವಳಲ್ಲಿದೆಯೋ ಎಂದು ಇಳಾಂ ಎಂಬುದಕ್ಕೆ ವಿಶೇಷಣ. ತಾಂ, ಸುಪ್ರತೂರ್ತಿಂ. **ಪರಾದಿಶ್ಛಂದಸಿ ಬಹುಲಂ** (ಪಾ. ಸೂ. ೬-೧-೧೯೯) ಎಂದು ಉತ್ತರಪದಕ್ಕೆ ಆದ್ಯುದಾತ್ತ ಬರುತ್ತೆ ಎಂದು ಹೇಳ ಬಹುದು. ಅಥವಾ **ಕೃತ್ವಾದಯಶ್ಚ** (ಪಾ. ಸೂ. ೬-೨-೧೧೮) ಸು ಎಂಬುದಕ್ಕಿಂತಲೂ ಪರದಲ್ಲಿರುವ ಕ್ರತ್ವಾದಿಗಣಕ್ಕೆ ಸೇರಿದ ಶಬ್ದವು ಆದ್ಯುದಾತ್ತವಾಗುವುದು ಎಂದು ಆದ್ಯುದಾತ್ತವನ್ನು ಹೇಳಬಹುದು.

**ಅನೇಹಸಮ್**- **ನಞಿ ಹನ ಏಹ ಚ** (ಉ. ಸೂ. ೪-೬೬೩) ನಞ್ ಉಪಪದವಾಗಿರುವಾಗ ಹನಧಾತು ಮುಂದೆ ಅಸಿ ಪ್ರತ್ಯಯ ಬರುತ್ತದೆ ಮತ್ತು ಹನ್‌ಗೆ ಏಹ್ ಎಂಬ ಆದೇಶ ಬರುತ್ತೆ ಎಂದು ಅಸಿ ಪ್ರತ್ಯಯವೂ ಏಹ್ ಆದೇಶವೂ ಬಂದರೆ ನ+ಏಹ್+ಅಸ್, **ನ ಲೋಪೋ ನಞಃ** (ಪಾ. ಸೂ. ೬-೩-೭೩) ಉತ್ತರ ಪದವು ಪರದಲ್ಲಿದ್ದರೆ ನಞ್‌ನ ನಕಾರಕ್ಕೆ ಲೋಪ ಬರುತ್ತದೆ ಎಂದು ನಕಾರಕ್ಕೆ ಲೋಪ, ನ್ ಲೋಪವನ್ನು ಹೊಂದಿದರೆ ಅ ಮಾತ್ರ ಉಳಿಯುತ್ತೆ ಅ+ಏಹ್+ಅಸ್, **ತಸ್ಮಾನ್ನುಡಚಿ** (ಪಾ. ಸೂ. ೬-೩-೭೪) ನಕಾರ ಲೋಪವನ್ನು ಹೊಂದಿರುವ ನಞ್‌ನ ಮುಂದೆ ಇರುವ ಅಜಾದಿಯಾದ ಉತ್ತರ ಪದಕ್ಕೆ ನುಟ್ ಆಗಮ ಬರುತ್ತೆ ಎಂದು ಏಹಸ್ ಎಂಬುದಕ್ಕೆ ನುಟ್ ಆಗಮ ಬಂದರೆ ಅನೇಹಸ್ ಎಂದು ಆಗುತ್ತದೆ. ದ್ವಿತೀಯಾಏಕವಚನಾಂತ. **ಕಾಲೋದಿಷ್ಟೋಽಪ್ಯನೇಹಾಪಿ** ಎಂಬ ಅಮರದಿಂದ ಅನೇಹಸ್ ಶಬ್ದ ಕಾಲ ಎಂಬ ಅರ್ಥದಲ್ಲಿ ರೂಢ. ಆದರೂ ಅವಯವಾರ್ಥಾನ್ವಯಯೋಗ್ಯವಾದ ಪದಾಂತರಸಮಭಿವ್ಯಾಹಾರ ಇರುವುದರಿಂದ ಇಲ್ಲಿ ರೂಢ್ಯರ್ಥಕ್ಕೆ ಗ್ರಹಣ ಇಲ್ಲ. 'ಪದ್ಮಾನಿ ಯತ್ರಾಗ್ರಸರೋರುಹಾಣಿ, ಎಂಬಲ್ಲಿ ಸರೋರುಹ ಶಬ್ದವು ರೂಢವಾದರೂ ಅವಯವಾರ್ಥಕ್ಕೆ ಗ್ರಹಣವು ಪ್ರಸಿದ್ಧವು. ಅದರಂತೆ ಇಲ್ಲಿಯೂ ಅವಯವಾರ್ಥಕ್ಕೆ ಗ್ರಹಣ ಬರುತ್ತದೆ ಎಂದು ಭಾಷ್ಯಕಾರರ ಅಭಿಪ್ರಾಯ. ॥ ೪ ॥

॥ ಸಂಹಿತಾಪಾಠಃ ॥

ಪ್ರ ನೂನಂ ಬ್ರಹ್ಮಣಸ್ಪತಿರ್ಮಂತ್ರಂ ವದತ್ಯುಕ್ಥ್ಯಂ ।
ಯಸ್ಮಿನ್ನಿಂದ್ರೋ ವರುಣೋ ಮಿತ್ರೋ ಅರ್ಯಮಾ ದೇವಾ
ಓಕಾಂಸಿ ಚಕ್ರಿರೇ ॥ ೫ ॥

॥ ಪದಪಾಠಃ ॥

ಪ್ರ । ನೂನಂ । ಬ್ರಹ್ಮಣಃ । ಪತಿಃ । ಮಂತ್ರಂ । ವದತಿ । ಉಕ್ಥ್ಯಂ ।
ಯಸ್ಮಿನ್ । ಇಂದ್ರಃ । ವರುಣಃ । ಮಿತ್ರಃ । ಅರ್ಯಮಾ । ದೇವಾಃ ।
ಓಕಾಂಸಿ । ಚಕ್ರಿರೇ ॥ ೫ ॥

ಸಾಯಣಭಾಷ್ಯಂ

ಅಗ್ನಿಷ್ಟೋಮೇ ಮರುತ್ವತೀಯಶಸ್ತ್ರ ಇಂದ್ರನಿಹವಪ್ರಗಾಥಾನಂತರಂ ಪ್ರ ನೂನಮಿತಿ ಪ್ರಗಾಥಃ । ಮರುತ್ವತೀಯೇನೇತಿ ಖಂಡೇ ಸೂತ್ರಿತಂ । ಪ್ರ ನೂನಂ ಬ್ರಹ್ಮಣಸ್ಪತಿರಿತಿ ಬ್ರಾಹ್ಮಣಸ್ಪತ್ಯಃ । ಆ. ೫-೧೪ ॥ ಇತಿ ॥

ಬ್ರಹ್ಮಣಸ್ಪತಿರ್ದೇವ ಉಕ್ಥ್ಯಂ ಶಸ್ತ್ರಯೋಗ್ಯಂ ಮಂತ್ರಂ ನೂನಮವಶ್ಯಂ ಪ್ರ ವದತಿ । ಹೋತೃಮುಖೇ ಸ್ಥಿತಃ ಸನ್ ಪ್ರಬ್ರೂತೇ । ಯಸ್ಮಿನ್ಮಂತ್ರ ಇಂದ್ರಾದಯಶ್ಚ ಸರ್ವೇ ದೇವಾ ಓಕಾಂಸಿ ಸ್ಥಾನಾನಿ ಚಕ್ರಿರೇ । ತಾದೃಶಂ ಸರ್ವದೇವಪ್ರತಿಪಾದಕಂ ಮಂತ್ರಮಿತಿ ಪೂರ್ವತ್ರಾನ್ವಯಃ ॥ ಮಂತ್ರಂ । ಮತ್ರಿ ಗುಪ್ತಭಾಷಣೇ । ಪಚಾದ್ಯಚ್ । ವೃಷಾದಿಷು ಪಾಠಾದಾದ್ಯುದಾತ್ತತ್ವಂ । ಉಕ್ಥ್ಯಂ । ಉಕ್ಥಾರ್ಹಂ । ಛಂದಸಿ ಚೇತ್ಯರ್ಹಾರ್ಥೇ ಯಪ್ರತ್ಯಯಃ । ಯದ್ವಾ । ಭವೇ ಛಂದಸೀತಿ ಯತ್ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ವಚನಾದ್ಯತೋಽನಾವ ಇತ್ಯಾದ್ಯುದಾತ್ತತ್ವಾಭಾವೇ ವ್ಯತ್ಯಯೇನ ತಿತ್ಸ್ವರಿತಮಿತಿ ಸ್ವರಿತತ್ವಂ । ಓಕಾಂಸಿ । ಉಚ ಸಮವಾಯೇ । ಸಮವಯಂತ್ಯತ್ರೇತ್ಯಧಿಕರಣ ಔಣಾದಿಕೋಽಸುನ್ । ಬಹುಲಗ್ರಹಣಾತ್ ಕುತ್ವಂ ದ್ರಷ್ಟವ್ಯಮಿತ್ಯೋಕ ಉಚಃ ಕೇ । ಪಾ. ೭-೩-೬೪ । ಇತ್ಯತ್ರ ವೃತ್ತಾವಿತ್ಯುಕ್ತಂ । ಚಕ್ರಿರೇ । ಇರೇಚಶ್ಚಿತ್ತ್ವಾದಂತೋದಾತ್ತತ್ವಂ । ಯದ್ವೃತ್ತಯೋಗಾದನಿಘಾತಃ ॥ ೨೦ ॥

॥ ಪ್ರತಿಪದಾರ್ಥ ॥

**ಬ್ರಹ್ಮಣಸ್ಪತಿಃ**— ದೇವನಾದ ಬ್ರಹ್ಮಣಸ್ಪತಿಯು । **ಯಸ್ಮಿನ್**— ಯಾವ ಮಂತ್ರದಲ್ಲಿ । **ಇಂದ್ರಃ**— ಇಂದ್ರನೂ । **ವರುಣಃ,**— ವರುಣನೂ । **ಮಿತ್ರಃ,**— ಮಿತ್ರನೂ । **ಆರ್ಯಮಾ,**— ಆರ್ಯಮನೂ

(ಮುಂತಾದ) । **ದೇವಾಃ**— ಸಕಲದೇವತೆಗಳೂ । **ಓಕಾಂಸಿ**— ವಾಸಸ್ಥಾನಗಳನ್ನು । **ಚಕ್ರಿರೇ**—ಮಾಡಿ ಕೊಂಡಿರುವರೋ (ಅಂತಹ ಸಕಲ ದೇವತಾಪ್ರತಿಪಾದಕವಾದ) । **ಉಕ್ಥ್ಯಂ**— ಸ್ತೋತ್ರಯೋಗ್ಯವಾದ । **ಮಂತ್ರಂ**- ಮಂತ್ರವನ್ನು । **ನೂನಂ**— ನಿಶ್ಚಯವಾಗಿಯೂ । **ಪ್ರವದತಿ**— (ಹೋತೃವಿನ ಮುಖದಲ್ಲಿದ್ದುಕೊಂಡು) ಸ್ಪಷ್ಟವಾಗಿ ಪಠಿಸುತ್ತಾನೆ. ।

###### ಭಾವಾರ್ಥ

ಯಜ್ಞಕಾಲದಲ್ಲಿ ಹೋತೃವು ಪಠಿಸುವ ಮಂತ್ರದಲ್ಲಿ ಇಂದ್ರನೂ, ವರುಣನೂ, ಮಿತ್ರನೂ, ಅರ್ಯಮನೂ ಇನ್ನೂ ಸಕಲದೇವತೆಗಳೂ ತಮ್ಮ ವಾಸಸ್ಥಾನವನ್ನು ಮಾಡಿಕೊಂಡಿರುವರು. ಎಂದರೆ ಆ ಮಂತ್ರವು ಸಕಲದೇವತಾ ಪ್ರತಿಪಾದಕವಾಗಿರುವುದು. ಬ್ರಹ್ಮಣಸ್ಪತಿಯು ಹೋತೃವಿಗೆ ಅನುಗ್ರಹಮಾಡಿ ಅವನ ಮುಖದಲ್ಲಿದ್ದುಕೊಂಡು ಸ್ತೋತ್ರ ಯೋಗ್ಯವಾಗಿಯೂ, ಸಕಲ ದೇವತಾಪ್ರತಿಪಾದಕವಾಗಿಯೂ ಇರುವ ಈ ಮಂತ್ರವನ್ನು ಸ್ಪಷ್ಟವಾಗಿ ಪಠಿಸುತ್ತಾನೆ.

### English Translation

Now, Brahmanaspati will sing forth a sacred prayer in which the gods Indra, Varuna, Mitra, and Aryaman have made their abode ( have been praised )

###### ವಿಶೇಷ ವಿಷಯಗಳು

ಅಗ್ನಿಷ್ಟೋಮಯಾಗದಲ್ಲಿ ಮರುತ್ವತೀಯಶಸ್ತ್ರಮಂತ್ರ ಪಠನಕಾಲದಲ್ಲಿ ಇಂದ್ರಾದಿದೇವತೆಗಳನ್ನು ಬೃಹತೀ ಛಂದಸ್ಸಿನಿಂದ ಸ್ತುತಿಸುವುದಕ್ಕಾಗಿ **ಪ್ರನೂನಂ ಬ್ರಹ್ಮಣಸ್ಪತಿ** ಎಂದು ಮೊದಲಾಗುವ ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಮರುತ್ವತೀಯೇನ** ಎಂಬ ಖಂಡದಲ್ಲಿ **ಪ್ರನೂನಂ ಬ್ರಹ್ಮಣಸ್ಪತಿರಿತಿ ಬ್ರಾಹ್ಮಣಸ್ಪತ್ಯಃ** ಎಂಬ ಸೂತ್ರದಿಂದ ವಿವೃತವಾಗಿರುವುದು.(ಆ. ೫-೧೪)

**ವರುಣೋ ಮಿತ್ರೋ ಅರ್ಯಮಾ**— ಸಾಧಾರಣವಾಗಿ ಈ ಮೂರು ದೇವತೆಗಳೂ ಅನೇಕ ಮಂತ್ರಗಳಲ್ಲಿ ಒಟ್ಟಿಗೆ ಪ್ರತಿಪಾದಿತರಾಗಿರುವರು. ಕೆಲವು ಉದಾಹರಣೆಗಳನ್ನು ಕೊಡುತ್ತೇವೆ—

**ಆನೋ ಬರ್ಹಿರಿಶಾದಸೋ ವರುಣೋ ಮಿತ್ರೋ ಅರ್ಯಮಾ ।**

(ಋ. ಸಂ. ೧-೨೬-೪)

**ದೇವಾಸಸ್ತ್ವಾ ವರುಣೋ ಮಿತ್ರೋ ಅರ್ಯಮಾ ಸಂ ದೂತಂ ಪ್ರತ್ನಮಿಂಧತೇ ।**

(ಋ. ಸಂ. ೧-೩೬-೪)

**ಯಂ ರಕ್ಷಂತಿ ಪ್ರಚೇತಸೋ ವರುಣೋ ಮಿತ್ರೋ ಅರ್ಯಮಾ ।**

(ಋ. ಸಂ. ೧-೪೧-೧)

**ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ।**
(ಋ. ಸಂ. ೨-೨೭-೧)

**ಬೃಹಸ್ಪತಿಃ ಶರ್ಮ ಪೂಷೋತ ನೋ ಯಮದ್ವರೂಥ್ಯಂ ವರುಣೋ ಮಿತ್ರೋ ಅರ್ಯಮಾ ।**
(ಋ. ಸಂ. ೫-೪೬-೫)

**ಸಜೋಷಸಾ ವರುಣೋ ಮಿತ್ರೋ ಅರ್ಯಮಾ ॥**
ಋ. ಸಂ. ೮-೨೬-೧೧)

**ರಸಂ ತೇ ಮಿತ್ರೋ ಅರ್ಯಮಾ ಪಿಬಂತಿ ವರುಣಃ ಕವೇ ॥**
(ಋ. ಸಂ. ೯-೬೪-೨೪)

**ಅರ್ಯಮಣಂ ವರುಣಂ ಮಿತ್ರಮೇಷಾಮಿಂದ್ರಾವಿಷ್ಣೂ ಮರುತೋ ಅಶ್ವಿನೋತ ॥**
(ಋ. ಸಂ. ೪-೨-೪)

ಇಂತಹ ಉದಾಹರಣೆಗಳು ಋಗ್ವೇದದಲ್ಲಿ ಬೇಕಾದಷ್ಟಿವೆ.

**ದೇವಾ ಓಕಾಂಸಿ ಚಕ್ರಿರೇ**—ದೇವತೆಗಳು ಈ ಮಂತ್ರದಲ್ಲಿ ತಮ್ಮ ವಾಸಸ್ಥಾನಗಳನ್ನು ಮಾಡಿಕೊಂಡರು. ಎಂದರೆ ದೇವತೆಗಳು ಈ ಮಂತ್ರಗಳಲ್ಲಿ ಸ್ತುತಿಸಲ್ಪಡುವರು. ಈ ಪಾದವು ದೇವತಾಪ್ರತಿಪಾದಿತವಾದುದು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಮನ್ತ್ರಮ್**—ಮತ್ರಿ ಗುಪ್ತಭಾಷಣೇ, ೧೦ ನೇ ಗಣದ ಧಾತು, ಇದಿತ್, **ಇದಿತೋನುಮ್ ಧಾತೋಃ** ಎಂದು ನುಮ್ ಆಗಮ. **ನನ್ದಿಗ್ರಹಿ—**, ಎಂದು ಪಚಾದಿಲಕ್ಷಣವಾದ ಅಚ್‌ಪ್ರತ್ಯಯ. ಪ್ರತ್ಯಯವು ಚಿತ್ ಆದ್ದರಿಂದ **ಚಿತಃ** ಎಂಬುದರಿಂದ ಅಂತೋದಾತ್ತಪ್ರಾಪ್ತವಾದರೂ ವೃಷಾದಿಯು ಆಕೃತಿಗಣವಾದ್ದರಿಂದ ಅಲ್ಲಿ ಇದನ್ನು ಸೇರಿಸಿ **ವೃಷಾದೀನಾಂಚ** ಎಂಬುದರಿಂದ ಆದ್ಯುದಾತ್ತ ಬರುತ್ತೆ ಎಂದು ಹೇಳಬೇಕು.

**ಉಕ್ಥ್ಯಮ್**—ವಚ ಪರಿಭಾಷಣೇ **ಪಾತೃ ತುದಿ ವಚಿ ರಿಚಿ ಸಿಚಿಭ್ಯ ಸ್ಥಕ್** (ಉ. ಸೂ ೨-೧ ೬೪) ಎಂಬುದರಿಂದ ಥಕ್‌ಪ್ರತ್ಯಯ **ವಚಿಸ್ವಪಿ—**, ಎಂದು ಸಂಪ್ರಸಾರಣ, ಪೂರ್ವರೂಪ, ಉಕ್ಥ ಎಂದು ರೂಪ, ಉಕ್ಥಮರ್ಹತಿ ಎಂದು ವಿಗ್ರಹ. **ಛಂದಸಿ ಚ** (ಪಾ. ಸೂ. ೫-೧-೬೭) ಪ್ರಾತಿಪದಿಕಗಳ ಮುಂದೆ ತದರ್ಹತಿ ಎಂಬ ಅರ್ಥದಲ್ಲಿ ಯ ಬರುತ್ತೆ ಎಂದು ಯ ಪ್ರತ್ಯಯ. ಅಥವಾ **ಭವೇಛಂದಸಿ** (ಪಾ. ಸೂ. ೪-೧-೧೧೦) ಸಪ್ತಮ್ಯಂತದ ಮುಂದೆ ಭವ ಎಂಬ ಅರ್ಥದಲ್ಲಿ ಯತ್ ಬರುತ್ತೆ ಎಂದು ಸೂತ್ರಾರ್ಥ **ಪ್ರಾಗ್ಘಿತಾದ್ಯತ್** (ಪಾ. ಸೂ. ೪-೪-೭೫) ಎಂಬಲ್ಲಿ **ತಸ್ಮೈಹಿತಮ್** (ಪಾ. ಸೂ. ೫-೧-೫) ಎಂಬ ಹಿತಶಬ್ದದಿಂದ ಕೂಡಿದ ಅರ್ಥನಿರ್ದೇಶವುಳ್ಳ ಸೂತ್ರವು ಅವಧಿಯಾಗಿ ಹೇಳಿದೆ. ಆದ್ದರಿಂದ ಅವಧಿ ಮತ್ತೂ ಅರ್ಥನಿರ್ದೇಶವಿರುವ ಸೂತ್ರವೇ ಆಗುತ್ತೆ. ಈ ಸೂತ್ರದಲ್ಲಿ ಭವೇ ಎಂದು ಅರ್ಥಕ್ಕೆ ನಿರ್ದೇಶವಿರುವುದರಿಂದ ಯತ್ ಎಂಬುದು ಅಧಿಕಾರದಿಂದ ಬರುತ್ತದೆ. **ಸೋದರಾದ್ಯಃ**

ಎಂಬ ಹಿಂದಿನ ಸೂತ್ರದಿಂದ ಯಃ ಎಂಬುದಕ್ಕೆ ಸಂಬಂಧ ಇಲ್ಲ. **ಛಂದಸಿ ಚ** ಎಂಬಲ್ಲಿ ಅರ್ಥನಿರ್ದೇಶವಿಲ್ಲ. ಆದ್ದರಿಂದ **ಪ್ರಾಕ್ಕ್ರೀತಾಚ್ಛಃ** ಎಂದು ಛಃ. ಎಂಬುದಕ್ಕೂ, **ಉಗವಾದಿಭ್ಯೋಯತ್** ಎಂದು ಯತ್ ಎಂಬುದಕ್ಕೂ ಅಧಿಕಾರದಿಂದ ಪ್ರಾಪ್ತಿ ಇಲ್ಲ **ದಂಡಾದಿಭ್ಯೋಯಃ** ಎಂಬ ಹಿಂದಿನ ಸೂತ್ರದಿಂದ ಯಃ ಎಂಬುದಕ್ಕೇ ಅನುವೃತ್ತಿ ಬರುತ್ತೆ ಎಂದರಿಯಬೇಕು. **ಭವೇ ಛಂದಸಿ** ಎಂಬುದರಿಂದ ಯತ್ ಬಂದರೆ, **ಯತೋಽನಾವಃ** ಎಂದು ವಿಶೇಷ ವಿಹಿತವಾದ ಆದ್ಯುದಾತ್ತವು ನ್ಯಾಯವಾಗಿ ಬರಬೇಕಾಗುತ್ತೆ. **ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ** (ಪರಿಭಾ ೩೫) ವಿಂದು ವಿಕಲ್ಪವಾದ್ದರಿಂದ ಇಲ್ಲಿ ಬರುವುದಿಲ್ಲ. **ತಿತ್ಸ್ವರಿತಮ್** ಎಂದು ಸ್ವರಿತವೇ ಬರುತ್ತೆ. ಪ್ರಥಮಪಕ್ಷದಲ್ಲಿ **ವ್ಯತ್ಯಯೋಬಹುಲಂ** ಎಂಬುದರಿಂದ ಸ್ವರಿತವು ಬರುತ್ತದೆ.

**ಓಕಾಂಸಿ**—ಉಚ ಸಮವಾಯೇ, ಸಮವಯನ್ತಿ ಅತ್ರ ಎಂದು ವಿಗ್ರಹ. ಜನರು ವಾಸಮಾಡಲು ಇಲ್ಲಿ ಸೇರುವರು ಎಂದು ಅರ್ಥ. ಅಧಿಕರಣಾರ್ಥದಲ್ಲಿ ಅಸುನ್ ಎಂಬ ಔಣಾದಿಕ ಪ್ರತ್ಯಯ ಬರುತ್ತದೆ. ಉಚ್+ಅಸ್, ಚ್‌ಗೆ ಕ್ ಆದೇಶವು ಬಹುಲಗ್ರಣದಿಂದ ಬರುತ್ತದೆ. ಈ ಅಂಶವನ್ನು **ಓಕ ಉಚಃ ಕೇ** (ಪಾ. ಸೂ. ೭-೩-೬೪) ಎಂಬ ಸೂತ್ರದಲ್ಲಿ 'ಬಹುಲಗ್ರಹಣಾತ್ಕುತ್ವಂ ದ್ರಷ್ಟವ್ಯಮ್' ಎಂದು ವೃತ್ತಿಕಾರರು ಹೇಳಿರುವರು. ಉಚ್‌ಧಾತು ಮುಂದೆ **ಇಗುಪಧಜ್ಞಾ—,** ಎಂದು ಕ ಪ್ರತ್ಯಯ ಬಂದಾಗ ಗುಣವೂ ಕುತ್ವವೂ **ಓಕ ಉಚಃ** ಎಂಬ ಸೂತ್ರದಲ್ಲಿ ನಿಪಾತಿಸಲ್ಪಡುತ್ತೆ. ಇದು ಅಕಾರಾಂತವಾಗುತ್ತೆ. **ಹಲಶ್ಚ** ಎಂದು ಘಞ್ ಪ್ರತ್ಯಯವನ್ನು ಹಚ್ಚಿದರೆ **ಚಜೋಃ ಕು—,** ಎಂದು ಕುತ್ವ ಬಂದು ಗುಣವೂ ಬಂದು ಓಕ ಎಂದು ರೂಪವಾದರೂ ಅದು ಆದ್ಯುದಾತ್ತವಾಗಿ ಬಿಡುವುದು. ಅಂತೋದಾತ್ತವಾಗಲಾರದು. ಇದಕ್ಕಾಗಿ **ಓಕ ಉಚಃ** ಎಂದು ಸೂತ್ರ ಹೊರಟಿತು. ಇದೂ ಅಕಾರಾಂತವೇ ಆಗುತ್ತೆ. ಇಲ್ಲಿ ಸಕಾರಾಂತವಾದ ಶಬ್ದ ಇದೆ, ಹಿಂದೆ ಹೇಳಿದಂತೆಯೇ ಇದರ ಪ್ರಕ್ರಿಯೆಯನ್ನು ಹೇಳಬೇಕು.

**ಚಕ್ರಿರೇ**—ಡುಕೃಞ್ ಕರಣೇ, ಲಿಟ್, ಆತ್ಮನೇಪದದಲ್ಲಿ ಝ ಆದೇಶ. **ಲಿಟಸ್ತಝಯೋಃ—,** ಎಂದು ಇರೇಚ್. **ದ್ವಿರ್ವಚನೇಽಚಿ** ಎಂದು ಆದೇಶ ನಿಷೇಧ. ದ್ವಿತ್ವ, ಕೃ+ಕೃ+ಇರೇ, ಉರದತ್ವ, ರಪರತ್ವ, **ಹಲಾದಿಃ ಶೇಷಃ** ಎಂದು ರೇಫ ಲೋಪಃ. **ಕುಹೋಶ್ಚುಃ** ಎಂದು ಕಕಾರಕ್ಕೆ ಚಕಾರ. ಚ+ಕೃ+ಇರೇ, ಯಣಾದೇಶ, ಚಕ್ರಿರೇ ಎಂದಾಗುತ್ತೆ. ಇರೇಚ್ ಚಿತ್. ಆದ್ದರಿಂದ **ಚಿತಃ** ಎಂದು ಅಂತೋದಾತ್ತ ಬರುತ್ತದೆ. ಯಸ್ಮಿನ್ ಎಂಬ ಯದ್ವೃತ್ತದಯೋಗ ಇರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ ಬರುತ್ತದೆ. ||೫||



ಸಂಹಿತಾಪಾಠಃ

ತಮಿದ್ವೋಚೇಮಾ ವಿದಥೇಷು ಶಂಭುವಂ ಮಂತ್ರಂ ದೇವಾ
ಅನೇಹಸಂ ।
ಇಮಾಂ ಚ ವಾಚಂ ಪ್ರತಿಹರ್ಯಥಾ ನರೋ ವಿಶ್ವೇದ್ವಾಮಾ
ವೋ ಅಶ್ನವತ್ ॥ ೬ ॥

॥ ಪದಪಾಠಃ ॥

ತಂ । ಇತ್ । ವೋಚೇಮ । ವಿದಥೇಷು । ಶಂಽಭುವಂ । ಮಂತ್ರಂ ।
ದೇವಾಃ । ಅನೇಹಸಂ ।
ಇಮಾಂ । ಚ । ವಾಚಂ । ಪ್ರತಿಽಹರ್ಯಥ । ನರಃ । ವಿಶ್ವಾ । ಇತ್ ।
ವಾಮಾ । ವಃ । ಅಶ್ನವತ್ ॥ ೬ ॥

॥ ಸಾಯಣಭಾಷ್ಯಂ ॥

ಹೇ ದೇವಾ ಬ್ರಹ್ಮಣಸ್ಪತಿಪ್ರಭೃತಯಸ್ತಮಿತ್ ತಮೇವೇಂದ್ರಾದಿಸರ್ವದೇವತಾಪ್ರತಿಪಾದಕಂ ಮಂತ್ರಂ ವಿದಥೇಷು ಯಜ್ಞೇಷು ವೋಚೇಮ । ವಯಮೃತ್ವಿಜೋ ಬ್ರವಾಮ । ಕೀದೃಶಂ । ಶಂಭುವಂ ಸುಖಸ್ಯ ಭಾವಯಿತಾರಂ ಅನೇಹಸಮಹಿಂಸನೀಯಂ ದೋಷರಹಿತಂ । ಹೇ ನರೋ ನೇತಾರೋ ದೇವಾ ಇಮಾಮಸ್ಮಾಭಿರುಚ್ಯಮಾನಾಂ ಮಂತ್ರರೂಪಾಂ ವಾಚಂ ಪ್ರತಿಹರ್ಯಥ ಚ । ಯೂಯಂ ಕಾಮಯಧ್ವೇ ಚೇತ್ । ತರ್ಹಿ ವಿಶ್ವೇತ್ ಸರ್ವಾಪಿ ವಾಮಾ ವನನೀಯಾ ವಾಕ್ ವೋ ಯುಷ್ಮಾನಶ್ನವತ್ । ವ್ಯಾಪ್ನುಯಾತ್ । ವೋಚೇಮ । ವಚ ಪರಿಭಾಷಣೇ । ಆಶೀರ್ಲಿಙಿ ಲಿಙ್ಯಾಶಿಷ್ಯಙಿತ್ಯಙ್ । ವಚ ಉಮಿತ್ಯುಮಾಗಮಃ । ಛಂದಸ್ಯುಭಯಥೇತಿ ಸಾರ್ವಧಾತುಕತ್ವಾಲ್ಲಿಙಃ ಸಲೋಪೋಽನಂತ್ಯಸ್ಯೇತಿ ಯಾಸುಟಃ ಸಕಾರಸ್ಯ ಲೋಪಃ । ಅತೋ ಯೇಯ ಇತೀಯಾದೇಶಃ, ಆದ್ಗುಣಃ । ತಿಙ್ಙತಿಙ ಇತಿ ನಿಘಾತಃ ।

**ವಿದಥೇಷು । ವಿದ । ಜ್ಞಾನೇ ವಿದ್ಯತೇ ಫಲಸಾಧನತ್ವೇನ ಜ್ಞಾಯತೆ ಇತಿ ವಿದಥೋ ಯಜ್ಞಃ । ರುವಿದಿಭ್ಯಾಂ ಕಿತ್ । ಉ. ೩-೧೧೬ । ಇತ್ಯಥಪ್ರತ್ಯಯಃ । ಶಂಭುವಂ । ಭವತೇರಂತರ್ಭಾವಿ-ತಣ್ಯರ್ಥಾತ್ ಕ್ವಿಪ್ಚೇತಿ ಕ್ವಿಪ್ । ಓಃ ಸುಪಿ । ಪಾ. ೬-೪-೮೩ । ಇತಿ ಯಣಾದೇಶಸ್ಯ ನ ಭೂಸುಧಿಯೋಃ । ಪಾ. ೬-೪-೮೫ । ಇತಿ ಪ್ರತಿಷೇಧಃ । ಮಂತ್ರಾದಯೋ ಗತಾಃ । ಪ್ರತಿಹರ್ಯಥ । ಹರ್ಯ ಗತಿಕಾಂತ್ಯೋಃ । ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರೇಣಾದ್ಯುದಾತ್ತತ್ವಂ । ಇಮಾಂ ಚೇತ್ಯತ್ರ ಚಶಬ್ದಶ್ಚೇದರ್ಥಃ । ಚಣಿತಿ ನಿಪಾತಾಂತರಂ ನ ಚ ಸಮುಚ್ಚಯಾದ್ಯರ್ಥಃ । ತೇನ ನಿಪಾತೈರ್ಯ-ದ್ಯದಿಹಂತಕುವಿನ್ನೇಚ್ಚೇಚ್ಚಣ್ । ಪಾ. ೮-೧-೩೦ । ಇತಿ ನಿಘಾತಪ್ರತಿಷೇಧಃ । ಅಶ್ನವತ್ । ಅಶೂ ವ್ಯಾಪ್ತೌ । ಲೇಡ್ಯಡಾಗಮಃ । ವ್ಯತ್ಯಯೇನ ಪರಸ್ಮೈಪದಂ । ಇತಶ್ಚ ಲೋಪ ಇತೀಕಾರಲೋಪಃ । ಇಯಙುವಙ್ಭ್ಯಾಂ ಗುಣವೃದ್ಧೀ ಭವತೋ ವಿಪ್ರತಿಷೇಧೇನ । ಕಾ. ೬-೪-೭೭ ॥ ಇತಿ ಗುಣಃ ॥**

ಪ್ರತಿಪದಾರ್ಥ

**ದೇವಾಃ**— ಎಲೈ ಬ್ರಹ್ಮಣಸ್ಪತಿಯೇ ಮುಂತಾದ ದೇವತೆಗಳೇ । **ಶಂಭುವಂ**— ಸುಖಸಂಪಾದಕವಾಗಿಯೂ । **ಅನೇಹಸಂ**— ದೋಷರಹಿತವಾಗಿಯೂ ಇರುವ । **ತಮಿತ್ ಮಂತ್ರಂ** – (ಇಂದ್ರಾದಿಸಕಲದೇವತಾ ಪ್ರತಿಪಾದಕವಾದ) ಆ ಮಂತ್ರವನ್ನೇ । **ವಿದಥೇಷು**— ಯಜ್ಞಗಳಲ್ಲಿ । **ವೋಚೇಮ**—(ಋತ್ವಿಕ್ಕುಗಳಾದ ನಾವು) ಪಠಿಸುತ್ತೇವೆ. । **ನರಃ**— ನೇತೃಗಳಾದ ಎಲೈ ದೇವತೆಗಳೇ । **ಇಮಾಂ**—ನಮ್ಮಿಂದ ಪಠಿಸಲ್ಪಡುವ ಈ ಮಂತ್ರರೂಪವಾದ । **ವಾಚಂ**— ವಾಕ್ಕನ್ನು । **ಪ್ರತಿಹರ್ಯಥ**—ನೀವು ಅಪೇಕ್ಷಿಸಿದ್ದೇ ಆದರೆ । **ವಿಶ್ವೇತ್ ವಾಮಾ**—ನಿಮಗೆ ಪ್ರಿಯವಾದ ಸಮಸ್ತ (ಪ್ರತಿಯೊಂದು) ವಾಕ್ಕೂ । **ವಃ**— ನಿಮ್ಮನ್ನು । **ಅಶ್ನವತ್**— ವ್ಯಾಪಿಸಲಿ. ।

ಭಾವಾರ್ಥ

ಬ್ರಹ್ಮಣಸ್ಪತಿಯೇ ಮುಂತಾದ ಸಕಲ ದೇವತೆಗಳೇ, ಸುಖ ಸಂಪಾದಕವಾಗಿಯೂ, ದೋಷರಹಿತವಾಗಿಯೂ, ಸಕಲ ದೇವತಾಪ್ರತಿಪಾದಕವಾಗಿಯೂ ಇರುವ ಆ ಮಂತ್ರವನ್ನು ನಾವು ಯಜ್ಞಗಳಲ್ಲಿ ಪಠಿಸುತ್ತೇವೆ. ಎಲೈ ದೇವತೆಗಳೇ, ನೀವು ನಮ್ಮ ನೇತೃಗಳು. ಋತ್ವಿಕ್ಕುಗಳಾದ ನಾವು ಪಠಿಸುವ ಮಂತ್ರರೂಪವಾದ ನಮ್ಮ ವಾಕ್ಕು ನಿಮಗೆ ಹಿತವಾಗಿಯೂ ಅಪೇಕ್ಷಿತವಾಗಿಯೂ ಇದ್ದರೆ ಆಗ ನಿಮಗೆ ಪ್ರಿಯವಾದ ನಮ್ಮ ಸಮಸ್ತ ವಾಕ್ಕೂ ಸಹ ನಿಮ್ಮನ್ನು ವ್ಯಾಪಿಸಲಿ. ನಿಮಗೆ ತೃಪ್ತಿಯನ್ನುಂಟುಮಾಡಲಿ.

English Translation

O gods, we will recite that delightful and faultless prayer in our sacrifices ; O brave leaders, if you desire to hear that prayer, that all that is said will reach you.

ವಿಶೇಷ ವಿಷಯಗಳು

**ವಿದಥೇಷು—ಯಜ್ಞೇಷು । ವಿದ್ಯತೇ ಫಲಸಾಧನತ್ವೇನ ಜ್ಞಾಯತ ಇತಿ ವಿದಥೋ ಯಜ್ಞಃ ।** ಯಜ್ಞಃ ವೇನಃ ಮೊದಲಾದ ಹದಿನೈದು ಯಜ್ಞನಾಮಗಳ ಮಧ್ಯದಲ್ಲಿ ವಿದಥಃ ಎಂಬ ಶಬ್ದವು ಪಠಿತವಾಗಿರುವುದರಿಂದ ವಿದಥೇಷು ಎಂದರೆ ಯಜ್ಞಗಳಲ್ಲಿ ಎಂದರ್ಥವು. (ನಿ. ೩-೧೯)

**ಶಂಭುವಂ—ಸುಖಸ್ಯ ಭಾವಯಿತಾರಂ ।** ಸುಖವನ್ನುಂಟುಮಾಡುವ, ಕೇಳುವುದಕ್ಕೆ ಆಹ್ಲಾದಕರವಾದ

**ಅನೇಹಸಂ—ಅಹಿಂಸನೀಯಂ । ದೋಷರಹಿತಂ ।** ದೋಷರಹಿತವಾದ, ನ್ಯೂನತೆಗಳಿಲ್ಲದ.

**ಇಮಾಂ ಚ ವಾಚಂ—** ಸ್ತೋತ್ರರೂಪವಾದ ಈ ವಾಕ್ಯವನ್ನು

**ಪ್ರತಿಹರ್ಯಥ— ಹರ್ಯ ಗತಿ ಕಾಂತ್ಯೋಃ ।** ಅಪೇಕ್ಷಿಸುವಿರಿ, ಕೇಳಲು ಇಚ್ಛಿಸುವಿರಿ.

**ವಾಮಾ—ವನನೀಯಾ ವಾಕ್ ।** ವ್ಯಾಪಿಸುವ ಎಂದರೆ ಎಲ್ಲರಿಗೂ ಕೇಳಿಸುವ ವಾಕ್ಯವು.

**ಅಶ್ನವತ್—ವ್ಯಾಪ್ನುಯಾತ್ ।** ವ್ಯಾಪಿಸಲಿ, ನಿಮ್ಮನ್ನು ಸೇರಲಿ, ನಿಮಗೆ ಕೇಳಿಸಲಿ.

ವ್ಯಾಕರಣಪ್ರಕ್ರಿಯಾ

**ವೋಚೇಮ—**ವಚ ಪರಿಭಾಷಣೇ, ಆಶೀರ್ಲಿಙ್ ಉತ್ತಮಪುರುಷ ಬಹುವಚನ ಮಸ್, **ನಿತ್ಯಂಙಿತಃ** (ಪಾ. ಸೂ. ೩-೪-೯೯) ಸಕಾರಾಂತವಾದ ಙಿದುತ್ತಮ ಪುರುಷದ ಕೊನೆಯ ವರ್ಣಕ್ಕೆ ನಿತ್ಯವಾಗಿ ಲೋಪ ಬರುತ್ತೆ ಎಂದು ಸ್‌ಗೆ ಲೋಪ, ಯಾಸುಟ್ ಆಗಮ. **ಲಿಙ್ಯಾಶಿಷ್ಯಙ್** (ಪಾ. ಸೂ. ೩-೧-೮೬) ಛಂದಸ್ಸಿನಲ್ಲಿ ಆಶೀರ್ಲಿಙ್ ಪರದಲ್ಲಿರುವಾಗ ಧಾತುಗಳ ಮುಂದೆ ಅಙ್ ಎಂಬ ವಿಕರಣ ಬರುತ್ತೆ ಎಂದು ಸೂತ್ರಾರ್ಥ. ಹೀಗೆ ಸಾಮಾನ್ಯವಾಗಿ ಹೇಳಿದ್ದರೂ ಸ್ಥಾ-ಗಾ-ಗಮಿ-ವಚಿ-ವಿದಿ-ಶಕಿ-ರುಹಿ ಧಾತುಗಳಲ್ಲಿ ಮಾತ್ರ ಪ್ರಾಯಶಃ ಈ ವಿಕರಣವು ದೃಷ್ಟವಾಗಿದೆ. ಅಙ್ ಬಂದರೆ ವಚ್+ಅ+ಯಾಸ್+ಮ, **ವಚ ಉಮ್** (ಪಾ. ಸೂ. ೭-೪-೨೦) ಅಙ್ ಪರದಲ್ಲಿರುವಾಗ ವಚ್ ಧಾತುವಿಗೆ ಉಮ್ ಆಗಮ ಬರುತ್ತೆ ಎಂದು ಉಮ್ ಆಗಮವು ವಚ್‌ಗೆ ಬರುತ್ತೆ. **ಛಂದಸ್ಯುಭಯಥಾ** ಎಂದು ಆಶೀರ್ಲಿಙ್‌ಗೂ ಸಾರ್ವಧಾತುಕ ಸಂಜ್ಞೆ ಇದೆ. **ಲಿಙಸ್ಸಲೋಪೋನನ್ತ್ಯಸ್ಯ** (ಪಾ. ಸೂ. ೭-೨-೭೯) ಸಾರ್ವಧಾತುಕವಾದ ಲಿಙ್‌ನ ಕೊನೆಯಲ್ಲಿಲ್ಲದ ಸಕಾರಕ್ಕೆ ಲೋಪ ಬರುತ್ತೆ ಎಂದು ಸ್‌ಗೆ ಲೋಪ. **ಅತೋಯೇಯಃ** (ಪಾ. ಸೂ. ೭-೨-೮೦) ಹ್ರಸ್ವಾಕಾರದ ಮುಂದೆ ಇರುವ ಸಾರ್ವಧಾತುಕಾವಯವವಾದ ಯಾಗೆ ಇಯ್ ಬರುತ್ತೆ ಎಂದು ಇಯ್ ಆದೇಶ. ವ+ಉಚ್+ಅ+ಇಯ್+ಮ. **ಲೋಪೋವ್ಯೋರ್ವಲಿ** ಎಂದು ಯ್‌ಗೆ ಲೋಪ, ಆದ್ಗುಣಃ ಎಂದು ಅಕಾರ ಉಕಾರಗಳಿಗೆ ಓಕಾರವೂ, ಅಕಾರ ಇಕಾರಗಳಿಗೆ ಏಕಾರವೂ ಬರುತ್ತದೆ. ವೋಚೇಮ ಎಂದು ಆಗುತ್ತದೆ. **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುತ್ತೆ.

**ವಿದಥೇಷು—**ವಿದ ಜ್ಞಾನೇ, ವಿದ್ಯತೇ ಸ್ವರ್ಗಾದಿಫಲಗಳಿಗೆ ಸಾಧನ ಎಂದು ತಿಳಿಯಲ್ಪಡುತ್ತೆ ಎಂದು

ವಿಗ್ರಹ. ಯಜ್ಞ ಎಂದು ವಿದಥ ಶಬ್ದಕ್ಕೆ ಅರ್ಥ. **ರುದಿವಿದಿಭ್ಯಾಂಙಿತ್** (ಉ. ಸೂ. ೩ ೩೯೫) ರುದಿರ್ ಅಶ್ರು ವಿಮೋಚನೇ, ವಿದ ಜ್ಞಾನೇ ಈ ಧಾತುಗಳ ಮುಂದೆ ಅಥ ಪ್ರತ್ಯಯ ಬರುತ್ತೆ ಅದು ಙಿತ್ ಆಗುತ್ತೆ ಎಂದು ಸೂತ್ರದ ಅರ್ಥ. ವಿದ್+ಅಥ. ಲಘೂಪಧಗುಣಕ್ಕೆ ಪ್ರತ್ಯಯವು ಙಿತ್ತಾದ್ದರಿಂದ ನಿಷೇಧ. **ಗಾಙ್ಕುಟಾದಿ—,** ಎಂಬ ಸೂತ್ರದಲ್ಲಿರುವ **ಕೇ ಪುನಶ್ಛಜಾದಯಃ ಚಙ್ ಅಙ್ ನಜಿಙ್ ಅಥಙ್ ನಙ್,** ಎಂಬ ಮಹಾಭಾಷ್ಯದಂತೆ ಹೀಗೆ ಸೂತ್ರವನ್ನು ಪಠಿಸುವುದು ಯುಕ್ತ. ಉಜ್ವಲದತ್ತರು **ರುವಿವಿಭ್ಯಾಂ ಕಿತ್** ಎಂದು ಪಠಿಸಿ ರೌತೀತಿ ರುವಥಃ ಶ್ವಾ ಎಂದು ಉದಹರಿಸಿರುವರು. ಇದೇ ಪಾಠವನ್ನನುಸರಿಸಿ ವೇದಭಾಷ್ಯದಲ್ಲಿಯೂ ಹೇಳಲಾಗಿದೆ. ದಶಪಾದೀವೃತ್ತಿ ಕಾರರು **ರುದಿವಿದಿಭ್ಯಾಂ ಕಿತ್** ಎಂದು ಪಠಿಸಿರುವರು. ಇವರ ಮತದಲ್ಲಿ ಮೇಲೆ ಹೇಳಿದ ಭಾಷ್ಯದಲ್ಲಿ ಅಥಙ್ ಎಂಬುದು ಸಂಗತವಾಗಲಾರದು. ಆದ್ದರಿಂದ ಈ ಪಕ್ಷಗಳು ಭಾಷ್ಯಸಮ್ಮತವಾದುವಲ್ಲ.

**ಶಂಭುವಮ್**—ಶಂ ಭಾವಯತೀತಿ ಶಂಭೂಃ, **ಕ್ವಿಪ್ ಚ** ಎಂಬುದರಿಂದ ಭೂಧಾತು ಮುಂದೆ ಕ್ವಿಪ್ ಪ್ರತ್ಯಯ. ಶಂಭೂ+ಅಮ್ ಎಂದಿರುವಾಗ **ಓಃ ಸುಪಿ** (ಪಾ. ಸೂ. ೬-೪-೮೩) ಅಜಾದಿಯಾದ ಸುಪ್ ಪರದಲ್ಲಿದ್ದರೆ ಧಾತ್ವವಯವವಾತ್ರಾರಭ್ಯ ಸಂಯೋಗಪೂರ್ವಕವಲ್ಲದ ಉವರ್ಣವನ್ನು ಕೊನೆಯಲ್ಲಿ ಹೊಂದಿರುವ ಧಾತುವನ್ನು ಕೊನೆಯಲ್ಲಿ ಹೊಂದಿರುವ ಅಂಗದ ಕೊನೆಯ ವರ್ಣಕ್ಕೆ ಯಣ್ ಬರುತ್ತೆ ಎಂದು ಯಣ್ ಪ್ರಾಪ್ತವಾದರೆ **ನ ಭೂಸುಧಿಯೋಃ** (ಪಾ. ಸೂ ೬-೪-೮೫) [illegible]ದಿಯಾದ ಸುಪ್ ಪರದಲ್ಲಿದ್ದರೆ ಭೂಸುಧೀ ಶಬ್ದಗಳಿಗೆ ಯಣ್ ಬರುವುದಿಲ್ಲ ಎಂದು ಯಣ್‌ಗೆ ನಿಷೇಧ. **ಅಚಿಶ್ನುಧಾತು—,** ಎಂದು ಉವಙ್ ಆದೇಶಬರುತ್ತದೆ.

**ಮನ್ತ್ರಮ್**—ಹಿಂದಿನ ಮನ್ತ್ರದಲ್ಲಿ ಪ್ರಕ್ರಿಯೆಯು ನಿರೂಪಿತವಾಗಿದೆ.

**ಅನೇಹಸಂ**—ವ್ಯವಹಿತ ಪೂರ್ವಮನ್ತ್ರದಲ್ಲಿ ವಿವರಿಸಿದೆ.

**ಪ್ರತಿಹರ್ಯಥ**—ಹರ್ಯ ಗತಿಕಾನ್ತ್ಯೋಃ ೧ನೇ ಗಣ. ಮಧ್ಯಮಪುರುಷ ಬಹುವಚನ ಥ, ಶಪ್, ಪ್ರತಿ ಉಪಸರ್ಗ ಶಪ್ ಪಿತ್ ಆದ್ದರಿಂದ ಅನುದಾತ್ತ. **ತಾಸ್ಯನುದಾತ್ತೇತ್—,** ಎಂಬುದರಿಂದ ಥ ಎಂಬ ಲಸ್ಸಾ ನಿಕ ಸಾರ್ವಧಾತುವು ಅನುದಾತ್ತ. ಧಾತುಸ್ವರದಿಂದ ಹರ್ಯಥ ಎಂಬುದು ಆದ್ಯುದಾತ್ತ. **ತಿಙಿಚೋದಾತ್ತವತಿ** ಎಂದು ಪ್ರತಿ ಎಂಬುದು ಅನುದಾತ್ತ.

**ಇಮಾಂ ಚ**—ಇಲ್ಲಿ ಚ ಎಂಬುದು ಸಮುಚ್ಚಯಾರ್ಥಕವಾದ ಚ ಶಬ್ದವಲ್ಲ. ಚೇತ್ ಎಂಬ ಅರ್ಥವುಳ್ಳ ಚಣ್‌ನ ಣ್‌ಗೆ ಇತ್ಸಂಜ್ಞೆ ಬಂದು ಚ ಉಳಿದಿದೆ. ಆದ್ದರಿಂದ ಇದಕ್ಕೆ ಚೇತ್ ಎಂದು ಅರ್ಥ. **ನಿಪಾತೈರ್ಯದ್ಯದಿ ಹನ್ತ ಕುವಿನ್ನೇಚ್ಚೇಚ್ಚಣ್ಕಚ್ಚಿದ್ಯತ್ರಯುಕ್ತಮ್** (ಪಾ. ಸೂ. ೮-೧-೩೦) ಈ ನಿಪಾತಗಳಿಂದ ಕೂಡಿರುವುದು ಅನುದಾತ್ತವಾಗುವುದಿಲ್ಲ ಎಂದು ಅರ್ಥ. ಇದರಿಂದ ಪ್ರತಿಹರ್ಯಥ ಎಂಬಲ್ಲಿ ಸರ್ವಾನುದಾತ್ತಕ್ಕೆ ಪ್ರತಿಷೇಧ ಬರುತ್ತದೆ. ಪ್ರತಿಹರ್ಯಥ ಚ ಎಂದು ಸಾಕ್ಷಾತ್ಸಂಬಂಧವನ್ನು ಭಾಷ್ಯದಲ್ಲಿ ತೋರಿಸಿರುವರು.

**ಅಶ್ನವತ್**—ಅಶೂ ವ್ಯಾಪ್ತೌ, ಲೇಟ್, ತಿಪ್, **ಲೇಟೋಽಡಾಟೌ** ಎಂದು ಅಡಾಗಮ. **ಇತಶ್ಚ ಲೋಪಃ ಪರಸ್ಮೈಪದೇಷು** ಎಂದು ಇಕಾರಕ್ಕೆ ಲೋಪ. ಅಶ್ನು+ಅತ್ ಎಂದು ಶ್ನು ವಿಕರಣ ಬಂದರೆ ಆಗುತ್ತೆ. **ಅಚಿಶ್ನು**

**ಧಾತು—**, (ಪಾ. ಸೂ. ೬-೪-೭೭) ಎಂಬುದರಿಂದ ಉವಙ್ ಆದೇಶಕ್ಕೂ **ಸಾರ್ವಧಾತುಕಾ—**, (ಪಾ. ಸೂ. ೭-೩-೮೪) ಎಂಬುದರಿಂದ ಗುಣಕ್ಕೂ ಪ್ರಾಪ್ತಿಬಂದರೆ ಪರವಾದ್ದರಿಂದ ಗುಣ ಬರುತ್ತೆ. **ಇಯಙುವಙ್‌ಭ್ಯಾಂ ಗುಣವೃದ್ಧೀ ಭವತೋ ವಿಪ್ರತಿಷೇಧೇನ** (ಪಾ. ಸೂ. ೬-೪-೭೭) ಎಂಬ ಕಾಶಿಕಾ ಗ್ರಂಥದಿಂದ ಇದೇ ಅರ್ಥವು ಹೇಳಲ್ಪಟ್ಟಿದೆ. ಇಯಙ್ ಉವಙ್ ಆದೇಶಗಳು ಬರುವ ಲಕ್ಷ್ಯದಲ್ಲಿ ಗುಣವೃದ್ಧಿಗಳಲ್ಲಿ ಯಾವುದಕ್ಕಾದರೂ ಯುಗಪತ್ ಪ್ರಾಪ್ತಿಯಾದರೆ **ವಿಪ್ರತಿಷೇಧೇ ಪರಂ ಕಾರ್ಯಂ** ಎಂಬ ಪರಿಭಾಷೆಯಿಂದ ಪರದಲ್ಲಿರುವ ಗುಣವೃದ್ಧಿಗಳೇ ಬರುವುವು ಎಂದು ಕಾಶಿಕಾ ಗ್ರಂಥದಅರ್ಥ. ॥ ೬ ॥



॥ ಸಂಹಿತಾಪಾಠಃ ॥

ಕೋ ದೇವಯನ್ತಮಶ್ನವಜ್ಜನಂ ಕೋ ವೃಕ್ತಬರ್ಹಿಷಂ ।
ಪ್ರಪ್ರ ದಾಶ್ವಾನ್ಪಸ್ತ್ಯಾಭಿರಸ್ಥಿತಾನ್ತರ್ವಾವತ್ಕ್ಷಯಂ ದಧೇ ॥ ೭ ॥

॥ ಪದಪಾಠಃ ॥

ಕಃ । ದೇವಽಯನ್ತಂ । ಅಶ್ನವತ್ । ಜನಂ । ಕಃ । ವೃಕ್ತಽಬರ್ಹಿಷಂ ।
ಪ್ರಽಪ್ರ । ದಾಶ್ವಾನ್ । ಪಸ್ತ್ಯಾಭಿಃ । ಅಸ್ಥಿತ । ಅನ್ತಃಽವಾವತ್ ।
ಕ್ಷಯಂ । ದಧೇ ॥ ೭ ॥

ಸಾಯಣಭಾಷ್ಯಂ

ದೇವಯಂತಂ ದೇವಾನ್ಕಾಮಯಮಾನಂ ಜನಂ ಕೋಽಶ್ನವತ್ । ಬ್ರಹ್ಮಣಸ್ಪತಿವ್ಯತಿರಿಕ್ತಃ ಕೋ ನಾಮ ದೇವೋ ವ್ಯಾಪ್ನುಯಾತ್ । ತಥಾ ವೃಕ್ತಬರ್ಹಿಷಮನುಷ್ಠಾನಾಯ ಛಿನ್ನಬರ್ಹಿಷಂ ಯಜಮಾನಂ ಕೋ ನಾಮಾನ್ಯೋ ದೇವೋಽಶ್ನವತ್ । ದಾಶ್ವಾನ್ ಹವಿರ್ದತ್ತವಾನ್ಯಜಮಾನಃ ಪಸ್ತ್ಯಾಭಿರ್ಗೃಹರೂಪೈ-ರ್ಋತ್ವಿಗ್ಭಿಃ ಸಹ ಪ್ರಪ್ರಾಸ್ಥಿತ । ದೇವಯಜನದೇಶಂ ಪ್ರತಿ ಪ್ರಸ್ಥಿತವಾನ್ । ಅಂತರ್ವಾವತ್ ಅಂತಃ

ಸ್ಥಿತಬಹುಧನೋಪೇತಂ । ಯದ್ವಾ । ಅಂತಃ । ಸ್ಥಿತಪುತ್ರಪೌತ್ರಾದಿಪ್ರಯುಕ್ತಬಹುವಿಧವಾಗುಪೇತಂ ಕ್ಷಯಂ ನಿವಾಸಸ್ಥಾನಂ ಗೃಹಂ ದಧೇ । ಧೃತವಾನ್ ಭವತಿ । ದೇವಯಂತಮಿತ್ಯಾದಯೋ ಗತಾಃ । ಪ್ರಪ್ರ । ಪ್ರಸಮುಪೋದಃ ಪಾದಪೂರಣೇ । ಪಾ.೮-೧-೬ ॥ ಇತಿ ಪ್ರಶಬ್ದಸ್ಯ ದ್ವಿರ್ಭಾವಃ । ಅನುದಾತ್ತಂ ಚೇತ್ಯಾಮ್ರೇಡಿತಾನುದಾತ್ತತ್ವಂ । ಅಸ್ಥಿತ । ಷ್ಠಾ ಗತಿನಿವೃತ್ತೌ । ಲುಙಿ ಸಮವಪ್ರವಿಭ್ಯಃ ಸ್ಥಃ । ಪಾ. ೧-೩-೨೨ । ಇತ್ಯಾತ್ಮನೇಪದಂ । ಸ್ಥಾಘ್ವೋರಿಚ್ಚ । ಪಾ. ೧-೨-೧೭ । ಇತಿ ಧಾತುಸಿಚೋರಿತ್ । ಕಿತ್ತ್ವೇ ಹ್ರಸ್ವಾದಂಗಾತ್ । ಪಾ. ೮-೨-೨೭ । ಇತಿ ಸಲೋಪಃ । ಅಂತರ್ವಾವತ್ । ವಾಗತಿಗಂಧನಯೋಃ ಅಂತರ್ವಾಂತಿ ಗಚ್ಛಂತೀತ್ಯಂತರ್ವಾಃ ಪುತ್ರಪಶ್ವಾದಯಃ । ಅತೋ ಮನಿನ್ನಿತ್ಯಾದಿನಾ ವಿಚ್ । ತದಸ್ಯಾಸ್ತೀತಿ ಮತುಪ್ । ಮತುಪಃ ಪಿತ್ತ್ವಾದನುದಾತ್ತತ್ವೇ ಕೃದುತ್ತರಪದ ಪ್ರಕೃತಿಸ್ವರತ್ವಂ । ಯದ್ವಾ । ವಾವದೀತೇಃ ಕ್ವಿಪ್ । ಕ್ಷಯಂ । ಕ್ಷಿಯಂತಿ ನಿವಸಂತ್ಯಸ್ಮಿನ್ನಿತಿ ಕ್ಷಯಃ । ಪುಂಸಿ ಸಂಜ್ಞಾಯಾಮಿತ್ಯಧಿಕರಣೇ ಘಃ । ಕ್ಷಯೋ ನಿವಾಸ ಇತ್ಯಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

**ದೇವಯಂತಂ**— ದೇವತೆಗಳ (ಸಹಾಯವ)ನ್ನು ಅಪೇಕ್ಷಿಸುವ । **ಜನಃ**— ಯಜಮಾನನನ್ನು । **ಕಃ**— (ಬ್ರಹ್ಮಣಸ್ಪತಿಯಲ್ಲದೇ) ಇನ್ನಾವ ದೇವತೆಯು ತಾನೇ । **ಅಶ್ನವತ್**— ಸಮೀಪಿಸುವನು ? । **ವೃಕ್ತಬರ್ಹಿಷಂ**- (ಯಜ್ಞಾನುಷ್ಠಾನಕ್ಕಾಗಿ) ಸಂಪಾದಿಸಲ್ಪಟ್ಟ ದರ್ಭೆಗಳುಳ್ಳ ಯಜಮಾನನನ್ನು । **ಕಃ**— ಇತರ ಯಾವ ದೇವತೆಯು ತಾನೇ ( ಬಂದು ಸೇರುವನು ? ) । **ದಾಶ್ವಾನ್**— ಹವಿಸ್ಸನ್ನು ಅರ್ಪಿಸುವ ಯಜಮಾನನು । **ಪಸ್ತ್ಯಾಭಿಃ**— ಋತ್ವಿಕ್ಕುಗಳೊಡನೆ । **ಪ್ರ ಪ್ರ ಅಸ್ಥಿತ**— (ದೇವಯಜ್ಞಪ್ರದೇಶವನ್ನು ಕುರಿತು) ಹೊರಟಿದ್ದಾನೆ. । (ಆ ಯಜಮಾನನು) । **ಅಂತರ್ವಾವತ್**— ಒಳಗೆ ಬಹಳ ಐಶ್ವರ್ಯದಿಂದೊಡಗೂಡಿದ ಅಥವಾ ಪುತ್ರಪೌತ್ರಾದಿಗಳಿಂದ ಕೂಡಿದ । **ಕ್ಷಯಂ**— ತನ್ನ ನಿವಾಸಸ್ಥಾನವಾದ ಮನೆಯನ್ನು । **ದಧೇ**— ಹೊಂದಿರುವನು ।

॥ ಭಾವಾರ್ಥ ॥

ದೇವತೆಗಳನ್ನು ಬಯಸುವ ಯಜಮಾನನ ಬಳಿಗೆ (ಬ್ರಹ್ಮಣಸ್ಪತಿಯನ್ನು ಬಿಟ್ಟರೆ ಉಳಿದ) ಯಾವ ದೇವತೆಯು ತಾನೇ ಬರುವನು ? ದೇವತೆಗಳು ಬಂದು ಕುಳಿತುಕೊಳ್ಳುವುದಕ್ಕಾಗಿ ಕತ್ತರಿಸಿದ ದರ್ಭೆಗಳಿಂದ ಆಸನವನ್ನು ಸಿದ್ಧಪಡಿಸಿಟ್ಟುಕೊಂಡಿರುವ ಯಜಮಾನನ ಸಮೀಪಕ್ಕೆ ಮತ್ತಾವ ದೇವತೆಯು ತಾನೇ ಬರುವನು ? ಈಗ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸಲು ಋತ್ವಿಗ್ಜನರೊಡನೆ ಯಜಮಾನನು ಯಜ್ಞಭೂಮಿಗೆ ಬಂದಿರುವನು. ಆ ಯಜಮಾನನ ಯಜ್ಞಗೃಹವು ಅನೇಕ ಅಮೂಲ್ಯವಸ್ತುಗಳಿಂದ ತುಂಬಿರುವುದು. ಅಥವಾ ಪುತ್ರಪೌತ್ರಾದಿ ಜನರಿಂದ ತುಂಬಿರುವುದು.

English Translation

Who, except Brahmanaspati, will approach the man desirous of worshipping the gods ? who will approach the sacrificer by whom clipped sacred grass is spread ( for the gods to sit on ) ? the giver of oblations has proceeded with his priests to the sacrificial hall which is full of precious things.

|| ವಿಶೇಷ ವಿಷಯಗಳು ||

ಮುಖ್ಯಾಭಿಪ್ರಾಯವು— ದೇವತೆಗಳನ್ನು ಆರಾಧಿಸಲು ಅಪೇಕ್ಷಿಸುವ ಮನುಷ್ಯನು ಬ್ರಹ್ಮಣಸ್ಪತಿಯನ್ನೇ ಅಪೇಕ್ಷಿಸುವುದರಿಂದ ಅವನಲ್ಲದೆ ಮತ್ತಾವ ದೇವತೆಯು ಅವರುಗಳ ಬಳಿಗೆ ಬರುವನು ? ದೇವತೆಗಳು ಕುಳಿತುಕೊಳ್ಳುವುದಕ್ಕಾಗಿ ಕತ್ತರಿಸಿದ ದರ್ಭೆಗಳನ್ನು ಆಸನಕ್ಕಾಗಿ ಹರಡಿ ಸಿದ್ಧಪಡಿಸಿದ ಯಜಮಾನನ ಸಮೀಪಕ್ಕೆ ಮತ್ತಾವ ದೇವತೆಯು ಬರುವನು ? ಬ್ರಹ್ಮಣಸ್ಪತಿಯು ಹೊರತಾಗಿ ಮತ್ತಾವ ದೇವತೆಯೂ ಬರುವುದಿಲ್ಲ. ಇಂತಹ ಯಜಮಾನನು ಬ್ರಹ್ಮಣಸ್ಪತಿಯನ್ನು ಆರಾಧಿಸುವುದಕ್ಕಾಗಿ ತನ್ನ ಸಹಾಯಕರಾದ ಋತ್ವಿಗ್ಜನರೊಂದಿಗೆ ಅತ್ಯಂತ ಬೆಲೆಬಾಳುವ ವಸ್ತುಗಳಿಂದ ಸಿದ್ಧಪಡಿಸಲ್ಪಟ್ಟ ತನ್ನ ಯಾಗಶಾಲೆಗೆ ಬಂದಿರುವನು.

**ದೇವಯಂತಂ— ದೇವಾನ್ ಕಾಮಯಮಾನಂ** ದೇವತೆಗಳನ್ನು ಆರಾಧಿಸಲು ಇಚ್ಛಿಸುವ One who desires to worship the gods.

**ವೃಕ್ತಬರ್ಹಿಷಂ—** ಯಜ್ಞವೇದಿಕೆಯಲ್ಲಿ ದೇವತೆಗಳು ಬಂದು ಕುಳಿತುಕೊಳ್ಳುವುದಕ್ಕಾಗಿ ಕುಶವೆಂಬ ದರ್ಭೆಗಳ ತುದಿಗಳನ್ನು ಕತ್ತರಿಸಿ ಒಂದರ ಮೇಲೊಂದರಂತೆ ಮೂರುಪದರಗಳನ್ನು ಹಾಸಿ ಮೆತ್ತಗಿರುವಂತೆ ಮಾಡಿ ಸಿದ್ಧಪಡಿಸಿದ ದರ್ಭಾಸನವು. ಅಗ್ರಭಾಗವನ್ನು ಎಂದರೆ ತುದಿಯನ್ನು ಕತ್ತರಿಸಿದ ದರ್ಭೆಗಳಿಗೆ ಬರ್ಹಿಃ ಎಂದು ಹೆಸರು. ಅಂತಹ ದರ್ಭೆಗಳನ್ನು ಹರಡಿರುವ ಆಸನಕ್ಕೆ ವೃಕ್ತಬರ್ಹಿ ಎಂದೂ, ಅದನ್ನು ಸಿದ್ಧಪಡಿಸಿರುವ ಯಜಮಾನನನ್ನು ವೃಕ್ತಬರ್ಹಿಷಂ ಎಂದೂ ಹೇಳುವ ರೂಢಿ ಇರುವುದು.

**ಪ್ರಪ್ರ ಅಸ್ಥಿತ— ಪ್ರಸ್ಥಿತವಾನ್ ।** ಹೊರಟುಬಂದನು. ಪಾದಪೂರಣಕ್ಕಾಗಿ ಪ್ರ ಎಂಬ ಉಪಸರ್ಗದ ದ್ವಿರುಕ್ತಿ ಇರುವುದು.

**ಪಸ್ತ್ಯಾಭಿಃ— ಗೃಹಾಂತರ್ವರ್ತಿಭಿರ್ಮನುಷ್ಯೈಃ ಋತ್ವಿಗ್ಭಿಃ ।** ಋತ್ವಿಗ್ಜನರಿಂದ

**ಅಂತರ್ವಾವತ್— ವಾ ಗತಿಗಂಧನಯೋಃ । ಅಂತರ್ವಾಂತಿ ಗಚ್ಛಂತೀತ್ಯಂತರ್ವಾಃ ಪುತ್ರಪಶ್ವಾದಯಃ ತೇ ಯಸ್ಮಿನ್ ಸಂತೀತಿ ಅಂತರ್ವಾವತ್ ।** ವಾ ಎಂಬ ಧಾತುವಿಗೆ ಗತ್ಯರ್ಥವಿರುವುದು. ಅಂತಃ-ಒಳಗೆ ವಾಂತಿ ಹೋಗುವುದರಿಂದ ಅವರಿಗೆ ಅಂತರ್ವಾಃ ಎಂದು ಹೆಸರು ಒಳಗೆ ಎಂದರೆ ಮನೆಯಲ್ಲಿರುವ **ಪುತ್ರಪೌತ್ರಾದಿ**ಗಳು, ಪಶ್ವಾದಿಗಳು ಅಥವಾ ಇತರ ಉಪಯುಕ್ತವಾದ ವಸ್ತುಗಳು ಎಂದರ್ಥವು. ಅಂತರ್ವಾವತ್ ಎಂದರೆ ಅವುಗಳನ್ನುಳ್ಳ ಸ್ಥಳವು, ಮನೆಯು. ಉತ್ತಮ ವಸ್ತುಗಳಿಂದ ತುಂಬಿದ ಗೃಹವು ಎಂದಭಿಪ್ರಾಯವು. ಇಲ್ಲಿ ಗೃಹವೆಂದರೆ ಯಜ್ಞಗೃಹವು. ಆದುದರಿಂದ ಯಜ್ಞಸಾಧನಗಳಾದ ಹವಿಸ್ಸು, ಘೃತ, ಯಜ್ಞೋಪಕರಣಗಳು, ಋತ್ವಿಗ್ಜನರು ಮೊದಲಾದುವುಗಳಿಂದ ಸಿದ್ಧಪಡಿಸಿದ ಯಜ್ಞಶಾಲೆಯೆಂದಭಿಪ್ರಾಯವು.

**ಕ್ಷಯಂ— ಕ್ಷಿಯಂತಿ ನಿವಸಂತ್ಯಸ್ಮಿನ್ನಿತಿ ಕ್ಷಯಃ ತಂ ।** ವಾಸಮಾಡುವುದಕ್ಕೆ ಯೋಗ್ಯವಾದ ಸ್ಥಳವಾದ್ದರಿಂದ ಕ್ಷಯವೆಂದರೆ ನಿವಾಸಸ್ಥಾನವೆಂದರ್ಥವು.

### ವ್ಯಾಕರಣಪ್ರಕ್ರಿಯಾ

**ದೇವಯೆನ್ತಮ್**—ಇದೇ ಸೂಕ್ತ ೧ನೇ ಮನ್ತ್ರನಲ್ಲಿ ವಿವರಿಸಿದೆ. ಆದರೆ ಅಲ್ಲಿ ಪ್ರಥಮಾನ್ತ. ಇಲ್ಲಿ ದ್ವಿತೀಯಾನ್ತ.

**ಅಶ್ನವತ್**—ಪೂರ್ವಮನ್ತ್ರದಲ್ಲಿ ವಿವರಿಸಿದೆ.

**ಪ್ರ ಪ್ರ—ಪ್ರಸಮುಪೋದಃ ಪಾದಪೂರಣೇ** (ಪಾ ಸೂ ೮-೧-೬) ಪಾದಪೂರಣೆಯಲ್ಲಿ ಪ್ರ-ಸಮ್-ಉಪ-ಉದ್ ಈ ಉಪಸರ್ಗಗಳಿಗೆ ಛಂದಸ್ಸಿನಲ್ಲಿ ದ್ವಿತ್ವ ಬರುತ್ತದೆ ಎಂದು ಪ್ರಶಬ್ದಕ್ಕೆ ದ್ವಿತ್ವ. **ಅನುದಾತ್ತಂ ಚ** (ಪಾ. ಸೂ. ೮-೧-೩) ದ್ವಿತ್ವ ಹೊಂದಿದ ಶಬ್ದದ ಎರಡನೆಯ ರೂಪವು ಅನುದಾತ್ತವಾಗುತ್ತೆ ಎಂದು ಎರಡನೆ ಪ್ರ ಅನುದಾತ್ತ.

**ಅಸ್ಥಿತ**—ಷ್ಠಾ ಗತಿನಿವೃತ್ತೌ. ಷಕಾರಕ್ಕೆ ಸಕಾರ. ಷ್ಟುತ್ವಕ್ಕೆ ನಿವೃತ್ತಿ. ಸ್ಥಾ ಎಂದು ಇದೆ. ಲುಙ್. **ಸಮವಪ್ರವಿಭ್ಯಃಸ್ಥಃ** (ಪಾ. ಸೂ. ೧-೩-೨೨) ಸಮ್-ಅವ-ಪ್ರ-ವಿ ಈ ಉಪಸರ್ಗಗಳಿಗಿಂತ ಪರದಲ್ಲಿರುವ ಸ್ಥಾ ಧಾತು ಮುಂದೆ ಇರುವ ಲಕಾರದ ಸ್ಥಾನದಲ್ಲಿ ಆತ್ಮನೇಪದ ಬರುತ್ತೆ ಎಂದು ಆತ್ಮನೇಪದ ಬರುತ್ತದೆ. ಆದ್ದರಿಂದ ಪ್ರಥಮಪುರುಷ ಏಕವಚನ ತ ಪ್ರತ್ಯಯ. **ಚ್ಲಿ ಲುಙಿ** ಎಂದು ಚ್ಲಿ. ಚ್ಲಿಗೆ ಸಿಚ್. **ಸ್ಥಾಘ್ವೋರಿಚ್ಚ** (ಪಾ. ಸೂ. ೧-೨-೧೭) ಆತ್ಮನೇಪದ ಪರದಲ್ಲಿದ್ದರೆ ಸ್ಥಾಧಾತು, ಘುಸಂಜ್ಞೆ ಇರುವ ದಾರೂಪ ಅಥವಾ ಧಾರೂಪವಾದ ಧಾತುಗಳು, ಇವುಗಳ ಕೊನೆಯ ವರ್ಣಕ್ಕೆ ಇತ್ವ ಬರುತ್ತೆ, ಸಿಚ್ ಕಿತ್ತೂ ಆಗುತ್ತೆ ಎಂಬುದರಿಂದ ಸ್ಥಾಧಾತು ಆಕಾರಕ್ಕೆ ಇಕಾರ. ಸಿಚ್ ಕಿತ್ತೂ ಆಗುತ್ತೆ. ಅಡಾಗಮ. ಅಸ್ಥಿ+ಸ್+ತ, **ಹ್ರಸ್ವಾಂಗಾತ್** (ಪಾ. ಸೂ. ೮-೨-೨೭) ಹ್ರಸ್ವಾಂತವಾದ ಅಂಗದ ಮುಂದೆ ಇರುವ ಸಿಚ್‌ಗೆ ಝಲ್ ಪರದಲ್ಲಿದ್ದರೆ ಲೋಪ ಬರುತ್ತೆ ಎಂದು ಸಿಚ್‌ಗೆ ಲೋಪ. ಅಸ್ಥಿತ ಎಂದು ಆಗುತ್ತೆ. ಅಸ್ಥಿಷಾತಾಂ ಮೊದಲಾದ ಲಕ್ಷ್ಯಗಳಲ್ಲಿ ಸಿಚ್‌ಗೆ ಲೋಪ ಬರುವುದಿಲ್ಲ. ಅಲ್ಲಿ ಗುಣನಿಷೇಧಕ್ಕಾಗಿ ಸಿಚ್‌ಗೆ ಕಿತ್ವವನ್ನು ವಿಧಿಸಲಾಗಿದೆ.

**ಅನ್ತರ್ವಾವತ್**—ವಾ ಗತಿಗನ್ಧನಯೋಃ. ಅನ್ತಃ=ಒಳಗೆ, ವಾನ್ತಿ-ಹೋಗುವರು ಎಂದು ವಿವಕ್ಷಿಸಿದರೆ **ಆತೋಮನಿನ್—,** ಎಂಬುದರಿಂದ ವಿಚ್‌ಪ್ರತ್ಯಯ ಬರುತ್ತದೆ. ಅಂತರ್ವಾಃ ಎಂದಾಗುತ್ತೆ. ತನ್ನ ಮನೆ ಯೊಳಗೆ ಭೀತಿ ಇಲ್ಲದೆ ಪ್ರವೇಶಿಸುವ ಪುತ್ರ-ಪಶು ಮೊದಲಾದುವು ಈ ಪದದಿಂದ ಬೋಧಿತವಾಗುತ್ತವೆ. ಅನ್ತರ್ವಾಃ ಅಸ್ಯ ಅಸ್ತಿ ಎಂದು ವಿಗ್ರಹಮಾಡಿದರೆ **ತದಸ್ಯಾಸ್ತ್ಯಸ್ಮಿನ್—,** ಎಂದು ಮತುಪ್. **ಮಾದುಪಧಾಯಾಶ್ಚ—,** ಎಂದು ಮಕಾರಕ್ಕೆ ವಕಾರ. ಅನ್ತರ್ವಾವತ್ ಎಂದು ಆಗುವುದು. ಮತುಪ್ ಪಿತ್ ಆದ್ದರಿಂದ ಅನುದಾತ್ತ, ಕೃದು ತ್ತರ ಪದಪ್ರಕೃತಿಸ್ವರ ಬರುತ್ತದೆ. ಇದು ಒಂದು ವಿಧವಾದ ಪ್ರಕ್ರಿಯೆ. ವನ ವ್ಯಕ್ತಾಯಾಂ ವಾಚಿ, **ಧಾತೋರೇ- ಕಾಚಃ—,** ಎಂದು ಯಙ್ **ಯಙೋಽಚಿಚ** ಎಂದು ಯಙ್‌ಗೆ ಲುಕ್, **ಸನ್ಯಙೋಃ** ಎಂದು ದ್ವಿತ್ವ, ಅಭ್ಯಾಸ ಲೋಪ, **ದೀರ್ಘೋಽಕಿತಃ** ಎಂದು ಅಭ್ಯಾಸಕ್ಕೆ ದೀರ್ಘ. ವಾನದ್ ಎಂದಾಗುತ್ತೆ. ಇದರ ಮುಂದೆ ಕ್ವಿಪ್, ಅನ್ತಃ ವಾವದೀತೀತ್ಯನ್ತರ್ವಾವತ್, ಎಂದು ವಿಗ್ರಹ. ಇದು ಮತ್ತೊಂದು ವಿಧವಾದ ಪ್ರಕ್ರಿಯೆ

**ಕ್ಷಯಮ್**— ಕ್ಷಿ ನಿವಾಸಗತ್ಯೋಃ ತುದಾದಿ, ಕ್ಷಿಯನ್ತಿ ನಿವಸನ್ತ್ಯತ್ರ ಎಂದು ವಿಗ್ರಹ. **ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ** ಎಂದು ಘ ಪ್ರತ್ಯಯ, ಗುಣ, ಅಯಾದೇಶ. **ಕ್ಷಯೋ ನಿವಾಸೇ** (ಪಾ. ಸೂ, ೬-೧-೨೦೧) ನಿವಾಸಾರ್ಥಕವಾದ ಕ್ಷಯ ಶಬ್ದವು ಆದ್ಯುದಾತ್ತವಾಗುತ್ತೆ ಎಂದು ಆದ್ಯುದಾತ್ತ. ॥೭॥



ಸಂಹಿತಾಪಾಠಃ

ಉಪ ಕ್ಷತ್ರಂ ಪೃಞ್ಚೀತ ಹನ್ತಿ ರಾಜಭಿರ್ಭಯೇ ಚಿತ್ಸುಕ್ಷಿತಿಂ ದಧೇ ।
ನಾಸ್ಯ ವರ್ತಾ ನ ತರುತಾ ಮಹಾಧನೇ ನಾರ್ಭೇ ಅಸ್ತಿ ವಜ್ರಿಣಃ ॥೮॥

ಪದಪಾಠಃ

ಉಪ । ಕ್ಷತ್ರಂ । ಪೃಞ್ಚೀತ । ಹನ್ತಿ । ರಾಜಽಭಿಃ । ಭಯೇ । ಚಿತ್ । ಸುಽಕ್ಷಿತಿಂ । ದಧೇ ।
ನ । ಅಸ್ಯ । ವರ್ತಾ । ನ । ತರುತಾ । ಮಹಾಽಧನೇ । ನ । ಅರ್ಭೇ । ಅಸ್ತಿ । ವಜ್ರಿಣಃ ॥ ೮ ॥

ಸಾಯಣಭಾಷ್ಯಂ

ಬ್ರಹ್ಮಣಸ್ಪತಿರ್ದೇವಃ ಕ್ಷತ್ರಂ ಬಲಮುಪ ಪೃಂಚೀತ । ಸ್ವಾತ್ಮನಿ ಸಂಪೃಕ್ತಂ ಕುರ್ಯಾತ್ । ತತೋ ರಾಜಭಿರ್ವರುಣಾದಿಭಿಃ ಸಹ ಹಂತಿ । ಶತ್ರೂನ್ಮಾರಯತಿ । ಭಯೇ ಚಿತ್ ಭೀತಿಹೇತೌ ಯುದ್ಧೇಽಪಿ ಸುಕ್ಷಿತಿಂ ದಧೇ । ಸುಷ್ಠು ನಿವಾಸಸ್ಥೈರ್ಯಂ ಧಾರಯತಿ । ನ ತು ಪಲಾಯತೇ । ವಜ್ರಿಣೋ ವಜ್ರಾದ್ಯಾಯುಧವತೋಽಸ್ಯ ಬ್ರಹ್ಮಣಸ್ಪತೇರ್ಮಹಾಧನೇ ಪ್ರಭೂತಧನನಿಮಿತ್ತೇ ಯುದ್ಧೇ ವರ್ತಾ ಪ್ರವರ್ತಯಿತಾಽನ್ಯಃ

**ಕೋಽಪಿ ನಾಸ್ತಿ । ಸ್ವಯಮೇವ ಪ್ರವರ್ತತ ಇತ್ಯರ್ಥಃ । ಮಹಾಧನ ಇತಿ ಸಂಗ್ರಾಮನಾಮ । ಮಹಾಧನೇ ಸಮೀಕೇ ಇತಿ ತನ್ನಾಮಸು ಪಾಠಾತ್ । ತಥಾ ತರುತಾ ತರಣಸ್ಯೋಲ್ಲಂಘನಸ್ಯ ಕರ್ತಾನ್ಯಃ ಕೋಽಪಿ ನಾಸ್ತಿ । ತಥೈವಾರ್ಭೇ ಸ್ವಲ್ಪೇ ಯುದ್ಧೇಽಪ್ಯನ್ಯಃ ಪ್ರವರ್ತಯಿತಾ ನಾಸ್ತಿ ॥ ಪೃಂಚೀತ । ಪೃಚೀ ಸಂಪರ್ಕೇ । ಲಿಙಿ ರುಧಾದಿತ್ವಾತ್ ಶ್ನಮ್ । ಶ್ನಸೋರಲ್ಲೋಪ ಇತ್ಯಕಾರಲೋಪಃ । ಪ್ರತ್ಯಯಸ್ವರಃ । ಕ್ಷತ್ರಂ ಪೃಂಚೀತ ರಾಜಭಿರ್ಹಂತಿ ಚೇತಿ ಸಮುಚ್ಚಯಲಕ್ಷಣಸ್ಯ ಚಾರ್ಥಸ್ಯ ದರ್ಶನಾಚ್ಚಾದಿಲೋಪೇ ವಿಭಾಷೇತಿ ಪ್ರಥಮಾಯಾಸ್ತಿಙ್ವಿಭಕ್ತೇರ್ನಿಘಾತಪ್ರತಿಷೇಧಃ । ಹಂತೀತ್ಯೇಷಾ ದ್ವಿತೀಯಾಪಿ ತಿಙಃ ಪರತ್ವಾನ್ನ ನಿಹನ್ಯತೇ । ಸುಕ್ಷಿತಿಂ । ಶೋಭನಾ ಕ್ಷಿತಿಃ ಸುಕ್ಷಿತಿಃ । ಮನ್ಕ್ತಿನ್ನಿತ್ಯಾದಿನೋತ್ತರಪದಾಂತೋದಾತ್ತತ್ವಂ । ವರ್ತಾ । ವರ್ತತೇರ್ವೃಣೋತೇರ್ವಾ ತೃಚ್ಯಾಗಮಾನುಶಾಸನಸ್ಯಾನಿತ್ಯತ್ವಾದಿಡಭಾವಃ । ತರುತಾ । ತೄ ಪ್ಲವನತರಣಯೋಃ । ಗ್ರಸಿತಸ್ಕಭಿತೇತ್ಯಾದಿನಾ ತೃಚ್ಯುಡಾಗಮೋ ನಿಪಾತಿತಃ । ಚಿತ ಇತ್ಯಂತೋದಾತ್ತತ್ವಂ । ಮಹಾಧನೇ । ಮಹಚ್ಚ ತದ್ಧನಂ ಚ ಮಹಾಧನಂ । ಆನ್ಮಹತಃ । ಪಾ. ೬-೩-೪೬ । ಇತ್ಯಾತ್ವಂ । ತೇನ ಶಬ್ದೇನ ತದ್ಧೇತುಭೂತಃ ಸಂಗ್ರಾಮೋ ಲಕ್ಷ್ಯತೇ । ಅರ್ಭೇ । ಋ ಗತೌ । ಅರ್ತಿಗೃಭ್ಯಾಂ ಭನ್ ಉ. ೩-೧೫೨ । ಇತಿ ಭನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ ॥ ೨೧ ॥**

॥ ಪ್ರತಿಪದಾರ್ಥ ॥

(**ಬ್ರಹ್ಮಣಸ್ಪತಿಃ**— ಬ್ರಹ್ಮಣಸ್ಪತಿಯು) । **ಕ್ಷತ್ರಂ**— (ತನ್ನ) ಬಲವನ್ನು । **ಉಪ ಪೃಂಚೀತ**— ತನ್ನಲ್ಲೇ ಕೇಂದ್ರೀಕರಿಸಲಿ. (ಆ ಬಲದಿಂದ) । **ರಾಜಭಿಃ**— ಪ್ರಭುಗಳಾದ ಮರುತಾದಿಗಳೊಡನೆ ಕೂಡಿ । **ಹಂತಿ**- ಶತ್ರುಗಳನ್ನು ಕೊಲ್ಲುತ್ತಾನೆ. । **ಭಯೇ ಚಿತ್** — ಭಯಂಕರವಾದ ಯುದ್ಧದಲ್ಲೂ ಸಹ । **ಸುಕ್ಷಿತಿಂ**—(ಪಲಾಯನ ಮಾಡದೇ) ಸ್ವಸ್ಥಾನದಲ್ಲೇ ನಿಂತಿರತಕ್ಕ ಧೈರ್ಯವನ್ನು । **ದಧೇ**— ಹೊಂದುತ್ತಾನೆ. । **ವಜ್ರಿಣಃ**— ವಜ್ರವೇ ಮೊದಲಾದ ಆಯುಧಗಳುಳ್ಳ । **ಅಸ್ಯ**— ಈ ಬ್ರಹ್ಮಣಸ್ಪತಿಗೆ । **ಮಹಾಧನೇ**— ಸಮೃದ್ಧವಾದ ಧನಕ್ಕಾಗಿ ಆಗತಕ್ಕ ಯುದ್ಧದಲ್ಲಿ । **ವರ್ತಾ**—ಹುರಿದುಂಬಿಸುವ (ಇತರರು ಯಾರೂ) । **ನ ಅಸ್ತಿ**—ಇಲ್ಲವು (ತನ್ನ ಸ್ವಶಕ್ತಿಯಿಂದಲೇ ಪ್ರೇರಿತನಾಗುತ್ತಾನೆ.) (ಹಾಗೆಯೇ)। **ತರುತಾ**—(ಇವನ ಎದೆ ಕುಗ್ಗಿಸಿ) ಪಲಾಯನ ಮಾಡುವಂತೆ ಬೆದರಿಸುವ। **ನ**—(ಇತರರು ಯಾರೂ) ಇಲ್ಲವು. **ಅರ್ಭೇ**—ಸಣ್ಣ ಯುದ್ಧದಲ್ಲೂ ಸಹ । **ನ**— (ಈ ರೀತಿ ಮಾಡತಕ್ಕವರು ಯಾರೂ) ಇಲ್ಲ.

ಭಾವಾರ್ಥ

ಬ್ರಹ್ಮಣಸ್ಪತಿಯು ತನ್ನ ಸಾಮರ್ಥ್ಯವನ್ನೆಲ್ಲಾ ಒಟ್ಟುಗೂಡಿಸಿ ರಾಜರಾದ ಮಿತ್ರಾವರುಣಾದಿಗಳ ಸಹಾಯದಿಂದ ಶತ್ರುಗಳನ್ನು ಸಂಹಾರಮಾಡುತ್ತಾನೆ. ಯುದ್ಧಗಲ್ಲಿ ಎಂತಹ ಅಪಾಯವಿರುವಾಗಲೂ ಸ್ಥೈರ್ಯದಿಂದ ಇರುತ್ತಾನೆ. ಇವನು ವಜ್ರಾಯುಧದಿಂದ ಸಜ್ಜಿತನಾಗಿರುವಾಗ ದೊಡ್ಡಯುದ್ಧದಲ್ಲಾಗಲೀ, ಸಣ್ಣಯುದ್ಧದಲ್ಲಾಗಲೀ ಇವನನ್ನು ಎದುರಿಸುವ ಅಥವಾ ಸೋಲಿಸುವ ಮನುಷ್ಯನು ಯಾವನೊಬ್ಬನೂ ಇಲ್ಲ

## English Translation

Brahmanaspati will concentrate his strength ; with the help of royal gods, ( Varuna and others ) he kills his enemies ; he firmly hold his ground even in times of danger ; when he is armed with his thunderbolt no one can resist or defeat in a battle great or small.

### ವಿಶೇಷ ವಿಷಯ

**ಕ್ಷತ್ರಂ— ಬಲಂ ।** ಬಲವು, ಶಕ್ತಿಸಾಮರ್ಥ್ಯಗಳು.

**ಉಪ ಪೃಂಚೀತ— ಪೃಚೀ ಸಂಪರ್ಕೇ ।** ಒಟ್ಟುಗೂಡಿಸಲಿ, ಕೇಂದ್ರೀಕರಿಸಲಿ.

**ರಾಜಭಿಃ—** ಇಲ್ಲಿ ರಾಜರುಗಳಿಂದ ಎಂದರೆ ಹಿಂದೆಹೇಳಿದ ಇಂದ್ರ, ವರುಣ, ಮಿತ್ರ, ಅರ್ಯಮಾ ಎಂಬ ದೇವತೆಗಳಿಂದ ಸಹಿತವಾಗಿ ಎಂಗಭಿಪ್ರಾಯವು.

**ಭಯೇ** – ಭಯವನ್ನುಂಟುಮಾಡುವ ಯುದ್ಧದಲ್ಲಿ ಅಥವಾ ಅಪಾಯಕಾಲದಲ್ಲಿ.

**ಸುಕ್ಷಿತಿಂ— ನಿವಾಸಸ್ಥೈರ್ಯಂ ।** ದೃಢವಾಗಿ ನಿಲ್ಲುವುದು. ಭಯದಿಂದ ಓಡಿಹೋಗದೆ ಧೈರ್ಯವಾಗಿ ನಿಲ್ಲುವುದು.

**ವರ್ತಾ— ಪ್ರವರ್ತಯಿತಾ ।** ಎದುರಿಸುವವನು. ಇವನನ್ನು ಯುದ್ಧದಲ್ಲಿ ಎದುರಿಸುವವರು ಯಾರೂ ಇಲ್ಲ. ಇವನೇ ಎಲ್ಲರನ್ನೂ ಎದುರಿಸುವವನು.

**ತರುತಾ–** ಇವನನ್ನು ಅತಿಕ್ರಮಿಸುವವನು ಎಂದರೆ ಇವನನ್ನು ಪರಾಭವಗೊಳಿಸುವವನು, ಸೋಲಿಸುವವನು.

**ಮಹಾಧನೇ—** ರಣಃ ವಿವಾಕ್ ಮೊದಲಾದ ನಲವತ್ತಾರು ಸಂಗ್ರಾಮನಾಮಗಳ ಮಧ್ಯದಲ್ಲಿ ಮಹಾಧನೇ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೯) ಈ ಶಬ್ದಕ್ಕೆ ಯುದ್ಧದಲ್ಲಿ ಎಂದು ಹೆಸರು. ಮಹಾಧನಪ್ರಾಪ್ತಿಗಾಗಿ ಮಾಡುವ ದೊಡ್ಡಯುದ್ಧವೆಂದು ಭಾಷ್ಯಕಾರರು ಅವಯವಾರ್ಥವನ್ನು ವಿವರಿಸಿರುವರು.

**ಅರ್ಭೇ—** ಋಪಸ್ ಹ್ರಸ್ವಃ ಮೊದಲಾದ ಅಲ್ಪವಾಚಕಶಬ್ದಗಳ ಮಧ್ಯದಲ್ಲಿ ಅರ್ಭಕ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೨) ಅರ್ಭೇ ಎಂದರೆ ಅಲ್ಪವಾದ ಯುದ್ಧ, ಸಣ್ಣಯುದ್ಧದಲ್ಲಿ ಎಂದರ್ಥವು.

### ॥ ವ್ಯಾಕರಣಪ್ರಕ್ರಿಯಾ ॥

**ಪೃಣ್ಚೀತ—** ಪೃಚೀ ಸಂಪರ್ಕೇ, ವಿಧಿಲಿಙ್‍ಗೆ ತ, ಸೀಯುಟ್ **ರುಧಾದಿಭ್ಯಃಶ್ನಮ್** ಎಂದು ಶ್ನಮ್ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಕಿತ್ ವಾ ಙಿತ್ ಆದ ಸಾರ್ವಧಾತುಕ ಪರದಲ್ಲಿದ್ದರೆ ಶ್ನ-ಅಸ್‌ಗಳ

ಅಕಾರಕ್ಕೆ ಲೋಪ ಬರುತ್ತೆ ಎಂದು ಶ್ನ ಪ್ರತ್ಯಯದ ಅಕಾರಕ್ಕೆ ಲೋಪ. **ಲಿಜಸ್ಸಲೋಪಃ—,** ಎಂದು ಸಕಾರಕ್ಕೆ ಲೋಪ, ನಕಾರಕ್ಕೆ ಅನುಸ್ವಾರ, ಅದಕ್ಕೆ ಪರಸವರ್ಣ. ಪ್ರತ್ಯಯಸ್ವರವೇ ಬರುತ್ತೆ. ‘ ಬ್ರಹ್ಮಣಸ್ಪತಿಃ ಬಲಂ ಪೃಙ್ಕ್ತೇತ, ತತಃ ರಾಜಭಿಸ್ಸಹ **ಹನ್ತಿ ಚ,** ಎಂದು ಚ ಶಬ್ದದ ಅರ್ಥಕ್ಕೆ ಪ್ರತೀತಿ ಇದೆ. **ಚಾದಿಲೋಪೇ ವಿಭಾಷಾ** ಎಂದು ಮೊದಲನೆಯ ತಿಙಂತವಾದ ಪೃಙ್ಕ್ತೇತ ಎಂಬುದಕ್ಕೆ ಸರ್ವಾನುದಾತ್ತಪ್ರತಿಷೇಧ ಬರುತ್ತದೆ.

**ಹನ್ತಿ**—ಇದು ಯದ್ಯಪಿ ಮೊದಲನೆ ತಿಙಂತ ಅಲ್ಲ. ಆದರೂ ಪೃಙ್ಕ್ತೇತ ಎಂಬ ತಿಙಂತದ ಮುಂದೆ ಇದೆ. ಆದ್ದರಿಂದ **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುವುದಿಲ್ಲ.

**ವರ್ತಾ**—ವೃತು ವರ್ತನೇ ೧ನೇ ಗಣ. ವೃಙ್ ವರಣೇ ಸ್ವಾದಿ, ಈ ಧಾತುಗಳಲ್ಲಿ ಯಾವುದಾದರೂ ಒಂದು ಧಾತು ಮುಂದೆ ತೃಚ್‌ಪ್ರತ್ಯಯ. **ಆಗಮಶಾಸ್ತ್ರಮನಿತ್ಯಮ್** ಎಂದು ಹೇಳಿರುವುದರಿಂದ ತೃಚ್‌ಗೆ ಇಟ್ ಆಗಮ ಬರುವುದಿಲ್ಲ. ಪ್ರಥಮಧಾತುವಿಗೆ ಗ್ರಹಣಮಾಡಿದರೆ ಲಘೂಪಧಗುಣ **ಝರೋಝರಿ ಸವರ್ಣೇ** ಎಂದು ಒಂದು ತ್‌ಗೆ ಲೋಪ. ಎರಡನೇದಕ್ಕೆ ಗ್ರಹಣವಾದರೆ **ಸಾರ್ವಧಾತುಕಾ—,** ಎಂದು ಗುಣ- ವರ್ತೃ ಎಂದಾಗುತ್ತೆ. ಪ್ರಥಮೈಕವಚನ ಸುಪ್ರತ್ಯಯ. **ಋದುಶಸ್ಪುರುದಂಸೋಽನೇಹಸಾಂ ಚ** (ಪಾ. ಸೂ. ೭-೧-೯೪) ಎಂದು ಅನಙ್ ಆದೇಶ. **ಅಪ್‌ತೃನ್‌ತೃಚ್—,** ಎಂದು ಉಪಧಾದೀರ್ಘ. **ಹಲ್ಙ್ಯಾಭ್ಯಃ—,** ಎಂದು ಸುಲೋಪ, **ನಲೋಪಃ ಪ್ರಾತಿ—,** ಎಂದು ನಕಾರಲೋಪ.

**ತರುತಾ**—ತೄ ಪ್ಲವನತರಣಯೋಃ **ಗ್ರಸಿತಸ್ಕಭಿತ ಸ್ತಭಿತೋತ್ತಭಿತ ಚತ್ತ ವಿಕಸ್ತಾ ವಿಶಸ್ತೄ ಶಂಸ್ತೄ ಶಾಸ್ತೄ ತರುತೃ—,** (ಪಾ. ಸೂ. ೭-೨-೩೪) ಎಂಬ ಸೂತ್ರದಲ್ಲಿ ತೄಧಾತು ಮುಂದೆ ಬರುವ ತೃಚ್‌ಗೆ ಉಟ್ ಎಂಬ ಆಗಮವು ನಿಪಾತಿತವಾಗಿದೆ ತೄ+ಉತೃ, ಗುಣ, ತರುತೃ, ಸು-ವನ್ನು ಹಚ್ಚಲು ಹಿಂದಿನಂತೆಯೇ ಪ್ರಕ್ರಿಯೆಯಾಗುತ್ತದೆ. **ಚಿತಃ** ಎಂದು ಅಂತೋದಾತ್ತ ಬರುತ್ತದೆ

**ಮಹಾಧನೇ**—ಮಹಚ್ಚ ತತ್ ಧನಂ ಚ. **ವಿಶೇಷಣಂ ವಿಶೇಷ್ಯೇಣ ಬಹುಲಂ** ಎಂದು ಸಮಾಸ. **ಆನ್ಮಹತಸ್ಸಮಾನಾಧಿಕರಣಜಾತೀಯಯೋಃ** (ಪಾ ಸೂ. ೬-೪-೪೬) ಸಮಾನಾಧಿಕರಣವಾದ ಉತ್ತರಪದ ಅಥವಾ ಜಾತೀಯರ್ ಪ್ರತ್ಯಯ ಇವು ಪರದಲ್ಲಿದ್ದರೆ ಮಹತ್ ಶಬ್ದದ ತಕಾರಕ್ಕೆ ಆತ್ವ ಬರುತ್ತೆ ಎಂದು ಆಕಾರಾದೇಶ. ಹೆಚ್ಚು ಧನ್ಯಕ್ಕೆ ಕಾರಣವಾದ ಯುದ್ಧವು ಲಕ್ಷಣಾ ವೃತ್ತಿಯಿಂದ ಬೋಧಿತವಾಗುವುದು.

**ಅರ್ಭೇ**—ಋ ಗತೌ. **ಅರ್ತಿಗೃಭ್ಯಾಂ ಭನ್** (ಉ ಸೂ. ೩-೪೩೨) ಋ ಗತೌ, ಗೄ ನಿಗರಣೇ ಈ ಧಾತುಗಳ ಮುಂದೆ ಭನ್‌ಪ್ರತ್ಯಯಬರುತ್ತೆ ಎಂದು ಭನ್ ಬಂದರೆ ಋ+ಭ. ಗುಣ-ಅರ್ಭ ಎಂದು ಆಗುತ್ತದೆ. ಪ್ರತ್ಯಯವು ನಿತ್ತಾದ್ದರಿಂದ ಆದ್ಯುದಾತ್ತ ಬರುತ್ತದೆ. ॥ ೮ ॥

ಇಲ್ಲಿಗೆ ೪೦ನೇ ಸೂಕ್ತಪೂರ್ಣವು



# ನಲವತ್ತೊಂದನೆಯ ಸೂಕ್ತವು

---

**ಯಂ ರಕ್ಷಂತೀತಿ ನವರ್ಚಂ ಷಷ್ಠಂ ಸೂಕ್ತಂ। ತತ್ರಾನುಕ್ರಮಣಂ। ಯಂ ರಕ್ಷಂತಿ ನವ ವರುಣ-ಮಿತ್ರಾರ್ಯಮ್ಣಾಂ ಮಧ್ಯೇ ತೃಚ ಆದಿತ್ಯೇಭ್ಯೋ ಗಾಯತ್ರಂ ಹೀತಿ। ಘೋರಪುತ್ರಃ ಕಣ್ವ ಋಷಿಃ। ಇದಮಾದಿತ್ರೀಣಿ ಸೂಕ್ತಾನಿ ಗಾಯತ್ರಾಣಿ। ಆದ್ಯಂತಯೋಸ್ತೃಚಯೋರ್ವರುಣಮಿತ್ರಾರ್ಯಮಣೋ ದೇವತಾಃ। ಮಧ್ಯತೃಚಸ್ಯ ಸುಗಃ ಪಂಥಾ ಇತ್ಯಸ್ಯಾದಿತ್ಯಾ ದೇವತಾಃ ॥ ಗತೋ ವಿನಿಯೋಗಃ ॥**

ಅನುವಾದವು— **ಯಂ ರಕ್ಷಂತಿ** ಎಂಬುದು ಎಂಟನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ—**ಯಂ ರಕ್ಷಂತಿ ನವ ವರುಣಮಿತ್ರಾರ್ಯಮ್ಣಾಂ ಮಧ್ಯೇ ತೃಚ ಆದಿತ್ಯೇಭ್ಯೋ ಗಾಯತ್ರಂ ಹೀತಿ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಘೋರಪುತ್ರನಾದ ಕಣ್ವನು ಋಷಿಯು. ಈ ಸೂಕ್ತವೂ ಮುಂದಿನ ಎರಡು ಸೂಕ್ತಗಳೂ ಗಾಯತ್ರೀಛಂದಸ್ಸಿನವು. ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳಿಗೂ, ಕೊನೆಯ ಮೂರು ಋಕ್ಕುಗಳಿಗೂ, ವರುಣ, ಮಿತ್ರ, ಅರ್ಯಮಾ ಎಂಬುವರು ದೇವತೆಗಳು ಮಧ್ಯದ ಮೂರು ಋಕ್ಕುಗಳಿಗೆ ಎಂದರೆ ೪-೬ ಋಕ್ಕುಗಳಿಗೆ ಆದಿತ್ಯರು ದೇವತೆಗಳು. ವಿನಿಯೋಗವು ಹಿಂದೆಯೇ ಹೇಳಲ್ಪಟ್ಟಿರುವುದು

---

॥ ಓಂ ॥

## ಸೂಕ್ತ—೪೧

॥ ಮಂಡಲ—೧ ॥ ಅನುವಾಕ—೮ ॥ ಸೂಕ್ತ—೪೧ ॥

॥ ಅಷ್ಟಕ—೧ ॥ ಅಧ್ಯಾಯ—೩ ॥ ವರ್ಗ—೨೨, ೨೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೯ ॥

॥ ಋಷಿಃ— ಕಣ್ವೋ ಘೌರಃ ॥

॥ ದೇವತಾ— ೧-೩, ೭-೯, ವರುಣಮಿತ್ರಾರ್ಯಮಣಃ, ೪-೬, ಆದಿತ್ಯಾಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಯಂ ರಕ್ಷನ್ತಿ ಪ್ರಚೇತಸೋ ವರುಣೋ ಮಿತ್ರೋ ಅರ್ಯಮಾ।
ನೂ ಚಿತ್ಸ ದಭ್ಯತೇ ಜನಃ ॥೧॥

॥ ಪದಪಾಠಃ ॥

ಯಂ । ರಕ್ಷನ್ತಿ । ಪ್ರಽಚೇತಸಃ । ವರುಣಃ । ಮಿತ್ರಃ । ಅರ್ಯಮಾ ।
ನು । ಚಿತ್ । ಸಃ । ದಭ್ಯತೇ । ಜನಃ ॥೧॥

॥ ಸಾಯಣಭಾಷ್ಯಂ ॥

**ಪ್ರಚೇತಸಃ ಪ್ರಕೃಷ್ಟಜ್ಞಾನಯುಕ್ತಾ ವರುಣಾದಯೋ ದೇವಾ ಯಂ ಯಜಮಾನಂ ರಕ್ಷಂತಿ ಸ ಜನೋ ಯಜಮಾನೋ ನೂ ಚಿತ್ ಕ್ಷಿಪ್ರಮೇವ ದಭ್ಯತೇ । ದಭ್ನೋತಿ । ಶತ್ರೂನ್ ಹಿನಸ್ತಿ । ಪ್ರಚೇತಸಃ । ಪ್ರಕೃಷ್ಟಂ ಚೇತೋ ಯೇಷಾಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ನೂ ಚಿತ್ । ಋಚಿ ತುನುಘೇತ್ಯಾದಿನಾ ದೀರ್ಘಃ । ದಭ್ಯತೇ ದನ್ಭು ದಂಭೇ । ವ್ಯತ್ಯಯೇನ ಶ್ಯನ್ ಆತ್ಮನೇಪದಂ ಚ ॥**

॥ ಪ್ರತಿಪದಾರ್ಥ ॥

**ಪ್ರಚೇತಸಃ**—ಶ್ರೇಷ್ಠವಾದ ಜ್ಞಾನವುಳ್ಳವರಾದ । **ವರುಣಃ**—ವರುಣನೂ । **ಮಿತ್ರಃ**—ಮಿತ್ರನೂ (ಮತ್ತು) । **ಅರ್ಯಮಾ**—ಅರ್ಯಮನೂ । **ಯಂ**—ಯಾವ ಯಜಮಾನನನ್ನು (ಯಜ್ಞಕರ್ತನನ್ನು) । **ರಕ್ಷಂತಿ**—ಕಾಪಾಡುತ್ತಾರೋ । **ಸಃ ಜನಃ**—ಆ ಯಜಮಾನನು । **ನೂ ಚಿತ್**—ಜಾಗ್ರತೆಯಾಗಿಯೇ । **ದಭ್ಯತೇ**—(ಶತ್ರುಗಳನ್ನು) ನಾಶಮಾಡುತ್ತಾನೆ.

ಭಾವಾರ್ಥ

ಶ್ರೇಷ್ಠವಾದ ಜ್ಞಾನವುಳ್ಳವರಾದ ವರುಣನೂ, ಮಿತ್ರನೂ ಮತ್ತು ಅರ್ಯಮನೂ ಯಾವ ಯಜಮಾನನನ್ನು ಕಾಪಾಡುತ್ತಾರೋ, ಆ ಯಜಮಾನನು ಜಾಗ್ರತೆಯಾಗಿಯೇ ಶತ್ರುಗಳನ್ನು ನಾಶಮಾಡುತ್ತಾನೆ.

## English Translation

That person whom wise Varuna, Mitra, and Aryaman protect quickly defeats his enemies.

॥ ವಿಶೇಷವಿಷಯಗಳು ॥

**ಪ್ರಚೇತಸಃ—ಪ್ರಕೃಷ್ಟಜ್ಞಾನಯುಕ್ತಾಃ** ಉತ್ತಮವಾದ ಜ್ಞಾನದಿಂದ ಕೂಡಿದವರಾದ, ಪ್ರಜ್ಞಾಶಾಲಿಗಳಾದ

**ನೂ ಚಿತ್—ಕ್ಷಿಪ್ರಮೇವ ।** ಬೇಗನೆ, ಶೀಘ್ರವಾಗಿ

**ದಭ್ಯತೇ—ದಮ್ಭು ದಂಭೇ । ದಭ್ನೋತಿ ಶತ್ರೂನ್ ಹಿನಸ್ತಿ ।** ಶತ್ರುಗಳನ್ನು ನಾಶಮಾಡುತ್ತಾನೆ ಅಥವಾ ಕರ್ಮಣಿಪ್ರಯೋಗದ ಅರ್ಥವನ್ನು ಹೇಳಬೇಕಾದರೆ ನೂ ಚಿತ್ ದಭ್ಯತೇ=ಶತ್ರುವಿನಿಂದ ಹಿಂಸಿಸಲ್ಪಡುವುದಿಲ್ಲ, ಎಂದಾಗುವುದು ಈ ಸಂದರ್ಭದಲ್ಲಿ ನೂ ಎಂಬ ಶಬ್ದಕ್ಕೆ ನ ಎಂದು ನಿಷೇಧಾರ್ಥವನ್ನು ಹೇಳಬೇಕಾಗುವುದು.

॥ ವ್ಯಾಕರಣಪ್ರಕ್ರಿಯಾ ॥

ರಕ್ಷನ್ತಿ—ರಕ್ಷ ಪಾಲನೇ ೧ನೇ ಗಣ. ಯದ್ವೃತ್ತಯೋಗ ಇರುವುದರಿಂದ ಸರ್ವಾನುದಾತ್ತ ಬರುವುದಿಲ್ಲ

**ಪ್ರಚೇತಸಃ**— ಪ್ರಕೃಷ್ಟಂ ಚೇತಃ ಯೇಷಾಂ ತೇ ಎಂದು ಬಹುವ್ರೀಹಿ. ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ವರುಣಃ—ಕೃವೃದಾರಿಭ್ಯ ಉನನ್** ಎಂದು ಉನನ್ ಪ್ರತ್ಯಯ. ನಿತ್ತಾದ್ದರಿಂದ ಆದ್ಯುದಾತ್ತ ಬರುತ್ತದೆ.

**ನೂ—ಋಚಿತುನು ಘ**, ಎಂಬ ಸೂತ್ರದಿಂದ ದೀರ್ಘ ಬರುತ್ತದೆ.

**ದಭ್ಯತೇ**— ದಮ್ಭು ದಮ್ಭನೇ ಸ್ವಾದಿ. ಶ್ನು ವಿಕರಣವು ನ್ಯಾಯವಾಗಿ ಬರಬೇಕು ಆದರೂ **ವ್ಯತ್ಯಯೋ ಬಹುಲಂ** ಎಂದು ಶ್ಯನ್ ಬರುತ್ತೆ. ಇದೇ ಸೂತ್ರದಿಂದ ಪರಸ್ಮೈಪದಕ್ಕೆ ಬದಲಾಗಿ ಆತ್ಮನೇಪದಬರುತ್ತದೆ. ದನ್‌ಭ್+ಯ+ತೇ. **ಸಾರ್ವಧಾತುಕಮಪಿತ್** ಎಂದು ಶ್ಯನ್ ಙಿತ್. ಆದ್ದರಿಂದ **ಅನಿದಿತಾಂ ಹಲ ಉಪಧಾಯಾಃ ಕ್ಙಿತಿ** ಎಂದು ಉಪಧಾಭೂತನಕಾರಕ್ಕೆ **ಲೋಪ**. ಅನುಸ್ವಾರಪರಸವರ್ಣಗಳು ಅಸಿದ್ಧವಾಗುವುದರಿಂದ ಲೋಪ ವಿಧಾಯಕ ಶಾಸ್ತ್ರದೃಷ್ಟ್ಯಾ ನಕಾರವಿದೆ ಎಂದು ತಿಳಿಯಬೇಕು. ॥ ೧ ॥

॥ ಸಂಹಿತಾಪಾಠಃ ॥

ಯಂ ಬಾಹುತೇವ ಪಿಪ್ರತಿ ಪಾಂತಿ ಮರ್ತ್ಯಂ ರಿಷಃ ।
ಅರಿಷ್ಟಃ ಸರ್ವ ಏಧತೇ ॥ ೨ ॥

ಪದಪಾಠಃ

ಯಂ । ಬಾಹುತಾಽಇವ । ಪಿಪ್ರತಿ । ಪಾಂತಿ । ಮರ್ತ್ಯಂ । ರಿಷಃ ।
ಅರಿಷ್ಟಃ । ಸರ್ವಃ । ಏಧತೇ ॥ ೨ ॥

ಸಾಯಣಭಾಷ್ಯಂ

ಯಂ ಯಜಮಾನಂ ಪಿಪ್ರತಿ ವರುಣಾದಯೋ ದೇವಾ ಧನೈಃ ಪೂರಯಂತಿ । ತತ್ರ ದೃಷ್ಟಾಂತಃ । ಬಾಹುತೇವ ಸ್ವಕೀಯೋ ಬಾಹುವರ್ಗೋಽಪೇಕ್ಷಿತಂ ಧನಮಾನೀಯ ಯಥಾ ಪೂರಯತಿ ತದ್ವತ್ । ತಥಾ ಯಂ ಮರ್ತ್ಯಂ ಮನುಷ್ಯಂ ಯಜಮಾನಂ ರಿಷೋ ಹಿಂಸಕಾತ್ ಪಾಂತಿ ರಕ್ಷಂತಿ ಸ ಸರ್ವೋ ಯಜಮಾನೋಽರಿಷ್ಟಃ ಕೇನಾಪ್ಯಹಿಂಸಿತಃ ಸನ್ ಏಧತೇ । ವರ್ಧತೇ । ಬಾಹುತೇವ । ಬಾಹುತಾ ಬಾಹುತ್ವಂ । ಭಾವವಾಚಿನಾನೇನ ಶಬ್ದೇನ ಬಾಹವಸ್ತದಾಶ್ರಯಾ ಲಕ್ಷ್ಯಂತೇ । ಯದ್ವಾ । ಸಮೂಹಾರ್ಥೇ ತಲ್ಪ್ರತ್ಯಯೋ ದ್ರಷ್ಟವ್ಯಃ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಪಿಪ್ರತಿ । ಪೄ ಪಾಲನಪೂರಣಯೋಃ । ಪೃ ಇತ್ಯೇಕೇ । ಜುಹೋತ್ಯಾದಿತ್ವಾತ್ ಶ್ಲುಃ । ಅರ್ತಿಪಿಪರ್ತ್ಯೋಶ್ಚೇತ್ಯಭ್ಯಾಸಸ್ಯೇತ್ವಂ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಪಾಂತಿ । ತಿಙಃ ಪರತ್ವಾತ್ಪಾದಾದಿತ್ವಾದ್ವಾ ನಿಘಾತಾಭಾವಃ । ರಿಷಃ । ರಿಷ ಹಿಂಸಾಯಾಂ ಕ್ವಿಪ್ಚೇತಿ ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಅರಿಷ್ಟಃ । ರಿಷ ಹಿಂಸಾಯಾಂ । ಏಕಾಚ ಇತೀಟ್ಪ್ರತಿಷೇಧಃ । ವೃಶ್ಚಾದಿನಾ ಷತ್ವಂ ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

**ಬಾಹುತೇವ**—(ತನ್ನ ಸ್ವಂತ) ತೋಳುಗಳಿಂದಲೇ (ಎತ್ತಿಕೊಂಡುಬಂದು ಯಥೇಚ್ಛವಾಗಿ) ತುಂಬಿಕೊಳ್ಳುವಂತೆ । **ಯಂ**—ಯಾವ ಯಜ್ಞಕರ್ತನನ್ನು । **ಪಿಪ್ರತಿ**—(ವರುಣಾದಿ ದೇವತೆಗಳು) ಧನದಿಂದ ತುಂಬುತ್ತಾರೋ ಮತ್ತು । **ಮರ್ತ್ಯಂ**—(ಯಾವ) ಮಾನವನನ್ನು । **ರಿಷಃ**—ಹಿಂಸಕನಾದ ಶತ್ರುವಿನಿಂದ । **ಪಾಂತಿ**—ಕಾಪಾಡುತ್ತಾರೋ । **ಸರ್ವಃ**—ಆ ಪ್ರತಿಯೊಬ್ಬ (ಯಜ್ಞಕರ್ತ)ನೂ । **ಅರಿಷ್ಟಃ**—ಯಾರಿಂದಲೂ ಹಿಂಸಿಸಲ್ಪಡದೇ । **ಏಧತೇ**—ವೃದ್ಧಿಹೊಂದುತ್ತಾನೆ

॥ ಭಾವಾರ್ಥ ॥

ತನ್ನ ಸ್ವಂತ ಕೈಗಳಿಂದ ತನಗೆ ಬೇಕಾದಷ್ಟು ದ್ರವ್ಯಗಳನ್ನು ತಂದು ಹೇಗೆ ತುಂಬಿಕೊಳ್ಳಬಹುದೋ ಹಾಗೆ ವರುಣಾದಿದೇವತೆಗಳು ಯಾವ ಯಜ್ಞಕರ್ತನಾದ ಯಜಮಾನನನ್ನು ದ್ರವ್ಯಪೂರ್ಣನನ್ನಾಗಿ ಮಾಡುವರೋ ಮತ್ತು ಯಾವ ಮನುಷ್ಯನನ್ನು ಹಿಂಸಕನಾದ ಶತ್ರುವಿನಿಂದ ಕಾಪಾಡುವರೋ ಅಂತಹ ಮನುಷ್ಯನು ಯಾರ ಬಾಧೆಯೂ ಇಲ್ಲದೆ ಅಭಿವೃದ್ಧಿಯನ್ನು ಹೊಂದುತ್ತಾನೆ.

English Translation

He whom they ( gods ) help with riches, as if collected by his own arms; the man whom they defend from the malignant; every such man safe from injury prospers.

ವಿಶೇಷ ವಿಷಯಗಳು

**ಬಾಹುತೇವ—ಸ್ವಕೀಯೋ ಬಾಹುವರ್ಗೋಽಪೇಕ್ಷಿತಂ ಧನಮಾನೀಯ ಯಥಾ ಪೂರಯತಿ ತದ್ವತ್ ।** ತನ್ನ ಸ್ವಂತ ಕೈಗಳು ಯಾವರೀತಿ ತನಗೆ ಬೇಕಾಗುವಷ್ಟು ಧನವನ್ನು ತಂದು ತುಂಬಿಕೊಳ್ಳುವವೋ ಅದರಂತೆ

**ಪಿಪ್ರತಿ—ಪೂರಯಂತಿ ।** ಪೂರ್ಣಮಾಡುವರು, ತುಂಬುವರು

**ರಿಷಃ—ಹಿಂಸಕಾತ್ ।** ಹಿಂಸೆಮಾಡುವ ಶತ್ರುವಿನಿಂದ

**ಅರಿಷ್ಟಃ**—ಶತ್ರುಜನರ ಹಿಂಸೆ ಅಥವಾ ಬಾಧೆರಹಿತನಾಗಿ !

ವ್ಯಾಕರಣಪ್ರಕ್ರಿಯಾ

**ಬಾಹುತೇವ—ತಸ್ಯ ಭಾವಸ್ತ್ವತಲೌ** (ಪಾ ಸೂ. ೬-೧-೧೧೮) ಎಂದು ಭಾವಾರ್ಥದಲ್ಲಿ ತಲ್‌ಪ್ರತ್ಯಯ. ಭಾವವಾಚಿಯಾದ ಬಾಹುತಾಪದದಿಂದ ಬಾಹುತ್ವಕ್ಕೆ ಆಶ್ರಯಗಳಾದ ಬಾಹುಗಳು ಲಕ್ಷಣೆಯಿಂದ ಬೋಧಿತವಾಗುತ್ತವೆ. ಅಥವಾ **ಗ್ರಾಮಜನಬನ್ಧುಭ್ಯಸ್ತಲ್** (ಪಾ. ಸೂ. ೪-೨-೪೩) ಎಂದು ಗ್ರಾಮಾದಿಪದಗಳ ಮುಂದೆ ಸಮೂಹಾರ್ಥದಲ್ಲಿ ತಲ್‌ಪ್ರತ್ಯಯವು ವಿಹಿತವಾಗಿದೆ. ಬಾಹುಶಬ್ದದ ಮುಂದೆಯೂ ಛಾಂದಸವಾಗಿ ಸಮೂಹಾರ್ಥದಲ್ಲಿ ತಲ್‌ಬರುತ್ತೆ ಎಂದು ಹೇಳಬಹುದು. **ಲಿತಿ** ಎಂಬುದರಿಂದ ಪ್ರತ್ಯಯದ ಹಿಂದೆ ಇರುವುದು ಉದಾತ್ತವಾಗುತ್ತದೆ.

**ಪಿಪ್ರತಿ—** ಪೄ ಪಾಲನಪೂರಣಯೋಃ ಜುಹೋತ್ಯಾದಿಧಾತು. ಈ ಪೄಧಾತುವನ್ನು ಪೃಎಂದು ಹ್ರಸ್ವಾಂತವಾಗಿ ಕೆಲವರು ಪಠಿಸುವರು. ಅದರ ಮುಂದೆ ಲಟ್ ಝಿ ಪ್ರತ್ಯಯ. **ಅದಭ್ಯಸ್ತಾತ್** ಎಂದು ಝಿಗೆ ಅತ್ ಆದೇಶ. ಶಪ್‌ಗೆ ಶ್ಲು. **ಶ್ಲೌ** ಎಂದು ದ್ವಿತ್ವ. ಪೃ+ಪೃ+ಅತಿ, ದೀರ್ಘಾಂತವಾದರೆ **ಉದೋಷ್ಠ್ಯ**

**ಪೂರ್ವಸ್ಯ** ಎಂದು ಉತ್ವಬರಬೇಕಾಗುತ್ತದೆ. ಪಾಣಿನ್ಯಾಚಾರ್ಯರಿಗೆ ಈ ಹ್ರಸ್ವಾಂತಪಾಠವು ಯದ್ಯಪಿ ಸಮ್ಮತವಲ್ಲ. ಅವರ ಮತದಲ್ಲಿ ಪೄಧಾತುವಿಗೆ ಛಾಂದಸವಾಗಿ ಹ್ರಸ್ವಬರುತ್ತೆ ಎಂದು ಇಟ್ಟುಕೊಳ್ಳಬೇಕು. "**ಪಾಣಿನೀಯಮತೇತು ತಂ ರೋದಸೀ ಪಿಪ್ರತಮ್, ಇತ್ಯಾದೌ ಛಾಂದಸತ್ವಂ ಶರಣಮ್**" ಎಂದು ಭಟ್ಟೋಜೀ ದೀಕ್ಷಿತರು ಹೇಳಿರುವರು. **ಉರತ್** ಎಂದು ಅಭ್ಯಾಸಕ್ಕೆ ಅಕಾರವು ರಪರವಾಗಿ ಬರುತ್ತೆ. **ಹಲಾದಿಃ ಶೇಷಃ** ಎಂದು ರೇಫಲೋಪ. **ಅರ್ತಿಪಿಪರ್ತ್ಯೋಶ್ಚ** (ಪಾ. ಸೂ. ೭-೪-೭೭) ಋಧಾತು ಪೄ (ಅಥವಾ ಪೃ) ಧಾತು ಇವುಗಳ ಅಭ್ಯಾಸಕ್ಕೆ ಶ್ಲು ಬಂದಾಗ ಇಕಾರವು ಅಂತಾದೇಶವಾಗಿ ಬರುತ್ತೆ ಎಂದು ಅಭ್ಯಾಸನ ಅಕಾರಕ್ಕೆ ಇಕಾರ. ಪಿಪೃ+ಅತಿ ಯಣಾದೇಶ, **ಅಭ್ಯಸ್ತಾನಾಮಾದಿಃ** ಎಂದು ಆದ್ಯುದಾತ್ತ ಬರುತ್ತೆ.

**ಪಾನ್ತಿ**--ಪಾ ರಕ್ಷಣೇ, ತಿಙಂತದ ಮುಂದೆ ಇರುವುದರಿಂದ ಅಥವಾ ಪಾದಾದಿಯಲ್ಲಿರುವುದರಿಂದ **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುವುದಿಲ್ಲ.

**ರಿಷಃ**—ರಿಷ ಹಿಂಸಾಯಾಂ, **ಕ್ವಿಪ್ ಚ** ಎಂದು ಕ್ವಿಪ್, ಜಸಿ ಪ್ರತ್ಯಯ **ಸಾವೇಕಾಚಃ**—, ಎಂಬುದ ರಿಂದ ವಿಭಕ್ತಿಯು ಉದಾತ್ತವಾಗುತ್ತದೆ.

**ಅರಿಷ್ಟಃ**—ರಿಶ ಹಿಂಸಾಯಾಂ ತುದಾದಿ. ಇದರ ಮುಂದೆ ಕ್ತಪ್ರತ್ಯಯ, **ರಿಶ್-ರುಶ್-ಲಿಶ್-ವಿಶ್-ಸ್ಪೃಶಃ-ಕೃಷಿಃ** ಎಂದು ಅನುದಾತ್ತೋಪದೇಶ ಪರಿಗಣನಕಾರಿಕೆಯಲ್ಲಿ ಪಠಿಸಿರುವುದರಿಂದ ಇಗು ಅನುದಾತ್ತ. **ಏಕಾಚ ಉಪದೇಶೇಽನುದಾತ್ತಾತ್** ಎಂದು ಇಡಾಗಮಕ್ಕೆ ನಿಷೇಧ. **ವ್ರಶ್ಚಭ್ರಸ್ಜ ಸೃಜಮೃಜ—,** (ಪಾ. ಸೂ. ೮-೨-೩೬) ಎಂದು ಶ್‌ಗೆ ಷಕಾರ. ಷ್ಟುತ್ವ, ನ ರಿಷ್ಟಃ ಅರಿಷ್ಟಃ ಎಂದು ನಞ್‌ಸಮಾಸ. **ತತ್ಪುರುಷೇ** ಎಂದು ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ. ॥೨॥



ಸಂಹಿತಾಪಾಠ

ವಿ ದುರ್ಗಾ ವಿ ದ್ವಿಷಃ ಪುರೋ ಘ್ನಂತಿ ರಾಜಾನ ಏಷಾಂ ।

ನಯಂತಿ ದುರಿತಾ ತಿರಃ ॥ ೩ ॥

॥ ಪದಪಾಠಃ ॥

ವಿ । ದುಃऽಗಾ । ವಿ । ದ್ವಿಷಃ । ಪುರಃ । ಘ್ನಂತಿ । ರಾಜಾನಃ । ಏಷಾಂ ।
ನಯನ್ತಿ । ದುಃऽಇತಾ । ತಿರಃ ॥ ೩ ॥

॥ ಸಾಯಣಭಾಷ್ಯಂ ॥

ರಾಜಾನೋ ವರುಣಾದಯ ಏಷಾಂ ಸ್ವಕೀಯಯಜಮಾನಾನಾಂ ಪುರಃ ಪುರಸ್ತಾತ್ ದುರ್ಗಾ ಗಂತುಂ ದುಃಶಕಾನಿ ಶತ್ರುನಗರಾಣಿ ವಿ ಘ್ನಂತಿ । ವಿಶೇಷೇಣ ನಾಶಯಂತಿ । ತಥಾ ದ್ವಿಷಃ ಶತ್ರೂನಪಿ ವಿ ಘ್ನಂತಿ । ತಥಾ ದುರಿತಾ ಯಜಮಾನಸಂಬಂಧೀನಿ ದುರಿತಾನಿ ತಿರೋ ನಯಂತಿ । ವಿನಾಶಂ ಪ್ರಾಪಯಂತಿ ॥ ದುರ್ಗಾ । ದುಃಖೇನ ಗಚ್ಛಂತ್ಯತ್ರೇತಿ ದುರ್ಗಾಣಿ । ಸುದುರೋರಧಿಕರಣೇ । ಪಾ. ೩-೨-೪೮-೩ । ಇತಿ ಗಮೇರ್ಡಪ್ರತ್ಯಯಃ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಪುರಃ । ಕಾಲವಾಚಿನಃ ಪೂರ್ವಶಬ್ದಾತ್ ಸಪ್ತಮ್ಯರ್ಥೇ ಪೂರ್ವಾಧರಾವರಾಣಾಂ । ಪಾ. ೫-೩-೩೯ । ಇತ್ಯಸಿಪ್ರತ್ಯಯಃ । ತತ್ಸನ್ನಿಯೋಗೇನ ಪೂರ್ವ-ಶಬ್ದಸ್ಯ ಪುರಾದೇಶಶ್ಚ ಪ್ರತ್ಯಯಸ್ವರಃ । ಘ್ನಂತಿ । ಹಂತೇರ್ಲಟ್ಯದಾದಿತ್ವಾಚ್ಛಪೋ ಲುಕ್ । ಗಮಹನೇ-ತ್ಯಾದಿನೋಪಧಾಲೋಪಃ । ಹೋ ಹಂತೇಃ । ಪಾ. ೭-೩-೫೪ । ಇತಿ ಘತ್ವಂ । ಅಂತಾದೇಶಸ್ಯೋಪದೇಶ-ವಚನಾದಾದ್ಯುದಾತ್ತತ್ವಂ । ಪಾದಾದಿತ್ವಾದನಿಘಾತಃ ॥

॥ ಪ್ರತಿಪದಾರ್ಥ ॥

**ರಾಜಾನಃ**— (ವರುಣನೇ ಮುಂತಾದ) ಪ್ರಭುಗಳು । **ಏಷಾಂ**—(ತಮ್ಮನ್ನು ಭಕ್ತಿಯಿಂದ ಪೂಜಿಸತಕ್ಕ) ಈ ಯಜಮಾನರ । **ಪುರಃ**— ಮುಂದೆಯೇ (ಅಥವಾ ಪ್ರಥಮದಲ್ಲಿ) । **ದುರ್ಗಾ**— (ಕೋಟೆಕೊತ್ತಲುಗಳಿಂದ ಕೂಡಿ) ಪ್ರವೇಶಿಸಲು ದುಃಸಾಧ್ಯವಾದ (ಶತ್ರುಗಳ) ಪಟ್ಟಣಗಳನ್ನು । **ವಿಘ್ನಂತಿ**—ಸಂಪೂರ್ಣವಾಗಿ ನಾಶಮಾಡುತ್ತಾರೆ. । **ದ್ವಿಷಃ**— ಶತ್ರುಗಳನ್ನು (ಕೂಡ) । **ವಿ (ಘ್ನಂತಿ)**— ನಾಶಮಾಡುತ್ತಾರೆ. (ಹಾಗೆಯೇ) । **ದುರಿತಾ**-(ಯಜಮಾನನಿಂದ ಮಾಡಲ್ಪಟ್ಟ) ಪಾಪಗಳನ್ನೂ ।**ತಿರಃ ನಯಂತಿ**— ನಾಶವಾಗುವಂತೆ ಮಾಡುತ್ತಾರೆ. ।

॥ ಭಾವಾರ್ಥ ॥

ವರುಣಾದಿದೇವತೆಗಳು ತಮ್ಮನ್ನು ಭಕ್ತಿಯಿಂದ ಪೂಜೆಮಾಡತಕ್ಕ ಆ ಭಕ್ತರ ಎದುರಿಗೇ ಅವರ ಶತ್ರುಗಳ ಕೋಟೆಕೊತ್ತಲುಗಳನ್ನೂ ಪಟ್ಟಣಗಳನ್ನೂ ಕೊನೆಗೆ ಶತ್ರುಗಳನ್ನೂ ಸಂಪೂರ್ಣವಾಗಿ ನಾಶಮಾಡುತ್ತಾರೆ. ಹಾಗೆಯೇ ಯಜ್ಞಕರ್ತನ ಅಂತಶ್ಶತ್ರುವಾದ ಸಕಲ ಪಾಪಗಳನ್ನೂ ನಾಶಮಾಡುತ್ತಾರೆ.

## English Translation

The kings (Varuna, Mitra and Aryaman) first destroy the stronghold of the enemies of the worshippers, then the enemies themselves and then the sins and evil deeds of their worshippers.

### ವಿಶೇಷವಿಷಯಗಳು

**ದುರ್ಗಾ— ದುಃಖೇನ ಗಚ್ಛಂತ್ಯತ್ರೇತಿ ದುರ್ಗಾಣಿ । ಗಂತುಂ ದುಶ್ಶಕಾನಿ ಶತ್ರುನಗರಾಣಿ ।** ಬಹಳ ಕಷ್ಟದಿಂದ ಮಾತ್ರ ಒಳಗೆ ಹೋಗಲು ಸಾಧ್ಯವಾದ, ಪ್ರವೇಶಿಸುವುದಕ್ಕೆ ಅಸಾಧ್ಯವಾದ ಇತ್ಯಾದ್ಯರ್ಥಗಳನ್ನು ಹೇಳಬಹುದು. ಇಲ್ಲಿ ದುರ್ಗಾ ಎಂದರೆ ಅಭೇದ್ಯವಾದ ಶತ್ರುನಗರಗಳೆಂದು ಭಾಷ್ಯಕಾರರು ವಿವರಿಸಿರುವರು.

**ರಾಜಾನಃ—** ಇಲ್ಲಿ ರಾಜಾನಃ ಎಂದರೆ ಮಿತ್ರ, ವರುಣ, ಅರ್ಯಮಾ ಎಂಬ ದೇವತೆಗಳು. ಇವರನ್ನು ಅವರಲ್ಲಿಯೂ ವರುಣನನ್ನು ರಾಜನೆಂಬ ಶಬ್ದದಿಂದ ಕರೆಯುವುದು ರೂಢಿಯಲ್ಲಿದೆ.

**ನಯಂತಿ ದುರಿತಾ ತಿರಃ—** ದುರಿತವೆಂದರೆ, ಪಾಪಕೃತ್ಯಗಳು, ಕೆಟ್ಟಕೆಲಸಗಳು, ದುರಾಲೋಚನೆಗಳು ಇತ್ಯಾದಿ. ಇವುಗಳನ್ನು ನಾಶಮಾಡುವರು ಎಂದಭಿಪ್ರಾಯವು. ಮುಖ್ಯಾಭಿಪ್ರಾಯವೇನೆಂದರೆ—ವರುಣನೇ ಮೊದಲಾದ ಈ ಮೂವರು ದೇವತೆಗಳು ಶತ್ರುಪಟ್ಟಣಗಳನ್ನು ಮೊದಲು ನಾಶಮಾಡಿ ಬಳಿಕ ಶತ್ರುಗಳನ್ನು ನಾಶ ಮಾಡುವರು. ಅನಂತರ ತಮ್ಮನ್ನು ಸ್ತುತಿಸುವ ಭಕ್ತರ ಪಾಪಗಳನ್ನು ಪರಿಹರಿಸುವರು.

### ವ್ಯಾಕರಣಪ್ರಕ್ರಿಯಾ

**ದುರ್ಗಾ—** ದುಃಖೇನ ಗಚ್ಛನ್ತ್ಯತ್ರ ಶ್ರಮದಿಂದ ಪ್ರವೇಶಿಸಲು ಯೋಗ್ಯವಾದ ಪ್ರದೇಶ ಎಂದು ಅರ್ಥ. **ಸುದುರೋರಧಿಕರಣೇ** (ಪಾ. ಸೂ. ೩-೨-೪೮-ವಾ. ೩) ಸು-ದುರ್ ಎಂಬ ಉಪಸರ್ಗಗಳ ಮುಂದೆ ಇರುವ ಗಮ್ ಧಾತು ಮುಂದೆ ಡಪ್ರತ್ಯಯ ಬರುತ್ತೆ ಎಂದು ಡಪ್ರತ್ಯಯ. ಡಿತ್ಕರಣಸಾಮರ್ಥ್ಯದಿಂದ ಟಿಗೆ ಲೋಪ. ಶಿಗೆ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಲೋಪ, ನುಮಾಗಮ, ಉಪಧಾದೀರ್ಘ ನಲೋಪಗಳು.

**ಪುರಃ— ಪೂರ್ವಾಧರಾವರಾಣಾಮಸಿಪುರಧವಶ್ಚೈಷಾಮ್** (ಪಾ. ಸೂ. ೫-೩-೩೯) ದಿಕ್, ದೇಶ-ಕಾಲ ಎಂಬ ಅರ್ಥಗಳಲ್ಲಿರುವ ಪೂರ್ವ-ಅಧರ-ಅವರ ಶಬ್ದಗಳ ಮುಂದೆ ಅಸಿಪ್ರತ್ಯಯ ಬರುತ್ತೆ. ಅಲ್ಲದೆ ಪೂರ್ವಶಬ್ದಕ್ಕೆ ಅಧ್, ಅವರ ಶಬ್ದಕ್ಕೆ ಅವ್ ಆದೇಶವೂ ಬರುತ್ತೆ ಎಂದು ಸೂತ್ರಾರ್ಥ. ಇದರಿಂದ ಕಾಲವಾಚಿಯಾದ ಪೂರ್ವಶಬ್ದದ ಮುಂದೆ ಅಸಿಪ್ರತ್ಯಯವೂ, ಪೂರ್ವಶಬ್ದಕ್ಕೆ ಪುರ್ ಆದೇಶವೂ ಬರುತ್ತದೆ. ಪುರ್+ಅಸ್=ಪುರಸ್, ಪ್ರತ್ಯಯಸ್ವರ ಬಂದು ಇದು ಅಂತೋದಾತ್ತವಾಗುತ್ತದೆ.

**ಘ್ನನ್ತಿ—** ಹನ ಹಿಂಸಾಗತ್ಯೋಃ, ಲಟ್, ಝಿ, **ಝೋಽನ್ತಃ** ಎಂದು ಅನ್ ಆದೇಶ. ಅದಾದಿಯಾದ್ದರಿಂದ ಶಪ್‌ಗೆ ಲುಕ್, ಹನ್+ಅನ್ತಿ. **ಗಮ ಹನ ಜನ ಖನ ಘಸಾಂ ಲೋಪಃ ಕ್ಙಿತ್ಯನಙಿ** (ಪಾ. ಸೂ. ೬-೪-೯೮)

ಅಚ್‌ಭಿನ್ನವಾದ ಅಜಾದಿ ಕಿತ್ ವಾ ಙಿತ್ ಆದ ಪ್ರತ್ಯಯ ಪರದಲ್ಲಿದ್ದರೆ ಗಮ್ ಮೊದಲಾದ ಧಾತುಗಳ ಉಪಧಾ ವರ್ಣಕ್ಕೆ ಲೋಪ ಬರುತ್ತೆ ಎಂದು ಅಕಾರಕ್ಕೆ ಲೋಪ. **ಹೋಹನ್ತೇರ್ಞ್ಣಿನ್ನೇಷು** (ಪಾ. ಸೂ. ೭-೩-೫೪) ಎಂಬುದರಿಂದ ಹಕಾರಕ್ಕೆ ಘಕಾರ. **ಆಯನ್ನಾದಿಷೂಪದೇಶಿವದ್ವಚನಂ ಸ್ವರಸಿದ್ಧ್ಯರ್ಥಮ್** (ಪಾ. ಸೂ. ೭-೧-೨-೧) ಎಂದು ಉಪದೇಶಾವಸ್ಥೆಯಲ್ಲಿಯೇ ಅನ್ತಾದೇಶ ಬರುವುದರಿಂದ **ಆದ್ಯುದಾತ್ತಶ್ಚ** ಎಂಬುದರಿಂದ ಅನ್ತಿಯ ಅಕಾರವು ಉದಾತ್ತವಾಗುತ್ತದೆ. ಎರಡನೇ ಪಾದದ ಆದಿಯಲ್ಲಿದೆ. **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುವುದಿಲ್ಲ. ||೩||



|| ಸಂಹಿತಾಪಾಠಃ ||

ಸುಗಃ ಪನ್ಥಾ ಅನೃಕ್ಷರ ಆದಿತ್ಯಾಸ ಋತಂ ಯತೇ।
ನಾತ್ರಾವಖಾದೋ ಅಸ್ತಿ ವಃ ॥ ೪ ॥

|| ಪದಪಾಠಃ ||

**ಸುಽಗಃ । ಪನ್ಥಾಃ । ಅನೃಕ್ಷರಃ । ಆದಿತ್ಯಾಸಃ । ಋತಂ । ಯತೇ ।**
**ನ । ಅತ್ರ । ಅವಽಖಾದಃ । ಅಸ್ತಿ । ವಃ ॥ ೪ ॥**

ಸಾಯಣಭಾಷ್ಯಂ

**ಹೇ ಆದಿತ್ಯಾಸ ಋತಂ ಯತೇ ಯಜ್ಞಂ ಗಚ್ಛತೇ ಭವತ್ಸಮೂಹಾಯ ಪಂಥಾ ಮಾರ್ಗಃ ಸುಗಃ ಸುಷ್ಠು ಗಂತುಂ ಶಕ್ಯಃ ಅನೃಕ್ಷರಃ ಕಂಟಕರಹಿತಶ್ಚ । ಅತ್ರಾಸ್ಮಿನ್ಕರ್ಮಣಿ ವೋ ಯುಷ್ಮಾಕಮವ-ಖಾದೋಽವಮಂತವ್ಯಃ। ಖಾದೋ ಜುಗುಪ್ಸಿತಹವಿರ್ವಿಶೇಷೋ ನಾಸ್ತಿ । ತಸ್ಮಾದಿಹಾಗಂತವ್ಯಮಿತ್ಯರ್ಥಃ॥ ಸುಗಃ । ಸುದುರೋರಧಿಕರಣ ಇತಿ ಗಮೇರ್ಡಪ್ರತ್ಯಯಃ । ಪಂಥಾಃ । ಪಥಿಮಥೋಃ ಸರ್ವನಾಮಸ್ಥಾನ ಇತ್ಯಾದ್ಯುದಾತ್ತತ್ವಂ । ಅನೃಕ್ಷರಃ । ಋಷೀ ಗತೌ । ಋಷಂತ್ಯಂತರ್ಗಚ್ಛಂತೀತ್ಯೃಕ್ಷರಾಃ ಕಂಟಕಾಃ । ತನ್ಯೃಷಿಭ್ಯಾಂ ಕ್ಸರನ್ । ಉ. ೩-೭೫ । ಇತಿ ಕ್ಸರನ್ಪ್ರತ್ಯಯಃ । ಕಿತ್ತ್ವಾದ್ಗುಣಾಭಾವಃ । ಕತ್ವಷತ್ವೇ । ಯಾಸ್ಕಸ್ತ್ವಾಹ । ಋಕ್ಷರಃ ಕಂಟಕ ಋಚ್ಛತೇಃ । ನಿ. ೯-೩೨ । ಇತಿ । ನ ವಿದ್ಯಂತೇ ಋಕ್ಷರಾ ಅಸ್ಮಿನ್ನಿ-**

**ತ್ಯನೃಕ್ಷರಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಆದಿತ್ಯಾಸಃ । ಅದಿತೇಃ ಪುತ್ರಾ ಆದಿತ್ಯಾಃ । ದಿತ್ಯದಿತ್ಯಾದಿತ್ಯೇತ್ಯಾದಿನಾ । ಪಾ. ೪-೧-೮೫ । ಣ್ಯಪ್ರತ್ಯಯಃ । ಆಜ್ಜಸೇರಸುಕ್ । ಆಮಂತ್ರಿತಾದ್ಯು-ದಾತ್ತತ್ವಂ । ಪಾದಾದಿತ್ವಾದಾಷ್ಟಮಿಕನಿಘಾತಾಭಾವಃ । ಯತೇ । ಇಣ್ ಗತೌ । ಲಟಃ ಶತೃ । ಅದಾದಿ-ತ್ವಾಚ್ಛಪೋ ಲುಕ್ । ಇಣೋ ಯಣ್ । ಪಾ. ೬-೪-೮೧ । ಇತಿ ಯಣಾದೇಶಃ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಅವಖಾದಃ । ಖಾದೃ ಭಕ್ಷಣೇ । ಭಾವೇ ಘಞ್ । ಅವಮತಃ ಖಾದೋಽವಖಾದಃ । ಥಾಥಾದಿನೋತ್ತರಪದಾಂತೋದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಆದಿತ್ಯಾಸಃ**—ಎಲೈ ಆದಿತ್ಯರೇ । **ಋತಂ ಯತೇ**—ಯಜ್ಞಕ್ಕಾಗಿ ಹೋಗುವ । **ವಃ**—ನಿಮ್ಮ ಸಮೂಹಕ್ಕೆ **ಪಂಥಾಃ**—ಮಾರ್ಗವು । **ಸುಗಃ**—ಸುಲಭವಾಗಿ ಸಂಚರಿಸತಕ್ಕದ್ದಾಗಿಯೂ । **ಅನೃಕ್ಷರಃ**—(ಕಲ್ಲು) ಮುಳ್ಳುಗಳಿಲ್ಲ ದುದಾಗಿಯೂ । **ಅತ್ರ**—ಈ ಯಜ್ಞಕರ್ಮದಲ್ಲಿ । **ಅವಖಾದಃ**—( ನಿಮಗೆ ) ಸ್ವೀಕರಿಸಲಾಗದೆಯೂ ಮತ್ತು ಜುಗುಪ್ಸೆಯನ್ನು ಮಾಡುವುದಾಗಿಯೂ ಇರುವ ಹವಿಸ್ಸು । **ನ ಅಸ್ತಿ**—ಇಲ್ಲವು. (ಆದ್ದರಿಂದ ದಯಮಾಡಿ).

ಭಾವಾರ್ಥ

ಎಲೈ ಆದಿತ್ಯರೇ, ಈ ಯಜ್ಞಭೂಮಿಗೆ ಬರತಕ್ಕ ಮಾರ್ಗವು ನಿಮ್ಮ ಸಮೂಹವನ್ನು ಸುಲಭವಾಗಿ ಕರೆತರುವುದೂ ಕಲ್ಲುಮುಳ್ಳುಗಳಿಂದ ರಹಿತವಾದುದಾಗಿಯೂ ಆಗಿದೆ. ನಾವು ಭಕ್ತಿಯಿಂದ ಅರ್ಪಿಸುವ ಹವಿಸ್ಸುಗಳು ನಿಮಗೆ ಜುಗುಪ್ಸೆಯನ್ನುಂಟುಮಾಡದೆ ಸ್ವಾದುವಾಗಿಯೂ ನಿಮಗೆ ತೃಪ್ತಿಯನ್ನುಂಟುಮಾಡುವುದಾಗಿಯೂ ಇರುತ್ತವೆ.

English Translation

Adityas your path leading to the Sacrifice is easy and free from thorns, no unworthy oblation is here prepared for you.

॥ ವಿಶೇಷವಿಷಯಗಳು ॥

**ಸುಗಃ—ಸುಷ್ಠು ಗಂತುಂ ಶಕ್ಯಃ** । ಹೋಗುವುದಕ್ಕೆ ಸುಲಭವಾಗಿರುವ, ಮಾರ್ಗ

**ಅನೃಕ್ಷರಃ—ಋಷೀ ಗತೌ । ಋಷ್ಯಂತ್ಯಂತರ್ಗಚ್ಛಂತೀತ್ಯೃಕ್ಷರಾಃ । ಕಂಟಕಾಃ । ನ ವಿದ್ಯಂತೆ ಅಕ್ಷರಾ ಅಸ್ಮಿನ್ನಿತ್ಯನೃಕ್ಷರಃ** । ಋಷೀಧಾತುವಿಗೆ ಹೋಗುವುದು, ಪ್ರವೇಶಿಸುವುದು ಎಂದರ್ಥವು ಸಂಚಾರಮಾಡು ವಾಗ ದೇಹದೊಳಗೆ ಪ್ರವೇಶಿಸುವುದೆಂದರೆ ಮುಳ್ಳು, ಅದಕ್ಕೆ ಋಕ್ಷರ ಎಂದು ಹೆಸರು. ಋಕ್ಷರಗಳಿಲ್ಲದ ಎಂದರೆ ಮುಳ್ಳು ಗಳಿಲ್ಲದ ಮಾರ್ಗಕ್ಕೆ ಅನೃಕ್ಷರವೆಂದು ಹೆಸರು

**ಋತಂ**—ಋತಂ ಎಂದರೆ ಯಜ್ಞವು. ಸತ್ಯಂ ವಾ ಯಜ್ಞಂ ವಾ ( ನಿ ೪-೧೯ ) ಎಂದು ನಿರುಕ್ತ ವಚನವಿರುವುದು.

ಗುತೇ-ಗಚ್ಛತೇ । ಹೋಗುವ ನಿಮಗೆ

**ಅವಖಾದಃ— ಖಾದೃ ಭಕ್ಷಣೇ । ಅವನುತಃ ಖಾದೋ ಅವಖಾದಃ । ಜುಗುಪ್ಸಿತಹವಿರ್ವಿಶೇಷಃ ।** ಖಾದಃ ಎಂದರೆ ಭಕ್ಷಿಸುವುದಕ್ಕೆ ಯೋಗ್ಯವಾದ ಹವಿಸ್ಸೇ ಮೊದಲಾದ ಆಹಾರವು. ಅವಖಾದಃ ಎಂದರೆ ತಿನ್ನುವುದಕ್ಕೆ ಯೋಗ್ಯವಲ್ಲದ, ಅಸಹ್ಯಕರವಾದ, ನಿಕೃಷ್ಟವಾದ ಹವಿಸ್ಸು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಸುಗಃ—ಸುದುರೋರಧಿಕರಣೇ** ( ಪಾ. ಸೂ. ೩-೨-೪೮-೨ ) ಎಂದು ಸುಉಪಸರ್ಗಪೂರ್ವಕವಾದ ಗಮ್ ಧಾತು ಮುಂದೆ ಡಪ್ರತ್ಯಯ. **ಚುಟೂ** (ಪಾ. ಸೂ. ೧-೩-೭) ಪ್ರತ್ಯಯದ ಆದಿಯಲ್ಲಿರುವ ಚವರ್ಗ ಟವರ್ಗಗಳು ಇತ್‌ಸಂಜ್ಞೆ ಹೊಂದುವುವು ಎಂದು ಡ್‌ಗೆ ಇತ್ಸಂಜ್ಞೆ ಬಂದು **ಲೋಪ**ಬಂದರೆ ಅಕಾರ ಉಳಿಯುತ್ತೆ. ಪ್ರತ್ಯಯದಲ್ಲಿ ಡಿತ್ವವನ್ನು ಮಾಡಿರುವ ಸಾಮರ್ಥ್ಯದಿಂದ ಅಮ್ ಎಂಬ ಟಿಗೆ ಲೋಪ, ಸುಗ ಎಂದಾಗುತ್ತೆ. ಪ್ರಥಮಾ ಏಕವಚನ ಸು ಪ್ರತ್ಯಯ, ಸುಗಃ ಎಂದಾಗುವುದು.

**ಪನ್ಥಾಃ—ಪಥಿ ಮಥೋಸ್ಸರ್ವನಾಮಸ್ಥಾನೇ** (ಪಾ. ಸೂ. ೬-೧-೧೯೯) ಸರ್ವನಾಮಸ್ಥಾನ ಪರದಲ್ಲಿರುವಾಗ ಪಥಿ ಮಥಿ ಶಬ್ದಗಳ ಆದಿಯು ಉದಾತ್ತವಾಗುತ್ತೆ ಎಂದು ಆದ್ಯುದಾತ್ತ ಬರುತ್ತದೆ. **ಪತೇಸ್ಥ ಚ** (ಉ. ಸೂ. ೪-೪೫೨) ಪತ್ಲೃ ಗತೌ ಧಾತು ಮುಂದೆ ಇನಿ ಪ್ರತ್ಯಯವು. ತ್‌ಗೆ ಥ್ ಆದೇಶವೂ ಬರುತ್ತೆ, ಎಂದು ಅವು ಬಂದರೆ ಪಥಿನ್ ಎಂದು ಅಂತೋದಾತ್ತ. ಸುಪ್ರತ್ಯಯವನ್ನು ಹಚಿದರೆ, **ಪಥಿಮಥಿ ಋಭುಕ್ಷಾಮಾತ್** ( ಪಾ. ಸೂ. ೭-೧-೮೫) ಎಂಬುದರಿಂದ ನ್‌ಗೆ ಆಕಾರ. **ಇತೋತ್ಸರ್ವನಾಮಸ್ಥಾನೇ** (ಪಾ. ಸೂ. ೭-೧-೮೬) ಎಂದು ಇಕಾರಕ್ಕೆ ಅಕಾರ. **ಥೋ ನ್ಥಃ** ( ಪಾ. ಸೂ. ೭-೧-೮೭ ) ಎಂದು ಥಗೆ ನ್ಥಾದೇಶ ಸವರ್ಣದೀರ್ಘ. ರುತ್ವವಿಸರ್ಗಗಳು ಪನ್ಥಾಃ ಎಂದಾಗುತ್ತೆ.

**ಅನೃಕ್ಷರಃ—ತನ್ಯೃಷಿಭ್ಯಾಂ ಕ್ಸರನ್** (ಉ.ಸೂ.೩-೩೫೫) ತನು ವಿಸ್ತಾರೇ, ಋಷೀ ಗತೌ ಈ ಧಾತುಗಳ ಮುಂದೆ ಕ್ಸರಪ್ರತ್ಯಯ ಬರುತ್ತೆ, ಎಂದು ಅರ್ಥ. ಪ್ರತ್ಯಯ ಕಿತ್. ಋಷ್+ಕ್ಸರ, **ಷಢೋಃಕಸ್ಸಿ** (ಪಾ. ಸೂ. ೮-೨-೪೧) ಎಂದು ಷಕಾರಕ್ಕೆ ಕಕಾರ. **ಆದೇಶಪ್ರತ್ಯಯಯೋಃ** ಎಂದು ಕಕಾರಕ್ಕಿಂತಲೂ ಪರದಲ್ಲಿರುವ ಸಕಾರಕ್ಕೆ ಷಕಾರ. ಪ್ರತ್ಯಯವು ಕಿತ್ ಆದ್ದರಿಂದ ಲಘೂಪಧಗುಣ ಬರುವುದಿಲ್ಲ. ಋಷನ್ತಿ ಗಚ್ಛಂತಿ ಎಂದರೆ ಒಳಕ್ಕೆ ಪ್ರವೇಶಿಸುವುವು ಎಂದು ವ್ಯುತ್ಪತ್ತಿಯಿಂದ ಋಕ್ಷರ ಎಂದರೆ ಮುಳ್ಳು ಎಂದು ಅರ್ಥವು ಇಲ್ಲಿ ಹೇಳಲ್ಪಟ್ಟಿದೆ. **ಋತ್ವಿಕ್** ಎಂದೂ ಇದಕ್ಕೆ ಅರ್ಥ ಇದೆ. ಯಾಸ್ಕರು ಋಚ್ಛಗತೀನ್ದ್ರಿಯಪ್ರಲಯಮೂರ್ತಿಭಾವೇಷು ಎಂಬ ತುದಾದಿಧಾತುವಿನಿಂದ ಈ ರೂಪನಿಷ್ಪತ್ತಿಯನ್ನು ಹೇಳಿರುತ್ತಾರೆ. **ಋಕ್ಷರಃ ಕಣ್ಟಕ ಋಚ್ಛತೇಃ** (ನಿರು. ೯-೩೨) ಎಂಬುದರಿಂದ ಅವರ ಅಭಿಪ್ರಾಯವು ವ್ಯಕ್ತವಾಗುತ್ತೆ. ನ ವಿದ್ಯನ್ತೇ ಋಕ್ಷರಾಃ ಯಸ್ಮಿನ್ ಸಃ ಎಂದು ಬಹುವ್ರೀಹಿ. ಯಾವ ದಾರಿಯಲ್ಲಿ ಮುಳ್ಳುಗಳು ಇರುವುದಿಲ್ಲವೋ ಅದು ಎಂದು ವಿಗ್ರಹವಾಕ್ಯದ ಅರ್ಥ. ಪೂರ್ವಪದ ಪ್ರಕೃತಿಸ್ವರವನ್ನು ಬಾಧಿಸಿ **ನಞ್ ಸುಭ್ಯಾಂ** ಎಂಬುದರಿಂದ ಉತ್ತರಪದಕ್ಕೆ ಅಂತೋದಾತ್ತ ಬರುತ್ತದೆ.

**ಆದಿತ್ಯಾಸಃ**—ಅದಿತೇಃ ಅಪತ್ಯಾನಿ ಪುಮಾಂಸಃ ಎಂದು ವಿಗ್ರಹ. **ದಿತ್ಯದಿತ್ಯಾದಿತ್ಯಪತ್ಯುತ್ತರಪದಾಣ್ಣ್ಯಃ** ( ಪಾ. ಸೂ. ೪-೧-೮೫ ) ದಿತಿ-ಅದಿತಿ-ಆದಿತ್ಯ-ಪತಿಶಬ್ದವು ಉತ್ತರಪದವಾಗಿರುವ ಶಬ್ದಗಳು-ಇವುಗಳು ಮುಂದೆ ಪ್ರಾಗ್ದೀವ್ಯತೀಯಾರ್ಥದಲ್ಲಿ ಣ್ಯಪ್ರತ್ಯಯ ಬರುತ್ತೆ ಎಂದು ಆದಿತಿಶಬ್ದದ ಮುಂದೆ ಅಪತ್ಯಾರ್ಥದಲ್ಲಿ ಣ್ಯ ಬರುತ್ತೆ. ಅದಿತಿ+ಯ, **ಯಸ್ಯೇತಿಚ** ಎಂದು ಪ್ರತ್ಯಯದ ಹಿಂದಿರುವ ಇಗೆ ಲೋಪ. **ತದ್ಧಿತೇಷ್ವಚಾಂ—,** ಎಂದು ಆದಿವೃದ್ಧಿ. ಸಂಬೋಧನ ಪ್ರಥಮಾ ಬಹುವಚನ ಜಸ್. **ಆಜ್ಜಸೇರಸುಕ್** ಎಂದು ಅಸುಗಾಗಮ. **ಆಮನ್ತ್ರಿತಸ್ಯ ಚ** ಎಂಬ ಪಾಷ್ಠಸೂತ್ರದಿಂದ ಆದ್ಯುದಾತ್ತ. ಎರಡನೇ ಪಾದದ ಆದಿಯಲ್ಲಿರುವುದರಿಂದ ಆಷ್ಟಮಿಕವಾದ ಆಮನ್ತ್ರಿತೋದಾತ್ತ ಬರುವುದಿಲ್ಲ.

**ಯತೇ**—ಇಣ್ ಗತೌ—**ಲಟಶ್ಶತೃಶಾನಚೌ—,** ಎಂದು ಲಟ್ಟಿಗೆ ಶತೃ ಆದೇಶ. ಅದಾದಿಯಾದ್ದರಿಂದ ಶಪ್‌ಗೆ ಲುಕ್. **ಇಣೋ ಯಣ್** (ಪಾ. ಸೂ. ೬-೪-೮೧) ಅಜಾದಿಪ್ರತ್ಯಯವು ಪರದಲ್ಲಿರುವಾಗ ಇಣ್ ಧಾತುವಿಗೆ ಯಣ್ ಆದೇಶ ಬರುತ್ತೆ ಎಂದು ಇಯಜಾದೇಶವನ್ನು ಬಾಧಿಸಿ ಯಣ್ ಬರುತ್ತೆ. ಯತ್ ಎಂದು ಆಯಿತು. ಚತುರ್ಥೀ ಏಕವಚನ ಙೇಪ್ರತ್ಯಯ. **ಶತುರನುಮೋನದ್ಯಜಾದೀ** ಙೆಪ್ರತ್ಯಯವು ಉದಾತ್ತವಾಗುತ್ತದೆ.

**ಅವಖಾದಃ**—ಖಾದೃ ಭಕ್ಷಣೇ ಭಾವಾರ್ಥದಲ್ಲಿ ಘಞ್ ಪ್ರತ್ಯಯ. ಅವ ಎಂಬ ಉಪಸರ್ಗವು ಜುಗುಪ್ಸಿತ ಎಂಬ ಅರ್ಥವನ್ನು ಬೋಧಿಸುತ್ತದೆ. ಅವಮುನ್ತ್ರವ್ಯಃ ಖಾದಃ ಅವಖಾದಃ **ಥಾಥಘಞ್—,** ಎಂಬುದರಿಂದ ಉತ್ತರ ಪದಕ್ಕೆ ಅಂತೋದಾತ್ತ ಬರುತ್ತದೆ. ॥೪॥



ಸಂಹಿತಾಪಾಠಃ

ಯಂ ಯ॒ಜ್ಞಂ ನಯ॑ಥಾ ನರ॒ ಆದಿ॑ತ್ಯಾ ಋ॒ಜುನಾ॑ ಪ॒ಥಾ ।
ಪ್ರ ವಃ॒ ಸ ಧೀ॒ತಯೇ॑ ನಶತ್ ॥ ೫ ॥

॥ ಪದಪಾಠಃ ॥

ಯಂ । ಯ॒ಜ್ಞಂ । ನಯ॑ಥ । ನ॒ರಃ॒ । ಆದಿ॑ತ್ಯಾಃ । ಋ॒ಜುನಾ॑ । ಪ॒ಥಾ ।
ಪ್ರ । ವಃ॒ । ಸಃ । ಧೀ॒ತಯೇ॑ । ನ॒ಶ॒ತ್ ॥ ೫ ॥

॥ ಸಾಯಣಭಾಷ್ಯಂ ॥

**ಹೇ ನರೋ ನೇತಾರ ಆದಿತ್ಯಾ ಯಂ ಯಜ್ಞಮೃಜುನಾ ಪಥಾವಿಕಲೇನ ಮಾರ್ಗೇಣ ನಯಥ ಸಾರಂ ಪ್ರಾಪಯಥ ಸ ಯಜ್ಞೋ ವೋ ಧೀತಯೇ ಯುಷ್ಮತ್ಪಾನಾಯೋಪಭೋಗಾಯ ಪ್ರ ಣಶತ್ । ಪ್ರಾಪ್ನೋತು ॥ ನಯಥ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಯದ್ವೃತ್ತಯೋಗಾದನಿಘಾತಃ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಂ ದೀರ್ಘತ್ವಂ । ಪಥಾ । ತೃತೀಯೈಕವಚನೇ ಭಸ್ಯ ಟೇರ್ಲೋಪಃ । ಪಾ. ೭-೧-೮೮ । ಇತಿ ಟಿಲೋಪಃ । ಅನುದಾತ್ತಸ್ಯ ಚ ಯತ್ರೋದಾತ್ತಲೋಪ ಇತಿ ವಿಭಕ್ತೇರುದಾತ್ತತ್ವಂ । ಧೀತಯೇ । ಧೇಟ್ ಪಾನೇ । ಆದೇಚ ಇತ್ಯಾತ್ವಂ । ಕ್ತಿಚಿ ಘುಮಾಸ್ಥೇತೀತ್ವಂ । ನಶತ್ । ನಶತಿರ್ಗತ್ಯರ್ಥಃ । ಲೇಟ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ ॥ ೧೧ ॥**

ಪ್ರತಿಪದಾರ್ಥ

**ನರಃ**— ಮಾರ್ಗದರ್ಶಿಗಳಾದ । **ಆದಿತ್ಯಾಃ**— ಎಲೈ ಆದಿತ್ಯರೇ । **ಯಂ ಯಜ್ಞಂ**— ಯಾವ ಯಜ್ಞವನ್ನು । **ಋಜುನಾ ಪಥಾ**— ನೇರವಾದ ಮಾರ್ಗದಿಂದ । **ನಯಥ**— ಕೊನೆಗಾಣುವಂತೆ ಮಾಡುತ್ತೀರೋ । **ಸಃ ಯಜ್ಞಃ**— ಆ ಯಜ್ಞವು. । **ವಃ**— ನಿಮಗೆ । **ಧೀತಯೇ**— ತೃಪ್ತಿಯನ್ನುಂಟುಮಾಡುವ ಪಾನಕ್ಕಾಗಿ **ಪ್ರ ನಶತ್**— ಚೆನ್ನಾಗಿ ಸಂಭವಿಸಲಿ (ಉಂಟಾಗಲಿ)

ಭಾವಾರ್ಥ

ಎಲೈ ಮಾರ್ಗದರ್ಶಕರಾದ ಆದಿತ್ಯರೇ, ನೀವು ಯಾವ ಯಜ್ಞವನ್ನು ನೇರವಾದ (ಸತ್ಯವಾದ) ಮಾರ್ಗದಿಂದ ನೆರವೇರುವಂತೆ ಮಾಡುತ್ತೀರೋ ಆ ಯಜ್ಞವು ನಿಮ್ಮ ಸೋಮಪಾನ ಮತ್ತು ಹವಿರ್ಭಕ್ಷಣದಿಂದ ನಿಮಗೆ ತೃಪ್ತಿಯನ್ನುಂಟುಮಾಡಲಿ.

English Translation

O Adityas, may that sacrifice which you supervise by proper means be to you for your gratification.

॥ ವಿಶೇಷವಿಷಯಗಳು ॥

**ಋಜುನಾ ಪಥಾ**— ಸತ್ಯವಾದ ಮಾರ್ಗದಿಂದ, ನ್ಯಾಯವಾದ, ಎಂದರೆ ಶಾಸ್ತ್ರವಿಹಿತವಾದ, ಕ್ರಮಬದ್ಧವಾದ ಮಾರ್ಗದಿಂದ.

**ಧೀತಯೇ-ಧೇಟ್ ಪಾನೇ ।** ಪಾನಾರ್ಥವಾಗಿ ಎಂದರೆ ಯಜ್ಞದಲ್ಲಿ ನಡೆಯುವ ಸೋಮಪಾನಾರ್ಥವಾಗಿ.

**ನಶತ್— ನಶತಿರ್ಗತ್ಯರ್ಥಃ ।** ಉಂಟಾಗಲಿ, ನೆರವೇರಲಿ ಎಂದರೆ ಯಜ್ಞದಲ್ಲಿ ಸೋಮಪಾನಗಳಿಂದ ನಿಮಗೆ ತೃಪ್ತಿಯುಂಟಾಗಲಿ ಎಂದಭಿಪ್ರಾಯವು.

|| ವ್ಯಾಕರಣಪ್ರಕ್ರಿಯಾ ||

**ನಯಥ**—ಣೀಞ್ ಪ್ರಾಪಣೇ ೧ನೇ ಗಣ. ಲಟ್, ಮಧ್ಯಮಪುರುಷ ಬಹುವಚನ ಥ. **ಣೋನಃ** ಎಂದು ಣಕಾರಕ್ಕೆ ನಕಾರ. ಶಪ್, ನೀ+ಅ+ಥ, ಗುಣ, ಅಯಾದೇಶ, ಯಂ ಎಂಬ ಯದ್ವೃತ್ತಯೋಗ ಇರುವುದರಿಂದ ಸರ್ವಾನುದಾತ್ತ ಬರುವುದಿಲ್ಲ. ಶಪ್ ಅನುದಾತ್ತ, **ತಾಸ್ಯನುದಾತ್ತೇತ್** ಎಂದು ಥ ಅನುದಾತ್ತ. ಧಾತುಸ್ವರ ಉಳಿಯುತ್ತದೆ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾಕಾಲದಲ್ಲಿ ದೀರ್ಘ ಬರುತ್ತದೆ.

**ಆದಿತ್ಯಾಃ**—ಹಿಂದಿನ ಮನ್ತ್ರದಲ್ಲಿ ಹೇಳಿದೆ.

**ಪಥಾ**—ಪಥಿನ್‌ಶಬ್ದದ ಮುಂದೆ ಟಾಪ್ರತ್ಯಯ. **ಭಸ್ಯ ಟೇರ್ಲೋಪಃ** (ಪಾ. ಸೂ. ೭-೧-೮೮) ಭಸಂಜ್ಞೆಯುಳ್ಳ ಪಥಿನ್-ಮಥಿನ್ ಋಭುಕ್ಷಿನ್ ಇವುಗಳ ಟಿಗೆ ಲೋಪಬರುತ್ತೆ ಎಂದು ಇನ್‌ಗೆ ಲೋಪ. ಇದು ಉದಾತ್ತ ಎಂದು ಹಿಂದಿನ ಮಂತ್ರದಲ್ಲಿ ಹೇಳಿದೆ. ಈ ಉದಾತ್ತಲೋಪಕ್ಕೆ ಟಾವಿಭಕ್ತಿಯು ಭಸಂಜ್ಞೆಯನ್ನು ಉಂಟುಮಾಡುವುದರ ಮೂಲಕ ನಿಮಿತ್ತ. **ಅನುದಾತ್ತಸ್ಯಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಉದಾತ್ತಲೋಪಕ್ಕೆ ನಿಮಿತ್ತವಾದ ಅನುದಾತ್ತವು ಉದಾತ್ತವಾಗುತ್ತೆ ಎಂದು ವಿಭಕ್ತಿಯು ಉದಾತ್ತ.

**ಧೀತಯೇ**—ಧೇಟ್ ಪಾನೇ, **ಆದೇಚ ಉಪದೇಶೇಽಶಿತಿ** (ಪಾ. ಸೂ. ೬-೧-೪೫) ಉಪದೇಶದಲ್ಲಿ ಏ-ಓ-ಐ-ಔಗಳನ್ನು ಕೊನೆಯಲ್ಲಿ ಹೊಂದಿರುವ ಧಾತುವಿಗೆ ಆಕಾರ ಬರುತ್ತೆ. ಆದರೆ ಶಕಾರೇತ್ಸಂಜ್ಞಕಪ್ರತ್ಯಯ ಪರದಲ್ಲಿದ್ದರೆ ಈ ಆಕಾರ ಬರುವುದಿಲ್ಲ ಎಂದು ಏಕಾರಕ್ಕೆ ಆಕಾರ. **ಕ್ತಿಚ್‌ಕ್ತೌಚ ಸಂಜ್ಞಾಯಾಂ** ಎಂದು ಕ್ತಿಚ್ ಪ್ರತ್ಯಯ. **ಘುಮಾಸ್ಥಾಗಾಪಾಜಹಾತಿಸಾಂ ಹಲಿ** (ಪಾ. ಸೂ. ೬-೪-೬೬) ಕಿತ್ ಙಿತ್ ಆದ ಆರ್ಧಧಾತುಕ ಪರದಲ್ಲಿದ್ದರೆ ಈ ಧಾತುಗಳ ಆಕಾರಕ್ಕೆ ಈತ್ವ ಬರುತ್ತೆ. **ಗಾಮಾದಾಗ್ರಹಣೇಷ್ವ ವಿಶೇಷಃ** (ಪರಿಭಾ ೧೧೬) ಎಂದು ಹೇಳಿರುವುದರಿಂದ ಲಾಕ್ಷಣಿಕವಾದ ಧಾ ಎಂಬುದಕ್ಕೂ **ದಾಧಾಘ್ವದಾಪ್** (ಪಾ. ಸೂ. ೧-೧-೨೦) ಎಂದು ಘು ಸಂಜ್ಞೆ ಬರುತ್ತದೆ. ಆಕಾರಕ್ಕೆ ಈಕಾರ ಬಂದರೆ ಧೀತಿ ಎಂದು ಆಗುತ್ತದೆ. ಚತುರ್ಥೀ ಏಕವಚನ.

**ನಶತ್**—ಣಶ ಅದರ್ಶನೇ, ಣಕಾರಕ್ಕೆ ನಕಾರ. ಲೇಟ್ಟಿಗೆ ತಿಪ್. **ಲೇಟೋಽಡಾಟೌ** ಎಂದು ಅಡಾಗಮ. **ಇತಶ್ಚ ಲೋಪಃ ಪರಸ್ಮೈಪದೇಷು** ಎಂದು ಇಕಾರಲೋಪ. ||೫||



॥ ಸಂಹಿತಾಪಾಠಃ ॥

ಸ ರತ್ನಂ ಮರ್ತ್ಯೋ ವಸು ವಿಶ್ವಂ ತೋಕಮುತ ತ್ಮನಾ।
ಅಚ್ಛಾ ಗಚ್ಛತ್ಯಸ್ತೃತಃ ॥ ೬ ॥

॥ ಪದಪಾಠಃ ॥

ಸಃ । ರತ್ನಂ । ಮರ್ತ್ಯಃ । ವಸು । ವಿಶ್ವಂ । ತೋಕಂ । ಉತ । ತ್ಮನಾ ।
ಅಚ್ಛ । ಗಚ್ಛತಿ । ಅಸ್ತೃತಃ ॥ ೬ ॥

ಸಾಯಣಭಾಷ್ಯಂ

ಹೇ ಆದಿತ್ಯಾಃ ಸ ತಾದೃಶೋ ಭವದ್ಭಿರನುಗೃಹೀತೋ ಮರ್ತ್ಯೋ ಮನುಷ್ಯೋ ಯಜಮಾನೋಽಸ್ತೃತಃ ಕೇನಾಪ್ಯಹಿಂಸಿತಃ ಸನ್ ರತ್ನಂ ರಮಣೀಯಂ ವಿಶ್ವಂ ವಸು ಸರ್ವಂ ಧನಮಚ್ಛಾಭಿಮುಖ್ಯೇನ ಗಚ್ಛತಿ। ಪ್ರಾಪ್ನೋತಿ। ಉತಾಪಿ ಚ ತ್ಮನಾ ಆತ್ಮನಾ ಸ್ವೇನ ಸದೃಶಂ ತೋಕಮಪತ್ಯಂ ಗಚ್ಛತಿ॥ ತ್ಮನಾ। ಮಂತ್ರೇಷ್ವಾಙ್ಯಾದೇರಾತ್ಮನಃ। ಪಾ. ೬-೪-೧೪೧। ಇತ್ಯಾಕಾರಲೋಪಃ। ಅಚ್ಛ। ನಿಪಾತಸ್ಯ ಚೇತಿ ದೀರ್ಘತ್ವಂ। ಅಸ್ತೃತಃ। ಸ್ತೃಞ್ ಹಿಂಸಾಯಾಂ। ನ ಸ್ತೃತೋಽಸ್ತೃತಃ। ಅವ್ಯಯಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಸಃ**— (ಎಲೈ ಆದಿತ್ಯರೇ ನಿಮ್ಮಿಂದ) ಆ ರೀತಿ ಅನುಗ್ರಹಿಸಲ್ಪಟ್ಟ । **ಮರ್ತ್ಯಃ**— ಮಾನವನಾದ ಯಜಮಾನನು । **ಅಸ್ತೃತಃ**— ಯಾರಿಂದಲೂ ಹಿಂಸಿಸಲ್ಪಡದವನಾಗಿ । **ರತ್ನಂ**— ಮನೋಹರವಾದ । **ವಿಶ್ವಂ ವಸು**— ಸಕಲಧನವನ್ನೂ । **ಅಚ್ಛ**— ಮುಖ್ಯವಾಗಿ । **ಗಚ್ಛತಿ**— ಹೊಂದುತ್ತಾನೆ. । **ಉತ**— ಮತ್ತು । **ತ್ಮನಾ**— ತನ್ನನ್ನೇ ಹೋಲತಕ್ಕ । **ತೋಕಂ**— ಸಂತತಿಯನ್ನು । (**ಗಚ್ಛತಿ**— ಹೊಂದುತ್ತಾನೆ.)

ಭಾವಾರ್ಥ

ಎಲೈ ಆದಿತ್ಯರೇ, ನಿಮ್ಮ ಅನುಗ್ರಹದಿಂದ ಮಾನವನಾದ ಯಜ್ಞಕರ್ತನು ಸಕಲ ಶತ್ರುಗಳನ್ನೂ ನಾಶಮಾಡಿ ಹಿಂಸಾರಹಿತನಾಗುವನು. ಸಕಲಧನವನ್ನೂ ಒಡನೆಯೇ ಹೊಂದುತ್ತಾನೆ. ಮತ್ತು ತನ್ನ ಸ್ವರೂಪವನ್ನೇ ಹೋಲತಕ್ಕ ಸಂತತಿಯನ್ನೂ ಹೊಂದುತ್ತಾನೆ.

## English Translation

That mortal whom you favour, obtains without any obstacles, all valuable wealth, and progeny like himself.

**ವಿಶೇಷವಿಷಯಾಃ**

**ತೋಕಂ**— ತುಕ್, ತೋಕಂ ಮೊದಲಾದ ಹದಿನೈದು ಅಪತ್ಯನಾಮಗಳ ಮಧ್ಯದಲ್ಲಿ ತೋಕಂ ಎಂಬ ಶಬ್ದವು ಪಠಿತವಾಗಿರುವುದರಿಂದ ತೋಕಂ ಎಂದರೆ ಸಂತತಿಯು, ಪುತ್ರಸಂತಾನವು, progeny, offspring.

**ಅಸ್ತೃತಃ— ಸ್ತೃಞ್ ಹಿಂಸಾಯಾಂ ।** ತೊಂದರೆಗಳಿಲ್ಲದಂತೆ, ಅನಾಯಾಸವಾಗಿ, without obstacles, without any hinderance.

॥ ವ್ಯಾಕರಣಪ್ರಕ್ರಿಯಾ ॥

ರತ್ನಿನಮ್— **ನಬ್ವಿಷಯಸ್ಯಾನಿಸಂತಸ್ಯ** (ಫಿ. ಸೂ ೨೬) ಎಂದು ಆದ್ಯುದಾತ್ತ.

ತ್ಮನಾ— **ಮನ್ತ್ರೇಷ್ವಾಙ್ಯಾದೇರಾತ್ಮನಃ** (ಪಾ. ಸೂ. ೬-೪-೧೪೧) ಆಙ್ ಎಂದು ತೃತೀಯಾ ಏಕವಚನ ಪ್ರತ್ಯಯಕ್ಕೆ ಪ್ರಾಚೀನರ ಸಂಕೇತ. ಆಙ್ ಪರದಲ್ಲಿದ್ದರೆ ಆತ್ಮನ್‌ಶಬ್ದದ ಆದಿವರ್ಣಕ್ಕೆ ಲೋಪ ಬರುತ್ತದೆ ಎಂದು ಆಕಾರಕ್ಕೆ ಲೋಪ.

**ಅಚ್ಛ— ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಮನ್ತ್ರದಲ್ಲಿರುವ ನಿಪಾತಕ್ಕೆ ದೀರ್ಘಬರುತ್ತದೆ ಎಂದು ಸೂತ್ರದ ಅರ್ಥ. **ಅಚ್ಛಗತ್ಯರ್ಥವದೇಷು** ( ಪಾ. ಸೂ. ೧-೪-೬೯ ) ಗತ್ಯರ್ಥಕಧಾತುಗಳು ವದಧಾತು ಇವುಗಳಿಗೆ ಪ್ರಯೋಗ ಇದ್ದರೆ ಅಚ್ಛ ಎಂಬ ಅವ್ಯಯವು ಗತಿಸಂಜ್ಞೆಯನ್ನೂ ನಿಪಾತಸಂಜ್ಞೆಯನ್ನೂ ಹೊಂದುತ್ತೆ ಎಂದು ಅಚ್ಛ ಎಂಬುದಕ್ಕೆ ನಿಪಾತಸಂಜ್ಞೆ ಇದೆ. ಆದ್ದರಿಂದ ಸಂಹಿತಾಕಾಲದಲ್ಲಿ ದೀರ್ಘಬರುತ್ತೆ.

ಅಸ್ತೃತಃ— ಸ್ತೃಞ್ ಹಿಂಸಾಯಾಂ, ಸ್ವಾದಿಯಲ್ಲಿ ಹ್ರಸ್ವಾಂತವಾಗಿಯೂ ಕ್ರ್ಯಾದಿಯಲ್ಲಿ ದೀರ್ಘಾಂತವಾಗಿಯೂ ಆಚ್ಛಾದನಾರ್ಥದಲ್ಲಿ ಸ್ತೃಧಾತುವು ಪಠಿತವಾಗಿದೆ. ಇದು ಹಿಂಸಾರ್ಥದಲ್ಲಿಯೂ ಇರುವುದು ಎಂದು ವೇದಭಾಷ್ಯಕಾರರ ಅಭಿಪ್ರಾಯ. ಇದರ ಮುಂದೆ ಕ್ತಪ್ರತ್ಯಯ. ಇದು ಅಜನ್ತಧಾತು. **ಊದೃದಂತೈಃ** ಎಂಬ ಕಾರಿಕೆಯಲ್ಲಿ ಇದು ಸೇರಿಲ್ಲ. ಆದ್ದರಿಂದ ಅನುದಾತ್ತವಾಗುತ್ತೆ. **ಏಕಾಚ ಉಪದೇಶೇ—,** ಎಂದು ಇಟ್‌ಗೆ ನಿಷೇಧ. ಅಥವಾ **ತಿತುತ್ರ—,** (ಪಾ. ಸೂ. ೭-೨-೯) ಎಂಬುದರಿಂದ ಇಟ್‌ಗೆ ನಿಷೇಧ ನ ಸ್ತೃತಃ ಅಸ್ತೃತಃ ಎಂದು ನಞ್‌ಸಮಾಸ. **ತತ್ಪುರುಷೇ ತುಲ್ಯಾರ್ಥ—,** ಎಂದು ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತೆ. ॥೬॥

ಸಂಹಿತಾಪಾಠಃ

ಕಥಾ ರಾಧಾಮ ಸಖಾಯಃ ಸ್ತೋಮಂ ಮಿತ್ರಸ್ಯಾರ್ಯಮ್ಣಃ ।
ಮಹಿ ಪ್ಸರೋ ವರುಣಸ್ಯ ॥ ೭ ॥

॥ ಪದಪಾಠಃ ॥

ಕಥಾ । ರಾಧಾಮ । ಸಖಾಯಃ । ಸ್ತೋಮಂ । ಮಿತ್ರಸ್ಯ । ಅರ್ಯಮ್ಣಃ ।
ಮಹಿ । ಪ್ಸರಃ । ವರುಣಸ್ಯ ॥ ೭ ॥

ಸಾಯಣಭಾಷ್ಯಂ

ಹೇ ಸಖಾಯಃ ಸಖಿಭೂತಾ ಋತ್ವಿಜೋ ಮಿತ್ರಾದೀನಾಂ ತ್ರಯಾಣಾಂ ಮಹಿ ಮಹತ್ ಪ್ಸರೋ ರೂಪಂ । ಅತಸ್ತದನುರೂಪಂ ಸ್ತೋಮಂ ಸ್ತೋತ್ರಂ ಕಥಾ ಕೇನ ಪ್ರಕಾರೇಣ ರಾಧಾಮ । ಸಾಧಯಾಮಃ । ಕಥಾ । ಥಾ ಹೇತೌ ಚ ಛಂದಸಿ । ಪಾ. ೫-೩-೨೬ । ಇತಿ ಕಿಂಶಬ್ದಾತ್ಪ್ರಕಾರವಚನೇಷು ಪ್ರಾಗ್ದಿಶೋ ವಿಭಕ್ತಿರಿತಿ ವಿಭಕ್ತಿಸಂಜ್ಞಾಯಾಂ ಕಿಮಃ ಕಃ । ಪಾ. ೭-೨-೧೦೩ । ಇತಿ ಕಾದೇಶಃ । ಪ್ರತ್ಯಯಸ್ವರಃ । ರಾಧಾಮ । ರಾಧ ಸಾಧ ಸಂಸಿದ್ಧೌ । ಲೇಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ತಿಙ್ಙತಿಙ ಇತಿ ನಿಘಾತಃ । ಸ್ತೋಮಂ । ಷ್ಟುಞ್ ಸ್ತುತೌ । ಅರ್ತಿಸ್ತುಸ್ವಿತ್ಯಾದಿನಾ ಭಾವೇ ಮನ್ । ನಿತ್ತ್ವಾದಾದ್ಯುದಾತ್ತತ್ವಂ । ಅರ್ಯಮ್ಣಃ । ಷಷ್ಠ್ಯೇಕವಚನೇಽಲ್ಲೋಪೋಽನ ಇತ್ಯಕಾರಲೋಪಃ । ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ । ಮಹಿ । ಮಹ ಪೂಜಾಯಾಂ । ಔಣಾದಿಕ ಇನ್ಪ್ರತ್ಯಯಃ । ಪ್ಸರಃ । ಪ್ಸಾ ಭಕ್ಷಣೇ ಪ್ಸಾತಿ ಭಕ್ಷಯತೀತಿ ಪ್ಸರೋ ರೂಪಂ । ಔಣಾದಿಕೋ ಡರಪ್ರತ್ಯಯಃ ॥

ಪ್ರತಿಪದಾರ್ಥ

**ಸಖಾಯಃ**— ಎಲೈ ಸ್ನೇಹಿತರಾದ ಋತ್ವಿಕ್ಕುಗಳೇ । **ಮಿತ್ರಸ್ಯ**—ಮಿತ್ರನ । **ಅರ್ಯಮ್ಣಃ**—ಅರ್ಯಮನ (ಮತ್ತು) । **ವರುಣಸ್ಯ**--ವರುಣನ ( ಈ ಮೂರು ದೇವತೆಗಳ ) **ಮಹಿ**—ಮಹತ್ತಾದ । **ಪ್ಸರಃ**—ವೈಭವವನ್ನು । **ಸ್ತೋಮಂ**— ( ಅದನ್ನು ಹೊಗಳಲು ಯೋಗ್ಯವಾದ ) ಸ್ತೋತ್ರವನ್ನು । **ಕಥಾ**—ಯಾವವಿಧದಿಂದ । **ರಾಧಾಮ**— ನೆರವೇರಿಸೋಣ (ಪಠಿಸೋಣ).

॥ ಭಾವಾರ್ಥ ॥

ಎಲೈ ಸ್ನೇಹಿತರಾದ ಋತ್ವಿಕ್ಕುಗಳೇ, ಮಿತ್ರ, ಅರ್ಯಮ ಮತ್ತು ವರುಣ ಈ ಮೂರು ದೇವತೆಗಳ ವೈಭವವನ್ನೂ ಸ್ತೋತ್ರವನ್ನೂ ಯಾವರೀತಿ ಪಠಿಸೋಣ ?

## English Translation

My friends, how shall we recite the praise worthy of the great glory of Mitra, Varuna, and Aryaman ?

ವಿಶೇಷವಿಷಯಗಳು

**ಕಥಾ—ಕೇನ ಪ್ರಕಾರೇಣ ।** ಯಾವ ಪ್ರಕಾರವಾಗಿ

**ರಾಧಾಮ— ರಾಧ ಸಾಧ ಸಂಸಿದ್ಧೌ ।** ಮಾಡೋಣ, ನೆರವೇರಿಸೋಣ.

**ಸಖಾಯಃ—**ಇಲ್ಲಿ ಯಜಮಾನನು ಋತ್ವಿಗ್ಜನರನ್ನು ಸ್ನೇಹಿತರೆಂದು ಸಂಬೋಧನೆ ಮಾಡಿರುವನು. **ಋತ್ವಿಜೋ ವಾ ಅಸ್ಯ ಸಖಾಯಃ** ಎಂದು ತೈತ್ತಿರೀಯ ಸಂಹಿತೆಯ ವಚನವಿರುವುದರಿಂದ ಋತ್ವಿಕ್ಕುಗಳು ಯಜ್ಞಕರ್ತನಾದ ಯಜಮಾನನ ಸ್ನೇಹಿತರೆಂದು ಕರೆಯಲ್ಪಡುವರು.

ಮಹಿ—**ಮಹ ಪೂಜಾಯಾಂ । ಮಹತ್ ।** ಶ್ರೇಷ್ಠವಾದ ಪೂಜ್ಯವಾದ ।

**ಪ್ಸರಃ—ಪ್ಸಾ ಭಕ್ಷಣೇ ।** ಪ್ಸಾತಿ ಭಕ್ಷಯತೀತಿ ಪ್ಸರೋ ರೂಪಂ । ವೈಭವ, ರೂಪ, ಮಹತ್ವ, glory

ವ್ಯಾಕರಣಪ್ರಕ್ರಿಯಾ

**ಕಥಾ—ಥಾ ಹೇತೌ ಚ ಛಂದಸಿ** (ಪಾ. ಸೂ. ೫-೩-೨೬) ಹೇತ್ವರ್ಥದಲ್ಲಿಯೂ ಪ್ರಕಾರಾರ್ಥದಲ್ಲಿಯೂ ಕಿಮ್‌ಶಬ್ದದ ಮುಂದೆ ಥಾಪ್ರತ್ಯಯ ಬರುತ್ತೆ ಎಂದು ಕಿಮ್ ಶಬ್ದದ ಮುಂದೆ ಥಾಪ್ರತ್ಯಯ. **ಪ್ರಾಗ್ದಿಶೋ ವಿಭಕ್ತಿಃ** (ಪಾ. ಸೂ. ೫-೩-೧) ಎಂದು ಥಾಗೆ ವಿಭಕ್ತಿಸಂಜ್ಞೆ ಇದೆ. **ಕಿಮಃ ಕಃ** (ಪಾ. ಸೂ. ೭-೨-೧೦೩) ವಿಭಕ್ತಿಪರದಲ್ಲಿದ್ದರೆ ಕಿಮ್ ಶಬ್ದಕ್ಕೆ ಕ ಆದೇಶ ಬರುತ್ತೆ ಎಂದು ಕಿಮ್‌ಗೆ ಕ ಆದೇಶ. ಪ್ರತ್ಯಯಸ್ವರ ಬರುತ್ತದೆ.

**ರಾಧಾಮ** – ರಾಧ ಸಾಧ ಸಂಸಿದ್ಧೌ. ಲೇಟ್ ಉತ್ತಮಪುರುಷಬಹುವಚನ. ಮಸ್, **ಸ ಉತ್ತಮಸ್ಯ** (ಪಾ. ಸೂ. ೩-೪-೯೮) ಲೇಟಿನ ಉತ್ತಮಪುರುಷದ ಸಕಾರಕ್ಕೆ ವಿಕಲ್ಪವಾಗಿ ಲೋಪಬರುತ್ತೆ ಎಂದು ಸ್‌ಗೆ ಲೋಪ. **ಬಹುಲಂ ಛಂದಸಿ** ಎಂದು ವಿಕರಣಕ್ಕೆ ಲೋಪ. **ಲೇಟೋಽಡಾಟೌ** ಎಂದು ಅಡಾಗಮವು ಲೇಟ್‌ಗೆ ಬರುತ್ತೆ. **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುತ್ತೆ.

**ಸ್ತೋಮಮ್**— ಷ್ಟುಞ್ ಸ್ತುತೌ. ಧಾತ್ವಾದಿಷಕಾರಕ್ಕೆ ಸಕಾರ **ಅರ್ತಿಸ್ತುಸು—,** ಎಂದು ಭಾವಾರ್ಥದಲ್ಲಿ ಮನ್‌ಪ್ರತ್ಯಯ. ಗುಣದಿಂದ ಉಕಾರಕ್ಕೆ ಓಕಾರ. ಪ್ರತ್ಯಯವು ನಿತ್ ಆದ್ದರಿಂದ ಪ್ರತ್ಯಯಾಂತವು ಆದ್ಯುದಾತ್ತ.

**ಅರ್ಯಮ್ಣಃ**—ಅರ್ಯಮನ್ ಶಬ್ದದ ಮುಂದೆ ಷಷ್ಠೀ ಏಕವಚನ ಙಸ್. **ಅಲ್ಲೋಪೋಽನಃ** (ಪಾ. ಸೂ ೬-೪-೧೩೪) ಅತ್ ಎಂದು ಲುಪ್ತ ಷಷ್ಠ್ಯಂತ, ಉದ್ದೇಶ್ಯವಿಧೇಯಗಳಿಗೆ ಸಾಮರ್ಥ್ಯವಿಲ್ಲದೇ ಇರುವುದ

ರಿಂದ ಸಮಾಸ ಬರುವುದಿಲ್ಲ. ಕಪ್ರತ್ಯಯಾನಧಿಕವಾದ ಯಾವ ಯಾದಿ ಅಥವಾ ಅಜಾದಿಯಾದ ಅಸರ್ವನಾಮ ಸ್ಥಾನಪ್ರತ್ಯಯವಿದೆಯೋ ಅದನ್ನು ಪರದಲ್ಲಿ ಹೊಂದಿರುವ ಅಂಗಾವಯವವಾದ ಅನ್‌ನ ಅಕಾರಕ್ಕೆ ಲೋಪ ಬರುತ್ತೆ ಎಂದು ಸೂತ್ರದ ಅರ್ಥ. ಇಲ್ಲಿ ಭಸಂಜ್ಞಕವಾದ ಅನ್ನಂತಾಂಗದ ಅಕಾರಕ್ಕೆ ಲೋಪ ಬರುತ್ತೆ ಎಂದು ಅರ್ಥ ಹೇಳಿದರೆ, ತಕ್ಷ್ಣಾ ಎಂಬಲ್ಲಿ ತಕಾರದ ಮುಂದೆ ಇರುವ ಅಕಾರಕ್ಕೂ ಲೋಪ ಬರಬೇಕಾಗುತ್ತೆ. ಭಸಂಜ್ಞಕಾಂಗಾವಯವವಾದ ಅನ್‌ನ ಅಕಾರಕ್ಕೆ ಲೋಪಬರುತ್ತೆ ಎಂದು ಅರ್ಥ ಹೇಳಿದರೆ ತಕ್ಷ್ಣಾ ಎಂಬಲ್ಲಿ ದೋಷವಿಲ್ಲ. ಆದರೂ ಅನಸಾ, ಮನಸಾ ಎಂಬಲ್ಲಿಯೂ ಅನ್‌ನ ಅಕಾರಕ್ಕೆ ಲೋಪ ಬರಬೇಕಾಗುತ್ತೆ. ಅನಃ ಎಂಬುದಕ್ಕೆ ಆವೃತ್ತಿಯನ್ನು ಮಾಡಿ ಅನ್ನಂತವೂ ಭಸಂಜ್ಞಕವೂ ಆದ ಅಂಗದ ಅನ್‌ನ ಅಕಾರಕ್ಕೆ ಲೋಪಬರುತ್ತೆ ಎಂದು ವ್ಯಾಖ್ಯಾನಮಾಡಿದರೂ ಅನಸ್ತಕ್ಷ್ಣಾ ಎಂಬಲ್ಲಿ ಮೊದಲನೇ ಅಕಾರಕ್ಕೆ ಲೋಪ ಬರಬೇಕಾಗುತ್ತೆ. ಈ ರೀತಿ ಸಾಮಾನಾಧಿಕರಣ್ಯವಾಗಿ ಅನ್ವಯವನ್ನು ಹೇಳಿದರೆ ದೋಷಗಳಿರುವುದರಿಂದ ಮೊದಲು ಹೇಳಿದಂತೆಯೇ ಸೂತ್ರಕ್ಕೆ ಅರ್ಥವನ್ನು ಹೇಳಬೇಕು. ಅರ್ಯಮನ್ ಎಂಬಲ್ಲಿಯ ಅನ್‌ನ ಅಕಾರಕ್ಕೆ ಈ ಸೂತ್ರದಿಂದ ಲೋಪಬಂದರೆ ಅರ್ಯಮ್+ನ್+ಅಸ್, ಅಟ್ಕುಪ್ವಾಙ್—, ಎಂದು ನಕಾರಕ್ಕೆ ಣಕಾರ. ಉದಾತ್ತನಿವೃತ್ತಿಸ್ವರದಿಂದ ವಿಭಕ್ತಿಯು ಉದಾತ್ತ.

**ಮಹಿ**—ಮಹ ಪೂಜಾಯಾ, ಇನ್ ಎಂಬ ಔಣಾದಿಕಪ್ರತ್ಯಯ ಬರುತ್ತೆ.

**ಪ್ಸರಃ**—ಪ್ಸಾ ಭಕ್ಷಣೇ ಅದಾದಿ ಪ್ಸಾತಿ ಭಕ್ಷಯತೀತಿ ಪ್ಸರಃ, ರೂಪ ಎಂದು ಅರ್ಥ. ಔಣಾದಿಕ ಡರ ಪ್ರತ್ಯಯ ಬರುತ್ತೆ. ಪ್ರತ್ಯಯದಲ್ಲಿ ಡ್‌ಗೆ ಇತ್ವ ಬಂದು ಲೋಪಬರುತ್ತೆ. ಡಿತ್ಕರಣಸಾಮರ್ಥ್ಯದಿಂದ ಧಾತುವಿನ ಆಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಇದು ಆದ್ಯುದಾತ್ತ. ॥೭॥

---

ಸಂಹಿತಾಪಾಠಃ

ಮಾ ವೋ ಘ್ನಂತಂ ಮಾ ಶಪಂತಂ ಪ್ರತಿ ವೋಚೇ ದೇವಯನ್ತಂ ।
ಸುಮ್ನೈರಿದ್ವ ಆ ವಿವಾಸೇ ॥ ೮ ॥

ಪದಪಾಠಃ

ಮಾ । ವಃ । ಘ್ನಂತಂ । ಮಾ । ಶಪಂತಂ । ಪ್ರತಿ । ವೋಚೇ । ದೇವಽಯನ್ತಂ ।
ಸುಮ್ನೈಃ । ಇತ್ । ವಃ । ಆ । ವಿವಾಸೇ ॥ ೮ ॥

ಸಾಯಣಭಾಷ್ಯಂ

ಹೇ ಮಿತ್ರಾದಯೋ ದೇವಾ ದೇವಯಂತಂ ದೇವಾನ್ಕಾಮಯಮಾನಂ ಯಜಮಾನಂ ಯಃ ಶತ್ರುರ್ಹಂತಿ ಘ್ನಂತಂ ತಾದೃಶಂ ಶತ್ರುಂ ವೋ ಯುಷ್ಮಭ್ಯಂ ಮಾ ಪ್ರತಿ ವೋಚೇ । ದುರುಕ್ತಕಥನಭೀತ್ಯಾಹಂ ನ ಕಥಯಾಮಿ । ತಥಾ ಯಜಮಾನಂ ಯಃ ಶತ್ರುಃ ಶಪತಿ ತಮಪಿ ಶಪಂತಂ ಮಾ ಪ್ರತಿ ವೋಚೇ । ಭವದ್ಭಿರೇವ ವಿಚಾರ್ಯ ಶಿಕ್ಷಣೀಯ ಇತ್ಯರ್ಥಃ । ಅಹಂ ತು ಸುಮ್ನೈರಿತ್ ಧನೈರೇವ ವೋ ಯುಷ್ಮಾನಾ ವಿವಾಸೇ । ಸರ್ವತಃ ಪರಿಚರಾಮಿ ॥ ಘ್ನಂತಂ । ಹಂತೀತಿ ಘ್ನನ್ । ಗಮಹನೇತ್ಯಾದಿನೋಪಧಾಲೋಪಃ । ಹೋ ಹಂತೇರಿತಿ ಕುತ್ವೇ ಪ್ರತ್ಯಯಸ್ವರಃ । ಶಪಂತಂ । ಶಪ ಆಕ್ರೋಶೇ ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ವೋಚೇ । ಬ್ರೂಞ್ ವ್ಯಕ್ತಾಯಾಂ ವಾಚಿ । ಮಾಙಿ ಲುಙಿ ಬ್ರುವೋ ವಚಿಃ । ಪಾ ೨-೪-೫೩ । ಇತಿ ವಚಿಃ । ಅಸ್ಯತಿವಕ್ತೀತ್ಯಾದಿನಾ ಚ್ಲೇರಙಾದೇಶಃ । ವಚ ಉಮಿತ್ಯುಮಾಗಮಃ । ನ ಮಾಙ್ಯೋಗ ಇತ್ಯಡಭಾವಃ । ದೇವಯಂತಂ । ಸುಪ ಆತ್ಮನಃ ಕ್ಯಚ್ । ನ ಛಂದಸ್ಯಪುತ್ರಸ್ಯೇತೀತ್ವಪ್ರತಿಷೇಧಃ । ಸುಮ್ನೈಃ । ಮ್ನಾ ಅಭ್ಯಾಸೇ । ಸುಷ್ಠು ಮ್ನಾಯತೇಽಭ್ಯಸ್ಯತ ಇತಿ ಸುಮ್ನಂ । ಆತಶ್ಚೋಪಸರ್ಗ ಇತಿ ಕಪ್ರತ್ಯಯಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ವಿವಾಸೇ । ವಿವಾಸತಿಃ ಪರಿಚರಣಕರ್ಮಾ ॥

ಪ್ರತಿಪದಾರ್ಥ

(ಎಲೈ ಮಿತ್ರಾದಿ ದೇವತೆಗಳೆ), **ದೇವಯಂತಂ**–ದೇವತೆಗಳನ್ನು । ಅಪೇಕ್ಷಿಸುವ ಭಕ್ತನಾದ ಯಜಮಾನನನ್ನು । **ಘ್ನಂತಂ**—ಹಿಂಸಿಸುವ ಶತ್ರುವನ್ನು ( ಅವನ ಹೆಸರನ್ನು ) । **ಮಾ ಪ್ರತಿ ವೋಚೇ**—(ಇತರರನ್ನು ದೂಷಿಸುವುದರಿಂದಾಗುವ ದೋಷಭಯದಿಂದ ) ಹೇಳುವುದಿಲ್ಲ । **ಶಪಂತಂ**—(ಯಜಮಾನನನ್ನು) ನಿಂದಿಸಿ ಬಯ್ಯುವ ಶತ್ರುವಿನ ಹೆಸರನ್ನು । **ಮಾ (ಪ್ರತಿವೋಚೇ)**—ಹೇಳುವುದಿಲ್ಲ. (ನಾನಾದರೋ) । **ಸುಮ್ನೈರಿತ್**—ಧನದಿಂದ ಮಾತ್ರ । **ವಃ**—ನಿಮ್ಮನ್ನು । **ಆ ವಿವಾಸೇ**—ಎಲ್ಲ ಕಡೆಯಿಂದಲೂ ಉಪಚರಿಸಿ ಸತ್ಕರಿಸುತ್ತೇನೆ.

॥ ಭಾವಾರ್ಥ ॥

ಎಲೈ ಮಿತ್ರಾದಿದೇವತೆಗಳೇ, ದೇವತೆಗಳಾದ ನಿಮ್ಮನ್ನು ಸ್ತೋತ್ರಮಾಡುವ ಯಜಮಾನನನ್ನು ಹಿಂಸಿಸುವವನ ವಿಷಯವಾಗಿ ನಿಮಗೆ ದೂರನ್ನು ಹೇಳುವುದಿಲ್ಲ. ಯಜಮಾನನನ್ನು ಬಯ್ಯುವವನ ವಿಷಯವಾಗಿಯೂ ಯಾವ ದೂರನ್ನೂ ಹೇಳುವುದಿಲ್ಲ. ಆದರೆ ಧನಾದಿ ದ್ರವ್ಯಗಳಿಂದ ನಿಮ್ಮನ್ನು ಸೇವಿಸುವೆನು.

English Translation

I do not complain against any man who injures or reviles the man devoted to the gods ; I rather serve you with wealth

॥ ವಿಶೇಷವಿಷಯಗಳು ॥

**ಘ್ನಂತಂ—ಹಂತೀತಿ ಘ್ನನ್ ತಂ ।** ಹಿಂಸಿಸುವ, ಕೊಲ್ಲುವ, ಕೇಡನ್ನುಂಟುಮಾಡುವ ಪುರುಷನನ್ನು

**ಶಪಂತಂ—ಶಪ ಆಕ್ರೋಶೇ ।** ಬೈಯ್ಯುವ, ದುರ್ಭಾಷೆಗಳನ್ನಾಡುವ

**ದೇವಯಂತಂ— ದೇವಾನ್ ಕಾಮಯಮಾನಂ ।** ದೇವತೆಗಳನ್ನು ಸ್ತುತಿಸಲು ಇಚ್ಛಿಸುವ (ಯಜಮಾನನನ್ನು)

**ಸುಮ್ನೈಃ— ಮ್ನಾ ಅಭ್ಯಾಸೇ । ಸುಷ್ಠು ಮ್ನಾಯತೇಽಭ್ಯಸ್ಯತ ಇತಿ ಸುಮ್ನಂ ।** ಸುಮ್ನಂ ಎಂಬ ಶಬ್ದವು ಸುಖನಾಮಗಳಲ್ಲಿ ಪಠಿತವಾಗಿರುವುದು. (ನಿ. ೩-೧೩)

**ವಿವಾಸೇ—ವಿವಾಸತಿಃ ಪರಿಚರಣಕರ್ಮಾ ।** ಸೇವಿಸುವೆನು.

ವ್ಯಾಕರಣಪ್ರಕ್ರಿಯಾ

**ಘ್ನನ್ತಮ್**—ಹನ ಹಿಂಸಾಗತ್ಯೋಃ, ಲಟ್, **ಲಟಶ್ಶತೃಶಾನಚೌ—,** ಎಂದು ಶತೃಪ್ರತ್ಯಯ, ಶಪ್‌ಗೆ ಲುಕ್, ಹನ್+ಅತ್, **ಸಾರ್ವಧಾತುಕಮಪಿತ್** ಎಂದು ಶತೃ ಙಿತ್ **ಗಮಹನ—,** ಎಂಬುದರಿಂದ ಉಪಧಾಭೂತವಾದ ಅಕಾರಕ್ಕೆ ಲೋಪ. **ಹೋಹನ್ತೇಃ—,** ಎಂಬುದರಿಂದ ನಕಾರವನ್ನು ನಿಮಿತ್ತವಾಗಿಕೊಂಡು ಹಕಾರಕ್ಕೆ ಕುತ್ವ. ಘೋಷನಾದಸಂವಾದ ಮಹಾಪ್ರಾಣಪ್ರಯತ್ನವಾದ ಹಕಾರದಸ್ಥಾನದಲ್ಲಿ ಇಂತಹ ಘಕಾರಾದೇಶ ಬರುತ್ತೆ. ಘ್ನತ್. ಎಂದಾಯಿತು. ದ್ವಿತೀಯಾಏಕವಚನ ಅಮ್, **ಉಗಿದಚಾಂ—,** ಎಂದು ನುಮಾಗಮ. ಅನುಸ್ವಾರಪರಸವರ್ಣಗಳು

**ಶಪನ್ತಮ್—**ಶಪ ಆಕ್ರೋಶೇ ದಿವಾದಿ. ಲಟ್, ಶತೃ, ಶ್ಯನ್‌ಗೆ ಬದಲಾಗಿ ಶಪ್ ವಿಕರಣ, ಇದು ಪಿತ್ ಆದ್ದರಿಂದ ಅನುದಾತ್ತ. **ತಾಸ್ಯನುದಾತ್ತೇತ್—,** ಎಂದು ಶತೃ ಅನುದಾತ್ತ. ಮಿಕ್ಕ ಪ್ರಕ್ರಿಯೆ ಹಿಂದಿನಂತೆ.

**ವೋಚೇ**—ಬ್ರೂಙ್ ವ್ಯಕ್ತಾಯಾಂ ವಾಚಿ, ಲುಙ್, ಆತ್ಮನೇಪದ, ಉತ್ತಮಪುರುಷ, ಇಟ್, **ಚ್ಲಿ ಲುಙಿ** ಎಂದು ಚ್ಲಿ. **ಬ್ರುವೋ ವಚಿಃ** (ಪಾ. ಸೂ. ೨-೪-೫೩) ಆರ್ಧಧಾತುಕ ಪರದಲ್ಲಿದ್ದರೆ ಬ್ರೂಙ್ ಧಾತುವಿಗೆ ವಚಿ ಆದೇಶ ಬರುತ್ತೆ ಎಂದು ವಚಿ ಆದೇಶ. ಇದರಲ್ಲಿ ಇಕಾರ ಉಚ್ಚಾರಣಸೌಕರ್ಯಕ್ಕಾಗಿ ಬಂದಿದೆ. ವಚ್ ಎಂದಿಷ್ಟು ನಿಲ್ಲುತ್ತೆ. **ಅಸ್ಯತಿ ವಕ್ತಿ ಖ್ಯಾತಿಭ್ಯೋಽಙ್** (ಪಾ. ಸೂ. ೩-೧-೫೨) ಇವುಗಳ ಮುಂದೆ ಚ್ಲಿಗೆ ಅಙ್ ಬರುತ್ತೆ ಎಂದು ಚ್ಲಿಗೆ ಅಙ್ ಆದೇಶ. **ವಚ ಉಮ್** (ಪಾ. ಸೂ. ೭-೪-೨೦) ಅಙ್‌ಪರದಲ್ಲಿದ್ದರೆ ವಚ್‌ಗೆ ಉಮ್ ಆಗಮ ಬರುತ್ತೆ ಎಂದು ಉಮ್ ಆಗಮ. ವ+ಉ+ಚ್+ಅ+ಇ. **ಆದ್ಗುಣಃ** ಎಂದು ಗುಣ. **ನ ಮಾಙ್ಯೋಗೇ** ಎಂದು ಅಟ್ ಆಗಮಕ್ಕೆ ಪ್ರತಿಷೇಧ. ವೋಚೇ ಎಂದು ರೂಪವಾಗುತ್ತೆ.

**ದೇವಯನ್ತಮ್—ಸುಪ ಆತ್ಮನಃ ಕ್ಯಚ್.** ಎಂದು ಕ್ಯಚ್. **ನ ಛಂದಸ್ಯಪುತ್ರಸ್ಯ** ಎಂದು ಈತ್ವ ದೀರ್ಘಗಳಿಗೆ ನಿಷೇಧ. ಲಟ್-ಶತೃ.

**ಸುಮ್ನಮ್**—ಮ್ನಾ ಅಭ್ಯಾಸೇ, ೧ನೇ ಗಣ. **ಆತಶ್ಚೋಪಸರ್ಗೇ** (ಪಾ. ಸೂ. ೩-೧-೧೩೬) ಉಪ ಸರ್ಗವು ಉಪಪದವಾಗಿರುವಾಗ ಆಕಾರಾಂತ ಧಾತು ಮುಂದೆ ಕ ಪ್ರತ್ಯಯ ಬರುತ್ತೆ ಎಂದು ಕಪ್ರತ್ಯಯ. **ಆತೋ ಲೋಪ ಇಟಿ ಚ** ಎಂದು ಆಕಾರಕ್ಕೆ ಲೋಪ.

**ವಿವಾಸೇ—ವಿವಾಸತಿಃ ಪರಿಚರಣಕರ್ಮಾ** (ನಿರು. ೩-೫-೧೦) ಎಂಬ ನಿರುಕ್ತದಿಂದ ಧಾತುವು ಪರಿಚರಣ ಎಂಬ ಅರ್ಥದಲ್ಲಿರುವುದು. ಉತ್ತಮಪುರುಷ ಇಟ್, ಏತ್ವ. ॥೮॥

---

ಸಂಹಿತಾಪಾಠಃ

ಚತುರಶ್ಚಿದ್ದದಮಾನಾದ್ಬಿಭೀಯಾದಾ ನಿಧಾತೋಃ ।
ನ ದುರುಕ್ತಾಯ ಸ್ಪೃಹಯೇತ್ ॥ ೯ ॥

ಪದಪಾಠಃ

ಚತುರಃ । ಚಿತ್ । ದದಮಾನಾತ್ । ಬಿಭೀಯಾತ್ । ಆ । ನಿऽಧಾತೋಃ ।
ನ । ದುಃऽಉಕ್ತಾಯ । ಸ್ಪೃಹಯೇತ್ ॥ ೯ ॥

ಸಾಯಣಭಾಷ್ಯಂ

ಘ್ನಂತಂ ಶಪಂತಂ ಚ ಮಾ ಪ್ರತಿವೋಚ ಇತಿ ಯದುಕ್ತಂ ತತ್ರೋಪಪತ್ತಿರುಚ್ಯತೇ । ದುರುಕ್ತಾಯ ನ ಸ್ಪೃಹಯೇತ್ । ದುಷ್ಟಂ ವಾಕ್ಯಂ ನ ಕಾಮಯೇತ್ ಕಿಂತು ದುರುಕ್ತಾದ್ಬಿಭೀಯಾತ್ । ತತ್ರಾವಶಿಷ್ಟೋ ಮಂತ್ರಭಾಗಃ ಸರ್ವೋಽಪಿ ದೃಷ್ಟಾಂತಃ । ಚಿದಿತ್ಯುಪಮಾರ್ಥೇ ವರ್ತತೇ । ಅಕ್ಷದ್ಯೂತಂ ಕುರ್ವತೋರುಭಯೋರ್ಮಧ್ಯೇ ಯಃ ಪುಮಾನ್ ಚತುರಶ್ಚತುಃಸಂಖ್ಯಾಕಾನ್ಕಪರ್ದಕಾನ್ದದಮಾನಾದ್ದ ದತೋ ಹಸ್ತೇ ಧಾರಯತಃ ಪುರುಷಾತ್ ಆ ನಿಧಾತೋಃ ಕಪರ್ದಕನಿಪಾತಪರ್ಯಂತಂ ಬಿಭೀಯಾತ್ ಅಸ್ಯ ಜಯೋ ಭವಿಷ್ಯತಿ । ನ ಭವಿಷ್ಯತೀತ್ಯನ್ಯೋ ಭೀತಿಂ ಪ್ರಾಪ್ನುಯಾತ್ । ಅತ್ರ ಯಥಾ ಭಯಂ ತಥಾ

ದುರುಕ್ತಾದ್ಭೇತವ್ಯಮಿತಿ ಧರ್ಮರಹಸ್ಯಂ । ತಸ್ಮಾದಹಂ ಘ್ನಂತಂ ಶಪಂತಂ ಮಾ ಪ್ರತಿವೋಚ ಇತ್ಯಭಿಪ್ರಾಯಃ । ಅತ್ರ ನಿರುಕ್ತಂ ಚತುರೋಽಕ್ಷಾನ್ಧಾರಯತ ಇತಿ । ತದ್ಯಥಾ ಕಿತವಾದ್ಬಿಭೀಯಾದೇವಮೇವ ದುರುಕ್ತಾದ್ಬಿಭೀಯಾನ್ನ ದುರುಕ್ತಾಯ ಸ್ಪೃಹಯೇತ್ । ನಿ. ೩-೧೬ । ಇತಿ ॥ ಚತುರಃ । ಚತುರಃ ಶಸಿ । ಪಾ. ೬-೧-೧೬೭ । ಇತಿ ವಿಭಕ್ತೇಃ ಪೂರ್ವಸ್ಯೋದಾತ್ತತ್ವಂ । ದದಮಾನಾತ್ । ದದ ದಾನೇ । ಅತ್ರ ಧಾರಣಾರ್ಥಃ ಶಪಃ ಪಿತ್ವಾದನುದಾತ್ತತ್ವಂ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇನ ಶಾನಜನುದಾತ್ತಃ ಧಾತುಸ್ವರ ಏವ ಶಿಷ್ಯತೇ । ಬಿಭೀಯಾತ್ । ಞಿಭೀ ಭಯೇ । ಲಿಙಃ ಜುಹೋತ್ಯಾದಿತ್ವಾಚ್ಛಪಃ ಶ್ಲುಃ । ಯಾಸುಟ ಉದಾತ್ತತ್ವಂ । ಪಾದಾದಿತ್ವಾನ್ನಿಘಾತಾಭಾವಃ । ನಿಧಾತೋಃ । ನಿಪೂರ್ವಾದ್ಧಧಾತೇಃ ಸಿತನಿಗಮೀತ್ಯಾದಿನಾ । ಉ. ೧-೭೦ । ಭಾವೇ ತುನ್ಪ್ರತ್ಯಯಃ । ವ್ಯತ್ಯಯೇನಾದ್ಯುದಾತ್ತತ್ವಂ । ತಾದೌ ಚೇತಿ ಗತಿಸ್ವರೋ ನ ಭವತಿ । ಅತಾವಿತಿ ಪರ್ಯುದಸ್ತತ್ವಾತ್ । ದುರುಕ್ತಾಯ । ಸ್ಪೃಹೇರೀಪ್ಸಿತಃ । ಪಾ. ೧-೪-೩೬ । ಇತಿ ಸಂಪ್ರದಾನಸಂಜ್ಞಾಯಾಂ ಚತುರ್ಥೀ ಸಂಪ್ರಧಾನೇ । ಪಾ. ೨-೩-೧೩ । ಇತಿ ಚತುರ್ಥೀ । ಸ್ಪೃಹಯೇತ್ । ಸ್ಪೃಹ ಈಪ್ಸಾಯಾಂ । ಚುರಾದಿರದಂತಃ । ಅತೋ ಲೋಪಸ್ಯ ಸ್ಥಾನಿವದ್ಭಾವಾಲ್ಲಘೂಪಧಗುಣಾಭಾವಃ ॥ ೨೩ ॥

॥ ಪ್ರತಿಪದಾರ್ಥ ॥

**ದುರುಕ್ತಾಯ**— (ಇತರರ ಮೇಲೆ) ದೂಷಣೆಮಾತುಗಳನ್ನಾಡುವುದಕ್ಕೆ । **ನ ಸ್ಪೃಹಯೇತ್**— ಆಸೆ ಪಡಬಾರದು. (ಆದರೆ) । **ಚತುರಃ**— ನಾಲ್ಕುಕವಡೆಗಳನ್ನು (ಅಥವಾ ದಾಳಗಳನ್ನು) । **ದದಮಾನಾತ್**— ಕೈಯಲ್ಲಿ ಹಿಡಿದಿರುವ (ಎದುರಾಳಿ) ಪುರುಷನಿಂದ । **ಆ ನಿಧಾತೋಃಚಿತ್**—(ಕವಡೆಗಳು) ಕೆಳಕ್ಕೆ ಬೀಳುವವರೆಗೆ (ತನಗೆಲ್ಲಿ ಅಪಜಯವಾಗುವುದೋ ಎಂದು) ಭಯಪಡುವಂತೆ । **ಬಿಭೀಯಾತ್**—ಭಯಪಡಬೇಕು.

ಭಾವಾರ್ಥ ॥

ಇತರರ ಮೇಲೆ ದೋಷಾರೋಪಣೆ ಮಾತುಗಳನ್ನು ಆಡಲು ಆಸೆ ಪಡಬಾರದು. (ಅದರಿಂದ ಅನೇಕ ಅನರ್ಥಗಳು ಸಂಭವಿಸುವುವು). ದ್ಯೂತದಲ್ಲಿ ಜೂಜುಕಾರನು ಎದುರಾಳಿ ಕೈಯಲ್ಲಿ ದಾಳಗಳಾಗಲಿ ಕವಡೆಗಳಾಗಲಿ ಕೆಳಗೆ ಬೀಳುವವರೆಗೆ ತನಗೆಲ್ಲಿ ಅಪಜಯ ಸಂಭವಿಸುವುದೋ ಎಂಬ ಹೆದರಿಕೆಯನ್ನು ಹೇಗೆ ಇಟ್ಟುಕೊಂಡಿರುವನೋ ಅದೇ ರೀತಿ (ಇತರರ ಮೇಲೆ ದೋಷಾರೋಪಣೆ ಮಾಡುವವನೂ ಸಹ ತನಗೆಲ್ಲಿ ತೊಂದರೆಯಾಗುವುದೋ ಎಂದು ಹೆದರಬೇಕು.

English Translaion

A man should be afraid to speak evil of any one as a gamester fears his opponent holding the four dice in his hand until they are thrown.

ವಿಶೇಷವಿಷಯಗಳು.

ಹಿಂದಿನ ಋಕ್ಕಿನಲ್ಲಿ ಹೇಳಿರುವ ವಿಷಯವನ್ನೇ ಎಂದರೆ ನಮಗೆ ಶತ್ರುವಾದವನ ವಿಷಯದಲ್ಲಿ ಕೆಟ್ಟಮಾತನ್ನಾಡುವುದಿಲ್ಲವೆಂಬ ವಿಚಾರವನ್ನೇ ಇಲ್ಲಿ ವಿಶದಪಡಿಸಿರುವುದು. ಮುಖ್ಯಾಭಿಪ್ರಾಯವೇನೆಂದರೆ—ನಾವು ಯಾರ ವಿಷಯದಲ್ಲಿಯೂ ದುರುಕ್ತಿಗಳನ್ನು ಎಂದರೆ ದುರ್ಭಾಷೆಗಳನ್ನು ಆಡಬಾರದು. ಆಡುವುದಕ್ಕೆ ಆಸೆಪಡಲೂಬಾರದು. ಅಷ್ಟೇ ಅಲ್ಲ. ಆ ದುಷ್ಟರ ವಿಚಾರದಲ್ಲಿ ನಾವು ಭಯದಿಂದಲೇ ಇರಬೇಕು. ಇಬ್ಬರು ದ್ಯೂತವನ್ನು ಆಡುತ್ತಿರುವಾಗ ಒಬ್ಬನು ತನ್ನ ಪ್ರತಿಸ್ಪರ್ಧಿಯಾದವನ ಕೈಯಲ್ಲಿರುವ ನಾಲ್ಕು ದಾಳಗಳು (ಅಥವಾ ಕವಡೆಗಳು) ಕೆಳಗೆ ಬೀಳುವವರಿಗೆ ಎಂದರೆ ಅವನು ಆ ಕವಡೆಗಳನ್ನು ಕೆಳಕ್ಕೆ ಹಾಕಿ ಆಡುವವರೆಗೆ ತನಗೆ ಪ್ರತಿಕೂಲವಾದ ಗರವು ಎಲ್ಲಿ ಬೀಳುವುದೋ ಎಂದು ಮನಸ್ಸಿನಲ್ಲಿಯೇ ಭಯಪಡುತ್ತಿರುವಂತೆ ದುಷ್ಟರ ವಿಷಯದಲ್ಲಿಯೂ ಮನಸ್ಸಿನಲ್ಲಿ ಭಯಪಡುತ್ತಿರಬೇಕು. ಆದುದರಿಂದ ಆ ದುಷ್ಟರ ವಿಷಯದಲ್ಲಿ ನಾವು ದುರುಕ್ತಿಗಳನ್ನು ಆಡಲು ಅಪೇಕ್ಷಿಸಬಾರದು ಎಂದು ಮುಖ್ಯಾಭಿಪ್ರಾಯವು.

**ಚತುರಃ—ಚತುಸ್ಸಂಖ್ಯಾಕಾನ್ ಕಪರ್ದಾನ್** ನಾಲ್ಕುಕವಡೆಗಳನ್ನು ; ಅಥವಾ ದಾಳಗಳನ್ನು ಎಂದು ಬೇಕಾದರೂ ಹೇಳಬಹುದು. ಋಕ್ಕಿನಲ್ಲಿ ಚತುರಃ—ನಾಲ್ಕು ಎಂಬ ಶಬ್ದವಮಾತ್ರವಿರುವುದು. ಕವಡೆಗಳನ್ನು ಅಥವಾ ದಾಳಗಳನ್ನು ಎಂಬ ಶಬ್ದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಈ ವಿಷಯದಲ್ಲಿ ಯಾಸ್ಕರು—

**ಚತುರೋಽಕ್ಷಾನ್ ಧಾರಯತ ಇತಿ ತದ್ಯಥಾ ಕಿತವಾದ್ಬಿಭೀಯಾದೇವಮೇವ ದುರುಕ್ತಾದ್ಬಿಭೀಯಾನ್ನ ದುರುಕ್ತಾಯ ಸ್ಪೃಹಯೇತ್ಕದಾಚಿತ್**

(ನಿ. ೩-೧೬)

ಎಂದರೆ ಜೂಜನ್ನಾಡುತ್ತಿರುವಾಗ ತನ್ನ ಪ್ರತಿಸ್ಪರ್ಧಿಯ ಕೈಯಲ್ಲಿ ನಾಲ್ಕುದಾಳಗಳನ್ನು ಇಟ್ಟುಕೊಂಡು ಅದನ್ನು ನೆಲದಮೇಲೆ ಹಾಕಿ ಆಡುವವರೆಗೂ ತನಗೆ ಪ್ರತಿಕೂಲವಾದ ಗರವು ಎಲ್ಲಿ ಬೀಳುವುದೋ ಎಂದು ಭಯಪಡುತ್ತಿರುವಂತೆ ಇತರರ ವಿಷಯದಲ್ಲಿ ಯಾವಾಗಲೂ ನಾವು ದುರ್ಭಾಷೆಗಳನ್ನಾಡಲು ಅಪೇಕ್ಷಿಸಬಾರದು ಎಂದರ್ಥವು.

**ಚತುರಃ**— ನಾಲ್ಕು. ಇಲ್ಲಿ ನಾಲ್ಕು ಎಂದರೆ ನಾಲ್ಕುಕವಡೆಗಳು ಅಥವಾ ದಾಳಗಳು.

**ಚಿತ್**— ಈ ಶಬ್ದಕ್ಕೆ ಇಲ್ಲಿ ಏವ ಎಂದು ಉಪಮಾರ್ಥವನ್ನು ಹೇಳಬೇಕು.

**ದದಮಾನಾತ್— ದದ ದಾನೇ । ಅತ್ರ ಧಾರಣಾರ್ಥಃ । ಹಸ್ತೇ ಧಾರಯತಃ ಪುರುಷಾತ್ ।** ದಾಳಗಳನ್ನು ಕೈಯಲ್ಲಿ ಹಿಡಿದಿರುವ ಪುರುಷನ ದೆಸೆಯಿಂದ

**ಆ ನಿಧಾತೋಃ**—ಕೆಳಗಿಡುವವರೆಗೆ, ಕೆಳಗೆ ಬೀಳುವವರೆಗೆ.

ವ್ಯಾಕರಣಪ್ರಕ್ರಿಯಾ

**ಚತುರಃ—** ಚತೇ ಯಾಚನೇ, **ಚತೇರುರನ್** (ಉ. ಸೂ. ೫-೭೩೬) ಚತೇಧಾತು ಮುಂದೆ ಉರನ್ ಪ್ರತ್ಯಯ ಬರುತ್ತೆ ಎಂದು ಉರನ್. ಪ್ರತ್ಯಯವು ನಿತ್ ಆದ್ದರಿಂದ ಪ್ರತ್ಯಯಾಂತಕ್ಕೆ ಆದ್ಯುದಾತ್ತವು ಪ್ರಾಪ್ತವಾದರೆ

**ಚತುರಃ ಶಸಿ** (ಪಾ. ಸೂ ೬-೧-೧೬೭) ಶಸ್ ಪರದಲ್ಲಿದ್ದರೆ ಚತುರ್‌ಶಬ್ದದ ಕೊನೆಯ ವರ್ಣವು ಉದಾತ್ತವಾಗುತ್ತದೆ ಎಂದು ಉಕಾರ ಉದಾತ್ತವಾಗುತ್ತೆ.

**ದದಮಾನಾತ್**—ದದ ದಾನೇ ೧ನೇ ಗಣ ಆತ್ಮನೇಪದಿ. ಲಟ್‌ಗೆ **ಲಟಶ್ಶತೃ ಶಾನಚೌ**—, ಎಂದು ಶಾನಚ್, ಶಪ್. ದದ್+ಅ+ಆನ. **ಆನೇಮುಕ್** ಎಂದು ಮುಗಾಗಮ, ಪಿತ್ ಆಗ್ದರಿಂದ ಶಪ್ ಅನುದಾತ್ತ. **ತಾಸ್ಯನುದಾತ್ತೇತ್**—, ಎಂದು ಶಾನಚ್. ಅನುದಾತ್ತ. ಧಾತುಸ್ವರ ನಿಲ್ಲುತ್ತದೆ. ಪಂಚಮ್ಯೇಕವಚನಾಂತ.

**ಬಿಭೀಯಾತ್**—ಞಿಭೀಭಯೇ. ವಿಧಿಲಿಙ್, ಶಪ್‌ಗೆ ಶ್ಲು. ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ ಜಶ್ತ್ವಗಳು. **ಯಾಸುಟ್ಪರಸ್ಮೈಪದೇಷೂದಾತ್ತೋ ಙಿಚ್ಚ** (ಪಾ. ಸೂ. ೩-೪-೧-೩) ಎಂದು ಉದಾತ್ತವಾದ ಯಾಸುಟ್ ಆಗಮ. ಸುಡಾಗಮ. **ಲಿಙಸ್ಸಲೋಪಃ**—, ಎಂದು ಸಕಾರಗಳೆರಡಕ್ಕೂ ಲೋಪ. ಪಾದದ ಆದಿಯಲ್ಲಿರುವುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ನಿಧಾತೋಃ**—ಡುಧಾಞ್ ಧಾರಣಪೋಷಣಯೋಃ, ನಿ-ಉಪಸರ್ಗ. **ಸಿತನಿಗಮಿ ಮಸಿ ಸಚ್ಯವಿಧಾಞ್ ಕ್ರುಶಿಭ್ಯಸ್ತುನ್** (ಉ. ಸೂ. ೧-೬೯) ಎಂಬುದರಿಂದ ಧಾಧಾತು ಮುಂದೆ ತುನ್‌ಪ್ರತ್ಯಯ **ತಿತುತ್ರ**—, ಎಂದು ಇಟ್‌ಗೆ ನಿಷೇಧ. **ತಾದೌ ಚ ನಿತಿ ಕೃತ್ಯತೌ** (ಪಾ. ಸೂ ೬-೨-೫೦) ತಕಾರಾದಿಯೂ ನಿತ್ತೂ ಆದ ಕೃತ್ಪ್ರತ್ಯಯ ಪರದಲ್ಲಿದ್ದರೆ ಸಮಾಸದಲ್ಲಿರುವ ಗತಿಯು ಪ್ರಕೃತಿಸ್ವರವನ್ನು ಹೊಂದುತ್ತೆ. ಆದರೆ ತು ಎಂಬುದು ಪರದಲ್ಲಿದ್ದರೆ ಗತಿಗೆ ಪ್ರಕೃತಿಸ್ವರ ಬರುವುದಿಲ್ಲ ಎಂದು ಪ್ರಕೃತದಲ್ಲಿ ತು ಪರದಲ್ಲಿರುವುದರಿಂದ ನಿಗೆ ಪ್ರಕೃತಿಸ್ವರ ಬರುವುದಿಲ್ಲ. **ಗತಿಕಾರಕೋ**—, ಎಂದು ಉತ್ತರಪದಕ್ಕೆ ಪ್ರಕೃತಿಸ್ವರ ಬರಬೇಕಾಗುತ್ತೆ. **ವ್ಯತ್ಯಯೋ ಬಹುಲಂ** ಎಂದು ಆದ್ಯುದಾತ್ತ ಬರುತ್ತದೆ.

**ದುರುಕ್ತಾಯ**— **ಸ್ಪೃಹೇರೀಪ್ಸಿತಃ** (ಪಾ. ಸೂ. ೧-೪-೩೬) ಸ್ಪೃಹ ಧಾತುಪ್ರಯೋಗ ಇದ್ದರೆ ಇಷ್ಟವಾದುದಕ್ಕೆ ಸಂಪ್ರದಾನಸಂಜ್ಞೆ ಬರುತ್ತದೆ ಎಂದು ಸಂಪ್ರದಾನಸಂಜ್ಞೆ ಬಂದರೆ **ಚತುರ್ಥೀ ಸಂಪ್ರದಾನೇ** (ಪಾ. ಸೂ. ೨-೩-೧೩) ತಿಙ್‌ಕೃತ್ ತದ್ಧಿತಗಳಿಂದ ಅನಭಿಹಿತವಾದ ಸಂಪ್ರದಾನಕ್ಕೆ ವಾಚಕವಾದ ಪ್ರಾತಿಪದಿಕದ ಮುಂದೆ ಚತುರ್ಥೀವಿಭಕ್ತಿ ಬರುತ್ತೆ ಎಂದು ಚತುರ್ಥೀವಿಭಕ್ತಿ ಬರುವುದು.

**ಸ್ಪೃಹಯೇತ್**—ಸ್ಪೃಹ ಈಪ್ಸಾಯಾಂ, ಚುರಾದಿ. ಅಕಾರಾಂತ ಧಾತು. **ಸತ್ಯಾಪಪಾಶ..ಚುರಾದಿಭ್ಯೋ ಣಿಚ್** (ಪಾ. ಸೂ. ೩-೧-೨೫) ಎಂದು ಣಿಚ್ ಪ್ರತ್ಯಯ. **ಅತೋಲೋಪಃ** ಎಂದು ಅಕಾರಕ್ಕೆ ಲೋಪ. **ಅಚಃ ಪರಸ್ಮಿನ್**—, ಎಂದು ಅಕಾರಲೋಪಕ್ಕೆ ಸ್ಥಾನಿವದ್ಭಾವ. ಲಘೂಪಧಗುಣ ಬರುವುದಿಲ್ಲ. ಲಿಙ್, ತಿಪ್, **ಇತಶ್ಚ** ಎಂದು ಇಕಾರಲೋಪ. ಶಪ್, ಯಾಸುಟ್, ಸುಟ್, ಸಕಾರಗಳೆರಡಕ್ಕೂ ಲೋಪ. ಸ್ಪೃಹಿ+ಅ+ಯಾ+ತ್. ಗುಣ, ಅಯಾದೇಶ, ಸ್ಪೃಹಯ+ಯಾತ್ **ಅತೋಯೇಯಃ** ಎಂದು ಇಯ್ ಆದೇಶವು ಯಾಗೆ ಬರುತ್ತೆ. ಸ್ಪೃಹಯ+ಇಯ್+ತ್, **ಆದ್ಗುಣಃ** ಎಂದು ಗುಣ. **ಲೋಪೋ ವ್ಯೋರ್ವಲಿ** ಎಂದು ಯ್‌ಗೆ ಲೋಪ.

ಇಲ್ಲಿಗೆ ೪೧ನೆಯ ಸೂಕ್ತ ಮುಗಿದುದು.

# ನಲವತ್ತೆರಡನೆಯ ಸೂಕ್ತವು

**ಸಂ ಪೂಷನ್ನಿತಿ ದಶರ್ಚಂ ಸಪ್ತಮಂ ಸೂಕ್ತಂ ಕಾಣ್ವಂ ಗಾಯತ್ರಂ ಪೂಷದೇವತಾಕಂ । ಸಂ ಪೂಷನ್ದಶ ಪೌಷ್ಣಮಿತ್ಯನುಕ್ರಾಂತಂ । ಸ್ಮಾರ್ತೇ ಮಹಾಂತಮಧ್ವಾನಮೇಷ್ಯನ್ನಿದಂ ಸೂಕ್ತಂ ಜಪೇತ್ । ಸಂಪೂಷನ್ನಧ್ವನ ಇತಿ ಮಹಾಂತಮಧ್ವಾನಮೇಷ್ಯನ್ ಪ್ರತಿಭಯಂ ವಾ । ಆ. ಗೃ. ೩-೭-೧೦ । ಇತಿ ಸೂತ್ರಿತತ್ವಾತ್ । ತತ್ರ ಜಪೇದಿತ್ಯನುವರ್ತತೇ ॥**

ಅನುವಾದವು— **ಸಂಪೂಷನ್** ಎಂಬುದು ಈ ಎಂಟನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವುವು. ಘೋರಪುತ್ರನಾದ ಕಣ್ವನು ಋಷಿಯು, ಪೂಷನು ದೇವತೆಯು, ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಸಂಪೂಷನ್ ದಶ ಪೌಷ್ಣಂ** ಎಂದು ಹೇಳಿರುವುದು. ಸ್ಮಾರ್ತಪ್ರಯೋಗದಲ್ಲಿ, ಅಥವಾ ಲೋಕ ವ್ಯವಹಾರದಲ್ಲಿ- ದೂರದೇಶಗಮನಕಾಲದಲ್ಲಿ, ಅಥವಾ ದೂರವಾಗಿ ಹೋಗಬೇಕಾದ ಸಂದರ್ಭದಲ್ಲಿ, ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನ ಗೃಹ್ಯಸೂತ್ರದಲ್ಲಿ **ಸಂಪೂಷನ್ನಧ್ವನ ಇತಿ ಮಹಾಂತಮಧ್ವಾನಮೇಷ್ಯನ್ ಪ್ರತಿಭಯಂ** ವಾ ಎಂಬ ಸೂತ್ರದಿಂದ (ಆ. ಗೃ. ೩-೭-೧೦) ವಿವೃತವಾಗಿರುವುದು. ಆದುದರಿಂದ ಮೇಲೆ ಹೇಳಿದ ಸಂದರ್ಭಗಳಲ್ಲಿ ಈ ಸೂಕ್ತವನ್ನು ಜಪಿಸಬೇಕು.

॥ ಓಂ ॥

## ಸೂಕ್ತ—೪೨

॥ ಮಂಡಲ—೧ ॥ ಅನುವಾಕ—೮ ॥ ಸೂಕ್ತ—೪೨ ॥

॥ ಅಷ್ಟಕ—೧ ॥ ಅಧ್ಯಾಯ—೩ ॥ ವರ್ಗ—೨೪, ೨೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ- ೧೦ ॥

॥ ಋಷಿಃ— ಕಣ್ವೋ ಘೌರಃ ॥

॥ ದೇವತಾ— ಪೂಷಾ ॥

॥ ಛಂದಃ—ಗಾಯತ್ರೀ ॥

ಸಂಹಿತಾಪಾಠಃ

ಸಂ ಪೂಷನ್ನಧ್ವನಸ್ತಿರ ವ್ಯಂಹೋ ವಿಮುಚೋ ನಪಾತ್ ।
ಸಕ್ಷ್ವಾ ದೇವ ಪ್ರ ಣಸ್ಪುರಃ ॥೧॥

॥ ಪದಪಾಠಃ ॥

ಸಂ । ಪೂಷನ್ । ಅಧ್ವನಃ । ತಿರ । ವಿ । ಅಂಹಃ । ವಿಽಮುಚಃ । ನಪಾತ್ ।
ಸಕ್ಷ್ವ । ದೇವ । ಪ್ರ । ನಃ । ಪುರಃ ॥೧॥

॥ ಸಾಯಣಭಾಷ್ಯಂ ॥

ಹೇ ಪೂಷನ್ ಜಗತ್ಪೋಷಕ ಪೃಥಿವ್ಯಭಿಮಾನಿ ದೇವ ಅಧ್ವನೋ ಮಾರ್ಗಾತ್ಸಂ ತಿರ । ಅಸ್ಮಾನಭೀಷ್ಟಸ್ಥಾನಂ ಸಮ್ಯಕ್ ಪ್ರಾಪಯ । ಅಂಹೋ ವಿಘ್ನಹೇತುಂ ಪಾಪ್ಮಾನಂ ವಿ ತಿರ । ವಿನಾಶಯ । ಪೂಷಾ ವಿಶೇಷ್ಯತೇ । ವಿಮುಚೋ ನಪಾತ್ ಜಲವಿಮೋಚಕಹೇತೋರ್ಮೇಘಸ್ಯ ಪುತ್ರ । ನಪಾದಿತಿ ಪುತ್ರನಾಮ । ನಪಾತ್ಪ್ರಜೇತಿ ತನ್ನಾಮಸು ಪಾಠಾತ್ । ಶ್ರುತ್ಯಂತರೇಽದ್ಭ್ಯಃ ಪೃಥಿವೀತಿ ಜಲಾದ್ಭೂಮ್ಯುತ್ಪತ್ತಿಃ ಶ್ರೂಯತೇ । ತಥಾನ್ಯತ್ರಾಪ್ಯುದಕಸಾರತ್ವಂ ಪೃಥಿವ್ಯಾಃ ಶ್ರೂಯತೇ । ತದ್ಯದಪಾಂ ಸಾರ ಅಸೀತ್ತತ್ಸಮಹನ್ಯತ ಸಾ ಪೃಥಿವ್ಯಭವದಿತಿ । ಮೇಘಸ್ಯ ಜಲಧಾರಿತ್ವಾದುದಕಪುತ್ರ ಏವ ಮೇಘಪುತ್ರೋ ಭವತಿ । ನ ಚ ಪೃಥಿವ್ಯಾ ಮೇಘಪುತ್ರತ್ವೇ ಪೂಷ್ಣಃ ಕಿಮಾಯಾತಮಿತಿ ವಾಚ್ಯಂ । ಪೃಥಿವ್ಯಾ ಏವ ಪೂಷತ್ವಾತ್ । ತಥಾ ಚ ಶ್ರುತ್ಯಂತರೇ ಕಸ್ಯಚಿನ್ಮಂತ್ರಸ್ಯ ಬ್ರಾಹ್ಮಣಮೇವಮಾಮ್ನಾಯತೇ । ಪೂಷಾಧ್ವನಃ ಪಾತ್ವಿತ್ಯಾಹೇಯಂ ವೈ ಪೂಷೇತಿ । ತನ್ನಿರ್ವಚನಂ ಚಾನ್ಯತ್ರೈವಮಾಮ್ನಾಯತೇ । ಇಯಂ ವೈ ಪೂಷೇಯಂ ಹೀದಂ ಸರ್ವಂ ಪುಷ್ಯತಿ ಯದಿದಂ ಕಿಂ ಚ । ಶತ. ಬ್ರಾ. ೧೪-೪-೨-೨೫ । ಇತಿ । ಹೇ ದೇವ ಪೂಷನ್ ನಃ ಪುರೋಽಸ್ಮಾಕಂ ಪುರತಃ ಪ್ರ ಸಕ್ಷ್ವ । ಪ್ರಸಕ್ತೋ ಭವ । ಪುರತೋ ಗಚ್ಛೇತ್ಯರ್ಥಃ । ವಿಮುಚೋ ನಪಾತ್ । ಉದಕಂ ವಿಮುಂಚತೀತಿ ವಿಮುಗ್ಮೇಘಃ । ಕ್ವಿಪ್ಚೇತಿ ಕ್ವಿಪ್ । ನ ಪಾತಯತಿ ಕುಲಮಿತಿ ನಪಾತ್ ಪುತ್ರಃ । ನಞ್ಪೂರ್ವಾತ್ ಪಾತಯತೇಃ ಕ್ವಿಪ್ । ನಭ್ರಾಣ್ನಪಾದಿತ್ಯಾದಿನಾ ನಞಃ ಪ್ರಕೃತಿಭಾವಃ । ಸುಬಾಮಂತ್ರಿತ ಇತಿ ಪರಾಂಗವದ್ಭಾವಾತ್ ಷಷ್ಠ್ಯಾಮಂತ್ರಿತಸಮುದಾಯಸ್ಯಾಷ್ಟಮಿಕಂ ಸರ್ವಾನುದಾತ್ತತ್ವಂ । ಸಕ್ಷ್ವ । ಷಚ ಸೇವನೇ । ಅನುದಾತ್ತೇತ್ತ್ವಾದಾತ್ಮನೇಪದಂ । ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ತಾಸ್ಯನುದಾತ್ತೇದಿತಿ ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಪ್ರ ಣಃ । ಉಪಸರ್ಗಾದ್ಬಹುಲಮಿತಿ ನಸೋ ಣತ್ವಂ । ಪುರಃ । ಉಕ್ತಂ ॥

॥ ಪ್ರತಿಪದಾರ್ಥ ॥

**ಪೂಷ—** ಲೋಕಪೋಷಕನಾಗಿಯೂ ಪೃಥಿವ್ಯಭಿಮಾನಿದೇವತೆಯಾಗಿಯೂ ಇರುವ ಎಲೈ ಪೂಷದೇವನೇ । **ಅಧ್ವನಃ—**(ಸರಿಯಾದ) ಮಾರ್ಗದಿಂದ । **ಸಂ ತಿರ—**(ನಮ್ಮನ್ನು ಅಭೀಷ್ಟವಾದ ಗಮ್ಯಸ್ಥಾನಕ್ಕೆ) ಕರೆದುಕೊಂಡು ಹೋಗಿ ಸೇರಿಸು । **ಅಂಹಃ—** (ಮಾರ್ಗದಲ್ಲಿ) ವಿಘ್ನಮಾಡತಕ್ಕ ಪಾಪಿಷ್ಠನನ್ನು । **ವಿ ತಿರ—** (ಮಾರ್ಗತಪ್ಪಿಸಿ) ನಾಶಮಾಡು । **ವಿಮುಚಃ—** ಮಳೆಯನ್ನು ಸುರಿಸತಕ್ಕ ಮೇಘದ । **ನಪಾತ್—** ಪುತ್ರನಾದ ಪೂಷ ದೇವನೇ । **ನಃ ಪುರಃ—** ನಮ್ಮ ಮುಂದೆ । **ಪ್ರ ಸಕ್ಷ್ವ—** (ಅಭಿಮಾನವಿಟ್ಟು) ಸಂಚರಿಸು.

॥ ಭಾವಾರ್ಥ ॥

ಎಲೈ ಪೂಷದೇವನೇ, ನೀನು ಮಳೆಯನ್ನು ಸುರಿಸಿ ಲೋಕಕ್ಷೇಮವನ್ನುಂಟುಮಾಡುವ ಮೇಘರಾಜನ ಪುತ್ರನು. ನಮ್ಮನ್ನು ಸರಿಯಾದ ಮಾರ್ಗದಿಂದ ನಮ್ಮ ಅಭೀಷ್ಟವಾದ ಗಮ್ಯಸ್ಥಾನಕ್ಕೆ ಕರೆದುಕೊಂಡು ಹೋಗು. ದಾರಿಯಲ್ಲಿ ನಮಗೆ ಹಿಂಸೆ ಮಾಡತಕ್ಕ ಪಾಪಿಷ್ಠನಾದ ಶತ್ರುವನ್ನು ದಾರಿತಪ್ಪಿಸಿ ನಾಶಮಾಡು. ನಮ್ಮಲ್ಲಿ ಅಭಿಮಾನ ವನ್ನಿಟ್ಟು ನಮ್ಮ ಮುಂದೆ ಮಾರ್ಗದರ್ಶಕನಾಗಿ ಸಂಚರಿಸು.

English Translation

O Pushan, lead us over the road, remove the wicked obstructer of the way ; son of the cloud, go before us. (as a guide)

ವಿಶೇಷವಿಷಯಗಳು

ಈ ಸೂಕ್ತಿನಲ್ಲಿ ಪೂಷಾ ಎಂಬ ದೇವತೆಯ ವಿಷಯವಾಗಿ ಭಾಷ್ಯಕಾರರು ಕೆಲವು ಅಂಶಗಳನ್ನು ವಿವರಿಸಿರುವರು

ಈ ಪೂಷಾ ಎಂಬ ದೇವತೆಯು ಮಾರ್ಗಗಳಿಗೆ ಅಧಿಪತಿಯು. ಮಾರ್ಗದಲ್ಲಿ ದೂರಪ್ರದೇಶಕ್ಕೆ ಹೋಗುವಾಗ ಎಂದರೆ ದೂರಪ್ರಯಾಣಮಾಡುವಾಗ ಈ ದೇವತೆಯ ಸಂಬಂಧವಾದ ಮಂತ್ರವನ್ನು ಜಪಿಸಿ ಹೊರಟರೆ ಮಾರ್ಗದಲ್ಲಿ ತೊಂದರೆಗಳಿಲ್ಲದಂತೆ ಸುಖವಾಗಿ ಗಮ್ಯಸ್ಥಾನವನ್ನು ಸೇರಬಹುದು ಎಂದು ಹೇಳಿರುವರು. ಈ ವಿಷಯದಲ್ಲಿ **ಪೂಷಾಽಧ್ವನಃ ಪಾತ್ವಿತ್ಯಾಹ । ಇಯಂ ವೈ ಪೂಷಾ ।** ಎಂದು ಶ್ರುತಿವಾಕ್ಯವಿರುವುದು.

**ವಿಮುಚಃ ನಪಾತ್— ಉದಕಂ ವಿಮುಂಚತೀತಿ ವಿಮುಙ್ಮೇಘಃ । ನ ಪಾತಯತಿ ಕುಲಮಿತಿ ನಪಾತ್ ಪುತ್ರಃ । ನಪಾದಿತಿ ಪುತ್ರನಾಮ ॥** ಉದಕವನ್ನು ಸುರಿಸುವುದರಿಂದ ಮೇಘಗಳಿಗೆ ವಿಮುಕ್ ಎಂದು ಹೆಸರು ಕುಲವನ್ನು ನಾಶಮಾಡದೆ ವೃದ್ಧಿಪಡಿಸಿ ಎಂದರೆ ಮುಂದಕ್ಕೆ ಬೆಳಸಿಕೊಂಡು ಹೋಗುವವನಾದ್ದರಿಂದ ಪುತ್ರನಿಗೆ ನಪಾ-ತ್ ಎಂದು ಹೆಸರು. ಇಲ್ಲಿ **ವಿಮುಚೋನಪಾತ್** ಎಂದರೆ ಮೇಘದ ಪುತ್ರನು ಎಂದು ಹೆಸರು. ಇದಲ್ಲದೇ **ಅದ್ಭ್ಯಃ ಪೃಥಿವೀ** ಎಂದು ಉಪನಿಷದ್ವಚನ ಪ್ರಕಾರ ಉದಕಗಳಿಂದ ಪೃಥಿವಿಯು ಉತ್ಪತ್ತಿಯಾಯಿತು ಎಂದೂ, **ತದ್ಯದಪಾಂ**

**ಸಾರ ಆಸೀತ್ತತ್ಸಮಹನ್ಯತ ಸಾ ಪೃಥಿವ್ಯಭವತ್ ।** ನೀರಿನಲ್ಲಿರುವ ಸಾರಭೂತವಾದುದನ್ನೆಲ್ಲಾ ಒಟ್ಟುಗೂಡಿಸಲು ಅದು ಪೃಥಿವಿಯಾಯಿತು ಎಂದೂ ಶ್ರುತಿವಾಕ್ಯವಿರುವುದು. ಗೌಃ ಗ್ಮಾ ಮೊದಲಾದ ಇಪ್ಪತ್ತೊಂದು ಪೃಥಿವೀನಾಮಗಳ. ಮಧ್ಯದಲ್ಲಿ ಪೂಷಾ ಎಂಬ ಶಬ್ದವು ಪಠಿತವಾಗಿರುವುದರಿಂದ ಪೂಷಾ ಎಂದರೆ ಪೃಥಿವೀ ಎಂದೂ ಅರ್ಥವಾಗುವುದು. ಆದುದರಿಂದ ಪೃಥಿವ್ಯಾ ಏವ ಪೂಷತ್ವಾತ್ ಎಂಬ ವಚನಪ್ರಕಾರ ಪೂಷನು ಪೃಥಿವ್ಯಭಿಮಾನಿದೇವನೆಂದು ಹೇಳಲ್ಪಡುವನು.

ಯಾಸ್ಕಮಹರ್ಷಿಗಳು ಈ ಶಬ್ದದ ವಿಷಯದಲ್ಲಿ—

**ಪೂಷಾ । ಯದ್ರಶ್ಮಿಪೋಷಂ ಪುಷ್ಯತಿ ತತ್ ಪೂಷಾ ಭವತಿ** (ನಿ. ೧೨-೧೬)

ಎಂದರೆ ರಶ್ಮಿಗಳಿಂದ ಪೋಷಿಸುವವನಾದ್ದರಿಂದ ಈ ದೇವನಿಗೆ ಪೂಷಾ ಎಂದು ಹೆಸರು ಎಂದು ಹೇಳಿರುವರು. ಶತಪಥ ಬ್ರಾಹ್ಮಣದಲ್ಲಿಯೂ ಸಹ—

**ಇಯಂ ವೈ ಪೂಷಾ ಪೂಷೇಯಂ ಹೀದಂ ಸರ್ವಂ ಪುಷ್ಯತಿ ಯದಿದಂ ಕಿಂಚ ।**
(ಶತ. ಬ್ರಾ. ೧೪-೪-೨-೨೫)

ಈ ಪೂಷನೆಂಬ ದೇವತೆಯು ಎಲ್ಲವನ್ನೂ ಪೋಷಿಸುವವನು ಆದ್ದರಿಂದ ಪೂಷನೆಂದು ಕರೆಯಲ್ಪಡುವನು ಎಂದು ಹೇಳಿರುವುದು. ಈ ವಿಧವಾದ ಅರ್ಥವು ಪೂಷನು ದ್ವಾದಶಾದಿತ್ಯರಲ್ಲಿ ಒಬ್ಬನೆಂಬ ವಿಷಯವನ್ನು ಸಮರ್ಥಿಸುವುದು.

ಪೂಷದೇವನ ಗುಣಗಳು ನಾನಾ ಬಗೆಯಾಗಿದ್ದು ಅವೆಲ್ಲಾ ಅವನ ಬೇರೆ ಬೇರೆ ಸ್ವರೂಪಗಳನ್ನು ತೋರಿಸುವುದರಿಂದ ಅವನ ಮೂಲಸ್ವರೂಪವು ಹೀಗೆಯೇ ಎಂದು ನಿರ್ದಿಷ್ಟವಾಗಿ ಹೇಳಲು ಕಷ್ಟವಾಗುತ್ತದೆ. ಈಚಿನ ವಿಮರ್ಶಕರಿಗೆ ಇದೊಂದು ಜಟಿಲವಾದ ಪ್ರಶ್ನೆಯಾಗಿದೆ. ಈ ಅಭಿಪ್ರಾಯಗಳ ವೈವಿಧ್ಯವನ್ನು ತಿಳಿಯುವ ಮೊದಲು ಸಂಹಿತೆಯಲ್ಲಿ ಈ ದೇವತೆಗೆ ಯಾವ ಪ್ರಾಶಸ್ತ್ಯವಿದೆಯೆಂದು ತಿಳಿಯುವುದು ಅವಶ್ಯಕ.

ಪೂಷದೇವತಾಸ್ತೋತ್ರದ ಮುಖ್ಯಭಾಗವು ಋಗ್ವೇದದ ಆರನೆಯ ಮಂಡಲದಲ್ಲಿ ೫೩ರಿಂದ ೫೮ನೆಯ ಸೂಕ್ತದವರೆಗೂ ಅಡಕವಾಗಿದೆ. ಭಾರದ್ವಾಜಸಂತತಿಯ ಋಷಿಗಳು ಪೂಷದೇವನನ್ನು ಮುಖ್ಯದೇವತೆಯಾಗಿಟ್ಟುಕೊಂಡಿದ್ದರೆಂದು ತಿಳಿಯಬರುತ್ತದೆ. ಈ ಭಾಗವನ್ನು ಕೆಲವು ವಿದ್ವಾಂಸರು " ಪೂಷಸಂಹಿತಾ " ಎಂದೇ ಕರೆಯುತ್ತಾರೆ. ಇದಲ್ಲದೇ ಸಂಹಿತೆಯ ಇತರ ಭಾಗಗಳಲ್ಲೂ ಸಹ ಇಂದ್ರ, ಸೋಮ ಇತ್ಯಾದಿ ಇತರ ದೇವತೆಗಳ ಜೊತೆಯಲ್ಲಿಯೂ ಪೂಷನು ಪ್ರಾರ್ಥಿತನಾಗುತ್ತಾನೆ.

**ರಥೀತಮಂ ಕಪರ್ದಿನಮೀಶಾನಂ ರಾಧಸೋ ಮಹಃ ।**
( ಋ. ಸಂ. ೬-೫೫-೨ )

**ಯಾ ತೇ ಅಷ್ಟ್ರಾ ಗೋಓಪಶಾಘೃಣೇ ಪಶುಸಾಧನೀ ॥**
( ಋ. ಸಂ. ೬-೫೩-೯ )

**ಯ ಏನಮಾದಿದೇಶತಿ ಕರಂಭಾದಿತಿ ಪೂಷಣಂ ॥**

( ಋ. ಸಂ. ೬-೫೬-೧ )

**ರಾಯೋ ಧಾರಾಸ್ಯಾಘೃಣೇ ವಸೋರಾಶಿರಜಾಶ್ವ ॥**

( ಋ. ಸಂ. ೬-೫೫-೩ )

ಈ ಋಕ್ಕುಗಳಲ್ಲಿ ಕಪರ್ದೀ, ಪಶುಸಾಧನೀ, ಅಷ್ಟ್ರಾ, ಕರಂಭಾದ್, ಅಜಾಶ್ವ ಇತ್ಯಾದಿವರ್ಣನೆಗಳೆಲ್ಲವೂ ನಮಗೆ ಪೂಷನ ನಿರ್ದಿಷ್ಟವಾದ ಒಂದು ಚಿತ್ರವನ್ನು ಕೊಡುತ್ತವೆ. ಇತರ ದೇವತೆಗಳೊಡನೆ ಸೇರಿರುವ ಸಾಧಾರಣಗುಣಗಳ ಜೊತೆಗೆ ಈ ಆರನೆಯ ಮಂಡಲದಲ್ಲಿ ಪೂಷನ ಒಂದು ವಿಶೇಷವಾದ ಅಂಶಕ್ಕೆ ಪ್ರಾಮುಖ್ಯವು ಇದ್ದಂತೆ ಕಾಣುತ್ತದೆ. ಇವನು ಪಶುಪಾಲಕ ದೇವತೆಯೆಂದೂ, ಈ ದೇವತೆಯ ಅನುಗ್ರಹದಿಂದಲೇ ಆರಾಧಕರ ಪಶುಸಂಪತ್ತು ಹೆಚ್ಚ ಬೇಕೆಂದೂ, ದಾರಿತಪ್ಪಿಸಿಕೊಂಡ ಗವಾದಿಗಳಿಗೆ ಇವನೇ ರಕ್ಷಕನೆಂದೂ ವಿಶದವಾಗಿ ಉಕ್ತವಾಗಿರುವುದು.

**ಪೂಷಾ ಗಾ ಅನ್ವೇತು ನಃ ಪೂಷಾ ರಕ್ಷತ್ವರ್ವತಃ ।**
**ಪೂಷಾ ವಾಜಂ ಸನೋತು ನಃ ॥**

( ಋ. ಸಂ. ೬-೫೪-೫ )

**" ಮಾಕಿರ್ನೇಶನ್ಮಾಕೀಂ ರಿಷನ್ಮಾಕೀಂ ಸಂ ಶಾರಿ ಕೇವಟೇ " ॥**

( ಋ. ಸಂ. ೬-೫೪-೭ )

ಈ ಬಗೆಯಲ್ಲಿ ನಾನಾ ವಿಧವಾಗಿ ಪ್ರಾರ್ಥಿಸಿ ತಮ್ಮ ಪಶುಸಂಪತ್ತನ್ನು ವೃದ್ಧಿಮಾಡಬೇಕೆಂದು ಪ್ರಾರ್ಥಿಸುತ್ತಾರೆ ಈ ಭರದ್ವಾಜ ಸಂತತಿಯವರು ಒಂದೆಡೆ ನೆಲೆಯಾಗಿ ನಿಲ್ಲದೇ ಪದೇ ಪದೇ ಸಂಚಾರಗಳನ್ನಿಟ್ಟುಕೊಂಡಿದ್ದರೆಂದೂ, ತಮ್ಮ ಸಂಚಾರಕಾಲದಲ್ಲಿ ಪೂಷನನ್ನೇ ಮಾರ್ಗದರ್ಶಕನನ್ನಾಗಿಯೂ ರಕ್ಷಕನನ್ನಾಗಿಯೂ ಭಾವಿಸಿದ್ದರೆಂದೂ ಆಧುನಿಕ ವಿಮರ್ಶಕಾರರು ಊಹಿಸುತ್ತಾರೆ. ಪ್ರಸಕ್ತಸೂಕ್ತದ ೧, ೨, ೭ನೇ ಋಕ್ಕುಗಳಲ್ಲಿ ಪೂಷದೇವನು ಮಾರ್ಗ ರಕ್ಷಕನಾಗಿ ಪ್ರಾರ್ಥಿತನಾಗಿರುವುದರಿಂದಲೂ " ಪಥಸ್ಪತೇ " ಎಂಬ ವಿಶೇಷಣವನ್ನೇ ಪ್ರಧಾನವಾಗಿ ಉಪಯೋಗಿಸಿರು ವುದರಿಂದಲೂ ಈ ಊಹೆಗೆ ಅವಕಾಶವಿದೆ. ಈ ಅಂಶದಲ್ಲಿ ಇತರ ದೇವತೆಗಳಿಗಿಂತಲೂ ಪೂಷನಲ್ಲಿ ಒಂದು ವೈಶಿಷ್ಟ್ಯ ವಿರುವುದರಿಂದ ಪೂಷನು ಇತರ ದೇವತೆಗಳ ಗುಂಪಿಗೆ ಸೇರದೇ ತಾನೇ ಒಂದು ಪ್ರತ್ಯೇಕವಾದ ಸ್ಥಾನವನ್ನು ಹೊಂದಿರು ತ್ತಾನೆಂಬುದು ಅವರಮತ

ಆದರೆ ವೈದಿಕ ಸಂಪ್ರದಾಯವು ಈ ಅಭಿಪ್ರಾಯಕ್ಕೆ ವಿರುದ್ಧವಾಗಿದೆ. ಯಾಸ್ಕರು ಪೂಷನನ್ನು ದ್ವಾದಶಾದಿತ್ಯ ರಲ್ಲಿ ಒಬ್ಬನೆಂದು ಪರಿಗಣಿಸುತ್ತಾರೆ. ಬೃಹದ್ದೇವತೆಯಲ್ಲೂ ಇದೇ ಅಭಿಪ್ರಾಯವು ಕಂಡುಬರುತ್ತದೆ. ಮ್ಯಾಕ್ಸ್‌ಮುಲ್ಲರ್ ಮುಂತಾದ ವಿದ್ವಾಂಸರ ಅಭಿಪ್ರಾಯವೂ ಇದಕ್ಕೇ ಮನ್ನಣೆ ಕೊಡುತ್ತದೆ. ಬ್ಲೂಂಫೀಲ್ಡ್ ಎಂಬ ವಿದ್ವಾಂಸ ನಂತೂ ಋ. ಸಂ. ೬-೪೮-೧೬ , ೬-೫೩-೩ ; ೬-೫೫-೧ ರಿಂದ ಎಂಬ ೩ ಋಕ್ಕುಗಳಲ್ಲಿರುವ ಆಘೃಣಿ ಎಂಬ ಒಂದು ಪದದ ಆಧಾರದಮೇಲೆ ಪೂಷನು ಜ್ಯೋತಿಯನ್ನು ಬೆಳಗುವ ಆದಿತ್ಯ ದೇವತೆ ಎಂದು ಪ್ರತಿಪಾದಿಸುತ್ತಾನೆ. ಈ ಅಭಿಪ್ರಾಯವನ್ನು ವಿರೋಧಿಸುವವರ ವಿಚಾರಕ್ರಮವೇ ಒಂದು

ರೀತಿಯಾಗಿದೆ "ಆಘೃಣಿ" ಎಂಬ ಪದವು ಕೇವಲತೇಜಸ್ಸಿಗೆ ಸಂಬಂಧಪಟ್ಟಿದೆಂದೂ, ತೇಜೋಮಯನಾದ ಯಾವ ದೇವತೆಯಾದರೂ ಆಗಬಹುದೆಂದೂ, ಆದಿತ್ಯನೇ ಆಗಬೇಕೆಂಬ ನಿರ್ಬಂಧವಿಲ್ಲವೆಂದೂ, ಉದಾಹರಣೆಗಾಗಿ ( ಋ. ಸಂ. ೮-೬೦-೨೦ ) ಅಗ್ನಿಗೂ ಈ ವಿಶೇಷಣವಿದೆಯೆಂದೂ, ಆದ್ದರಿಂದ ಈ ಒಂದು ವಿಶೇಷಣದಿಂದ ಪೂಷನನ್ನು ಆದಿತ್ಯದೇವತೆ ಎಂದು ನಿಷ್ಕರ್ಷಿಸಲು ಸಾಧ್ಯವಿಲ್ಲವೆಂದೂ ಚರ್ಚಿಸುತ್ತಾರೆ. ಇದೇ ರೀತಿಯಲ್ಲಿ ವೈದಿಕ ಮತ್ತು ಇತರ ವಿದ್ವಾಂಸರು ಪೂಷನನ್ನು ಆದಿತ್ಯದೇವತೆ ಎಂದು ಪ್ರತಿಪಾದಿಸಲು ಇತರ ಯಾವ ಯಾವ ವಿಶೇಷಣಗಳನ್ನು ತೆಗೆದುಕೊಂಡು ಚರ್ಚಿಸುತ್ತಾರೆಯೋ ಆ ವಿಶೇಷಣಗಳೆಲ್ಲವೂ ಆದಿತ್ಯಪರವಾಗಿ ಮಾತ್ರ ಇರಬೇಕಾಗಿಲ್ಲ, ದೇವತೆಗಳೆಲ್ಲರಿಗೂ ಅನ್ವಯಿಸಬಹುದೆಂದು ವಿರೋಧಿಸುತ್ತಾರೆ.

ಆದರೆ ಈವಿರೋಧಾಭಿಪ್ರಾಯವನ್ನು ಸೂಚಿಸುವುದರಲ್ಲೂ ಕೆಲವು ಆಧಾರಗಳನ್ನು ತೋರಿಸಿ ತಮ್ಮ ಪಕ್ಷವನ್ನು ಪ್ರತಿಪಾದಿಸುತ್ತಾರೆ ಉದಾಹರಣೆಗಾಗಿ—

**ತಾಭಿರ್ಯಾಸಿ ದೂತ್ಯಾಂ ಸೂರ್ಯಸ್ಯ ಕಾಮೇನ ಕೃತಶ್ರವ ಇಚ್ಛಮಾನಃ ||**

( ಋ. ಸಂ. ೬-೫೮-೩ )

ಇತ್ಯಾದಿ ನಾನಾಕಡೆಗಳಿಂದ ಉದಾಹರಣೆಗಳನ್ನು ಕೊಟ್ಟು ಸೂರ್ಯನಿಗೂ ಪೂಷನಿಗೂ ಇರುವ ವ್ಯತ್ಯಾಸವನ್ನು ವಿಶದವಾಗಿ ತೋರಿಸುತ್ತಾರೆ ಅಷ್ಟೇ ಅಲ್ಲದೆ ( ಋ. ಸಂ. ೮-೨೯ ) ರಲ್ಲಿ ವಿಶ್ವೇದೇವತೆಗಳ ಸ್ವರೂಪವನ್ನು ವರ್ಣಿಸುವಾಗ ಪೂಷನಿಗೆ ಸೇರಿರುವ ಸೌರಗುಣದ ವರ್ಣನೆಯೇ ಇರುವುದಿಲ್ಲ. ( ಋ. ಸಂ. ೬-೨೯-೬ ) ಈರೀತಿ ಸಾಂದಾಪ್ರಾಯಿಕವಾಗಿ ಪರಿಗಣಿತವಾದಂತೆ ಪೂಷನು ಆದಿತ್ಯದೇವತೆಯಲ್ಲವೆಂದು ಚರ್ಚಿಸಿ, ಇವನು "ಪಶುಪಾಲಕ" ದೇವತೆಯಾಗಿದ್ದು ತಾನೇ ಒಂದು ವೈಶಿಷ್ಟ್ಯವನ್ನು ಪಡೆದಿರುತ್ತಾನೆಂದು ತೋರಿಸುತ್ತಾರೆ ಈ ಅಭಿಪ್ರಾಯಗಳ ವೈವಿಧ್ಯಗಲ್ಲಿ ಯಾವುದು ಹೆಚ್ಚುಸಮಂಜಸವಾಗಿರುವುದೆಂದು ನಾವು ಬೇರೆಕಡೆ ವಿಶದವಾಗಿ ಚರ್ಚಿಸುತ್ತೇವೆ.

ಪ್ರಕೃತ ಸೂಕ್ತದಲ್ಲಿ ಪೂಷನು **"ಪಥಸ್ಪತಿ"** ಯೆಂಬ ಅಂಶವು ವಿಶದವಾಗಿ ವಿವೃತವಾಗಿರುವುದು. ಇವನು ಮಾರ್ಗರಕ್ಷಕನು ; ಮಾರ್ಗದಲ್ಲಿ ಹಿಂಸಿಸತಕ್ಕ ಕಳ್ಳಕಾಕರನ್ನು ನಾಶಮಾಡಿ ತನ್ನ ಭಕ್ತರನ್ನು ರಕ್ಷಿಸುವವನು ; ಭಕ್ತರಿಗೆ ಸಮೃದ್ಧವಾದ ಅನ್ನ ಸಂಪತ್ತನ್ನು ಕೊಡತಕ್ಕವನು ; ಮತ್ತು ಸಂಪತ್ಪ್ರದವಾದ ದೇಶಕ್ಕೆ ಕರೆದುಕೊಂಡು ಹೋಗಿ ಸೇರಿಸುವವನು ; ಇತ್ಯಾದಿಯಾಗಿ ಪೂಷನ ನಾನಾಸ್ವಭಾವಗಳೂ ಶಕ್ತಿಗಳೂ ವರ್ಣಿತವಾಗಿವೆ. ಈತನು ಸೌಮ್ಯದೇವತೆಯೆಂದೂ ಇವನಲ್ಲಿ ಶಕ್ತಿಸೌಂದರ್ಯಗಳ ಸಾಮರಸ್ಯವಿದೆಯೆಂದೂ ವರ್ಣಿತವಾಗಿದೆ.

**ಸಂ ತಿರ— ಅಸ್ಮಾನಭೀಷ್ಟಸ್ಥಾನಂ ಸಮ್ಯಕ್ ಪ್ರಾಪಯ |** ನಾವು ಹೋಗಿ ಸೇರಬೇಕಾದ ಸ್ಥಳವನ್ನು ಸುರಕ್ಷಿತವಾಗಿ ತಲುಪುವಂತೆ ಮಾಡು.

**ಪ್ರ ಸಶ್ವ ಪುರಃ— ಷಚ ಸೇವನೇ | ಪ್ರಸಕ್ತೋ ಭವ | ಪುರತೋ ಗಚ್ಛೇತ್ಯರ್ಥಃ |** ನಮ್ಮ ಮುಂದೆ ಹೋಗುತ್ತಾ ಮಾರ್ಗದರ್ಶಕನಾಗು.

ವ್ಯಾಕರಣಪ್ರಕ್ರಿಯಾ

**ವಿಮುಚೋ ನಪಾತ್**—ಮುಚ್ಲೃ ಮೋಕ್ಷಣೇ ಧಾತುವಿುಂದೆ **ಕ್ವಿಪ್ ಚ** ಎಂದು ಕ್ವಿಪ್ ಪ್ರತ್ಯಯವು ವಿ ಉಪಸರ್ಗದಿಂದ ಕೂಡಿದಾಗ ಬರುತ್ತೆ. ಷಷ್ಠ್ಯೇಕವಚನದಲ್ಲಿ ವಿಮುಚಃ ಎಂದಾಗುತ್ತದೆ. ವಿಮುಂಚತೀತಿ ವಿಮುಕ್ ನೀರನ್ನು ಹೆಚ್ಚಾಗಿ ಸುರಿಸುವುದು ಎಂದು ವಿಗ್ರಹವಾಕ್ಯದ ಅರ್ಥ. ನೀರನ್ನು ಸುರಿಸುವ ಮೇಘವು ವಿಮುಚ್ ಎಂಬುದರಿಂದ ಬೋಧಿತವಾಗುತ್ತದೆ. ನಪಾತಯತಿ=ಕುಲವನ್ನು ನಾಶಪಡಿಸುವುದಿಲ್ಲ ಎಂದು ವಿಗ್ರಹ ವಾಕ್ಯದ ಅರ್ಥ, ನಪಾತ್‌ಶಬ್ದಕ್ಕೆ ಪುತ್ರ ಎಂದು ಅರ್ಥ. **ನ ಪಾತ್ ಪ್ರಜಾ** ಎಂದು ಯಾಸ್ಕರು ಹೇಳಿರುವರು. ಪತಧಾತುಪ್ರಕೃತಿಕಣಿಜಂತದ ಮುಂದೆ ಕ್ವಿಪ್. ಣಿಲೋಪ, ಉಪಧಾವೃದ್ಧಿ. **ನಭ್ರಾಣ್ನಪಾತ್—,** ಎಂದು ನಞ್‌ಗೆ ಪ್ರಕೃತಿಭಾವ. **ಸುಬಾಮನ್ತ್ರಿತೇ ಪರಾಂಗವತ್ಸ್ವರೇ** ಎಂಬುದರಿಂದ ವಿಮುಚಃ ಎಂಬುದು ನಪಾತ್ ಎಂಬ ಆಮನ್ತ್ರಿತಕ್ಕೆ ಅಂಗವಾಗುತ್ತದೆ. ಆದ್ದರಿಂದ ವಿಮುಚೋ ನಪಾತ್ ಎಂಬುದಕ್ಕೆ **ಆಮನ್ತ್ರಿತಸ್ಯ ಚ** ಎಂಬ ಎಂಟನೇ ಅಧ್ಯಾಯದ ಸೂತ್ರದಿಂದ ಸರ್ವಾನುದಾತ್ತ ಬರುತ್ತದೆ.

**ಸಕ್ಷ್ವ**—ಷಚ ಸೇವನೇ ಅನುದಾತ್ತೇತ್, **ಅನುದಾತ್ತಙಿತ ಆತ್ಮನೇಪದಂ** ಎಂದು ಆತ್ಮನೇಪದ ಬರುತ್ತೆ. ಲೋಟ್, **ಬಹುಲಂ ಛಂದಸಿ** ಎಂದು ಶಪ್‌ಗೆ ಲುಕ್, ಥಾಸ್, ಸೇ ಆದೇಶ. **ಸವಾಭ್ಯಾಂವಾಮೌ** ಎಂದು ಏಗೆ ವಕಾರ. ಸಚ್+ಸ್ವ. **ಚೋಃ ಕುಃ** ಎಂದು ಚ್‌ಗೆ ಕ್ ಬರುತ್ತೆ. **ಆದೇಶಪ್ರತ್ಯಯಯೋಃ** ಎಂದು ಷತ್ವ. **ತಾಸ್ಯನುದಾತ್ತೇತ್** ಎಂದು ಸ್ವ ಅನುದಾತ್ತ.

**ಪ್ರಣಃ—ಉಪಸರ್ಗಾದ್ಬಹುಲಮ್** (ಪಾ. ಸೂ. ೮-೪-೨೮) ಉಪಸರ್ಗದಲ್ಲಿರುವ ರೇಫ ಪಕಾರಗಳ ಮುಂದೆ ಇರುವ ನಸ್‌ನ ನಕಾರಕ್ಕೆ ಣತ್ವ ಬರುತ್ತೆ ಎಂದು ಸೂತ್ರಾರ್ಥ. ಯದ್ಯಪಿ ಪಾಣಿನಿಮಹರ್ಷಿಗಳು **ಉಪ-ಸರ್ಗಾದನೋತ್ಪರಃ** ಎಂದು ಪಠಿಸಿರುವರು. ಹೀಗೆ ಹೇಳಿದರೆ ' ಪ್ರಣೋನಯ ' ಎಂಬಲ್ಲಿ ಣತ್ವ ಬರದೇ ಹೋಗುತ್ತದೆ. ' ಪ್ರನಃ ಪೂಷಾ ' ಎಂಬಲ್ಲಿ ಣತ್ವ ಬರಬೇಕಾಗುತ್ತೆ. ಈ ಪರಿಯಾದ ದೋಷಗಳಿರುವುದರಿಂದ **ಅನೋತ್ಪರಃ** ಎಂಬುದನ್ನು ತಳ್ಳಿ, ಬಹುಲಂ ಎಂಬುದನ್ನು ಸೂತ್ರಕ್ಕೆ ಮಹಾಭಾಷ್ಯಕಾರರು ಸೇರಿಸಿರುವರು. ಇದರಿಂದ ಣತ್ವ ಬಂದರೆ ಪ್ರಣಃ ಎಂದಾಗುತ್ತೆ.

**ಪುರಃ**—(ಋ ಸಂ. ೧-೪೧-೩) ರಲ್ಲಿ ವಿವರಿಸಿದೆ. ||೧||



|| ಸಂಹಿತಾಪಾಠಃ ||

ಯೋ ನಃ ಪೂಷನ್ನಘೋ ವೃಕೋ ದುಃಶೇವ ಆದಿದೇಶತಿ ।
ಅಪ ಸ್ಮ ತಂ ಪಥೋ ಜಹಿ ॥ ೨ ॥

॥ ಪದಪಾಠಃ ॥

ಯಃ । ನಃ । ಪೂಷನ್ । ಅಘಃ । ವೃಕಃ । ದುಃಽಶೇವಃ । ಆಽದಿದೇಶತಿ ।
ಅಪ । ಸ್ಮ । ತಂ । ಪಥಃ । ಜಹಿ ॥ ೨ ॥

॥ ಸಾಯಣಭಾಷ್ಯಂ ॥

ಹೇ ಪೂಷನ್ ಯಃ ಪ್ರತಿಪಕ್ಷೀ ನೋಽಸ್ಮಾನಾದಿದೇಶತಿ ಅನೇನ ಮಾರ್ಗೇಣ ಗಂತವ್ಯಮಿತ್ಯೇವ-ಮಾಜ್ಞಾಪಯತಿ । ಕೀದೃಶಃ । ಅಘ ಆಹಂತಾ ವೃಕೋಽಸ್ಮದೀಯಸ್ಯ ಧನಸ್ಯಾದಾತಾ । ಅಪಹರ್ತೇ-ತ್ಯರ್ಥಃ । ದುಃಶೇವಃ ಸೇವಿತುಂ ದುಃಶಕೋ ದುಷ್ಟಸುಖೋ ವಾ । ತಂ ತಾದೃಶಂ ಪ್ರತಿಪಕ್ಷಿಣಂ ಪಥೋ ಮಾರ್ಗಾದಪಜಹಿ ಸ್ಮ । ಅವಶ್ಯಮಪಾಕುರು ॥ ವೃಕಃ । ವುಕ ವೃಕ ಆದಾನೇ । ವರ್ಕತ ಇತಿ ವೃಕಃ ಇಗುಪಧಲಕ್ಷಣಃ ಕಃ । ವೃಷಾದಿತ್ವಾದಾದ್ಯುದಾತ್ತತ್ವಂ । ದುಃಶೇವಃ । ದುಷ್ಟಂ ಶೇವಂ ಯಸ್ಯಾಸೌ ದುಃಶೇವಃ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಯದ್ವಾ । ದುಃಖೇನ ಸೇವ್ಯತ ಇತಿ ದುಃಶೇವಃ । ವರ್ಣವ್ಯತ್ಯಯೇನ ಸಕಾರಸ್ಯ ಶಕಾರಃ । ಈಷದ್ದುಃಸುಷ್ವಿತಿ ಖಲ್ । ಲಿತ್ಸ್ವ-ರೇಣ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ಆದಿದೇಶತಿ । ದಿಶ ಅತಿಸ-ರ್ಜನೇ । ಲೇಟ್ಯಡಾಗಮಃ । ಬಹುಲಂ ಛಂದಸೀತಿ ಶಪಃ ಶ್ಲುಃ । ಬಹುಲಂ ಛಂದಸೀತಿ ವಕ್ತವ್ಯಂ ಪಾ. ೭-೩-೮೭-೨ । ಇತಿ ವಚನಾನ್ನಾಭ್ಯಸ್ತಸ್ಯಾಚೀತಿ ಲಘೂಪಧಗುಣಪ್ರತಿಷೇಧಾಭಾವಃ । ಪಥಃ ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ ॥

ಪ್ರತಿಪದಾರ್ಥ

**ಪೂಷನ್**— ಎಲೈ ಪೂಷದೇವನೇ । **ಅಘಃ**— ಪಾಪಿಷ್ಠನಾಗಿಯೂ । **ವೃಕಃ**— ನಮ್ಮ ಧನವನ್ನಪಹರಿಸುವ ಕಳ್ಳನಾಗಿಯೂ । **ದುಃಶೇವಃ**— ದುಷ್ಟಕೆಲಸದಲ್ಲಿ ಸಂತೋಷಪಡುವವನಾಗಿಯೂ ಇರುವ । **ಯಃ**— ಯಾವ ವೈರಿಯು । **ನಃ**— ನಮ್ಮನ್ನು । **ಆದಿದೇಶತಿ**—(ಅಪಾಯಕರವಾದ ದಾರಿಯನ್ನು ತೋರಿಸಿ ಈ ಮಾರ್ಗದಿಂದಲೇ ಹೋಗಬೇಕು ಎಂದು) ಅಪ್ಪಣೆಮಾಡುತ್ತಾನೋ । **ತಂ**— ಅಂತಹ ವಿರೋಧಿಯನ್ನು । **ಪಥಃ**— (ನಮ್ಮ ಸರಿಯಾದ) ಮಾರ್ಗದಿಂದ । **ಅಪ ಜಹಿ ಸ್ಮ**— ಖಂಡಿತ ದೂರ ಓಡಿಸು.

ಭಾವಾರ್ಥ

ಎಲೈ ಪೂಷದೇವನೇ, ಪಾಪಿಷ್ಠನೂ, ನಮ್ಮ ಧನವನ್ನಪಹರಿಸುವ ಕಳ್ಳನೂ, ಕೆಟ್ಟ ಕೆಲಸಮಾಡುವುದರಲ್ಲಿ ಸಂತೋಷಪಡುವವನೂ, ನಮ್ಮನ್ನು ಅಪಾಯಕರವಾದ ಮಾರ್ಗದಲ್ಲಿ ಹೋಗುವಂತೆ ನಿರ್ಬಂಧಪಡಿಸುವವನೂ ಆದ ನಮ್ಮ ವಿರೋಧಿಯಾಗ ಪುರುಷನನ್ನು ಬಹಳ ದೂರವಾಗ ಸ್ಥಳಕ್ಕೆ ಓಡಿಸಿ ಅಟ್ಟಿಬಿಡು.

## English Translation

O Pushan, if a wicked person, a robber or one who delights in evil deeds directs us to a wrong way, drive him away to a place far off.

॥ ವಿಶೇಷವಿಷಯಗಳು ॥

**ಅಘಃ—ಆಹಂತಾ । ದುರ್ಜಾತಃ ।** ಕೆಟ್ಟಮನುಷ್ಯನು, ದುಷ್ಟನು.

**ವೃಕಃ—ವೃಕ ಆದಾನೇ । ವರ್ಕತ ಇತಿ ವೃಕಃ । ಅಸ್ಮಾಕಂ ಧನಸ್ಯಾಪಹರ್ತಾ ।** ನಮ್ಮ ಧನವನ್ನು ಅಪಹರಿಸುವ ಕಳ್ಳನು.

**ಆದಿದೇಶತಿ—** (ಇಂತಹ ದಾರಿಗೆ ಹೋಗೆಂದು) ಅಜ್ಞಾಪಿಸುವನು, ದಾರಿತೋರಿಸುವನು directs, points out

**ದುಃಶೇವಃ—ದುಷ್ಟಂ ಶೇವಂ ಯಸ್ಯಾಸೌ ದುಃಶೇವಃ । ಸೇವಿತುಂ ದುಃಶಕೋ ದುಷ್ಟಸುಖೋ ವಾ ।** ಕೆಟ್ಟ ಕೆಲಸಗಳನ್ನು ಮಾಡುವುದರಲ್ಲಿ ಆಸಕ್ತಿ ಅಥವಾ ಸಂತೋಷಪಡುವವನು, ದುರ್ಮಾರ್ಗಪ್ರವರ್ತಕನು,

**ಅಪ ಜಹಿ ಸ್ಮ— ಅಪಾಕುರು ।** ದೂರ ಓಡಿಸು

॥ ವ್ಯಾಕರಣಪ್ರಕ್ರಿಯಾ ॥

**ವೃಕಃ—**ವುಕ ವೃಕ ಆದಾನೇ ಎಂದು ಪಠಿಸಿರುವ ವೃಕಧಾತು ಮುಂದೆ **ಇಗುಪಧಜ್ಞಾಪ್ರೀಕಿರಃ ಕಃ** (ಪಾ. ಸೂ ೩-೧-೧೩೫) ಎಂದು ಕ ಪ್ರತ್ಯಯ. **ಲಘೂಪಧಗುಣಕ್ಕೆ** ನಿಷೇಧವು ಪ್ರತ್ಯಯ ಕಿತ್ ಆದ್ದರಿಂದ ಬರುತ್ತದೆ.

ವರ್ಕತೇ ಇತಿ ವೃಕಃ, ತೆಗೆದುಕೊಳ್ಳುವನು ಅಥವಾ ಸ್ವೀಕರಿಸುವನು ಎಂದು ಅರ್ಥ. **ವೃಷಾದೀನಾಂ ಚ** ಎಂದು ಆದ್ಯುದಾತ್ತ.

**ದುಃ ಶೇವಃ—**ದುರ್ ಉಪಸರ್ಗ. ಶೀಙ್ ಧಾತು ಮುಂದೆ **ಇಣ್‌ಶೀಙ್ ಭ್ಯಾಂ ವಙ್** (ಉ. ಸೂ. ೧-೧೫೭) ಎಂದು ವಙ್ ಪ್ರತ್ಯಯ. ಗುಣ, ದುಷ್ಟಂ ಶೇವಂ ಯಸ್ಯಸಃ ಎಂದು ಬಹುವ್ರೀಹಿ **ಪರಾದಿಶ್ಛಂದಸಿ ಬಹುಲಂ** ಎಂಬುದರಿಂದ ಉತ್ತರಪದಕ್ಕೆ ಅದ್ಯುದಾತ್ತ ಬರುತ್ತದೆ. ಹೀಗೆ ವ್ಯುತ್ಪತ್ತಿ ಹೇಳಿದರೆ ರೂಪನಿಷ್ಪತ್ತಿ ಯಾದರೂ ಅರ್ಥವು ಸಂಯೋಗುವುದಿಲ್ಲ ಇದಕ್ಕಾಗಿ ಬೇರೆವಿಧವಾಗಿ ಪ್ರಕ್ರಿಯೆಯನ್ನು ಹೇಳಬಹುದು. ದುಃಖೇನ ಸೇವ್ಯತೇ ಇತಿ ದುಃಶೇವಃ, ಷೇವೃ ಸೇವನೇಧಾತು. **ಈಷದ್ದುಸ್ಸುಷು ಕೃಚ್ಛ್ರಾಕೃಚ್ಛ್ರಾರ್ಥೇಷು ಖಲ್** ಎಂದು ಖಲ್ ಪ್ರತ್ಯಯ. ಸಕಾರಕ್ಕೆ ಬದಲಾಗಿ ಶಕಾರ. **ಲಿತಿ** ಎಂಬುದರಿಂದ ಪ್ರತ್ಯಯದ ಹಿಂದೆ ಇರುವ ಏಕಾರವು ಉದಾತ್ತ. ಸಮಾಸ ಬಂದಮೇಲೆ **ಗತಿಕಾರಕೋ—,** ಎಂಬ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ

**ಆದಿದೇಶತಿ**—ದಿಶ ಅತಿಸರ್ಜನೇ. ಲೇಟ್. ತಿಪ್. ಆಡಾಗುಮ. **ಬಹುಲಂ ಛಂದಸಿ** ಎಂದು ಶಪ್‌ಗೆ ಶ್ಲು. ದ್ವಿತ್ವ-ಅಭ್ಯಾಸದ ಶ್‌ಗೆ ಲೋಪ. ದಿ ದಿಶ್+ಅತಿ. ಲಘೂಪಧಗುಣ. ಯದ್ಯಪಿ **ನಾಭ್ಯಸ್ತಸ್ಯಾಚಿಪಿತಿ ಸಾರ್ವಧಾತುಕೇ** ( ಪಾ. ಸೂ. ೭-೩-೮೭ ) ಅಜಾದಿಯೂ ಪಿತ್ತೂ ಆದ ಸಾರ್ವಧಾತುಕವು ಪರದಲ್ಲಿದ್ದರೆ ಅಭ್ಯಸ್ತಕ್ಕೆ ಲಘೂಪಧಗುಣ ಬರುವುದಿಲ್ಲ ಎಂದು ಗುಣನಿಷೇಧವು ಪ್ರಾಪ್ತವಾಗುತ್ತೆ. (ದ್ವಿತ್ವ ಹೊಂದಿದ ಶಬ್ದಸಮುದಾಯಕ್ಕೆ ಅಭ್ಯಸ್ತಎಂಬ ಸಂಜ್ಞೆಯು **ಉಭೇ ಅಭ್ಯಸ್ತಮ್** ಎಂಬ ಸೂತ್ರದಿಂದ ವಿಹಿತವಾಗಿದೆ.) ಆದರೂ **ಬಹುಲಂ ಛಂದಸೀತಿ ವಕ್ತವ್ಯಮ್** ( ಪಾ. ಸೂ. ೭-೩-೮೭-೨) ಛಂದಸ್ಸಿನಲ್ಲಿ ಲಘೂಪಧಗುಣಕ್ಕೆ ನಿಷೇಧವು ಬಹುಲವಾಗಿ ಬರುತ್ತೆ ಎಂದು ಹೇಳಬೇಕು ಎಂದು ವಾರ್ತಿಕಾರ್ಥ. ಇಲ್ಲಿ ಬಹುಲಗ್ರಹಣದಿಂದ ಲಘೂಪಧಗುಣಕ್ಕೆ ನಿಷೇಧ ಬರುವುದಿಲ್ಲ.

**ಪಥಃ**—**ಪತೇಃ ಸ್ಥ ಚ** ಎಂದು ಪತ್ಲೃ ಧಾತು ಮುಂದೆ ಇನಿ ಪ್ರತ್ಯಯವೂ ತಕಾರಕ್ಕೆ ಥಕಾರವೂ ಬಂದು ಪಥಿನ್ ಎಂದು ಆಗಿದೆ. ಪ್ರತ್ಯಯ ಸ್ವರದಿಂದ ಇನ್ ಉದಾತ್ತ. **ಭಸ್ಯಟೇರ್ಲೋಪಃ** ಎಂದು ಪಂಚಮೀ ಏಕವಚನ ಙಸಿ ಪರದಲ್ಲಿರುವಾಗ ಇನ್ ಲೋಪ. ಹೀಗೆ ಉದಾತ್ತಲೋಪಕ್ಕೆ ಹೇತುವಾದ ವಿಭಕ್ತಿಗೆ **ಅನುದಾತ್ತಸ್ಯಚ ಯತ್ರೋ—**, ಎಂದು ಉದಾತ್ತ ಬರುತ್ತದೆ. ॥ ೨ ॥

---

॥ ಸಂಹಿತಾಪಾಠಃ ॥

ಅಪ ತ್ಯಂ ಪರಿಪನ್ಥಿನಂ ಮುಷೀವಾಣಂ ಹುರಶ್ಚಿತಂ ।
ದೂರಮಧಿ ಸ್ರುತೇರಜ ॥ ೩ ॥

॥ ಪದಪಾಠಃ ॥

ಅಪ । ತ್ಯಂ । ಪರಿಽಪಂಥಿನಂ । ಮುಷೀವಾಣಂ । ಹುರಃಽಚಿತಂ ।
ದೂರಂ । ಅಧಿ । ಸ್ರುತೇಃ । ಅಜ ॥ ೩ ॥

ಸಾಯಣಭಾಷ್ಯಂ

ತ್ಯಂ ತಾದೃಶಂ ಪೂರ್ವೋಕ್ತಗುಣಯುಕ್ತಂ ಸ್ರುತೇರ್ಮಾರ್ಗಾದಧಿ ದೂರಮತ್ಯಂತದೂರದೇಶಂ ಪ್ರತಿ ಅಪಾಜ । ಅಪಗಮಯ । ಕೀದೃಶಂ । ಪರಿಪಂಥಿನಂ ಮಾರ್ಗಪ್ರತಿಬಂಧಕಂ ಮುಷೀವಾಣಂ ತಸ್ಕರರೂಪಂ । ಮುಷೀವೇತಿ ತಸ್ಕರಸ್ಯ ನಾಮ । ಮುಷೀವಾನ್ ಮಲಿಮ್ಲುಚ ಇತಿ ತನ್ನಾಮಸು ಪಾಠಾತ್ । ಹುರಶ್ಚಿತಂ ಕೌಟಿಲ್ಯಾನಾಂ ಸಂಚೇತಾರಂ॥ ಪರಿಪಂಥಿನಂ। ಛಂದಸಿ ಪರಿಪಂಥಿಪರಿಪರಿಣೌ ಪರ್ಯವಸ್ಥಾತರಿ । ಪಾ. ೮-೨-೮೯ । ಇತಿ ಶತ್ರಾವಭಿಧೇಯ ಇನಿಪ್ರತ್ಯಯಾಂತೋ ನಿಪಾತಿತಃ । ಮುಷೀವಾಣಂ । ಮುಷ ಸ್ತೇಯೇ । ಮೋಷಣಂ ಮುಷಿಃ । ಔಣಾದಿಕೋ ಭಾವೇ ಕಿಪ್ರತ್ಯಯಃ । ಮುಷಿಂ ವನತಿ ಸಂಭಜತ ಇತಿ ಮುಷೀವಾ। ವನ ಷಣ ಸಂಭಕ್ತೌ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ವಿಚ್ಪ್ರತ್ಯಯಃ । ಸರ್ವನಾಮಸ್ಥಾನೇ ಚಾಸಂಬುದ್ಧೌ । ಪಾ. ೬-೪-೮ । ಇತಿ ದೀರ್ಘಃ । ಅನ್ಯೇಷಾಮಪಿ ದೃಶ್ಯತ ಇತಿ ಪೂರ್ವಪದಸ್ಯ ದೀರ್ಘತ್ವಂ । ಹುರಶ್ಚಿತಂ । ಹುರ್ಛಾ ಕೌಟಿಲ್ಯೇ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ರಾಲ್ಲೋಪ ಇತಿ ಛಕಾರಲೋಪಃ । ಹುರಶ್ಚಿನೋತೀತಿ ಹುರಶ್ಚಿತ್ । ಚಿನೋತೇಃ ಕ್ವಿಪಿ ತುಗಾಗಮಃ । ತತ್ಪುರುಷೇ ಕೃತಿ ಬಹುಲಮಿತ್ಯಲುಕ್ । ಕೃದುತ್ತರಪದಪ್ರಕೃತಿಸ್ವರತ್ವಂ । ಸ್ರುತೇಃ । ಸ್ರು ಗತೌ । ಕ್ತಿಚ್ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ । ಚಿತ ಇತ್ಯಂತೋದಾತ್ತತ್ವಂ । ಅಜ । ಅಜ ಗತಿಕ್ಷೇಪಣಯೋಃ ॥

॥ ಪ್ರತಿಪದಾರ್ಥ ॥

**ಪರಿಪಂಥಿನಂ**— ನಮ್ಮ ಮಾರ್ಗಕ್ಕೆ ಪ್ರತಿಬಂಧಕವನ್ನುಂಟುಮಾಡುವವನಾಗಿಯೂ । **ಮುಷೀವಾಣಂ**— ಚೋರರೂಪನಾಗಿಯೂ । **ಹುರಶ್ಚಿತಂ**— ಮೋಸಮಾಡುವವನಾಗಿಯೂ ಇರುವ । **ತ್ಯಂ**— (ಹಿಂದೆ ಹೇಳಿದ ಇನ್ನೂ ಇತರ ದುಷ್ಟಗುಣಗಳುಳ್ಳ) ಆ ನಮ್ಮ ವಿರೋಧಿಯನ್ನು । **ಸ್ರುತೇಃ**— (ನಮ್ಮ) ಮಾರ್ಗದಿಂದ **ಅಧಿ ದೂರಂ**— ಬಹಳ ದೂರ ಪ್ರದೇಶಕ್ಕೆ । **ಅಪ ಅಜ**— ಓಡಿಸಿ ಅಟ್ಟಿಬಿಡು.

ಭಾವಾರ್ಥ

ಎಲೈ ಪೂಷದೇವನೇ ನಮ್ಮ ನೇರವಾದ ಮಾರ್ಗಕ್ಕೆ ಪ್ರತಿಬಂಧಕವನ್ನುಂಟುಮಾಡಿ ನಮ್ಮ ಸಂಚಾರಕ್ಕೆ ಅಡ್ಡಿಮಾಡುವವನೂ, ಚೋರನೂ ಮತ್ತು ಮೋಸಗಾರನೂ ಆದ ನಮ್ಮ ಶತ್ರುವನ್ನು ನಮ್ಮ ಮಾರ್ಗದಿಂದ ಬಹಳ ದೂರಪ್ರದೇಶಕ್ಕೆ ಓಡಿಸಿ ಅಟ್ಟಿಬಿಡು.

English Translation

Drive him far away from the road, the hinderer of our journey, a thief a deceiver.

॥ ವಿಶೇಷವಿಷಯಗಳು ॥

**ತ್ಯಂ**— ತ್ಯ ಶಬ್ದಕ್ಕೆ ತಚ್ಛಬ್ದಾರ್ಥವಿರುವುದು. ತ್ಯಂ ಎಂದರೆ, ಅಂತಹ ಎಂದರ್ಥವು.

**ಪರಿಪಂಥಿನಂ—ಮಾರ್ಗಪ್ರತಿಬಂಧಕಂ** । ದಾರಿಯಲ್ಲಿ ಸಂಚರಿಸುವುದಕ್ಕೆ ಅಡ್ಡಿಪಡಿಸುವವನು, ಮಾರ್ಗ ವಿರೋಧಕನು, hinderer, obstructer

**ಹುರಶ್ಚಿತಂ, ಮುಷೀವಾಣಂ—ಮುಷ ಸ್ತೇಯೇ। ಮೋಷಣಂ ಮುಷಿಃ। ಮುಷಿಂ ವನತಿ ಸಂಭಜತ ಇತಿ ಮುಷೀವಾ ತಂ । ತಸ್ಕರರೂಪಂ ಪುರುಷಂ ।** ಕಳ್ಳನು, ಕದಿಯುವವನು, ತೃಪುಃ ತಕ್ವಾ ಮೊದಲಾದ ಹದಿನಾಲ್ಕು ಸ್ತೇನನಾಮಗಳ ಮಧ್ಯದಲ್ಲಿ ಮುಷೀವಾನ್ ಹುರಶ್ಚಿತ್ ಎಂಬ ಶಬ್ದಗಳು ಪಠಿತವಾಗಿರುವುದರಿಂದ ಮುಷೀವಾನ್ ಹುರಶ್ಚಿತ್ ಎಂದರೆ, ಕಳ್ಳನು, ಚೋರನು, ಎಂದರ್ಥವು. ಹುರಶ್ಚಿತ್ ಎಂಬ ಶಬ್ದವು **ಹುರ್ಛಾ ಕೌಟಿಲ್ಯೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ **ಹುರಶ್ಚಿನೋತೀತಿ ಹುರಶ್ಚಿತ್** ಮೋಸವಮಾಡುವವನು ಎಂಬರ್ಥ ವನ್ನು ಹೇಳಬಹುದು.

**ಸ್ರುತೇಃ—ಸ್ರು ಗತೌ ।** ಸ್ರುತಿ ಎಂದರೆ ಹೋಗುವ ಅಥವಾ ಸಂಚರಿಸುವ ಮಾರ್ಗ. ಸ್ರುತೇಃ- ಮಾರ್ಗ ದಿಂದ

**ಅಜ—ಅಜ ಗತಿಕ್ಷೇಪಣಯೋಃ ।** ಓಡಿಸು

॥ ವ್ಯಾಕರಣಪ್ರಕ್ರಿಯಾ ॥

**ಪರಿಪನ್ಥಿನಂ—ಛಂದಸಿ ಪರಿಪನ್ಥಿಪರಿಪರಿಣೌ ಪರ್ಯವಸ್ಥಾತರಿ** ( ಪಾ. ಸೂ. ೫-೨-೮೯ ) ಪರ್ಯವ ಸ್ಥಾತಾ ಎಂದರೆ ಶತ್ರು, ಶತ್ರು ಎಂಬ ಅರ್ಥವು ಅಭಿಧೇಯವಾದಾಗ ಪರಿಪನ್ಥಿನ್, ಪರಿಪರಿನ್ ಶಬ್ದಗಳು ಛಂದಸ್ಸಿನಲ್ಲಿ ನಿಪಾತಿಸಲ್ಪಡುವುವು ಎಂದು ಸೂತ್ರಾರ್ಥ. ಪರ್ಯವಸ್ಥಾತೃಶಬ್ದದ ಮುಂದೆ ಸ್ವಾರ್ಥದಲ್ಲಿ ಇನಿ ಪ್ರತ್ಯಯವೂ ಅವಸ್ಥಾತೃ ಶಬ್ದಕ್ಕೆ ಪನ್ಥಿ-ಪರಿ-ಎಂಬ ಆದೇಶಗಳೂ ನಿಪಾತಿಸಲ್ಪಡುತ್ತವೆ ಎಂದರಿಯಬೇಕು.

**ಮುಷೀವಾಣಮ್**—ಮುಷಸ್ತೇಯೇ. ಭಾವಾರ್ಥದಲ್ಲಿ ಕಿಎಂಬ ಉಣಾದಿಪ್ರತ್ಯಯ ಬರುತ್ತದೆ. ಪ್ರತ್ಯಯವು ಕಿತ್ ಆದ್ದರಿಂದ ಲಘೂಪಧಗುಣ ಬರುವುದಿಲ್ಲ. ಮೋಷಣಂ ಮುಷಿಃ. ಮುಷಿಂ, ಕದಿಯುವಿಕೆಯನ್ನು ವನತಿ=ಹೊಂದುತ್ತಾನೆ, ಇತಿ ಮುಷೀವಾ. **ಅನ್ಯೇಭ್ಯೋಽಪಿ ದೃಶ್ಯನ್ತೇ** ( ಪಾ. ಸೂ. ೩-೨-೭೫ ) ಮನಿನ್-ಕ್ವನಿಪ್-ವನಿಪ್-ವಿಚ್ ಈ ಪ್ರತ್ಯಯಗಳು ಧಾತುವಿನ ಮುಂದೆ ಬರುವುವು ಎಂದು ವಿಚ್ ಪ್ರತ್ಯಯ ಬರುತ್ತೆ. ಮುಷಿವನ್ ಎಂದಾಯಿತು, ಇದರ ಮುಂದೆ ದ್ವಿತೀಯಾಏಕವಚನ ಅಮ್. **ಸರ್ವನಾಮಸ್ಥಾನೇ ಚಾ ಸಂಬುದ್ಧೌ** ( ಪಾ. ಸೂ. ೬-೪-೮ ) ಸಂಬುದ್ಧಿಭಿನ್ನವಾದ ಸರ್ವನಾಮಸ್ಥಾನ ಪರದಲ್ಲಿರುವಾಗ ನಕಾರಾಂತಶಬ್ದದ ಉಪಾಂತ್ಯ ವರ್ಣಕ್ಕೆ ದೀರ್ಘ ಬರುತ್ತೆ ಎಂದು ದೀರ್ಘ. ಮುಷಿವಾನ್+ಅಮ್. **ಅನ್ಯೇಷಾಮಪಿ ದೃಶ್ಯತೇ** ಎಂದು ಮುಷಿ ಶಬ್ದಕ್ಕೆ ದೀರ್ಘ.

**ಹುರಶ್ಚಿತಮ್** — ಹುರ್ಛಾಕೌಟಿಲ್ಯೇ **ಸಂಪದಾದಿಭ್ಯಃ ಕ್ವಿಪ್** ಎಂದು ಕ್ವಿಪ್ ಪ್ರತ್ಯಯ. **ರಾಲ್ಲೋಪಃ** ( ಪಾ. ಸೂ. ೬-೪-೨೧ ) ಕ್ವಿಪ್‌ಪ್ರತ್ಯಯ. ಝಲಾದಿಯಾದ ಪ್ರತ್ಯಯಗಳು, ಅನುನಾಸಿಕಾದಿ ಪ್ರತ್ಯಯಗಳು ಇವು ಪರದಲ್ಲಿದ್ದರೆ ರೇಫದ ಮುಂದೆ ಇರುವ ಛಕಾರ ವಕಾರಗಳಿಗೆ ಲೋಪ ಬರುತ್ತವೆ ಎಂದು ರೇಫದ ಮುಂದೆ ಇರುವ ಛಕಾರಕ್ಕೆ **ಲೋಪ**. ಹುರಃ ಚಿನೋತೀತಿ ಹುರಶ್ಚಿತ್. ಚಿಞ್ ಚಯನೇ ಧಾತು. ಕ್ವಿಪ್ **ಹ್ರಸ್ವಸ್ಯ ಪಿತಿ ಕೃತಿ ತುಕ್** ಎಂದು ತುಗಾಗಮ, **ತತ್ಪುರುಷೇ ಕೃತಿ ಬಹುಲಮ್** (ಪಾ. ಸೂ. ೬-೩-೧೪) ತತ್ಪು ರುಷ ಸಮಾಸದಲ್ಲಿ ಕೃದಂತವು ಪರದಲ್ಲಿದ್ದರೆ ಸಪ್ತಮೀವಿಭಕ್ತಿಗೆ ಅಲುಕ್ ಬಹುಲವಾಗಿ ಬರುತ್ತೆ ಎಂದು ಸೂತ್ರಾರ್ಥ.

ಇಲ್ಲಿ ಬಹುಲಗ್ರಹಣದಿಂದ ಷಷ್ಠೀವಿಭಕ್ತಿಗೂ ಅಲುಕ್ ಬರುತ್ತೆ ಎಂದು ತಿಳಿಯುವುದು. ಹುರಃ ಚಿನೋತಿ ಎಂದು ಲೌಕಿಕವಿಗ್ರಹವಾಕ್ಯದಲ್ಲಿ ದ್ವಿತೀಯಾಬಹುವಚನಾಂತ. ಆದರೂ ಅಲೌಕಿಕ ವಿಗ್ರಹವಾಕ್ಯದಲ್ಲಿ ಹುರ್+ಆಮ್-ಚಿತ್ ಎಂದಿರುತ್ತೆ. ಇಲ್ಲಿ ಕೃದಂತಶಬ್ದ ಇರುವುದರಿಂದ. **ಕರ್ತೃಕರ್ಮಣೋಃ ಕೃತಿ** ಎಂದು ಷಷ್ಠೀ ಬರುತ್ತೆ. **ಚಿತ್** ಎಂಬುದು ಧಾತುಸ್ವರದಿಂದ ಉದಾತ್ತ. ಸಮಾಸ ಬಂದಮೇಲೆಯೂ **ಗತಿಕಾರಕೋಪಪದಾತ್ಕೃತ್** ಎಂದು ಕೃದಂತವಾದ ಉತ್ತರಪದಕ್ಕೆ ಪ್ರಕೃತಿಸ್ವರ ಬರುವುದರಿಂದ ಅದೇ ಸ್ವರ ನಿಲ್ಲುತ್ತದೆ.

**ಸ್ರುತೇಃ— ಕ್ತಿಚ್ ಕ್ತೌ ಚ ಸಂಜ್ಞಾಯಾಂ** ( ಪಾ. ಸೂ. ೩-೩-೧೭೪ ) ಎಂಬುದರಿಂದ ಸ್ರುಗತೌ ಧಾತು ಮುಂದೆ ಕ್ತಿಚ್ ಪ್ರತ್ಯಯ ಬರುತ್ತೆ. ಗುಣಕ್ಕೆ ನಿಷೇಧ. **ಚಿತಃ** ಎಂದು ಅಂತೋದಾತ್ತ.

**ಅಜ**—ಅಜಗತಿಕ್ಷೇಪಣಯೋಃ ಧಾತು. ೧ನೇ ಗಣ. ಲೋಟ್ ಮಧ್ಯಮ, ಸಿಪ್ ಗೆ ಹಿ ಆದೇಶ, ಶಪ್. **ಅತೋ ಹೇಃ** ಎಂದು ಹಿಗೆ ಲುಕ್. ಸರ್ವಾನುದಾತ್ತ. ॥ ೩ ॥



॥ ಸಂಹಿತಾಪಾಠಃ ॥

ತ್ವಂ ತಸ್ಯ ದ್ವಯಾವಿನೋಽಘಶಂಸಸ್ಯ ಕಸ್ಯ ಚಿತ್ ।
ಪದಾಭಿ ತಿಷ್ಠ ತಪುಷಿಂ ॥ ೪ ॥

ಪದಪಾಠಃ

ತ್ವಂ । ತಸ್ಯ । ದ್ವಯಾವಿನಃ । ಅಘಽಶಂಸಸ್ಯ । ಕಸ್ಯ । ಚಿತ್ ।
ಪದಾ । ಅಭಿ । ತಿಷ್ಠ । ತಪುಷಿಂ ॥ ೪ ॥

ಸಾಯಣಭಾಷ್ಯಂ

**ಹೇ ಪೂಷನ್ ತ್ವಂ ತಸ್ಯ ಚೋರಸ್ಯ ತಪುಷಿಂ ಪರಸಂತಾಪಕಂ ದೇಹಂ ಪದಾಭಿ ತಿಷ್ಠ । ಭವದೀಯೇನ ಪಾದೇನಾಕ್ರಮ್ಯ ತಿಷ್ಠ । ಕೀದೃಶಸ್ಯ । ದ್ವಯಾವಿನಃ ಪ್ರತ್ಯಕ್ಷಾಪಹಾರಃ ಪರೋಕ್ಷಾಪಹಾರಶ್ಚೇತಿ ಯದ್ದ್ವಯಂ ತದ್ಯುಕ್ತಸ್ಯ ಅಘಶಂಸಸ್ಯ ಅಸ್ಮಾಸ್ವಘಮನಿಷ್ಟಂ ಶಂಸತಃ । ಅಘಶಂಸ ಇತಿ**

**ತಸ್ಕರನಾಮ । ಮಲಿಮ್ಲುಚೋಽಘಶಂಸೋ ವೃಕ ಇತಿ ತನ್ನಾಮಸು ಪಾಠಾತ್ । ಕಸ್ಯ ಚಿದನಿರ್ದಿಷ್ಟ-ವಿಶೇಷಸ್ಯ ಕಸ್ಯಾಪಿ ॥ ದ್ವಯಾವಿನಃ । ದ್ವಯಮಸ್ಯಾಸ್ತೀತಿ ದ್ವಯಾವೀ । ಬಹುಲಂ ಛಂದಸೀತಿ ಮತ್ವರ್ಥೀಯೋ ವಿನಿಃ । ಅನ್ಯೇಷಾಮಪಿ ದೃಶ್ಯತ ಇತಿ ದೀರ್ಘತ್ವಂ । ಅಘಶಂಸಸ್ಯ । ಅಘೇ ಪಾಪೇ ಶಂಸೋ ಮನಸ್ಯಭಿಲಾಷೋ ಯಸ್ಯ ಸೋಽಯಮಘಶಂಸಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ತಪುಷಿಂ । ತಾಪಯತ್ಯನೇನಾನ್ಯಮಿತಿ ತಪುಷಿಃ । ಔಣಾದಿಕ ಉಷಿನ್ಪ್ರತ್ಯಯಃ । ಬಹುಲವಚ-ನಾದಿಕಾರಸ್ಯ ನೇತ್ಸಂಜ್ಞಾ । ನಿತ್ವಾದಾದ್ಯುದಾತ್ತತ್ವಂ ॥**

॥ ಪ್ರತಿಪದಾರ್ಥ ॥

(**ಹೇ ಪೂಷನ್**—ಎಲೈ ಪೂಷದೇವನೇ) । **ತ್ವಂ**—ನೀನು । **ದ್ವಯಾವಿನಃ**—ಪ್ರತ್ಯಕ್ಷವಾಗಿ ಕದಿಯುವುದು ಮತ್ತು ಪರೋಕ್ಷವಾಗಿ ಕದಿಯುವುದು ಈರೀತಿ ಎರಡು ವಿಧವಾದ ಚೌರ್ಯವುಳ್ಳವನಾಗಿಯೂ । **ಅಘಶಂಸಸ್ಯ**—(ನಮಗೆ) ಕೇಡನ್ನು ಬಯಸುವವನಾಗಿಯೂ ಇರುವ । **ಕಸ್ಯಚಿತ್**—ಒಬ್ಬಾನೊಬ್ಬ । **ತಸ್ಯ**—ಕಳ್ಳನ । **ತಪುಷಿಂ**—ಇತರರಿಗೆ ಸಂಕಟವನ್ನುಂಟುಮಾಡತಕ್ಕ ದೇಹವನ್ನು । **ಪದಾ ತಿಷ್ಠ**—ಕಾಲಿನಿಂದ ತುಳಿದು ನಿಲ್ಲು.

ಭಾವಾರ್ಥ

ಎಲೈ ಪೂಷದೇವನೇ, ಬಹಳ ಮೋಸಗಾರನೂ ಪ್ರತ್ಯಕ್ಷವಾಗಿ ನಮ್ಮ ವಸ್ತುಗಳನ್ನು ನಮ್ಮೆದುರಿಗೂ, ನಾವಿಲ್ಲದಿರುವಾಗ ನಮ್ಮ ಹಿಂದುಗಡೆಯೂ ಕದಿಯುವ ಈ ಎರಡು ವಿಧವಾದ ಚೌರ್ಯವೆಲ್ಲವನ್ನೂ ಮಾಡುವವನೂ ಇತರರಿಗೆ ಕೇಡು ಬಯಸಿ, ಲೋಕಕ್ಕೆ ಸಂಕಟವನ್ನುಂಟುಮಾಡುವವನನ್ನು ಅವನು ಯಾರೇ ಆಗಲಿ, ಅಂತಹ ಕಳ್ಳನ ದೇಹವನ್ನು ಕಾಲಿನಿಂದ ತುಳಿದು ನಿಲ್ಲು.

English Translation

Trample with your feet, the body of that deceitful and evil-minded thief (who both steals and robs) who ever he may be.

ವಿಶೇಷವಿಷಯಗಳು

**ದ್ವಯಾವಿನಃ— ಪ್ರತ್ಯಕ್ಷಾಪಹಾರಃ ಪರೋಕ್ಷಾಪಹಾರಶ್ಚೇತಿ ಯದ್ದ್ವಯಂ ಚೌರ್ಯಂ ತದ್ಯುಕ್ತಸ್ಯ** । ಕಂಡಂತೆ ಬಲಾತ್ಕಾರದಿಂದ ಅಪಹರಿಸುವುದೂ, ಕಾಣದಂತೆ ಗೂಢವಾಗಿ ಕದಿಯುವುದೂ ಎಂದು ಕಳ್ಳತನದಲ್ಲಿ ಎರಡು ವಿಧವು. ಈ ಎರಡುಬಗೆಯ ಕಳ್ಳತನಗಳನ್ನು ಮಾಡುವ ಎಂದಭಿಪ್ರಾಯವು. one who steals and robs.

**ಅಘಶಂಸಸ್ಯ**—ನಮಗೆ ಕೇಡನ್ನು ಬಯಸುವ. ತೃಪುಃ ತಕ್ವಾ ಮೊದಲಾದ ಹದಿನಾಲ್ಕು ಸ್ತೇನನಾಮಗಳ ಮಧ್ಯದಲ್ಲಿ ಅಘಶಂಸಃ ಎಂಬ ಶಬ್ದವು ಪಠಿತವಾಗಿರುವುದರಿಂದ ಈ ಶಬ್ದಕ್ಕೆ ಕಳ್ಳನು, ಚೋರನು ಎಂದರ್ಥವಾಗುವುದು.

**ತಪುಷಿಂ—ಪರಸಂತಾಪಕಂ ದೇಹಂ ।** ಇತರರಿಗೆ ಸಂತಾಪವನ್ನುಂಟುಮಾಡುವ ದೇಹವನ್ನು.
**ಪದಾ ಅಭಿ ತಿಷ್ಠ**—ಕಾಲಿನಿಂದ ಚೆನ್ನಾಗಿ ತುಳಿ.

॥ ವ್ಯಾಕರಣಪ್ರಕ್ರಿಯಾ॥

**ದ್ವಯಾವಿನಃ**—ದ್ವೌ ಅವಯವೌ ಅಸ್ಯ ಎಂದು ವಿಗ್ರಹ. **ಸಂಖ್ಯಾಯಾ ಅವಯವೇ ತಯಪ್** (ಪಾ. ಸೂ. ೫-೨-೪೨) ಎಂದು ದ್ವಿಶಬ್ದದ ಮುಂದೆ ಅವಯವಾರ್ಥದಲ್ಲಿ ತಯಪ್ ಬರುತ್ತೆ, ಅದಕ್ಕೆ **ದ್ವಿತ್ರಿಭ್ಯಾಂ ತಯಸ್ಯಾಯಜ್ವಾ** ( ಪಾ ಸೂ. ೫-೨-೪೩ ) ಎಂದು ಅಯಚ್ ಆದೇಶ. ದ್ವಿ+ಅಯ. **ಯಸ್ಯೇತಿ ಚ** ಎಂದು ಇಕಾರಕ್ಕೆ ಲೋಪ. ದ್ವಯಂ ಅಸ್ಯಾಸ್ತಿ ಎಂದು ವಿಗ್ರಹವಾದರೆ **ಬಹುಲಂ ಛಂದಸಿ.** (ಪಾ. ಸೂ. ೫-೨-೧೨೨) ಛಂದಸ್ಸಿನಲ್ಲಿ ಬಹುಲವಾಗಿ ಮತ್ವರ್ಥದಲ್ಲಿ ವಿನಿಪ್ರತ್ಯಯ ಬರುತ್ತೆ ಎಂದು ವಿನಿ ಪ್ರತ್ಯಯ. ದ್ವಯ+ವಿನ್. **ಅನ್ಯೇಷಾಮಪಿ ದೃಶ್ಯತೇ** ಎಂದು ದ್ವಯಶಬ್ದಕ್ಕೆ ದೀರ್ಘ. ದ್ವಯಾವಿನ್. ಅಮ್ ಪ್ರತ್ಯಯ.

**ಅಘಶಂಸಸ್ಯ**—ಅಘೇ=ಪಾಪದಲ್ಲಿ, ಶಂಸಃ=ಮನಸ್ಸಿನಲ್ಲಿ ಆಸೆಯು ಯಸ್ಯ ಸಃ=ಯಾವನಿಗೆ ಇದೆಯೋ ಅವನು. ಎಂದು ಬಹುವ್ರೀಹಿ. ಪೂರ್ವಪದ ಪ್ರಕೃತಿಸ್ವರ ಬರುತ್ತದೆ

**ತಪುಷಿಮ್**—ತಪ ಸಂತಾಪೇ ಧಾತು. ತಾಪಯನ್ತ್ಯನೇನ ಅನ್ಯಂ ಎಂದು ವಿಗ್ರಹ. ಇದರಿಂದ **ಮತ್ತೊ**ಬ್ಬರನ್ನು ವ್ಯಥೆ ಪಡಿಸುವರು ಎಂದು ವಿಗ್ರಹ **ವಾಕ್ಯದ** ಅರ್ಥ. ಕರಣಾರ್ಥದಲ್ಲಿ ಉಷಿನ್ ಎಂಬ ಉಣಾದಿಪ್ರತ್ಯಯ ಬರುತ್ತದೆ. ತಪ್+ಉಷಿ=ತಪುಷಿ, ಅಮ್, ತಪುಷಿಮ್. ಪ್ರತ್ಯಯವು ನಿತ್ ಆದ್ದರಿಂದ ಪ್ರತ್ಯಯಾಂತವು ಆದ್ಯುದಾತ್ತ. ॥ ೪ ॥



ಸಂಹಿತಾಪಾಠಃ

ಆ ತತ್ತೇ ದಸ್ರ ಮನ್ತುಮಃ ಪೂಷನ್ನವೋ ವೃಣೀಮಹೇ।
ಯೇನ ಪಿತೄನಚೋದಯಃ ॥ ೫ ॥

॥ ಪದಪಾಠಃ ॥

**ಆ । ತತ್ । ತೇ । ದಸ್ರ । ಮನ್ತು ಽ ಮಃ । ಪೂಷನ್ । ಅವಃ । ವೃಣೀಮಹೇ ।**
**ಯೇನ । ಪಿತೄನ್ । ಅಚೋದಯಃ ॥ ೫ ॥**

ಸಾಯಣಭಾಷ್ಯಂ

**ಹೇ ಮಂತುಮೋ ಜ್ಞಾನವನ್ ದಸ್ರ ದರ್ಶನೀಯ ಯದ್ವಾ ವೈರ್ಯುಪಕ್ಷಯಕಾರಿನ್ ಪೂಷನ್ ತೇ ತ್ವದೀಯಂ ತದವಸ್ತಾದೃಶಂ ರಕ್ಷಣಮಾ ವೃಣೀಮಹೇ । ಸರ್ವತಃ ಪ್ರಾರ್ಥಯಾಮಹೇ । ಯೇನ ರಕ್ಷಣೇನ ಪಿತೄನ್ ಅಂಗಿರಃಪ್ರಭೃತೀನ್ಪಿತೃದೇವಾನಚೋದಯಃ ಪ್ರೇರಿತವಾನಸಿ । ತದ್ರಕ್ಷಣಮಿತಿ ಪೂರ್ವತ್ರಾನ್ವಯಃ ॥ ದಸ್ರ । ದಸಿ ದಂಸನದರ್ಶನಯೋಃ । ಸ್ಫಾಯಿತಂಚೀತ್ಯಾದಿನಾ ರಕ್ । ಆಗಮಾನು_ ಶಾಸನಸ್ಯಾನಿತ್ಯತ್ವಾನ್ನುಮಭಾವಃ । ಯದ್ವಾ । ದಸು ಉಪಕ್ಷಯೇ ಇತ್ಯಸ್ಮಾದಂತರ್ಭಾವಿತಣ್ಯರ್ಥಾತ್ಪೂರ್ವ- ವದ್ರಕ್ । ಮಂತುಮಃ । ಮನ ಜ್ಞಾನೇ । ಕಮಿಮನಿಜನೀತ್ಯಾದಿನಾ । ಉ. ೧-೭೩ । ಭಾವೇ ತುಪ್ರತ್ಯ- ಯಃ । ಮಂತುರ್ಜ್ಞಾನಮಸ್ಯಾಸ್ತೀತಿ ಮಂತುಮಾನ್ । ಸಂಬುದ್ಧೌ ಮತುವಸೋ ರುರಿತಿ ರುತ್ವಂ । ಅಚೋದಯಃ । ಚುದ ಸಂಚೋದನೇ । ಚೌರಾದಿಕಃ ॥ ೨೪ ॥**

ಪ್ರತಿಪದಾರ್ಥ

**ಮಂತುಮಃ**—ಸೂಕ್ಷ್ಮಜ್ಞಾನವುಳ್ಳವನಾಗಿಯೂ । **ದಸ್ರ**—ಸುಂದರರೂಪವುಳ್ಳವನಾಗಿಯೂ ಅಥವಾ ವೈರಿ ನಾಶಕನಾಗಿಯೂ ಇರುವ । **ಪೂಷನ್**— ಎಲೈ ಪೂಷದೇವನೇ । **ತೇ**-- ನಿನ್ನ । **ಯೇನ**— ಯಾವ ರಕ್ಷಣೆ ಯಿಂದ । **ಪಿತೄನ್**— ( ಅಂಗಿರಃಪ್ರಭೃತಿಗಳಾದ ) ಪೂರ್ವಜರನ್ನು । **ಅಚೋದಯಃ**— ಪ್ರೋತ್ಸಾಹಕೊಟ್ಟು ವೃದ್ಧಿಪಡಿಸಿದೆಯೋ । **ತತ್**—ಆ (ನಿನ್ನ) ರಕ್ಷಣೆಯನ್ನು । **ಆ ವೃಣೀಮಹೇ**— ಸುತ್ತಲೂ ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಎಲೈ ಪೂಷದೇವನೇ, ನೀನು ಸೂಕ್ಷ್ಮಜ್ಞಾನವುಳ್ಳವನು. ಸುಂದರರೂಪನು, ಹಾಗೆಯೇ ವೈರಿನಾಶಕನು. ಹಿಂದೆ ನಿನ್ನ ರಕ್ಷಣೆಯನ್ನನುಗ್ರಹಿಸಿ ಆ ರಕ್ಷಣೆಯ ಸಹಾಯದಿಂದ ಅಂಗಿರಃಪ್ರಭೃತಿಗಳಿಗೆ ಪ್ರೋತ್ಸಾಹವನ್ನು ಕೊಟ್ಟು ಅವರ ಮೂಲಕ ಲೋಕವನ್ನು ಬೆಳಸಿದೆ. ಈಗಲೂ ಸಹ ನಾವು ಆ ನಿನ್ನ ರಕ್ಷಣೆಯನ್ನು ಸುತ್ತಲೂ ಪ್ರಾರ್ಥಿಸುತ್ತೇವೆ.

## English Translation

O wise and handsome Pushan, we entreat you that protection which you extended to our ancestors

ವಿಶೇಷವಿಷಯ

**ಮಂತುಮಃ**— **ಮನ ಜ್ಞಾನೇ । ಮಂತುರ್ಜ್ಞಾನಮಸ್ಯಾಸ್ತೀತಿ ಮಂತುಮಾನ್ ತಸ್ಯ ಸಂಬುದ್ಧಿಃ ಮಂತುಮಃ ।** ಜ್ಞಾನವುಳ್ಳವನು, ಬುದ್ಧಿವಂತನು, wise, sagacious, prudent &c.

**ದಸ್ರ**—**ದಸಿ ದಂಸನದರ್ಶನಯೋಃ । ದರ್ಶನೀಯ । ಯದ್ವಾ ದಸು ಉಪಕ್ಷಯೇ । ವೈರ್ಯುಪಕ್ಷಯಕಾರಿನ್ ।** ಸುಂದರನಾದ ಅಥವಾ ಶತ್ರುಗಳನ್ನು ನಾಶಮಾಡುವ, Handsome or destroyer of foes

**ಅವಃ**—**ರಕ್ಷಣಂ ।** ರಕ್ಷಣೆಯನ್ನು.

**ಯೇನ ಪಿತೃನಚೋದಯಃ**— ಹಿಂದೆ ನಮ್ಮ ಪಿತೃಗಳಿಗೆ ಅಥವಾ ಹಿರಿಯರಿಗೆ ನೀನು ಯಾವರೀತಿ ರಕ್ಷಣೆಯನ್ನು ಕೊಟ್ಟಿದ್ದೆಯೋ ಅದರಂತೆ ನಮಗೂ ರಕ್ಷಣೆಯನ್ನು ಕೊಡು ಎಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ದಸ್ರ**— ದಸಿ ದಂಸನದರ್ಶನಯೋಃ ೧೦ನೇ ಗಣದ ಧಾತು ಇದಿತ್, **ಇದಿತೋ ನುಮ್ ಧಾತೋಃ** ಎಂದು ಪ್ರಾಪ್ತವಾಗುವ ನುಮ್ ಆಗಮಕ್ಕೆ **ಆಗಮಶಾಸ್ತ್ರಮನಿತ್ಯಮ್** ಎಂಬುದರಿಂದ ವಾರಣೆಮಾಡಬೇಕು. ಅಥವಾ 'ದಸು ಉಪಕ್ಷಯೇ' ಎಂಬ ದಿವಾದಿಧಾತುವನ್ನು ಗ್ರಹಿಸಬೇಕು. ಈ ಯಾವುದಾದರೂ ಒಂದು ಧಾತು. ಮುಂದೆ **ಸ್ಫಾಯಿತಞ್ಚಿ—**, ಎಂಬ ಉಣಾದಿಸೂತ್ರದಿಂದ ರಕ್ ಪ್ರತ್ಯಯ.

**ಮನ್ತುಮಃ**— ಮನ ಜ್ಞಾನೇ ಈ ಧಾತುವು ದಿವಾದಿಯಲ್ಲಿದೆ. **ಕಮಿಮನಿಜನಿಗಾಭಾಯಾಹಿಭ್ಯಶ್ಚ** (ಉ. ಸೂ. ೧-೭೨) ಎಂಬುದರಿಂದ **ಭಾವಾರ್ಥದಲ್ಲಿ** ತುಪ್ರತ್ಯಯ. **ತಿತುತ್ರ**—ಎಂದು ಇಟ್‌ಗೆ ಪ್ರತಿಷೇಧ. ಮನ್+ತು, ಅನುಸ್ವಾರಪರಸವರ್ಣಗಳು. ಮನ್ತು ಎಂದರೆ ಜ್ಞಾನ ಎಂದರ್ಥ. ಮನ್ತುಃ ಅಸ್ಯ ಅಸ್ತಿ ಎಂದು ವಿಗ್ರಹ. **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** ಎಂದು ಮತುಪ್‌ಪ್ರತ್ಯಯ. ಮನ್ತುಮತ್. ಇದರ ಮುಂದೆ ಸಂಬುದ್ಧಿ ಸುಪ್ರತ್ಯಯ. **ಮತುವಸೋರು ಸಂಬುದ್ಧೌ ಛಂದಸಿ** (ಪಾ. ಸೂ. ೮-೩-೧) ರು ಎಂದು ಅವಿಭಕ್ತಿಕನಿರ್ದೇಶ. ಮತುವಸುಪ್ರತ್ಯಯಗಳನ್ನು **ಕೊನೆಯಲ್ಲಿ ಹೊಂದಿರುವ** ಶಬ್ದಗಳ ಕೊನೆಯ ವರ್ಣಕ್ಕೆ ಸಂಬೋಧನಪ್ರಥಮೈಕ ವಚನವು ಪರದಲ್ಲಿದ್ದರೆ ರುಆದೇಶ ಬರುತ್ತೆ **ಎಂದು** ತ್‌ಗೆ ರುಆದೇಶ. ಮನ್ತುಮರ್+ಸು, **ಹಲ್‌ಙ್ಯಾಬ್ಭ್ಯಃ—**, ಎಂದು ಸುಲೋಪ. ರ್‌ಗೆ **ಖರವಸಾನಯೋಃ—**, ಎಂದು ವಿಸರ್ಗ.

**ಅಚೋದಯಃ**— ಚುದ ಸಂಚೋದನೆ ೧೦ನೇ ಗಣದ ಧಾತು. **ಸತ್ಯಾಪಪಾಶ—**, ಎಂದು ಣಿಚ್, ಲಙ್, ಮಧ್ಯಮ ಏಕವಚನ ಸಿಪ್, ಶಪ್, ಅಡಾಗಮ, ಅಚುದ್+ಇ+ಅ+ಸಿ ಣಿಚ್ಚನ್ನು ನಿಮಿತ್ತಮಾಡಿಕೊಂಡು ಲಘೂಪಧಗುಣ. ಶಪ್ಪನ್ನು ನಿಮಿತ್ತಮಾಡಿಕೊಂಡು **ಸಾರ್ವಧಾತುಕಾ—**, ಎಂದು ಇಗೆ ಗುಣ. ಏಕಾರ, ಅಯಾದೇಶ, **ಇತಶ್ಚ** ಎಂದು ಇಕಾರಕ್ಕೆ ಲೋಪ. ರುತ್ವವಿಸರ್ಗಗಳು. ||೫||

ಸಂಹಿತಾಪಾಠಃ

ಅಧಾ ನೋ ವಿಶ್ವಸೌಭಗ ಹಿರಣ್ಯವಾಶೀಮತ್ತಮ।
ಧನಾನಿ ಸುಷಣಾ ಕೃಧಿ ॥ ೬ ॥

॥ ಪದಪಾಠಃ ॥

ಅಧ । ನಃ । ವಿಶ್ವಽಸೌಭಗ । ಹಿರಣ್ಯವಾಶೀಮತ್ಽತಮ ।
ಧನಾನಿ । ಸುಽಸನಾ । ಕೃಧಿ ॥ ೬ ॥

ಸಾಯಣಭಾಷ್ಯಂ

ಹೇ ವಿಶ್ವಸೌಭಗ ಕೃತ್ಸ್ನಧನಯುಕ್ತ । ಯದ್ವಾ ಕೃತ್ಸ್ನಸೌಭಾಗ್ಯಯುಕ್ತ ಹಿರಣ್ಯವಾಶೀಮತ್ತಮಾತಿಶಯೇನ ಸುವರ್ಣಮಯಾಯುಧವನ್ । ಪೂಷನ್ ಅಥ ಪೂರ್ವೋಕ್ತಾಸ್ಮದೀಯಪ್ರಾರ್ಥನಾನಂತರಂ ನೋಽಸ್ಮಾಕಂ ಧನಾನಿ ಸುವರ್ಣಮಣಿಮುಕ್ತಾದೀನಿ ಸುಷಣಾ ಸುಷ್ಠು ದಾನಯುಕ್ತಾನಿ ಕೃಧಿ । ಕುರು । ಅಧ । ಅಥಶಬ್ದೇ ಧತ್ವಂ ಛಾಂದಸಂ । ನಿಪಾತಸ್ಯ ಚೇತಿ ಸಂಹಿತಾಯಾಂ ದೀರ್ಘತ್ವಂ । ವಿಶ್ವಸೌಭಗ । ಸುಭಗಾನ್ಮಂತ್ರ ಇತ್ಯುದ್ಗಾತ್ರಾದಿಷು ಪಾಠಾದ್ಭಾವೇಽಞ್ । ಪಾ. ೫-೧-೧೨೯ । ಹೃದ್ಭಗಸಿಂಧ್ವಂತೇ ಪೂರ್ವಪದಸ್ಯ ಚ । ಪಾ. ೭-೩-೧೯ । ಇತ್ಯುತ್ತರಪದವೃದ್ಧೌ ಪ್ರಾಪ್ತಾಯಾಂ ಸತ್ಯಾಂ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದುತ್ತರಪದವೃದ್ಧಿರ್ನ ಭವತೀತಿ ವೃತ್ತಾವುಕ್ತಂ । ವಿಶ್ವಾನಿ ಸೌಭಗಾನಿ ಯಸ್ಯಾಸೌ ವಿಶ್ವಸೌಭಗಃ । ಆಮಂತ್ರಿತನಿಘಾತಃ । ಹಿರಣ್ಯವಾಶೀಮತ್ತಮ । ಹಿರಣ್ಯಮಯೀ ವಾಶೀ । ತದೇಷಾಮಸ್ತೀತಿ ಹಿರಣ್ಯವಾಶೀಮಂತಃ । ಅತಿಶಯೇನ ಹಿರಣ್ಯವಾಶೀಮಾನ್ ಹಿರಣ್ಯವಾಶೀಮತ್ತಮಃ । ಆಮಂತ್ರಿತನಿಘಾತಃ । ಸುಷಣಾ । ವನ ಷಣ ಸಂಭಕ್ತೌ । ಸುಖೇನ ಸಂಭಜ್ಯಂತ ಇತಿ ಸುಷಣಾನಿ । ಈಷದ್ದುಃಸುಷ್ವಿತಿ ಖಲ್ । ಶೇಶ್ಛಂದಸೀತಿ ಶೇರ್ಲೋಪಃ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ ಕೃಧಿ । ಡುಕೃಞ್ ಕರಣೇ । ಶ್ರುಶೃಣುಪೄಕೃವೃಭ್ಯಶ್ಛಂದಸೀತಿ ಹೇರ್ಧಿರಾದೇಶಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥

॥ ಪ್ರತಿಪದಾರ್ಥ ॥

**ವಿಶ್ವಸೌಭಗ**–ಸಕಲಧನದಿಂದ ಕೂಡಿದವನಾಗಿಯೂ ಅಥವಾ ಸಕಲಮಂಗಳಗಳೊಡಗೂಡಿದವನಾಗಿಯೂ । **ಹಿರಣ್ಯವಾಶೀಮತ್ತಮ**— ಅತಿಶಯವಾದ ಚಿನ್ನದ ಆಯುಧವುಳ್ಳವನಾಗಿಯೂ ಇರುವ ಪೂಷದೇವನೇ, । **ಅಥ**-

ನಮ್ಮ ಪೂರ್ವೋಕ್ತವಾದ ಪ್ರಾರ್ಥನೆಯಾದನಂತರ | **ನಃ**— ನಮಗೆ | **ಧನಾನಿ**— ಚಿನ್ನ, ವಜ್ರ ಮತ್ತು ವೈಡೂರ್ಯಾದಿಗಳಿಂದ ಕೂಡಿದ ಧನಗಳನ್ನು | **ಸುಷಣಾ**— ಶ್ರೇಷ್ಠವಾದ ದಾನಗಳಿಂದೊಡಗೂಡಿದವುಗಳನ್ನಾಗಿ | **ಕೃಧಿ**- ಮಾಡು. (ಯಥೇಚ್ಛವಾಗಿ ಧನಗಳನ್ನು ಕೊಡು) |

ಭಾವಾರ್ಥ ||

ಎಲೈ ಪೂಷದೇವನೇ, ನೀನು ಸಕಲೈಶ್ವರ್ಯಗಳಿಂದ ಕೂಡಿದವನೂ, ಸುವರ್ಣನಿರ್ಮಿತಾಯುಧಗಳನ್ನು ಧರಿಸಿದವನೂ ಆಗಿರುವೆ. ಈಗ ನಾವು ನಿನ್ನನ್ನು ಪ್ರಾರ್ಥನೆ ಮಾಡಿದ ಮೇಲೆ ಸುವರ್ಣವಜ್ರಾದಿಧನಸಂಪತ್ತನ್ನೂ, ನಮಗೆ ಬೇಕಾದ ಇತರ ವಸ್ತುಗಳನ್ನೂ ಯಥೇಚ್ಛವಾಗಿ ಕೊಡು.

English Translaion

O Pushan, you are possessed of all prosperity and well equipped with golden weapons; bestow upon us riches that may be accepted.

|| ವಿಶೇಷವಿಷಯಗಳು ||

**ಅಧಾ**—ಅಥಶಬ್ದಕ್ಕೆ ಬದಲಾಗಿ ಅಧಶಬ್ದವಿರುವುದು. ಛಂದಸ್ಸಿನ ಅನುಕೂಲಕ್ಕಾಗಿ. ಥಕಾರಕ್ಕೆ ಧಕಾರವೂ ಸಂಹಿತಾಪಾಠದಲ್ಲಿ ಧಕಾರವು ದೀರ್ಘವಾಗಿಯೂ ಇರುವುದು.

**ವಿಶ್ವಸೌಭಗ— ವಿಶ್ವಾನಿ ಸೌಭಗಾನಿ ಯಸ್ಯಾಸೌ ವಿಶ್ವಸೌಭಗಃ** | ಸಮಸ್ತಧನಯುಕ್ತ ಅಥವಾ ಸಮಸ್ತ ಸೌಭಾಗ್ಯಯುಕ್ತ.

**ಹಿರಣ್ಯವಾಶೀಮತ್ತಮ— ಹಿರಣ್ಯಮಯೀ ವಾಶೀ | ತದೇಷಾಮಸ್ತೀತಿ ಹಿರಣ್ಯವಾಶೀಮಂತಃ | ಅತಿಶಯೇನ ಹಿರಣ್ಯವಾಶೀಮಾನ್ ಹಿರಣ್ಯವಾಶೀಮತ್ತಮಃ** | ಅತಿಶಯವಾಗಿ ಸುವರ್ಣಾಯುಧಗಳಿಂದ ಸುಸಜ್ಜಿತನಾದವನು.

**ಸುಷಣಾ—ವನ ಷಣ ಸಂಭಕ್ತೌ | ಸುಖೇನ ಸಂಭಜ್ಯಂತೆ ಇತಿ ಸುಷಣಾನಿ** | ಸುಖದಿಂದ ಅನುಭವಿಸುವುದಕ್ಕೆ ಅನುಕೂಲವಾದ ವಸ್ತುಗಳು, ಭೋಗಸಾಮಗ್ರಿಗಳು, ಸುಖಸಾಧನಗಳು.

|| ವ್ಯಾಕರಣಪ್ರಕ್ರಿಯಾ ||

**ಅಧ**—ಅಥ ಶಬ್ದದ ಥಕಾರಕ್ಕೆ ಛಾಂದಸವಾಗಿ ಧಕಾರಾದೇಶ. ಸಂಹಿತಾಕಾಲದಲ್ಲಿ **ನಿಪಾತಸ್ಯ ಚ** ಎಂದು ದೀರ್ಘ ಬರುತ್ತದೆ.

**ವಿಶ್ವಸೌಭಗ—ಪ್ರಾಣಭೃಜ್ಜಾತಿವಯೋವಚನೋದ್ಗಾತ್ರಾದಿಭ್ಯೋಽಞ್** (ಪಾ. ಸೂ. ೫-೧-೧೨೯) ಎಂಬುದರಿಂದ ಉದ್ಗಾತ್ರಾದಿಗಣಕ್ಕೆ ಸೇರಿದ ಸುಭಗಶಬ್ದದ ಮುಂದೆ ಅಞ್‌ಪ್ರತ್ಯಯ. **ಸುಭಗಮನ್ತ್ರೇ** ಎಂದು

ಉದ್ಗಾತ್ರಾದಿಗಣದಲ್ಲಿ ಸುಭಗಶಬ್ದಕ್ಕೆ ಪಾಠ ಇದೆ. **ತದ್ಧಿತೇಷ್ವಚಾಂ—,** ಎಂದು ಆದಿವೃದ್ಧಿ ಬರುತ್ತೆ. ಎಂದರೆ ಸುಶಬ್ದದ ಉಕಾರಕ್ಕೆ ಔಕಾರ ಬರುತ್ತೆ. **ಹೃದ್ಭಗಸಿನ್ಧ್ವನ್ತೇ ಪೂರ್ವಪದಸ್ಯ ಚ** (ಪಾ. ಸೂ. ೭-೩-೧೯) ಞ್ಣ್, ಣಿತ್-ಕಿತ್ ಆದ ಪ್ರತ್ಯಯಪರದಲ್ಲಿದ್ದರೆ ಹೃತ್-ಭಗ-ಸಿನ್ಧು ಶಬ್ದಗಳನ್ನು ಕೊನೆಯಲ್ಲಿ ಹೊಂದಿರುವ ಸಮಾಸದಲ್ಲಿ ಪೂರ್ವಪದ ಮತ್ತು ಉತ್ತರಪದ ಇವೆರಡರಲ್ಲಿಯೂ ಅಚ್ಚುಗಳ ಸಮುದಾಯದ ಮೊದಲನೆಯ ಅಚ್‌ಗೆ ವೃದ್ಧಿಬರುತ್ತೆ ಎಂದು ಉಭಯಪದಗಳಿಗೂ ವೃದ್ಧಿಯು ನ್ಯಾಯವಾಗಿ ಬರಬೇಕು. ಆದರೂ **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ** ಎಂಬ ಪರಿಭಾಷೆಯಿಂದ ಉಭಯಪದವೃದ್ಧಿಯು ಬರುವುದಿಲ್ಲ ಎಂದು ವೃತ್ತಿಕಾರರು **ಹೃದ್ಭಗ—** ಎಂಬ ಸೂತ್ರದಲ್ಲಿ ಹೇಳಿರುವರು.

**ಹಿರಣ್ಯವಾಶೀಮತ್ತಮ—**ಹಿರಣ್ಯಮಯೀ ಚ ಸಾ ವಾಶೀ ಚ ಹಿರಣ್ಯವಾಶೀ. ವಾಶೀ ಎಂದರೆ ಆಯುಧ. ಹಿರಣ್ಯವಾಶೀ ಏಷಾಮಸ್ತಿ ಎಂದು ವಿಗ್ರಹ. **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್** ಎಂದು ಮತುಪ್. ಅತಿಶಯೇನ ಹಿರಣ್ಯವಾಶೀಮಾನ್ ಎಂದು ವಿಗ್ರಹ. **ಅತಿಶಾಯನೇ ತಮಬಿಷ್ಠನೌ** ಎಂದು ತಮಪ್. ಹಿರಣ್ಯವಾಶೀಮತ್ತಮ ಎಂದು ಆಗುತ್ತೆ. ಸಂಬೋಧನ ಪ್ರಥಮೈಕವಚನ ಆಮನ್ತ್ರಿತಾನುದಾತ್ತ ಬರುತ್ತದೆ.

**ಸುಷಣಾ—** ವನ ಷಣ ಸಂಭಕ್ತೌ, ಸುಖೇನ ಸನ್ಯತೇ=ಸಂಭಜ್ಯತೇ ಇತಿ ಸುಷಣಾನಿ. **ಈಷದ್ದುಸ್ಸುಷು ಕೃಚ್ಛ್ರಾಕೃಚ್ಛ್ರಾರ್ಥೇಷು ಖಲ್** ಎಂದು ಸನ್ ಧಾತು ಮುಂದೆ ಖಲ್‌ಪ್ರತ್ಯಯ. **ಆದೇಶಪ್ರತ್ಯಯಯೋಃ** ಎಂದು ಷತ್ವ. **ರಷಾಭ್ಯಾಂ ನೋಣಃ—,** ಎಂದು ನಕಾರಕ್ಕೆ ಣಕಾರ. ಶಸ್, ನುಮಾಗಮ, ಉಪಧಾದೀರ್ಘ, **ಶೇಶ್ಛಂದಸಿ ಬಹುಲಂ** ಎಂದು ಶಿಗೆ ಲೋಪ. ನಕಾರಕ್ಕೆ ಲೋಪ. **ಲಿತಿ** ಎಂದು ಪ್ರತ್ಯಯದ ಹಿಂದಿನ ವರ್ಣ ಉದಾತ್ತ. ಕೃದುತ್ತರಪದಪ್ರಕೃತಿಸ್ವರ ಬರುತ್ತೆ.

**ಕೃಧಿ—**ಡುಕೃಞ್ ಕರಣೇ, ಲೋಟ್ ಸಿಪ್, ಹಿ ಆದೇಶ. **ಶುಶ್ರುಣು ಪೃ ಕೃವೃಭ್ಯಶ್ಛಂದಸಿ** ಎಂದು ಹಿಗೆ ಧಿ ಆದೇಶ. **ಬಹುಲಂ ಛಂದಸಿ** ಶ್ನುವಿಕರಣಕ್ಕೆ ಲುಕ್, ಹಿಯು ಅಪಿತ್ ಆದ್ದರಿಂದ ಙಿತ್ತಾಗುತ್ತೆ. **ಕ್ಙಿತಿಚ** ಎಂದು ಗುಣಕ್ಕೆ ನಿಷೇಧ ಬಂದು ಕೃಧಿ ಎಂದಾಗುತ್ತೆ. ||೬||



ಸಂಹಿತಾಪಾಠಃ

ಅತಿ ನಃ ಸಶ್ಚತೋ ನಯ ಸುಗಾ ನಃ ಸುಪಥಾ ಕೃಣು ।
ಪೂಷನ್ನಿಹ ಕ್ರತುಂ ವಿದಃ ॥ ೭ ॥

ಪದಪಾಠಃ

ಅತಿ । ನಃ । ಸಶ್ಚತಃ । ನಯ । ಸುऽಗಾ । ನಃ । ಸುऽಪಥಾ । ಕೃಣು ।
ಪೂಷನ್ । ಇಹ । ಕ್ರತುಂ । ವಿದಃ ॥ ೭ ॥

ಸಾಯಣಭಾಷ್ಯಂ

ಸಶ್ಚತೋಽಸ್ಮದ್ಬಾಧನಾಯ ಪ್ರಾಪ್ನುವತಃ ಶತ್ರೂನ್ನೋಽತಿ ಅಸ್ಮಾನತಿಕ್ರಮ್ಯ ನಯ । ಅನ್ಯತ್ರ ಪ್ರಾಪಯ । ನೋಽಸ್ಮಾನ್ ಸುಗಾ ಸುಷ್ಠು ಗಂತುಂ ಶಕ್ಯೇನ ಸುಪಥಾ ಶೋಭನಮಾರ್ಗೇಣ ಕೃಣು । ಗಂತ್ರೂನ್ಕುರು । ಹೇ ಪೂಷನ್ ಇಹಾಧ್ವನಿ ಕ್ರತುಂ ಪ್ರಜ್ಞಾನಮಸ್ಮದ್ರಕ್ಷಣರೂಪಂ ವಿದಃ ಜಾನೀಹಿ । ಸಶ್ಚತಃ । ಗ್ಲಸ್ಚ ಷಸ್ಚ ಗತಾವಿತ್ಯತ್ರ ಸಶ್ಚಿಮಪ್ಯೇಕೇ ಪಠಂತೀತಿ ಧಾತುವೃತ್ತಾವುಕ್ತಂ । ಅಸ್ಮಾಲ್ಲಟಃ ಶತೃ । ಬಹುಲಂ ಛಂದಸೀತಿ ಶಪೋ ಲುಕ್ । ಪ್ರತ್ಯಯಸ್ವರೇಣ ಶತುರುದಾತ್ತತ್ವಂ । ಶತುರನುಮ ಇತಿ ವಿಭಕ್ತ್ಯುದಾತ್ತತ್ವಾಭಾವಶ್ಛಾಂದಸಃ । ಸುಗಾ । ಸುಷ್ಠು ಗಚ್ಛಂತ್ಯತ್ರೇತಿ ಸುಗಃ । ಸುದುರೋರಧಿಕರಣ ಇತಿ ಗಮೇರ್ಡಪ್ರತ್ಯಯಃ । ಸುಪಾಂ ಸುಲುಗಿತಿ ತೃತೀಯಾಯಾ ಆಕಾರಃ । ಸುಪಥಾ । ಶೋಭನೇನ ಪಥಾ । ನ ಪೂಜನಾತ್ । ಪಾ. ೫-೪-೬೯ । ಇತಿ ಸಮಾಸಾಂತಪ್ರತಿಷೇಧಃ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಕ್ರತ್ವಾದಯಶ್ಚೇತ್ಯುತ್ತರಪದಾದ್ಯುದಾತ್ತತ್ವಂ ನ ಭವತಿ । ಅಬಹುವ್ರೀಹಿತ್ವಾತ್ । ತತ್ರ ಹಿ ಬಹುವ್ರೀಹಾವಿತಿ ವರ್ತತೇ । ಕೃಣು ಕೃವಿ ಹಿಂಸಾಕರಣಯೋಃ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ಉತಶ್ಚ ಪ್ರತ್ಯಯಾದಿತಿ ಹೇರ್ಲುಕ್ । ವಿದಃ । ವಿದ ಜ್ಞಾನೇ । ಲೇಟ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ ॥

ಪ್ರತಿಪದಾರ್ಥ

**ಸಶ್ಚತಃ**—ನಮಗೆ ತೊಂದರೆಯನ್ನುಂಟುಮಾಡುವುದಕ್ಕೆ ಬರುವ ಶತ್ರುಗಳನ್ನು । **ನಃ**—ನಮ್ಮ ಎಲ್ಲೆಗಾಚೆ (ಬಹಳದೂರ) **ಅತಿ ನಯ**—ಅಟ್ಟಿಬಿಡು । **ನಃ**—ನಮ್ಮನ್ನು । **ಸುಗಾ**—ಸುಲಭವಾಗಿ ಸಂಚರಿಸಲು ಸಾಧ್ಯವಾದ **ಸುಪಥಾ** - ಶ್ರೇಷ್ಠವಾದ ಮಾರ್ಗದಿಂದ । **ಕೃಣು**—(ನಡೆಯುವವರನ್ನಾಗಿ) ಮಾಡು । **ಪೂಷನ್**—ಎಲೈ ಪೂಷ ದೇವನೇ । **ಇಹ**—ಈ ಮಾರ್ಗ (ಪ್ರಯಾಣ)ದಲ್ಲಿ । **ಕ್ರತುಂ**—ನಮ್ಮ ರಕ್ಷಣೆಗೆ ಬೇಕಾದ ಜ್ಞಾನವನ್ನು । **ವಿದಃ**—ತಿಳಿದುಕೊ.

ಭಾವಾರ್ಥ

ಎಲೈ ಪೂಷದೇವನೇ, ನಮಗೆ ತೊಂದರೆ ಕೊಡಲು ಬರುವ ಅನೇಕ ಶತ್ರುಗಳನ್ನು ನಮ್ಮ ಎಲ್ಲೆಯಿಂದಾಚೆಗೆ ಬಹಳದೂರವಾಗಿ ಅಟ್ಟಿಬಿಡು. ನಮ್ಮ ಮಾರ್ಗವು ವಿಘ್ನರಹಿತವಾಗಿ ನಮ್ಮ ಸಂಚಾರವು ಅತ್ಯಂತ ಸುಲಭ

ಸಾಧ್ಯವಾಗುವಂತೆ ಮಾಡು. ಈ ಮಾರ್ಗದ ಸ್ವರೂಪವನ್ನೂ ಈ ಮಾರ್ಗಪ್ರಯಾಣಗಲ್ಲಿ ನಮ್ಮನ್ನು ರಕ್ಷಿಸಬೇಕಾದ ಕ್ರಮವೇನೆಂಬುದನ್ನೂ ಸರಿಯಾಗಿ ತಿಳಿಗುಕೊ. ನಮ್ಮನ್ನು ಶ್ರೇಷ್ಠವಾದ ಮಾರ್ಗದಿಂದ ನಡೆಯುವವರನ್ನಾಗಿ ಮಾಡು.

English Translation

Lead the enemies away from us ; make the path good and safe for us ; O Pushan, know how to protect us on this journey.

॥ ವಿಶೇಷವಿಷಯಗಳು ॥

**ಸಶ್ಚತಃ—ಷಸ್ಚ ಗತೌ। ಅಸ್ಮದ್ಬಾಧನಾಯ ಪ್ರಾಪ್ನುವತಃ।** ನಮ್ಮನ್ನು ತೊಂದರೆ ಪಡಿಸುವುದಕ್ಕೆ ಬರುವ (ಶತ್ರುಗಳನ್ನು)

**ಸುಗಾ—ಸುಷ್ಠು ಗಚ್ಛಂತ್ಯತ್ರೇತಿ ಸುಗಃ।** ಸುಲಭವಾಗಿ ಹೋಗುವುದಕ್ಕೆ ಅನುಕೂಲವಾದ

**ಸುಪಥಾ**—ಒಳ್ಳೆಯ ಮಾರ್ಗದಿಂದ. ಶತ್ರುಕಾಟವಿಲ್ಲದಿರುವ ಸುರಕ್ಷತೆಯಿಂದ ಕೂಡಿದ ಮಾರ್ಗದಿಂದ.

**ಕ್ರತುಂ**—ಜ್ಞಾನ, ತಿಳುವಳಿಕೆ. ಕೇತಃ ಕೇತುಃ ಮೊದಲಾದ ಹನ್ನೊಂದು ಪ್ರಜ್ಞಾನಾಮಗಳಲ್ಲಿ ಕ್ರತು ಶಬ್ದವು ಪಠಿತವಾಗಿರುವುದರಿಂದ ಕ್ರತುಂ ಎಂದರೆ ಜ್ಞಾನವನ್ನು, ತಿಳುವಳಿಕೆಯನ್ನು ಎಂದರ್ಥವು.

ವ್ಯಾಕರಣಪ್ರಕ್ರಿಯಾ

**ಸಶ್ಚತಃ**—ಗ್ಲು ಇಚ್ಛು ಷಸ್ಚ ಗತೌ ೧ನೇ ಗಣ. ಇಲ್ಲಿ ಸಶ್ಚ ಧಾತುವನ್ನೂ ಕೆಲವರು ಪಠಿಸುವರು ಎಂದು ಧಾತು ವೃತ್ತಿಯಲ್ಲಿ ಹೇಳಿದೆ. ಆ ಧಾತುಮುಂದೆ ಲಟ್, ಶತೃ. ಶಪ್‌ಗೆ **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂದು ಲುಕ್. ಪ್ರತ್ಯಯಸ್ವರ ಬರುತ್ತೆ. ಇಲ್ಲಿ ಶಪ್‌ಗೆ ಲುಕ್ ಬರದೆ ಇದ್ದರೆ **ಅತೋಗುಣೇ** ಎಂದು ಪರರೂಪ ಬಂದು ಸಶ್ಚತ್‌ಎಂದು ರೂಪವಾಗುತ್ತೆ. ಆದರೆ **ತಾಸ್ಯನುದಾತ್ತೇತ್—,** ಸಾರ್ವಧಾತುಕವು ಅನುದಾತ್ತವಾಗ ಬೇಕಾಗುತ್ತೆ. ಶಪ್‌ಗೆ ಲುಕ್‌ಬಂದರೆ ಅದುಪದೇಶಕ್ಕಿಂತಲೂ ಪರವಾಗುವುದಿಲ್ಲ. ಆದ್ದರಿಂದ ಅನುದಾತ್ತ ಬರು ವುದಿಲ್ಲ. ದ್ವಿತೀಯಾ ಬಹುವಚನ ಶಸ್, **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೩೭) ನುಮ್ ಆಗಮ ವನ್ನು ಹೊಂದಿ ಯಾವ ಶತೃ ಇದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಅಂತೋದಾತ್ತಶಬ್ದದ ಮುಂದೆ ಇರುವ ನದೀಸಂಜ್ಞಕವೂ, ಅಜಾದಿಯಾದ ಶಸಾದಿವಿಭಕ್ತಿಯೂ ಸಹ ಉದಾತ್ತವಾಗುತ್ತೆ ಎಂದು ಶಸ್ ನ್ಯಾಯವಾಗಿ ಉದಾತ್ತವು ಬರಬೇಕು. ಆದರೆ **ಸರ್ವೇವಿಧಯಃ—,** (ಪರಿಭಾ ೩೫) ಎಂದು ಛಂದಸ್ಸಿನಲ್ಲಿ ವಿಕಲ್ಪವಾದ್ದರಿಂದ ಇಲ್ಲಿ ಬರುವುದಿಲ್ಲ.

**ಸುಗಾ**—ಸುಷ್ಠು ಗಚ್ಛನ್ತಿ ಅತ್ರ ಇತಿ ಸುಗಃ, **ಸುದುರೋರಧಿಕರಣೇ** ಎಂಬುದರಿಂದ ಸು ಉಪಸರ್ಗ ಪೂರ್ವಕವಾದ ಗಮ್‌ಧಾತುಮುಂದೆ ಅಧಿಕರಣಾರ್ಥಗಲ್ಲಿ ಡ ಪ್ರತ್ಯಯ, ಟಿ ಲೋಪ. **ಸುಪಾಂ ಸುಲುಕ್—,**

ಎಂಬುದರಿಂದ ತೃತೀಯಾಏಕವಚನಕ್ಕೆ ಡಾಆದೇಶ. ಸುಗ+ಆ. ಟ ಲೋಪ. ಉದಾತ್ತ ನಿವೃತ್ತಿಸ್ವರದಿಂದ ವಿಭಕ್ತಿಯು ಉದಾತ್ತ.

**ಸುಪಥಾ**—ಶೋಭನಶ್ಚಾಸೌ ಪನ್ಥಾಶ್ಚ ಎಂದು ವಿಗ್ರಹ. **ಋಕ್ಪೂರಬ್ಧೂಃ ಪಥಾಮಾ ನಕ್ಷೇ** (ಪಾ. ಸೂ. ೫-೪-೭೪) ಋಕ್-ಪುರ್-ಅಪ್-ಧುರ್-ಪಥಿನ್ ಇವುಗಳನ್ನು ಕೊನೆಯಲ್ಲಿ ಹೊಂದಿರುವ ಸಮಾಸಕ್ಕೆ ಅಪ್ರತ್ಯಯವು ಅಂತಾವಯವವಾಗಿ ಬರುತ್ತೆ. ಆಗರೆ ಅಕ್ಷ ಸಂಬನ್ಧಿಯಾದ ಧುರ್ ಎಂಬುದನ್ನು ಕೊನೆಯಲ್ಲಿ ಹೊಂದಿರುವ ಸಮಾಸಕ್ಕೆ ಅಪ್ರತ್ಯಯ ಅಂತಾವಯವವಾಗಿ ಬರುವುದಿಲ್ಲ ಎಂದು ಅಪ್ರತ್ಯಯ ಪ್ರಾಪ್ತವಾದರೆ ಅದಕ್ಕೆ **ನ ಪೂಜನಾತ್** (ಪಾ. ಸೂ ೫-೪-೬೯) ಪೂಜನಾರ್ಥಕವಾದ ಪದಗಳ ಮುಂದೆ ಸಮಾಸಾಂತ ಬರುವುದಿಲ್ಲ ಎಂಬುದರಿಂದ ಸಮಾಸಾಂತಕ್ಕೆ ನಿಷೇಧ ಬರುತ್ತದೆ. ಇಲ್ಲಿ ವಾರ್ತಿಕಕಾರರು **ಸ್ವತಿಭ್ಯಾಮೇವ** ಸು-ಅತಿ ಶಬ್ದಗಳಿಗೆ ಪ್ರಯೋಗವಿರುವಾಗಲೇ ಈ ನಿಷೇಧ ಬರುತ್ತೆ ಎಂದು ಹೇಳಿರುವರು. **ಕ್ರತ್ವಾದಯಶ್ಚ** (ಪಾ. ಸೂ. ೬-೨-೧೧೮) ಎಂಬುದು ಬಹುವ್ರೀಹಿ ಸಮಾಸದಲ್ಲಿ ಮಾತ್ರ ಬರುವುದು. ಆದ್ದರಿಂದ ಇಲ್ಲಿ ಇದರಿಂದ ಉತ್ತರಪದಕ್ಕೆ ಆದ್ಯುದಾತ್ತವನ್ನು ಹೇಳಲಾಗುವುದಿಲ್ಲ. **ಪರಾದಿಶ್ಚಂದಸಿ ಬಹುಲಂ** ಎಂಬುದರಿಂದ ಉತ್ತರಪದಕ್ಕೆ ಆದ್ಯುದಾತ್ತ ಬರುತ್ತೆ

**ಕೃಣು**—ಕೃವಿ ಹಿಂಸಾಕರಣಯೋಶ್ಚ. ಲೋಟ್ ಸಿಪ್, ಹಿ ಆದೇಶ. **ಧಿನ್ವಿಕೃಣ್ವ್ಯೋರ ಚ** ಎಂಬುದರಿಂದ ಉಪ್ರತ್ಯಯವೂ ವ್‌ಗೆ ಅಕಾರಾದೇಶವೂ ಬರುತ್ತೆ. ಕೃನ+ಉ+ಹಿ **ಅತೋ ಲೋಪಃ** ಎಂದು ಅಕಾರಲೋಪ. **ಋವರ್ಣಾನ್ನಸ್ಯಣತ್ವಂ ವಾಚ್ಯಂ** ಎಂದು ನಕಾರಕ್ಕೆ ಣಕಾರ. **ಉತಶ್ಚ ಪ್ರತ್ಯಯಾದಸಂಯೋಗ ಪೂರ್ವಾತ್** (ಪಾ ಸೂ. ೬-೪-೧೬೬) ಸಂಯೋಗಪೂರ್ವಕವಲ್ಲದ ಯಾವ ಪ್ರತ್ಯಯವಾದ ಉಕಾರವಿದೆಯೋ ಅದರ ಮುಂದೆ, ಇರುವ ಹಿಗೆ ಲುಕ್ ಬರುತ್ತೆ ಎಂದು ಹಿಗೆ ಲುಕ್.

**ವಿದಃ**—ವಿದ ಜ್ಞಾನೇ, ಲೇಟ್, ಸಿಪ್, ಅಡಾಗಮ, **ಇತಶ್ಚಲೋಪಃ**—, ಎಂದು ಇಕಾರಕ್ಕೆ ಲೋಪ ಅದಾದಿಯಾದ್ದರಿಂದ ಶಪ್‌ಗೆ ಲುಕ್. ಲಘೂಪಧಗುಣ ಬರುವುದಿಲ್ಲ. ರುತ್ವ ವಿಸರ್ಗಗಳು ॥ ೭ ॥



॥ ಸಂಹಿತಾಪಾಠಃ ॥

ಅಭಿ ಸೂಯವಸಂ ನಯ ನ ನವಜ್ವಾರೋ ಅಧ್ವನೇ ।
ಪೂಷನ್ನಿಹ ಕ್ರತುಂ ವಿದಃ ॥ ೮ ॥

॥ ಪದಪಾಠಃ ॥

ಅ॒ಭಿ । ಸು॒ऽಯ॒ವ॑ಸಂ । ನ॒ಯ॒ । ನ । ನ॒ವ॒ऽಜ್ವಾ॒ರಃ । ಅಧ್ವ॑ನೇ ।

ಪೂಷ॑ನ್ । ಇ॒ಹ । ಕ್ರತು॑ಂ । ವಿ॒ದಃ ॥ ೮ ॥

ಸಾಯಣಭಾಷ್ಯಂ

**ಹೇ ಪೂಷನ್ ಸುಯವಸಂ ಶೋಭನತೃಣೋಪಲಕ್ಷಿತಂ ಸರ್ವೌಷಧಿಯುಕ್ತಂ ದೇಶಮಭಿ ನಯ । ಅಸ್ಮಾನಭಿತಃ ಪ್ರಾಪಯ । ಅಧ್ವನೇ ಮಾರ್ಗಾಯ ನವಜ್ವಾರೋ ನೂತನಃ ಸಂತಾಪೋ ನ ಭವತ್ವಿತಿಶೇಷಃ । ಮಾರ್ಗೇ ಗಚ್ಛತಾ ಮಸ್ಮಾಕಮಿದಾನೀಂತನಃ ಕ್ಲೇಶಃ ಕೋऽಪಿ ಮಾ ಭೂದಿತ್ಯರ್ಥಃ । ಗತಾರ್ಥಮನ್ಯತ್ । ಸೂಯವಸಂ । ಶೋಭನಂ ಯವಸಂ ಯಸ್ಮಿನ್ದೇಶೇ ಸ ಸೂಯವಸೋ ದೇಶಃ । ನಿಪಾತಸ್ಯ ಚೇತಿ ಪೂರ್ವಪದಸ್ಯ ದೀರ್ಘತ್ವಂ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಕೃತ್ವಾದಿರ್ವಾ ದ್ರಷ್ಟವ್ಯಃ । ನವಜ್ವಾರಃ । ಜ್ವರ ರೋಗೇ । ಭಾವೇ ಘಞ್ । ನವಶ್ಚಾಸೌ ಜ್ವಾರೋ ನವಜ್ವಾರಃ । ಥಾಥಾದಿನೋತ್ತರಪದಾಂತೋದಾತ್ತತ್ವಂ ॥**

ಪ್ರತಿಪದಾರ್ಥ

**ಪೂಷನ್**— ಎಲೈ ಪೂಷದೇವನೇ । **ಸುಯವಸಂ**— ಶ್ರೇಷ್ಠವಾದ ಹಸರುಹುಲ್ಲುಗಳಿಂದಲೂ, ಓಷಧಿ ವನಸ್ಪತಿಗಳಿಂದಲೂ ಸಮೃದ್ಧವಾದ ಪ್ರದೇಶಕ್ಕೆ । **ಅಭಿನಯ**— (ನಮ್ಮನ್ನು) ಕರೆದುಕೊಂಡುಹೋಗಿ ಸೇರಿಸು. । **ಅಧ್ವನೇ**— ದಾರಿಯಲ್ಲಿ । **ನವಜ್ವಾರಃ**— (ಬೇಸಿಗೆಯ) ಹೊಸತಾಪವು । **ನ**—ಉಂಟಾಗದಿರಲಿ. । **ಇಹ**— ಈ ಮಾರ್ಗ (ಪ್ರಯಾಣ) ದಲ್ಲಿ । **ಕ್ರತುಂ**— (ನಮ್ಮ) ರಕ್ಷಣಾಪ್ರಕಾರವನ್ನು । **ವಿದಃ**—ತಿಳಿದುಕೊ ।

॥ ಭಾವಾರ್ಥ ॥

ಎಲೈ ಪೂಷದೇವನೇ, ಶ್ರೇಷ್ಠವಾದ ಪಚ್ಚೆಹುಲ್ಲುಗಳಿಂದ ಕೂಡಿಯೂ, ಉತ್ತಮವಾದ ಮೂಲಿಕೆಯಿಂದ ಕೂಡಿಯೂ ಇರುವ ತಂಪಾದಪ್ರದೇಶಕ್ಕೆ ನಮ್ಮನ್ನು ಕರೆದುಕೊಂಡು ಹೋಗಿ ಸೇರಿಸು. ದಾರಿಯಲ್ಲಿ ನಮಗೆ ತಾಪ ವಾಗದಂತೆ ನೋಡಿಕೊ. ಈ ಮಾರ್ಗಪ್ರಯಾಣದಲ್ಲಿ ನಮ್ಮ ರಕ್ಷಣಾಪ್ರಕಾರವನ್ನು ಚೆನ್ನಾಗಿ ತಿಳಿದುಕೊ.

English Translation

Lead us where there is abundant grass ; let there be no extreme heat on our way ; Pushan, know how to protect us on this journey.

ವಿಶೇಷವಿಷಯಗಳು

**ಸೂಯವಸಂ— ಶೋಭನಂ ಯವಸಂ ಯಸ್ಮಿನ್ದೇಶೇ ಸ ಸೂಯವಸೋ ದೇಶಃ |** ಉತ್ತಮವಾದ ಹುಲ್ಲು ಇರುವ ಪ್ರದೇಶ; ದನಗಳು ಮೇಯುವುದಕ್ಕಾಗಿ ತೃಣಸಮೃದ್ಧಿಯಾದ ದೇಶ.

**ನವಜ್ವಾರಃ— ಜ್ವರ ರೋಗೇ | ಜ್ವರ ಏವ ಜ್ವಾರಃ | ನವಶ್ಚಾಸೌ ಜ್ವಾರಶ್ಚ ನವಜ್ವಾರಃ |** ಹೊಸದಾದ ಅಥವಾ ಅತಿಹೆಚ್ಚಾದ ತಾಪವುಳ್ಳ, ಶಿಖೆಯಿಂದ ಕೂಡಿದ, ಬಿಸಲಿನ ಬೇಗೆಯಿಂದ ಸುಡುತ್ತಲಿರುವ

ವ್ಯಾಕರಣಪ್ರಕ್ರಿಯಾ

**ಸೂಯವಸಮ್**—ಯವಸ ಎಂದರೆ ತೃಣ. ಇಲ್ಲಿ ಓಷಧಿಯು ಬೋಧಿತವಾಗುತ್ತೆ. ಶೋಭನಃ=ಒಳ್ಳೆಯ, ಯವಸಃ=ಓಷಧಿಯು ಯಸ್ಮಿನ್ ಸಃ=ಯಾವ ದೇಶದಲ್ಲಿದೆಯೋ ಅದು ಎಂದರ್ಥ. **ನಿಪಾತಸ್ಯಚ** ಎಂದು ಪೂರ್ವಪದಕ್ಕೆ ದೀರ್ಘ, **ಕೃತ್ಸ್ವಾದಯಶ್ಚ** ಎಂಬುದರಿಂದಲಾದರೂ ಉತ್ತರಪದಕ್ಕೆ ಅದ್ಯುದಾತ್ತವನ್ನು ಹೇಳಬಹುದು.

**ನವಜ್ವಾರಃ**—ಜ್ವರ ರೋಗೇ, ಭಾವಾರ್ಥದಲ್ಲಿ ಘಞ್ ಪ್ರತ್ಯಯ ಬರುತ್ತೆ. ಉಪಧಾವೃದ್ಧಿ. ನವಶ್ಚಾಸೌ ಜ್ವಾರಶ್ಚ ಎಂದು ವಿಗ್ರಹ. **ಥಾಥಘಞ್‌ಕ್ತಾಜಬಿತ್ರಕಾಣಾಂ** ಎಂಬುದರಿಂದ ಉತ್ತರಪದವು ಅಂತೋದಾತ್ತವಾಗುತ್ತೆ || ೮ ||

---

ಸಂಹಿತಾಪಾಠಃ

ಶಗ್ಧಿ ಪೂರ್ಧಿ ಪ್ರ ಯಂಸಿ ಚ ಶಿಶೀಹಿ ಪ್ರಾಸ್ಯುದರಂ |
ಪೂಷನ್ನಿಹ ಕ್ರತುಂ ವಿದಃ || ೯ ||

ಪದಪಾಠಃ

ಶಗ್ಧಿ | ಪೂರ್ಧಿ | ಪ್ರ | ಯಂಸಿ | ಚ | ಶಿಶೀಹಿ | ಪ್ರಾಸಿ | ಉದರಂ |
ಪೂಷನ್ | ಇಹ | ಕ್ರತುಂ | ವಿದಃ || ೯ ||

॥ ಸಾಯಣಭಾಷ್ಯಂ ॥

ಹೇ ಪೂಷನ್ ಶಗ್ಧಿ । ಅಸ್ಮಾನನುಗ್ರಹೀತುಂ ಶಕ್ತೋ ಭವ । ಪೂರ್ಧಿ । ಅಸ್ಮದ್ಗೃಹಂ ಧನೇನ ಪೂರಯ । ಕಿಂಚ ಪ್ರ ಯಂಸಿ । ಅನ್ಯದಪ್ಯಪೇಕ್ಷಿತಂ ವಸ್ತು ಪ್ರಯಚ್ಛ । ಶಿಶೀಹಿ । ಅಸ್ಮಾನ್ಸರ್ವೇಷು ಮಧ್ಯೇ ತೀಕ್ಷ್ಣೀಕುರು । ತೇಜಸ್ವಿನಃ ಕುರ್ವಿತ್ಯರ್ಥಃ । ಉದರಮಸ್ಮದೀಯಂ ಪ್ರಾಸಿ । ಮೃಷ್ಟಾನ್ನೇನ ಸೋಮರಸೇನ ವಾ ಪೂರಯ । ಅನ್ಯತ್ಪೂರ್ವವತ್ ॥ ಶಗ್ಧಿ । ಶಕ್ಲೃ । ಶಕ್ತೌ । ಲೋಟೋ ಹಿಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಹುಝಲ್ಭ್ಯೋ ಹೇರ್ಧಿರಿತಿ ಧಿರಾದೇಶಃ । ಹೇರಪಿತ್ತ್ವಾತ್ಪ್ರತ್ಯಯ-ಸ್ವರೇಣೋದಾತ್ತತ್ವಂ । ಪೂರ್ಧಿ । ಪೄ ಪಾಲನಪೂರಣಯೋಃ । ಶ್ರುಶೃಣುಪೄಕೃವೃಭ್ಯಶ್ಛಂದಸೀತಿ ಹೇರ್ಧಿರಾದೇಶಃ । ಪೂರ್ವವದ್ವಿಕರಣಸ್ಯ ಲುಕ್ । ಉದೋಷ್ಠ್ಯಪೂರ್ವಸ್ಯೇತ್ಯುತ್ವಂ । ಹಲಿ ಚೇತಿ ದೀರ್ಘಃ । ತಿಙಃ ಪರತ್ವಾನ್ನಿಘಾತಾಭಾವಃ । ಯಂಸಿ ಯಮು ಉಪರಮೇ । ಲೋಡರ್ಥೇ ಲಟಿ ಪೂರ್ವವದ್ವಿಕರಣಸ್ಯ ಲುಕ್ । ನಿಘಾತಃ । ಶಿಶೀಹಿ । ಶೋ ತನೂಕರಣೇ । ಲೋಟಿ ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಈ ಹಲ್ಯಘೋರಿತೀತ್ವಂ । ಪ್ರತ್ಯಯಸ್ವರಃ । ಪ್ರಾಸಿ । ಪ್ರಾ ಪೂರಣೇ । ಅದಾದಿತ್ವಾಚ್ಛಪೋ ಲುಕ್ । ಪಿಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ॥

ಪ್ರತಿಪದಾರ್ಥ

**ಪೂಷಃ**—ಎಲೈ ಪೂಷ ದೇವನೇ । **ಶಗ್ಧಿ**—ನಮ್ಮನ್ನು ಅನುಗ್ರಹಿಸಲು ಶಕ್ತನಾಗು । **ಪೂರ್ಧಿ**—ನಮ್ಮ ಮನೆಯನ್ನು ಸಮೃದ್ಧವಾದ ಧನದಿಂದ ತುಂಬು । **ಪ್ರಯಂಸಿ**—(ಇತರ ಅಪೇಕ್ಷಿತಗಳಾದ ಒಳ್ಳೆಯ ಪದಾರ್ಥಗಳನ್ನು ಚನ್ನಾಗಿ ಕೊಡು । **ಶಿಶೀಹಿ**—(ನಮ್ಮನ್ನು ಎಲ್ಲರ ಮಧ್ಯದಲ್ಲಿಯೂ) ತೇಜಸ್ವಿಗಳಾಗುವಂತೆ ಮಾಡು । **ಉದರಂ**—ನಮ್ಮ ಉದರವನ್ನು । **ಪ್ರಾಸಿ**—ಮೃಷ್ಟಾನ್ನದಿಂದ ತುಂಬು । **ಇಹ**—ಈ ಮಾರ್ಗದಲ್ಲಿ । **ಕ್ರತುಂ**—(ನಮ್ಮ) ರಕ್ಷಣಾಪ್ರಕಾರವನ್ನು । **ವಿದಃ**—ತಿಳಿದುಕೊ.

ಭಾವಾರ್ಥ

ಎಲೈ ಪೂಷದೇವನೇ, ನಮ್ಮನ್ನು ಅನುಗ್ರಹಿಸಲು ಶಕ್ತನಾಗು. ನಮ್ಮ ಮನೆಯನ್ನು ಸಮೃದ್ಧವಾದ ಧನದಿಂದ ತುಂಬು. ನಮಗೆ ಅಪೇಕ್ಷಿತಗಳಾದ ಒಳ್ಳೆಯ ಪದಾರ್ಥಗಳನ್ನೊದಗಿಸಿಕೊಡು. ನಮ್ಮನ್ನು ಎಲ್ಲರ ಮಧ್ಯದಲ್ಲಿಯೂ ತೇಜಸ್ವಿಗಳಾಗುವಂತೆ ಮಾಡು. ನಮ್ಮ ಉದರವನ್ನು ಮೃಷ್ಟಾನ್ನದಿಂದ ತುಂಬಿ ನಮಗೆ ತೃಪ್ತಿಯನ್ನುಂಟುಮಾಡು. ಈ ಮಾರ್ಗದಲ್ಲಿ ನಮ್ಮ ರಕ್ಷಣಾಪ್ರಕಾರವು ಹೇಗೆಂಬುದನ್ನು ತಿಳಿದುಕೊಂಡು ನಮ್ಮನ್ನು ರಕ್ಷಿಸು.

English Translation

Be favourable to us, fill us wtth plenty, give us all good things, make us robust and fill our stomachs; O Pusham, know how to protect us on this journey.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಋಷಿಯು ತನಗೆ ಧನ, ಅನ್ನ ಇಷ್ಟಾರ್ಥಗಳು ಮೊದಲಾದವನ್ನು ಕೊಡಬೇಕೆಂದು ಪ್ರಾರ್ಥಿಸಿರುವನು. ಈ ಅರ್ಥವನ್ನು ಸೂಚಿಸುವ **ಶಗ್ಧಿ, ಪೂರ್ಧಿ, ಯಂಸಿ, ಶಿಶೀಹಿ, ಪ್ರಾಸಿ** ಎಂಬ ಕ್ರಿಯಾಪದಗಳನ್ನುಮಾತ್ರ ಉಪಯೋಗಿಸಿದ್ದರೂ ಅವುಗಳಿಗೆ ಅನುಗುಣವಾದ ನಾಮಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕು.

### ವ್ಯಾಕರಣಪ್ರಕ್ರಿಯಾ

**ಶಗ್ಧಿ**—ಶಕ್ಲೃಶಕ್ತೌ. ಲೋಟಿಗೆ ಸಿಪ್, ಹಿ ಆದೇಶ. **ಸ್ವಾದಿಭ್ಯಃಶ್ನುಃ** ಎಂದು ಶ್ನು ವಿಕರಣ **ಬಹುಲಂ ಛಂದಸಿ** ಎಂಬುದರಿಂದ ಅದಕ್ಕೆ ಲುಕ್. **ಹುಝಲ್ಭ್ಯೋಹೇರ್ಧಿಃ** (ಪಾ. ಸೂ. ೬-೪-೧೦೧) ಹುಧಾತು. ಝಲಂತಧಾತು ಇವುಗಳ ಮುಂದೆ ಇರುವ ಹಿಗೆ ಧಿಆದೇಶ ಬರುತ್ತೆ ಎಂದು ಹಿಗೆ ಧಿ ಆದೇಶ. ಹಿಯು ಅಪಿತ್ ಆದ್ದರಿಂದ **ಅನುದಾತ್ತೌ ಸುಪ್ಪಿತೌ** ಎಂದು ಅನುದಾತ್ತ ಬರುವುದಿಲ್ಲ. ಪ್ರತ್ಯಯಸ್ವರದಿಂದ ಉದಾತ್ತವಾಗುತ್ತದೆ.

ಪೂರ್ಧಿ—ಪೄ ಪಾಲನಪೂರಣಯೋಃ. ಲೋಟ್, ಸಿಪ್, ಹಿ ಆದೇಶ, ಹಿಂದಿನಂತೆಯೇ ಇಲ್ಲಿಯೂ ವಿಕರಣಕ್ಕೆ ಲುಕ್. ಆದರೆ ಈ ಧಾತುವು ಜುಹೋತ್ಯಾದಿಯಲ್ಲಿಯೂ, ಕ್ರ್ಯಾದಿಯಲ್ಲಿಯೂ ಪಠಿತವಾಗಿದೆ. ಜುಹೋತ್ಯಾದಿಯನ್ನು ಇಟ್ಟುಕೊಂಡರೆ ಶ್ಲುವಿಗೆ ಬದಲಾಗಿ ಶಪ್‌ಗೆ ಲುಕ್. ಬರುತ್ತೆ. ಕ್ರ್ಯಾದಿಯಾದರೆ ಶ್ನಾಗೆ ಲುಕ್. **ಶ್ರು ಶೃಣು ಪೄಕೃವೃಭ್ಯಶ್ಛಂದಸಿ** ಎಂದು ಹಿಗೆ ಧಿ ಆದೇಶ, **ಉದೋಷ್ಠ್ಯಪೂರ್ವಸ್ಯ** (ಪಾ. ಸೂ. ೭-೧-೧೦೨) ಅಂಗಾವಯವವಾದ ಓಷ್ಠ್ಯವರ್ಣ (ಉ. ಪವರ್ಗ) ಪೂರ್ವಕವಾದ ಋಕಾರವನ್ನು ಕೊನೆಯಲ್ಲಿ ಹೊಂದಿರುವ ಅಂಗದ ಕೊನೆಯವರ್ಣವಾದ ಋಕಾರಕ್ಕೆ ಉಕಾರ ಬರುತ್ತೆ ಎಂದು ಉಕಾರ ಬಂದರೆ, ಪುರ್+ಧಿ ಎಂದಾಗುತ್ತೆ. **ಹಲಿ ಚ**(ಪಾ. ಸೂ. ೮-೨-೭೭ ವ್ಯಂಜನಪರದಲ್ಲಿದ್ದರೆ ರೇಫಾಂತ ಅಥವಾ ವಕಾರಾಂತವಾದ ಧಾತುವಿನ ಉಪಧಾಭೂತವಾದ ಇಕ್‌ಗೆ ದೀರ್ಘ ಬರುತ್ತೆ ಎಂದು ಉಗೆ ದೀರ್ಘ. ಪೂರ್ಧಿ ಎಂದಾಗುತ್ತೆ. ಶಗ್ಧಿ ಎಂಬ ತಿಙಂತದ ಮುಂದೆ ಇರುವುದರಿಂದ ಸರ್ವಾನುದಾತ್ತ ಬರುವುದಿಲ್ಲ.

**ಯಂಸಿ**—ಯಮ ಉಪರಮೆ ೧ನೇ ಗಣ. ಲೋಡರ್ಥದಲ್ಲಿ ಲಿಟ್ ಬರುತ್ತೆ. ಸಿಪ್, ಶಪ್. ಹಿಂದಿನಂತೆಯೇ ಲುಕ್. **ನಶ್ಚಾಪದಾಂತಸ್ಯ ಝಲಿ** ಎಂದು ಮ್‌ಗೆ ಅನುಸ್ವಾರ. ತಿಙ್ಙತಿಙಃ ಎಂದು ಸರ್ವಾನುದಾತ್ತ ಬರುತ್ತೆ.

**ಶಿಶೀಹಿ**—ಶೋ ತನೂಕರಣೇ ದಿವಾದಿ. **ಆದೇಚ ಉಪದೇಶೇಽಶಿತಿ** ಎಂದು ಓಕಾರಕ್ಕೆ ಆಕಾರ. ಲೋಟ್ ಹಿ. **ದಿವಾದಿಭ್ಯಃ ಶ್ಯನ್** ಎಂದು ಶ್ಯನ್‌ವಿಕರಣ. **ಬಹುಲಂ ಛಂದಸಿ** (ಪಾ. ಸೂ. ೨-೪-೭೬) ಎಂದು ಶ್ಯನ್‌ಗೆ ಶ್ಲು. **ಶ್ಲೌ** ಎಂದು ದ್ವಿತ್ವ. **ಬಹುಲಂ ಛಂದಸಿ** (ಪಾ. ಸೂ. ೭-೪-೭೮) ಎಂದು ಅಭ್ಯಾಸದ ಆಕಾರಕ್ಕೆ ಇಕಾರ. **ಉಭೇ ಅಭ್ಯಸ್ತಂ** (ಪಾ. ಸೂ. ೬-೧-೫) ಆರನೇ ಅಧ್ಯಾಯದ ಸೂತ್ರದಿಂದ ದ್ವಿತ್ವ ಹೊಂದಿದ ಶಬ್ದದ ಸಮುದಾಯಕ್ಕೆ ಅಭ್ಯಸ್ತಸಂಜ್ಞೆ ಬರುತ್ತೆ ಎಂದು ಅಭ್ಯಸ್ತಸಂಜ್ಞೆ ಇದೆ. **ಶ್ನಾಭ್ಯಸ್ತಯೋರಾತಃ** ಎಂದು ಆಕಾರಕ್ಕೆ ಲೋಪ. ಹಿಯು ಅಪಿತ್, ಪ್ರತ್ಯಯಸ್ವರ ಬರುತ್ತೆ.

**ಪ್ರಾಸಿ**—ಪ್ರಾ ಪೂರಣೇ ಅದಾದಿ. ಲೋಡರ್ಥದಲ್ಲಿ ಲಟ್. **ಅದಿಪ್ರಭೃತಿಭ್ಯಃ ಶಪಃ** ಎಂದು ಶಪ್‌ಗೆ ಲುಕ್. ಸಿಪ್ ಪಿತ್ ಆದ್ದರಿಂದ **ಅನುದಾತ್ತೌ ಸುಪ್ಪಿತೌ** ಎಂದು ಅನುದಾತ್ತ. ಧಾತುಸ್ವರ ನಿಲ್ಲುತ್ತೆ. ||೯||

---

ಸಂಹಿತಾಪಾಠಃ

ನ ಪೂಷಣಂ ಮೇಥಾಮಸಿ ಸೂಕ್ತೈರಭಿ ಗೃಣೀಮಸಿ ।
ವಸೂನಿ ದಸ್ಮಮೀಮಹೇ ॥ ೧೦ ॥

॥ ಪದಪಾಠಃ ॥

ನ । ಪೂಷಣಂ । ಮೇಥಾಮಸಿ । ಸುಽಉಕ್ತೈಃ । ಅಭಿ । ಗೃಣೀಮಸಿ ।
ವಸೂನಿ । ದಸ್ಮಂ । ಈಮಹೇ ॥ ೧೦ ॥

॥ ಸಾಯಣಭಾಷ್ಯಂ ॥

ಪೂಷಣಂ ದೇವಂ ನ ಮೇಥಾಮಸಿ । ವಯಂ ನ ತು ನಿಂದಾಮಃ । ಕಿಂತು ಸೂಕ್ತೈರ್ವೇದಗತೈರಭಿ ಗೃಣೀಮಸಿ । ಸರ್ವತ್ರ ಸ್ತುಮಃ । ದಸ್ಮಂ ದರ್ಶನೀಯಂ ಪೂಷಣಂ ಪ್ರತಿ ವಸೂನಿ ಧನಾನೀಮಹೇ । ಯಾಚಾಮಹೇ ಮೇಥಾಮಸಿ । ಮೇಥೃ ಮೇಧಾಹಿಂಸನಯೋಃ । ಲಟೇದಂತೋ ಮಸಿರಿತಿ ಮಸ ಇಕಾರಾಗಮಃ । ಸೂಕ್ತೈಃ । ಸುಷ್ಠು ಸ್ತುವತೇ ದೇವತಾಃ ಪ್ರಕಾಶಯಂತೀತಿ ಸೂಕ್ತಾನಿ । ಕ್ತಿಚ್‌ಕ್ತೌ ಚ ಸಂಜ್ಞಾಯಾಮಿತಿ ಕರ್ತರಿ ಕ್ತಃ । ವಚಿ ಸ್ವಪೀತ್ಯಾದಿನಾ ಸಂಪ್ರಸಾರಣಂ । ಥಾಥಾದಿಸ್ವರಃ । ಯದ್ವಾ । ಕರ್ಮಣಿ ನಿಷ್ಠಾ । ಸೂಪಮಾನಾತ್ ಕ್ತಃ । ಪಾ. ೬-೨-೧೪೫ । ಇತ್ಯುತ್ತರಪದಾಂತೋದಾತ್ತತ್ವಂ । ಗೃಣೀಮಸಿ । ಗೄ ಶಬ್ದೇ। ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ । ಇದಂತೋ ಮಸಿಃ । ದಸ್ಮಂ । ಇಷಿಯುಧೀಂಧಿದಸಿಶ್ಯಾಧೂಸೂಭ್ಯೋ ಮಕ್ । ಉ. ೧-೧-೧೪೪ । ಇತಿ ಮಕ್ಪ್ರತ್ಯಯಃ ॥ ೨೫ ॥

॥ ಪ್ರತಿಪದಾರ್ಥ ॥

**ಪೂಷಣಂ**—ಪೂಷ ದೇವನನ್ನು । **ನ ಮೇಥಾಮಸಿ**—ನಾವು ದೂಷಿಸುವುದಿಲ್ಲ । **ಸೂಕ್ತೈಃ**—ದಿವ್ಯ ವಾಕ್ಯಗಳಿಂದ । **ಅಭಿ ಗೃಣೀಮಸಿ**—ಸುತ್ತಲೂ ಸ್ತೋತ್ರವಮಾಡುತ್ತೇವೆ । **ದಸ್ಮಂ**—ಸುಂದರನಾದ ಪೂಷ ದೇವನನ್ನು । **ವಸೂನಿ**—ಧನವನ್ನು (ಧನಕ್ಕಾಗಿ) । **ಈಮಹೇ**—ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಪೂಷದೇವನನ್ನು ನಾವು ದೂಷಿಸುವುದಿಲ್ಲ. ಅವನನ್ನು ದಿವ್ಯವಾಕ್ಯಗಳಿಂದ ಸುತ್ತಲೂ ಸ್ತೋತ್ರ ಮಾಡುತ್ತೇವೆ. ಅವನ ಸುಂದರರೂಪದ ಗುಣಗಾನವನ್ನು ಮಾಡುತ್ತೇವೆ. ಧನಕ್ಕಾಗಿ ಅವನನ್ನು ಪ್ರಾರ್ಥಿಸುತ್ತೇವೆ.

## English Translation

We do not reproach Pushan, but praise him with hymns ; We solicit the good looking (Pushan) for riches.

ವಿಶೇಷವಿಷಯಗಳು:

ಈ ಋಕ್ಕಿನ ಅರ್ಥವು ಸುಲಭಗ್ರಾಹ್ಯವಾಗಿರುವುದು, ವಿಶೇಷವಾದ ತೊಡಕುಗಳೇನೂ ಇರುವುದಿಲ್ಲ. ಅಭಿಪ್ರಾಯವೂ ಸ್ಪಷ್ಟವಾಗಿರುವುದು.

**ನ ಮೇಥಾಮಸಿ—ಮೇಥೃ ಮೇಧಾಹಿಂಸನಯೋಃ । ನ ನಿಂದಾಮಃ ।** ನಿಂದೆಮಾಡುವುದಿಲ್ಲ, ದೂಷಣೆ ಮಾಡುವುದಿಲ್ಲ.

**ಅಭಿ ಗೃಣೀಮಸಿ—ಗೄ ಶಬ್ದೇ । ಸರ್ವತ್ರ ಸ್ತುಮಃ ।** ವಿಶೇಷವಾಗಿ ಸ್ತೋತ್ರಮಾಡುತ್ತೇವೆ.

**ದಸ್ಮಂ—ದರ್ಶನೀಯಂ ।** ನೋಡುವುದಕ್ಕೆ ಸುಂದರನಾದ

**ಈ ಮಹೇ—ಯಾಚಾಮಹೇ ।** ಈಮಹೇ ಯಾಮಿ ಮೊದಲಾದ ಹದಿನೇಳು ಯಾಚ್ಞಾಕರ್ಮ ಶಬ್ದಗಳ ಮಧ್ಯದಲ್ಲಿ ಈಮಹೇ ಎಂಬ ಶಬ್ದವು ಪಠಿತವಾಗಿರುವುದರಿಂದ ಈಮಹೇ ಎಂದರೆ ಪ್ರಾರ್ಥಿಸುತ್ತೇವೆ ಎಂದರ್ಥವು.

ವ್ಯಾಕರಣಪ್ರಕ್ರಿಯಾ

**ಮೇಥಾಮಸಿ**—ಮೇಥೃ ಮೇಧಾಹಿಂಸನಯೋಃ. ೧ನೇ ಗಣದಲ್ಲಿ ಮಿಥೃಮೇಥೃ ಮೇಧಾಹಿಂಸನಯೋಃ ಎಂದು ಪಠಿತವಾಗಿದೆ. ಇದು ಥಕಾರಾಂತ ಎಂದು ಸ್ವಾಮಿ ಎಂಬವರು ಅಭಿಪ್ರಾಯಪಡುವರು. ಲಟ್ಟಿಗೆ ಮಸ್ ಶಪ್, **ಇದನ್ತೋಮಸಿ** ಎಂದು ಇಕ್ ಆಗಮ. ಶಪ್, **ಅತೋ ದೀರ್ಘೋ ಯಞಿ** ಎಂದು ದೀರ್ಘ. ಸರ್ವಾನುದಾತ್ತ.

**ಸೂಕ್ತೈಃ**—ಸುಷ್ಠು ಬ್ರುವತೇ=ಚೆನ್ನಾಗಿ ದೇವತೆಗಳನ್ನು ಸ್ತೋತ್ರಮಾಡುವುವು ಎಂದು ವಿಗ್ರಹ. ಬ್ರೂಞ್ ವ್ಯಕ್ತಾಯಾಂ ವಾಚಿ ಅದಾದಿ. ಇದರ ಮುಂದೆ **ಸ್ತ್ರಿಯಾಂ ಕ್ತಿನ್** **ಕ್ತಿಚ್‌ಕ್ತೌಚ ಸಂಜ್ಞಾಯಾಂ** ಎಂದು ಕ್ತಪ್ರತ್ಯಯ. **ಬ್ರೂಞೋ ವಚಿಃ** ಎಂದು ವಚಿ ಆದೇಶ **ವಚಿ ಸ್ವಪಿ ಯಜಾದೀನಾಂ ಕಿತಿ** ಎಂದು ಸಂಪ್ರಸಾರಣ. ಪೂರ್ವರೂಪ. ಸವರ್ಣದೀರ್ಘ, **ಥಾಥಘಞ್‌ಕ್ತಾ—**,ಎಂದು ಕ್ತಪ್ರತ್ಯಯಾಂತವು ಅಂತೋದಾತ್ತ. ಅಥವಾ ಸುಷ್ಠು ಉಚ್ಯಂತೇ-ದೇವತಾಃ ಏಭಿಃ=ಇವುಗಳಿಂದ ದೇವತೆಗಳು ಚೆನ್ನಾಗಿ ಸ್ತುತಿಸಲ್ಪಡುವರು ಎಂದರ್ಥ. **ನಿಷ್ಠಾ** ಎಂದು ಕರ್ಮಣಿ ಕ್ತಪ್ರತ್ಯಯ. ರೂಪನಿಷ್ಪತ್ತಿ ಹಿಂದಿನಂತೆ. **ಥಾಥಘಞ್‌ಕ್ತಾ—,** ಎಂಬುದನ್ನು ಬಾಧಿಸಿ **ಗತಿರನನ್ತರಃ** ಎಂಬುದರಿಂದ ಗತಿಗೆ ಪ್ರಕೃತಿಸ್ವರ ಪ್ರಾಪ್ತವಾಗುತ್ತೆ. ಅದನ್ನು ಬಾಧಿಸಿ **ಸೂಪಮಾನಾತ್ ಕ್ತಃ** (ಪಾ. ಸೂ. ೬-೨-೧೪೫) ಗತಿಸಂಜ್ಞಕವಾದ ಸುಶಬ್ದ, ಕಾರಕವಾದ ಉಪಮಾನವಾಚಕ ಇವುಗಳ ಮುಂದೆ ಇರುವ ಕ್ತಪ್ರತ್ಯಯಾಂತ ಅಂತೋದಾತ್ತವಾಗುತ್ತೆ ಎಂದು ಅಂತೋದಾತ್ತ ಬರುತ್ತೆ.

**ಗೃಣೀಮಸಿ**—ಗೄ ಶಬ್ದೇ ಕ್ರ್ಯಾದಿ. ಲಟ್, ಮಸ್, ಶ್ನಾವಿಕರಣ. **ಪ್ವಾದೀನಾಂ ಹ್ರಸ್ವಃ** ಎಂದು ಧಾತುವಿಗೆ ಹ್ರಸ್ವ. **ಈ ಹಲ್ಯಘೋಃ** (ಪಾ ಸೂ. ೬-೪-೧೧೩) ಕಿತ್ ವಾ ಙಿತ್ ಆದ ಹಲಾದಿಸಾರ್ವಧಾತುಕ ಪರದಲ್ಲಿದ್ದರೆ ಶ್ನಾ-ಅಭ್ಯಸ್ತ ಇವುಗಳ ಆಕಾರಕ್ಕೆ ಈಕಾರ ಬರುತ್ತೆ ಎಂದು ಈಕಾರ. **ಇದನ್ತೋಮಸಿಃ** ಎಂದು ಇಕಾರಾಗಮ.

**ವಸ್ಮಮ್**—ವಸು ಉಪಕ್ಷಯೇ. **ಇಷಿಯುಧೀನ್ಧಿದಸಿಶ್ಯಾಧೂಸೂಭ್ಯೋ ಮಕ್** (ಉ. ಸೂ. ೧-೧೪೨) ಇಷ ಗತೌ, ಯುಧ ಸಂಪ್ರಹಾರೇ,-ಞಿ ಇನ್ಧೀ ದೀಪ್ತೌ, ದಸು ಉಪಕ್ಷಯೇ, ಶ್ಯೈಙ್ ಗತೌ, ಧೂಞ್ ಕಂಪನೇ. ಷೂಙ್ ಪ್ರಾಣಿಗರ್ಭವಿಮೋಚನೇ ಈ ಧಾತುಗಳ ಮುಂದೆ ಮಕ್‌ಪ್ರತ್ಯಯ ಬರುತ್ತೆ ಎಂದು ಮಕ್ ಪ್ರತ್ಯಯಸ್ವರ. ॥೧೦॥

ಇಲ್ಲಿಗೆ ೪೨ನೇ ಸೂಕ್ತ ಮುಗಿದುದು.

# ನಲವತ್ತಮೂರನೆಯ ಸೂಕ್ತವು

---

**ಕದ್ರುದ್ರಾಯೇತಿ ನವರ್ಚಮಷ್ಟಮಂ ಸೂಕ್ತಂ । ಅತ್ರಾನುಕ್ರಮ್ಯತೇ । ಕದ್ರುದ್ರಾಯ ನವ ರೌದ್ರಂ ತೃತೀಯಾ ಮೈತ್ರಾವರುಣೀ ಚಾಂತ್ಯಸ್ತೃಚಃ ಸೌಮ್ಯೋಽತ್ಯಾನುಷ್ಟುಬಿತಿ । ಘೋರಪುತ್ರಃ ಕಣ್ವ ಋಷಿಃ । ಗಾಯತ್ರೀ ಛಂದಃ । ಯಾಸ್ತೇ ಪ್ರಜಾ ಇತ್ಯಂತ್ಯಾನುಷ್ಟುಪ್ । ರುದ್ರೋ ದೇವತಾ। ಯಥಾ ನೋ ಮಿತ್ರ ಇತ್ಯೇಷಾ ಮಿತ್ರಾವರುಣದೇವತಾಕಾ ಚ । ಅಸ್ಮೇ ಸೋಮೇತ್ಯಾದಿರಂತ್ಯಸ್ತೃಚಸ್ತು**

**ಸೌಮ್ಯ ಏವ । ಸರ್ವೇಷು ರುದ್ರದೇವತಾಕೇಷು ಕರ್ಮಸ್ವನೇನ ದಿಗುಪಸ್ಥಾನಂ ಕರ್ತವ್ಯಂ । ತಥಾ ಚ ಸೂತ್ರಿತಂ । ಕದ್ರುದ್ರಾಯೇಮಾ ರುದ್ರಾಯಾ ತೇ ಪಿತರಿಮಾ ರುದ್ರಾಯ ಸ್ಥಿರಧನ್ವನ ಇತಿ ಸರ್ವರುದ್ರಯಜ್ಞೇಷು ದಿಶಾಮುಪಸ್ಥಾನಂ । ಆ. ಗೃ. ೪-೯-೨೧ । ಇತಿ ।**

ಅನುವಾದವು—**ಕದ್ರುದ್ರಾಯ** ಎಂಬುದು ಈ ಎಂಟನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಅನುಕ್ರಮಣಿಕೆಯಲ್ಲಿ—**ಕದ್ರುದ್ರಾಯ ನವ ರೌದ್ರಂ ತೃತೀಯಾ ಮೈತ್ರಾವರುಣೀ ಚಾಂತ್ಯಸ್ತ್ಯೃಚಃ ಸೌಮ್ಯೋಽಂತ್ಯಾನುಷ್ಟುಬಿತಿ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಘೋರಪುತ್ರನಾದ ಕಣ್ವನು ಋಷಿಯು. ಗಾಯತ್ರೀ ಛಂದಸ್ಸು. **ಯಾಸ್ತೇ ಪ್ರಜಾ** ಎಂಬ ಕೊನೆಯ ಋಕ್ಕು ಅನುಷ್ಟುಪ್ ಛಂದಸ್ಸಿನದು. ಈ ಸೂಕ್ತಕ್ಕೆ ರುದ್ರನು ದೇವತೆಯು. ಆದರೆ **ಯಥಾ ನೋ ಮಿತ್ರ** ಎಂಬ ಋಕ್ಕು ಮಿತ್ರಾವರುಣದೇವತಾಕವು **ಅಸ್ಮೇ ಸೋಮ** ಎಂಬ ಕೊನೆಯ ಮೂರು ಋಕ್ಕುಗಳು ಸೋಮದೇವತಾಕವು. ರುದ್ರದೇವತಾಕವಾದ ಸಮಸ್ತಕರ್ಮಗಳಲ್ಲಿಯೂ ಈ ಸೂಕ್ತದಿಂದ ದಿಕ್ಕುಗಳ ಉಪಸ್ಥಾನವನ್ನು ಮಾಡಬೇಕೆಂದು ಆಶ್ವಲಾಯನಗೃಹ್ಯಸೂತ್ರದಲ್ಲಿ—**ಕದ್ರುದ್ರಾಯ (ಋ. ಸಂ. ೧-೪೩) ಇಮಾ ರುದ್ರಾಯ (ಋ. ಸಂ. ೧-೧೧೪) ಆ ತೇ ಪಿತಃ (ಋ. ಸಂ. ೨-೩೩) ಇಮಾ ರುದ್ರಾಯ ಸ್ಥಿರಧನ್ವನೇ (ಋ. ಸಂ. ೭-೪೬)** ಎಂಬ ಸೂಕ್ತಗಳಿಂದ ದಿಕ್ಕುಗಳ ಉಪಸ್ಥಾನವನ್ನು ಮಾಡಬೇಕೆಂದು ನಿರ್ದಿಷ್ಟವಾಗಿರುವುದು. (ಆ. ಗೃ. ೪-೯-೨೧).

॥ ಓಂ ॥

## ಸೂಕ್ತ—೪೩

॥ ಮಂಡಲ—೧ ॥ ಅನುವಾಕ—೮ ॥ ಸೂಕ್ತ—೪೩ ॥

॥ ಅಷ್ಟಕ— ೧ ॥ ಅಧ್ಯಾಯ— ೩ ॥ ವರ್ಗ—೨೬, ೨೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೯ ॥

॥ ಋಷಿಃ— ಕಣ್ವೋ ಘೌರಃ ॥

॥ ದೇವತಾ— ೧, ೨, ೪-೬ ರುದ್ರಃ ೩. ಮಿತ್ರಾವರುಣೌ । ೭-೯ ಸೋಮಃ ॥

॥ ಛಂದಃ—೧-೮ ಗಾಯತ್ರೀ । ೯. ಅನುಷ್ಟುಪ್ ॥

|| ಸಂಹಿತಾಪಾಠಃ ||

ಕದ್ರುದ್ರಾಯ ಪ್ರಚೇತಸೇ ಮೀಳ್ಹುಷ್ಟಮಾಯ ತವ್ಯಸೇ ।
ವೋಚೇಮ ಶಂತಮಂ ಹೃದೇ ॥ ೧ ॥

ಪದಪಾಠಃ

ಕತ್ । ರುದ್ರಾಯ । ಪ್ರಽಚೇತಸೇ । ಮೀಳ್ಹುಃಽತಮಾಯ । ತವ್ಯಸೇ ।
ವೋಚೇಮ । ಶಂಽತಮಂ । ಹೃದೇ ॥ ೧ ॥

ಸಾಯಣಭಾಷ್ಯಂ

ಕತ್ ಕದಾ ರುದ್ರಾಯೈತನ್ನಾಮಕಾಯ ದೇವಾಯ ಶಂತಮಮತಿಶಯೇನ ಸುಖಕರಂ ಸ್ತೋತ್ರಂ ವೋಚೇಮ । ಪಠೇಮ । ಕೀದೃಶಾಯ। ಪ್ರಚೇತಸೇ ಪ್ರಕೃಷ್ಟಜ್ಞಾನಯುಕ್ತಾಯ । ಮೀಳ್ಹುಷ್ಟಮಾಯ ಸೇಕ್ತೃತಮಾಯ ಅಭೀಷ್ಟಕಾಮವರ್ಷಾಯೇತ್ಯರ್ಥಃ । ತವ್ಯಸೇಽತಿಶಯೇನ ಪ್ರವೃದ್ಧಾಯ । ಹೃದೇಽಸ್ಮದೀಯಹೃನ್ನಿಷ್ಠಾಯ ॥ ಕತ್ । ಕದಾ । ಅಂತ್ಯಲೋಪಶ್ಛಾಂದಸಃ । ರುದ್ರಾಯ । ರೋದಯತಿ ಸರ್ವಮಂತಕಾಲ ಇತಿ ರುದ್ರಃ । ರೋದೇರ್ಣಿಲುಕ್ಚ । ಉ. ೨-೨೨ । ಇತಿ ರಕ್ಪ್ರತ್ಯಯಃ । ಪ್ರಚೇತಸೇ । ಚಿತೀ ಸಂಜ್ಞಾನೇ । ಪ್ರಕೃಷ್ಟಂ ಚೇತತೀತಿ ಪ್ರಚೇತಾಃ । ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ-ಚೇತ್ಯಸುನ್ ಪೂರ್ವಪದಪ್ರಕೃತಿಸ್ವರತ್ವಂ ಚ । ಮೀಳ್ಹುಷ್ಟಮಾಯ । ಅತಿಶಯೇನ ಮೀಢ್ವಾನ್ ಮೀಳ್ಹುಷ್ಟಮಃ । ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚೇತಿ ಕ್ವಸುಪ್ರತ್ಯಯಾಂತೋ ನಿಪಾತಿತಃ । ತಮಪ್ಯಯಸ್ಮಯಾದಿತ್ವೇನ ಭತ್ವಾದ್ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ । ತವ್ಯಸೇ । ತವತಿರ್ವೃದ್ಧ್ಯರ್ಥಃ । ಸೌತ್ರೋ ಧಾತುಃ । ಅತಿಶಯೇನ ತವಿತಾ ತವೀಯಾನ್ । ತುಶ್ಛಂದಸೀತೀಯಸುನ್ಪ್ರತ್ಯಯಃ । ತುರಿಷ್ಠೇಮೇಯಸ್ಸ್ವಿತಿ ತೃಲೋಪಃ । ಈಯಸುನ ಈಕಾರಲೋಪಶ್ಛಾಂದಸಃ । ನಿತ್ತ್ವಾದಾದ್ಯುದಾತ್ತತ್ವಂ । ವೋಚೇಮ । ವಚ ಪರಿಭಾಷಣೇ । ಲಿಙ್ಯಾಶಿಷ್ಯಙ್ । ವಚ ಉಮಿತ್ಯುಮಾಗಮಃ । ಯಾಸುಟಃ ಸ್ವರೇಣೈಕಾರ ಉದಾತ್ತಃ । ಹೃದೇ । ಪದ್ದನ್ನಿತ್ಯಾದಿನಾ ಹೃದಯಶಬ್ದಸ್ಯ ಹೃದಾದೇಶಃ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ ॥

ಪ್ರತಿಪದಾರ್ಥ

**ಪ್ರಚೇತಸೇ—** ಶ್ರೇಷ್ಠವಾದ ಜ್ಞಾನದಿಂದ ಯುಕ್ತನಾಗಿಯೂ । **ಮೀಳ್ಹುಷ್ಟಮಾಯ—** ಅತ್ಯಂತ ಸಮೃದ್ಧವಾಗಿ ಇಷ್ಟಾರ್ಥಗಳನು ಕೊಡುವವನೂ । **ತವ್ಯಸೇ—**ಅತ್ಯಂತ ಬಲಶಾಲಿಯೂ । **ಹೃದೇ—**ನಮ್ಮ

ಹೃದಯಗಲ್ಲಿ ಆದೃತನಾಗಿಯೂ ಇರುವ । **ರುದ್ರಾಯ**—ರುದ್ರದೇವನಿಗೆ । **ಶಂತಮಮ್**—ಅತ್ಯಂತ ಸುಖಕರವಾದ ಸ್ತೋತ್ರನನ್ನು । **ಕತ್**—ಯಾವಾಗ । **ವೋಚೇಮ**— ಪಠಿಸೋಣ ?

**ಭಾವಾರ್ಥ**

ಶ್ರೇಷ್ಠವಾದ ಜ್ಞಾನದಿಂದ ಯುಕ್ತನಾಗಿಯೂ, ಅತ್ಯಂತಬಲಶಾಲಿಯಾಗಿಯೂ, ಅತ್ಯಂತ ಸಮೃದ್ಧವಾಗಿ ನಮ್ಮ ಇಷ್ಟಾರ್ಥಗಳನ್ನು ದಯಪಾಲಿಸುವವನೂ, ನಮ್ಮ ಹೃದಯದಲ್ಲಿ ಯಾವಾಗಲೂ ಆದೃತನಾಗಿಯೂ ಇರುವ ರುದ್ರದೇವನಿಗೆ ಅತ್ಯಂತ ಸುಖಕರವಾದ ಸ್ತೋತ್ರವನ್ನು ಯಾವಾಗ ಪಠಿಸೋಣ ?

English Translation

When shall we recite a pleasing hymn to the wise, the most liberal and mighty Rudra whom we cherist in our hearts ?

॥ ವಿಶೇಷವಿಷಯಗಳು ॥

**ಕತ್ – ಕದಾ ।** ಯಾವಾಗ

**ರುದ್ರಾಯ** — ರುದ್ರನೆಂಬ ದೇವನಿಗಾಗಿ, ರುದ್ರಶಬ್ದದ ವ್ಯುತ್ಪತ್ತಿವಿಷಯದಲ್ಲಿ ಯಾಸ್ಕರು ಈರೀತಿ ವಿವರಿಸಿರುವರು.

> **ರುದ್ರಃ । ರುದ್ರೋ ರೌತೀತಿ ಸತಃ। ರೋರೂಯಮಾಣೋ ದ್ರವತೀತಿ ವಾ । ರೋದಯತೇರ್ವಾ । ಯದರುದತ್ತದ್ರುದ್ರಸ್ಯ ರುದ್ರತ್ವಮಿತಿ ಕಾಠಕಂ । ಯದರೋದೀತ್ತದ್ರುದ್ರಸ್ಯ ರುದ್ರತ್ವಮಿತಿ ಹಾರಿದ್ರವಿಕಂ ।** ( ನಿ. ೧೦-೭ )

ಮೇಘನಂತೆ ಎಂದರೆ ಸಿಡಲಿನಂತೆ ಶಬ್ದಮಾಡುವುದರಿಂದ ಈ ದೇವನಿಗೆ ರುದ್ರನೆಂದು ಹೆಸರು. ಅಥವಾ ಮೇಘ ಮಧ್ಯದಲ್ಲಿದ್ದುಕೊಂಡು ಶಬ್ದಮಾಡುತ್ತಾ ದ್ರವವನ್ನು ಎಂದರೆ ಉದಕವನ್ನು ಸುರಿಸುವುದರಿಂದ ರುದ್ರನೆಂದು ಹೆಸರು. ಶತ್ರುಗಳನ್ನು ರೋದನಮಾಡುವಂತೆ (ಅಳುವಂತೆ) ಮಾಡುವವನಾದ್ದರಿಂದ ಇವನಿಗೆ ರುದ್ರನೆಂದು ಹೆಸರು.. ರೋದನಮಾಡಿದ್ದರಿಂದ ರುದ್ರನಿಗೆ ರುದ್ರತ್ವವುಂಟಾಯಿತು ಎಂದು ಕಾಠಕಶಾಖೆಯ ಶ್ರುತಿವಚನವಿರುವುದು ಈ ದೇವನ ಪ್ರಜಾಪತಿಯನ್ನು ಬಾಣದಿಂದ ನೋಯಿಸಿ ಅಳುವಂತೆ (ರೋದಿಸುವಂತೆ) ಮಾಡಿದ್ದರಿಂದ ರುದ್ರನಿಗೆ ರುದ್ರತ್ವವುಂಟಾ ಯಿತು ಎಂದು ಹಾರಿದ್ರವಿಕಶಾಖಾ ( ಕೃಷ್ಣಯಜುರ್ವೇದ ಮೈತ್ರಾಯಣೀಯಶಾಖಾ ) ಪ್ರಭೇದವಚನವಿರುವುದು ಎಂದು ಐತಿಹಾಸಿಕರು ಹೇಳುವರು— ಎಂದು ಅನಯವಾರ್ಥವನ್ನು ವಿವರಿಸಿರುವರು

**ಪ್ರಚೇತಸೇ—ಚಿತೀ ಸಂಜ್ಞಾನೇ । ಪ್ರಕೃಷ್ಟಜ್ಞಾನಯುಕ್ತಾಯ ।** ಅತ್ಯಂತ ಪ್ರಜ್ಞಾಶಾಲಿಯಾಗ, ಉತ್ತಮವಾದ ಜ್ಞಾನವುಳ್ಳ.

**ಮೀಳ್ಹುಷ್ಟಮಾಯ— ಅತಿಶಯೇನ ಮೀಢ್ವಾನ್ ಮೀಳ್ಹುಷ್ಟಮಃ । ತಸ್ಮೈ । ಅಭೀಷ್ಟಕಾಮ ವರ್ಷಾಯ ।** ಅತಿಶಯವಾಗಿ ಅಭೀಷ್ಟಗಳನ್ನು ಕೊಡುವವನು.

**ತವ್ಯಸೇ— ತವತಿರ್ವೃದ್ಧ್ಯರ್ಥಃ । ಅತಿಶಯೇನ ತವಿತಾ ತವೀಯಾನ್ । ಅತಿಶಯೇನ ಪ್ರವೃದ್ಧಾಯ ।** ಅತಿಶಯವಾಗಿ ವೃದ್ಧಿಮಾಡುವವನು, ಕೊಡುವವನು.

**ಶಂತಮಂ—** ಸುಖಕರವಾದ, ಆಹ್ಲಾದಕರವಾದ, ಸಂತೋಷವನ್ನುಂಟುಮಾಡುವ.

**ಹೃದೇ— ಅಸ್ಮದೀಯಹೃನ್ನಿಷ್ಠಾಯ ।** ನಮ್ಮ ಹೃದಯದಲ್ಲಿ ನಾವು ಯಾವಾಗಲೂ ಧ್ಯಾನಿಸುತ್ತಿರುವ, ಸ್ಮರಿಸುತ್ತಿರುವ.

॥ ವ್ಯಾಕರಣಪ್ರಕ್ರಿಯಾ ॥

**ಕತ್**—ಕದಾ ಶಬ್ದದ ಆಕಾರಕ್ಕೆ ಛಾಂದಸವಾಗಿ ಲೋಪ ಬಂದಿದೆ.

**ರುದ್ರಾಯ**—ರೋದಯತಿ ಸರ್ವಮನ್ತಕಾಲೇ ಇತಿ ರುದ್ರಃ, ಪ್ರಳಯಕಾಲಗಲ್ಲಿ ಅಥವಾ ಕೊನೆಗಾಲದಲ್ಲಿ ಎಲ್ಲರನ್ನೂ ಅಳಿಸುವನು ಎಂದರ್ಥ. **ರೋದೇರ್ಣಿಲುಕ್ಚ** (ಉ. ಸೂ. ೨-೧೭೯) ರುದಿರ್ ಅಶ್ರುವಿಮೋಚನೇ ಣಿಜನ್ತ. ಇದರ ಮುಂದೆ ರಕ್‌ಪ್ರತ್ಯಯ, ಣಿಗೆ ಲೋಪ ಇವು ಬರುವುವು ಎಂದು, ಅವು ಬಂದರೆ ರುದ್ರ ಎಂದಾಗುತ್ತೆ.

**ಪ್ರಚೇತಸೇ**—ಪ್ರಕೃಷ್ಟಂ ಚೇತಯತೀತಿ ಪ್ರಚೇತಾಃ. ಚಿತೀ ಸಂಜ್ಞಾನೇ ಧಾತು. **ಗತಿಕಾರಕೋಪಪದಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚ** (ಉ. ಸೂ ೪-೬೬೬) ಎಂಬುದರಿಂದ ಅಸಿಪ್ರತ್ಯಯ. ಪೂರ್ವ ಪದಕ್ಕೆ ಪ್ರಕೃತಿಸ್ವರ, **ಮಿಥುನೇಸಿಃ—,** ಎಂಬ ಸೂತ್ರದಿಂದ ಅಸಿಃ ಎಂದು ಅನುವೃತ್ತವಾಗುತ್ತದೆ. ಆದ್ದರಿಂದ ಅಸುನ್ ಬರುವುದು ಎಂದು ಅರ್ಥವನ್ನು ಹೇಳಕೂಡದು. **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಬರುವ ಉತ್ತರಪದಪ್ರಕೃತಿಸ್ವರವನ್ನು ಬಾಧಿಸಿ ಪೂರ್ವಪದಕ್ಕೆ ಪ್ರಕೃತಿಸ್ವರ ಬರುತ್ತೆ. **ಉಪಸರ್ಗಾಶ್ಚಾಭಿವರ್ಜಮ್** (ಫಿ. ಸೂ. ೮೧) ಎಂದು ಪ್ರ ಆದ್ಯುದಾತ್ತ. ಸಮಾಸಾನಂತರ ಇದೇ ನಿಲ್ಲುತ್ತೆ.

**ಮೀಳ್ಹುಷ್ಟಮಾಯ— ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ** (ಪಾ. ಸೂ. ೬-೧-೧೨) ಇವು ಕ್ವಸ ಪ್ರತ್ಯಯಾಂತವಾಗಿ ನಿಪಾತಿಸಲ್ಪಡುವುವು ಎಂದು ಅರ್ಥ. ಮಿಹ ಸೇಚನೆ, ಧಾತು. ಲಿಟ್‌ಗೆ ಕ್ವಸುಪ್ರತ್ಯಯ. ದ್ವಿತ್ವ, ಇಟ್, ಇವು ಈ ಸೂತ್ರದಲ್ಲಿ ನಿಪಾತಮಾಡಿರುವುದರಿಂದ ಬರುವುದಿಲ್ಲ **ಮಿಹೇರ್ಢತ್ವಂ ಚ** ಎಂಬ ವಾರ್ತಿಕದಿಂದ ಹ್‌ಗೆ ಢತ್ವವೂ, ಇಕಾರಕ್ಕೆ ದೀರ್ಘವೂ ನಿಪಾತನದಿಂದಲೇ ಬರುವುವು. ಮೀಢ್ವಸ್ ಎಂದಾಯಿತು. ಅತಿಶಯೇನ ಮೀಢ್ವಾನ್. **ಅತಿಶಾಯನೇತಮಬಿಷ್ಠನೌ** ಎಂದು ತಮಪ್. ಮೀಢ್ವಸ್+ತಮಪ್, **ಘಕಾಲತನೇಷು—,** ಎಂಬ ಜ್ಞಾಪಕದಿಂದ ಸುಬಂತದ ಮುಂದೆಯೇ ತದ್ಧಿತಪ್ರತ್ಯಯಗಳು ಬರುವುವು ಎಂದು ಹಿಂದೆಯೇ ಉಪಪಾದಿಸಿದೆ ಆಸುಪ್‌ಗೆ ಲುಕ್ ಬಂದಿದ್ದರೂ ಪ್ರತ್ಯಯಲಕ್ಷಣದಿಂದ ಮೀಢ್ವಸ್ ಎಂಬುದು ಪದವಾಗುತ್ತೆ. **ಸುಪ್ತಿಙಂತಂ ಪದಂ** ಎಂದು ಪದಸಂಜ್ಞೆಯು ಪ್ರಕೃತಿಪ್ರತ್ಯಯಸಮುದಾಯಕ್ಕೆ ವಿಹಿತವಾಗಿದೆ. ಆದ್ದರಿಂದ **ನಲುಮತಾಂಗಸ್ಯ**

ಎಂಬುದರಿಂದ ಪದಸಂಜ್ಞೆಯನ್ನು ಮಾಡುವಾಗ ಪ್ರತ್ಯಯಲಕ್ಷಣಕ್ಕೆ ಪ್ರತಿಷೇಧ ಬರುವುದಿಲ್ಲ. ಹೀಗೆ ಬರುವ ಪದ ಸಂಜ್ಞೆಯು **ಅಯಸ್ಮಯಾದೀನಿ ಛಂದಸಿ** (ಪಾ. ಸೂ. ೧-೪-೨೦) ಛಂದಸ್ಸಿನಲ್ಲಿ ಈ ಗಣಕ್ಕೆ ಸೇರಿದ ಶಬ್ದಗಳು ಭಸಂಜ್ಞೆಯನ್ನು ಹೊಂದುವುವು ಎಂಬ ಭಸಂಜ್ಞೆಯಿಂದ ಬಾಧಿತವಾಗುತ್ತದೆ. ಇಲ್ಲಿ **ಉಭಯಸಂಜ್ಞಾ ಪೀತಿ ವಕ್ತವ್ಯಂ** ಎಂಬ ವಾರ್ತಿಕದಿಂದ ಲಕ್ಷ್ಯಾನುರೋಧವಾಗಿ ಭ-ಪದಸಂಜ್ಞೆಗಳೆರಡೂ ಬರುವುವು, ಏವಂಚ **ವಸೋಸ್ಸಂಪ್ರಸಾರಣಂ** ಎಂದು ಸಂಪ್ರಸಾರಣ. ಪೂರ್ವರೂಪ, ಮಾಢುಸ್+ತಮ, **ಆದೇಶಪ್ರತ್ಯಯಯೋಃ** ಎಂದು ಷತ್ವ, **ಶಾಸಿವಸಿಘಸೀನಾಂ ಚ** ಎಂಬುದು ವಸ್ ಧಾತುವಿನಲ್ಲಿ ಬರುವುದೇ ವಿನಾ ವಸುಪ್ರತ್ಯಯದಲ್ಲಿ ಬರಲಾರದು. ಷ್ಟುತ್ವ, ಮಾಢುಷ್ಟಮ. 'ಅಜ್ಮಧ್ಯಸ್ಥ ಢಕಾರಸ್ಯ ಳ್ಹಕಾರಂ ವೈ ಯಥಾಕ್ರಮಮ್ 'ಎಂಬ ಬಹ್ವೃಚಸಂಪ್ರದಾಯದಿಂದ ಢಕಾರಕ್ಕೆ ಳ್ಹಕಾರ. ಮಾಳ್ಹುಷ್ಟಮ ಎಂದಾಗುತ್ತದೆ.

**ತವ್ಯಸೇ**—ತವ ಧಾತುವು ಧಾತುಪಾಠದಲ್ಲಿ ಇಲ್ಲ. ಸೂತ್ರಗಳಲ್ಲಿ ವ್ಯವಹರಿಸಿರುವುದರಿಂದ ಪ್ರಾಮಾಣಿಕವು. ಇದಕ್ಕೆ ವೃದ್ಧಿ ಎಂದರ್ಥ. ತೃಚ್ ಪ್ರತ್ಯಯ. ಅತಿಶಯೇನ ತವಿತಾ ಎಂದು ಅತಿಶಯಾರ್ಥವನ್ನು ವಿವಕ್ಷಿಸಿದರೆ **ತುಶ್ಛಂದಸಿ** ( ಪಾ. ಸೂ. ೫-೩-೫೯ ) ಛಂದಸ್ಸಿನಲ್ಲಿ—ತೃನ್ ತೃಜಂತಗಳ ಮುಂದೆ ಇಷ್ಠನ್ ಈಯಸುನ್‌ಗಳು ಬರುವುವು ಎಂದು ಈಯಸುನ್ ಪ್ರತ್ಯಯ. **ತುರಿಷ್ಠೇಮೇಯಸ್ಸು** (ಪಾ. ಸೂ. ೬-೪-೧೫೪) ಇಷ್ಠನ್, ಇಮನಿಚ್-ಈಯಸುನ್ ಇವು ಪರದಲ್ಲಿದ್ದರೆ ತೃಶಬ್ದಕ್ಕೆ ಲೋಪ ಬರುತ್ತೆ ಎಂದು ತೃಗೆ ಲೋಪ. ಈಯಸುನ್ ಪ್ರತ್ಯಯದ ಈಕಾರಕ್ಕೆ ಛಾಂದಸವಾಗಿ ಲೋಪ. ನಿತ್ ಆದ್ದರಿಂದ ಆದ್ಯುದಾತ್ತ. ಚತುರ್ಥ್ಯೇಕವಚನ.

**ವೋಚೇಮ**—(ಋ. ಸು. ೧-೪೦-೬)ರಲ್ಲಿ ಇದರ ಪ್ರಕ್ರಿಯೆಯನ್ನು ವಿವರಿಸಲಾಗಿದೆ. ಇಲ್ಲಿ ಇದು ಪಾದದ ಆದಿಯಲ್ಲಿರುವುದರಿಂದ **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುವುದಿಲ್ಲ. ಯಾಸುಟ್ ಉದಾತ್ತವಾದ್ದರಿಂದ ಏ-ಉದಾತ್ತವಾಗುತ್ತದೆ.

**ಹೃದೇ**—ಹೃದಯಶಬ್ದದ ಮುಂದೆ ಚತುರ್ಥೀಏಕವಚನ.

**ಪದ್ದನೋಮಾಸ್ ಹೃತ್—,** (ಪಾ. ಸೂ. ೬-೧-೬೩) ಎಂಬುದರಿಂದ ಹೃದಯ ಶಬ್ದಕ್ಕೆ ಹೃತ್ ಆದೇಶ. **ಊಡಿದಂಪದಾದಿ—,** ಎಂಬುದರಿಂದ ವಿಭಕ್ತಿಯು ಉದಾತ್ತ ॥ ೧ ॥



॥ ಸಂಹಿತಾಪಾಠಃ ॥

ಯಥಾ ನೋ ಅದಿತಿಃ ಕರತ್ಪಶ್ವೇ ನೃಭ್ಯೋ ಯಥಾ ಗವೇ।
ಯಥಾ ತೋಕಾಯ ರುದ್ರಿಯಂ ॥ ೨ ॥

॥ ಪದಪಾಠಃ ॥

ಯಥಾ । ನಃ । ಅದಿತಿಃ । ಕರತ್ । ಪಶ್ವೇ । ನೃಽಭ್ಯಃ । ಯಥಾ । ಗವೇ ।
ಯಥಾ । ತೋಕಾಯ । ರುದ್ರಿಯಂ ॥ ೨ ॥

॥ ಸಾಯಣಭಾಷ್ಯಂ ॥

ಅದಿತಿರ್ಭೂಮಿರ್ನೋಽಸ್ಮಾಕಂ ರುದ್ರಿಯಂ ರುದ್ರಸಂಬಂಧಿ ಭೇಷಜಂ ಯಥಾ ಯೇನ ಪ್ರಕಾರೇಣ ಸಿಧ್ಯತಿ ಕರತ್। ತಥಾ ಕರೋತು। ಕಿಂಚ ಯಥಾ ಯೇನ ಪ್ರಕಾರೇಣ ಪಶ್ವೇಽಸ್ಮದೀಯಾಯಾಶ್ವಮಹಿಷಾದಿಪಶವೇ ನೃಭ್ಯೋಽಸ್ಮದೀಯಪುರುಷೇಭ್ಯೋ ವಿಶೇಷೇಣ ಗವೇ ಗೋಜಾತಯೇ ಹಿತಂ ರುದ್ರಿಯಂ ಸಿಧ್ಯತಿ ತಥಾ ಕರೋತು। ಕಿಂಚ ತೋಕಾಯಾಸ್ಮದೀಯಾಯಾಪತ್ಯಾಯ ರುದ್ರಿಯಂ ಯಥಾ ಸಿಧ್ಯತಿ। ತಥಾ ಕರೋತು। ಭೇಷಜಸ್ಯ ರುದ್ರಸಂಬಂಧಿತ್ವಂ ಮಂತ್ರಾಂತರೇ ಸಮಾಮ್ನಾತಂ। ಯಾ ತೇ ರುದ್ರ ಶಿವಾ ತನೂಃ ಶಿವಾ ವಿಶ್ವಾಹಭೇಷಜೀ। ಶಿವಾ ರುದ್ರಸ್ಯ ಭೇಷಜೀ। ತೈ. ಸಂ. ೪-೫-೧೦-೧। ಇತಿ ಗವಾದಿವಿಷಯಭೇಷಜಂ ಚಾನ್ಯತ್ರ ಸ್ಪಷ್ಟಮಾಮ್ನಾತಂ। ಭೇಷಜಂ ಗವೇಽಶ್ವಾಯ ಪುರುಷಾಯ ಭೇಷಜಮಥೋ ಅಸ್ಮಭ್ಯಂ ಭೇಷಜಂ ಸುಭೇಷಜಂ। ತೈ. ಸಂ. ೧-೮-೬-೧। ಇತಿ ॥ ಕರತ್। ಡುಕೃಞ್ ಕರಣೇ। ಲಙಿ ವ್ಯತ್ಯಯೇನ ಶಪ್। ಯದ್ವಾ। ಲೇಟ್ಯಡಾಗಮಃ। ಇತಶ್ಚ ಲೋಪ ಇತೀಕಾರಲೋಪಃ। ಯದ್ವಾ। ಲುಙಿ ಕೃಮೃದೃರುಹಿಭ್ಯಶ್ಛಂದಸೀತಿ ಚ್ಲೇರಙಾದೇಶಃ। ಋದೃಶೋಽಙಿ ಗುಣ ಇತಿ ಗುಣಃ। ಆದ್ಯಯೋಃ ಪಕ್ಷಯೋಃ ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ತೃತೀಯೇ ತು ವ್ಯತ್ಯಯೇನ। ಯದ್ವೃತ್ತಯೋಗಾದನಿಘಾತಃ। ಪಶ್ವೇ। ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾತ್ ಘೇರ್ಙಿತಿ। ಪಾ. ೭-೩-೧೧೧। ಇತಿ ಗುಣಾಭಾವಃ। ಯಣಾದೇಶಃ। ನೃಭ್ಯಃ। ನೃ ಚಾನ್ಯತರಸ್ಯಾಂ। ಪಾ. ೬-೧-೧೮೪। ಇತಿ ವಿಭಕ್ತ್ಯುದಾತ್ತತ್ವಾಭಾವಃ। ಗವೇ। ಸಾವೇಕಾಚ ಇತಿ ಪ್ರಾಪ್ತಸ್ಯ ವಿಭಕ್ತ್ಯುದಾತ್ತಸ್ಯ ನ ಗೋಶ್ವನ್ಸಾವವರ್ಣೇತಿ ಪ್ರತಿಷೇಧಃ। ರುದ್ರಿಯಂ। ರುದ್ರಶಬ್ದಾತ್ತಸ್ಯೇದಮಿತ್ಯರ್ಥೇ ಘಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಅದಿತಿಃ**— ಭೂಮಿಯು । **ನಃ**— ನಮಗೆ । **ರುದ್ರಿಯಂ**— ರುದ್ರಸಂಬಂಧಿಯಾದ ಔಷಧವನ್ನು । **ಯಥಾ**— ಯಾವಪ್ರಕಾರದಿಂದ (ಒದಗಿಸಬೇಕೋ) । **ಕರತ್**— ಆ ಪ್ರಕಾರದಿಂದ ಒದಗಿಸಲಿ. (ಮತ್ತು) । **ಯಥಾ**— ಯಾವಪ್ರಕಾರದಿಂದ । **ಪಶ್ವೇ,**—(ನಮ್ಮ) ಕುದುರೆ, ಎಮ್ಮೆ ಮುಂತಾದ ಪಶುಗಳಿಗೂ । **ನೃಭ್ಯಃ**— (ನಮಗೆ ಸೇರಿದ) ಮನುಷ್ಯರಿಗೂ । **ಗವೇ**— (ನಮ್ಮ) ಗೋಸಮೂಹಕ್ಕೂ (ಸಿಕ್ಕುವಂತೆ ಯಾವರೀತಿ ಮಾಡಬೇಕೋ ಹಾಗೆ ಮಾಡಲಿ. ಅದೂ ಅಲ್ಲದೆ) । **ತೋಕಾಯ**—ನಮ್ಮ ಮಕ್ಕಳಿಗೆ । **ಯಥಾ**—ಸಿಕ್ಕುವಂತೆ ಮಾಡಲಿ. (ಅಥವಾ ಇದು ನಮಗೆಲ್ಲ ಲಭಿಸಬೇಕಾದರೆ ಯಾವ ಸ್ತೋತ್ರವನ್ನು ಪಠಿಸಬೇಕೋ ಅದನ್ನು ಯಾವಾಗ ಪಠಿಸೋಣ.)

ಭಾವಾರ್ಥ

ಭೂಮಿಯು ನಮಗೆ ರುದ್ರಸಂಬಂಧಿಯಾದ ಔಷಧವನ್ನು ಯಾವರೀತಿ ಒದಗಿಸಬೇಕೋ ಆ ರೀತಿ ಒದಗಿಸಲಿ. ಕುದುರೆ, ಗೋವುಗಳು ಮೊದಲಾದ ಪಶುಗಳಿಗೂ, ಮನುಷ್ಯರಿಗೂ, ನಮ್ಮ ಪುತ್ರಪೌತ್ರಾದಿಸಂತತಿಗೂ ಆ ಔಷಧವು ದೊರೆಯುವಂತೆ ಮಾಡಲಿ. (ಈ ರೀತಿ ಅನುಕೂಲವಾಗಲು ನಾವು ಯಾವ ಸ್ತೋತ್ರದಿಂದ ಸ್ತುತಿಸೋಣ ?)

English Translation

( What hymn shall we recite ) that Aditi ( earth ) may obtain for us for our cattle, men, our children, the medicament of Rudra ?

ವಿಶೇಷವಿಷಯ

ಮುಖ್ಯಾಭಿಪ್ರಾಯವು— ಭೂಮಿಯಿಂದ ನಮಗೂ, ನಮ್ಮ ಗೋವುಗಳಿಗೂ, ಅಶ್ವಾದಿಗಳಿಗೂ, ನಮ್ಮ ಪುತ್ರಪೌತ್ರಾದಿಸಂತತಿಗೂ ಅವಶ್ಯಕವಾದ ರುದ್ರಸಂಬಂಧವಾದ ಔಷಧಾದಿಗಳು ಲಭಿಸಬೇಕಾದರೆ ರುದ್ರನನ್ನು ಯಾವ ಪ್ರಕಾರ ಸ್ತೋತ್ರಮಾಡೋಣ ಎಂದು ಹಿಂದಿನ ಋಕ್ಕಿನ ಅರ್ಥದೊಡನೆ ಸಮನ್ವಯ ಮಾಡಬೇಕು.

ರುದ್ರನಿಗೂ ಔಷಧಿಗಳಿಗೂ ಏನು ಸಂಬಂಧವಿರುವುದೆಂದರೆ ಆ ವಿಷಯದಲ್ಲಿ ಭಾಷ್ಯಕಾರರು—

**ಯಾ ತೇ ರುದ್ರ ಶಿವಾ ತನೂಃ ಶಿವಾ ವಿಶ್ವಾ ಹ ಭೇಷಜೀ ।**
**ಶಿವಾ ರುದ್ರಸ್ಯ ಭೇಷಜೀ ತಯಾ ನೋ ಮೃಡ ಜೀವಸೇ**

(ತೈ. ಸಂ. ೪-೫-೧೦-೧)

**ಭೇಷಜಂ ಗವೇಽಶ್ವಾಯ ಪುರುಷಾಯ ಭೇಷಜಮಥೋ ಅಸ್ಮಭ್ಯಂ ಭೇಷಜಂ ಸುಭೇಷಜಂ ಯಥಾಸತಿ ॥**

(ತೈ. ಸಂ ೧-೮-೬೧)

ಎಂಬ ಕೃಷ್ಣಯಜುರ್ವೇದತೈತ್ತಿರೀಯಸಂಹಿತಾವಾಕ್ಯಗಳನ್ನು ಉದಾಹರಿಸಿರುತ್ತಾರೆ. ಇವುಗಳಲ್ಲಿ ಎರಡನೆಯ ಉದಾಹರಣೆಯು ಈ ಋಕ್ಕಿನ ಅರ್ಥವನ್ನೇ ಸ್ಪಷ್ಟವಾಗಿ ಹೇಳಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಕರತ್**—ಡುಕೃಞ್ ಕರಣೇ ಲಙ್. **ತನಾದಿಕೃಞ್ಭ್ಯ ಉಃ** ಎಂದು ಉವಿಕರಣ ಬರಬೇಕು. ಆದರೂ ಇದಕ್ಕೆ ಬದಲಾಗಿ ಶಪ್ ಬರುತ್ತೆ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂದು ಅಡಾಗಮಕ್ಕೆ ನಿಷೇಧ. **ಇತಶ್ಚ** ಎಂದು ಇಕಾರ ಲೋಪ. ಗುಣ-ರಪರತ್ವ, ಇದು ಒಂದು ವಿಧ.

ಕೃ. ಧಾತು ಮುಂದೆ ಲೇಟ್-ತಿಪ್ ಲೇಟ್‌ಗೆ ಅಡಾಗಮ ಶಪ್. **ಇತಶ್ಚ ಲೋಪಃ ಪರಸ್ಮೈಪದೇಷು** ಎಂದು ಇಕಾರಲೋಪ. ಗುಣ. ರಪರತ್ವ. ಕರ್+ಅ+ಅತ್. ಪರರೂಪ. ಇದು ಮತ್ತೊಂದು ವಿಧ. ಈ ಎರಡು ವಿಧದಲ್ಲಿಯೂ ಶಪ್ ಪಿತ್ತಾದ್ದರಿಂದ ಅನುದಾತ್ತ. ಎರಡನೆಯದರಲ್ಲಿ **ಲೇಟೋಽಡಾಟೌ** ಎಂದು ಬರುವ ಅಟ್ ಆಗಮವೂ ಪಿತ್ ಆದ್ದರಿಂದ ಅನುದಾತ್ತ. ಇವುಗಳಿಗೆ ಬರುವ ಏಕಾದೇಶವು **ಸ್ಥಾನೇಂತರತಮಃ** ಎಂಬುದರಿಂದ ಅನುದಾತ್ತ. ಅಂತು ಧಾತ್ವಸ್ವರವೇ ಉಳಿಯುವುದು. ಅಥವಾ ಕೃಧಾತು ಮುಂದೆ ಲುಙ್. ಅಡಭಾವ ಹಿಂದಿನಂತೆ. ಚ್ಲಿ. **ಕೃ ಮೃ. ದೃ ರುಹಿಭ್ಯಶ್ಛಂದಸಿ** ( ಪಾ. ಸೂ. ೩-೧-೫೯ ) ಇವುಗಳ ಮುಂದೆ ಇರುವ ಚ್ಲಿಗೆ ಅಙ್ ವಿಕಲ್ಪವಾಗಿ ಬರುತ್ತೆ ಎಂದು ಚ್ಲಿಗೆ ಅಙ್, **ಋದೃಶೋಽಙಿ ಗುಣಃ** (ಪಾ. ಸೂ. ೭-೪-೧೬) ಅಙ್ ಪರದಲ್ಲಿರುವಾಗ ಋವರ್ಣಾಂತ ಧಾತು, ದೃಶ್ ಧಾತು ಇವುಗಳಿಗೆ ಗುಣ ಬರುತ್ತೆ ಎಂದು ಗುಣ. ರಪರವಾಗಿ ಬರುತ್ತೆ, ತಿಪ್ ಇಕಾರಕ್ಕೆ ಲೋಪ **ವ್ಯತ್ಯಯೋಬಹುಲಂ** ಎಂಬುದರಿಂದ ಧಾತು ಉದಾತ್ತ. ಯದ್ವೃತ್ತಯೋಗ ಇರುವುದರಿಂದ ಸರ್ವಾನುದಾತ್ತವು ಬರುವುದಿಲ್ಲ.

**ಪಶ್ವೇ**—ಪಶು ಶಬ್ದದ ಮುಂದೆ ಚತುರ್ಥೀಏಕವಚನ ಙೇಪ್ರತ್ಯಯ. **ಘೇರ್ಙಿತಿ** (ಪಾ. ಸೂ. ೭-೩-೧೧೧) ಙಕಾರೇತ್ಸಂಜ್ಞಕವಾದ ಸುಪ್ ಪರದಲ್ಲಿದ್ದರೆ ಘಿಸಂಜ್ಞೆಯುಳ್ಳ ಅಂಗಕ್ಕೆ ಗುಣ ಬರುತ್ತೆ ಎಂದು ಸೂತ್ರದ ಅರ್ಥ **ಶೇಷೋಘ್ಯಸಖಿ** ( ಪಾ. ಸೂ. ೧-೪-೭ ) ಸಖಿ ಎಂಬುದನ್ನು ಬಿಟ್ಟು ಹ್ರಸ್ವವಾದ ಇ ಅಥವಾ ಉಗಳನ್ನು ಕೊನೆಯಲ್ಲಿ ಹೊಂದಿರುವ ಶಬ್ದವು ಘಿಸಂಜ್ಞಿಕವಾಗುತ್ತೆ. ಆದರೆ ನದೀಸಂಜ್ಞೆ ಇದ್ದರೆ ಈ ಘಿಸಂಜ್ಞೆ ಬರುವುದಿಲ್ಲ. ಪಶುಶಬ್ದಕ್ಕೆ ಘಿಸಂಜ್ಞೆ ಇರುವುದರಿಂದ ಗುಣವು ಪ್ರಾಪ್ತವಾಗುತ್ತೆ ಆದರೂ **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂದು ಇದು ಅನಿತ್ಯವಾದ್ದರಿಂದ ಇಲ್ಲಿ ಬರುವುದಿಲ್ಲ. **ಇಕೋ ಯಣಚಿ** ಎಂದು ಯಣಾದೇಶ.

**ನೃಭ್ಯಃ**—**ನೃ ಚಾನ್ಯತರಸ್ಯಾಮ್** (ಪಾ. ಸೂ. ೬-೧-೧೮೪) ನೃಶಬ್ದದ ಮುಂದೆ ಇರುವ ಝಲಾದಿಯಾದ ವಿಭಕ್ತಿಯು ವಿಕಲ್ಪವಾಗಿ ಉದಾತ್ತವಾಗುತ್ತೆ ಎಂದು ವಿಕಲ್ಪವಾದ್ದರಿಂದ ಇಲ್ಲಿ ವಿಭಕ್ತಿಗೆ ಉದಾತ್ತ ಬರುವುದಿಲ್ಲ. **ಸಾವೇಕಾಚಃ—,** ಎಂಬ ಸೂತ್ರಕ್ಕೆ ಇದು ಅಪವಾದ.

**ಗವೇ**—ಗೋಷು ಎಂದು ಸಪ್ತಮಿಯಲ್ಲಿ ಗೋ ಎಂಬ ರೂಪ ಇದೆ. ಇಲ್ಲಿ ಗೋಗೆ ಗವ್ ಆದೇಶ ಬಂದಿದೆ. ಸ್ಥಾನಿವದ್ಭಾವದಿಂದ ಸಪ್ತಮೀ ಬಹುವಚನದಲ್ಲಿ ಯಾವ ರೂಪವಿದೆಯೋ ಅದು ಇಲ್ಲಿಯೂ ಇದೆ ಎಂದು ಹೇಳಬೇಕು.

ಆಗ್ದರಿಂದ **ಸಾವೇಕಾಚಃ—,** (ಪಾ. ಸೂ. ೬-೧-೧೬೮) ಎಂದು ವಿಭಕ್ತಿಗೆ ಬರುವ ಉದಾತ್ತಕ್ಕೆ **ನಗೋಶ್ವನ್ಸಾವ-ವರ್ಣರಾಡಙ್ ಕ್ರುಙ್ಕೃದ್ಭ್ಯಃ** (ಪಾ. ಸೂ. ೬-೧-೧೮೨) ಎಂಬುದರಿಂದ ನಿಷೇಧಬರುತ್ತೆ.

**ರುದ್ರಿಯಮ್—ತಸ್ಯೇದಮ್** ಎಂಬ ಅರ್ಥದಲ್ಲಿ ರುದ್ರಶಬ್ದದ ಮುಂದೆ ಘ ಪ್ರತ್ಯಯ. **ಆಯನೇಯೀನೀಯಿಯಃ—,** ಎಂದು ಇಯಾದೇಶ, **ಯಸ್ಯೇತಿಚ** ಎಂದು ಅಕಾರಲೋಪ. ॥ ೨ ॥



ಸಂಹಿತಾಪಾಠಃ

ಯಥಾ ನೋ ಮಿತ್ರೋ ವರುಣೋ ಯಥಾ ರುದ್ರಶ್ಚಿಕೇತತಿ ।
ಯಥಾ ವಿಶ್ವೇ ಸಜೋಷಸಃ ॥ ೩ ॥

॥ ಪದಪಾಠಃ ॥

**ಯಥಾ । ನಃ । ಮಿತ್ರಃ । ವರುಣಃ । ಯಥಾ । ರುದ್ರಃ । ಚಿಕೇತತಿ ।**
**ಯಥಾ । ವಿಶ್ವೇ । ಸಽಜೋಷಸಃ ॥ ೩ ॥**

ಸಾಯಣಭಾಷ್ಯಂ

**ಮಿತ್ರೋ ವರುಣಶ್ಚ ನೋಽಸ್ಮಾನ್ಯಥಾ ಯೇನ ಪ್ರಕಾರೇಣ ಚಿಕೇತತಿ ಅನುಗ್ರಾಹ್ಯತ್ವೇನ ಜಾನಾತಿ । ರುದ್ರೋಽಪಿ ಯಥಾ ಚಿಕೇತತಿ । ಸಜೋಷಸಃ ಸಮಾನಪ್ರೀತಯೋ ವಿಶ್ವೇ ಸರ್ವೇ ದೇವಾ ಯಥಾ ಚಿಕೇತಂತಿ । ತಥಾ ಭವತ್ವಿತಿ ಶೇಷಃ । ಯದ್ವಾ । ಯಥಾಶಬ್ದೋಪೇತಮಂತ್ರದ್ವಯಸ್ಯ ತಥಾ ಕದಾ ವೋಚೇಮೇತಿ ಪೂರ್ವತ್ರಾನ್ವಯಃ ॥ ಚಿಕೇತತಿ । ಕಿತ ಜ್ಞಾನೇ । ಲೇಟ್ಯಡಾಗಮಃ । ನಾಭ್ಯಸ್ತಸ್ಯೇತಿ । ಪಾ. ೭-೩-೮೭ । ಗುಣನಿಷೇಧೋ ನ ಭವತಿ । ಬಹುಲಂ ಛಂದಸೀತಿ ವಕ್ತವ್ಯಮಿತಿ ವಚನಾತ್ । ಸಾರ್ವಧಾತುಕತ್ವಾಚ್ಚಾಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಸಜೋಷಸಃ । ಜುಷೀ**

**ಪ್ರೀತಿಸೇವನಯೋಃ । ಸಮಾನಂ ಜುಷಂತೀತಿ ಸಜೋಷಸಃ । ಸಮಾನಸ್ಯ ಛಂದಸೀತಿ ಸಭಾವಃ । ಅಸುನೋ ನಿತ್ತ್ವಾನ್ನುತ್ತರಪದಸ್ಯಾದ್ಯುದಾತ್ತತ್ವಂ । ತದೇವ ಕೃದುತ್ತರಪದಪ್ರಕೃತಿಸ್ವರತ್ವೇನ ಶಿಷ್ಯತೇ ॥**

॥ ಪ್ರತಿಪದಾರ್ಥ ॥

**ಮಿತ್ರಃ**— ಮಿತ್ರನೂ । **ವರುಣಃ**— ವರುಣನೂ । **ನಃ**— ನಮ್ಮನ್ನು । **ಯಥಾ**— ಯಾವಪ್ರಕಾರ ವಾಗಿ । **ಚಿಕೇತತಿ**— (ನಾವು ಅವರ ಅನುಗ್ರಹಕ್ಕೆ ಪಾತ್ರರು ಎಂದು) ತಿಳಿದುಕೊಳ್ಳುವರೋ । **ರುದ್ರಃ**— ರುದ್ರನೂ (ಕೂಡ) । **ಯಥಾ**— ಯಾವ ಪ್ರಕಾರದಿಂದ (ತಿಳಿಯುವನೋ ಅವರಂತೆಯೇ) । **ಸಜೋಷಸಃ**— ಸಮನಾದ ತೃಪ್ತಿಯುಳ್ಳ । **ವಿಶ್ವೇ**— ಸಕಲದೇವತೆಗಳೂ । **ಯಥಾ**— ಯಾವ ಪ್ರಕಾರದಿಂದ ತಿಳಿಯುವರೋ (ಹಾಗೆಯೇ ನೆರವೇರಲಿ) ಅಥವಾ ಯಾವ ಸ್ತೋತ್ರವನ್ನು ಪಠಿಸುವುದರಿಂದ ಈ ಅನುಗ್ರಹಗಳೆಲ್ಲ ಸಿಕ್ಕುವುದೋ ಆ ಸ್ತೋತ್ರವನ್ನು ಯಾವಾಗ ಪಠಿಸೋಣ ?

ಭಾವಾರ್ಥ

ಯಾವ ಸ್ತೋತ್ರಮಂತ್ರ ಪಠನದಿಂದ ಮಿತ್ರನೂ, ವರುಣನೂ, ರುದ್ರನೂ ಮತ್ತು ಇನ್ನೂ ಅವರಂತೆಯೇ ಸಮಾನವಾದ ತೃಪ್ತಿಯುಳ್ಳ (ಅಥವಾ ತೃಪ್ತಿಯನ್ನಪೇಕ್ಷಿಸುವ) ಸಕಲ ದೇವತೆಗಳೂ ಸಹ ಯಾವ ಪ್ರಕಾರದಿಂದ ನಮ್ಮನ್ನು ಯೋಗ್ಯರನ್ನಾಗಿ ತಿಳಿಯುವರೋ, ಅಥವಾ ಯಾವ ಸ್ತೋತ್ರವನ್ನು ಪಠಿಸುವುದರಿಂದ ಅವರ ಅನುಗ್ರಹ ಗಳು ಸಿಕ್ಕುವುವೋ ಆ ಸ್ತೋತ್ರವನ್ನು ಯಾವಾಗ ಪಠಿಸೋಣ ?

English Translation

( What hymn shall we recite to Rudra ) by which Mitra, Varuna and Rudra and all the gods being gratified, confer favours upon us?

॥ ವಿಶೇಷವಿಷಯಗಳು ॥

**ಚಿಕೇತತಿ**— **ಕಿತ ಜ್ಞಾನೇ । ಅನುಗ್ರಾಹ್ಯತ್ವೇನ ಜಾನಾತಿ ।** ನಾವು ಮಾಡುತ್ತಿರುವ ಸ್ತೋತ್ರವನ್ನು ತಿಳಿದು ನಮಗೆ ಅನುಗ್ರಹಮಾಡುವನು.

**ಸಜೋಷಸಃ**— **ಜುಷೀ ಪ್ರೀತಿಸೇವನಯೋಃ । ಸಮಾನಂ ಜುಷಂತೀತಿ ಸಜೋಷಸಃ । ಸಮಾನ ಪ್ರೀತಯಃ ।** ಸಮನಾದ ಪ್ರೀತಿಯುಳ್ಳವರಾದ ಅಥವಾ ಸಮನಾದ ಸೇವೆಯಿಂದ ತೃಪ್ತರಾದ.

॥ ವ್ಯಾಕರಣಪ್ರಕ್ರಿಯಾ ॥

**ಚಿಕೇತತಿ**— ಕಿತ ನಿವಾಸೇ ರೋಗಾಪನಯನೇ ಚ ಇನೇ ಗಣ. ಕಿತ ಜ್ಞಾನೇ ಜುಹೋತ್ಯಾದಿ. ಕಿತಜ್ಞಾನೇ ಎಂಬುದು ಈಗಿರುವ ಧಾತುಪಾಠಗಳಲ್ಲಿಲ್ಲ. ಅಪೂರ್ವವಾದ ಕಿತಧಾತುವನ್ನು ಜುಹೋತ್ಯಾದಿಯಲ್ಲಿ ಪಠಿಸಿದರೂ ಸಂ

೧ನೇ ಗಣದ ಧಾತುವಿಗೆ ಜ್ಞಾನಾರ್ಥದಲ್ಲಿ ವೃತ್ತಿಯನ್ನೊಪ್ಪಿ ಶಪ್‌ಗೆ ಬಹುಲಗ್ರಹಣದಿಂದ ಶ್ಲು ಹೇಳಬಹುದು. ಕಿಧಾತುವಿಗೆ ಛಾಂದಸವಾಗಿ ತುಗಾಗಮವನ್ನು ಹೇಳಬಹುದು. ಕಿತ್‌ಧಾತು ಮುಂದೆ ಲೇಟ್, ತಿಪ್, ಅಟ್ ಆಗಮ ತಿಗೆ ಬರುತ್ತೆ. ಶಪ್‌ಗೆ ಶ್ಲು ದ್ವಿತ್ವ. ಕಿಕಿತ್+ಅತಿ. **ಕುಹೋಶ್ಚುಃ** ಎಂದು ಚುತ್ವ **ನಾಭ್ಯಸ್ತಸ್ಯಾಚಿ ಪಿತಿ ಸಾರ್ವಧಾತುಕೇ** (ಪಾ. ಸೂ. ೭-೩-೮೭) ಅಜಾದಿ ಪಿತ್ಸಾರ್ವಧಾತುಕ ಪರದಲ್ಲಿದ್ದರೆ ಲಘೂಪಧವಾದ ಇಕ್‌ಗೆ ಗುಣ ಬರುವುದಿಲ್ಲ ಎಂಬುದರಿಂದ ಗುಣವು ಪ್ರಾಪ್ತವಾಗುತ್ತೆ. ಆದರೆ ಈ ಸೂತ್ರದಲ್ಲಿ ವಾರ್ತಿಕಕಾರರು **ಬಹುಲಂ ಛಂದಸೀತಿ ವಕ್ತವ್ಯಂ** ಎಂದು ಹೇಳಿರುವರು. ಆದ್ದರಿಂದ ಛಂದಸ್ಸಿನಲ್ಲಿ ಈ ನಿಷೇಧವು ಬಹುಲವಾಗಿ ಬರುವುದು ಎಂದು ಏರ್ಪಡುತ್ತೆ. ಏವಂಚ ಇಲ್ಲಿ ಈನಿಷೇಧ ಬರುವುದಿಲ್ಲ. ಅತಿ ಎಂಬುದು ಸಾರ್ವಧಾತುಕವಾದ್ದರಿಂದ **ಅಭ್ಯಸ್ತಾನಾಮಾದಿಃ** ಎಂದು ಆದ್ಯುದಾತ್ತಬರುತ್ತೆ.

ವಿಶ್ವೇ—**ಅಶೂಪ್ರುಷಿಲಟಿಕಣಿ ಖಟಿ ವಿಶಿಭ್ಯಃ ಕ್ವನ್** (ಉ. ಸೂ. ೧-೪೯) ಎಂದು ವಿಶ ಪ್ರವೇಶನೇ ಧಾತು ಮುಂದೆ ಕ್ವನ್ ಪ್ರತ್ಯಯ ಬರುತ್ತೆ.

**ಸಜೋಷಸಃ**—ಜುಷೀ ಪ್ರೀತಿಸೇವನಯೋಃ, ಸಮಾನಂ ಜುಷನ್ತೀತಿ ಸಜೋಷಸಃ, ಸಮಾನಶಬ್ದೋಪಪದಕವಾದ ಜುಷ್‌ಧಾತು ಮುಂದೆ **ಸರ್ವಧಾತುಭ್ಯೋಽಸುನ್** (ಉ. ಸೂ ೪-೬೭೮) ಎಂದು ಅಸುನ್‌ಪ್ರತ್ಯಯ. **ಸಮಾನಸ್ಯ ಛಂದಸ್ಯ ಮೂರ್ಧ ಪ್ರಭೃತ್ಯುದರ್ಕೇಷು** (ಪಾ ಸೂ ೬-೩-೮೪) ಮೂರ್ಧನ್, ಪ್ರಭೃತಿ, ಉದರ್ಕ ಇವುಗಳಿಗಿಂತಲೂ ಬೇರೆಯಾದ ಉತ್ತರಪದವು ಪರದಲ್ಲಿದ್ದರೆ ಸಮಾನಶಬ್ದಕ್ಕೆ ಸ ಆದೇಶವು ಛಂದಸ್ಸಿನಲ್ಲಿ ಬರುತ್ತೆ ಎಂಬುದರಿಂದ ಸಮಾನಶಬ್ದಕ್ಕೆ ಸ ಆದೇಶ ಬರುತ್ತೆ. ಅಸುನ್ ನಿತ್ ಆದ್ದರಿಂದ **ಞ್ನಿತ್ಯಾದಿರ್ನಿತ್ಯಂ** ಎಂದು ಉತ್ತರಪದವು ಆದ್ಯುದಾತ್ತ. ಸಮಾಸಾನಂತರ **ಗತಿಕಾರಕೋ—**, ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬಂದು ಅದೇ ನಿಲ್ಲುತ್ತೆ. ||೩||



|| ಸಂಹಿತಾಪಾಠಃ ||

ಗಾಥಪತಿಂ ಮೇಧಪತಿಂ ರುದ್ರಂ ಜಲಾಷಭೇಷಜಂ |

ತಚ್ಛಂಯೋಃ ಸುಮ್ನಮೀಮಹೇ || ೪ ||

॥ ಪದಪಾಠಃ ॥

ಗಾಥಽಪತಿಂ । ಮೇಧಽಪತಿಂ । ರುದ್ರಂ । ಜಲಾಷಽಭೇಷಜಂ ।

ತತ್ । ಶಂಽಯೋಃ । ಸುಮ್ನಂ । ಈಮಹೇ ॥ ೪ ॥

ಸಾಯಣಭಾಷ್ಯಂ

ರುದ್ರಮಭಿಲಕ್ಷ್ಯ ವಯಂ ಶಂಯೋರ್ಬೃಹಸ್ಪತಿಪುತ್ರಸ್ಯ ಸಂಬಂಧಿ ತತ್ಪ್ರಸಿದ್ಧಂ ಸರ್ವಪ್ರಜಾಭ್ಯೋ ಹಿತಂ ಸುಮ್ನಂ ಸುಖಮೀಮಹೇ । ಯಾಚಾಮಹೇ । ಕೀದೃಶಂ ರುದ್ರಂ । ಗಾಥಪತಿಂ ಸ್ತುತಿಪಾಲಕಂ ಮೇಧಪತಿಂ ಯಜ್ಞಪಾಲಕಂ ಜಲಾಷಭೇಷಜಂ ಸುಖರೂಪೌಷಧೋಪೇತಂ । ಯದ್ವಾ । ಉದಕರೂಪೌಷಧೋಪೇತಂ । ಉದಕಂ ಹಿ ರುದ್ರನಾಮಾಭಿಮಂತ್ರಿತಂ ಸದೌಷಧಂ ಭವತಿ ॥ ಗಾಥಪತಿಂ ॥ ಗಾಥೇತಿ ವಾಙ್ನಾಮ । ಗಾಥಾ ಗಣ ಇತಿ ತನ್ನಾಮಸು ಪಠಿತತ್ವಾತ್ । ವಾಗ್ರೂಪಾಯಾಃ ಸ್ತುತೇಃ ಪತಿರ್ಗಾಥಪತಿಃ । ಕೈ ಗೈ ರೈ ಶಬ್ದೇ । ಆದೇಚ ಇತ್ಯಾತ್ವಂ । ಉಷಿಕುಷಿಗಾರ್ತಿಭ್ಯಸ್ಥನ್ನಿತಿ ಥನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಙ್ಯಾಪೋಃ ಸಂಜ್ಞಾಛಂದಸೋರ್ಬಹುಲಮಿತಿ ಪೂರ್ವಪದಸ್ಯ ಹ್ರಸ್ವತ್ವಂ । ಪತ್ಯಾವೈಶ್ವರ್ಯ ಇತಿ ಪೂರ್ವಪದಪ್ರಕೃತಿಸ್ವರೇ ಪ್ರಾಪ್ತೇ ಮರುದ್ವೃಧಾದೀನಾಂ ಛಂದಸ್ಯುಪಸಂಖ್ಯಾನಮಿತಿ ಪೂರ್ವಪದಾಂತೋದಾತ್ತತ್ವಂ । ಮೇಧಪತಿಂ । ಪೂರ್ವವತ್ । ಜಲಾಷಭೇಷಜಂ । ಜನೀ ಪ್ರಾದುರ್ಭಾವೇ । ಜಾಯಂತ ಇತಿ ಜಾಃ । ಅನ್ಯೇಷ್ವಪಿ ದೃಶ್ಯತೇ । ಪಾ. ೩-೨-೧೦೧ । ಇತಿ ದೃಶಿಗ್ರಹಣಾತ್ಕೇವಲಾದಪಿ ಡಪ್ರತ್ಯಯಃ । ಲಾಷಃ । ಲಷ ಕಾಂತೌ । ಕಾಂತಿರಭಿಲಾಷಃ । ಭಾವೇ ಘಞ್ । ಜಾನಾಂ ಲಾಷೋ ಯಸ್ಮಿಂಸ್ತಜ್ಜಲಾಷಂ ಸುಖಂ । ಜಲಾಷರೂಪಂ ಭೇಷಜಂ ಯಸ್ಮಿನ್ರುದ್ರೇ ಸ ಜಲಾಷಭೇಷಜಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಶಂಯೋಃ । ಕಂಶಂಭ್ಯಾಂ । ಪಾ. ೫-೨-೧೩೮ । ಇತಿ ಮತ್ವರ್ಥೀಯೋ ಯುಸ್ಪ್ರತ್ಯಯಃ । ಸಿತಿ ಚ । ಪಾ. ೧-೪-೧೬ । ಇತಿ ಪದಸಂಜ್ಞಾಯಾಮನುಸ್ವಾರಪರಸವರ್ಣೌ । ಪ್ರತ್ಯಯಸ್ವರಃ ॥

॥ ಪ್ರತಿಪದಾರ್ಥ ॥

**ಗಾಥಪತಿಂ**— ಸ್ತೋತ್ರಪಾಲಕನಾಗಿಯೂ । **ಮೇಧಪತಿಂ**— ಯಜ್ಞಪಾಲಕನಾಗಿಯೂ । **ಜಲಾಷಭೇಷಜಂ**— ಸುಖದಾಯಕವಾದ ಔಷಧಿಗಳುಳ್ಳವನಾಗಿಯೂ, ಅಥವಾ, ಉದಕರೂಪವಾದ ಔಷಧಿಗಳುಳ್ಳವನಾಗಿಯೂ ಇರುವ । **ರುದ್ರಂ**—ರುದ್ರನನ್ನು ಕುರಿತು ( ವಯಂ—ನಾವು ) । **ಶಂಯೋಃ**—ಬೃಹಸ್ಪತಿ ಪುತ್ರನಾದ ಶಂಯುವು ಅನುಭವಿಸುತ್ತಿರುವ । **ತತ್**—ಆ ಲೋಕ ಪ್ರಸಿದ್ಧವಾಗಿಯೂ ಸರ್ವಪ್ರಜೆಗಳಿಗೆ ಹಿತಕರವಾಗಿಯೂ ಇರುವ । **ಸುಮ್ನಂ**—ಸುಖವನ್ನು । **ಈ ಮಹೇ**—ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಸ್ತೋತ್ರಪಾಲಕನೂ, ಯಜ್ಞಪಾಲಕನೂ ಮತ್ತು ಸುಖದಾಯಕವಾದ ಔಷಧಿಗಳುಳ್ಳವನೂ ಅಥವಾ ಉದಕರೂಪವಾಗ ಔಷಧಿಗಳನ್ನುಳ್ಳವನೂ ಆದ ರುದ್ರನನ್ನು ನಾವು, ಬೃಹಸ್ಪತಿಪುತ್ರನಾದ ಶಂಯುವು ಅನುಭವಿಸುವ ಪ್ರಸಿದ್ಧವಾದ ಸುಖವನ್ನು ಕೊಡುವುದಕ್ಕಾಗಿ ಪ್ರಾರ್ಥಿಸುತ್ತೇವೆ.

## English Translation

So we pray to Rudra, the lord of hymns, the protector of sacrifices, possessed of medicament that give delight, for such happiness as shown to Samyu.

॥ ವಿಶೇಷವಿಷಯಗಳು ॥

**ಗಾಥಪತಿಂ**— ಶ್ಲೋಕಃ ಧಾರಾ ಮೊದಲಾದ ಐವತ್ತೇಳು ವಾಙ್ನಾಮಗಳ ಮಧ್ಯದಲ್ಲಿ ಗಾಥಾ ಎಂಬ ಶಬ್ದವು ಪಠಿತವಾಗಿರುವುದರಿಂದ ಗಾಥವೆಂದರೆ ಸ್ತುತಿರೂಪವಾದ ವಾಕ್ಯವು. ಗಾಥಪತಿಂ ಎಂದರೆ ಸ್ತೋತ್ರಗಳಿಗೆ ಅಧಿಪತಿಯು, ಎಂದರೆ ಸ್ತೋತ್ರಗಳಿಂದ ಸ್ತುತಿಸಲ್ಪಡುವವನು ಎಂದಭಿಪ್ರಾಯವು.

**ಮೇಧಪತಿಂ—ಯಜ್ಞಪಾಲಕಂ ।** ಯಜ್ಞಸಂರಕ್ಷಕನು

**ಜಲಾಷಭೇಷಜಂ—ಜನೀ ಪ್ರಾದುರ್ಭಾವೇ । ಜಾಯಂತ ಇತಿ ಜಾಃ । ಲಷ ಕಾಂತೌ । ಕಾಂತಿರಭಿಲಾಷಃ । ಜಾನಾಂ ಲಾಷೋ ಯಸ್ಮಿಂಸ್ತಜ್ಜಲಾಷಂ ಸುಖಂ । ಜಲಾಷರೂಪಂ ಭೇಷಜಂ ಯಸ್ಮಿನ್ರುದ್ರೇ ಸ ಜಲಾಷಭೇಷಜಃ ।** ಲಷಧಾತುವಿಗೆ ಅಪೇಕ್ಷಿಸುವುದೆಂದೂ ಜನೀಎಂಬಧಾತುವಿಗೆ ಉತ್ಪನ್ನವಾಗುವುದೆಂದೂ ಅರ್ಥವು. ಆದುದರಿಂದ ನಮ್ಮ ಅಭಿಲಾಷೆಯು ಪೂರ್ಣವಾಗುವುದಕ್ಕೆ ಸುಖವೆಂದು ಹೆಸರು. ಅಂತಹ ಸುಖರೂಪವಾದ ಔಷಧವನ್ನುಳ್ಳ ರುದ್ರನಿಗೆ ಜಲಾಷಭೇಷಜ ಎಂದು ಹೆಸರು. ಅಥವಾ ಉದಕರೂಪವಾದ ಔಷಧಗಳಿಂದ ಯುಕ್ತನಾದವನು ಎಂದು ಬೇಕಾದರೂ ಹೇಳಬಹುದು. ಏಕೆಂದರೆ ರುದ್ರಮಂತ್ರಗಳಿಂದ ಅಭಿಮಂತ್ರಿತವಾದ ಜಲಕ್ಕೆ ರೋಗಗಳನ್ನು ನಿವಾರಣೆಮಾಡುವ ಔಷಧ ಶಕ್ತಿಯಿರುವುದೆಂದು ಪ್ರಸಿದ್ಧವು

**ಶಂಯೋಃ**—ಬೃಹಸ್ಪತಿಯ ಮಗನಿಗೆ ಶಂಯುವೆಂದು ಹೆಸರು. ಈ ಶಂಯುವು ಋಗ್ವೇದ ಸಂಹಿತೆಯ ಆರನೇ ಮಂಡಲದ ೪೪, ೪೫, ೪೬, ೪೮ ಸೂಕ್ತಗಳಲ್ಲಿರುವ ಒಟ್ಟು ೯೩ ಋಕ್ಕುಗಳಿಗೆ ಋಷಿಯಾಗಿರುವನು. ಈ ಋಷಿಗೆ ರುದ್ರಾದಿದೇವತೆಗಳ ಅನುಗ್ರಹದಿಂದ ಉತ್ತಮವಾದ ಸುಖವು ಪ್ರಾಪ್ತಿಯಾಯಿತೆಂದು ಪ್ರಸಿದ್ಧಿಯು. ಇಂತಹ ಪ್ರಸಿದ್ಧವಾದ ಸುಖವನ್ನು ಕೊಡಬೇಕೆಂದು ಋಷಿಯು ಪ್ರಾರ್ಥಿಸಿರುವನು. **ತಚ್ಛಂಯೋರಾವೃಣೀಮಹೇ** ಮೊದಲಾದ ಅನೇಕ ಶ್ರುತಿವಾಕ್ಯಗಳಲ್ಲಿಯೂ ಸಹ ಶಂಯುವಿಗೆ ಲಭಿಸಿದ ಸುಖವನ್ನೇ ನಾವು ಅಪೇಕ್ಷಿಸುವೆವು ಎಂದು ದೇವತೆಗಳನ್ನು ಪ್ರಾರ್ಥಿಸಿರುವ ಸಂದರ್ಭಗಳು ಅನೇಕವಿವೆ ಆದುದರಿಂದ ಶಂಯುವಿನ ಸುಖವು ಮಹತ್ತರವಾದುದೆಂದು ಪ್ರಸಿದ್ಧವು.

ವ್ಯಾಕರಣಪ್ರಕ್ರಿಯಾ

**ಗಾಥಪತಿಂ**—ಗಾಥಾಗುಣಃ (ನಿರು ೧-೧೧-೩೭)ರಲ್ಲಿ ಯಾಸ್ಕರು ವಾಙ್ನಾಮ ಮಧ್ಯಗಲ್ಲಿ ಗಾಥಾ ಶಬ್ದವನ್ನು ಪಠಿಸಿರುವರು. ಆದ್ದರಿಂದ ಗಾಥಾ ಎಂದರೆ ವಾಕ್ ಎಂದು ಅರ್ಥ, ಇಲ್ಲಿ ವಾಗ್ರೂಪವಾದ ಸ್ತುತಿಯು ಈ ಪದದಿಂದ ಬೋಧಿತವಾಗುತ್ತೆ. ಕೈ ಗೈ ಶಬ್ದೇ ಧಾತು. **ಆದೇಚ ಉಪದೇಶೇಽಶಿತಿ** ಎಂದು ಗೈ ಧಾತು ಐಕಾರಕ್ಕೆ ಆಕಾರ. **ಉಷಿಕುಷಿಗಾತಿಭ್ಯಸ್ಥನ್** (ಉ. ಸೂ. ೨-೧೬೧) ಎಂದು ಥನ್ ಪ್ರತ್ಯಯ. ಸ್ತ್ರೀತ್ವ ತೋರುವುದರಿಂದ **ಅಜಾದ್ಯತಷ್ಟಾಪ್** ಎಂದು ಟಾಪ್, ಸವರ್ಣದೀರ್ಘ. ಗಾಥಾ ಎಂದಾಗುತ್ತೆ, **ಪಾತೇರ್ಡತಿಃ** ಎಂದು ಡತಿ ಪ್ರತ್ಯಯ ಬಂದರೆ ಪತಿ ಎಂದಾಗುತ್ತೆ. ಗಾಥಾಯಾಃ ಪತಿಃ, ಗಾಥಪತಿಃ. **ಙ್ಯಾಪೋಃ ಸಂಜ್ಞಾಛಂದಸೋರ್ಬಹುಲಂ** (ಪಾ. ಸೂ. ೬-೩ ೬೩) ಸಂಜ್ಞೆ ತೋರಿದರೂ, **ಛಂದಸ್ಸಿನಲ್ಲಿಯೂ** ಉತ್ತರಪದವು ಪರದಲ್ಲಿದ್ದರೆ ಙೀ ಆಪ್‌ಗಳಿಗೆ ಬಹುಲವಾಗಿ ಹ್ರಸ್ವ ಬರುತ್ತೆ ಎಂದು ಪೂರ್ವಪದದ ಟಾಪ್‌ಗೆ ಹ್ರಸ್ವ. ಗಾಥ ಎಂಬುದು ನಿತ್ಸ್ವರದಿಂದ ಆದ್ಯುದಾತ್ತ. **ಪತ್ಯಾವೈಶ್ವರ್ಯೇ** ಎಂದು ಪೂರ್ವಪದಪ್ರಕೃತಿಸ್ವರವು ಪ್ರಾಪ್ತವಾದರೆ **ಮರುದ್ವೃಧಾದೀನಾಂ ಛಂದಸ್ಯುಪಸಂಖ್ಯಾನಂ** ಎಂಬುದರಿಂದ ಪೂರ್ವಪದಕ್ಕೆ ಅಂತೋದಾತ್ತ ಬರುತ್ತೆ.

**ಮೇಧಪತಿಮ್**—ಪೂರ್ವದಂತೆಯೇ ಪ್ರಕ್ರಿಯೆಯನ್ನು ಹೇಳಬೇಕು.

**ರುದ್ರಮ್**—**ರೋರೇರ್ಣಿಲುಕ್ಚ** ಎಂದು ರಕ್‌ಪ್ರತ್ಯಯ.

**ಜಲಾಷಭೇಷಜಮ್**—ಜನೀ ಪ್ರಾದುರ್ಭಾವೇ ಧಾತು. ಜಾಯನ್ತೇ ಇತಿ ಜಾಃ **ಅನ್ಯೇಷ್ವಪಿ ದೃಶ್ಯತೇ** (ಪಾ. ಸೂ. ೩-೨-೧೦೧) ಬೇರೇ ಉಪಪದಗಳಿದ್ದರೂ ಜನ್‌ಧಾತು ಮುಂದೆ ಡ ಪ್ರತ್ಯಯವು ದೃಷ್ಟವಾಗಿದೆ ಎಂದು ಅರ್ಥ. ಇಲ್ಲಿ ದೃಶ್ಯತೇ ಎಂದು ಹೇಳಿರುವುದರಿಂದ ಉಪಪದ ಇಲ್ಲದೇ ಇದ್ದರೂ ಈ ಡಪ್ರತ್ಯಯ ಬರುತ್ತೆ. ಟಿಲೋಪ. ಲಷ ಕಾನ್ತೌ ಧಾತು. ಇದರ ಮುಂದೆ ಭಾವಾರ್ಥದಲ್ಲಿ ಘಞ್‌ಪ್ರತ್ಯಯ, ಉಪಧಾವೃದ್ಧಿ. ಲಾಷ ಎಂದು ಆಗುತ್ತೆ. ಕಾನ್ತಿ ಎಂದರೆ ಇಚ್ಛೆ. ಜಾನಾಂ=ಹುಟ್ಟಿದವರಿಗೆ, ಲಾಷಃ=ಇಚ್ಛೆಯು ಯಸ್ಮಿನ್ ತತ್=ಯಾವ ಸುಖದಲ್ಲಿದೆಯೋ ಅಂತಹ ಸುಖ ಎಂದು ವಿಗ್ರಹವಾಕ್ಯದ ಅರ್ಥ. ಭೇಷಂ=ರೋಗವನ್ನು, ಜಯತಿ=ಜಯಿಸುವುದು ಎಂದು ವಿವಕ್ಷಿಸಿದರೆ ಭೇಷಜಂ ಎಂದಾಗುತ್ತೆ. ಜಲಾಷಂ ಭೇಷಜಂ ಯಸ್ಯಸಃ ಎಂದು ಬಹುವ್ರೀಹಿಗರ್ಭವಾದ ಬಹುವ್ರೀಹಿ. ಸುಖರೂಪವಾದ ಔಷಧವು ಯಾವ ರುದ್ರನಲ್ಲಿದೆಯೋ ಅಂತಹ ರುದ್ರನು ಜಲಾಷಭೇಷಜ ಪದದಿಂದ ಬೋಧಿಸಲ್ಪಡುತ್ತಾನೆ. ಬಹುವ್ರೀಹಿಯಾದ್ದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತೆ

**ಶಂಯೋಃ**—**ಕಂಶಂಭ್ಯಾಂ ಬಭಯುಸ್ ತಿತುತಯಸಃ** (ಪಾ. ಸೂ. ೫-೨-೧೩೮) ಕಮ್, ಶಮ್ ಎರಡೂ ಮಾಂತವಾದ ಅವ್ಯಯಗಳು. ಕಮ್ ಎಂದರೆ ಜಲ ಅಥವಾ ಸುಖ ಎಂದರ್ಥ. ಶಂ ಎಂದರೆ ಸುಖ ಎಂದರ್ಥ. ಈ ಶಬ್ದಗಳ ಮುಂದೆ ಸೂತ್ರದಲ್ಲಿ ಹೇಳಿರುವ ಏಳು ಪ್ರತ್ಯಯಗಳು ಮತುಪ್ ಪ್ರತ್ಯಯದ ಅರ್ಥದಲ್ಲಿ ಬರುವುವು ಎಂದು ಸೂತ್ರದ ಅರ್ಥ. ಇದರಿಂದ ಶಮ್ ಶಬ್ದದ ಮುಂದೆ ಯುಸ್ ಬಂದರೆ ಶಮ್+ಯು ಎಂದಿರುತ್ತೆ. **ಸಿತಿ ಚ** (ಪಾ. ಸೂ ೧-೪-೧೬) ಸಕಾರೇತ್ಸಂಜ್ಞಕಪ್ರತ್ಯಯವು ಪರದಲ್ಲಿದ್ದರೆ ಪೂರ್ವದಲ್ಲಿರುವುದು ಪದಸಂಜ್ಞಕ

ನಾಗುತ್ತೆ ಎಂದು ಶಮ್‌ಗೆ ಪದಸಂಜ್ಞೆ. **ಮೋಽನುಸ್ವಾರಃ** (ಪಾ ಸೂ ೮-೩-೨೩) ವ್ಯಂಜನ ಪರದಲ್ಲಿದ್ದರೆ ಮಕಾರಾಂತವಾದ ಪದಕ್ಕೆ ಅನುಸ್ವಾರ ಬರುತ್ತೆ ಎಂದು ಅನುಸ್ವಾರ. **ಅನುಸ್ವಾರಸ್ಯ ಯಯಿ ಪರಸವರ್ಣಃ** (ಪಾ. ಸೂ. ೮ ೪-೫೮) ಎಂದು ಅನುಸ್ವಾರದ ಸ್ಥಾನದಲ್ಲಿ ಅನುನಾಸಿಕವೂ ಪರಸವರ್ಣವೂ ಆದ ಯ್ँ ಬರುತ್ತೆ. ಶಯ್ँ ಯು ಎಂದಾಗುತ್ತೆ. ಪ್ರತ್ಯಯಸ್ವರ, ಗುಣ, **ಜಸಿ ಜಸೋಃಶ್ಚ** (ಪಾ. ಸೂ ೬-೧-೧೧೦) ಎಂದು ಪೂರ್ವರೂಪ ರುತ್ವವಿಸರ್ಗಗಳು. ಶಯ್ँಯೋಃ ಎಂದು ಆಗುತ್ತೆ. ॥೪॥

ಸಂಹಿತಾಪಾಠಃ

ಯಃ ಶುಕ್ರ ಇವ ಸೂರ್ಯೋ ಹಿರಣ್ಯಮಿವ ರೋಚತೇ ।
ಶ್ರೇಷ್ಠೋ ದೇವಾನಾಂ ವಸುಃ ॥ ೫ ॥

ಪದಪಾಠಃ

ಯಃ । ಶುಕ್ರಃ ऽ ಇವ । ಸೂರ್ಯಃ । ಹಿರಣ್ಯಂ ऽ ಇವ । ರೋಚತೇ ।
ಶ್ರೇಷ್ಠಃ । ದೇವಾನಾಂ । ವಸುಃ ॥ ೫ ॥

ಸಾಯಣಭಾಷ್ಯಂ

ಯೋ ರುದ್ರಃ ಸೂರ್ಯ ಇವ ಶುಕ್ರಃ ಸೂರ್ಯವದ್ದೀಪ್ತಿಮಾನ್ । ಹಿರಣ್ಯಮಿವ ರೋಚತೇ । ಯಥಾ ಸರ್ವೇಷಾಂ ಪ್ರಾಣಿನಾಂ ಹಿರಣ್ಯಂ ಪ್ರೀತಿಕರಂ ಭವತಿ ತಥಾ ರುದ್ರೋಽಪಿ । ಸ ಚ ದೇವಾನಾಂ ಸರ್ವೇಷಾಂ ಮಧ್ಯೇ ಶ್ರೇಷ್ಠೋ ವಸುರ್ನಿವಾಸಹೇತುಶ್ಚ ॥ ರೋಚತೇ । ರುಚ ದೀಪ್ತಾವಭಿಪ್ರೀತ್ಯಾಂ ಚ ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಶ್ರೇಷ್ಠಃ ಪ್ರಶಸ್ಯತರಃ । ಪ್ರಶಸ್ಯಶಬ್ದಾದಿಷ್ಠನಿ

**ಪ್ರಶಸ್ಯಸ್ಯ ಶ್ರಃ । ಪಾ. ೫-೩-೬೦ । ಇತಿ ಶ್ರಾದೇಶಃ । ನಿತ್ತ್ವಾದಾದ್ಯುದಾತ್ತತ್ವಂ । ವಸುಃ । ವಾಸಯತಿ ಸರ್ವಮಿತಿ ವಸುಃ । ವಸ ನಿವಾಸೇ । ಅಂತರ್ಭಾವಿತಣ್ಯರ್ಥಾತ್ ಶೃಸ್ವೃಸ್ನಿಹೀತ್ಯಾದಿನೋಪ್ರತ್ಯಯಃ । ನಿದಿತ್ಯನುವೃತ್ತೇರಾದ್ಯುದಾತ್ತತ್ವಂ ॥ ೨೬ ॥**

ಪ್ರತಿಪದಾರ್ಥ

**ಯಃ**— ಯಾವ ರುದ್ರನು । **ಸೂರ್ಯ ಇವ**— ಸೂರ್ಯನಂತೆ । **ಶುಕ್ರಃ**— ಪ್ರಕಾಶಮಾನನಾಗಿಯೂ । **ಹಿರಣ್ಯಮಿವ**—(ಸಕಲ ಪ್ರಾಣಿಗಳಿಗೂ ಪ್ರೀತಿಕರವಾಗಿರುವ ) ಚಿನ್ನದಂತೆ । **ರೋಚತೇ**— ಪ್ರಕಾಶಿಸುತ್ತಾನೆಯೋ (ಅಂತಹ ಆ ರುದ್ರನನ್ನು ಪ್ರಾರ್ಥಿಸುತ್ತೇವೆ. ಸಃ—ಆ ರುದ್ರನು) । **ದೇವಾನಾಂ**—ಸಕಲ ದೇವತೆಗಳ ಮಧ್ಯೆ । **ಶ್ರೇಷ್ಠಃ**—ಶ್ರೇಷ್ಠನಾದ । **ವಸುಃ**— ವಾಸಸ್ಥಾನದಾಯಕನು.

ಭಾವಾರ್ಥ ॥

ರುದ್ರದೇವನು ಸೂರ್ಯನಂತೆ ಪ್ರಕಾಶಮಾನನಾಗಿ ಲೋಕಕ್ಕೆ ಉಪಕಾರಿಯಾಗಿಯೂ. ಚಿನ್ನದಂತೆ ಪ್ರೀತಿಕರನಾಗಿ ಲೋಕಕ್ಕೆ ಆಕರ್ಷಿತನಾಗಿಯೂ ಇದ್ದಾನೆ. ಅವನು ಸಕಲದೇವತೆಗಳ ನಡುವೆ ಅತ್ಯಂತ ಶ್ರೇಷ್ಠವಾದ ಸ್ಥಾನವುಳ್ಳವನು.

English Translation

( Rudra ) who shines like the brilliant sun, shines, like gold ; the highest and best of the gods.

॥ ವಿಶೇಷವಿಷಯಗಳು ॥

**ಶುಕ್ರಃ**—ದೀಪ್ತಿಮಾನ್ । ಬಹಳ ಪ್ರಕಾಶಮಾನನಾದವನು

**ಹಿರಣ್ಯಮಿವ**—ಚಿನ್ನದಂತೆ ಥಳಥಳನೆ ಬೆಳಗುತ್ತಿರುವವನು ಅಥವಾ ಚಿನ್ನದಂತೆ ಸಕಲರಿಗೂ ಪ್ರಿಯನಾದವನು.

**ವಸುಃ— ವಸ ನಿವಾಸೇ । ವಾಸಯತಿ ಸರ್ವಮಿತಿ ವಸುಃ । ನಿವಾಸಹೇತುಃ** । ಸರ್ವರ ನಿವಾಸಸ್ಥಾನಗಳಿಗೆ ಕಾರಣನು ಎಂದರೆ ನಿವಾಸಸ್ಥಾನಪ್ರದನು. ಅಥವಾ **ಶ್ರೇಷ್ಠೋ ದೇವಾನಾಂ ವಸುಃ** ಎಂಬ ಶಬ್ದಗಳಿಗೆ **ದೇವಾನಾಂ ಶ್ರೇಷ್ಠೋ ವಸುಃ** ಎಂದರೆ ದೇವತೆಗಳಲ್ಲೆಲ್ಲಾ ಅತ್ಯಂತಶ್ರೇಷ್ಠನು ಎಂಬ ಅರ್ಥವನ್ನು ಬೇಕಾದರೂ ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಸೂರ್ಯಃ— ರಾಜಸೂಯ ಸೂರ್ಯ ಮೃಷೋದ್ಯರುಚ್ಯ ಕುಪ್ಯಕೃಷ್ಟಪಚ್ಯಾಽವ್ಯಥ್ಯಾಃ** (ಪಾ. ಸೂ. ೩-೧-೧೧೪) ಈ ಸೂತ್ರದಿಂದ ಷೂ ಪ್ರೇರಣೇ ಧಾತು ಮುಂದೆ ಕ್ಯಪ್ ಪ್ರತ್ಯಯವೂ ಅದಕ್ಕೆ ರುಡಾಗಮವೂ ನಿಪಾತಿತ

ವಾಗುತ್ತೆ. ಸುವತಿ-ಕರ್ಮಣಿ ಲೋಕಂ ಪ್ರೇರಯತೀತಿ ಸೂರ್ಯಃ. ಸೂರ್ಯನು ಉದಯಿಸಿ ಜನರು ತಮ್ಮ ತಮ್ಮ ಕೆಲಸಗಳಲ್ಲಿ ನಿರತರಾಗುವಂತೆ ಪ್ರೇರಿಸುವನು ಎಂದು ಅರ್ಥ. ಕ್ಯಪ್ ಪಿತ್ತಾದ್ದರಿಂದ ಅನುದಾತ್ತ ಧಾತುಸ್ವರವೇ ನಿಲ್ಲುವುದು

**ಹಿರಣ್ಯಮ್**—ಹರ್ಯ ಗತಿಗಾನ್ತ್ಯೋಃ ಧಾತು **ಹರ್ಯತೇಃ ಕನ್ಯನ್ ಹಿರಚ್** (ಉ. ಸೂ. ೫-೭೨೨) ಕನ್ಯನ್ ಪ್ರತ್ಯಯವೂ. ಹರ್ಯ ಎಂಬುದಕ್ಕೆ ಹಿರಚ್ ಆದೇಶವೂ ಬರುತ್ತೆ

**ರೋಚತೇ**—ರುಚ ದೀಪ್ತಾವಭಿಪ್ರೀತೌ ಚ. ೧ನೇ ಗಣ ಆತ್ಮನೇಪದಿ ಲಟ್ ತ. ಏಕ್ವ. ಶಪ್. ಲಘೂಪಧಗುಣ. ಶಪ್ ಪಿತ್ತಾದ್ದರಿಂದ ಅನುದಾತ್ತ, **ತಾಸ್ಯನುದಾತ್ತೇತ್—,** ಎಂಬುದರಿಂದ ತೇ ಅನುದಾತ್ತ. ಧಾತುಸ್ವರ ಉಳಿಯುತ್ತೆ. **ಯದ್ವೃತ್ತಾನ್ನಿತ್ಯಮ್** ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ.

**ಶ್ರೇಷ್ಠಃ**— **ಪ್ರಶಸ್ಯಸ್ಯ ಶ್ರಃ** (ಪಾ. ಸೂ. ೫-೩-೬೦) ಇಷ್ಠನ್ ಈಯಸುನ್ ಎಂಬ ಅಜಾದಿಪ್ರತ್ಯಯಗಳು ಪರದಲ್ಲಿದ್ದರೆ ಪ್ರಶಸ್ಯಶಬ್ದಕ್ಕೆ ಶ್ರ ಆದೇಶ ಬರುತ್ತೆ ಎಂದು ಸೂತ್ರಾರ್ಥ. ಪ್ರಶಸ್ಯಶಬ್ದವು ಕ್ರಿಯಾವಾಚಿಯಾದರೂ ಈ ಸೂತ್ರದಲ್ಲಿ ಅಜಾದಿಯಾದ ಇಷ್ಠನ್ ಈಯಸುನ್ ಪರದಲ್ಲಿರುವಾಗ ಶ್ರಆದೇಶವನ್ನು ವಿಧಿಸಿರುವ ಜ್ಞಾಪಕದಿಂದ ಪ್ರಶಸ್ಯಶಬ್ದದ ಮುಂದೆ ಇಷ್ಠನ್ ಈಯಸುನ್‌ಗಳು ಬರುವುವು. ಅಥವಾ ಪ್ರಶಸ್ಯತ್ವ ಗುಣ ಎಂದು ಹೇಳಬಹುದು. ಆಗ **ಅತಿಶಾಯನೇ—,** ಎಂಬುದರಿಂದ ಇಷ್ಠನ್, **ದ್ವಿವಚನ ವಿಭಜ್ಯೋ—,** ಎಂಬುದರಿಂದ ಈಯಸುನ್ ಬರುತ್ತೆ. ಏವಂಚ **ಅಜಾದೀಗುಣ ವಚನಾದೇವ** (ಪಾ. ಸೂ. ೫-೩-೫೮) ಎಂಬುದಕ್ಕೆ ವಿರೋಧವಿಲ್ಲ. ಇಲ್ಲಿ ಪ್ರಶಸ್ಯಶಬ್ದಕ್ಕೆ ಶ್ರ ಆದೇಶ ಬಂದರೆ ಶ್ರ+ಇಷ್ಠ ಎಂದಿದೆ. **ಪ್ರಕೃತ್ಯೈಕಾಚ್** (ಪಾ. ಸೂ. ೬-೪-೧೬೩) ಇಷ್ಠನ್-ಇಮನಿಚ್-ಈಯಸುನ್‌ಗಳು ಪರದಲ್ಲಿದ್ದರೆ ಒಂದು ಅಚ್ಚುಳ್ಳ ಶಬ್ದವು ಪ್ರಕೃತಿಭಾವವನ್ನು ಹೊಂದುತ್ತೆ. ಅಂದರೆ ಅಲ್ಲಿ ಟಿಲೋಪಾದಿಗಳು ಬರುವುದಿಲ್ಲ ಎಂದು ಅರ್ಥ. **ಆದ್ಗುಣಃ** ಎಂದು ಗುಣ. ಪ್ರತ್ಯಯವು ನಿತ್ ಆದ್ದರಿಂದ ಪ್ರತ್ಯಯಾಂತವು ಆದ್ಯುದಾತ್ತ.

**ವಸುಃ**— ವಾಸಯತಿ ಸರ್ವಮಿತಿ ವಸುಃ ಎಂದರೆ ಎಲ್ಲರನ್ನೂ ವಾಸಮಾಡುವಂತೆ ಮಾಡುವುದು ಎಂದು ಅರ್ಥ. ವಸ ನಿವಾಸೇ. ಣಿಚ್ ಪ್ರತ್ಯಯದ ಅರ್ಥವನ್ನೊಳಗೊಂಡ ಈ ಧಾತು ಮುಂದೆ **ಶೃಸ್ವೃಸ್ನಿಹಿತ್ರ್ಯಸಿ ವಸಿ ಹನಿ ಕ್ಲಿದಿ ಬನ್ಧಿ ಮನಿಭ್ಯಶ್ಚ** (ಉ. ಸೂ. ೧-೧೦) ಎಂಬುದರಿಂದ ಉ ಪ್ರತ್ಯಯ ಬರುತ್ತೆ. **ಧಾನ್ಯೇ-ನಿತ್** (ಉ. ಸೂ. ೧-೯) ರಿಂದ ನಿತ್ ಎಂದು ಇಲ್ಲಿಗೆ ಅನುವೃತ್ತವಾಗುತ್ತೆ ಆದ್ದರಿಂದ ಉಪ್ರತ್ಯಯವು ನಿತ್ ಆಗುತ್ತೆ. ಪ್ರತ್ಯಯಾಂತವು ಆದ್ಯುದಾತ್ತವಾಗುತ್ತೆ. ॥೫॥



ಸಂಹಿತಾಪಾಠಃ

ಶಂ ನಃ ಕರತ್ಯರ್ವತೇ ಸುಗಂ ಮೇಷಾಯ ಮೇಷ್ಯೇ ।
ನೃಭ್ಯೋ ನಾರಿಭ್ಯೋ ಗವೇ ॥ ೬ ॥

॥ ಪದಪಾಠಃ ॥

ಶಂ । ನಃ । ಕರತಿ । ಅರ್ವತೇ । ಸುಽಗಂ । ಮೇಷಾಯ । ಮೇಷ್ಯೇ ।
ನೃಽಭ್ಯಃ । ನಾರಿಽಭ್ಯಃ । ಗವೇ ॥ ೬ ॥

ಸಾಯಣಭಾಷ್ಯಂ

ಅಗ್ನಿಮಾರುತೇ ಶಂ ನಃ ಕರೋತೀತಿ ಧಾಯ್ಯಾ । ಅಥ ಯಥೇತಮಿತಿ ಖಂಡೇ ಸೂತ್ರಿತಂ ವೈಶ್ವಾನರಾಯ ಪೃಥುಪಾಜಸೇ ಶಂ ನಃ ಕರತ್ಯರ್ವತೇ । ಆ. ೫-೨೦ । ಇತಿ

ನೋಽಸ್ಮಾಕಂ ಸಂಬಂಧಿಭ್ಯೋಽರ್ವದಾದಿಭ್ಯಃ ಸುಗಂ ಸುಷ್ಠು ಗಮ್ಯಂ ಶಂ ಸುಖಂ ಕರತಿ । ದೇವಃ ಕರೋತಿ । ಅರ್ವತೇಽಶ್ವಾಯ । ಅರ್ವಾಙ್ವಾ ಬ್ರೋಽಶ್ವನಾಮ । ಅರ್ವಾ ವಾಜೀತಿ ತನ್ನಾಮಸು ಪಾಠಾತ್ । ಮೇಷಾಯ ಮೇಷಜಾತಿಪುರುಷಾಯ ಮೇಷ್ಯೇ ತಜ್ಜಾತೀಯಸ್ತ್ರಿಯೈ ನೃಭ್ಯಃ ಪುರುಷೇಭ್ಯೋ ನಾರಿಭ್ಯಃ । ಸ್ತ್ರೀಭ್ಯೋ ಗವೇ ಗೋಜಾತಯೇ ॥ ಕರತಿ । ಡುಕೃಞ್ ಕರಣೇ । ವ್ಯತ್ಯಯೇನ ಶಪ್ । ಅರ್ವತೇ । ಅರ್ತಿ ಗಚ್ಛತೀತ್ಯರ್ವಾ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ವನಿಪ್ । ಚತುರ್ಥ್ಯೇಕವಚನೇಽರ್ವಣಸ್ತೃಸಾವನಞ ಇತಿ ನಕಾರಸ್ಯ ತೃ ಆದೇಶಃ । ವನಿಪ್ಪುಸಾ ಪಿತ್ತ್ವಾದನುದಾತ್ತೌ । ಧಾತುಸ್ವರಃ । ಮೇಷಾಯ । ಮಿಷ ಸ್ಪರ್ಧಾಯಾಂ । ಪಚಾದ್ಯಚ್ ದೇವಸೇನಮೇಷಾದಯಃ ಪಚಾದಿಷು ದ್ರಷ್ಟವ್ಯಾ ಇತಿ ವಚನಾತ್ । ಮೇಷ್ಯೇ । ಜಾತೇರಸ್ತ್ರೀವಿಷಯಾದಯೋಪಧಾತ್ । ಪಾ. ೪-೧-೬೩ । ಙೀಷ್ಪ್ರತ್ಯಯಃ । ಪ್ರತ್ಯಯಸ್ವರಃ । ಚತುರ್ಥ್ಯೇಕವಚನ ಆಗಮಾನುಶಾಸನಸ್ಯಾನಿತ್ಯತ್ವಾದಾಡಾಗಮಾಭಾವಃ । ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯೇತಿ ಸ್ವರಿತತ್ವಂ । ಉದಾತ್ತಯಣೋ ಹಲ್ಪೂರ್ವಾದಿತಿ ತು ನ ಭವತಿ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ವಚನಾತ್ । ನೃಭ್ಯಃ ಸಾವೇಕಾಚ ಇತಿ ಪ್ರಾಪ್ತಸ್ಯ ವಿಭಕ್ತ್ಯುದಾತ್ತತ್ವಸ್ಯ ನ ಚಾನ್ಯತರಸ್ಯಾಮಿತಿ ಪ್ರತಿಷೇಧಃ । ನಾರಿಭ್ಯಃ । ನೃನರಯೋರ್ವೃದ್ಧಿಶ್ಚ । ಪಾ. ೪-೧-೭೩ । ಇತಿ ಶಾರ್ಙ್ಗರವಾದಿಷು ಪಾಠಾತ್ ಙೀನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ಗವೇ । ನ ಗೋಶ್ವನ್ಸಾವವರ್ಣೇತಿ ವಿಭಕ್ತ್ಯುದಾತ್ತಸ್ಯ ಪ್ರತಿಷೇಧಃ ॥

ಪ್ರತಿಪದಾರ್ಥ

(**ರುದ್ರಃ**—ರುದ್ರದೇವನು) । **ನಃ**—ನಮಗೆ ಸೇರಿದ । **ಅರ್ವತೇ**—ಕುದುರೆಗೂ । **ಮೇಷಾಯ**—ಟಗರಿಗೂ । **ಮೇಷ್ಯೇ**—ಹೆಣ್ಣುಕುರಿಗೂ । **ನೃಭ್ಯಃ**—ಗಂಡಸರಿಗೂ । **ನಾರಿಭ್ಯಃ**—ಹೆಂಗಸರಿಗೂ । **ಗವೇ**—ಪಶುಜಾತಿಗೂ । **ಸುಗಂ**—( ಅವನ ಅನುಗ್ರಹದಿಂದ ) ಸುಲಭವಾಗಿ ಹೊಂದಬಹುದಾದ । **ಶಂ**—ಸುಖವನ್ನು । **ಕರತಿ**—ಉಂಟುಮಾಡುತ್ತಾನೆ.

ಭಾವಾರ್ಥ

ರುದ್ರದೇವನು ನಮ್ಮ ಮೇಕೆಗೂ ಹೆಣ್ಣುಮೇಕೆಗೂ ಗಂಡಸರಿಗೂ, ಹೆಂಗಸರಿಗೂ ಮತ್ತು ಗೋವುಗಳಿಗೂ ಸುಖವನ್ನುಂಟುಮಾಡುತ್ತಾನೆ.

English Translation

( Rudra ) bestows happiness ( or does good to ) on our horses, rams, ewes, men, women and cows.

ವಿಶೇಷವಿಷಯಗಳು

**ಅರ್ವತೇ**—ಅಶ್ವಃ ಹಯಃ ಮೊದಲಾದ ಇಪ್ಪತ್ತಾರು ಅಶ್ವನಾಮಗಳ ಮಧ್ಯದಲ್ಲಿ ಅರ್ವಾ ಎಂಬ ಶಬ್ದವು ಪಠಿತವಾಗಿರುವುದರಿಂದ ಅರ್ವತೇ (ಅರ್ವ ಶಬ್ದದ ಚತುರ್ಥೀಏಕವಚನ) ಕುದುರೆಗೆ ಎಂದರ್ಥವು.

**ಕರತಿ**—**ಕರೋತಿ** । ಮಾಡುತ್ತಾನೆ.

**ಸುಗಂ**— **ಸುಷ್ಠು ಗಮ್ಯಂ** । ಸುಲಭವಾಗಿ ದೊರೆಯುವ (ಸುಖವನ್ನು) ಎಂದರೆ ಸುಖವು ಸುಲಭವಾಗಿ ದೊರೆಯುವಂತೆ

**ಮೇಷ್ಯೇ**—ಇಲ್ಲಿ **ಮೇಷೀ** ಎಂದರೆ ಹೆಣ್ಣುಮೇಕೆಯೆಂದರ್ಥವು. ಮೇಷ್ಯೇ ಎಂದರೆ ಹೆಣ್ಣುಮೇಕೆಗೆ. ಭಾಷ್ಯಕಾರರು ಈ ಶಬ್ದಕ್ಕೆ ಮೇಷಜಾತಿಯ ಸ್ತ್ರೀ ಎಂದು ಅರ್ಥವನ್ನು ಹೇಳಿರುವರು. ಇದು ಅಷ್ಟು ಸಮಂಜಸವಾಗಿಲ್ಲ. ಏಕೆಂದರೆ ಇಲ್ಲಿ ಹೇಳಿರುವ ಶಬ್ದಗಳಲ್ಲಿ ನೃಭ್ಯಃ ನಾರಿಭ್ಯಃ ಎಂಬ ಶಬ್ದಗಳು ಪುರುಷರನ್ನೂ, ಸ್ತ್ರೀಯರನ್ನೂ ಸೂಚಿಸುವುದು. ಅದರಂತೆ ಮೇಷಾಯ ಮೇಷ್ಯೇ ಎಂಬ ಶಬ್ದಗಳು ಗಂಡುಮೇಕೆ ಹೆಣ್ಣುಮೇಕೆ ಎಂಬ ಅರ್ಥವನ್ನೇ ಸೂಚಿಸುವವು ಎಂದು ಹೇಳುವುದೇ ಯುಕ್ತವಾಗಿರುವುದು. ಮತ್ತು ಈ ಋಕ್ಕಿನಲ್ಲಿ ಋಷಿಯು ಪುರುಷರು, ಸ್ತ್ರೀಯರು ಪಶುಗಳಾದ, ಅಶ್ವ, ಗೋವು, ಮೇಕೆ ಇವುಗಳಿಗೆ ಸುಖವನ್ನುಂಟುಮಾಡಬೇಕೆಂದು ಪ್ರಾರ್ಥಿಸಿರುವುದರಿಂದ ಮೇಕೆಗಳಲ್ಲಿ ಹೆಣ್ಣು ಗಂಡು ಎಂಬ ಎರಡು ವಿಧವಾದ ಮೇಕೆಗಳಿಗೂ ಎಂದು ಹೇಳುವುದೇ ಯುಕ್ತವಾಗಿರುವುದು.

ವ್ಯಾಕರಣಪ್ರಕಿಯಾ

**ಕರತಿ**—ಡುಕೃಞ್ ಕರಣೇ, ಲಟ್, ತಿಪ್. **ತನಾದಿಕೃಞ್‌ಭ್ಯಉಃ** ಎಂಬುದಕ್ಕೆ ಬದಲಾಗಿ ಛಂದಸ್ಸಾದ್ದ ರಿಂದ ಶಪ್ ಬರುತ್ತೆ.

**ಅರ್ವತೇ**— ಅರ್ತಿ ಗಚ್ಛತೀತ್ಯರ್ವಾ. ಋಗತೌ ಧಾತು. **ಅನ್ಯೇಭ್ಯೋಽಪಿದೃಶ್ಯನ್ತೇ** ಎಂದು ವನಿಪ್, ಗುಣ, ರಪರತ್ವ. ಅರ್ವನ್ ಎಂದಾಯಿತು. ಚತುರ್ಥೀಏಕವಚನ. ಙೇ ಪ್ರತ್ಯಯ. ಅರ್ವನ್+ಏ **ಅರ್ವಣಸ್ತ್ರಸಾವನಞಃ** (ಪಾ. ಸೂ. ೬-೪-೧೨೭) ಸು ಪರದಲ್ಲಿ ಇಲ್ಲದೇ ಇದ್ದರೆ ನಞ್‌ನಿಂದ ಕೂಡಿ ಇಲ್ಲದ ಅರ್ವನ್ ಶಬ್ದವನ್ನು ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ತೃ ಅಂತಾದೇಶವಾಗಿ ಬರುತ್ತೆ. ಎಂದು ತೃಆದೇಶ ಅರ್ವತ್+ ಏ–ಅರ್ವತೇ. **ಅನುದಾತ್ತೌ ಸುಪ್ಪಿತೌ** ಎಂದು ವನಿಪ್ ಙೇ ಎರಡೂ ಅನುದಾತ್ತ. ಧಾತುಸ್ವರ ಉಳಿಯುತ್ತೆ.

**ಮೇಷಾಯ**—ಮಿಷ ಸ್ಪರ್ಧಾಯಾಂ, ತುದಾದಿ. **ನನ್ದಿಗ್ರಹಿ—**, ಎಂದು ಪಚಾದಿಲಕ್ಷಣವಾದ ಅಚ್ ಪ್ರತ್ಯಯ.

**ಮೇಷ್ಯೈ**—ಮೇಷಸ್ಯ ಸ್ತ್ರೀ, ಮೇಷೀ. **ಜಾತೇರಸ್ತ್ರೀವಿಷಯಾದಯೋಪಧಾತ್** (ಪಾ. ಸೂ. ೪-೧-೬೩.) ನಿತ್ಯಸ್ತ್ರೀಲಿಂಗವಲ್ಲದುದೂ ಯಕಾರೋಪಧಕವೂ ಅಲ್ಲದ ಜಾತಿವಾಚಕದ ಮುಂದೆ ಸ್ತ್ರೀತ್ವ ತೋರುವಾಗ ಙೀಷ್ ಬರುತ್ತೆ. ಎಂದು ಸೂತ್ರಾರ್ಥ. ಆಕೃತಿಗ್ರಹಣಾ ಜಾತಿಃ ಲಿಂಗಾನಾಂಚ ನ ಸರ್ವಭಾಕ್ । ಸಕೃದಾಖ್ಯಾತನಿರ್ಗ್ರಾಹ್ಯಾ, ಗೋತ್ರಂ ಚ ಚರಣೈಸ್ಸಹ ॥ ಇದರ ಅರ್ಥ, ಅನುಗತವಾದ ಸಂಸ್ಥಾನದಿಂದ ತಿಳಿಯಲು ಯೋಗ್ಯವಾದುದು ಜಾತಿ ಎಂದು ಒಂದುಲಕ್ಷಣ. ಉದಾಹರಣೆ, ತಟೀ, ಆಕೃತಿವಿಶೇಷವಾದ ಜಲಸಮೀಪಪ್ರದೇಶವು. ಆದ್ದರಿಂದ ಅವಯವ ಸಂಸ್ಥಾನದಿಂದ ತಿಳಿಯಲು ಯೋಗ್ಯವಾಗುವುದು, ಎಲ್ಲಾ ಲಿಂಗಗಳನ್ನೂ ಹೊಂದದೇ ಇದ್ದು ಒಂದು ವ್ಯಕ್ತಿಯಲ್ಲಿ ಹೇಳಿದ ಮಾತ್ರದಿಂದ ಮತ್ತೊಂದು ವ್ಯಕ್ತಿ ಹೇಳದೇ ಇದ್ದರೂ ತಿಳಿಯಲು ಯೋಗ್ಯವಾದುದು ಜಾತಿ ಎಂದು ಎರಡನೇ ಲಕ್ಷಣ, ಉದಾಹರಣೆ ವೃಷಲೀ, ಈ ಶಬ್ದ ನಪುಂಸಕ ಲಿಂಗದಲ್ಲಿ ಪ್ರಯೋಗಿಸಲ್ಪಡುವುದಿಲ್ಲ. ಆದ್ದರಿಂದ ಎಲ್ಲಾ ಲಿಂಗಗಳನ್ನೂ ಇದು ಹೊಂದುವುದಿಲ್ಲ. ಇವನು ವೃಷಲ ಎಂದು ಒಂದು ವ್ಯಕ್ತಿಯಲ್ಲಿ ಹೇಳಿದರೆ ಅವನ ಮಗ, ಅಣ್ಣ ತಮ್ಮಂದಿರು ಮೊದಲಾದವರಲ್ಲಿ ಹೇಳದೇ ಇದ್ದರೂ ವೃಷಲರೆಂದು ತಿಳಿಯಬಹುದು. ಅಪತ್ಯಪ್ರತ್ಯಯಾಂತವೂ, ಶಾಖಾಧ್ಯೇತೃವಾಚಕವೂ ಜಾತಿ ಆಗುವುದು ಅಂದರೆ ಜಾತಿಕಾರ್ಯವನ್ನು ಹೊಂದುವುದು ಎಂದು ಮೂರನೇ ಲಕ್ಷಣ. ಔಪಗವೀ, ಕಠೀ ಎಂದು ಉದಾಹರಣೆ ಮೇಷ ಶಬ್ದವು ನಪುಂಸಕಲಿಂಗದಲ್ಲಿಲ್ಲ. ಒಂದು ವ್ಯಕ್ತಿಯಲ್ಲಿ ಉಪದೇಶಿ ಸಿದರೆ ಮತ್ತೊಂದು ವ್ಯಕ್ತಿಯು ಮೇಷವೆಂದು ಹೇಳದೇ ಇದ್ದರೂ ತಿಳಿಯುತ್ತೆ ಆದ್ದರಿಂದ, ' ಲಿಂಗಾನಾಂಚನ ಸರ್ವಭಾಕ್, ಸಕೃದಾಖ್ಯಾತ ನಿರ್ಗ್ರಾಹ್ಯಾ ಎಂಬ ಎರಡನೇ ಲಕ್ಷಣದಿಂದ ಇದು ಜಾತಿವಾಚಕವಾಗುತ್ತೆ. ಆದ್ದರಿಂದ ಙೀಷ್ ಬರುತ್ತೆ. ಮೇಷೀ. ಪ್ರತ್ಯಯಸ್ವರದಿಂದ ಅಂತೋದಾತ್ತ ಙೇಪ್ರತ್ಯಯ, **ಆಗಮಶಾಸ್ತ್ರಮ ನಿತ್ಯಂ** ಎಂದಿರುವುದರಿಂದ **ಆಣ್ನದ್ಯಾಃ** ಎಂಬುದರಿಂದ ಆಟ್ ಬರುವುದಿಲ್ಲ. ಯಣಾದೇಶ. ಮೇಷ್ಯೈ. **ಉದಾತ್ತ ಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** (ಪಾ. ಸೂ. ೮-೨-೪) ಉದಾತ್ತದ ಅಥವಾ ಸ್ವರಿತದ ಸ್ಥಾನದಲ್ಲಿ ಬಂದ ಯಣ್‌ನ ಮುಂದೆ ಇರುವ ಅನುದಾತ್ತಕ್ಕೆ ಸ್ವರಿತ ಬರುತ್ತೆ ಎಂದು ಏ ಸ್ವರಿತ. **ಉದಾತ್ತಯಣೋಹಲ್ಪೂ-**

**ವಾರ್ತಿ** (ಪಾ. ಸೂ. ೬-೧-೧೭೪) ಉದಾತ್ತನ ಸ್ಥಾನದಲ್ಲಿ ಬಂದ ಯಣ್ ವ್ಯಂಜನಪೂರ್ವಕವಾಗಿದ್ದರೆ ಅದರ ಮುಂದೆ ಇರುವ ನದೀಸಂಜ್ಞಕವೂ ಅಜಾದಿಶಸಾದಿವಿಭಕ್ತಿಯೂ ಉದಾತ್ತವಾಗುವುದು ಎಂದು ಅರ್ಥ. ಇಲ್ಲಿ ಯಕಾರವು ಉದಾತ್ತವಾದ ಈಕಾರದ ಸ್ಥಾನದಲ್ಲಿ ಬಂದಿದೆ. ಷ್ ಎಂಬ ವ್ಯಂಜನಪೂರ್ವಕವೂ ಆಗಿದೆ. ಆದ್ದರಿಂದ ಏ ಎಂಬ ವಿಭಕ್ತಿಗೆ ಉದಾತ್ತ ಬರಲಿ ಎನ್ನಬಹುದು. **ಪೂರ್ವತ್ರಾಸಿದ್ಧಮ್** ಎಂಬುದರಿಂದ ಇದನ್ನು ಮಾಡುವಾಗ ಎಂಟನೇ ಅಧ್ಯಾಯದ ಸ್ವರಿತವಿಧಿಯು ಅಸಿದ್ಧವಾಗುವುದರಿಂದ ಅದು ಬರಲಾರದು. ಈ ಉದಾತ್ತ ಬರುವ ಲಕ್ಷ್ಯಗಳಲ್ಲೆಲ್ಲಾ, **ಉದಾತ್ತಸ್ವರಿತಯೋಃ—,** ಎಂಬುದಕ್ಕೆ ಉದಾತ್ತಯಣಃ ಎಂಬುದು ಅಪವಾದವಾಗುತ್ತೆ. ಆದ್ದರಿಂದ **ಉದಾತ್ತಯಣಃ** ಎಂಬುದರಿಂದ ವಿಭಕ್ತಿಗೆ ಉದಾತ್ತವೇ ನ್ಯಾಯವಾಗಿ ಬರಬೇಕು. ಆದರೂ **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ** ಎಂಬುದರಿಂದ ವಿಕಲ್ಪನಾದ್ದರಿಂದ **ಉದಾತ್ತಯಣಃ** ಎಂಬುದು ಇಲ್ಲಿ ಬರುವುದಿಲ್ಲ.

**ನೃಭ್ಯಃ—ಸಾವೇಕಾಚಃ—,** ಎಂಬುದಕ್ಕೆ **ನ್ಯಚೋಽನ್ಯತರಸ್ಯಾಂ** ಎಂಬುದು ಅಪವಾದ. ಇದು ವಿಕಲ್ಪವಾದ್ದರಿಂದ ಇಲ್ಲಿ ಉದಾತ್ತ ಬರುವುದಿಲ್ಲ.

**ನಾರಿಭ್ಯಃ— ಶಾರ್ಙ್ಗರವಾದಿಭ್ಯೋಽಙೀನ್** (ಪಾ. ಸೂ.೪-೧-೭೩) ಎಂಬ ಸೂತ್ರದಲ್ಲಿ **ನೃನರಯೋರ್ವೃದ್ಧಿಶ್ಚ** ಎಂದು ಗಣಸೂತ್ರ ಇದೆ. ನೃ ನರ ಶಬ್ದಗಳ ಮುಂದೆ ಸ್ತ್ರೀತ್ವ ತೋರುವಾಗ ಙೀನ್ ಪ್ರತ್ಯಯವೂ ಅವುಗಳಿಗೆ ವೃದ್ಧಿಯೂ ಬರುತ್ತೆ. ಎಂದು ಗಣಸೂತ್ರದ ಅರ್ಥ. ಇದರಿಂದ ಙೀನ್ ವೃದ್ಧಿಗಳು ಬಂದರೆ ನಾರೀ ಎಂದಾಯಿತು. **ಙ್ಯಾಪೋಸ್ಸಂಜ್ಞಾ ಛಂದಸೋರ್ಬಹುಲಂ** ಎಂದು ಙೀಗೆ ಹ್ರಸ್ವ, ಭ್ಯಸ್, ನಾರಿಭ್ಯಃ ಎಂದಾಗುತ್ತೆ.

**ಗವೇ— ಸಾವೇಕಾಚಃ—,** ಎಂಬುದಕ್ಕೆ **ನಗೋಶ್ವನ್ ಸಾವವರ್ಣ—,** ಎಂಬುದರಿಂದ ನಿಷೇಧ ॥ ೬ ॥

---

ಸಂಹಿತಾಪಾಠ

ಅಸ್ಮೇ ಸೋಮ ಶ್ರಿಯಮಧಿ ನಿ ಧೇಹಿ ಶತಸ್ಯ ನೃಣಾಂ।
ಮಹಿ ಶ್ರವಸ್ತುವಿನೃಮ್ಣಂ ॥ ೭॥

ಪದಪಾಠಃ

ಅಸ್ಮೇ ಇತಿ । ಸೋಮ । ಶ್ರಿಯಂ । ಅಧಿ । ನಿ । ಧೇಹಿ । ಶತಸ್ಯ । ನೃಣಾಂ ।

ಮಹಿ । ಶ್ರವಃ । ತುವಿಽನೃಮ್ಣಂ ॥ ೭ ॥

॥ ಸಾಯಣಭಾಷ್ಯಂ ॥

**ಹೇ ಸೋಮ ದೇವ ನೃಣಾಂ ಪುರುಷಾಣಾಂ ಶತಸ್ಯ ಪರ್ಯಾಪ್ತಾಂ ಶ್ರಿಯಮಸ್ಮೇ ಅಸ್ಮಾಸ್ವಧಿ ನಿ ಧೇಹಿ । ಆಧಿಕ್ಯೇನ ಸ್ಥಾಪಯ । ತಥಾ ಮಹಿ ಮಹತ್ ತುವಿನೃಮ್ಣಂ ಪ್ರಭೂತಬಲಯುಕ್ತಂ ಶ್ರವೋಽನ್ನ-ಮಧಿ ನಿ ಧೇಹಿ ॥ ಅಸ್ಮೇ । ಸುಪಾಂ ಸುಲುಗಿತಿ ಸಪ್ತಮ್ಯಾಃ ಶೇ ಆದೇಶಃ । ನೃಣಾಂ । ನೃ ಚ । ಪಾ· ೬-೪-೬ । ಇತಿ ದೀರ್ಘಪ್ರತಿಷೇಧಃ । ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ । ಮಹೀತ್ಯಾದಯೋ ಗತಾಃ ॥**

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ನೃಣಾಂ**—ಮನುಷ್ಯರಿಗೆ । **ಶತಸ್ಯ**—ನೂರು ಜನರಿಗೆ (ಸಂಪೂರ್ಣವಾಗಿ ಆಗುವಷ್ಟು) । **ಶ್ರಿಯಂ**--ಐಶ್ವರ್ಯವನ್ನು । **ಅಸ್ಮೇ**—ನಮ್ಮಲ್ಲಿ । **ಅಧಿ ನಿ ಧೇಹಿ**—ಸಮೃದ್ಧವಾಗಿಡು । **ಮಹಿ**—ಅತ್ಯಧಿಕವಾಗಿಯೂ । **ತುವಿನೃಮ್ಣಂ**—ಅಧಿಕಬಲದೊಡನೆ ಕೂಡಿಯೂ ಇರತಕ್ಕ । **ಶ್ರವಃ**—ಅನ್ನವನ್ನು ( ನಮಗೆ ಕೊಡು ).

ಭಾವಾರ್ಥ

ಎಲೈ ಸೋಮದೇವನೇ, ನಮಗೆ ಸಮೃದ್ಧವಾದ ಐಶ್ವರ್ಯವನ್ನೂ, ಅತ್ಯಧಿಕವಾಗಿಯೂ ಮತ್ತು ಅಧಿಕಬಲ ಸಂಪಾದಕವಾಗಿಯೂ ಇರುವ ಅನ್ನವನ್ನೂ ಸಹ ನೂರು ಜನರಿಗೆ ಆಗುವಷ್ಟು ಸಮೃದ್ಧಿಯಾಗಿ ಕೊಡು.

English Translation

O Soma, grant us prosperity more than sufficient for a hundred men and much nourishing food.

ವಿಶೇಷವಿಷಯಗಳು

**ಅಧಿ ಶತಸ್ಯ ನೃಣಾಂ ಶ್ರಿಯಂ**-ನೂರುಜನರಲ್ಲಿರಬೇಕಾದ ಐಶ್ವರ್ಯಕ್ಕಿಂತಲೂ ಅಧಿಕವಾದ ಐಶ್ವರ್ಯವನ್ನು.

**ಅಸ್ಮೇ ನಿಧೇಹಿ—ಅಸ್ಮಾಸು ಸ್ಥಾಪಯ ।** ನಮ್ಮಲ್ಲಿ ಇರಿಸು ಎಂದರೆ ನಮಗೆ ಕೊಡು.

**ಮಹಿ— ಮಹತ್**—ಹೆಚ್ಚಾದ, ಶ್ರೇಷ್ಠವಾದ.

**ಶ್ರವಃ—ಶ್ರವ ಇತ್ಯನ್ನನಾಮ** (ನಿ. ೧೦-೩.) **ಧನನಾಮ** (ನಿ. ೩-೯) ಶ್ರವಃ ಎಂಬ ಶಬ್ದಕ್ಕೆ ಅನ್ನವೆಂದೂ, ಧನವೆಂದೂ, ಬಲವೆಂದೂ ಅನೇಕ ಅರ್ಥಗಳಿದ್ದರೂ ಭಾಷ್ಯಕಾರರು ಇಲ್ಲಿ ಅನ್ನವೆಂಬ ಅರ್ಥವನ್ನೇ ಸ್ವೀಕರಿಸಿರುವರು.

**ತುವಿನೃಮ್ಣಂ—**ತುವಿ ಎಂದರೆ ಬಹು (ನಿ.೩-೧೩) ನೃಮ್ಣಂ ಎಂದರೆ ಬಲ (ನಿ. ೩-೯) ಆದುದರಿಂದ ತುವಿನೃಮ್ಣಂ ಎಂದರೆ ಬಹಳ ಬಲವುಳ್ಳ ಎಂದರ್ಥವು.

ವ್ಯಾಕರಣಪ್ರಕ್ರಿಯಾ

**ಅಸ್ಮೇ—ಸುಪಾಂ ಸುಲುಕ್—,** ಎಂದು ಸಪ್ತಮಿಗೆ ಶೇ ಆದೇಶ.

**ನೃಣಾಂ—ನೃ ಚ—**(ಪಾ. ಸೂ. ೬-೪-೬) ನಾಮ್ ಪರದಲ್ಲಿರುವಾಗ ನೃಗೆ ದೀರ್ಘ ವಿಕಲ್ಪವಾಗಿ ಬರುತ್ತೆ. ಎಂದು ವಿಕಲ್ಪವಾದ್ದರಿಂದ ಇಲ್ಲಿ ದೀರ್ಘ ಬರುವುದಿಲ್ಲ.

**ಮಹಿ—**ಇವು ಮೊದಲಾದ ಶಬ್ದಗಳಿಗೆ ಹಿಂದೆಯೇ ಪ್ರಕ್ರಿಯೆಯು ನಿರೂಪಿತವಾಗಿದೆ. ॥ ೭ ॥

---

ಸಂಹಿತಾಪಾಠಃ

# ಮಾ ನಃ ಸೋಮಪರಿಬಾಧೋ ಮಾರಾತಯೋ ಜುಹುರಂತ।
# ಆ ನ ಇಂದೋ ವಾಜೇ ಭಜ ॥೮॥

॥ ಪದಪಾಠಃ ॥

**ಮಾ । ನಃ । ಸೋಮಽಪರಿಬಾಧಃ । ಮಾ । ಅರಾತಯಃ । ಜುಹುರಂತ ।**

**ಆ । ನಃ । ಇಂದೋ ಇತಿ । ವಾಜೇ । ಭಜ ॥ ೮ ॥**

ಸಾಯಣಭಾಷ್ಯಂ

**ಸೋಮಪರಿಬಾಧಃ ಸೋಮಸ್ಯ ಪರಿತೋ ಬಾಧಕಾ ಯಾಗರಹಿತಾ ನೋಽಸ್ಮಾನ್ ಮಾ ಜುಹು- ರಂತ । ಮಾ ಹಿಂಸಂತು । ತಥಾರಾತಯಃ ಶತ್ರವೋ ಮಾ ಜುಹುರಂತ । ಹೇ ಇಂದೋ ಸೋಮ ವಾಜೇ ಬಲವಿಷಯೇಽನ್ನವಿಷಯೇ ವಾ ನೋಽಸ್ಮಾನಾ ಭಜ । ಸರ್ವತಃ ಸೇವಸ್ವ ॥ ಸೋಮಪರಿಬಾಧಃ । ಸೋಮಂ ಪರಿಬಾಧಂತೇ ಯೇ ತೇ ತಾದೃಶಾಃ । ಕೃಷ್ಟೇತಿ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ । ಅರಾತಯಃ । ರಾ ದಾನೇ । ಕೃತ್ಯಲ್ಯುಟೋ ಬಹುಲಮಿತಿ ಬಹುಲವಚನಾತ್ಕರ್ತರಿ ಕ್ತಿನ್ । ಯದ್ವಾ । ಕ್ತಿಚ್ ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ । ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ಜುಹು- ರಂತ । ಹೃ ಪ್ರಸಹ್ಯಕರಣೇ । ವ್ಯತ್ಯಯೇನಾತ್ಮನೇಪದಂ । ಲಙಿ ಜುಹೋತ್ಯಾದಿತ್ವಾತ್ ಶ್ಲುಃ । ಬಹುಲಂ ಛಂದಸೀತಿ ಬಹುಲವಚನಾದಿಕಾರಸ್ಯಾಪ್ಯುತ್ವಂ । ದ್ವಿರ್ಭಾವಹಲಾದಿಶೇಷೌ । ಸರ್ವೇ ವಿಧಯಶ್ಛಂ- ದಸಿ ವಿಕಲ್ಪ್ಯಂತ ಇತಿ ವಚನಾದದಭ್ಯಸ್ತಾತ್ । ಪಾ. ೭.೧ ೪ । ಇತ್ಯದಾದೇಶಾಭಾವೇ ಸತಿ ಝೋಽಂತ ಇತ್ಯಂತಾದೇಶಃ । ನ ಮಾಙ್ಯೋಗ ಇತ್ಯಡಭಾವಃ ।**

॥ ಪ್ರತಿಪದಾರ್ಥ ॥

**ಸೋಮಪರಿಬಾಧಃ**–ಸೋಮದೇವನನ್ನು ಹಿಂಸಿಸುವ ಎಂದರೆ ಸೋಮನನ್ನು ದ್ವೇಷಿಸಿ ಯಜ್ಞ ಮಾಡದಿರುವ ಸೋಮನ ವೈರಿಗಳು । **ನಃ**— ನಮ್ಮನ್ನು । **ಮಾ ಜುಹುರಂತ**— ಹಿಂಸಿಸದಿರಲಿ. । **ಅರಾತಯಃ**—ಶತ್ರುಗಳು । **ಮಾ (ಜುಹುರಂತ)**— ಹಿಂಸಿಸದಿರಲಿ. । **ಇಂದೋ**— ಎಲೈ ಸೋಮದೇವನೇ । **ವಾಜೇ**— ಅನ್ನವಿಷಯದ ಲ್ಲಾಗಲೀ ಅಥವಾ ಶಕ್ತಿವಿಷಯದಲ್ಲಾಗಲೀ । **ನಃ**—ನಮ್ಮನ್ನು । **ಆ ಭಜ**— ಚೆನ್ನಾಗಿ ಪೋಷಿಸು. ।

॥ ಭಾವಾರ್ಥ ॥

ಎಲೈ ಸೋಮದೇವನೇ, ನಿನ್ನನ್ನು ಹಿಂಸಿಸುವ ಎಂದರೆ ನಿನ್ನನ್ನುದ್ವೇಷಿಸಿ ಯಾಗ ಮಾಡದಿರುವ ನಿನ್ನ ವೈರಿಗಳು ನಮ್ಮನ್ನು ಹಿಂಸಿಸದಿರಲಿ, ಇತರ ನಮ್ಮ ಶತ್ರುಗಳೂ ನಮ್ಮನ್ನು ಹಿಂಸಿಸದಿರಲಿ. ಎಲೈ ಪೂಷನೇ, ನಮಗೆ ಅನ್ನವನ್ನು ಅಥವಾ ಶಕ್ತಿಯನ್ನು ಕೊಟ್ಟು ನಮ್ಮನ್ನು ಚೆನ್ನಾಗಿ ಪೋಷಿಸು

## English Translation

Let not the adversaries of Soma, let not our enemies harm us; O soma, procure us abundant food.

ವಿಶೇಷವಿಷಯಗಳು

**ಸೋಮಪರಿಬಾಧಃ— ಸೋಮಂ ಪರಿಬಾಧಂತೇ ಯೇ ತೇ ತಾದೃಶಾಃ ಸೋಮಪರಿಬಾಧಃ । ಸೋಮಸ್ಯ ಬಾಧಕಾಃ ಯಾಗರಹಿತಾಃ** । ಸೋಮನ ವಿಷಯದಲ್ಲಿ ಯಾಗವನ್ನು ಮಾಡದೆ ಬಾಧೆಯನ್ನುಂಟುಮಾಡು ವವರಾದುದರಿಂದ ಯಾಗರಹಿತರಾದವರು ಸೋಮನ ವೈರಿಗಳೆಂದಭಿಪ್ರಾಯವು.

**ಅರಾತಯಃ— ರಾ ದಾನೇ ।** ನಮಗೆ ಏನನ್ನೂ ಕೊಡುವವರಲ್ಲವಾದ್ದರಿಂದ ನಮ್ಮ ವಿರೋಧಿಗಳು ಅಥವಾ ಶತ್ರುಗಳು.

**ಮಾ ಜುಹುರಂತ—ಹೃ ಪ್ರಸಹ್ಯಕರಣೇ ।** ಹಿಂಸೆಮಾಡದಿರಲಿ.

**ಇಂದೋ—** ಇಂದು ಶಬ್ದಕ್ಕೆ ಉದಕವೆಂದೂ (ನಿ. ೨-೩೪) ಯಜ್ಞವೆಂದೂ (ನಿ. ೩-೧೯) ಅರ್ಥವಿರುವುದು. ಮತ್ತು ಯಾಸ್ಕರು **ಇಂದುಃ । ಇಂಧುರಿಂಧೇರುನತ್ತೇರ್ವಾ** (ನಿ. ೧೦-೪೨) **ಎಂದರೆ ಇಂಧೇಃ ದೀಪ್ತ್ಯರ್ಥಸ್ಯ, ಉನತ್ತೇಃ ಕ್ಲೇದನಾರ್ಥಸ್ಯ** ಎಂದು ಇಂದುಶಬ್ದಕ್ಕೆ ಅರ್ಥವಿವರಣೆ ಮಾಡಿರುವರು. ಇಲ್ಲಿ ಸೋಮದೇವನನ್ನು ಪ್ರಕಾಶಮಾನನೆಂದು ಸಂಬೋಧಿಸಬಹುದು ಅಥವಾ ಸೋಮರಸಕ್ಕೆ ಕ್ಲೇದನ ( ನೆನೆಯಿಸುವ ) ಸಾಮರ್ಥ್ಯವಿರುವುದರಿಂದ ಇಂದುವೆಂಬ ಹೆಸರಿನಿಂದಲೂ ಕರೆಯಬಹುದು. ಇಂದುವೆಂದರೆ ಚಂದ್ರನೆಂಬ ಅರ್ಥವನ್ನು ಹೇಳಬಹುದು. ಆದರೆ ಋಗ್ವೇದದಲ್ಲಿ ಸೋಮಶಬ್ದಕ್ಕೆ ಚಂದ್ರನೆಂದು ಹೇಳುವ ರೂಢಿ ಇಲ್ಲ.

**ವಾಜೇ—** ಅಂಧಃ ವಾಜಃ ಮೊದಲಾದ ಹದಿನೆಂಟು ಅನ್ನನಾಮಗಳ ಮಧ್ಯದಲ್ಲಿ ವಾಜಃ ಎಂಬ ಶಬ್ದವು ಪಠಿತವಾಗಿರುವುದರಿಂದ ವಾಜವೆಂದರೆ ಅನ್ನವೆಂದರ್ಥವು.

ವ್ಯಾಕರಣಪ್ರಕ್ರಿಯಾ

**ಸೋಮಪರಿಬಾಧಃ—**ಸೋಮಂ ಪರಿಬಾಧನ್ತೇ ಇತಿ ಸೋಮಪರಿಬಾಧಃ. **ಕ್ವಿಪ್ ಚ** ಎಂದು ಕ್ವಿಪ್ ಪ್ರಥಮಾಬಹುವಚನಾಂತ, ಕೃದುತ್ತರಪದಪ್ರಕೃತಿಸ್ವರ.

**ಅರಾತಯಃ—**ರಾ ದಾನೇ, **ಕೃತ್ಯಲ್ಯುಟೋ ಬಹುಲಂ** ಎಂಬಲ್ಲಿ ಬಹುಲಗ್ರಹಣದಿಂದ ಕರ್ತ್ರರ್ಥದಲ್ಲಿ ಕ್ತಿನ್ ಬರುತ್ತೆ ಅಥವಾ **ಕ್ತಿಚ್ ಕ್ತೌ ಚ ಸಂಜ್ಞಾಯಾಂ** ಎಂದು ಕ್ತಿಚ್. **ತ್ರಿತುತ್ರ—,** ಎಂದು ಇಟ್‌ಗೆ ನಿಷೇಧ. ನಞ್‌ಸಮಾಸ. ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತೆ.

**ಜುಹುರನ್ತ—**ಹೃ ಪ್ರಸಹ್ಯಕರಣೇ ಜುಹೋತ್ಯಾದಿ. ಲಙ್, ಝ, **ನಮಾಙ್ಯೋಗೇ** ಎಂದು ಅಡಾಗಮಕ್ಕೆ ನಿಷೇಧ. ಇದು ಪರಸ್ಮೈಪದಿಯಾದರೂ **ವ್ಯತ್ಯಯೋ ಬಹುಲಂ** ಎಂದು ಆತ್ಮನೇಪದ ಬರುತ್ತೆ **ಜುಹೋತ್ಯಾದಿಭ್ಯಃ ಶ್ಲುಃ** ಎಂದು ಶಪ್‌ಗೆ ಶ್ಲು. **ಶ್ಲೌ** ಎಂದು ದ್ವಿತ್ವ. ಹೃ+ಹೃ+ಝ, **ಬಹುಲಂಛಂದಸಿ** (ಪಾ. ಸೂ. ೭-೪-೭೮) ಎಂಬಲ್ಲಿ ಬಹುಲಗ್ರಹಣದಿಂದ ಅಭ್ಯಾಸದ ಋಕಾರಕ್ಕೆ ಇಕಾರ, ರಪರತ್ವ. **ಹಲಾದಿಃ ಶೇಷಃ** ಎಂದು ರೇಫಲೋಪ. **ಕುಹೋಶ್ಚುಃ** ಎಂದು ಅಭ್ಯಾಸದ ಹಕಾರಕ್ಕೆ ಝಕಾರ. **ಅಭ್ಯಾಸೇ ಚರ್ಚ** ಎಂದು ಝಕಾರಕ್ಕೆ ಜಕಾರ. ಜು+ಹೃ+ಝ, **ಬಹುಲಂ ಛಂದಸಿ** (ಪಾ. ಸೂ. ೭-೩-೧೦೩) ಎಂದು ಋಕಾರಕ್ಕೆ ಉಕಾರ. ಇಲ್ಲಿ ಈ ಸೂತ್ರದಿಂದ ದ್ವಿತ್ವಾತ್ಪೂರ್ವಗುತ್ವ ಬಂದರೆ ಹುರ್, **ದ್ವಿರ್ವಚನೇಽಚಿ** ಎಂಬುದು **ಸರ್ವೇವಿಧಯಶ್ಛಂದಸಿ** ಎಂಬುದರಿಂದ ಇಲ್ಲಿ ಬರುವುದಿಲ್ಲ. ಹುರ್‌ಗೆ ದ್ವಿತ್ವ ಎಂದು ಹೇಳಬಹುದು **ಸರ್ವೇವಿಧಯಂಶ್ಛಂದಸಿ-ವಿಕಲ್ಪ್ಯನ್ತೇ** ಎಂದು ವಿಕಲ್ಪವಾದ್ದರಿಂದ **ಅದಭ್ಯಸ್ತಾತ್** ಎಂಬುದರಿಂದ ಝ್‌ಗೆ ಅತ್ ಆದೇಶ ಬರುವುದಿಲ್ಲ. **ಝೋನ್ತಃ** ಎಂದು ಅಂತಾದೇಶ. ಜುಹುರನ್ತ ಎಂದು ಆಗುತ್ತದೆ. **ತಿಙ್ಙತಿಙಃ** ಎಂದು ಸರ್ವಾನುದಾತ್ತ. ||೮||

॥ ಸಂಹಿತಾಪಾಠಃ ॥

ಯಾಸ್ತೇ ಪ್ರಜಾ ಅಮೃತಸ್ಯ ಪರಸ್ಮಿನ್ಧಾಮನ್ನೃತಸ್ಯ ।
ಮೂರ್ಧಾ ನಾಭಾ ಸೋಮ ವೇನ ಆಭೂಷಂತೀಃ ಸೋಮ ವೇದಃ ॥ ೯ ॥

॥ ಪದಪಾಠಃ ॥

ಯಾಃ । ತೇ । ಪ್ರಽಜಾಃ । ಅಮೃತಸ್ಯ । ಪರಸ್ಮಿನ್ । ಧಾಮನ್ । ಋತಸ್ಯ ।
ಮೂರ್ಧಾ । ನಾಭಾ । ಸೋಮ । ವೇನಃ । ಆಽಭೂಷಂತೀಃ । ಸೋಮ । ವೇದಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಸೋಮ ತೇ ತವ ಸಂಬಂಧಿನ್ಯೋ ಯಾಃ ಪ್ರಜಾಃ ಸಂತಿ ಸ್ತೋತ್ರಂ ವಾ ಕುರ್ವಂತಿ ತಾಃ ಪ್ರಜಾಃ ಮೂರ್ಧಾ ಶಿರಃಸ್ಥಾನೀಯಸ್ತ್ವಂ ನಾಭಾ ಸನ್ನಹನಯುಕ್ತೇ ಯಜ್ಞಗೃಹೇ । ವೇನಃ ಕಾಮಯಸ್ವ । ಕೀದೃಶಸ್ಯ ತೇ । ಅಮೃತಸ್ಯ ಮರಣರಹಿತಸ್ಯ ಪರಸ್ಮಿನ್ಧಾಮನ್ನೃತಸ್ಯ ಉತ್ತಮೇ ಸ್ಥಾನೇ ಪ್ರಾಪ್ತಸ್ಯ । ಹೇ ಸೋಮ ಆಭೂಷಂತೀಃ ಸರ್ವತಸ್ತ್ವಾಮಲಂಕುರ್ವಂತೀಃ ಪ್ರಜಾಃ ವೇದಃ । ಜಾನೀಹಿ ॥ ಧಾಮನ್ । ಸುಪಾಂ ಸಲುಗಿತಿ ಸಪ್ತಮ್ಯಾ ಲುಕ್ । ನಾಭಾ । ಣಹ ಬಂಧನೇ । ನಹೋ ಭಶ್ಚ । ಉ. ೪-೧೨೫ । ಇತಿ ಕರ್ಮಣೀಞ್ಪ್ರತ್ಯಯಃ । ಞಿತ್ವಾದಾದ್ಯುದಾತ್ತತ್ವಂ । ಸುಪಾಂ ಸುಲುಗಿತಿ ಸಪ್ತಮ್ಯಾ ಡಾದೇಶಃ । ವೇನಃ । ವೇನತಿಃ ಕಾಂತಿ ಕರ್ಮಾ । ಲೇಟಿ ಸಿಪ್ಯಡಾಗಮಃ । ತಿಙ್ಙತಿಙ ಇತಿ ನಿಘಾತಃ । ಆಭೂಷಂತೀಃ । ಭೂಷ ಅಲಂಕಾರೇ । ಭೌವಾದಿಕಃ । ಶಪಃ ಪಿತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರೇಣಾದ್ಯುದಾತ್ತತ್ವಂ । ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ । ವೇದಃ । ವಿದ ಜ್ಞಾನೇ । ಲೇಟಿ ಸಿಪ್ಯಡಾಗಮಃ ॥ ೨೭ ॥ ॥ ೮ ॥

ಪ್ರತಿಪದಾರ್ಥ

ಸೋಮ—ಎಲೈ ಸೋಮದೇವನೇ । ಅಮೃತಸ್ಯ—ಮರಣರಹಿತನಾಗಿಯೂ । ಪರಸ್ಮಿನ್‌ಧಾಮನ್ನೃತಸ್ಯ— ಅತ್ಯುತ್ಕೃಷ್ಟವಾದ ವಾಸಸ್ಥಾನದಲ್ಲಿರುವವನಾಗಿಯೂ ಆದ । ತೇ— ನಿನ್ನ । ಯಾಃ ಪ್ರಜಾಃ—

(ಸ್ತೋತ್ರಮಾಡತಕ್ಕ) ಯಾವ ಪ್ರಜೆಗಳಿದ್ದಾರೋ ಅವರನ್ನು । **ಮೂರ್ಧಾ**—ಅವರ ತಲೆಯಾಳಾಗಿ (ನಾಯಕನಾಗಿ) । **ನಾಭಾ**— ಯಜ್ಞಗೃಹದಲ್ಲಿ । **ವೇನಃ**— ಆದರಿಸು. । **ಸೋಮ**— ಎಲೈ ಸೋಮನೇ । **ಆಭೂಷಂತೀಃ**— ಸುತ್ತಲೂ ನಿನ್ನನ್ನು ಅಲಂಕರಿಸುತ್ತಿರುವುದನ್ನು । **ವೇದಃ**—ತಿಳಿದುಕೊ. ।

॥ ಭಾವಾರ್ಥ ॥

ಎಲೈ ಸೋಮದೇವನೇ, ನೀನು ಮರಣರಹಿತನು. ಮತ್ತು ಅತ್ಯುತ್ಕೃಷ್ಟವಾದ ವಾಸಸ್ಥಾನದಲ್ಲಿರುವವನು. ನಿನ್ನ ಭಕ್ತರಾದ ಪ್ರಜೆಗಳು ನಿನ್ನನ್ನು ಸುತ್ತಲೂ ಅಲಂಕರಿಸುತ್ತಿರುವರು. ಯಜ್ಞಗೃಹದಲ್ಲಿ ನೀನು ಅವರ ನಾಯಕನಾಗಿದ್ದುಕೊಂಡು ಅವರು ನಿನ್ನನ್ನು ಉಪಚರಿಸುವುದನ್ನು ಚೆನ್ನಾಗಿ ತಿಳಿದುಕೊಂಡು ಅವರನ್ನು ಚೆನ್ನಾಗಿ ಆದರಿಸು.

## English Translation

O Soma, you are immortal and live in an excellent dwelling; have regard for your subjects who are engaged in decorating you in the sacrifical hall with you at their head.

ವಿಶೇಷವಿಷಯಗಳು

**ಅಮೃತಸ್ಯ—ಮರಣರಹಿತಸ್ಯ ।** ಮರಣರಹಿತನಾದ ಸೋಮನ.

**ಪರಸ್ಮಿನ್ ಧಾಮನ್ ಋತಸ್ಯ—ಉತ್ತಮೇ ಸ್ಥಾನೇ ಪ್ರಾಪ್ತಸ್ಯ ।** ಉತ್ತಮಸ್ಥಾನದಲ್ಲಿ ಬಂದು ಕುಳಿತಿರುವ, ಇಲ್ಲಿ ಉತ್ತಮಸ್ಥಾನವೆಂದರೆ ಸ್ತೋತ್ರಮಾಡುವ ಯಜ್ಞಗೃಹವು.

**ಮೂರ್ಧಾ— ಶಿರಸ್ಥಾನೀಯಸ್ತ್ವಂ ।** ಶಿರಸ್ಸ್ಥಾನದಲ್ಲಿರುವವನು ಎಂದರೆ ಶ್ರೇಷ್ಠವಾದ ಅಥವಾ ಅಗ್ರಸ್ಥಾನದಲ್ಲಿರುವವನು, at their head. ನಿನ್ನ ಮುಂದಾಳುತ್ವದಲ್ಲಿ.

**ನಾಭಾ—ಸಂಹನನಯುಕ್ತೇ ಯಜ್ಞಗೃಹೇ ।** ಯಜ್ಞಗೃಹದಲ್ಲಿ.

**ವೇನಃ— ವೇನತಿಃ ಕಾಂತಿಕರ್ಮಾ । ಕಾಮಯಸ್ವ ।** ಅಪೇಕ್ಷಿಸು, ಇಚ್ಛಿಸು.

**ಆಭೂಷಂತೀಃ— ಸರ್ವತಸ್ತ್ವಾಮಲಂಕುರ್ವತೀಃ ।** ನಿನ್ನನ್ನು ಸರ್ವವಿಧದಿಂದಲೂ ಅಲಂಕರಿಸುತ್ತಿರುವ. ಇಲ್ಲಿ ಸೋಮನನ್ನು ಅಲಂಕರಿಸುವುದೆಂದರೆ ಏನೆಂಬುದು ಸ್ಪಷ್ಟವಾಗಿಲ್ಲ. ಪ್ರಾಯಶಃ ಸೋಮರಸವನ್ನು ಹಿಂಡುವುದಕ್ಕಾಗಿ ಸಿದ್ಧತೆಗಳನ್ನು ಮಾಡುವುದನ್ನು ಅಲಂಕರಿಸುವುದೆಂದು ಋಷಿಯು ಪ್ರಕಾರಾಂತರವಾಗಿ ವರ್ಣಿಸಿರಬಹುದು.

**ವೇದಃ— ವಿದ ಜ್ಞಾನೇ ।** ತಿಳಿದುಕೋ.

ವ್ಯಾಕರಣಪ್ರಕ್ರಿಯಾ

**ಧಾಮನ್—ಸುಪಾಂ ಸುಲುಕ್—,** ಎಂದು ಸಪ್ತಮೀವಿಭಕ್ತಿಗೆ ಲುಕ್ ಬರುತ್ತೆ.

**ನಾಭಾ**—ಣಹ ಬಂಧನೇ, **ಣೋನಃ** ಎಂದು ಣಕಾರಕ್ಕೆ ನಕಾರ. **ನಹೋ ಭಶ್ಚ** (ಉ. ಸೂ. ೪-೫೬೫) ಣಹ್ ಧಾತು ಮುಂದೆ ಇಞ್ ಪ್ರತ್ಯಯವೂ ಹ್‌ಗೆ ಭಕಾರಾದೇಶವೂ ಬರುತ್ತೆ ಎಂದು ಅವು ಬಂದರೆ ಉಪಧಾವೃದ್ಧಿ ಬಂದು ನಾಭಿ ಎಂದು ಆಗುತ್ತೆ. ಸಪ್ತಮೀಏಕವಚನ ಙಿಗೆ **ಸುಪಾಂ ಸುಲುಕ್—,** ಎಂದು ಡಾ ಆದೇಶ. ಟಿಲೋಪ.

**ವೇನಃ—ವೇನತಿಃ ಕಾನ್ತಿಕರ್ಮಾ** (ನಿರು.೨-೬ ೪) ಎಂಬ ನಿರುಕ್ತ. ವೇನ ಕಾನ್ತೌ ಎಂಬ ಧಾತುವನ್ನು ಇಟ್ಟುಕೊಳ್ಳಬೇಕು. ಕಾನ್ತಿ ಎಂದರೆ ಇಚ್ಛೆ. ಲೇಟ್, ಸಿಪ್, ಅಡಾಗಮ. **ತಿಙ್ಙತಿಙಃ** ಎಂದು ಸರ್ವಾನುದಾತ್ತ.

**ಆಭೂಷನ್ತೀಃ**—ಭೂಷ ಅಲಂಕಾರೇ ೧ನೇ ಗಣ. ಲಟ್, ಶತೃ, ಶಪ್, **ಅತೋಗುಣೇ** ಪರರೂಪ. ಭೂಷತ್. **ಉಗಿತಶ್ಚ** ಎಂದು ಙೀಪ್ **ಆಚ್ಛೀನದ್ಯೋರ್ನುಮ್** (ಪಾ. ಸೂ. ೭-೧-೮೦) ಅವರ್ಣಾಂತವಾದ ಅಂಗದ ಮುಂದೆ ಇರುವ ಯಾವ ಶತೃಪ್ರತ್ಯಯಾವಯವವಿದೆಯೋ ಅದನ್ನು **ಕೊನೆಯಲ್ಲಿ** ಹೊಂದಿರುವ ಅಂಗಕ್ಕೆ ನುಮ್ ಆಗಮವು ಶೀ ಅಥವಾ ನದೀಸಂಜ್ಞಿಕವರ್ಣ ಇವು ಪರದಲ್ಲಿದ್ದರೆ ಬರುತ್ತೆ ಎಂದು ನುಮ್ ಆಗಮ. ಭೂಷನ್ತೀ, ಶಸ್ ಪೂರ್ವಸವರ್ಣದೀರ್ಘ. ರುತ್ವ ವಿಸರ್ಗಗಳು. ಆಙ್‌ನೊಂದಿಗೆ ಭೂಷತ್ ಎಂಬುದಕ್ಕೆ ಸಮಾಸ ಬಂದರೆ ಕೃದುತ್ತರಪದಪ್ರಕೃತಿಸ್ವರ ಬರುತ್ತೆ. ಉತ್ತರಪದದಲ್ಲಿ ಶಪ್ ಅನುದಾತ್ತ, **ತಾಸ್ಯನುದಾತ್ತೇತ್—,** ಎಂದು ಶತೃ ಅನುದಾತ್ತ, ಧಾತುಸ್ವರ ಬರುತ್ತೆ.

**ವೇದಃ**—ವಿದ ಜ್ಞಾನೇ **ಲೇಟ್**‌ಗೆ ಸಿಪ್. ಅದಕ್ಕೆ ಅಟ್ ಆಗಮ, ಶಪ್, ಲಘೂಪಧಗುಣ ವೇದ್+ಅ+ಅಸ್, ಪರರೂಪ, ರುತ್ವವಿಸರ್ಗಗಳು. ||೯||

ಇಲ್ಲಿಗೆ ೪೩ನೇ ಸೂಕ್ತವು ಮುಗಿದುದು.

# ನಲವತ್ತನಾಲ್ಕನೆಯ ಸೂಕ್ತವು

**ನವಮೋಽನುವಾಕೇ ಸಪ್ತ ಸೂಕ್ತಾನಿ । ತತ್ರಾಗ್ನೇ ವಿವಸ್ವದಿತಿ ಚತುರ್ದಶರ್ಚಂ ಪ್ರಥಮಂ ಸೂಕ್ತಂ । ಅತ್ರಾನುಕ್ರಮಣಿಕಾ । ಅಗ್ನೇ ಷಳೂನಾ ಪ್ರಸ್ಕಣ್ವಃ ಕಾಣ್ವ ಆಗ್ನೇಯಂ ತು ಪ್ರಾಗಾಥಮಾದ್ಯೇ ದ್ವ್ಯೃಚೋಽಶ್ವ್ಯುಷಸಾಂ ಚೇತಿ । ಕಣ್ವಪುತ್ರಃ ಪ್ರಸ್ಕಣ್ವ ಋಷಿಃ । ಅತ್ರ ದ್ವಿತೀಯಾಚತುರ್ಥ್ಯಾದ್ಯಾ ಯುಜಃ ಸತೋಬೃಹತ್ಯಃ । ಪ್ರಥಮಾತೃತೀಯಾದ್ಯಾ ಅಯುಜೋ ಬೃಹತ್ಯಃ । ಕೃತ್ಸ್ನಂ ಸೂಕ್ತಮಾಗ್ನೇಯಮುತ್ತರಂ ಚ । ಆದ್ಯೇ ದ್ವೇ ಅಶ್ವಿದೇವತಾಕೇ ಉಷೋದೇವತಾಕೇ ಚ ॥ ಪ್ರಾತರನುವಾಕ ಆಗ್ನೇಯೇ ಕ್ರತೌ ಬಾರ್ಹತೇ ಛಂದಸ್ಯಾಶ್ವಿನಶಸ್ತ್ರೇ ಚೇದಂ ಸೂಕ್ತಂ । ಅಥೈತಸ್ಯಾ ರಾತ್ರೇರಿತಿ ಖಂಡೇ ಸೂತ್ರಿತಂ । ಅಗ್ನೇ ವಿವಸ್ವತ್ಸಖಾಯಸ್ತ್ವಾ । ಆ. ೪-೧೩ । ಇತಿ ವಾಜಪೇಯ ಅಗ್ನಿಮಾರುತ ಆದ್ಯಃ ಪ್ರಗಾಥೋಽನುರೂಪಃ । ವಾಜಪೇಯೇನೇತಿ ಖಂಡೇ ಸೂತ್ರಿತಂ । ಚಿತ್ರವತೀಷು ಚೇತ್ ಸ್ತುವೀರಂಸ್ತ್ವಂ ನಶ್ಚಿತ್ರ ಊತ್ಯಾಗ್ನೇ ವಿವಸ್ವದುಷಸ ಇತ್ಯಗ್ನಿಷ್ಟೋಮಸಾಮ್ನಃ ಸ್ತೋತ್ರಿಯಾನುರೂಪೌ । ಆ. ೯-೯ । ಇತಿ ಪರ್ಯಾಯವ್ಯುಷ್ಟಾವಾಶ್ವಿನಶಸ್ತ್ರಸ್ಯಾಯಮೇವ ಪ್ರಗಾಥಃ ಸ್ತೋತ್ರಿಯಃ । ಯದಿ ಪರ್ಯಾಯಾನಭಿವ್ಯುಚ್ಛೇದಿತಿ ಖಂಡ ಆಶ್ವಿನಾಯೈಕಸ್ತೋತ್ರಿಯೋಽಗ್ನೇ ವಿವಸ್ವದುಷಸಃ । ಆ. ೬-೬ । ಇತಿ ಸೂತ್ರಿತಂ ॥**

ಅನುವಾಕವು—**ಅಗ್ನೇವಿವಸ್ವತ್** ಎಂಬ ಸೂಕ್ತದಿಂದ ಒಂಭತ್ತನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ (೪೪-೫೦) ಏಳು ಸೂಕ್ತಗಳಿರುವವು. ಅದರಲ್ಲಿ **ಅಗ್ನೇವಿವಸ್ವತ್** ಎಂಬ ಮೊದಲನೆಯ ಸೂಕ್ತದಲ್ಲಿ ಹದಿನಾಲ್ಕು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ—**ಅಗ್ನೇ ಷಳೂನಾ ಪ್ರಸ್ಕಣ್ವಃ ಕಾಣ್ವ ಆಗ್ನೇಯಂತು ಪ್ರಾಗಾಥಮಾದ್ಯೇ ದ್ವ್ಯೃಚೋಽಶ್ವ್ಯುಷಸಾಂ ಚೇತಿ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಕಣ್ವಪುತ್ರನಾದ ಪ್ರಸ್ಕಣ್ವನು ಋಷಿಯು. ಅಸಮಸಂಖ್ಯೆಯ ಋಕ್ಕುಗಳು ಸತೋಬೃಹತೀ ಛಂದಸ್ಸಿನವು. ಈ ಸೂಕ್ತವೆಲ್ಲವೂ ಅಗ್ನಿದೇವತಾಕವು. ಆದರೆ ೧-೨ನೇಯ ಋಕ್ಕುಗಳಿಗೆ ಅಗ್ನಿ, ಅಶ್ವಿನೀದೇವತೆಗಳು ಉಷಾಃ ಇವರೂ ದೇವತೆಗಳು-ಪ್ರಾತರನುವಾಕಮಂತ್ರಪಠನಕಾಲದಲ್ಲಿ ಬೃಹತೀಛಂದಸ್ಸಿನ ಆಶ್ವಿನ ಶಸ್ತ್ರಮಂತ್ರಗಳಿಗಾಗಿ ಈ ವಿಷಯವು ಆಶ್ವಲಾಯನ ಶ್ರೌತ ಸೂತ್ರದ **ಅಥೈತಸ್ಯಾ ರಾತ್ರೇಃ** ಎಂಬ ಖಂಡದಲ್ಲಿ **ಅಗ್ನೇವಿವಸ್ವತ್** ( ಋ. ಸಂ. ೧-೪೪-೧) **ಸಖಾಯಸ್ತ್ವಾ** (ಋ ಸಂ. ೩-೯-೧) ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೩).

ವಾಜಪೇಯಯಾಗದಲ್ಲಿಯೂ ಅಗ್ನಿಮಾರುತ ಸ್ತೋತ್ರ ಮಂತ್ರಕ್ಕಾಗಿ ಈ ಸೂಕ್ತದ ಮೊದಲನೆಯ ಋಕ್ಕನ್ನು ಪ್ರಗಾಥ ಛಂದಸ್ಸಿನ ಮಂತ್ರಕ್ಕಾಗಿ ವಿನಿಯೋಗಿಸುವರು. ಆಶ್ವಲಾಯನ ಶ್ರೌತಸೂತ್ರದ **ವಾಜಪೇಯೇನ** ಎಂಬ ಖಂಡದಲ್ಲಿ **ಚಿತ್ರವತೀಷು ಚೇತ್ ಸ್ತುವೀರಂಸ್ತ್ವಂ ನಶ್ಚಿತ್ರ ಊತ್ಯಾ** ( ಋ. ಸಂ. ೬-೪೭-೯ ). **ಅಗ್ನೇ ವಿವಸ್ವದುಷಸ** ( ಋ. ಸಂ. ೧-೪೪-೧ ) **ಇತ್ಯಗ್ನಿಷ್ಟೋಮಸಾಮ್ನಃ ಸ್ತೋತ್ರಿಯ ರೂಪೌ** ಎಂಬ ಸೂತ್ರದಿಂದ ವಿವೃತವಾಗಿರುವುದು. ( ಆ. ೯-೯ ) ಪರ್ಯಾಯವ್ಯುಷ್ಟಿಯಲ್ಲಿಯೂ ಆಶ್ವಿನ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತವನ್ನು

ಪ್ರಗಾಥ ಛಂದಸ್ಸಿನ ಸ್ತೋತ್ರಿಯ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಯಧಿಪರ್ಯಾ-ಯಾನಭಿವ್ಯುಚ್ಛೇತ್** ಎಂಬ ಖಂಡದಲ್ಲಿ **ಆಶ್ವಿನಾಯ್ಯೈಕಸ್ತೋತ್ರಿಯೋಽಗ್ನೇ ವಿವಸ್ವದುಷಸಃ** ಎಂಬ ಸೂತ್ರದಿಂದ ವಿವೃತವಾಗಿರುವುದು ( ಆ ೬.೬ ).

---

॥ ಓಂ ॥

## ಸೂಕ್ತ—೪೪

॥ ಮಂಡಲ—೧ ॥ ಅನುವಾಕ—೯ ॥ ಸೂಕ್ತ—೪೪ ॥

॥ ಅಷ್ಟಕ— ೧ ॥ ಅಧ್ಯಾಯ— ೩ ॥ ವರ್ಗ—೨೮, ೨೯, ೩೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೧೪ ॥

॥ ಋಷಿಃ—ಪ್ರಸ್ಕಣ್ವಃ ಕಾಣ್ವಃ ॥

॥ ದೇವತಾ— ೧, ೨, ಅಗ್ನಿರಶ್ವಿನಾವುಷಾಃ । ೩-೧೪ ಅಗ್ನಿಃ ॥

॥ ಛಂದಃ—ಪ್ರಾಗಾಥಂ ಬಾರ್ಹತಂ । ೧, ೩, ೫, ೭, ೯, ೧೧, ೧೩, ಬೃಹತೀ ॥ ೨, ೪, ೬, ೮, ೧೦, ೧೨. ೧೪, ಸತೋಬೃಹತೀ ॥

॥ ಸಂಹಿತಾಪಾಠಃ ॥

ಅಗ್ನೇ ವಿವಸ್ವದುಷಸಶ್ಚಿತ್ರಂ ರಾಧೋ ಅಮರ್ತ್ಯ ।
ಆ ದಾಶುಷೇ ಜಾತವೇದೋ ವಹಾ ತ್ವಮದ್ಯಾ ದೇವಾँ ಉಷ-
ರ್ಬುಧಃ ॥೧॥

॥ ಪದಪಾಠಃ ॥

ಅಗ್ನೇ । ವಿವಸ್ವತ್ । ಉಷಸಃ । ಚಿತ್ರಂ । ರಾಧಃ । ಅಮರ್ತ್ಯ ।
ಆ । ದಾಶುಷೇ । ಜಾತಽವೇದಃ । ವಹ । ತ್ವಂ । ಅದ್ಯ । ದೇವಾನ್ ।
ಉಷಃಽಬುಧಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಮುಷಸ ಉಷೋದೇವತಾಯಾಃ ಸಕಾಶಾದ್ರಾಧೋ ಧನಂ ದಾಶುಷೇ ಹವಿರ್ದತ್ತ್ವತೇ ಯಜಮಾನಾಯಾ ವಹ । ಆನೀಯ ಪ್ರಾಪಯ। ಸೋಽಗ್ನಿರ್ವಿಶೇಷ್ಯತೇ । ಅಮರ್ತ್ಯ ಮರಣರಹಿತ ಜಾತವೇದೋ ಜಾತಾನಾಂ ವೇದಿತಃ। ತಮೇತಂ ಶಬ್ದಂ ಯಾಸ್ಕೋ ವ್ಯಾಚಷ್ಟೇ। ಜಾತವೇದಾಃ ಕಸ್ಮಾತ್ । ಜಾತಾನಿ ವೇದ ಜಾತಾನಿ ವೈನಂ ವಿದುರ್ಜಾತೇ ಜಾತೇ ವಿದ್ಯತ ಇತಿ ವಾ ಜಾತವಿತ್ತೋ ವಾ ಜಾತಧನೋ ಜಾತವಿದ್ಯೋ ವಾ ಜಾತಪ್ರಜ್ಞಾನೋ ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಮಿತಿ ಬ್ರಾಹ್ಮಣಂ । ತಸ್ಮಾತ್ಸರ್ವಾನೃತೂನ್ಪಶವೋಽಗ್ನಿಮಭಿಸರ್ಪಂತೀತಿ ಚ । ನಿ. ೭ ೧೯ । ಇತಿ । ಕೀದೃಶಂ ರಾಧಃ । ವಿವಸ್ವತ್ ವಿಶಿಷ್ಟನಿವಾಸೋಪೇತಂ ಚಿತ್ರಂ ನಾನಾವಿಧಂ । ಕಿಂಚ ಅದ್ಯಾಸ್ಮಿನ್ದಿನ ಉಷರ್ಬುಧ ಉಷಃಕಾಲೇ ಪ್ರಬುದ್ಧಾನ್ದೇವಾನಾ ವಹ ॥ ವಿವಸ್ವತ್ । ವಿವಾಸನಂ ವಿವಃ । ತದ್ಯುಕ್ತಂ । ವಸ ನಿವಾಸೇ । ವಿಪೂರ್ವಾದಂತರ್ಭಾವಿತಣ್ಯರ್ಥಾತ್ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ತದಸ್ಯಾಸ್ತೀತಿ ಮತುಪ್ । ಮಾದುಪಧಾಯಾ ಇತಿ ವತ್ವಂ। ತಸೌ ಮತ್ವರ್ಥ ಇತಿ ಭತ್ವೇನ ಪದತ್ವಾಭಾವಾದ್ರುತ್ವಾದ್ಯಭಾವಃ। ವೃಷಾದಿತ್ವಾದಾದ್ಯುದಾತ್ತತ್ವಂ। ರಾಧಃ। ರಾಧ ಸಾಧ ಸಂಸಿದ್ಧೌ। ರಾಧ್ನೋತ್ಯನೇನೇತಿ ರಾಧೋ ಧನಂ। ಕರಣೇಽಸುನ್। ನಿತ್ತ್ವಾದಾದ್ಯುದಾತ್ತತ್ವಂ। ದಾಶುಷೇ। ದಾಶೃ ದಾನೇ। ದಾಶ್ವಾನ್ ಸಾಹ್ವಾನಿತಿ ಕ್ವಸುಪ್ರತ್ಯಯಾಂತೋ ನಿಪಾತಿತಃ। ಚತುರ್ಥ್ಯೇಕವಚನೇ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ। ಶಾಸಿವಸೀತಿ ಷತ್ವಂ। ಜಾತವೇದಃ। ಜಾತಾನಿ ವೇತ್ತೀತಿ ಜಾತವೇದಾಃ। ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚೇತ್ಯಸುನ್। ಯದ್ವಾ। ವೇದ ಇತಿ ಧನನಾಮ। ಜಾತಂ ಧನಂ ಯಸ್ಯ ಸ ತಾದೃಶಃ। ಆಮಂತ್ರಿತನಿಘಾತಃ। ವಹ। ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘತ್ವಂ। ದೇವಾನ್। ದೀರ್ಘಾದಟಿ ಸಮಾನಪಾದ ಇತಿ ಸಂಹಿತಾಯಾಂ ನಕಾರಸ್ಯ ರುತ್ವಂ। ಆತೋಽಟಿ ನಿತ್ಯಮಿತಿ ಸಾನುನಾಸಿಕ ಆಕಾರಃ। ಉಷರ್ಬುಧಃ। ಉಷಸಿ ಬುಧ್ಯಂತ ಇತ್ಯುಷರ್ಬುಧಃ। ಬುಧ ಅವಗಮನೇ। ಕ್ವಿಪ್ಚೇತಿ ಕ್ವಿಪ್। ರೋ ರುತ್ವಾಭಾವಶ್ಛಾಂದಸಃ ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಅಮರ್ತ್ಯ**— ಮರಣರಹಿತನಾಗಿಯೂ । **ಜಾತವೇದಃ**- ಉತ್ಪನ್ನವಾದ ಸಕಲವನ್ನೂ ತಿಳಿದವನಾಗಿಯೂ ಇರುವ । **ಅಗ್ನೇ**— ಎಲೈ ಅಗ್ನಿಯೇ, । **ತ್ವಂ**—ನೀನು । **ಉಷಸಃ**— ಉಷೋದೇವತೆಯಿಂದ ।

**ವಿವಸ್ವತ್**— ಶ್ರೇಷ್ಠವಾದ ವಾಸಸ್ಥಾನದಿಂದೊಡಗೂಡಿದವನಾಗಿಯೂ | **ಚಿತ್ರಂ**— ನಾನಾಬಗೆಯುಳ್ಳದ್ದಾಗಿಯೂ ಇರುವ | **ರಾಧಃ**— ಧನವನ್ನು | **ದಾಶುಷೇ**— ಹವಿರ್ದಾತನಾದ ಯಜಮಾನನಿಗೆ | **ಆ ವಹ**—ತೆಗೆದುಬಂದು ಕೊಡು. (ಮತ್ತು) | **ಅದ್ಯ**—ಇಂದು | **ಉಷರ್ಬುಧಃ**—ಉಷಃಕಾಲದಲ್ಲಿ ಎಚ್ಚರಗೊಂಡಂತಹ | **ದೇವಾನ್**-ದೇವತೆಗಳನ್ನು (ಇಲ್ಲಿಗೆ, ಕರೆದುಕೊಂಡು ಬಾ)

ಭಾವಾರ್ಥ

ಎಲೈ ಅಗ್ನಿಯೇ, ನೀನು ಮರಣ ರಹಿತನು. ಉತ್ಪನ್ನವಾದ ಸಕಲವನ್ನೂ ತಿಳಿದವನು. ಹವಿರ್ದಾತನಾದ ಯಜಮಾನನು ನಿನ್ನ ಸಹಾಯವನ್ನೇ ನಂಬಿದ್ದಾನೆ. ಅವನಿಗೆ ನೀನು ಶ್ರೇಷ್ಠವಾದ ವಾಸಸ್ಥಾನದಿಂದೊಡಗೂಡಿಯೂ ಮತ್ತು ವಿಧವಿಧವಾಗಿಯೂ ಇರತಕ್ಕ ಐಶ್ವರ್ಯವನ್ನು ಉಷೋದೇವತೆಯಿಂದ ತೆಗೆದುಕೊಂಡುಬಂದು ಕೊಡು ಯಜಮಾನನ ಯಜ್ಞವು ಸಾಂಗವಾಗಿ ನೆರವೇರಲು ಇಂದು ಉಷಃ ಕಾಲದಲ್ಲಿ ಎಚ್ಚರಗೊಂಡಂತಹ ಸಕಲ ದೇವತೆಗಳನ್ನೂ ಯಜ್ಞಭೂಮಿಗೆ ಕರೆದುಕೊಂಡು ಬಾ.

English Translation

O Agni, you are immortal and you have knowledge of all things born ; bring from the Ushas, to the giver of oblations, wealth of many sorts with an excellent dwelling ; bring hither to-day the gods awaking in the morning.

॥ ವಿಶೇಷವಿಷಯಗಳು ॥

**ವಿವಸ್ವತ್—ವಿವಾಸನಂ ವಿವಃ | ತದ್ವ್ಯುಕ್ತಂ | ವಸ ನಿವಾಸೇ |** ವಾಸಸ್ಥಾನದಿಂದ ಸಹಿತವಾದ (ರಾಧಂ) with a good habitation

**ಚಿತ್ರಂ**— ನಾನಾವಿಧವಾದ

**ರಾಧಃ—ರಾಧ ಸಾಧ ಸಂಸಿದ್ಧೌ | ರಾಧ್ನೋತ್ಯನೇನೇತಿ ರಾಧೋ ಧನಂ |** ಮಘಂ ರೇಕ್ಣ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ರಾಧಃ ಎಂಬ ಶಬ್ದವು ಪಠಿತವಾಗಿರುವುದರಿಂದ ರಾಧಃ ಎಂದರೆ ಧನವೆಂದರ್ಥವು.

**ಜಾತವೇದಃ--ಜಾತಾನಾಂ ವೇದಿತಃ |** ಪ್ರಪಂಚದಲ್ಲಿ ಉತ್ಪತ್ತಿಯಾಗುವುದೆಲ್ಲವನ್ನು ತಿಳಿದವನು. ಜಾತವೇದವೆಂಬುದು ಅಗ್ನಿಯ ವಿಶೇಷರೂಪವು. ಈ ಹೆಸರಿನಿಂದ ಅಗ್ನಿಯನ್ನು ಅನೇಕ ಋಕ್ಕುಗಳಲ್ಲಿ ಸ್ತೋತ್ರಮಾಡಿರುವರು ಯಾಸ್ಕರು ಜಾತವೇದಶಬ್ದದ ವಿಷಯದಲ್ಲಿ—

**ಜಾತಾನಿ ವೇದ | ಜಾತಾನಿ ವೈನಂ ವಿದುಃ | ಜಾತೇ ಜಾತೇ ವಿದ್ಯತ ಇತಿ ವಾ | ಜಾತವಿತ್ತೋ ವಾ ಜಾತಧನಃ | ಜಾತವಿದ್ಯೋ ವಾ ಜಾತಪ್ರಜ್ಞಾನಃ | ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ**

**ಜಾತವೇದಸ್ತ್ವಮಿತಿ ಬ್ರಾಹ್ಮಣಂ ತಸ್ಮಾತ್ಸರ್ವಾನೃತೂನ್ ಪಶವೋಽಗ್ನಿಮಭಿಸರ್ಪಂತೀತಿ ||** (ನಿ. ೭-೧೯) ಎಂದು ಹೇಳಿರುವರು. ಎಂದರೆ ಹುಟ್ಟಿದ ಪ್ರಾಣಿಗಳನ್ನು ಇವನು (ಅಗ್ನಿಯು) ತಿಳಿಯುವುದರಿಂದ ಇವನಿಗೆ ಜಾತ ವೇದನೆಂದು ಹೆಸರು; ಹುಟ್ಟಿದ ಪ್ರಾಣಿಗಳು ಇವನನ್ನು ತಿಳಿಯುವುದರಿಂದ ಇವನಿಗೆ ಜಾತವೇದನೆಂದು ಹೆಸರು. ಅಥವಾ ಹುಟ್ಟಿದ ಪ್ರತಿಯೊಂದು ಪ್ರಾಣಿಯಲ್ಲಿಯೂ ಇವನು ಇರುವುದರಿಂದ ಇವನಿಗೆ ಜಾತವೇದನೆಂದು ಹೆಸರು ಧನವುಳ್ಳವನಾದುದರಿಂದ ಇವನಿಗೆ ಜಾತವೇದನೆಂದು ಹೆಸರು; ವಿದ್ಯೆ ಅಥವಾ ಪ್ರಜ್ಞಾನವುಳ್ಳವನಾದುದರಿಂದ ಇವನಿಗೆ ಜಾತವೇದನೆಂದು ಹೆಸರು; ಯಾವ ಪ್ರಾಣಿಯು ಹುಟ್ಟುವುದೋ ಯಜ್ಞದಲ್ಲಿ ಪಶುರೂಪದಿಂದಿರುವ ಅದನ್ನು ಹೊಂದುವುದರಿಂದ (ಅಗ್ನಿಯಲ್ಲಿ ಹೋಮ ಮಾಡುವುದರಿಂದ) ಇವನಿಗೆ ಜಾತವೇದನೆಂದು ಹೆಸರು. ಜಾತ ವೇದನಿಗೆ ಜಾತವೇದನೆಂದು ಹೆಸರು ಬರಲು ಇದೇ ಕಾರಣವು ಎಂದು ಬ್ರಾಹ್ಮಣವಾಕ್ಯವಿರುವುದು ಆದುದರಿಂದ ಸಮಸ್ತ ಪ್ರಾಣಿಗಳೂ ಅಗ್ನಿಯೇ ನಮಗೆ ಸ್ವಾಮಿಯೆಂದು ತಿಳಿದು ಸರ್ವಋತುಗಳಲ್ಲಿಯೂ ಅಗ್ನಿಯನ್ನೇ ಆಶ್ರಯಿ ಸುವುವು ಎಂದಭಿಪ್ರಾಯವು

**ಉಷರ್ಬುಧಃ**— **ಉಷಸಿ ಬುಧ್ಯತ ಇತ್ಯುಷರ್ಬುಧಃ । ಬುಧ ಅವಗಮನೇ ।** ಉಷ ಕಾಲದಲ್ಲಿ ಎಂದರೆ ಪ್ರಾತಃಕಾಲದಲ್ಲಿ ಏಳುವ, ಎದ್ದಿರುವ.

॥ ವ್ಯಾಕರಣಪ್ರಕ್ರಿಯಾ ॥

**ಅಗ್ನೇ**—ಅಗಿ ಗತೌ. **ಅಂಗೇರ್ನಲೋಪಶ್ಚ** (ಉ ಸೂ. ೪-೫೧೦) ಅಗ್ ಧಾತು ಮುಂದೆ ನಿಪ್ರತ್ಯಯ ಬರುತ್ತೆ. ನಕಾರಕ್ಕೆ ಲೋಪವೂ ಬರುತ್ತೆ ಎಂದು ಸೂತ್ರಾರ್ಥ ಅಗಿಧಾತು ಇದಿತ್, **ಇದಿತೋನುಮ್‌ಧಾತೋಃ** ಎಂದು ಬರುವ ನುಮ್ ಆಗಮದ ನಕಾರಕ್ಕೆ ಲೋಪವೂ ನಿಪ್ರತ್ಯಯವೂ ಬಂದರೆ ಅಗ್ನಿ ಎಂದಾಯಿತು ಸಂಬುದ್ಧಿ ಯಲ್ಲಿ ಅಗ್ನೇ. ಇದು ಪಾದದ ಆದಿಯಲ್ಲಿರುವ ಆಮನ್ತ್ರಿತ. **ಆಪಾದಾದೌ** ಎಂದು ಆಷ್ಟಮಿಕ ಸರ್ವಾನುದಾತ್ತಕ್ಕೆ ಪ್ರತಿಷೇಧ. ಷಾಷ್ಠಸೂತ್ರದಿಂದ ಆದ್ಯುದಾತ್ತ ಬರುತ್ತೆ.

**ವಿವಸ್ವತ್**—ವಿವಾಸನಂ ವಿವಃ ತದ್ಯುಕ್ತಂ, ವಾಸಮಾಡಿಸುವಿಕೆಯಿಂದ ಕೂಡಿದ ಎಂದರ್ಥ ವಸ ನಿವಾಸೇ ಧಾತು- ವಿ ಉಪಸರ್ಗ. **ಸಂಪದಾದಿಭ್ಯಃ ಕ್ವಿಪ್** (ವಾ ಸೂ. ೩-೩-೧೦೮-೧) ಎಂದು ಣಿಚ್ ಪ್ರತ್ಯಯಾರ್ಥವನ್ನೊಳಗೊಂಡ ವಿಉಪಸರ್ಗಪೂರ್ವಕವಾದ ವಸ-ಧಾತು ಮುಂದೆ ಭಾವಾರ್ಥದಲ್ಲಿ ಕ್ವಿಪ್. ವಿವಃ ಅಸ್ಯ ಅಸ್ತಿ ಎಂದು ವಿಗ್ರಹ. **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್** (ಪಾ. ಸೂ. ೫-೨-೯೪) ಎಂದು ಮತುಪ್. ವಿವಸ್+ ಮತ್, ವಿವಸ್ ಎಂಬುದು ಅವರ್ಣೋಪಧಕ. **ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ** (ಪಾ. ಸೂ. ೮-೨-೯) ಮವರ್ಣ, ಅಥವಾ ಅವರ್ಣವನ್ನು ಕೊನೆಯಲ್ಲಿ ಹೊಂದಿರುವ ಶಬ್ದ, ಮವರ್ಣ ಅಥವಾ ಅವರ್ಣವನ್ನು ಉಪಧೆಯಲ್ಲಿ ಎಂದರೆ ಉಪಾಂತ್ಯದಲ್ಲಿ ಹೊಂದಿರುವ ಶಬ್ದ, ಇವುಗಳ ಮುಂದೆ ಇರುವ ಮತುಪ್ ಪ್ರತ್ಯಯದ ಮಕಾರಕ್ಕೆ ವಕಾರ ಬರುತ್ತೆ. ಆದರೆ ಆ ಶಬ್ದ ಯವಾದಿಗಣಕ್ಕೆ ಸೇರಿದ್ದರೆ ಅದರ ಮುಂದೆ ಇರುವ ಮತುಪ್‌ನ ಮಕಾರಕ್ಕೆ ವಕಾರ ಬರುವುದಿಲ್ಲ ಎಂದು ಸೂತ್ರಾರ್ಥ. ಇದರಿಂದ ಮಕಾರಕ್ಕೆ ವಕಾರ ಬಂದರೆ ವಿವಸ್ವತ್ ಎಂದು ಆಗುತ್ತೆ. **ತಸೌ ಮತ್ವರ್ಥೇ** (ಪಾ. ಸೂ. ೧-೪-೧೯) ಮತ್ವರ್ಥಪ್ರತ್ಯಯವು ಪರದಲ್ಲಿದ್ದರೆ ತಕಾರಾಂತಶಬ್ದ ಸಕಾರಾಂತಶಬ್ದಗಳು ಭಸಂಜ್ಞೆಯನ್ನು ಹೊಂದುವುವು ಎಂದು ವಿವಸ್‌ಗೆ ಭಸಂಜ್ಞೆ ಬರುತ್ತೆ. ಈ ಭಸಂಜ್ಞೆಯಿಂದ

ಬಾಧಿತವಾಗುವುದರಿಂದ ಅಂತರ್ವರ್ತಿವಿಭಕ್ತಿನಿಮಿತ್ತಕವಾಗಿ **ಸುಪ್ತಿಙಂತಂ ಪದಂ** ಎಂದು ಪದಸಂಜ್ಞೆ ಬರುವುದಿಲ್ಲ. ಆದ್ದರಿಂದ **ಸಸಜುಷೋ ರುಃ** (ಪಾ. ಸೂ ೮-೨-೬೬) ಪದದ ಕೊನೆಯಲ್ಲಿರುವ ಸಕಾರಕ್ಕೂ, ಸಜುಷ್ ಶಬ್ದಕ್ಕೂ ರು ಆದೇಶ ಬರುತ್ತೆ ಎಂದು ಪದಸಂಜ್ಞಾನಿಮಿತ್ತವಾಗಿ ಬರುವ ರು ಆದೇಶವು ಬರುವುದಿಲ್ಲ. ಏವಂಚ **ಭೋಭಗೋ—,** ಎಂದು ಯಾದೇಶವೂ ಬರುವುದಿಲ್ಲ. ಇದು ವೃಷಾದಿಯಾದ್ದರಿಂದ **ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ಎಂದು ಆದ್ಯುದಾತ್ತ.

**ಉಷಸಃ**—ಉಷ ದಾಹೇ ಧಾತು. **ಉಷಃ ಕಿತ್** (ಉ. ಸೂ. ೪-೬೭೩) ಉಷಧಾತು ಮುಂದೆ ಅಸಿ ಪ್ರತ್ಯಯ ಬರುತ್ತೆ. ಅದು ಕಿತ್ ಆಗುತ್ತೆ ಎಂದು ಅಸಿ ಬರುತ್ತೆ. ಅದು ಕಿತ್ ಆದ್ದರಿಂದ ಲಘೂಪಧಗುಣ ಬರುವುದಿಲ್ಲ. ಉಷತಿ ಎಂದರೆ ಕತ್ತಲೆಯನ್ನು ಹೋಗಲಾಡಿಸುವುದು ಎಂದು ಅರ್ಥ. ಕತ್ತಲನ್ನು ಹೋಗಲಾಡಿಸುವ ಪ್ರಾತಃಕಾಲವು ಉಷಃ ಪದದಿಂದ ಬೋಧಿತವಾಗುತ್ತೆ ಪ್ರತ್ಯಯಸ್ವರ ಬರುತ್ತೆ. ಪಂಚಮೀ ಏಕವಚನ ಙಸ್ ಪ್ರತ್ಯಯ.

**ರಾಧಃ**—ರಾಧ ಸಾಧ ಸಂಸಿದ್ಧೌ ಧಾತು. ರಾಧ್ನೋತ್ಯನೇನ, ಇದರಿಂದ ಎಲ್ಲಾ ಕಾರ್ಯಗಳೂ ಸಿದ್ಧವಾಗುವುವು ಎಂಬ ವ್ಯುತ್ಪತ್ತಿಯಿಂದ ಧನವು ಬೋಧಿತವಾಗುತ್ತೆ. **ಸರ್ವಧಾತುಭ್ಯೋಽಸುನ್** ಎಂದು ಅಸುನ್ **ಞ್ನಿತ್ಯಾದಿರ್ನಿತ್ಯಂ** ಎಂದು ಆದ್ಯುದಾತ್ತ.

**ದಾಶುಷೇ—ದಾಶ್ವಾನ್ ಸಾಹ್ವಾನ್—,** ಎಂಬುದರಿಂದ ಕ್ವಸುಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಇಲ್ಲಿ ದಾಶೃ ದಾನೇ ಧಾತು ಮುಂದೆ ಕ್ವಸು ಬಂದಾಗ ದ್ವಿತ್ವವಿಲ್ಲದೇ ಇರುವಿಕೆಯೂ, ಇಟ್ ಬರದೇ ಇರುವಿಕೆಯೂ ನಿಪಾತಿತವಾಗಿದೆ. ಚತುರ್ಥೀಏಕವಚನ ಙೇ ಪ್ರತ್ಯಯ. **ವಸೋಸ್ಸಂಪ್ರಸಾರಣಂ** (ಪಾ. ಸೂ. ೬-೪-೧೩೧) ವಸು ಪ್ರತ್ಯಯಾಂತವೂ ಭ ಸಂಜ್ಞಕವೂ ಆದ ಅಂಗಕ್ಕೆ ಸಂಪ್ರಸಾರಣ ಬರುತ್ತೆ ಎಂದರ್ಥ. **ಇಗ್ಯಣಸ್ಸಂಪ್ರಸಾರಣಮ್** ಯವರಲಗಳ ಸ್ಥಾನದಲ್ಲಿ ಕ್ರಮವಾಗಿ ಬರುವ ಇ-ಉ-ಋ-ಌ ಗಳಿಗೆ ಸಂಪ್ರಸಾರಣ ಎಂದು ಸಂಜ್ಞೆ ಹೇಳಿದೆ. ಇಲ್ಲಿ ವ್‌ಗೆ ಉ ಬರುತ್ತೆ. **ಸಂಪ್ರಸಾರಣಾಚ್ಚ** ಎಂಬುದರಿಂದ ಉ+ಅಗಳಿಗೆ ಉ ಒಂದೇ ಪೂರ್ವರೂಪದಿಂದ ಬರುತ್ತೆ. ದಾಶುಸ್+ಏ **ಆದೇಶ ಪ್ರತ್ಯಯಯೋಃ** ಎಂದು ಸಕಾರಕ್ಕೆ ಷಕಾರ. ದಾಶುಷೇ ಎಂದು ರೂಪವಾಗುತ್ತೆ. **ಶಾಸಿವಸಿ—,** ಎಂದು ಷತ್ವವು ಇಲ್ಲಿ ಬರುವುದಿಲ್ಲ ಎಂದು ಹಿಂದೆ ಉಪಪಾದಿಸಿದೆ.

**ಜಾತವೇದಃ**—ಜನೀ ಪ್ರಾದುರ್ಭಾವೇ, ಪ್ರತ್ಯಯ. **ಜನಸನಖನಾಂ ಸನ್ ಝಲೋಃ** ( ಪಾ. ಸೂ. ೬-೪-೪೨) ಎಂದು ನ್‌ಗೆ ಆತ್ವ. **ಶ್ವೀದಿತೋ ನಿಷ್ಠಾಯಾಂ** (ಪಾ ಸೂ. ೭-೨-೧೪) ಎಂದು ಈದಿತ್ತಾದ ಜನ್ ಧಾತು ಮುಂದೆ ಇರುವ ಕ್ತಪ್ರತ್ಯಯಕ್ಕೆ ಇಡಾಗಮಕ್ಕೆ ನಿಷೇಧ. ಜಾತ ಎಂದು ಆಯಿತು, ಜಾತಾನಿ ವೇತ್ತೀತಿ ಜಾತವೇದಃ **ಗತಿಕಾರಕಯೋರಪಿಪೂರ್ವಪದ ಪ್ರಕೃತಿಸ್ವರತ್ವಂ ಚ** (ಉ ಸೂ. ೪-೬೬೬) ಎಂದು ಜಾತಾನಿ ಎಂಬ ಕಾರಕೋಪಪದಕವಾದ ವಿದ ಜ್ಞಾನೇ ಧಾತು ಮುಂದೆ ಅಸುನ್ ಪ್ರತ್ಯಯ. **ಗತಿಕಾರಕೋ—,** ಎಂಬ ಕೃದುತ್ತರಪದಪ್ರಕೃತಿಸ್ವರವನ್ನು ಬಾಧಿಸಿ, ಪೂರ್ವಪದಪ್ರಕೃತಿಸ್ವರವೇ ಇಲ್ಲಿ ವಿಶೇಷವಿಹಿತವಾಗಿರುವುದರಿಂದ ಬರುತ್ತದೆ. ಅಥವಾ, **ಸರ್ವಧಾತುಭ್ಯೋಽಸುನ್** ಎಂದು ವಿದಃ ಎಂಬುದು ಅಸುನ್ನಂತ. ಧನ ಎಂದು ಅರ್ಥ. ಜಾತಂ ವೇದಃ=ಧನಂ ಯಸ್ಯ ಸಃ ಎಂದು ಬಹುವ್ರೀಹಿ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂದು ಪೂರ್ವಪದಪ್ರಕೃತಿಸ್ವರ

ಬರುತ್ತೆ. ಇಲ್ಲಿ ಜಾತವೇದಃ ಎಂಬುದು ಸಂಬೋಧನಪ್ರಥಮಾಏಕವಚನಾಂತ. ಆದ್ದರಿಂದ **ಸಾಮನ್ತ್ರಿತಮ್** (ಪಾ. ಸೂ. ೨-೩-೪೮) ಸಂಬೋಧನೇ ಯಾ ಪ್ರಥಮಾ ತದಂತಂ ಆಮನ್ತ್ರಿತಸಂಜ್ಞಂ ಸ್ಯಾತ್, ಎಂದು ಆಮನ್ತ್ರಿತ ಸಂಜ್ಞೆ ಇದೆ. ಆದ್ದರಿಂದ **ಎರಡುಪಕ್ಷದಲ್ಲಿಯೂ ಆಮನ್ತ್ರಿತಸ್ಯ ಚ** ಎಂಬ ಎಂಟನೇ ಅಧ್ಯಾಯದ ಸೂತ್ರದಿಂದ ಸರ್ವಾನುದಾತ್ತ ಬರುತ್ತೆ.

**ವಹ**—ವಹ ಪ್ರಾಪಣೇ, ಲೋಟ್ ಮಧ್ಯಮ, ಸಿಪ್, ಶಪ್ ಹಿಗೆಲುಕ್. **ದ್ವ್ಯಚೋತಸ್ತಿಙಃ** ಎಂದು ಸಂಹಿತಾಕಾಲದಲ್ಲಿ ದೀರ್ಘ.

**ದೇವಾನ್—ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ಪಾದ ಋಕ್ಕಿನ ನಾಲ್ಕನೇ ಒಂದು ಭಾಗ. ಅಟ್ ಪ್ರತ್ಯಾಹಾರಕ್ಕೆ ಸೇರಿದ ವರ್ಣ, ನಕಾರ ಇವು ಒಂದೇ ಪಾದದಲ್ಲಿದ್ದರೆ ದೀರ್ಘದ ಮುಂದೆ ಇರುವುದೂ ಅಟ್‌ನ ಹಿಂದೆ ಇರುವುದೂ ಆದ ನಕಾರಕ್ಕೆ ಸಂಹಿತಾಕಾಲದಲ್ಲಿ ರು ಆದೇಶ ಬರುತ್ತೆ ಎಂದು ರುಆದೇಶವು ಸಂಹಿತಾ ಕಾಲದಲ್ಲಿ ಬರುತ್ತೆ. **ಆತೋಽಟಿ ನಿತ್ಯಮ್** (ಪಾ. ಸೂ. ೮-೩-೩) ಅಟ್ ಪರದಲ್ಲಿದ್ದರೆ ರುವಿಗಿಂತಲೂ ಪೂರ್ವದಲ್ಲಿ ರುವ ಆಕಾರಕ್ಕೆ ಅನುನಾಸಿಕವಾದ ಆಕಾರವು ನಿತ್ಯವಾಗಿ ಬರುತ್ತೆ ಎಂದು ಅನುನಾಸಿಕಾಕಾರಬರುತ್ತೆ.

**ಉಷರ್ಬುಧಃ**—ಉಷಃ ಎಂಬುದರ ಒಂದು ಪ್ರಕ್ರಿಯೆಯನ್ನು ಮೊದಲೇ ಹೇಳಿದೆ. ಉಷಸಿ ಬುಧ್ಯನ್ತೇ ಇತಿ ಉಷರ್ಬುಧಃ, ಬುಧ ಅವಗಮನೇ ಧಾತು. **ಕ್ವಿಪ್ ಚ** ಎಂದು ಕ್ವಿಪ್ ಪ್ರತ್ಯಯ. ಉಷಸ್+ಬುಧ್. **ಸಸಜುಷೋ ರುಃ** ಎಂದು ಸ್‌ಗೆ ರು ಆದೇಶ. ಉಷರ್+ಬುಧ್. ಈಗ **ಹಶಿಚ** (ಪಾ. ಸೂ. ೬-೧-೧೧೪) ಹಶ್ ವರ್ಣ ಪರದಲ್ಲಿದ್ದರೆ ಪ್ಲುತವಲ್ಲದ ಹ್ರಸ್ವಾಕಾರದ ಮುಂದೆ ಇರುವ ರುಗೆ ಉ ಆದೇಶ ಬರುತ್ತೆ ಎಂದು ಉ ಆದೇಶಕ್ಕೆ ಪ್ರಾಪ್ತಿ ಇದೆ. ಆದರೂ **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ** ಎಂದು ಹೇಳಿರುವುದರಿಂದ ಇಲ್ಲಿ ಬರುವುದಿಲ್ಲ. **ಗತಿಕಾರಕೋಪಪದಾತ್ಕೃತ್** ಎಂದು ಉತ್ತರಪದಕ್ಕೆ ಪ್ರಕೃತಿಸ್ವರ ಬರುತ್ತೆ. ॥೧॥

ಸಂಹಿತಾಪಾಠಃ

ಜುಷ್ಟೋ ಹಿ ದೂತೋ ಅಸಿ ಹವ್ಯವಾಹನೋಽಗ್ನೇ ರಥೀರಧ್ವ-
ರಾಣಾಂ ।
ಸಜೂರಶ್ವಿಭ್ಯಾಮುಷಸಾ ಸುವೀರ್ಯಮಸ್ಮೇ ಧೇಹಿ ಶ್ರವೋ
ಬೃಹತ್ ॥ ೨ ॥

ಪದಪಾಠಃ

ಜುಷ್ಟಃ । ಹಿ । ದೂತಃ । ಅಸಿ । ಹವ್ಯಽವಾಹನಃ । ಅಗ್ನೇ । ರಥೀಃ ।
ಅಧ್ವರಾಣಾಂ ।
ಸಽಜೂಃ । ಅಶ್ವಿಭ್ಯಾಂ । ಉಷಸಾ । ಸುಽವೀರ್ಯಂ । ಅಸ್ಮೇ ಇತಿ । ಧೇಹಿ ।
ಶ್ರವಃ । ಬೃಹತ್ ॥ ೨ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಂ ಜುಷ್ಟತ್ವಾದಿವಿಶೇಷಗುಣಯುಕ್ತೋಽಸಿ । ಜುಷ್ಟಃ ಸೇವಿತೋ ದೂತೋ ದೇವಾನಾಂ ವಾರ್ತಾಹಾರೋ ಹವ್ಯವಾಹನೋ ಹವಿಷೋ ವೋಢಾ ಅಧ್ವರಾಣಾಂ ಕ್ರತೂನಾಂ ರಥೀಃ ರಥಸ್ಥಾನೀಯಃ । ತಥಾ ಚ ಮಂತ್ರಾಂತರಂ ಬ್ರಾಹ್ಮಣೇನೈವ ವ್ಯಾಖ್ಯಾತಂ । ರಥೀರಧ್ವರಾಣಾಮಿತ್ಯಾಹೈಷ ಹಿ ದೇವರಥ ಇತಿ । ಬ್ರಾಹ್ಮಣಾಂತರಂ ಚ । ರಥೀರಧ್ವರಾಣಾಮಿತ್ಯಾಹ ರಥೋ ಹ ವಾ ಏಷ ಭೂತೋ ದೇವೇಭ್ಯೋ ಹವ್ಯಂ ವಹತೀತಿ । ತಾದೃಶಸ್ತ್ವಮಶ್ವಿಭ್ಯಾಂ ದೇವತಾಭ್ಯಾಮುಷಸಾ ದೇವತಯಾ ಚ ಸಜೂಃ ಸಹಿತೋ ಭೂತ್ವಾ ಸುವೀರ್ಯಂ ಶೋಭನವೀರ್ಯೋಪೇತಂ ಬೃಹತ್ ಪ್ರಭೂತಂ ಶ್ರವೋಽನ್ನ-ಮಸ್ಮೇ ಧೇಹಿ । ಅಸ್ಮಾಸು ಪ್ರಕ್ಷಿಪ ॥ ಜುಷ್ಟಃ । ಜುಷೀ ಪ್ರೀತಿಸೇವನಯೋಃ । ನಿತ್ಯಂ ಮಂತ್ರ ಇತ್ಯಾದ್ಯುದಾತ್ತತ್ವಂ । ಅಸಿ । ಸಿಪಿ ತಾಸಸ್ತ್ಯೋರ್ಲೋಪಃ । ಪಾ. ೭-೪-೫೦ । ಇತಿ ಸಲೋಪಃ । ಹಿ ಚೇತಿ ನಿಘಾತಪ್ರತಿಷೇಧಃ । ಹವ್ಯವಾಹನಃ । ಹವ್ಯಂ ವಹತೀತಿ ಹವ್ಯವಾಹನಃ । ಹವ್ಯೇಽನಂತಃಪಾದಂ । ಪಾ. ೩-೨-೬೬ । ಇತಿ ಞ್ಯುಟ್ । ಯೋರನಾದೇಶಃ । ಞಿತ್ತ್ವಾದಾದ್ಯುದಾತ್ತತ್ವೇ ಕೃದುತ್ತರಪದಪ್ರಕೃತಿಸ್ವರತ್ವಂ । ಅಗ್ನೇ । ಪಾದಾದಿತ್ವಾದಾಷ್ಟಮಿಕನಿಘಾತಾಭಾವಃ । ರಥೀಃ । ರಥಶಬ್ದಾತ್ಮತ್ವರ್ಥೀಯ ಈಕಾರಪ್ರತ್ಯಯಃ । ಅಧ್ವರಾಣಾಂ । ಧ್ವರೋ ನಾಸ್ತ್ಯೇಷ್ವಿತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋ-ದಾತ್ತತ್ವಂ । ಸುವೀರ್ಯಂ । ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ । ಅಸ್ಮೇ । ಸುಪಾಂ ಸುಲುಗಿತಿ ಸಪ್ತಮ್ಯಾಃ ಶೇ ಆದೇಶಃ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ, ( ತ್ವಂ-ನೀನು ) । ಜುಷ್ಟಃ—ವಿಶ್ವಾಸದಿಂದ ಸೇವಿಸಲ್ಪಟ್ಟ । ದೂತಃ—ದೇವದೂತನಾಗಿಯೂ । ಹವ್ಯವಾಹನಃ—(ದೇವತೆಗಳಿಗೆ) ಹವಿಸ್ಸನ್ನು ಹೊರುವವನಾಗಿಯೂ । ಅಧ್ವರಾಣಾಂ—ಯಜ್ಞಗಳಿಗೆ । ರಥೀಃ— ರಥಿಕನಸ್ಥಾನದಲ್ಲಿರುವವನಾಗಿಯೂ । ಅಸಿ— ಇದ್ದೀಯೆ ( ಅಂತಹ ನೀನು ) ।

**ಅಶ್ವಿಭ್ಯಾಂ**—ಅಶ್ವಿದೇವತೆಗಳೊಡನೆಯೂ । **ಉಷಸಾ**—ಉಷೋದೇವತೆಯೊಡನೆಯೂ । **ಸಜೂಃ**—ಕೂಡಿಕೊಂಡು **ಸುವೀರ್ಯಂ**—ಶ್ರೇಷ್ಠವಾಗಿಯೂ ವೀರ್ಯವತ್ತಾಗಿಯೂ । **ಬೃಹತ್**—ಸಮೃದ್ಧವಾಗಿಯೂ ಇರುವ । **ಶ್ರವಃ**—ಅನ್ನವನ್ನು । **ಅಸ್ಮೇ**—ನಮಗೆ । **ಧೇಹಿ**—ಅನುಗ್ರಹಿಸು.

ಭಾವಾರ್ಥ

ಎಲೈ ಅಗ್ನಿಯೇ, ನೀನು ಯಜ್ಞಗಳಿಗೆ ನಿರ್ವಾಹಕನಸ್ಥಾನದಲ್ಲಿದ್ದು ಹವಿಸ್ಸನ್ನು ಹೊತ್ತುಕೊಂಡು ಹೋಗಿ ಸಕಲ ದೇವತೆಗಳಿಗೂ ಹಂಚುವ ದೇವದೂತನಾಗಿರುವುದರಿಂದ ಸಕಲರಿಂದಲೂ ವಿಶ್ವಾಸವಾಗಿ ಸೇವಿಸಲ್ಪಡುತ್ತಿದ್ದೀಯೆ ಅಂತಹ ಸಕಲದೇವತೆಗಳ ಪ್ರೀತಿಗೆ ಪಾತ್ರನಾದ ನೀನು ಅಶ್ವಿನೀದೇವತೆಗಳೊಡನೆಯೂ, ಉಷೋದೇವತೆಯೊಡನೆಯೂ ಕೂಡಿಕೊಂಡು, ಶ್ರೇಷ್ಠವಾಗಿಯೂ, ವೀರ್ಯವತ್ತಾಗಿಯೂ ಮತ್ತು ಸಮೃದ್ಧವಾಗಿಯೂ ಇರುವ ಅನ್ನವನ್ನು ನಮಗೆ ಅನುಗ್ರಹಿಸು.

## English Translation

O Agni, you are well-liked messenger of the gods, the bearer of oblations, the conducter of sacrifices; together with Ushas, and Aswins bestow upon us abundant and invigorating food.

॥ ವಿಶೇಷವಿಷಯಗಳು ॥

**ಜುಷ್ಟಃ—ಜುಷೀ ಪ್ರೀತಿಸೇವನಯೋಃ ।** ದೇವತೆಗಳಿಗೆ ಪ್ರೀತಿಪಾತ್ರನಾದ ಅಥವಾ ಯಜ್ಞಮಾಡುವ ಯಜಮಾನರಾದಿ ಜನರಿಂದ ಸೇವಿಸಲ್ಪಡುವ.

**ರಥೀಃ ಅಧ್ವರಾಣಾಂ—ಯಜ್ಞಾನಾಂ, ನೇತಾ ।** ಯಜ್ಞವನ್ನು ನಿರ್ವಹಿಸುವವನು. ಇಲ್ಲಿ ರಥೀಃ ಎಂದರೆ ರಥವನ್ನು ನಡೆಸುವವನು. ಅಥವಾ ರಥವು. ರಥವನ್ನು ನಡೆಸುವವನು ಅಥವಾ ಸಾರಥಿಯು ಅಥವಾ ರಥಿಕನು ಯಾವರೀತಿ ರಥವನ್ನು ನಡೆಸುವನೋ ಅದರಂತೆ ಈ ಅಗ್ನಿಯು ಯಜ್ಞಕರ್ಮವನ್ನು ಸಾಂಗವಾಗಿ ನೆರವೇರಿಸುವನು. ಆದುದರಿಂದ ಯಜ್ಞವೆಂಬ ರಥಕ್ಕೆ ಈ ಅಗ್ನಿಯು ರಥಿಕನಂತಿರುವನು ಎಂದಭಿಪ್ರಾಯವು ಈ ವಿಷಯದಲ್ಲಿ ಭಾಷ್ಯಕಾರರು— **ರಥೀರಧ್ವರಾಣಾಮಿತ್ಯಾಹೈಷ ಹಿ ದೇವರಥಃ । ರಥೀರಧ್ವರಾಣಾಮಿತ್ಯಾಹ ರಥೋ ವಾ ಏಷ ಭೂತೋ ದೇವೇಭ್ಯೋಹವ್ಯಂ ವಹತಿ** ಎಂದು ಬ್ರಾಹ್ಮಣವಾಕ್ಯಗಳನ್ನು ಉದಹರಿಸಿರುವರು.

**ಸಜೂಃ—ಸಹಿತೋ ಭೂತ್ವಾ ।** ಸಹಿತನಾಗಿ,

**ಶ್ರವೋ ಬೃಹತ್**—ಬಹಳವಾದ ಅನ್ನವನ್ನು ಅಥವಾ ಆಹಾರವನ್ನು

### ವ್ಯಾಕರಣಪ್ರಕ್ರಿಯಾ

**ಜುಷ್ಟಃ**—ಜುಷೀ ಪ್ರೀತಿಸೇವನಯೋಃ. ಕ್ತ ಪ್ರತ್ಯಯ. ಶ್ವೀದಿತೋ ನಿಷ್ಠಾಯಾಂ (ಪಾ. ಸೂ. ೭-೨-೧) ಶ್ವಿ ಧಾತು, ಈದಿತ್ತಾದ ಧಾತು ಇವುಗಳ ಮುಂದೆ ಇರುವ ಕ್ತ-ಕ್ತವತುಪ್ರತ್ಯಯಗಳಿಗೆ ಇಟ್ ಬರುವುದಿಲ್ಲ ಎಂದು ಇಟ್‌ಗೆ ನಿಷೇಧ. ಷ್ಟುತ್ವ-ಜುಷ್ಟ ಎಂದಾಗುತ್ತೆ. **ಜುಷ್ಟಾರ್ಪಿತೇಚ ಛಂದಸಿ** (ಪಾ. ಸೂ. ೬-೧-೨೦೯) ಜುಷ್ಟ-ಅರ್ಪಿತ- ಈ ಶಬ್ದಗಳು ಛಂದಸ್ಸಿನಲ್ಲಿ ವಿಕಲ್ಪವಾಗಿ ಆದ್ಯುದಾತ್ತಗಳಾಗುವುವು ಎಂದು ಆದ್ಯುದಾತ್ತ ಬರುತ್ತೆ. **ನಿತ್ಯಂ ಮನ್ತ್ರೇ** (ಪಾ. ಸೂ. ೬-೧-೨೧೦) ಜುಷ್ಟ-ಅರ್ಪಿತ, ಈ ಶಬ್ದಗಳು ಮನ್ತ್ರದಲ್ಲಿ ನಿತ್ಯವಾಗಿ ಆದ್ಯುದಾತ್ತಗಳಾಗುವುವು ಎಂದು ಅರ್ಥ. ಪೂರ್ವಸೂತ್ರದಿಂದಲೇ ಗತಾರ್ಥವಾಗುವುದರಿಂದ ಈ ಸೂತ್ರವನ್ನು ಮಾಡಬೇಕಾದ್ದಿಲ್ಲ. ಛಂದಸ್ಸಿನಲ್ಲಿ ಪ್ರಯೋಗವು ವ್ಯವಸ್ಥಿತವಾದ್ದರಿಂದ ಪಾಕ್ಷಿಕವಾದರೂ ಅಂತೋದಾತ್ತವನ್ನು ಆಪಾದಿಸಲು ಸಾಧ್ಯವಿಲ್ಲ. ಅಲ್ಲದೆ **ಅರ್ಪಿತಾಃ ಷಷ್ಟಿರ್ನ ಚಲಾಚಲಾಸಃ** ಎಂಬಲ್ಲಿ ಅಂತೋದಾತ್ತವು ಶ್ರುತಿಯಲ್ಲಿದೆ. **ನಿತ್ಯಂ ಮನ್ತ್ರೇ** ಎಂಬ ಸೂತ್ರದ ಪ್ರಕಾರ ಇದು ಸಿದ್ಧಿಸದು.

**ಅಸಿ**—ಅಸ ಭುವಿ. ಲಟ್, ಸಿಪ್, **ಅದಿಪ್ರಭೃತಿಭ್ಯಃ ಶಪಃ** ಎಂದುಶಪ್‌ಗೆ ಲುಕ್, ಅಸ್+ಸಿ. **ತಾಸಸ್ತ್ಯೋರ್ಲೋಪಃ** (ಪಾ. ಸೂ. ೭-೪-೫೦) ಸಕಾರಾದಿಪ್ರತ್ಯಯ ಪರದಲ್ಲಿದ್ದರೆ ತಾಸ್ ಪ್ರತ್ಯಯ. ಅಸ್‌ಧಾತು ಇವುಗಳ ಸಕಾರಕ್ಕೆ ಲೋಪ ಬರುತ್ತೆ ಎಂದು ಸ್‌ಗೆ ಲೋಪ. **ಹಿಚ** (ಪಾ. ಸೂ. ೮-೧-೩೪) ಹಿ ಎಂಬುದರಿಂದ ಕೂಡಿರುವ ತಿಙಂತವು ಅನುದಾತ್ತವಾಗುವುದಿಲ್ಲ ಎಂದು ಸರ್ವಾನುದಾತ್ತಕ್ಕೆ ನಿಷೇಧ.

**ಹವ್ಯವಾಹನಃ**—ಹವ್ಯಂ ವಹತೀತಿ ಹವ್ಯವಾಹನಃ **ಹವ್ಯೇಽನನ್ತಃ. ಪಾದಮ್** (ಪಾ. ಸೂ. ೩-೨-೬೬) ಹವ್ಯಶಬ್ದವು ಉಪಪದವಾಗಿದ್ದರೆ ವಹ್‌ಧಾತು ಮುಂದೆ ಞ್ಯುಟ್‌ಪ್ರತ್ಯಯ ಬರುತ್ತೆ ಆದರೆ ಪಾದ್ಯಮಧ್ಯದಲ್ಲಿದ್ದರೆ ಞ್ಯುಟ್ ಬರುವುದಿಲ್ಲ ಎಂದು ಞ್ಯುಟ್ ಬಂದರೆ **ಯುವೋರನಾಕೌ** ಎಂದು ಯುಗೆ ಅನ ಆದೇಶ ಬರುತ್ತೆ. ಉಪಧಾವೃದ್ಧಿ, ಪ್ರತ್ಯಯ ಞಿತ್. ಆದ್ದರಿಂದ ಆದ್ಯುದಾತ್ತ ಬಂದರೆ **ಗತಿಕಾರಕೋ—,** ಎಂಬ ಕೃದುತ್ತರಪದಪ್ರಕೃತಿ ಸ್ವರದಿಂದ ಅದೇ ನಿಲ್ಲುತ್ತೆ.

**ಅಗ್ನೇ**—ಇದು ಪಾದದ ಆದಿಯಲ್ಲಿದೆ. ಆದ್ದರಿಂದ ಆಷ್ಟಮಿಕ ಸರ್ವಾನುದಾತ್ತ ಬರುವುದಿಲ್ಲ. ಷಾಷ್ಠ ಸೂತ್ರದಿಂದ ಆದ್ಯುದಾತ್ತ ಬರುತ್ತೆ.

**ರಥೀಃ**—ರಮು ಕ್ರೀಡಾಯಾಂ, **ಹನಿಕುಷಿ ನೀರಮಿಕಾಶಿಭ್ಯಃ ಕ್ಥನ್** (ಉ. ಸೂ. ೨-೧೫೯) ಎಂದು ಕ್ಥ ಪ್ರತ್ಯಯ. **ಅನುದಾತ್ತೋಪದೇಶ—,** (ಪಾ. ೬-೪-೩೭) ಎಂದು ಮ್‌ಗೆ ಲೋಪ. ರಥಶಬ್ದದ ಮುಂದೆ ಸ್ವಾರ್ಥದಲ್ಲಿ ಈ ಪ್ರತ್ಯಯ ಬರುತ್ತೆ.

**ಅಧ್ವರಾಣಾಂ**—ಧ್ವರಃ ಎಂದರೆ ಹಿಂಸೆ. ನ ವಿದ್ಯತೇ ಧ್ವರಃ ಯೇಷು ತೇ. ಬಹುವ್ರೀಹಿಯಲ್ಲಿ **ನಞ್ ಸುಭ್ಯಾಂ** ಎಂಬುದರಿಂದ ಉತ್ತರಪದಕ್ಕೆ ಅಂತೋದಾತ್ತ ಬರುತ್ತೆ.

**ಸುವೀರ್ಯಂ—ವೀರ ವೀರ್ಯೌ ಚ** (ಪಾ. ಸೂ. ೬-೨-೧೨೦) ಛಂದಸ್ಸಿನಲ್ಲಿ ಬಹುವ್ರೀಹಿಸಮಾಸದಲ್ಲಿ ಸುಶಬ್ದದ ಮುಂದೆ ಇರುವ ವೀರವೀರ್ಯ ಶಬ್ದಗಳು ಆದ್ಯುದಾತ್ತಗಳಾಗುವುವು ಎಂಗು ವೀರ್ಯಶಬ್ದ ಆದ್ಯುದಾತ್ತವಾಗುತ್ತೆ.

**ಅಸ್ಮೇ—ಸುಪಾಂ ಸುಲುಕ್—,** ಎಂದು ಸಪ್ತಮಿಗೆ ಶೇ ಆದೇಶ. **ಶೇಷೇ ಲೋಪಃ** ಎಂದು ಅಸ್ಮದ್ ಶಬ್ದದ ಅದ್ ಎಂಬ ಟಿಗೆ ಲೋಪ. ಉದಾತ್ತನಿವೃತ್ತಿಸ್ವರ. ಅಂತ್ಯಲೋಪಪಕ್ಷದಲ್ಲಿ ಅಸ್ಮ+ಏ ಎಂದಿರುವಾಗ ಅತೋಗುಣೇ ಎಂದು ಪರರೂಪ, ಏಕಾದೇಶಸ್ವರ ಬರುತ್ತೆ ॥೨॥



॥ ಸಂಹಿತಾಪಾಠಃ ॥

ಅದ್ಯಾ ದೂತಂ ವೃಣೀಮಹೇ ವಸುಮ್ಗ್ನಿಂ ಪುರುಪ್ರಿಯಂ ।
ಧೂಮಕೇತುಂ ಭಾಋಜೀಕಂ ವ್ಯುಷ್ಟಿಷು ಯಜ್ಞಾನಾಮಧ್ವರ-
ಶ್ರಿಯಂ ॥ ೩ ॥

ಪದಪಾಠಃ

ಅದ್ಯ । ದೂತಂ । ವೃಣೀಮಹೇ । ವಸುಂ । ಅಗ್ನಿಂ । ಪುರುऽಪ್ರಿಯಂ ।
ಧೂಮಂऽಕೇತುಂ । ಭಾಃऽಋಜೀಕಂ । ವಿऽಉಷ್ಟಿಷು । ಯಜ್ಞಾನಾಂ ।
ಅಧ್ವರऽಶ್ರಿಯಂ ॥ ೩ ॥

ಸಾಯಣಭಾಷ್ಯಂ

**ಅದ್ಯಾಸ್ಮಿನ್ದಿನೇಽಗ್ನಿಂ ವೃಣೀಮಹೇ। ಪ್ರಾರ್ಥಯಾಮಹೇ । ಕೀದೃಶಂ । ದೂತಂ ವಾರ್ತಾಹಾರಂ ವಸುಂ ನಿವಾಸಹೇತುಂ ಪುರುಪ್ರಿಯಂ ಬಹೂನಾಂ ಪ್ರಿಯಂ ಧೂಮಕೇತುಂ ಧೂಮ-**

ರೂಪಧ್ವಜಯುಕ್ತಂ ಭಾಋಜೀಕಂ ಪ್ರಸಿದ್ಧಭಾಸಾಲಂಕೃತಂ। ಭಾಋಜೀಕಃ ಪ್ರಸಿದ್ಧಭಾಃ। ನಿ. ೬-೪। ಇತಿ ಯಾಸ್ಕವಚನಂ। ವ್ಯುಷ್ಟಿಷೂಷಃಕಾಲೇಷು ಯಜ್ಞಾನಾಂ ಯಜಮಾನಾನಾಮಧ್ವರಶ್ರಿಯಂ ಯಾಗ-ಸೇವಿನಂ॥ ಅದ್ಯ। ನಿಪಾತಸ್ಯ ಚೇತಿ ದೀರ್ಘತ್ವಂ। ಪುರೂಣಾಂ ಪ್ರಿಯಃ ಪುರುಪ್ರಿಯಃ। ಸಮಾಸ-ಸ್ಯೇತ್ಯಂತೋದಾತ್ತತ್ವಂ। ಧೂಮಕೇತುಂ। ಇಷಿಯುಧೀಂಧೀತ್ಯಾದಿನಾ। ಉ. ೧-೧೪೪। ಧೂಮ-ಶಬ್ದೋ ಮಕ್ಪ್ರತ್ಯಯಾಂತೋಽಂತೋದಾತ್ತಃ। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ। ಭಾಋ-ಜೀಕಂ। ಋಜ ಗತಿಸ್ಥಾನಾರ್ಜನೋಪಾರ್ಜನೇಷು। ಋಜೀಕಶ್ಚ। ಉ. ೪-೨೨। ಇತೀಕನ್ಪ್ರತ್ಯಯಃ। ಕಿತ್ತ್ವಸ್ಯಾನುವರ್ತನಾದ್ಗುಣಾಭಾವಃ। ಭಾಸಃ ಪ್ರಕಾಶಸ್ಯ ಋಜೀಕಃ ಪ್ರಾರ್ಜಯಿತಾ। ಆದ್ಯುದಾತ್ತ-ಪ್ರಕರಣೇ ದಿವೋದಾಸಾದೀನಾಂ ಛಂದಸ್ಯುಪಸಂಖ್ಯಾನಂ। ಪಾ. ೬-೨-೯೧-೧। ಇತಿ ಪೂರ್ವಪದಾದ್ಯು-ದಾತ್ತತ್ವಂ। ಯದ್ವಾ। ಭಾಸೋಽರ್ಜನಂ ಯಸ್ಮಿನ್। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ। ವ್ಯುಷ್ಟಿಷು। ಉಛೀ ವಿವಾಸೇ। ವಿವಾಸೋ ವರ್ಜನಂ। ವಿಶೇಷೇಣೋಚ್ಛ್ಯಂತೇ ತಮಸಾ ವರ್ಜ್ಯಂತ ಇತಿ ವ್ಯುಷ್ಟಯ ಉಷಃಕಾಲಾಃ। ಕರ್ಮಣಿ ಕ್ತಿನ್। ತಿತುತ್ರೇತ್ಯಾದಿನೇಟ್ಪ್ರತಿಷೇಧಃ। ವ್ರಶ್ಚಾದಿನಾ ಷತ್ವೇ ಷ್ಟುತ್ವಂ। ತಾದೌ ಚೇತಿ ಪೂರ್ವಪದಪ್ರಕೃತಿಸ್ವರತ್ವಂ। ಯಣಾದೇಶ ಉದಾತ್ತಸ್ವರಿತಯೋರ್ಯಣ ಇತಿ ಪರಸ್ಯಾನುದಾತ್ತಸ್ಯ ಸ್ವರಿತತ್ವಂ। ಅಧ್ವರಶ್ರಿಯಂ। ಅಧ್ವರಂ ಶ್ರಯತ ಇತ್ಯಧ್ವರಶ್ರೀಃ। ಕ್ವಿಬ್ವಚೀತ್ಯಾ-ದಿನಾ। ಉ. ೨-೫೭ ಕ್ವಿಪ್ಪ್ರತ್ಯಯಃ। ತತ್ಸನ್ನಿಯೋಗೇನ ಸಂಪ್ರಸಾರಣಾಭಾವೋ ದೀರ್ಘಶ್ಚ। ದ್ವಿತೀಯೈಕ-ವಚನೇಽಚಿ ಶ್ನುಧಾತ್ವಿತ್ಯಾದಿನೇಯಙಾದೇಶಃ॥

ಪ್ರತಿಪದಾರ್ಥ

**ಅದ್ಯ**—ಇಂದು। **ದೂತಂ**—ದೂತನಾಗಿಯೂ। **ವಸು** - ವಾಸಸ್ಥಾನದಾತನಾಗಿಯೂ। **ಪುರುಪ್ರಿಯಂ**—ಬಹುಜನಗಳಿಗೆ ಬೇಕಾದವನಾಗಿಯೂ। **ಧೂಮಕೇತುಂ**। ಧೂಮರೂಪದ ಧ್ವಜವುಳ್ಳವನಾಗಿಯೂ। **ಭಾಋಜೀಕಂ**—ಜ್ವಾಲೆಯಿಂದ ಅಲಂಕೃತನಾಗಿಯೂ। **ವ್ಯುಷ್ಟಿಷು**—ಉಷಃಕಾಲಗಳಲ್ಲಿ। **ಯಜ್ಞಾನಾಂ**—ಯಜ್ಞಕರ್ತರ। **ಅಧ್ವರಶ್ರಿಯಂ**— ಯಜ್ಞಾಶ್ರಯಭೂತನಾಗಿಯೂ ಇರುವ। **ಅಗ್ನಿಂ**— ಅಗ್ನಿಯನ್ನು। **ವೃಣೀಮಹೇ**—ವರಿಸಿ ಪ್ರಾರ್ಥಿಸುತ್ತೇವೆ.

ಭಾವಾರ್ಥ

ಅಗ್ನಿದೇವನು ದೇವಮನುಷ್ಯಾದಿ ಸಕಲರಿಗೂ ಬೇಕಾದವನು. ಹವಿಸ್ಸನ್ನು ಹಂಚತಕ್ಕ ದೇವದೂತನು. ಎಲ್ಲರಿಗೂ ವಾಸಸ್ಥಾನದಾತನು. ಧೂಮರೂಪದ ಧ್ವಜವುಳ್ಳವನು. ಜ್ವಾಲೆಯಿಂದಲಂಕೃತನು. ಉಷಃಕಾಲಗಳಲ್ಲಿ ಯಜ್ಞಕರ್ತರ ಯಜ್ಞಾಶ್ರಯಭೂತನು ಇಂತಹ ಅದ್ಭುತಾಕಾರಗಳಿಂದಲೂ, ಬಹುಜನರಿಗೆ ಉಪಕಾರಮಾಡುವವನಾಗಿಯೂ ಇರುವುದರಿಂದ ಬಹುಜನಪ್ರಿಯನಾದ ಅಗ್ನಿಯನ್ನು ವರಿಸಿ ಪ್ರಾರ್ಥಿಸುತ್ತೇವೆ.

English Translation

We choose to-day Agni, as messenger ; Agni, the good, the beloved of many, the smoke-bannered, who shines with his brightness and who is the protector of the sacrificer at the break of day.

ವಿಶೇಷವಿಷಯ

**ವಸುಂ—ನಿವಾಸಹೇತುಂ ।** ವಾಸಸ್ಥಾನಗಳಿಗೆ ಕಾರಣಭೂತನಾದವನು ಎಂದರೆ ಗೃಹಾದಿಗಳನ್ನು ಸಂರಕ್ಷಿಸುವವನು. Protector of the dwellings.

**ಪುರುಪ್ರಿಯಂ—ಪುರೂಣಾಂ ಪ್ರಿಯಂ ।** ಬಹುಜನರಿಗೆ ಪ್ರೀತಿಪಾತ್ರನಾದವನು.

**ಧೂಮಕೇತುಂ—** ಧೂಮವೇ ಧ್ವಜವಾಗಿವುಳ್ಳವನು. ಅಗ್ನಿಯ ಧ್ವಜವು ಧೂಮವೆಂದು ಪ್ರಸಿದ್ಧಿಯು.

**ಭಾಋಜೀಕಂ—ಪ್ರಸಿದ್ಧಭಾಸಾಲಂಕೃತಂ । ಭಾಋಜೀಕಃ ಪ್ರಸಿದ್ಧಭಾಃ** (ನಿ. ೬-೪) ಕಾಂತಿಯಿಂದ ಅಲಂಕೃತನಾದವನು, ಎಂದರೆ ಪ್ರಕಾಶಮಾನವಾಗಿ ಬೆಳಗುತ್ತಿರುವವನು.

**ವ್ಯುಷ್ಟಿಷು – ವ್ಯುಷ್ಟಯಃ ಉಷಃ ಕಾಲಾಃ ತೇಷು ।** ಪ್ರಾತಃಕಾಲಗಳಲ್ಲಿ.

**ಅಧ್ವರಶ್ರಿಯಂ—ಅಧ್ವರಂ ಶ್ರಯತ ಇತ್ಯಧ್ವರಶ್ರೀಃ ।** ಯಜ್ಞಗಳಲ್ಲಿ ಸೇವಿಸಲ್ಪಡುವವನು ಅಥವಾ ಯಜ್ಞಕ್ಕೆ ಮುಖ್ಯಸಂಪತ್ತಿನಂತೆ ಇರುವವನು ಎಂದರೆ ಯಜ್ಞಗಳಲ್ಲಿ ಪ್ರಧಾನನಾದವನು

॥ ವ್ಯಾಕರಣಪ್ರಕ್ರಿಯಾ ॥

**ಅಧ್ಯ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಮಂತ್ರದಲ್ಲಿರುವ ನಿಪಾತಕ್ಕೆ ದೀರ್ಘ ಬರುತ್ತೆ ಎಂದು ದೀರ್ಘ.

**ಪುರುಪ್ರಿಯಂ—** ಪುರೂಣಾಂ=ಬಹುಜನರಿಗೆ, ಪ್ರಿಯಃ-ಪ್ರೀತಿಪಾತ್ರನಾದವನು. **ಸಮಾಸಸ್ಯ** (ಪಾ. ಸೂ. ೬-೧-೨೨೩) ಸಮಾಸದ ಕೊನೆಯ ವರ್ಣವು ಉದಾತ್ತವಾಗುತ್ತೆ ಎಂದು ಅಂತೋದಾತ್ತ ಬರುತ್ತೆ.

**ಧೂಮಕೇತುಮ್**—ಧೂಞ್ ಕಂಪನೇ ಧಾತು. **ಇಷಿಯುಧೀನ್ಧಿ ದಸಿಶ್ಯಾಧೂಸೂಭ್ಯೋ ಮಕ್** (ಉ ಸೂ. ೧-೧೪೮) ಎಂದು ಮಕ್, ಕಿತ್ತಾಗ್ದರಿಂದ ಗುಣ ಬರುವುದಿಲ್ಲ. ಇದು ಪ್ರತ್ಯಯಸ್ವರದಿಂದ ಅಂತೋದಾತ್ತ. ಧೂಮಃ ಕೇತುಃ ಯಸ್ಯ ಸಃ ಎಂದು ಬಹುವ್ರೀಹಿಸಮಾಸ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂದು ಪೂರ್ವಪದಪ್ರಕೃತಿಸ್ವರ.

**ಭಾಋಜೀಕಮ್**—ಋಜ ಗತಿಸ್ಥಾನಾರ್ಜನೋಪಾರ್ಜನೇಷು, **ಋಜೇಶ್ಚ** (ಉ. ಸೂ. ೪-೪೬೭) 'ಇಷೇಃ ಕಿಚ್ಛ' ಎಂಬ ಹಿಂದಿನ ಸೂತ್ರದಿಂದ ಕಿತ್ ಎಂದು ಅನುವೃತ್ತಿ. ಋಜಧಾತುವಿನ ಮುಂದೆ ಈಕನ್ ಬರುತ್ತೆ. ಅದು ಕಿತ್ ಆಗುತ್ತೆ ಎಂದು ಸೂತ್ರಾರ್ಥ. ಇದರಿಂದ ಈಕನ್ ಎಂದರೆ ಅದು ಕಿತ್ ಆಗ್ದರಿಂದ ಗುಣವು ಇಲ್ಲ. ಭಾಸಃ=ಪ್ರಕಾಶಸ್ಯ, ಋಜೀಕಃ=ಪ್ರಾರ್ಜಯಿತಾ, ಪ್ರಕಾಶದ ಸಂಪಾದನೆವುಳ್ಳವನು ಎಂದು ಅರ್ಥ. **ಆದ್ಯುದಾತ್ತಪ್ರಕರಣೇ ದಿವೋದಾಸಾದೀನಾಂ ಛಂದಸ್ಯುಪಸಂಖ್ಯಾನಂ** ಎಂದು ಆದ್ಯುದಾತ್ತವು ಪೂರ್ವಪದಕ್ಕೆ ಬರುತ್ತದೆ. ಅಥವಾ ಭಾಸಃ ಋಜೀಕಃ=ಅರ್ಜನಂ ಯಸ್ಮಿನ್ ಸಃ ಎಂದು ಬಹುವ್ರೀಹಿ. ಪೂರ್ವಪದಪ್ರಕೃತಿ ಸ್ವರ ಬರುತ್ತೆ.

**ವ್ಯುಷ್ಟಿಷು**—ಉಛೀ ವಿವಾಸೇ, ವಿವಾಸ ಎಂದರೆ ಬಿಡುವಿಕೆ, ವಿಶೇಷೇಣ ಉಚ್ಛ್ಯಂತೇ ತಮಸಾ ವರ್ಜ್ಯಂತೇ ಇತಿ ವ್ಯುಷ್ಟಯಃ, ಕತ್ತಲೆಯಿಂದ ವಿಶೇಷವಾಗಿ ಬಿಡಲ್ಪಡುವ ಪ್ರಾತಃಕಾಲವು ಈ ಪದದಿಂದ ಬೋಧಿತವಾಗುತ್ತೆ ಕರ್ಮಾರ್ಥದಲ್ಲಿ ಕ್ತಿನ್ ಪ್ರತ್ಯಯ. ಉಛ್+ಕ್ತಿನ್. **ತಿತುತ್ರ**—ಎಂದು ನಿಷೇಧ ಇರುವುದರಿಂದ ಇಟ್ ಆಗಮ ಬರುವುದಿಲ್ಲ. **ವ್ರಶ್ಚಭ್ರಸ್ಜ**—, ಎಂಬುದರಿಂದ ಛಕಾರಕ್ಕೆ ಷಕಾರ. ಉಷ್+ತಿ, **ಷ್ಟುನಾ ಷ್ಟುಃ** ಎಂದು ಷ್ಟುತ್ವ. ಲಘೂಪಧಗುಣಕ್ಕೆ ನಿಷೇಧ. ವಿಶಬ್ದವೊಂದಿಗೆ ಸಮಾಸ. **ತಾದೌ ಚ ಕೃತಿ ನಿತ್ಯತೌ** (ಪಾ. ಸೂ. ೬-೨-೫೦) ತುಶಬ್ದ ಭಿನ್ನವಾದ ತಕಾರಾದಿಯೂ ನಿತ್ತೂ ಆದ ಕೃತ್ ಪರದಲ್ಲಿದ್ದರೆ ಗತಿಯು ಪ್ರಕೃತಿಸ್ವರವನ್ನು ಹೊಂದುತ್ತೆ ಎಂದು ಪ್ರಕೃತಿಸ್ವರದಿಂದ ವಿ ಉದಾತ್ತ **ಇಕೋ ಯಣಚಿ** ಎಂದು ಇಕಾರಕ್ಕೆ ಯಕಾರ. **ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** ಎಂದು ಉ ಸ್ವರಿತವಾಗುತ್ತೆ.

**ಅಧ್ವರಶ್ರಿಯಂ**—ಅಧ್ವರಂ ಶ್ರಯತೇ ಇತ್ಯಧ್ವರಶ್ರೀಃ । **ಕ್ವಿಬ್ವಚಿ ಪ್ರಚ್ಛಿಶ್ರಿ ಸ್ರುದ್ರುಪ್ರುಜ್ವಾಂ ದೀರ್ಘೋಽಸಂಪ್ರಸಾರಣಂ ಚ** (ಉ. ಸೂ. ೨-೫೭) ವಚ ಪರಿಭಾಷಣೇ, ಪ್ರಚ್ಛ ಜ್ಞೀಪ್ಸಾಯಾಂ, ಶ್ರಿಞ್ ಸೇವಾಯಾಂ, ಸ್ರು ಗತೌ, ದ್ರು ಗತೌ, ಪ್ರುಙ್ ಗತೌ, ಜು ಗತೌ ಸೌತ್ರಧಾತು, ಇವುಗಳ ಮುಂದೆ ಕ್ವಿಪ್ ಬರುತ್ತೆ. ಇವುಗಳಿಗೆ ದೀರ್ಘವೂ ಬರುತ್ತೆ. ಅಲ್ಲದೆ ಕಿತ್ವವನ್ನು ನಿಮಿತ್ತಮಾಡಿಕೊಂಡು ಬರುವ ಸಂಪ್ರಸಾರಣವು ಬರುವುದಿಲ್ಲ ಎಂಬುದರಿಂದ ಅಧ್ವರಶಬ್ದೋಪಪದವಾದ ಶ್ರಿಧಾತು ಮುಂದೆ ಕ್ವಿಪ್ ದೀರ್ಘಗಳು ಬರುವುವು. ದ್ವಿತೀಯಾ ಏಕವಚನ ಅಮ್. ಅಧ್ವರಶ್ರೀ+ಅಮ್, ಇಲ್ಲಿ ಇವರ್ಣವು ಧಾತ್ವವಯವಸಂಯೋಗಪೂರ್ವಕವಾಗುತ್ತೆ. ಆದ್ದರಿಂದ **ಏರನೇಕಾಚಃ—,** ಎಂದು ಯಣ್ ಬರುವುದಿಲ್ಲ. **ಅಚಿಶ್ನುಧಾ ತುಭ್ರುವಾಂ ಯ್ವೋರಿಯಙುವಙೌ** (ಪಾ ಸೂ. ೬-೪-೭೭) ಅಜಾದಿಪ್ರತ್ಯಯ ಪರದಲ್ಲಿದ್ದರೆ ಶ್ನುಪ್ರತ್ಯಯಾಂತ, ಇ ಉ ವರ್ಣಗಳನ್ನು ಕೊನೆಯಲ್ಲಿ ಹೊಂದಿರುವ ಧಾತುವನ್ನು ಕೊನೆಯಲ್ಲಿ ಹೊಂದಿರುವ ಅಥವಾ ಭ್ರೂಶಬ್ದಾಂತವಾದ ಅಂಗಕ್ಕೆ ಇಯಙ್ ಉವಙ್ ಆದೇಶಗಳು ಬರುವುವು ಎಂದು ಅರ್ಥ. ಇಗೆ ಇಯಙ್ ಉಗೆ ಉವಙ್ ಎಂದರಿಯುವುದು. ಇಲ್ಲಿ ಇಯಙ್ ಬಂದರೆ ಅಧ್ವರಶ್ರಿಯ್+ಅಮ್=ಅಧ್ವರಶ್ರಿಯಂ ಎಂದು ಆಗುತ್ತೆ. ॥೩॥



ಸಂಹಿತಾಪಾಠಃ

ಶ್ರೇಷ್ಠಂ ಯವಿಷ್ಠಮತಿಥಿಂ ಸ್ವಾಹುತಂ ಜುಷ್ಟಂ ಜನಾಯ ದಾಶುಷೇ ।
ದೇವಾಁ ಅಚ್ಛಾ ಯಾತವೇ ಜಾತವೇದಸಮಗ್ನಿಮೀಳೇ ವ್ಯುಷ್ಟಿಷು ॥

॥ ಪದಪಾಠಃ ॥

ಶ್ರೇಷ್ಠಂ । ಯವಿಷ್ಠಂ । ಅತಿಥಿಂ । ಸುऽಆಹುತಂ । ಜುಷ್ಟಂ । ಜನಾಯ । ದಾಶುಷೇ ।

ದೇವಾನ್ । ಅಚ್ಛ । ಯಾತವೇ । ಜಾತऽವೇದಸಂ । ಅಗ್ನಿಂ । ಈಳೇ । ವಿऽಉಷ್ಟಿಷು ॥ ೪ ॥

ಸಾಯಣಭಾಷ್ಯಂ

ವ್ಯುಷ್ಟಿಷೂಷಃಕಾಲೇಷು ದೇವಾನ್ ಇತರಾನ್ಸರ್ವದೇವಾನಚ್ಛಾಭಿಮುಖ್ಯೇನ ಯಾತವೇ ಗಂತುಮಗ್ನಿಂ ದೇವಮೀಳೇ । ಸ್ತೌಮಿ । ಕೀದೃಶಂ । ಶ್ರೇಷ್ಠಮತಿಶಯೇನ ಪ್ರಶಸ್ತಂ ಯವಿಷ್ಠಂ ಯುವತಮಂ ಅತಿಥಿಂ ಸತತಗಮನಶೀಲಂ ಸ್ವಾಹುತಂ ಸುಷ್ಠು ಆ ಸಮಂತಾದ್ಧೋಮಾಧಿಕರಣಂ ದಾಶುಷೇ ಹವಿರ್ದತ್ತವತೇ ಜನಾಯ ಯಜಮಾನಾಯ ಜುಷ್ಟಂ ಪ್ರೀತಂ ಜಾತವೇದಸಂ ಜಾತಾನಾಂ ವೇದಿತಾರಂ ॥ ಯವಿಷ್ಠಂ । ಯುವಶಬ್ದಾದಿಷ್ಠನಿ ಸ್ಥೂಲದೂರೇತ್ಯಾದಿನಾ ಯಣಾದೇಃ ಪರಸ್ಯ ಲೋಪಃ । ಪೂರ್ವಸ್ಯ ಚ ಗುಣಃ । ಅವಾದೇಶಃ । ನಿತ್ತ್ವಾದಾದ್ಯುದಾತ್ತತ್ವಂ । ಅತಿಥಿಂ । ಅತ ಸಾತತ್ಯಗಮನೇ । ಋತನ್ಯಂಜೀತ್ಯಾದಿನಾ । ಉ. ೪-೨ । ಇಥಿನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಸ್ವಾಹುತಂ । ಹು ದಾನಾದನಯೋಃ । ಆಹೂಯತೇಽಸ್ಮಿನ್ನಿತ್ಯಾಹುತಃ । ಸುಃ ಪೂಜಾಯಾಂ । ಪಾ. ೧-೪-೯೪ । ಇತಿ ಸುಶಬ್ದಸ್ಯ ಕರ್ಮಪ್ರವಚನೀಯಸಂಜ್ಞಾಯಾಂ ಸ್ವತೀ ಪೂಜಾಯಾಂ । ಪಾ. ೨-೨-೧೮ । ಇತಿ ಸಮಾಸಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ನ ಚ ಗತಿಕಾರಕೋಪಪದಾತ್ಕೃದಿತಿ ಗತೇಃ ಪ್ರಕೃತಿಸ್ವರತ್ವಂ । ಅಸ್ಯ ಸುಶಬ್ದಸ್ಯ ಗತಿಸಂಜ್ಞಾಯಾ ಬಾಧಿತತ್ವಾತ್ ॥

ಪ್ರತಿಪದಾರ್ಥ

**ವ್ಯುಷ್ಟಿಷು**— ಉಷಃಕಾಲಗಳಲ್ಲಿ । **ದೇವಾನ್**—(ಇತರ) ದೇವತೆಗಳನ್ನುದ್ದೇಶಿಸಿ । **ಅಚ್ಛ**—(ಅವರ) ಅಭಿಮುಖವಾಗಿ । **ಯಾತವೇ**— (ಅವರನ್ನು ಇಲ್ಲಿಗೆ ಕರೆತರಲು) ಹೋಗುವುದಕ್ಕಾಗಿ । **ಶ್ರೇಷ್ಠಂ**— ಅತ್ಯಂತ ಪೂಜ್ಯನಾಗಿಯೂ । **ಯವಿಷ್ಠಂ**— (ದೇವತೆಗಳಲ್ಲಿ) ಅತ್ಯಂತ ಯುವಕನಾಗಿಯೂ । **ಅತಿಥಿಂ**— ಯಾವಾಗಲೂ ಸಂಚರಿಸುವ ಶಕ್ತಿಯುಳ್ಳವನಾಗಿಯೂ । **ಸ್ವಾಹುತಂ**— ಸುತ್ತಲೂ ಅರ್ಪಿಸಲ್ಪಡುವ ಆಹುತಿಯುಳ್ಳವನಾಗಿಯೂ । **ದಾಶುಷೇ**— ಹವಿರ್ದಾತನಾದ । **ಜನಾಯ**— ಯಜಮಾನನಿಗೆ । **ಜುಷ್ಟಂ**— ಪ್ರೀತಿಪಾತ್ರನಾಗಿಯೂ । **ಜಾತವೇದಸಂ**— ಉತ್ಪನ್ನವಾದ ಸಕಲವಸ್ತುಗಳ ಜ್ಞಾನವುಳ್ಳವನಾಗಿಯೂ ಇರುವ । **ಅಗ್ನಿಂ**— ಅಗ್ನಿದೇವನನ್ನು । **ಈಳೇ**— ಸ್ತೋತ್ರಮಾಡುತ್ತೇನೆ. ।

ಭಾವಾರ್ಥ

ಅಗ್ನಿದೇವನು ಅತ್ಯಂತ ಶ್ರೇಷ್ಠಗುಣಗಳಿಂದ ಕೂಡಿದವನು. ಸಕಲರಿಗೂ ಪೂಜ್ಯನು. ಅತ್ಯಂತ ಯುವಕನು. ಯಾವಾಗಲೂ ಸಂಚರಿಸುವ ಶಕ್ತಿಯುಳ್ಳವನು. ಸುತ್ತಲೂ ಆಹುತಿಯನ್ನು ಅರ್ಪಿಸಲ್ಪಡುವವನು. ಹವಿರ್ದಾತನು. ಯಜಮಾನನ ಪ್ರೀತಿಪಾತ್ರನು. ಸಕಲರಿಗೂ ಉಪಕಾರಿಯಾಗಿಯೂ, ಸಕಲವಸ್ತುಗಳ ಜ್ಞಾನವುಳ್ಳವನಾಗಿಯೂ ಇರುವ ಇಂತಹ ಅಗ್ನಿದೇವನನ್ನು ಉಷಃಕಾಲಗಳಲ್ಲಿ ಇತರ ದೇವತೆಗಳನ್ನು ಯಜ್ಞಭೂಮಿಗೆ ಕರೆತರಲು ಹೋಗುವುದಕ್ಕಾಗಿ ಪ್ರಾರ್ಥಿಸಿ ಸ್ತೋತ್ರಮಾಡುತ್ತೇನೆ.

English Translation

I praise Agni at the break of day, the best among gods, the youthful, the guest of the sacrifice, universally invoked, who is friendly to the man who offers oblation, who knows all that are born, that he may go to bring the gods to the sacrifice.

॥ ವಿಶೇಷವಿಷಯಗಳು ॥

**ಯವಿಷ್ಠಂ— ಅತಿಶಯೇನ ಯುವಾ ಯವಿಷ್ಠಃ ತಂ ।** ತರುಣನು, ಯುವಕನು.

**ಅತಿಥಿಂ— ಅತ ಸಾತತ್ಯಗಮನೇ ।** ಯಾವಾಗಲೂ ದೇವತೆಗಳ ಅಥವಾ ಯಜ್ಞದಲ್ಲಿ ಯಜಮಾನನ ಬಳಿಗೆ ಹೋಗುವವನು. ಅಥವಾ ಅತಿಥಿಯಂತೆ ಕರೆಯಲ್ಪಡುವವನು. Guest

**ಸ್ವಾಹುತಂ — ಹುದಾನಾದನಯೋಃ । ಆಹೂಯತೇಽಸ್ಮಿನ್ನಿತ್ಯಾಹುತಃ ಸುಷ್ಠು ಆಹುತಃ ಸ್ವಾಹುತಃ ತಂ ।** ಯಜ್ಞಾದಿಗಳಲ್ಲಿ ಆಹ್ವಾನಿಸಲ್ಪಡುವವನು, ಕರೆಯಲ್ಪಡುವವನು.

**ಜುಷ್ಟಂ ಜನಾಯ ದಾಶುಷೇ—** ಹವಿಸ್ಸನ್ನರ್ಪಿಸುವ ಯಜಮಾನನ ವಿಷಯದಲ್ಲಿ ಪ್ರೀತನಾದವನು.

**ಅಚ್ಛ—**ಮುಖ್ಯವಾಗಿ, ವಿಶೇಷವಾಗಿ, ಅತಿಶಯವಾಗಿ. ಸಂಹಿತಾಪಾಠದಲ್ಲಿ ಅಂತ್ಯಾಕ್ಷರವು ಛಂದಸ್ಸಿನ ಅನುಕೂಲಕ್ಕಾಗಿ ದೀರ್ಘವಾಗಿರುವುದು.

**ಯಾತವೇ—ಗಂತುಂ ।** ಹೋಗುವುದಕ್ಕಾಗಿ, ದೇವತೆಗಳನ್ನು ಕರೆತರಲು ಹೋಗುವುದಕ್ಕಾಗಿ.

**ಜಾತವೇದಸಂ—** ಈ ಶಬ್ದದ ವಿವರಣೆಯನ್ನು ಈ ಸೂಕ್ತಗ ಮೊದಲನೆಯ ಋಕ್ಕಿನಲ್ಲಿ ಕೊಟ್ಟಿರುವೆವು.

ವ್ಯಾಕರಣಪ್ರಕ್ರಿಯಾ

**ಯವಿಷ್ಠಮ್—**ಯು ಮಿಶ್ರಣಾಮಿಶ್ರಣಯೋಃ ಧಾತು. **ಕನಿನ್ಯುವೃಷಿ ತಕ್ಷಿ—,** ಎಂಬುದರಿಂದ ಕನಿನ್, ಉವಙಾದೇಶ, ಯುವನ್ ಎಂದು ಆಯಿತು. ಅತಿಶಯೇನ ಯುವಾ ಎಂದು ವಿಗ್ರಹ. **ಅತಿಶಾಯನೇ ತಮಬಿ**

**ಷ್ಠನೌ** (ಪಾ. ಸೂ. ೫-೩ ೫೫) ಎಂದು ಇಷ್ಠನ್ ಪ್ರತ್ಯಯ, ಯುವನ್+ಇಷ್ಠ. **ಸ್ಥೂಲದೂರ ಯುವಹ್ರಸ್ವ ಕ್ಷಿಪ್ರ ಕ್ಷುದ್ರಾಣಾಂ ಯಣಾದಿಪರಂ ಪೂರ್ವಸ್ಯಚ ಗುಣಃ** (ಪಾ. ಸೂ. ೬-೪-೫೬) ಯಣ್ ಆದಿಃ ಯಸ್ಯ ತತ್, ಯಣಾದಿ, ಪರಂ ಎಂಬುದು ಇದಕ್ಕೆ ವಿಶೇಷಣ. ಇಷ್ಠನ್, ಇಮನಿಚ್-ಈಯಸುನ್ ಇವು ಪರದಲ್ಲಿದ್ದರೆ ಸ್ಥೂಲ ಮೊದಲಾದ ಶಬ್ದಗಳ ಪರಭೂತವಾದ ಯಣಾದ್ಯವಯವಕ ಶಬ್ದವು ಲೋಪವನ್ನು ಹೊಂದುತ್ತೆ. ಮತ್ತು ಪೂರ್ವಕ್ಕೆ ಗುಣವೂ ಬರುತ್ತೆ ಎಂದು ಯುವನ್ ಎಂಬಲ್ಲಿ ವ ಎಂಬ ಎರಡನೆ ಯಣಾದ್ಯವಯವಕಶಬ್ದಕ್ಕೆ ಲೋಪ. ಯುಗೆ ಗುಣ ಇವು ಬಂದರೆ ಯೋ+ಇಷ್ಠ, ಅವಾದೇಶ, ಪ್ರತ್ಯಯ ನಿತ್, **ಞ್ನಿತ್ಯಾದಿರ್ನಿತ್ಯಂ** ಎಂದು ಪ್ರತ್ಯಯಾಂತ ಆದ್ಯುದಾತ್ತ. ದ್ವಿತೀಯಾ ಏಕವಚನ ಅಮ್‌ಪ್ರತ್ಯಯ. **ಅಮಿಪೂರ್ವಃ** ಎಂದು ಪೂರ್ವರೂಪ.

**ಅತಿಥಿಮ್**—**ಋ ತನ್ಯಞ್ಜಿ ವನ್ಯ ಞ್ಜ್ಯರ್ಪಿ ಮದ್ಯತ್ಯಂಗಿ ಕು ಯು ಕೃಶಿಭ್ಯಃ ಕತ್ನಿಜ್ಯತು-ಜಲಿಚ್ ಇಷ್ಣುಜಿಷ್ಣುಜಿಸನ್ ಸ್ಯನಿಥಿನುಲ್ಯನೌಸ ಆನುಕ್** (ಉ. ಸೂ.೪-೪೮೨) ಋ ಗತೌ ತನು ವಿಸ್ತಾರೇ ಅಞ್ಜೂ ವ್ಯಕ್ತ್ಯಾದೌ-ವನು ಯಾಚನೇ-ಅಞ್ಜೂ ವ್ಯಕ್ತ್ಯಾದೌ- ಋ ಗತೌ ಣಿಜಂತ-ಮದೀ ಹರ್ಷೇ - ಅತ ಸಾತತ್ಯಗಮನೇ ಅಗಿಗತೌ-ಕುಶಬ್ದೇ-ಯುಮಿಶ್ರಣೇ-ಕೃಶತನೂಕರಣೇ-ಈ ೧೨ ಧಾತುಗಳ ಮುಂದೆ ಕ್ರಮವಾಗಿ ಕತ್ನಿಚ್-ಯತುಚ್-ಅಲಿಚ್-ಇಷ್ಣುಚ್-ಇಷ್ಣಚ್-ಇಸನ್-ಸ್ಯನ್-ಇಥಿನ್-ಉಲಿ-ಅಸ-ಆಸ-ಆನುಕ್ ಎಂಬ ೧೨ ಪ್ರತ್ಯಯಗಳು ಬರುವುವು ಎಂದು ಅರ್ಥ. ಪ್ರಕೃತದಲ್ಲಿ ಈ ಸೂತ್ರದಿಂದ ಅತ ಧಾತುವಿುಂದೆ ಇಥಿನ್‌ಪ್ರತ್ಯಯ ಬರುತ್ತೆ. ಅತ್+ಇಥಿ ಅತಿಥಿ ಎಂದು ಆಗುತ್ತೆ. ನಿತ್ಸ್ವರದಿಂದ ಆದ್ಯುದಾತ್ತ. ಅಮ್ ಬಂದರೆ ಪೂರ್ವರೂಪ. ಅತಿಥಿಮ್ ಎಂದಾಗುತ್ತೆ.

**ಸ್ವಾಹುತೆಮ್**—ಹು ದಾನಾದನಯೋಃ, ಆಪೂಯತೇ ಅಸ್ಮಿನ್ನಿತಿ ಆಪುತಃ. ಕ್ತಪ್ರತ್ಯಯ. ಗುಣಕ್ಕೆ ನಿಷೇಧ. ಪೂಜಾರ್ಥಕವಾದ ಸು ಎಂಬ ನಿಪಾತದೊಂದಿಗೆ ಸಮಾಸ. **ಸುಃ ಪೂಜಾಯಾಂ** (ಪಾ. ಸೂ. ೧-೪-೯೪) ಪೂಜಾರ್ಥದಲ್ಲಿ ಸು ಎಂಬುದು ಕರ್ಮಪ್ರವಚನೀಯಸಂಜ್ಞೆಯನ್ನು ಹೊಂದುತ್ತೆ ಎಂದು ಕರ್ಮಪ್ರವಚನೀಯಸಂಜ್ಞೆ ಬರುತ್ತೆ. **ಕುಗತಿಪ್ರಾದಯಃ** (ಪಾ.ಸೂ. ೨-೨-೧೮) ಎಂಬ ಸೂತ್ರದಲ್ಲಿ **ಸ್ವತೀ ಪೂಜಾಯಾಂ** ಎಂದು ವಾರ್ತಿಕವಿದೆ. ಪೂಜಾರ್ಥದಲ್ಲಿರುವ ಸು-ಅತಿ ಶಬ್ದಗಳು ಸಮಾಸವನ್ನು ಹೊಂದುವುವು ಎಂದು ಸಮಾಸ ಬರುತ್ತೆ. **ತತ್ಪುರುಷೇ-ತುಲ್ಯಾರ್ಥ—,** ಎಂದು ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತೆ. ಈ ಕರ್ಮಪ್ರವಚನೀಯಸಂಜ್ಞೆಯಿಂದ ಗತಿ ಸಂಜ್ಞೆಯು ಬಾಧಿತವಾಗುತ್ತೆ. ಆದ್ದರಿಂದ **ಗತಿಕಾರಕೋ—,** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುವುದು. ||೪||



ಸಂಹಿತಾಪಾಠಃ

ಸ್ತ॒ವಿ॒ಷ್ಯಾಮಿ॒ ತ್ವಾಮ॒ಹಂ ವಿಶ್ವ॑ಸ್ಯಾಮೃತ ಭೋಜನ ।
ಅಗ್ನೇ॑ ತ್ರಾ॒ತಾರ॑ಮ॒ಮೃತಂ॑ ಮಿಯೇಧ್ಯ॒ ಯಜಿ॑ಷ್ಠಂ ಹವ್ಯವಾಹನ ॥

॥ ಪದಪಾಠಃ ॥

ಸ್ತ॒ವಿ॒ಷ್ಯಾಮಿ॑ । ತ್ವಾಂ । ಅ॒ಹಂ । ವಿಶ್ವ॑ಸ್ಯ । ಅ॒ಮೃ॒ತ॒ । ಭೋ॒ಜ॒ನ॒ ।
ಅಗ್ನೇ॑ । ತ್ರಾ॒ತಾರಂ॑ । ಅ॒ಮೃತಂ॑ । ಮಿ॒ಯೇ॒ಧ್ಯ॒ । ಯಜಿ॑ಷ್ಠಂ । ಹ॒ವ್ಯ॒ಽವಾ॒ಹ॒ನ॒ ॥ ೫ ॥

ಸಾಯಣಭಾಷ್ಯಂ

ಹೇ ಅಮೃತ ಮರಣರಹಿತ ವಿಶ್ವಸ್ಯ ಭೋಜನ ಕೃತ್ಸ್ನಸ್ಯ ಜಗತಃ ಪಾಲಕ ಹವ್ಯವಾಹನ ಹವಿಷೋ ವೋಢಃ ಮಿಯೇಧ್ಯ ಯಜ್ಞಾರ್ಹ ಏವಂವಿಧ ಹೇ ಅಗ್ನೇ ವಿಶ್ವಸ್ಯ ತ್ರಾತಾರಂ ಸರ್ವಸ್ಯ ಜಗತೋ ರಕ್ಷಕಮಮೃತಂ ಮರಣರಹಿತಂ ಯಜಿಷ್ಠಮತಿಶಯೇನ ಯಷ್ಟಾರಂ ತ್ವಾಮಹಮನುಷ್ಠಾತಾ ಸ್ತವಿಷ್ಯಾಮಿ । ಸ್ತುತಿಂಕರಿಷ್ಯಾಮಿ ॥ ಸ್ತವಿಷ್ಯಾಮಿ । ಷ್ಟುಞ್ ಸ್ತುತೌ । ವ್ಯತ್ಯಯೇನೇಡಾಗಮಃ । ಆಗಮಾನುದಾತ್ತತ್ವೇ ಪ್ರತ್ಯಯಸ್ವರಃ । ಭೋಜನ । ಕರ್ಮಫಲಂ ಭೋಜಯತೀತಿ ಭೋಜನಃ । ನಂದ್ಯಾದಿಲಕ್ಷಣೋ ಲ್ಯುಃ । ತ್ರಾತಾರಂ । ತ್ರೈಙ್ ಪಾಲನೇ । ಆದೇಚ ಇತ್ಯಾತ್ವಂ । ತೃಚ್ಯೇಕಾಚ ಉಪದೇಶ ಇತೀಟ್ಪ್ರತಿಷೇಧಃ । ಅಮೃತಂ । ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ । ಮಿಯೇಧ್ಯ । ಇಯಾಗಮಶ್ಛಾಂದಸಃ । ಯಜಿಷ್ಠಂ । ಯಷ್ಟೃಶಬ್ದಾತ್ತುಶ್ಛಂದಸೀತೀಷ್ಠನ್ಪ್ರತ್ಯಯಃ । ತುರಿಷ್ಠೇಮೇಯಃಸ್ವಿತಿ ತೃಲೋಪಃ ॥ ೨೮ ॥

ಪ್ರತಿಪದಾರ್ಥ

**ಅಮೃತ**—ಮರಣರಹಿತನಾಗಿಯೂ । **ವಿಶ್ವಸ್ಯ**—ಸಕಲಜಗತ್ತಿಗೂ । **ಭೋಜನ**—ಸ್ವಕರ್ಮಫಲವನ್ನು ನುಭವಿಸುವಂತೆ ಮಾಡುವವನಾಗಿಯೂ ಅಥವಾ ಸರ್ವಜಗತ್ಪೋಷಕನಾಗಿಯೂ । **ಹವ್ಯವಾಹನ**—ಹವಿಸ್ಸನ್ನು ವಹಿಸತಕ್ಕವನಾಗಿಯೂ । **ಮಿಯೇಧ್ಯ**—ಯಜ್ಞಾರ್ಹನಾಗಿಯೂ ಇರತಕ್ಕ । **ಅಗ್ನೇ**—ಎಲೈ ಅಗ್ನಿಯೇ । **ತ್ರಾತಾರಂ**—(ಸಕಲ) ಜಗದ್ರಕ್ಷಕನಾಗಿಯೂ । **ಅಮೃತಂ**—ಮರಣರಹಿತನಾಗಿಯೂ । **ಯಜಿಷ್ಠಂ**—ಅತ್ಯಂತ ಶ್ರೇಷ್ಠನಾದ ಯಜ್ಞಕರ್ತನಾಗಿಯೂ ಇರುವ । **ತ್ವಾಂ**—ನಿನ್ನನ್ನು । **ಸ್ತವಿಷ್ಯಾಮಿ**—ಸ್ತೋತ್ರಮಾಡುವೆನು.

ಭಾವಾರ್ಥ

ಎಲೈ ಅಗ್ನಿದೇವನೇ, ನೀನು ಮರಣರಹಿತನು. ಸಕಲ ಜಗತ್ತಿಗೂ ಸ್ವಸ್ವಕರ್ಮಫಲವನ್ನನುಭವಿಸುವಂತೆ ಮಾಡುವವನು. ಸರ್ವಜಗತ್ಪೋಷಕನು. ಹವಿರ್ವಾಹಕನು. ಯಜ್ಞಾರ್ಹನು. ಜಗದ್ರಕ್ಷಕನು ಮತ್ತು ಅತ್ಯಂತ ಶ್ರೇಷ್ಠನಾದ ಯಜ್ಞಕರ್ತನು. ಇಂತಹ ಶ್ರೇಷ್ಠಗುಣಗಳಿಂದ ಕೂಡಿದ ನಿನ್ನನ್ನು ಸ್ತೋತ್ರಮಾಡುತ್ತೇನೆ.

English Translation

O Agni, immortal, protector of the universe, bearer of oblations, deserver of sacrifices, I will praise you, who are immortal, preserver and the sacrificer.

ವಿಶೇಷವಿಷಯಗಳು

**ಅಮೃತ**—ಮರಣರಹಿತ ; one who is exempt from death. ಈ ಶಬ್ದವು ಈ ಋಕ್ಕಿನಲ್ಲಿ ಎರಡಾವರ್ತಿ ಉಪಯೋಗಿಸಲ್ಪಟ್ಟಿರುವುದು.

**ಭೋಜನ—ಪಾಲಕ** । ಸಂರಕ್ಷಕನು, ಅಥವಾ ಕರ್ಮಫಲಂ ಭೋಜಯತೀತಿ ಭೋಜನಃ । ಜನರಿಗೆ ಯಜ್ಞಯಾಗಾದಿ ಕರ್ಮಫಲವನ್ನು ಅನುಭವಿಸುವಂತೆ ಮಾಡುವವನು ಎಂದರೆ ಕರ್ಮಫಲವಾದ ಇಷ್ಟಾರ್ಥಗಳನ್ನು ಕೊಡುವವನು.

**ತ್ರಾತಾರಂ—ತ್ರೈಙ್ ಪಾಲನೇ ।** ಪಾಲಕನು, ರಕ್ಷಕನು, ಕಾಪಾಡುವವನು.

**ಮಿಯೇಧ್ಯ—ಯಜ್ಞಾರ್ಹ ।** ಯಜ್ಞದಲ್ಲಿ ಆರಾಧಿಸಲ್ಪಡಲು ಅರ್ಹನಾದವನು

**ಯಜಿಷ್ಠಂ—ಯಷ್ಟಾರಂ ।** ಯಜ್ಞಕರ್ಮವನ್ನು ನೆರವೇರಿಸುವವನು

**ಹವ್ಯವಾಹನ**—ದೇವತೆಗಳಿಗೆ ಹವಿಸ್ಸನ್ನು ಒಯ್ಯುವವನು.

ವ್ಯಾಕರಣಪ್ರಕ್ರಿಯಾ

**ಸ್ತವಿಷ್ಯಾಮಿ**—ಷ್ಟುಞ್ ಸ್ತುತೌ ಇದು ಅಜಂತಧಾತು. **ಊದ್ಯೃದನ್ತ್ಯೈಃ** ಎಂಬ ಕಾರಿಕೆಯಲ್ಲಿ ಉದಾತ್ತಗಳನ್ನು ಪರಿಗಣಿಸಿರುವರು. ಇದು ಅವರಲ್ಲಿ ಸೇರುವುದಿಲ್ಲವಾದ್ದರಿಂದ ಅನುದಾತ್ತ. ಆದ್ದರಿಂದ **ಏಕಾಚ ಉಪದೇಶೇ—**, ಎಂದು ಆರ್ಧಧಾತುಕಕ್ಕೆ ಇಟ್ಟಿಗೆ ನಿಷೇಧವು ನ್ಯಾಯವಾಗಿ ಬರಬೇಕು. ಆದರೂ ಇಲ್ಲಿ **ವ್ಯತ್ಯಯೋ ಬಹುಲಂ** ಎಂದು ಇಟ್ ಆಗಮ ಬರುತ್ತೆ. ಲೃಟ್. ಉತ್ತಮ ಪುರುಷ ಬಹುವಚನ ಮಿಪ್. ಸ್ತು+ಮಿ. **ಸ್ಯತಾಸೀ ಲೃಲುಟೋಃ** ಎಂದು ಸ್ಯ ಪ್ರತ್ಯಯ ಬರುತ್ತೆ. **ಸ್ತು+ಸ್ಯ+** ಮಿ. ಹಿಂದೆ ಹೇಳಿದಂತೆ ಇಟ್. ಗುಣಾವಾದೇಶಗಳು. **ಅತೋ ದೀರ್ಘೋ ಯಞಿ** (ಪಾ. ಸೂ. ೭-೩-೧೦೧) ಎಂದು ದೀರ್ಘ. **ಆದೇಶಪ್ರತ್ಯಯಯೋಃ** ಎಂದು ಸಕಾರಕ್ಕೆ ಷಕಾರ. **ಆಗಮಾ ಅನುದಾತ್ತಾಃ** ಎಂದು ಇಟ್ ಅನುದಾತ್ತ. ಮಿಪ್ ಪಿತ್ತಾದ್ದರಿಂದ ಅನುದಾತ್ತ. ಧಾತುಸ್ವರ ನಿಲ್ಲುತ್ತೆ.

**ಭೋಜನ**—ಭುಜ ಪಾಲನಾಭ್ಯವಹಾರಯೋಃ ರುಧಾದಿ. ಣಿಚ್ **ನನ್ದಿಗ್ರಹಿ—,** ಎಂದು ನನ್ದ್ಯಾದಿಲಕ್ಷಣ ವಾದ ಲ್ಯು ಪ್ರತ್ಯಯ. ಅನ ಆದೇಶ. **ಣೇರನಿಟಿ** ಎಂದು ಣಿ ಲೋಪ. ಉಪಧಾಗುಣ ಭೋಜಯತಿ ಎಂದರೆ ಕರ್ಮಫಲವನ್ನು ಅನುಭವಿಸುವಂತೆ ಮಾಡುವನು ಎಂದು ಅರ್ಥ. ಪಾಲನಾರ್ಥವನ್ನಿಟ್ಟುಕೊಂಡರೆ ಭುನಕ್ತೀತಿ ಭೋಜನಃ ತಸ್ಯ ಸಂಬುದ್ಧಿಃ ಎಂದು ವಿಗ್ರಹ. ಈ ವಿಷಯದಲ್ಲಿ ಣಿಚ್ ಪ್ರತ್ಯಯವನ್ನು ಮಾಡಬೇಕಾದ್ದಿಲ್ಲ. **ಆಮನ್ತ್ರಿತಸ್ಯಚ** (ಪಾ. ಸೂ. ೮ ೧-೧೯) ಎಂಬುದರಿಂದ ಸರ್ವಾನುದಾತ್ತ ಬರುತ್ತೆ.

**ತ್ರಾತಾರಂ**—ತ್ರೈಙ್ ಪಾಲನೇ **ಆದೇಚ ಉಪದೇಶೇಽಶಿತಿ** ಎಂದು ಐಕಾರಕ್ಕೆ ಆಕಾರ. **ಣ್ವುಲ್‌ತೃಚೌ** ಎಂದು ತೃಚ್. **ಏಕಾಚ ಉಪದೇಶೇ—,** ಎಂದು ಇಟ್‌ಗೆ ನಿಷೇಧ. ತ್ರಾತೃ+ಅಮ್. **ಋತೋ ಙಿಸರ್ವನಾಮಸ್ಥಾನಯೋಃ** (ಪಾ. ಸೂ. ೭-೩-೧೧೦) ಙಿ ಪ್ರತ್ಯಯ ಸರ್ವನಾಮಸ್ಥಾನ ಸಂಜ್ಞೆಯುಳ್ಳ ಸು ಮೊದಲಾದ ಐದು ಪ್ರತ್ಯಯಗಳು ಇವು ಪರದಲ್ಲಿದ್ದರೆ ಋದಂತವಾದ ಅಂಗಕ್ಕೆ ಗುಣ ಬರುತ್ತೆ ಎಂದು ಗುಣ. ಋಕಾರಕ್ಕೆ ಅರ್ ಗುಣ ಬರುತ್ತೆ. **ಅಪ್ ತೃನ್‌ತೃಚ್—,** ( ಪಾ. ಸೂ ೬-೪-೧೧ ) ಎಂದು ಉಪಧೆಗೆ ದೀರ್ಘ. ತ್ರಾತಾರಂ ಎಂದು ಆಗುವುದು.

**ಅಮೃತಂ—ನ ಙಿೋ ಜರ ಮರ ಮಿತ್ರಮೃತಾಃ** ( ಪಾ. ಸೂ. ೬-೨-೧೧೬ ) ಬಹುವ್ರೀಹಿ ಸಮಾಸ ದಲ್ಲಿ ನಞ್‌ನ ಮುಂದೆ ಇರುವ ಜರ ಮೊದಲಾದ ಪದಗಳು ಆದ್ಯುದಾತ್ತಗಳಾಗುವುವು ಎಂದು ಮೃತ್ಯು ಶಬ್ದವು ಆದ್ಯುದಾತ್ತ.

**ಮಿಯೇಧ್ಯ**— (ಋ. ಸಂ. ೧-೩೬-೯) ರಲ್ಲಿ ವಿವರಿಸಿದೆ.

**ಯಜಿಷ್ಠಮ್**—ಯಜ ದೇವಪೂಜಾದೌ. ತೃಚ್ **ವ್ರಶ್ಚಭ್ರಶ್ಚ**—ಎಂದು ಷತ್ವ ಷ್ಟುತ್ವ. ಯಷ್ಟೃ ಶಬ್ದದ ಮುಂದೆ **ತುಶ್ಛಂದಸಿ** ಎಂದು ಇಷ್ಠನ್ ಪ್ರತ್ಯಯ. **ತುರಿಷ್ಠೇಮೇಯಸ್ಸು** ಎಂದು ತೃಶಬ್ದಕ್ಕೆ ಲೋಪ. ದ್ವಿತೀಯಾ ಏಕವಚನ ಅಮ್. ಯಜಿಷ್ಠಂ ಎಂದಾಗುತ್ತೆ. || ೫ ||



ಸಂಹಿತಾಪಾಠಃ

ಸುಶಂಸೋ ಬೋಧಿ ಗೃಣತೇ ಯವಿಷ್ಠ್ಯ ಮಧುಜಿಹ್ವಃ ಸ್ವಾಹುತಃ ।
ಪ್ರಸ್ಕಣ್ವಸ್ಯ ಪ್ರತಿರನ್ನಾಯುರ್ಜೀವಸೇ ನಮಸ್ಯಾ ದೈವ್ಯಂ ಜನಂ॥೬॥

ಪದಪಾಠಃ

ಸು ಽ ಶಂಸಃ । ಬೋಧಿ । ಗೃಣತೇ । ಯವಿಷ್ಠ್ಯ । ಮಧು ಽ ಜಿಹ್ವಃ । ಸು ಽ-
ಆಹುತಃ ।
ಪ್ರಸ್ಕಣ್ವಸ್ಯ । ಪ್ರ ಽ ತಿರನ್ । ಆಯುಃ । ಜೀವಸೇ । ನಮಸ್ಯ । ದೈವ್ಯಂ ।
ಜನಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಯವಿಷ್ಠ್ಯ ಯುವತಮಾಗ್ನೇ ತ್ವಂ ಗೃಣತೇ ಸ್ತುವತೇ ಯಜಮಾನಾರ್ಥಂ ಸುಶಂಸಃ ಸುಷ್ಠು ಶಂಸನೀಯೋ ಮಧುಜಿಹ್ವೋ ಮಾದಯಿತೃಜ್ವಾಲಃ ಸ್ವಾಹುತಃ ಸುಷ್ಠು ಅಭಿಮುಖ್ಯೇನ ಹುತಃ ಸನ್ ಬೋಧಿ । ಅಸ್ಮದಭಿಪ್ರಾಯಂ ಬುಧ್ಯಸ್ವ । ಕಿಂಚ ಪ್ರಸ್ಕಣ್ವಸ್ಯೈತನ್ನಾಮಕಸ್ಯ ಕಣ್ವಪುತ್ರಸ್ಯ । ಮಹರ್ಷೇಃ । ಪ್ರಸ್ಕಣ್ವಃ ಕಣ್ವಸ್ಯ ಪುತ್ರಃ ಕಣ್ವಪ್ರಭವಃ । ನಿ. ೩-೧೭ । ಇತಿ ಯಾಸ್ಕವಚನಾತ್ । ತಸ್ಯ ಜೀವಸೇ ಜೀವನಾರ್ಥಮಾಯುಃ ಪ್ರತಿರನ್ ಪ್ರಕರ್ಷೇಣ ವರ್ಧಯನ್ದೈವ್ಯಂ ದೇವಸಂಬಂಧಿನಂ ಜನಂ ನಮಸ್ಯ । ಪೂಜಯ ॥ ಸುಶಂಸಃ । ಶಂಸು ಸ್ತುತೌ । ಭಾವೇ ಘಞ್ । ಶೋಭನಃ ಶಂಸೋ ಯಸ್ಯಾಸೌ ಸುಶಂಸಃ । ಆದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ಬೋಧಿ । ಬುಧ ಅವಗಮನೇ ಲೋಟೋ ಹಿಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಹುಝಲ್ಭ್ಯೋ ಹೇರ್ಧಿರಿತಿ ಹೇರ್ಧಿರಾ-ದೇಶಃ । ವಾ ಛಂದಸೀತ್ಯಪಿತ್ತ್ವಸ್ಯ ವಿಕಲ್ಪಿತತ್ವಾಲ್ಲಘೂಪಧಗುಣಃ । ಧಾತೋರಂತ್ಯಲೋಪಶ್ಛಾಂದಸಃ । ಗೃಣತೇ । ಗೄ ಶಬ್ದೇ । ಲಟಃ ಶತೃ । ಕ್ರ್ಯಾದಿಭ್ಯಃ ಶ್ನಾ । ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಯವಿಷ್ಠ್ಯ । ಗತಂ । ಪ್ರಸ್ಕಣ್ವಸ್ಯ । ಪ್ರಭೂತಿರುತ್ಪತ್ತಿಃ ಕಣ್ವಾ-ದ್ಯಸ್ಯ ಸ ಪ್ರಸ್ಕಣ್ವಃ । ಪ್ರಸ್ಕಣ್ವಹರಿಶ್ಚಂದ್ರಾವೃಷೀ । ಪಾ. ೬-೧-೧೫೩ । ಇತಿ ಸುಡಾಗಮೋ ನಿಪಾತಿತಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಪ್ರತಿರನ್ । ಪ್ರಪೂರ್ವಸ್ತಿರತಿರ್ವರ್ಧನಾರ್ಥಃ । ನಮಸ್ಯ । ನಮೋವರಿವಶ್ಚಿತ್ರಙಃ ಕ್ಯಚಿತಿ ಪೂಜಾರ್ಥೇ ಕ್ಯಚ್ । ಪ್ರತ್ಯಯಸ್ವರಃ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಂ ದೀರ್ಘತ್ವಂ । ದೈವ್ಯಂ । ದೇವಾದ್ಯಞಞೌ । ಪಾ. ೪-೧-೮೫-೩ । ಇತಿ ತಸ್ಯೇದ-ಮಿತ್ಯರ್ಥೇ ಪ್ರಾಗ್ದೀವ್ಯತೀಯೋ ಯಞ್ಪ್ರತ್ಯಯಃ ॥

ಪ್ರತಿಪದಾರ್ಥ

**ಯವಿಷ್ಠ್ಯ**—ಎಲೈ ಯುವತಮನಾದ ಅಗ್ನಿಯೇ । **ಗೃಣತೇ**—(ನಿನ್ನನ್ನು) ಸ್ತೋತ್ರ ಮಾಡುವ ಯಜಮಾನ ನಿಗಾಗಿ । **ಸುಶಂಸಃ**—(ನಮ್ಮಿಂದ) ಹೊಗಳಲ್ಪಟ್ಟವನಾಗಿಯೂ । **ಮಧುಜಿಹ್ವಃ**— ಸಂತೋಷಗೊಳಿಸುವ

ನಾಗಿಯೂ । **ಸ್ವಾಹುತಃ**—ಎಲ್ಲಕಡೆಯೂ ಚೆನ್ನಾಗಿ ಹೋಮಮಾಡಲ್ಪಟ್ಟವನಾಗಿಯೂ ಆಗಿ । **ಬೋಧಿ**—(ನಮ್ಮ (ಅಭಿಪ್ರಾಯವನ್ನು) ತಿಳಿದುಕೊ । **ಪ್ರಸ್ಕಣ್ವಸ್ಯ**—ಕಣ್ವಪುತ್ರನಾದ ಪ್ರಸ್ಕಣ್ವನೆಂಬ ಮಹರ್ಷಿಯ । **ಜೀವಸೇ**—ಜೀವನಕ್ಕಾಗಿ । **ಆಯುಃ**—ಆಯುಸ್ಸನ್ನು । **ಪ್ರತಿರ**—ಚನ್ನಾಗಿ ವೃದ್ಧಿಮಾಡುತ್ತಾ । **ದೈವ್ಯಂ**—ದೇವಸಂಬಂಧಿಯಾದ । **ಜನಂ**—ಮನುಷ್ಯನನ್ನು । **ನಮಸ್ಯ**—ಗೌರವಿಸು ।

ಭಾವಾರ್ಥ

ಎಲೈ ಅಗ್ನಿಯೇ, ನಿನಗೆ ಎಲ್ಲಕಡೆಯೂ ಹೋಮಮಾಡುವುದರಿಂದ ನಿನ್ನ ಜ್ವಾಲೆಯು ಆಕರ್ಷಕವಾಗಿ ಮೇಲಕ್ಕೆದ್ದು ಸರ್ವರಿಗೂ ಸಂತೋಷವನ್ನುಂಟುಮಾಡುತ್ತದೆ. ನಿನ್ನನ್ನು ಸ್ತೋತ್ರಮಾಡುವ ಯಜಮಾನನಿಗಾಗಿ ನಾವು ನಿನ್ನ ಗುಣಗಳನ್ನು ಹೊಗಳುತ್ತೇವೆ. ಅದರ ಉದ್ದಿಶ್ಯವನ್ನು ಚೆನ್ನಾಗಿ ಅರ್ಥ ಮಾಡಿಕೊಂಡು ಯಜಮಾನನ ಇಷ್ಟಾರ್ಥವನ್ನು ದಯಪಾಲಿಸು. ನೀನು ಅತ್ಯಂತ ಯುವಕನಾಗಿದ್ದೀಯೆ. ಪ್ರಸ್ಕಣ್ವನ ಜೀವನವನ್ನು ಬೆಳಸಿ ಅವನ ಆಯುಸ್ಸನ್ನು ವೃದ್ಧಿಮಾಡು. ದೇವಸಂಬಂಧಿಯಾದ ಮನುಷ್ಯನನ್ನು ಗೌರವಿಸು.

English Translation

O most youthful Agni, you are sweet-tongued and universally invoked ; you are praised by us on behalf of the worshipper ; worship the celestial man (god ) and thereby prolong Praskanwa's life that he may live long.

॥ ವಿಶೇಷವಿಷಯಗಳು ॥

**ಸುಶಂಸಃ— ಸುಷ್ಠು ಶಂಸನೀಯಃ** । ಚೆನ್ನಾಗಿ ಸ್ತುತಿಸಲ್ಪಡುವವನು

**ಗೃಣತೇ—ಗೄ. ಶಬ್ದೇ** । ಸ್ತೋತ್ರಮಾಡುತ್ತಿರುವ ಯಜಮಾನನಿಗಾಗಿ.

**ಆಯುಃ ಜೀವಸೇ**— ಬಹಳ ದಿವಸ ಬದುಕುವುದಕ್ಕೆ, ದೀರ್ಘಾಯುಸ್ಸನ್ನು

**ದೈವ್ಯಂ ಜನಂ— ದೈವಸಂಬಂಧಿನಂ ಜನಂ** । ದೇವಸಂಬಂಧಿಯಾದ ಜನ ಎಂದರೆ ದೇವತೆಯನ್ನು.

**ಮಧುಜಿಹ್ವಃ—ಮಾದಯಿತೃಜ್ವಾಲಃ** । ಮಧುರವಾದ ಹವಿಸ್ಸು, ಆಜ್ಯ, ಮುಂತಾದ ಹೋಮದ್ರವ್ಯಗಳನ್ನು ಆಸ್ವಾದನೆಮಾಡುವ ಜಿಹ್ವೆಯುಳ್ಳವನು. ಈ ಶಬ್ದದ ವಿಸ್ತಾರವಾದ ಅರ್ಥವಿವರಣೆಗಾಗಿ ಋಗ್ವೇದಸಂಹಿತಾ ಭಾಗ ೨ ಪೇಜು 539 ನೋಡಿ.

**ಸ್ವಾಹುತಃ**— ಈ ಶಬ್ದದ ಅರ್ಥವಿವರಣೆಯನ್ನು ಈ ಸೂಕ್ತದ ನಾಲ್ಕನೆಯ ಋಕ್ಕಿನಲ್ಲಿ ಹೇಳಿರುವುದು.

**ಪ್ರಸ್ಕಣ್ವಸ್ಯ**— ಕಣ್ವಋಷಿಯ ಪುತ್ರನಿಗೆ ಪ್ರಸ್ಕಣ್ವನೆಂದು ಹೆಸರು. ಈ ಪ್ರಸ್ಕಣ್ವಋಷಿಯು ಋಗ್ವೇದದ ಪ್ರಥಮಮಂಡಲದಲ್ಲಿ ೪೪ ರಿಂದ ೫೦ ಸೂಕ್ತಗಳು, ಎಂಟನೆಯಮಂಡಲದಲ್ಲಿ ೪೯ ನೆಯ ಸೂಕ್ತ, ಒಂಭತ್ತನೆಯ ಮಂಡಲದಲ್ಲಿ ೯೫ ನೆಯ ಸೂಕ್ತ, ಈ ಸೂಕ್ತಗಳಲ್ಲಿರುವ ಒಟ್ಟು ೯೭ ಋಕ್ಕುಗಳಿಗೂ ಋಷಿಯಾಗಿರುವನು. ಕಣ್ವ

ಋಷಿಯ ವಂಶವು ಬಹಳ ಪ್ರಸಿದ್ಧಿಯಾಗುದು, ಎಂಟನೆಯಮಂಡಲದಲ್ಲಿ ಇರುವ ಸೂಕ್ತಗಳಿಗೆ ಕಣ್ವ ಮತ್ತು ಕಣ್ವ ಋಷಿಯ ವಂಶಸ್ಥರೇ ಋಷಿಗಳು.

ವ್ಯಾಕರಣಪ್ರಕ್ರಿಯಾ

**ಸುಶಂಸಃ**— ಶಸ್ಸು ಸ್ತುತೌ. ಭಾವಾರ್ಥದಲ್ಲಿ **ಘಞ್**ಪ್ರತ್ಯಯ. ಶೋಭನಂ ಶಂಸಃ ಯಸ್ಯ ಸಃ ಎಂದು ಬಹುವ್ರೀಹಿ. ಪೂರ್ವಪದಪ್ರಕೃತಿ ಸ್ವರವನ್ನು ಬಾಧಿಸಿ **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ. ೬-೨-೧೧೯) ಬಹುವ್ರೀಹಿ ಸಮಾಸದಲ್ಲಿ ಸುಶಬ್ದದ ಮುಂದೆ ಇರುವ ಆದ್ಯುದಾತ್ತವೂ ಎರಡು ಸ್ವರಗಳುಳ್ಳದ್ದೂ ಆದ ಪದವು ಆದ್ಯುದಾತ್ತವಾಗುತ್ತೆ ಎಂದು ಉತ್ತರಪದಕ್ಕೆ ಆದ್ಯುದಾತ್ತ ಬರುತ್ತೆ.

**ಬೋಧಿ**— ಬುಧ ಅವಗಮನೇ ಧಾತು. ಲೋಟ್‌ಗೆ ಸಿಪ್. ಹಿ ಆದೇಶ. **ಬಹುಲಂ ಛಂದಸಿ** (ಪಾ. ಸೂ ೨-೪-೭೩) ಎಂದು ಶಪ್‌ಗೆ ಲುಕ್. **ಹುಝಲ್ಭ್ಯೋ ಹೇರ್ಧಿಃ** (ಪಾ. ಸೂ. ೬-೪-೧೦೧) ಹುಧಾತು, ಝಲಂತ ಧಾತುಗಳು ಇವುಗಳ ಮುಂದೆ ಇರುವ ಹಿಗೆ ಧಿ ಆದೇಶ ಬರುತ್ತೆ ಎಂದು ಹಿಗೆ ಧಿಆದೇಶ. **ಸೇರ್ಹ್ಯಪಿಚ್ಚ** ಎಂದು ಹಿಗೆ ಅಪಿತ್ವವು ಯದ್ಯಪಿ ವಿಧಿಸಿದೆ. ಆದರೆ **ವಾ ಛಂದಸಿ** (ಪಾ. ಸೂ. ೩-೪-೮೮) ಛಂದಸ್ಸಿನಲ್ಲಿ ಹಿಯು ವಿಕಲ್ಪದಿಂದ ಅಪಿತ್ ಆಗುತ್ತೆ ಎಂದು ಅಪಿತ್ವವು ವಿಕಲ್ಪವಾಗಿದೆ. ಏವಂಚ ಅಪಿತ್ವ ಬರದೇ ಇದ್ದರೆ **ಸಾರ್ವಧಾತುಕಮಪಿತ್** ಎಂದು ಙಿತ್ವ ಬರುವುದಿಲ್ಲ ಆದ್ದರಿಂದ **ಕ್ಙಿತಿಚ** ಎಂದು ಲಘೂಪಧಗುಣಕ್ಕೆ ನಿಷೇಧಬರುವುದಿಲ್ಲ. ಧಾತುವಿನ ಕೊನೆಯ ವರ್ಣವಾದ ಧ್‌ಗೆ ಛಾಂದಸವಾಗಿ ಲೋಪ ಬರುತ್ತೆ.

**ಗೃಣತೇ**— ಗೄ ಶಬ್ದೇ–ಲಟ್‌ಗೆ ಶತೃ ಶ್ನಾಪ್ರತ್ಯಯ. **ಪ್ವಾದೀನಾಂ ಹ್ರಸ್ವಃ** ಎಂದು ಹ್ರಸ್ವ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಕಿತ್‌-ಅಥವಾ ಙಿತ್ ಆದ ಸಾರ್ವಧಾತುಕವು ಪರದಲ್ಲಿದ್ದರೆ ಶ್ನಾ-ಅಭ್ಯಸ್ತ ಇವುಗಳ ಆಕಾರಕ್ಕೆ ಲೋಪ ಬರುತ್ತೆ ಎಂದು ಆಕಾರಕ್ಕೆ ಲೋಪ. **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ನುಮಾಗಮವನ್ನು ಹೊಂದದ ಶತೃವು ಕೊನೆಯಲ್ಲಿದ್ದು ಅಂತೋದಾತ್ತವೂ ಆಗಿದ್ದರೆ ಅದರ ಮುಂದೆ ಇರುವ ನದೀಸಂಜ್ಞಿಕವೂ ಅಜಾದಿ ಶಸಾದಿ ವಿಭಕ್ತಿಯೂ ಉದಾತ್ತವಾಗುತ್ತೆ ಎಂದು ಚತುರ್ಥೀ ಏಕವಚನ ಙೇ ಪ್ರತ್ಯಯವು ಉದಾತ್ತ.

**ಯವಿಷ್ಠ್ಯ**—(ಋ ಸಂ ೧-೩೬-೬)ರಲ್ಲಿ ವಿವರಿಸಿದೆ.

**ಪ್ರಸ್ಕಣ್ವಸ್ಯ**— ಪ್ರ ( ಭೂತಿಃ ) ಉತ್ಪತ್ತಿಯು, ಕಣ್ವಾತ್=ಕಣ್ವಮಹರ್ಷಿಯ ದೆಸೆಯಿಂದ, ಯಸ್ಯ ಸಃ ಯಾವನಿಗೋ ಅವನು. ಎಂದು ಬಹುವ್ರೀಹಿ. **ಪ್ರಸ್ಕಣ್ವಹರಿಶ್ಚನ್ದ್ರಾವೃಷೀ** (ಪಾ. ಸೂ. ೬-೧-೧೫೩) ಋಷಿ ಎಂಬ ಅರ್ಥವು ತೋರಿದರೆ ಪ್ರಸ್ಕಣ್ವ, ಹರಿಶ್ಚನ್ದ್ರ ಎಂಬಲ್ಲಿ ಉತ್ತರಪದಕ್ಕೆ ಸುಟ್ ನಿಪಾತಿತವಾಗುತ್ತೆ ಎಂದು ಸುಟ್ ಬರುತ್ತೆ. ಬಹುವ್ರೀಹಿಯಾದ್ದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತೆ.

**ಪ್ರತಿರನ್**— ಪ್ರಪೂರ್ವಕವಾದ ತಿರಧಾತುವು ವರ್ಧನ ಎಂಬ ಅರ್ಥದಲ್ಲಿದೆ.

**ನಮಸ್ಯ**— **ನಮೋವರಿವಶ್ಚಿತ್ರಙಃ ಕ್ಯಚ್** (ಪಾ. ಸೂ. ೩-೧-೧೯) 'ನಮಸಃ ಪೂಜಾಯಾಂ' ಎಂಬ ವಾರ್ತಿಕದಿಂದ ಪೂಜಾರ್ಥ ತೋರುವಾಗ ನಮಸ್‌ಶಬ್ದದ ಮುಂದೆ ಕ್ಯಚ್. ಪ್ರತ್ಯಯಸ್ವರ ಬರುತ್ತೆ. **ಅನ್ಯೇಷಾಮಪಿ ದೃಶ್ಯತೇ** ಎಂದು ಸಂಹಿತಾಕಾಲದಲ್ಲಿ ದೀರ್ಘ ಬರುತ್ತೆ.

**ದೈವ್ಯಮ್—ದೇವಾದ್ಯಞಞೌ** (ಪಾ. ಸೂ. ೪-೧-೮೫-೩) ಪ್ರಾಗ್ದೀವ್ಯತೀಯಾರ್ಥದಲ್ಲಿ ದೇವಶಬ್ದದ ಮುಂದೆ ಯಞ್-ಅಞ್ ಎಂಬ ಪ್ರತ್ಯಯಗಳು ಬರುವುವು ಎಂದು. **ತಸ್ಯೇದಮ್** ಎಂಬ ಪ್ರಾಗ್ದೀವ್ಯತೀಯಾರ್ಥ ದಲ್ಲಿ ದೇವಶಬ್ದದ ಮುಂದೆ ಯಞ್ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** ಎಂದು ಆದಿವೃದ್ಧಿ. **ಯಸ್ಯೇತಿಚ** ಎಂದು ದೈವಶಬ್ದದ ಅಕಾರಕ್ಕೆ ಲೋಪ, ದೈವ್ಯ ಎಂದಾಯಿತು. ಅಮ್ಪ್ರತ್ಯಯ. ಪೂರ್ವರೂಪ. ॥೬॥

---

॥ ಸಂಹಿತಾಪಾಠಃ ॥

ಹೋತಾರಂ ವಿಶ್ವವೇದಸಂ ಸಂ ಹಿ ತ್ವಾ ವಿಶ ಇಂಧತೇ ।
ಸ ಆ ವಹ ಪುರುಹೂತ ಪ್ರಚೇತಸೋಽಗ್ನೇ ದೇವಾँ ಇಹ
ದ್ರವತ್ ॥ ೭ ॥

॥ ಪದಪಾಠಃ ॥

ಹೋತಾರಂ । ವಿಶ್ವವೇದಸಂ । ಸಂ । ಹಿ । ತ್ವಾ । ವಿಶಃ । ಇಂಧತೇ ।
ಸಃ । ಆ । ವಹ । ಪುರುಽಹೂತ । ಪ್ರಽಚೇತಸಃ । ಅಗ್ನೇ । ದೇವಾನ್ ।
ಇಹ । ದ್ರವತ್ ॥ ೭ ॥

॥ ಸಾಯಣಭಾಷ್ಯಂ ॥

ಹೋತಾರಂ ಹೋಮನಿಷ್ಪಾದಕಂ ವಿಶ್ವವೇದಸಂ ಸರ್ವಜ್ಞಂ ತ್ವಾಮಗ್ನಿಂ ವಿಶಃ ಪ್ರಜಾಃ ಸಮಿಂಧತೇ ಹಿ । ಸಮ್ಯಗ್ದೀಪಯಂತಿ ಖಲು । ಹೇ ಪುರುಹೂತ ಬಹುಭಿರಾಹೂತಾಗ್ನೇ ಸ ತ್ವಂ ಪ್ರಚೇತಸಃ ಪ್ರಕೃಷ್ಟಜ್ಞಾನಯುಕ್ತಾನ್ದೇವಾನಿಹ ಕರ್ಮಣಿ ದ್ರವತ್ ಕ್ಷಿಪ್ರಮಾ ವಹ । ಆಭಿಮುಖ್ಯೇನ ಪ್ರಾಪಯ । ದ್ರವದಿತಿ ಕ್ಷಿಪ್ರನಾಮ । ದ್ರವದೋಷಮಿತಿ ತನ್ನಾಮಸು ಪಾಠಾತ್ । ವಿಶ್ವವೇದಸಂ । ವಿಶ್ವಾನಿ ವೇತ್ತೀತಿ ವಿಶ್ವವೇದಾಃ । ಅಸುನ್ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ ।

**ಯದ್ವಾ । ವೇದ ಇತಿ ಧನನಾಮ । ವಿಶ್ವಾನಿ ವೇದಾಂಸಿ ಯಸ್ಯಾಸೌ ವಿಶ್ವವೇದಾಃ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ । ಇಂಧತೇ । ಞಿಇನ್ಧೀ ದೀಪ್ತೌ । ಶ್ನಸೋರಲ್ಲೋಪ ಇತ್ಯಕಾರಲೋಪಃ । ಶ್ನಾನ್ನಲೋಪಃ । ಪಾ. ೬-೪-೨೩ । ಪ್ರತ್ಯಯಸ್ವರಃ । ಹಿ ಚೇತಿ ನಿಘಾತಪ್ರತಿಷೇಧಃ ॥**

॥ ಪ್ರತಿಪದಾರ್ಥ ॥

**ಹೋತಾರಂ**— ಹೋಮಸಂಪಾದಕನಾಗಿಯೂ । **ವಿಶ್ವವೇದಸಂ**— ಸರ್ವಜ್ಞನೂ ಆದ ನಿನ್ನನ್ನು । **ವಿಶಃ**— ಪ್ರಜೆಗಳು ಎಲ್ಲರೂ । **ಸಂ ಇಂಧತೇ ಹಿ**—ಚೆನ್ನಾಗಿ ಪ್ರಜ್ವಲಿಸುವಂತೆ ಮಾಡುವುದು ಸರಿಯಷ್ಟೆ । **ಪುರುಹೂತ**— ಅನೇಕರಿಂದ ಕರೆಯಲ್ಪಡುವ । **ಅಗ್ನೇ** —ಎಲೈ ಅಗ್ನಿಯೇ । **ಸಃ**— ಆ ನೀನು । **ಪ್ರಚೇತಸಃ**— ಶ್ರೇಷ್ಠವಾದ ಜ್ಞಾನದಿಂದೊಡಗೂಡಿದ । **ದೇವಾನ್**—ದೇವತೆಗಳನ್ನು । **ಇಹ**— ಈ ಯಜ್ಞಕರ್ಮಕ್ಕೆ । **ದ್ರವತ್**-ಜಾಗ್ರತೆಯಾಗಿ । **ಆ ವಹ**— ಅಭಿಮುಖವಾಗಿ ಕರೆದುಕೊಂಡುಬಂದು ಸೇರಿಸು ।

ಭಾವಾರ್ಥ

ಎಲೈ ಅಗ್ನಿದೇವನೇ, ನೀನು ಸರ್ವಜ್ಞನೂ ಹೋಮಸಂಪಾದಕನೂ ಆಗಿರುವುದರಿಂದ ಸಕಲ ಪ್ರಜೆಗಳೂ ನಿನ್ನನ್ನು ಯಜ್ಞಕರ್ಮದಲ್ಲಿ ಚೆನ್ನಾಗಿ ಪ್ರಜ್ವಲಿಸುವಂತೆ ಮಾಡುತ್ತಾರೆ. ಎಲ್ಲರೂ ನಿನಗೆ ಆಹ್ವಾನವನ್ನು ಕೊಡುತ್ತಾರೆ. ಅವರ ಆಹ್ವಾನವನ್ನು ಮನ್ನಿಸಿ ಶ್ರೇಷ್ಠವಾದ ಜ್ಞಾನದಿಂದೊಡಗೂಡಿದ ದೇವತೆಗಳನ್ನು ನಮ್ಮ ಈ ಯಜ್ಞಕರ್ಮಕ್ಕೆ ಜಾಗ್ರತೆಯಾಗಿ ಕರೆದುಕೊಂಡು ಬಂದು ಸೇರಿಸು.

English Translation

O Agni, the people kindle you, the all-knowing invoker (Agni) nvoked by many, you bring hither, the wise gods quickly,

ವಿಶೇಷ ವಿಷಯಗಳು

**ವಿಶಃ**—ಪ್ರಜೆಗಳು, ಎಂದರೆ ಜನಗಳು, ಯಜ್ಞದಲ್ಲಿ ನಿನ್ನನ್ನು ಸ್ತೋತ್ರಮಾಡುವ ಋತ್ವಿಗಾದಿಜನರು.

**ಪ್ರಚೇತಸಃ—ಪ್ರಕೃಷ್ಟಜ್ಞಾನಯುಕ್ತಾನ್**— । ಉತ್ಕೃಷ್ಟವಾದ ಜ್ಞಾನವುಳ್ಳ ದೇವತೆಗಳನ್ನು

**ದ್ರವತ್**— ಬೇಗನೆ, quickly ನು ಮುಂಕ್ಷು ಮೊದಲಾದ ಇಪ್ಪತ್ತಾರು ಕ್ಷಿಪ್ರನಾಮಗಳ ಮಧ್ಯದಲ್ಲಿ ದ್ರವತ್ ಎಂಬ ಶಬ್ದವು ಪಠಿತವಾಗಿರುವುದರಿಂದ ದ್ರವತ್ ಎಂದರೆ ಬೇಗನೆ, ಶೀಘ್ರವಾಗಿ ಎಂದರ್ಥವು.

ವ್ಯಾಕರಣಪ್ರಕ್ರಿಯಾ

**ಹೋತಾರಂ**—ಹು ದಾನಾದನಯೋಃ. ತೃಚ್. ಗುಣ, ಉಪಧಾದೀರ್ಘ, ಅಮ್.

**ವಿಶ್ವವೇದಸಂ**—ವಿಶ್ವಾನಿ ವೇತ್ತೀತಿ ವಿಶ್ವವೇದಾಃ, ಎಲ್ಲವನ್ನೂ ತಿಳಿಯುತ್ತಾನೆ ಎಂದು ಅರ್ಥ. ವಿದ

ಜ್ಞಾನೇ ಧಾತು ಮುಂದೆ **ಸರ್ವಧಾತುಭ್ಯೋಽಸುನ್** ಎಂದು ಅಸುನ್ ಪ್ರತ್ಯಯ. **ಮರುದ್ವೃಧಾದೀನಾಂ ಛಂದಸ್ಯುಪಸಂಖ್ಯಾನಂ** ಎಂದು ಪೂರ್ವಪದಕ್ಕೆ ಅಂತೋದಾತ್ತ ಬರುತ್ತೆ. ಅಥವಾ ವೇದಃ ಎಂದರೆ ಧನ ಎಂದು ಅರ್ಥ. ವಿಶ್ವಾನಿ ವೇದಾಂಸಿ ಯಸ್ಯ ಸಃ=ಸಮಸ್ತವಾದ ಧನವುಳ್ಳವನು ಎಂದು ಅರ್ಥ. **ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ** (ಪಾ. ಸೂ ೬-೨-೧೦೬) ಸಂಜ್ಞೆ ತೋರುವಾಗ ಬಹುವ್ರೀಹಿಸಮಾಸದಲ್ಲಿ ಪೂರ್ವಪದಭೂತವಾದ ವಿಶ್ವಶಬ್ದವು ಅಂತೋದಾತ್ತವಾಗುತ್ತೆ ಎಂದು ಅಂತೋದಾತ್ತ ಬರುತ್ತೆ.

**ಇನ್ಧತೇ**—ಞಿಇನ್ಧೀ ದೀಪ್ತೌ, ರುಧಾದಿ ಆತ್ಮನೇ ಪದಿ ಲಟ್ ಝ. **ಆತ್ಮನೇ ಪದೇಷ್ವನತಃ** ಎಂದು ಝಗೆ ಅತ್ ಆದೇಶ. **ರುಧಾದಿಭ್ಯಃ ಶ್ನಮ್** ಎಂದು ಶ್ನಮ್‌ವಿಕರಣ. **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಶ್ನ ಪ್ರತ್ಯಯ ಅಸ್ ಧಾತು ಇವುಗಳ ಅಕಾರಕ್ಕೆ ಕಿತ್ ವಾ ಙಿತ್ ಆದ ಸಾರ್ವಧಾತುಕ ಪರವಲ್ಲಿದ್ದರೆ ಲೋಪ ಬರುತ್ತೆ ಎಂದು ಶ್ನ ಪ್ರತ್ಯಯದ ಅಕಾರಕ್ಕೆ ಲೋಪ. **ಶ್ನಾನ್ನಲೋಪಃ** (ಪಾ. ಸೂ. ೬-೪-೨೩) ಶ್ನಮ್‌ಗಿಂತಲೂ ಪರವಲ್ಲಿರುವ ನಕಾರಕ್ಕೆ ಲೋಪ ಬರುತ್ತೆ ಎಂದು ಧಾತ್ವವಯವ ನಕಾರಕ್ಕೆ ಲೋಪ. ಝಪ್ರತ್ಯಯದ ಟಿಗೆ **ಟಿತ ಆತ್ಮನೇಪದಾನಾಂ—,** ಎಂದು ಏತ್ವ. ಇನ್ಧತೇ ಎಂದಾಯಿತು. **ಹಿಚ** ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ ಬರುತ್ತೆ. **ಅಯೆನ್ನಾದಿಷೂಪದೇಶಿವದ್ವಚನಂ ಸ್ವರಸಿದ್ಧ್ಯರ್ಥಂ** ಎಂದು ಉಪದೇಶಿವದ್ಭಾವದಿಂದ ಮೊದಲೇ ಝಗೆ ಅತ್ ಆದೇಶ ಬರುತ್ತೆ ಆದ್ದರಿಂದ **ಆದ್ಯುದಾತ್ತಶ್ಚ** ಎಂಬುದರಿಂದ ಅತೇ ಎಂಬ ಪ್ರತ್ಯಯವು ಉದಾತ್ತವಾಗುತ್ತೆ. ||೭||

---

॥ ಸಂಹಿತಾಪಾಠಃ ॥

ಸವಿತಾರ ಮುಷಸಮಶ್ವಿನಾ ಭಗಮಗ್ನಿಂ ವ್ಯುಷ್ಟಿಷು ಕ್ಷಪಃ ।
ಕಣ್ವಾಸಸ್ತ್ವಾ ಸುತಸೋಮಾಸ ಇಂಧತೇ ಹವ್ಯವಾಹಂ ಸ್ವಧ್ವರ ॥

॥ ಪದಪಾಠಃ ॥

ಸವಿತಾರಂ । ಉಷಸಂ । ಅಶ್ವಿನಾ । ಭಗಂ । ಅಗ್ನಿಂ । ವಿಽಉಷ್ಟಿಷು । ಕ್ಷಪಃ ।
ಕಣ್ವಾಸಃ । ತ್ವಾ । ಸುತಽಸೋಮಾಸಃ । ಇಂಧತೇ । ಹವ್ಯಽವಾಹಂ । ಸುಽಅಧ್ವರ ॥ ೮ ॥

ಸಾಯಣಭಾಷ್ಯಂ

ಹೇ ಸ್ವಧ್ವರ ಶೋಭನಯಾಗಯುಕ್ತಾಗ್ನೇ । ವ್ಯುಷ್ಟಿಷೂಷಃಕಾಲೇಷು ಶ್ರವೋಽನ್ನಮಾಹುತಿರೂಪಮಭಿಲಕ್ಷ್ಯ ಸವಿತ್ರಾದೀನ್ದೇವಾನಾವಹೇತ್ಯನುವರ್ತತೇ । ಸ್ವಧ್ವರೇತ್ಯಾಹವನೀಯಾಗ್ನೇಃ ಸಂಬೋಧನಂ । ಅಗ್ನಿಮಿತಿ ಹವಿಷ ಉದ್ದೇಶ್ಯಂ ದೇವತಾಂತರಮುಚ್ಯತೇ । ಸುತಸೋಮಾಸೋಽಭಿಷುತಸೋಮಾಃ ಕಣ್ವಾಸೋ ಮೇಧಾವಿನ ಋತ್ವಿಜೋ ಹವ್ಯವಾಹಂ ಹವಿಷಃ ಪ್ರಾಪಕಮಾಹವನೀಯಂ ತ್ವಾಮಿಂಧತೇ ದೀಪಯಂತಿ ॥ ವ್ಯುಷ್ಟಿಷು । ಉಛೀ ವಿವಾಸೇ । ವಿವಾಸೋ ವರ್ಜನಂ । ವ್ಯುಚ್ಛ್ಯತೇ ತಮಸಾ ವರ್ಜ್ಯತ ಇತಿ ವ್ಯುಷ್ಟಿರುಷಃಕಾಲಃ । ಕರ್ಮಣಿ ಕ್ತಿನ್ । ಕ್ತಾದೌ ಚ ನಿತೀತಿ ಗತೇಃ ಪ್ರಕೃತಿಸ್ವರತ್ವಂ । ಸಂಹಿತಾಯಾಮುದಾತ್ತಸ್ವರಿತಯೋರ್ಯಣ ಇತಿ ಪರಸ್ಯಾನುದಾತ್ತಸ್ಯ ಸ್ವರಿತತ್ವಂ । ಕ್ಷಪಃ । ಕ್ಷಪೇತಿ ರಾತ್ರಿನಾಮ । ಜಸ್ಯಾತೋ ಧಾತೋಃ । ಪಾ. ೬-೪-೧೪೦ । ಇತ್ಯತ್ರಾತ ಇತಿ ಯೋಗವಿಭಾಗಾದಾಕಾರಲೋಪಃ । ಸುತಸೋಮಾಸಃ । ಸುತಃ ಸೋಮೋ ಯೈಃ । ನಿಷ್ಠೇತಿ ಪೂರ್ವನಿಪಾತಃ । ಪಾ. ೨-೨-೩೬ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಹವ್ಯವಾಹಂ । ಹವ್ಯಂ ವಹತೀತಿ ಹವ್ಯವಾಟ್ । ವಹಶ್ಚೇತಿ ಣ್ವಿಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಸ್ವಧ್ವರ**— ಶ್ರೇಷ್ಠವಾದ ಯಾಗಯುಕ್ತನಾದ ಅಗ್ನಿಯೇ । **ಕ್ಷಪಃ**—ರಾತ್ರಿಯ (ನಂತರ) । **ವ್ಯುಷ್ಟಿಷು**-- ಉಷಃಕಾಲಗಳಲ್ಲಿ । **ಸವಿತಾರಂ**-- ಸವಿತೃವನ್ನೂ । **ಉಷಸಂ**— ಉಷಸ್ಸನ್ನೂ । **ಅಶ್ವಿನಾ**— ಅಶ್ವಿದೇವತೆಗಳನ್ನೂ । **ಭಗಂ**— ಭಗನನ್ನೂ । **ಅಗ್ನಿಂ**— ಅಗ್ನಿದೇವನನ್ನೂ (ಕರೆದುಕೊಂಡು ಬಾ) । **ಸುತಸೋಮಾಸಃ**— ಹಿಂಡಿರತಕ್ಕ ಸೋಮರಸವುಳ್ಳವರೂ । **ಕಣ್ವಾಸಃ**—ಮೇಧಾವಿಗಳೂ ಆದ ಋತ್ವಿಕ್ಕುಗಳು । **ಹವ್ಯವಾಹಂ**—ಹವಿಸ್ಸುಗಳನ್ನು ತೆಗೆದುಕೊಂಡುಹೋಗುವ ನಿನ್ನನ್ನು । **ಇಂಧತೇ**— ಪ್ರಜ್ವಲಿಸುವಂತೆ ಮಾಡುತ್ತಾರೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಶ್ರೇಷ್ಠವಾದ ಯಾಗಯುಕ್ತನು. ರಾತ್ರಿಯಾದೊಡನೆಯೇ ಉಷಃಕಾಲಗಳಲ್ಲಿ ನಮ್ಮ ಯಾಗಕ್ಕಾಗಿ ಸವಿತೃವನ್ನೂ, ಉಷಸ್ಸನ್ನೂ, ಅಶ್ವಿದೇವತೆಗಳನ್ನೂ, ಭಗನನ್ನೂ, ಅಗ್ನಿದೇವನನ್ನೂ ಕರೆದುಕೊಂಡು ಬಾ. ಮೇಧಾವಿಗಳಾದ ಋತ್ವಿಕ್ಕುಗಳು ಸೋಮರಸವನ್ನು ಹಿಂಡಿ, ಹವಿಸ್ಸುಗಳನ್ನು ತೆಗೆದುಕೊಂಡು ಹೋಗುವ ನಿನ್ನನ್ನು ಪ್ರಜ್ವಲಿಸುವಂತೆ ಮಾಡುತ್ತಾರೆ.

English Translation

O Agni, who is worshipped well in the sacrifices, bring hither, at the break of the day preceeding the night, Savitru, Ushas, the Aswins, Bhaga and Agni ; the Kanwas having pressed and poured out the soma libations, kindle you, the carrier of oblation ( to the gods )

ವಿಶೇಷವಿಷಯಗಳು

**ಸವಿತಾರಂ, ಉಷಸಂ, ಅಶ್ವಿನಾ, ಭಗಂ, ಅಗ್ನಿಂ—** ಈ ದೇವತೆಗಳನ್ನು ಕರೆದುಕೊಂಡು ಬರಬೇಕೆಂದು ಋಷಿಯು ಅಗ್ನಿಯನ್ನು ಪ್ರಾರ್ಥಿಸಿರುವನು. ಇಲ್ಲಿ ದೇವತೆಗಳ ಮಧ್ಯದಲ್ಲಿ ಅಗ್ನಿಯೂ ಇರುವುದರಿಂದ ಅಗ್ನಿಯನ್ನೇ ಅಗ್ನಿಯು ಕರೆತರುವುದು ಅಸಂಭವವು. ಎಂದರೆ ಈ ದೇವತೆಗಳ ಜೊತೆಯಲ್ಲಿ ನಿನ್ನನ್ನೂ ಆಹ್ವಾನಮಾಡುತ್ತೇವೆ ಎಂದು ಮುಖ್ಯಾಭಿಪ್ರಾಯವು.

**ಕ್ಷಪಃ—** ರಾತ್ರಿಯು ಎಂದರೆ ರಾತ್ರಿಯು ಕಳೆದನಂತರ ; ಶ್ಯಾವೀ, ಕ್ಷಪಾ ಮೊದಲಾದ ಇಪ್ಪತ್ತಮೂರು ರಾತ್ರಿನಾಮಗಳ ಮಧ್ಯದಲ್ಲಿ ಕ್ಷಪಾ ಎಂಬ ಶಬ್ದವು ಪಠಿತವಾಗಿರುವುದರಿಂದ ಈ ಶಬ್ದಕ್ಕೆ ರಾತ್ರಿಯೆಂದರ್ಥವು.

**ಕಣ್ವಾಸಃ —** ಕಣ್ವಋಷಿಯ ಪುತ್ರರು ಅಥವಾ ಕಣ್ವಋಷಿಯ ವಂಶಸ್ಥರು.

**ಸುತಸೋಮಾಸಃ— ಸುತಃ ಸೋಮಃ ಯೈಸ್ತೇ ||** ಸೋಮರಸವನ್ನು ಹಿಂಡಿ ಸಿದ್ಧಪಡಿಸಿಟ್ಟುಕೊಂಡಿರುವ

**ಇಂಧತೇ—** ಹೊತ್ತಿಸುವರು, ಉದ್ದೀಪನಗೊಳಿಸುವರು, ಅಗ್ನಿಮಥನಾನಂತರದಲ್ಲಿ ಮೊದಲು ಆ ಅಗ್ನಿಯನ್ನು ಯಜ್ಞವೇದಿಯ ಪೂರ್ವಭಾಗದಲ್ಲಿ ಸ್ಥಾಪಿತವಾಗಿರುವ ಆಹವನೀಯವೆಂಬ ಅಗ್ನಿಕುಂಡದಲ್ಲಿ ಪ್ರತಿಷ್ಠಿಸುವರು.

**ಸ್ವಧ್ವರ—ಶೋಭನಯಾಗಯುಕ್ತಾಗ್ನೇ |** ಶ್ರೇಷ್ಠವಾದ ಯಜ್ಞಗಳಲ್ಲಿ ಆರಾಧಿಸಲ್ಪಡುವವನು.

॥ ವ್ಯಾಕರಣಪ್ರಕ್ರಿಯಾ ॥

**ವ್ಯುಷ್ಟಿಷು—** ಇದೇ ಸೂಕ್ತ ೨ನೇ ಮಂತ್ರದಲ್ಲಿ ವಿವರಿಸಿದೆ.

**ಕ್ಷಪಃ—** ಕ್ಷಪಾ ಎಂದು ರಾತ್ರಿಗೆ ಹೆಸರು. ಇದರ ಮುಂದೆ ಜಸ್. **ಆತೋ ಧಾತೋಃ** (ಪಾ. ಸೂ. ೬-೧೪೦) ಆಕಾರಾಂತವಾದ ಯಾವ ಧಾತು ಇದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಭಸಂಜ್ಞಿಕವಾದ ಅಂಗದ ಕೊನೆಯ ಆಕಾರಕ್ಕೆ ಲೋಪ ಬರುತ್ತೆ ಎಂದು ಸೂತ್ರಾರ್ಥ. ಕ್ಷಪಾ ಎಂಬುದು ಆಕಾರಾಂತವಾದ ಧಾತುವಲ್ಲ ಆದ್ದರಿಂದ ಈ ಸೂತ್ರದಿಂದ ಆಗೆ ಲೋಪ ಬರಲಾರದು. ಇಲ್ಲಿ **ಆತಃ** ಎಂದು ಒಂದು ಸೂತ್ರವನ್ನಾಗಿ ವಿಭಾಗ ಮಾಡಿರುವರು ಭಸಂಜ್ಞಿಕವಾದ ಆಕಾರಾಂತವಾದ ಅಂಗದ ಕೊನೆಯ ಆಕಾರಕ್ಕೆ ಲೋಪ ಬರುತ್ತೆ ಎಂದು ಅರ್ಥ. ಎರಡನೆಯ ಭಾಗಕ್ಕೆ ಮೊದಲು ಹೇಳಿದಂತೆಯೇ ಅರ್ಥ. ಇಲ್ಲಿ **ಆತಃ** ಎಂಬುದರಿಂದ ಆಗೆ ಲೋಪ ಬರುತ್ತೆ.

**ಸುತಸೋಮಾಸಃ—** ಷುಞ್ ಅಭಿಷವೇ. ಕರ್ಮಣಿ **ಕ್ತ**ಪ್ರತ್ಯಯ ಸುತಃ ಸೋಮಃ ಯೈಸ್ತೇ ಎಂದು ಬಹುವ್ರೀಹಿ. **ನಿಷ್ಠಾ** (ಪಾ. ಸೂ. ೨-೨-೩೬) ಬಹುವ್ರೀಹಿ ಸಮಾಸದಲ್ಲಿ (ಕ್ತ-ಕ್ತವತು) ನಿಷ್ಠಾಂತವು ಪೂರ್ವಪದವಾಗಿ ಪ್ರಯುಕ್ತವಾಗುತ್ತೆ ಎಂದು ಸುತ ಎಂಬುದಕ್ಕೆ ಪೂರ್ವನಿಪಾತ. ಬಹುವ್ರೀಹೌ ಪ್ರಕೃತ್ಯಾ—, ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತೆ

**ಹವ್ಯವಾಹಮ್** (ಋ. ಸಂ. ೧-೪೪-೨)ರಲ್ಲಿ ಮೊದಲನೆ ಪಾದದ ಕೊನೆಯಲ್ಲಿದೆ. ಆದ್ದರಿಂದ **ಹವ್ಯೇನನ್ತಃ ಪಾದಮ್** ಎಂದು ಞ್ಯುಟ್ ಬಂತು. ಇಲ್ಲಿ ನಾಲ್ಕನೇ ಪಾದದ ಆದಿಯಲ್ಲಿದೆ. ಆದ್ದರಿಂದ **ಹವ್ಯೇನನ್ತಃ—**, ಎಂಬುದು ಇಲ್ಲಿ ಬರುವುದಿಲ್ಲ. **ವಹಶ್ಚ** ( ಪಾ. ಸೂ. ೩-೨-೬೪ ) ಸುಬಂತವು ಉಪಪದವಾಗಿದ್ದರೆ ವಹ್ ಧಾತು ಮುಂದೆ ಣಿ ಪ್ರತ್ಯಯ ಬರುತ್ತೆ ಎಂದು ಣ್ವಿ ಪ್ರತ್ಯಯ. ಉಪಧಾವೃದ್ಧಿ ಢತ್ವಾದಿ ಕಾರ್ಯಗಳು. ॥ ೮ ॥

---

ಸಂಹಿತಾಪಾಠಃ

ಪತಿರ್ಹ್ಯಧ್ವರಾಣಾಮಗ್ನೇ ದೂತೋ ವಿಶಾಮಸಿ ।
ಉಷರ್ಬುಧ ಆ ವಹ ಸೋಮಪೀತಯೇ ದೇವಾँ ಅದ್ಯ ಸ್ವ-
ರ್ದೃಶಃ ॥ ೯ ॥

॥ ಪದಪಾಠಃ ॥

ಪತಿಃ । ಹಿ । ಅಧ್ವರಾಣಾಂ । ಅಗ್ನೇ । ದೂತಃ । ವಿಶಾಂ । ಅಸಿ ।
ಉಷಃऽಬುಧಃ । ಆ । ವಹ । ಸೋಮऽಪೀತಯೇ । ದೇವಾನ್ । ಅದ್ಯ ।
ಸ್ವಃऽದೃಶಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವಿಶಾಂ ಪ್ರಜಾನಾಂ ಸಂಬಂಧಿನೋ ಯೇಽಧ್ವರಾ ಯಾಗಾಸ್ತೇಷಾಂ ಪತಿಃ ಪಾಲಕ-ಸ್ತ್ವಂ ದೂತೋಽಸಿ ಹಿ । ದೇವಾನಾಂ ವಾರ್ತಾಹಾರೋ ಭವಸಿ ಖಲು । ಉಷರ್ಬುಧ ಉಷಃಕಾಲೇ ಪ್ರಬುದ್ಧಾನ್ ಸ್ವರ್ದೃಶಃ ಸೂರ್ಯದರ್ಶಿನೋ ದೇವಾನದ್ಯಾಸ್ಮಿನ್ನಿನೇ ಸೋಮಪೀತಯೇ ಸೋಮಪಾನಾ-

**ರ್ಥಮಾ ವಹ । ಆಭಿಮುಖ್ಯೇನ ಪ್ರಾಪಯ ॥ ಅಸಿ । ಹಿ ಚೇತಿ ನಿಘಾತಪ್ರತಿಷೇಧಃ । ಸೋಮಪೀತಯೇ । ಪಾ ಪಾನೇ । ಸ್ಥಾಗಾಪಾಪಚೋ ಭಾವ ಇತಿ ಭಾವೇ ಕ್ತಿನ್ । ಘುಮಾಸ್ಥೇತೀತ್ವಂ । ಸೋಮಸ್ಯ ಪೀತಿಃ । ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ । ಸ್ವರ್ದೃಶಃ । ಸುಷ್ಠ್ವರ್ತಿ ಗಚ್ಛತೀತಿ ಸ್ವರಾದಿತ್ಯಃ । ಅರ್ತೇರನ್ಯೇಭ್ಯೋಽಪಿ ದೃಶ್ಯಂತ ಇತಿ ವಿಚ್ । ತಂ ಪಶ್ಯಂತೀತಿ ಸ್ವರ್ದೃಶಃ । ಕ್ವಿಪ್ಚೇತಿ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ ॥**

ಪ್ರತಿಪದಾರ್ಥ

**ಅಗ್ನೇ**— ಎಲೈ ಅಗ್ನಿಯೇ । (ನೀನು) । **ವಿಶಾಂ**— ಪ್ರಜೆಗಳ । **ಅಧ್ವರಾಣಾಂ**— ಯಜ್ಞಗಳಿಗೆ **ಪತಿಃ**— ಪಾಲಕನಾಗಿಯೂ । **ದೂತಃ**— (ದೇವ) ದೂತನಾಗಿಯೂ । **ಅಸಿ ಹಿ**— ಇರುವೆಯಷ್ಟೆ. । **ಉಷರ್ಬುಧಃ**— ಉಷಃಕಾಲದಲ್ಲಿ ಎದ್ದವರೂ । **ಸ್ವರ್ದೃಶಃ**—ಸೂರ್ಯನನ್ನವಲೋಕಿಸುತ್ತಿರುವವರೂ ಆದ । **ದೇವಾನ್**— ದೇವತೆಗಳನ್ನು । **ಅದ್ಯ**— ಇಂದು । **ಸೋಮಪೀತಯೇ**—ಸೋಮರಸಪಾನಕ್ಕಾಗಿ । **ಆ ವಹ**— (ನಮಗೆ) ಅಭಿಮುಖವಾಗಿ ಕರೆದುಕೊಂಡು ಬಾ. ।

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಪ್ರಜೆಗಳ ಯಜ್ಞಪಾಲಕನು ಮತ್ತು ದೇವದೂತನು. ಆದುದರಿಂದ ದೇವತೆಗಳಿಗೂ ಮತ್ತು ಮನುಷ್ಯರಿಗೂ ಸಮಾನವಾದ ಉಪಕಾರಕನು. ದೇವತೆಗಳು ಉಷಃಕಾಲದಲ್ಲೆದ್ದು ಸೂರ್ಯದೇವನನ್ನವಲೋಕಿಸುತ್ತಿದ್ದಾರೆ. ಆ ದೇವತೆಗಳನ್ನು ಸೋಮರಸಪಾನಕ್ಕಾಗಿ ನಮ್ಮ ಯಜ್ಞಭೂಮಿಗೆ ಕರೆದುಕೊಂಡು ಬಾ.

English Translation

O Agni, you are the protector of the sacrifices of the people and the messenger of the gods; bring hither to-day the gods awaking at dawn and seeing the sun, to drink the Soma-juice.

॥ ವಿಶೇಷವಿಷಯಗಳು ॥

**ಅಧ್ವರಾಣಾಂ ಪತಿಃ—ಯಜ್ಞಾನಾಂ ಪಾಲಕಃ।** ಯಜ್ಞಗಳ ರಕ್ಷಕನು. protector of sacrifices or lord of the sacrifices. ಯಜ್ಞಗಳಿಗೆ ಅಧಿಪತಿಯು. ಯಜ್ಞಗಳಲ್ಲಿ ಅಗ್ನಿಗೇ ಪ್ರಾಧಾನ್ಯವಿರುವುದರಿಂದ ಅಗ್ನಿಯನ್ನು ಯಜ್ಞಪತಿ ಎಂದು ಹೇಳುವರು.

**ವಿಶಾಂ— ಪ್ರಜಾನಾಂ ಸಂಬಂಧಿನೋ ಯೇ ಅಧ್ವರಾಸ್ತೇಷಾಂ ।** ಪ್ರಜೆಗಳಿಗೆ ಸಂಬಂಧಪಟ್ಟ ಎಂದರೆ ಪ್ರಜೆಗಳು ಮಾಡುವ ಯಜ್ಞಗಳಿಗೆ ರಕ್ಷಕನು ಎಂದರ್ಥವನ್ನು ಭಾಷ್ಯಕಾರರು ಹೇಳಿರುವರು. ಹೀಗೆ ಹೇಳುವುದಕ್ಕಿಂತ ವಿಶಾಂ ಶಬ್ದಕ್ಕೆ ದೂತಃ ಎಂಬ ಶಬ್ದವನ್ನು ಸಂಬಂಧಮಾಡಿ ದೂತೋ ವಿಶಾಮಸಿ ಎಂಬ ಶಬ್ದಗಳಿಗೆ ನೀನು ದೇವತೆಗಳ ಬಳಿಗೆ ಪ್ರಜೆಗಳ ಪರವಾಗಿ ಹೋಗುವ ದೂತನು ಎಂದು ಹೇಳುವುದು ಯುಕ್ತವೆಂದು ತೋರುವುದು.

**ಉಷರ್ಬುಧಃ**— ಈ ಶಬ್ದದ ವಿವರಣೆಯನ್ನು ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಕೊಟ್ಟಿದ್ದೇವೆ.

**ಸ್ವರ್ದೃಶಃ—ಸುಷ್ಠ್ವರ್ತಿ ಗಚ್ಛತೀತಿ ಸ್ವರಾದಿತ್ಯಃ । ತಂ ಪಶ್ಯಂತೀತಿ ಸ್ವರ್ದೃಶಃ ।** ಅಂತರಿಕ್ಷದಲ್ಲಿ ಗಮನಮಾಡುವವನಾದುದರಿಂದ ಸ್ವಃ ಎಂದರೆ ಆದಿತ್ಯನು. ಅವನನ್ನು ನೋಡುವವರಿಗೆ ಸ್ವರ್ದೃಶಃ ಎಂದು ಹೆಸರು. ದೇವತೆಗಳು ಸ್ವರ್ಗದಲ್ಲಿರುವುದರಿಂದ ಸ್ವರ್ಗದಲ್ಲಿರುವ ಸೂರ್ಯನನ್ನು ನೋಡುವರು. ಅಥವಾ **ಉಷರ್ಬುಧಃ** ಎಂಬ ಶಬ್ದದ ಸಹಿತವಾಗಿ ಅರ್ಥಮಾಡುವುದಾದರೆ ಉಷಃಕಾಲದಲ್ಲೆದ್ದು ಸೂರ್ಯನು ಉದಯವಾಗುವ ಸಮಯದಲ್ಲಿ ಸೂರ್ಯನನ್ನು ನೋಡುತ್ತಿರುವ ದೇವತೆಗಳನ್ನು ಎಂಬರ್ಥವನ್ನು ಹೇಳಬಹುದು

॥ ವ್ಯಾಕರಣಪ್ರಕ್ರಿಯಾ ॥

**ಪತಿಃ**—ಪಾ ರಕ್ಷಣೇ. **ಪಾತೇರ್ಡತಿಃ** ಎಂದು ಡತಿ ಪ್ರತ್ಯಯ, ಟಿಲೋಪ. ಪ್ರತ್ಯಯಸ್ವರದಿಂದ ಅನ್ತ್ಯೋದಾತ್ತ.

**ಅಧ್ವರಾಣಾಂ**–ನ ವಿದ್ಯತೇ ಧ್ವರಃ=ಹಿಂಸಾ ಯೇಷು ತೇ ಅಧ್ವರಾಃ ತೇಷಾಂ ಎಂದು ಬಹುವ್ರೀಹಿ **ನಞ್ ಸುಭ್ಯಾಂ** ಎಂದು ಉತ್ತರಪದವು ಅಂತೋದಾತ್ತವಾಗುವುದು.

**ಅಗ್ನೇ**—ಪಾದಾದಿಯಲ್ಲಿದೆ. ಆರನೇ ಅಧ್ಯಾಯದ ಸೂತ್ರದಿಂದ ಆಮನ್ತ್ರಿತಾದ್ಯುದಾತ್ತ ಬರುತ್ತೆ.

**ಅಸಿ**—ಅಸ ಭುವಿ ಅದಾದಿ. ಲಟ್ ಸಿಪ್. ಶಪ್‌ಗೆ ಲುಕ್. **ತಾಸಸ್ತ್ಯೋರ್ಲೋಪಃ** ಎಂದು ಧಾತು ಸಕಾರಕ್ಕೆ ಲೋಪ. **ಹಿಚ** ಎಂದು ಸ್ವರ್ವಾನುದಾತ್ತಕ್ಕೆ ಪ್ರತಿಷೇಧ. ಸಿಪ್ ಪಿತ್ತಾದ್ದರಿಂದ ಅನುದಾತ್ತ.

**ಸೋಮಪೀತಯೇ—ಅರ್ತಿಸ್ತು ಸು ಹು ಸೃ ಘೃ ಕ್ಷಿಕ್ಷು ಭಾ ಯಾ ವಾ ಪದಿ ಯಕ್ಷಿ ನೀ ಭ್ಯೋ ಮನ್** (ಉ. ಸೂ. ೧-೧-೩೭) ಎಂದು ಷುಞ್ ಅಭಿಷವೇ ಧಾತು ಮುಂದೆ ಮನ್ ಪ್ರತ್ಯಯ. ಗುಣ ಸೋಮ ಎಂದಾಯಿತು. ಪಾ. ಪಾನೇ. **ಸ್ಥಾ ಗಾ ಪಾ ಪಚೋ ಭಾವೇ** (ಪಾ ಸೂ. ೩-೩-೯೫) ಈ ಧಾತುಗಳ ಮುಂದೆ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ಘುಮಾಸ್ಥಾಗಾಪಾಜಹಾತಿಸಾಂ ಹಲಿ** (ಪಾ. ಸೂ. ೬-೪-೬೬) ಹಲಾದಿಯಾಗಿದ್ದು ಕಿತ್-ವಾ ಙಿತ್ ಆದ ಆರ್ಧಧಾತುಕ ಪ್ರತ್ಯಯ ಪರದಲ್ಲಿದ್ದರೆ ಇವುಗಳ ಆಕಾರಕ್ಕೆ ಈಕಾರ ಬರುತ್ತೆ ಎಂದು ಈಕಾರ ಬರುತ್ತೆ. ಪೀತಿ ಎಂದಾಗುತ್ತೆ. ಸೋಮಸ್ಯ ಪೀತಿಃ ಸೋಮಪೀತಿಃ ಎಂದು ಷಷ್ಠೀ ತತ್ಪುರುಷ. **ಕುರುಗಾರ್ಹಪತ ರಿಕ್ತಗುರ್ವ-ಸೂತ ಜರತ್ಯಶ್ಲೀಲ ದೃಢರೂಪಾ ಪಾರೇವಡವಾ ತೈತಿಲಕದ್ರೂಃ ಪಣ್ಯಕಂಬಲೋ ದಾಸೀಭಾರಾಣಾಂ ಚ** (ಪಾ. ಸೂ. ೬-೨-೪೨) ಈ ಏಳು ಸಮಾಸಗಳ ಮತ್ತು ದಾಸೀಭಾರಾದಿಗಣಕ್ಕೆ ಸೇರಿದವುಗಳು ಆದ ಶಬ್ದಗಳ ಪೂರ್ವ ಪದವು ಪ್ರಕೃತಿಸ್ವರವನ್ನು ಹೊಂದುತ್ತೆ ಎಂದು ಪೂರ್ವಪದ ಪ್ರಕೃತಿಸ್ವರ ಬರುತ್ತೆ, ಪೂರ್ವಪದವು ನಿತ್ಸ್ವರ ದಿಂದ ಆದ್ಯುದಾತ್ತ. ಆದ್ದರಿಂದ ಅದೇ ನಿಲ್ಲುತ್ತೆ.

**ಸ್ವರ್ದೃಶಃ**—ಸುಷ್ಠು ಅರ್ತಿ=ಗಚ್ಛತಿ ಇತಿ ಸ್ವಃ ಎಂದರೆ ಆದಿತ್ಯ ಎಂದು ಅರ್ಥ. ಸುಷ್ಠು=ಚೆನ್ನಾಗಿ, ಅರ್ತಿ=ಹೋಗುವನು ಎಂದು ವಿಗ್ರಹವಾಕ್ಯದ ಅರ್ಥ. ಸು ಶಬ್ದೋಪಪದಕವಾದ ಋ ಗತೌ ಧಾತು ಮುಂದೆ **ಅನ್ಯೇ-**

**ಭ್ಯೋಽಪಿ ದೃಶ್ಯನ್ತೇ** (ಪಾ. ಸೂ. ೩-೨-೭೫) ಮನಿನ್, ಕ್ವನಿಪ್, ವನಿಪ್, ವಿಚ್ ಈ ನಾಲ್ಕು ಪ್ರತ್ಯಯಗಳು ಧಾತುಗಳ ಮುಂದೆ ಬರುವುವು ಎಂದು ವಿಚ್‌ಪ್ರತ್ಯಯ. **ಸಾರ್ವಧಾತುಕಾ—,** ಎಂದು ಗುಣವು ರಪರವಾಗಿ ಬರುತ್ತೆ ಸು+ಆರ್. ಯಣಾದೇಶ, ಸ್ವರ್ ಎಂದಾಯಿತು. ಸ್ವರ ಪಶ್ಯನ್ತಿ ಎಂದು ವಿಗ್ರಹ. **ಕ್ವಿಪ್ ಚ** ಎಂದು ದೃಶಿರ್ ಪ್ರೇಕ್ಷಣೇ ಧಾತುಮುಂದೆ ಕ್ವಿಪ್, ಸ್ವರ್ದೃಶ್. **ಗತಿಕಾರಕೋಪಪದಾತ್ಕೃತ್** ಎಂದು ಕೃದಂತವಾದ ಉತ್ತರಪದಕ್ಕೆ ಪ್ರಕೃತಿಸ್ವರ ಬರುತ್ತೆ. ದ್ವಿತೀಯಾಬಹುವಚನ ಶಸ್ ಸ್ವರ್ದೃಶಃ ಎಂದು ರೂಪವಾಗುತ್ತೆ. ॥೯॥



॥ ಸಂಹಿತಾಪಾಠಃ ॥

ಅಗ್ನೇ ಪೂರ್ವಾ ಅನೂಷಸೋ ವಿಭಾವಸೋ ದೀದೇಥ ವಿಶ್ವ-
ದರ್ಶತಃ ।
ಅಸಿ ಗ್ರಾಮೇಷ್ವವಿತಾ ಪುರೋಹಿತೋಽಸಿ ಯಜ್ಞೇಷು ಮಾ-
ನುಷಃ ॥

॥ ಪದಪಾಠಃ ॥

ಅಗ್ನೇ । ಪೂರ್ವಾಃ । ಅನು । ಉಷಸಃ । ವಿಭಾಽವಸೋ ಇತಿ ವಿ-
ಭಾಽವಸೋ । ದೀದೇಥ । ವಿಶ್ವಽದರ್ಶತಃ ।
ಅಸಿ । ಗ್ರಾಮೇಷು । ಅವಿತಾ । ಪುರಃಽಹಿತಃ । ಅಸಿ । ಯಜ್ಞೇಷು ।
ಮಾನುಷಃ । ॥೧೦॥

॥ ಸಾಯಣಭಾಷ್ಯಂ ॥

**ಹೇ ವಿಭಾವಸೋ ವಿಶಿಷ್ಟಪ್ರಕಾಶನರೂಪಧನವನ್ನಗ್ನೇ ವಿಶ್ವದರ್ಶತಃ ಸರ್ವೈರ್ದರ್ಶನೀಯಸ್ತ್ವಂ। ಪೂರ್ವಾ ಉಷಸೋಽನು ಅತೀತಾನುಷಃಕಾಲಾನನುಲಕ್ಷ್ಯ ದೀದೇಥ। ದೀಪ್ತವಾನಸಿ। ತಾದೃಶಸ್ತ್ವಂ ಗ್ರಾಮೇಷು ಜನನಿವಾಸಸ್ಥಾನೇಷ್ವವಿತಾಸಿ। ರಕ್ಷಕೋ ಭವಸಿ। ಯಜ್ಞೇಷ್ವನುಷ್ಠೇಯೇಕರ್ಮಸು ಪುರೋಹಿತೋ ವೇದೇಃ ಪೂರ್ವಸ್ಯಾಂ ದಿಶ್ಯವಸ್ಥಿತೋ ಮಾನುಷೋಽಸಿ। ಋತ್ವಿಗ್ಯಜಮಾನಾನಾಂ ಮನುಷ್ಯಾಣಾಂ ಹಿತೋಽಸಿ॥ ದೀದೇಥ। ದೀದೇತಿಶ್ಛಾಂದಸೋ ದೀಪ್ತಿಕರ್ಮಾ। ಆಗಮಾನುಶಾಸನಸ್ಯಾನಿತ್ಯತ್ವಾದಿಡಭಾವಃ। ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಂ। ಕಾ. ೬-೧ ೮-೧। ಇತಿ ವಚನಾದ್ದ್ವಿರ್ವಚನಾಭಾವಃ। ವಿಶ್ವದರ್ಶತಃ। ವಿಶ್ವೈರ್ದರ್ಶನೀಯಃ। ಭೃಮೃದೃಶೀತ್ಯಾದಿನಾ ದೃಶೇರತಚ್। ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ। ಪಾ. ೬-೨-೧೦೬-೨। ಪುರೋಹಿತಃ। ಪೂರ್ವಾಧರಾವರಾಣಾಮಸಿ ಪುರಧವಶ್ಚೈಷಾಮಿತ್ಯಸಿಪ್ರತ್ಯಯಾಂತಃ ಪುರಸ್‌ಶಬ್ದಃ। ತದ್ಧಿತಶ್ಚಾಸರ್ವವಿಭಕ್ತಿರಿತ್ಯವ್ಯಯತ್ವಾತ್ ಪುರೋಽವ್ಯಯಂ। ಪಾ. ೧-೪-೬೭। ಇತಿ ಗತಿಸಂಜ್ಞಾಯಾಂ ಸತ್ಯಾಂ ಗತಿಸಮಾಸೇ ಗತಿರನಂತರ ಇತಿ ಪೂರ್ವಪದಪ್ರಕೃತಿಸ್ವರತ್ವಂ ॥ ೨೯ ॥**

॥ ಪ್ರತಿಪದಾರ್ಥ ॥

**ವಿಭಾವಸೋ**—ಸಕಲವನ್ನೂ ಪ್ರಕಾಶಗೊಳಿಸುವ ತೇಜೋಧನವುಳ್ಳವನಾದ। **ಅಗ್ನೇ**—ಅಗ್ನಿಯೇ। **ವಿಶ್ವದರ್ಶತಃ**—ಸಕಲರ ಕಣ್ಣಿಗೂ ಗೋಚರನಾಗತಕ್ಕ (ನೀನು)। **ಪೂರ್ವಾಃ ಉಷಸಃ ಅನು**—ಅತೀತಗಳಾದ ಹಿಂದಿನ ಅನೇಕ ಉಷಃಕಾಲಗಳನ್ನು। **ದೀದೇಥ**—ಬೆಳಗಿಸಿದ್ದೀಯೆ (ಅಂತಹ ನೀನು)। **ಗ್ರಾಮೇಷು**—(ಜನಗಳು ವಾಸಮಾಡುವ) ಗ್ರಾಮಗಳಲ್ಲಿ। **ಅವಿತಾ**—ರಕ್ಷಕನಾಗಿ। **ಅಸಿ**—ಆಗಿದ್ದೀಯೆ। **ಯಜ್ಞೇಷು**—ಯಜ್ಞಕರ್ಮಗಳಲ್ಲಿ। **ಪುರೋಹಿತಃ**—ಯಜ್ಞವೇದಿಕೆಯ ಪೂರ್ವಭಾಗದಲ್ಲಿ ಕುಳಿತು। **ಮಾನುಷಃ**—(ಋತ್ವಿಕ್ಕುಗಳೂ ಮತ್ತು ಯಜಮಾನರೂ ಆದ) ಮಾನವರ ಹಿತಕಾರಿಯಾಗಿ। **ಅಸಿ**—ಆಗಿದ್ದೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನ ತೇಜೋಮಹಿಮೆಯಿಂದ ನೀನು ಲೋಕದಲ್ಲಿ ಸಕಲವನ್ನೂ ಪ್ರಕಾಶಗೊಳಿಸುವುದು ಮಾತ್ರವಲ್ಲದೆ ಸಕಲ ಜನರಿಗೂ ಗೋಚರನಾಗತಕ್ಕವನು. ಹಿಂದೆ ಅತೀತವಾದ ಸಹಸ್ರಾರು ಉಷಃಕಾಲಗಳನ್ನು ನಿನ್ನ ತೇಜಸ್ಸಿನಿಂದ ಬೆಳಗಿದ್ದೀಯೆ. ಅಂತಹ ಮಹಿಮೆಯುಳ್ಳ ನೀನು ಮಾನವರು ವಾಸಮಾಡುವ ಪ್ರತಿಯೊಂದು ಗ್ರಾಮಗಳಿಗೂ ರಕ್ಷಕನಾಗಿರುವೆ. ಅಂತಹ ರಕ್ಷಕನಾದ ನೀನು ನಮ್ಮ ಯಜ್ಞಕರ್ಮಗಳಲ್ಲಿ ಪುರೋಹಿತನಾಗಿ ಎಂದರೆ ಯಜ್ಞವೇದಿಕೆಯ ಪೂರ್ವ ಭಾಗದಲ್ಲಿ ಕುಳಿತು ಋತ್ವಿಕ್ಕುಗಳೂ ಯಜಮಾನರೂ ಆದ ಮಾನವರ ಹಿತಕಾರಿಯಾಗಿಯೂ ಆಗಿರುವೆ.

## English Translation

Resplendent Agni, visible to all, you have always shone after many preceding dawns, you are the protector of peope in villages, and you are placed in front (on the east side of the altar) for the benefit of man.

### ವಿಶೇಷವಿಷಯಗಳು

**ಅನು ಉಷಸಃ**— ಉಷಃಕಾಲಗಳ ಅನಂತರ, ಎಂದರೆ ಪ್ರತಿದಿವಸ ಉಷಃಕಾಲಾನಂತರ, ಸೂರ್ಯೋದಯಕ್ಕೆ ಪೂರ್ವದಲ್ಲಿ.

**ವಿಭಾವಸೋ— ವಿಶಿಷ್ಟಪ್ರಕಾಶನರೂಪಧನವನ್ ।** ವಿಶಿಷ್ಟವಸ್ತುಗಳನ್ನು ಪ್ರಕಾಶಗೊಳಿಸುವ ಸಾಮರ್ಥ್ಯವುಳ್ಳವನು. ಆ ಸಾಮರ್ಥ್ಯವೇ ಧನವಾಗಿವುಳ್ಳವನು ಎಂದರೆ ಚೆನ್ನಾಗಿ ಪ್ರಕಾಶಿಸುವವನು, ದೇದೀಪ್ಯಮಾನನಾಗಿ ಬೆಳಗುವವನು

**ದೀದೇಥ— ದೀದೇತಿಶ್ಛಾಂದಸೋ ದೀಪ್ತಿಕರ್ಮಾ**— ಪ್ರಕಾಶಿಸುತ್ತೀಯೆ. ಬೆಳಗುತ್ತೀಯೆ.
**ವಿಶ್ವದರ್ಶತಃ— ಸರ್ವೈರ್ದರ್ಶನೀಯಃ ।** ಸಕಲರಿಂದಲೂ ನೋಡಲ್ಪಡುವವನು ಎಂದರೆ ಸಕಲರೂ ನಿನ್ನನ್ನು ನೋಡುವರು ಅಂತಹ ನೀನು

**ಪುರೋಹಿತಃ – ವೇದೇಃ ಪೂರ್ವಸ್ಯಾಂ ದಿಶ್ಯವಸ್ಥಿತೋ ಮಾನುಷೋಽಸಿ ।** ಯಜ್ಞವೇದಿಯ ಪೂರ್ವದಿಕ್ಕಿನಲ್ಲಿ ಆಹವನೀಯ ರೂಪದಲ್ಲಿ ಪ್ರತಿಷ್ಠಿತನಾಗಿರುವೆ ; ಯಜ್ಞದ ಮುಂದುಗಡೆ ಇರುವವನು. ಈ ಶಬ್ದದ ವಿವರಣೆಯನ್ನು ಪ್ರಥಮ ಮಂಡಲದ ಪ್ರಥಮ ಸೂಕ್ತದ ಪ್ರಥಮ ಋಕ್ಕಿನ ವಿಶೇಷ ವಿಷಯಗಳಲ್ಲಿ ಋಗ್ವೇದ ಸಂಹಿತಾ ಭಾಗ ೧ ಪೇಜು 614-615ರಲ್ಲಿ ಕೊಟ್ಟಿರುವುದನ್ನು ನೋಡಿ.

**ಮಾನುಷಃ— ಋತ್ವಿಗ್ಯಜಮಾನಾನಾಂ ಮನುಷ್ಯಾಣಾಂ ಹಿತೋಽಸಿ ।** ಋತ್ವಿಗ್ಯಜಮಾನರಾದಿಯಾದ ಜನರಿಗೆ ಹಿತವನ್ನುಂಟುಮಾಡುವೆ ಎಂದು ಭಾಷ್ಯಕಾರರು ಮಾನುಷಃ ಎಂಬ ಶಬ್ದಕ್ಕೆ ಅರ್ಥವಿವರಣೆಮಾಡಿರುವರು ಆದರೆ **ಪುರೋಹಿತೋಽಸಿ ಯಜ್ಞೇಷು ಮಾನುಷಃ** ಎಂಬ ಶಬ್ದಗಳಿಗೆ ಸಾಮೂಹಿಕವಾಗಿ—ಮನುಷ್ಯರ ಎಂದರೆ ಮನುಷ್ಯರು ಮಾಡುವ ಯಜ್ಞಗಳಲ್ಲಿ ನೀನು ಪುರೋಹಿತನಾಗಿರುವೆ. ಪುರೋಹಿತನೆಂದರೆ ಅಗ್ರಸ್ಥಾನದಲ್ಲಿ ಪ್ರತಿಷ್ಠಿಸಲ್ಪಟ್ಟಿರುವೆ, ಅಥವಾ ಯಜ್ಞವೇದಿಯಲ್ಲಿ ಪೂರ್ವದಿಕ್ಕಿನಲ್ಲಿರುವ ಆಹವನೀಯವೆಂಬ ಅಗ್ನಿಕುಂಡದಲ್ಲಿ ಪ್ರತಿಷ್ಠಿತನಾಗಿರುವೆ ಎಂಬ ಅರ್ಥವನ್ನು ಹೇಳಿದರೆ ಅರ್ಥವು ಸರಿಯಾಗಿ ಹೊಂದುವುದು.

### ॥ ವ್ಯಾಕರಣಪ್ರಕ್ರಿಯಾ ॥

**ದೀದೇಥ**—ದೀದೀ ದೀಪ್ತೌ. ಇದು ಛಂದಸ್ಸಿನಲ್ಲಿ ಮಾತ್ರವೇ ಪ್ರಯುಕ್ತವಾದ ಧಾತು. ಲಿಟ್ ಸಿಪ್, **ಪರಸ್ಮೈಪದಾನಾಂ ಣ ಲತುಸುಸ್ಥ್ ಲಣಲ್ವಮಾಃ** ಎಂದು ಸಿಪ್‌ಗೆ ಥಲ್. **ದ್ವಿರ್ವಚನಪ್ರಕರಣೇ ಛಂದಸಿ ವೇತಿವಕ್ತವ್ಯಂ** (ಕಾಶಿ ೬-೧-೮-೧) ಎಂದು ಕಾಶಿಕೆಯಲ್ಲಿ ಹೇಳಿರುವುದರಿಂದ **ಲಿಟಿಧಾತೋ—,** ಎಂಬುದರಿಂದ ದ್ವಿತ್ವ ಬರುವುದಿಲ್ಲ. **ಆಗಮಶಾಸ್ತ್ರಮನಿತ್ಯಂ** (ಪರಿಭಾ ೯೬) ಎಂದು ಹೇಳುವುದರಿಂದ **ಆರ್ಧಧಾತುಕಸ್ಯೇಡ್ವ-**

**ಲಾದೇಃ** ಎಂಬುದರಿಂದ ಪ್ರಾಪ್ತವಾಗುವ ಇಟ್‌ಆಗಮವೂ ಬರುವುದಿಲ್ಲ. ಗುಣ-ದೀರ್ಘ ಎಂದು ಆಗುತ್ತೆ. ಪಾದಾದಿಯಲ್ಲಿರುವುದರಿಂದ ಸರ್ವಾನುದಾತ್ತ ಬರುವುದಿಲ್ಲ. **ಧಾತೋಃ** ಎಂದು ಬರುವ ಅಂತೋದಾತ್ತವೇ ನಿಲ್ಲುತ್ತೆ.

**ವಿಶ್ವದರ್ಶತಃ**— ವಿಶ ಪ್ರವೇಶನೇ. **ಅಶೂ ಪ್ರುಷಿ—,** ಎಂಬ ಉಣಾದಿಸೂತ್ರದಿಂದ ಕ್ವನ್‌ಪ್ರತ್ಯಯ ಬರುತ್ತೆ. ನಿತ್ಸ್ವರದಿಂದ ಇದು ಆದ್ಯುದಾತ್ತ. ದೃಶಿರ್‌ಪ್ರೇಕ್ಷಣೇ **ಭೃಮೃದೃಶಿ ಯಜಿಪರ್ವಿ ಪಚ್ಯಮಿತಮಿನಮಿ ಹರ್ಯಿಭ್ಯೋಽತಚ್** (ಉ. ಸೂ. ೩-೩೯೦) ಎಂಬುದರಿಂದ ಅತಚ್‌ಪ್ರತ್ಯಯ, ದೃಶ್+ಅತ, ಗುಣ ವಿಶ್ವೈಃ ದರ್ಶತಂ=ದರ್ಶನೀಯಃ, ಎಂದರೆ ಎಲ್ಲರಿಂದಲೂ ನೋಡಲು ಯೋಗ್ಯನಾದವನು. ಅನ್ತೋದಾತ್ತಪ್ರಕರಣೇ **ಮರುದ್ವೃಧಾದೀನಾಂ ಛಂದಸ್ಯುಪಸಂಖ್ಯಾನಂ** (ಪಾ. ಸೂ. ೬-೨-೧೦೬-೨) ಎಂಬುದರಿಂದ ಪೂರ್ವಪದಕ್ಕೆ ಅಂತೋದಾತ್ತ ಬರುತ್ತೆ.

**ಪುರೋಹಿತಃ—ಪೂರ್ವಾಧರಾವರಾಣಾ ಮಸಿ ಪುರಧವಶ್ಚೈಷಾಮ್** (ಪಾ. ಸೂ. ೫-೪-೩-೯) ಪೂರ್ವ-ಅಧರ-ಅವರ ಈ ಶಬ್ದಗಳ ಮುಂದೆ ಇವು ದಿಕ್, ದೇಶ, ಅಥವಾ ಕಾಲ ಎಂಬ ಅರ್ಥದಲ್ಲಿರುವಾಗ ಅಸಿ ಪ್ರತ್ಯಯ ಬರುತ್ತೆ. ಅಲ್ಲದೆ ಪೂರ್ವಶಬ್ದಕ್ಕೆ ಪುರ್, ಅಧರಶಬ್ದಕ್ಕೆ ಅಧ್, ಅವರಶಬ್ದಕ್ಕೆ ಅವ್ ಆದೇಶ ಬರುತ್ತೆ ಎಂದು ಅರ್ಥ. ಇಲ್ಲಿ ಪೂರ್ವಶಬ್ದದ ಮುಂದೆ ಅಸಿ ಪ್ರತ್ಯಯ ಬಂದರೆ ಪೂರ್ವಶಬ್ದಕ್ಕೆ ಪುರ್ ಆದೇಶ ಬಂದು ಪುರ್+ಅಸ್= ಪುರಸ್ ಎಂದು ಆಗುತ್ತೆ. **ತದ್ಧಿತಶ್ಚಾಸರ್ವವಿಭಕ್ತಿಃ** (ಪಾ. ಸೂ. ೧-೧೩೮) ಯಾವ ತದ್ಧಿತ ಪ್ರತ್ಯಯಾಂತದ ಮುಂದೆ ವಚನತ್ರಯಾತ್ಮಕವಾದ ವಿಭಕ್ತಿಯು ಬರುವುದಿಲ್ಲವೋ ಅಂತಹ ತದ್ಧಿತಾಂತವು ಅವ್ಯಯಸಂಜ್ಞೆಯನ್ನು ಹೊಂದುತ್ತೆ ಎಂದು ಸೂತ್ರಾರ್ಥ. ಇದರಿಂದ ಪುರಸ್ ಎಂಬ ತದ್ಧಿತಾಂತವು ಅವ್ಯಯಸಂಜ್ಞೆಯನ್ನು ಹೊಂದುತ್ತೆ. ಶಸ್‌ಪ್ರಭೃತಯಃ ಸಮಾಸಾಂತಾಃ ಎಂದರೆ **ಬಹ್ವಲ್ಪಾರ್ಥಾಚ್ಛಸ್‌ಕಾರಕಾದನ್ಯತರಸ್ಯಾಂ** (ಪಾ. ಸೂ. ೫-೪-೪೨) ಎಂದು ಆರಂಭಿಸಿ **ಸಮಾಸಾಂತಾಃ** (ಪಾ. ಸೂ. ೫-೪-೬೮) ಎಂಬ ಸೂತ್ರದವರೆಗೆ ವಿಹಿತವಾದ ತದ್ಧಿತಪ್ರತ್ಯಯಗಳು ಪರಿಗಣನೆಯಲ್ಲಿ ಸೇರಿವೆ. ಆದ್ದರಿಂದ ಅಸಿಯೂ ಪರಿಗಣಿತವಾಗುತ್ತೆ. **ಪುರೋಽವ್ಯಯಂ** (ಪಾ. ಸೂ. ೧-೪-೬೭) ಅವ್ಯಯಸಂಜ್ಞಿಕವಾದ ಪುರಸ್ ಶಬ್ದವು ಗತಿಸಂಜ್ಞೆಯನ್ನು ಹೊಂದುತ್ತೆ ಎಂದು ಗತಿಸಂಜ್ಞೆ ಬರುತ್ತೆ. **ಕುಗತಿ ಪ್ರಾದಯಃ** ಎಂಬುದರಿಂದ ಹಿತಶಬ್ದದೊಂದಿಗೆ ಗತಿಸಮಾಸ ಬರುತ್ತೆ. **ಗತಿರನಂತರಃ** (ಪಾ. ಸೂ. ೬-೨-೪೯) ಕರ್ಮಣಿಕ್ತ ಪ್ರತ್ಯಯಾಂತವು ಪರದಲ್ಲಿದ್ದರೆ ಅನಂತರವಾದ ಗತಿಯು ಪ್ರಕೃತಿಸ್ವರವನ್ನು ಹೊಂದುತ್ತೆ ಎಂದು ಪೂರ್ವಪದಕ್ಕೆ ಪ್ರಕೃತಿಸ್ವರ ಬರುತ್ತೆ. ಪುರಸ್‌ಶಬ್ದವು ಪ್ರತ್ಯಯಸ್ವರದಿಂದ ಅಂತೋದಾತ್ತ. ಧಾಞ್ ಧಾತುಮುಂದೆ ಕ್ತಪ್ರತ್ಯಯ **ದಧಾತೇರ್ಹಿಃ** (ಪಾ. ಸೂ. ೭-೪-೪೨) ಎಂದು ಧಾಗೆ ಹಿ ಆದೇಶ. ಹಿತ ಎಂದು ಆಗುತ್ತೆ. ||೧||



ಸಂಹಿತಾಪಾಠಃ

ನಿ ತ್ವಾ ಯಜ್ಞಸ್ಯ ಸಾಧನಮಗ್ನೇ ಹೋತಾರಮೃತ್ವಿಜಂ ।
ಮನುಷ್ವದ್ದೇವ ಧೀಮಹಿ ಪ್ರಚೇತಸಂ ಜೀರಂ ದೂತಮ-
ಮರ್ತ್ಯಂ ॥ ॥೧೧॥

ಪದಪಾಠಃ

ನಿ । ತ್ವಾ । ಯಜ್ಞಸ್ಯ । ಸಾಧನಂ । ಅಗ್ನೇ । ಹೋತಾರಂ । ಋತ್ವಿಜಂ ।
ಮನುಷ್ವತ್ । ದೇವ । ಧೀಮಹಿ । ಪ್ರಽಚೇತಸಂ ॥ ಜೀರಂ । ದೂತಂ ।
ಅಮರ್ತ್ಯಂ ॥ ॥ ೧೧ ॥

ಸಾಯಣಭಾಷ್ಯಂ

ಹೇ ಅಗ್ನೇ ದೇವ ಮನುಷ್ವತ್ ಯಥಾ ಮನುರ್ಯಾಗದೇಶೇ ನಿದಧಾತಿ ತದ್ವದ್ವಯಂ ತ್ವಾಂ ನಿ ಧೀಮಹಿ । ಅತ್ರ ಸ್ಥಾಪಯಾಮಃ । ಕೀದೃಶಂ । ಯಜ್ಞಸ್ಯ ಸಾಧನಂ ಯಜ್ಞನಿಷ್ಪಾದಕಂ ಹೋತಾರಮೃತ್ವಿಜಂ ಋತೌ ವಸಂತಾದಿಕೇ ಯಷ್ಟಾರಂ ಪ್ರಚೇತಸಂ ಪ್ರಕೃಷ್ಟಜ್ಞಾನಯುಕ್ತಂ ಜೀರಂ ಶತ್ರೂಣಾಂ ವಯೋಹಾನಿಕರಂ ದೂತಂ ದೇವಾನಾಂ ದೂತಸ್ಥಾನೀಯಂ ಅಮರ್ತ್ಯಂ ಮರಣರಹಿತಂ ॥ ಮನುಷ್ವತ್ । ಔಣಾದಿಕೋಽಸಿಪ್ರತ್ಯಯಾಂತೋ ಮನಸ್ಶಬ್ದಃ । ತೇನ ತುಲ್ಯಂ ಕ್ರಿಯಾ ಚೇದ್ವತಿಃ । ಪಾ. ೫-೧-೧೧೫ । ಇತಿ ವತಿಪ್ರತ್ಯಯಃ । ಅಯಸ್ಮಯಾದಿತ್ವೇನ ಭತ್ವಾದ್ರುತ್ವಾದ್ಯಭಾವಃ । ಧೀಮಹಿ । ಡುಧಾಞ್ ಧಾರಣಪೋಷಣಯೋಃ । ಲಿಙ್ಯಭ್ಯಾಸಲೋಪಶ್ಛಾಂದಸಃ । ಜೀರಂ । ಜು ಇತಿ ಸೌತ್ರೋ ಧಾತುಃ । ಜೋರೀ ಚ । ಉ. ೨-೨೩ । ಇತಿ ರಕ್ಪ್ರತ್ಯಯಃ । ಕಾತ್ಯಾಯನಸ್ತ್ವಾಹ । ರಕಿ ಜ್ಯಃ ಸಂಪ್ರಸಾರಣೇ ಜೀರ ಇತಿ ॥

ಪ್ರತಿಪದಾರ್ಥ

**ಅಗ್ನೇ ದೇವ**— ಎಲೈ ಅಗ್ನಿದೇವನೇ । **ಯಜ್ಞಸ್ಯ ಸಾಧನಂ**— ಯಜ್ಞಸಂಪಾದಕನಾಗಿಯೂ । **ಹೋತಾರಮೃತ್ವಿಜಂ**— ವಸಂತಾದಿ ಋತುಗಳಲ್ಲಿ ಯಜ್ಞಮಾಡುವವನಾಗಿಯೂ । **ಪ್ರಚೇತಸಂ**—ಶ್ರೇಷ್ಠವಾದ ಜ್ಞಾನದಿಂದ ಕೂಡಿದವನಾಗಿಯೂ । **ಜೀರಂ**— ಶತ್ರುಗಳ ಆಯಸ್ಸನ್ನು ನಾಶಮಾಡುವವನಾಗಿಯೂ । **ದೂತಂ**-

ದೇವ ದೂತನಾಗಿಯೂ । **ಅಮರ್ತ್ಯಂ**—ಮರಣರಹಿತನಾಗಿಯೂ ಇರುವ । **ತ್ವಾ**—ನಿನ್ನನ್ನು । **ಮನುಷ್ವತ್**—ಮನುವು ಯಾವರೀತಿ ಯಜ್ಞಭೂಮಿಯಲ್ಲಿ ಸ್ಥಾಪಿಸಿದನೋ ಹಾಗೆ । (**ವಯಂ**—ನಾವು ಕೂಡ) । **ನಿಧೀಮಹಿ**—ಇಲ್ಲಿ ಸ್ಥಾಪಿಸುತ್ತೇವೆ. ।

ಭಾವಾರ್ಥ

ಎಲೈ ಅಗ್ನಿದೇವನೇ, ನೀನು ಯಜ್ಞಸಂಪಾದಕನು. ಶ್ರೇಷ್ಠವಾದ ಜ್ಞಾನಯುಕ್ತನಾಗಿ ವಸಂತಾದಿಋತುಗಳಲ್ಲಿ ಯಜ್ಞಮಾಡುವವನು. ಶತ್ರುಗಳ ಆಯಸ್ಸನ್ನು ನಾಶಮಾಡಿ ನೀನು ಮರಣರಹಿತನಾಗಿರುವವನು. ನೀನು ದೇವದೂತನಾಗಿದ್ದು ಶತ್ರುನಾಶಕನಾಗಿಯೂ ಮಿತ್ರಪೋಷಕನಾಗಿಯೂ ಇದ್ದುದರಿಂದ ಮನುವು ನಿನ್ನನ್ನು ಯಜ್ಞಭೂಮಿಯಲ್ಲಿ ಸ್ಥಾಪಿಸಿದನು. ಅದರಂತೆಯೇ ನಾವೂ ಸಹ ನಿನ್ನನ್ನು ಈ ಯಜ್ಞಭೂಮಿಯಲ್ಲಿ ಸ್ಥಾಪಿಸುತ್ತೇವೆ.

## English Translation

O Agni, we place you as Manu placed you in sacrifical altar ; you are the main factor of the sacrifice, the invoker, the ministering priest, the wise, the destroyer of enemies, immortal and the messenger of gods.

॥ ವಿಶೇಷವಿಷಯಗಳು ॥

**ಯಜ್ಞಸ್ಯ ಸಾಧನಂ**— ಯಜ್ಞಮಾಡುವುದಕ್ಕೆ ಅಗ್ನಿಯು ಅತ್ಯವಶ್ಯಕವಾದುದರಿಂದ ಅಗ್ನಿಯು ಯಜ್ಞಕ್ಕೆ ಮುಖ್ಯಸಾಧನವೆಂದು ಹೇಳಲ್ಪಟ್ಟಿರುವನು.

**ಹೋತಾರಂ, ಋತ್ವಿಜಂ**— ಹೋತಾರಂ ಎಂದರೆ ಯಜ್ಞದಲ್ಲಿ ದೇವತೆಗಳನ್ನು ಆಹ್ವಾನಮಾಡುವವನು ಅಥವಾ ಯಜ್ಞದಲ್ಲಿ ದೇವತಾಹ್ವಾನಕ್ಕಾಗಿ ಮಂತ್ರಗಳನ್ನು ಪಠಿಸುವ ಒಬ್ಬ ಮುಖ್ಯನಾದ ಋತ್ವಿಜನು. ಯಜ್ಞದಲ್ಲಿ ಹೋತೃವಿಗೆ ಬಹಳ ಪ್ರಾಮುಖ್ಯವಾದ ಸ್ಥಾನವಿರುವುದು. ಋತ್ವಿಜಂ ಎಂದರೆ ಯಜ್ಞದಲ್ಲಿ ಭಾಗವಹಿಸುವ ಪುರೋಹಿತರಲ್ಲಿ ಒಬ್ಬನು. ಪ್ರತಿಯಜ್ಞದಲ್ಲಿಯೂ ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮ ಎಂಬ ನಾಲ್ಕುಜನ ಮುಖ್ಯ ಋತ್ವಿಕ್ಕುಗಳಿರುವರು. ಈ ನಾಲ್ಕುಜನರನ್ನೂ ಇನ್ನೂ ಇವರಿಗೆ ಸಹಾಯಕವರ್ಗದವರನ್ನೂ ಋತ್ವಿಜರೆಂದು ಕರೆಯುವ ರೂಢಿ ಇದೆ. ಋತ್ವಿಜಂ ಎಂದಲ್ಲಿ ಇವರಲ್ಲಿ ಯಾರೊಬ್ಬರಾದರೂ ಆಗಬಹುದು. ಈ ಶಬ್ದಗಳ ವಿವರಣೆಗಾಗಿ ಋಗ್ವೇದ ಸಂಹಿತಾ ಭಾಗ ೧ ಪೇಜು 615 ನ್ನು ನೋಡಿ.

**ಮನುಷ್ವತ್**— **ಮನುವತ್** । ಮನುಪ್ರಜಾಪತಿಯು ತಾನು ಮಾಡಿದ ಯಜ್ಞದಲ್ಲಿ ಯಾವರೀತಿ ಅಗ್ನಿಯನ್ನು ಪ್ರತಿಷ್ಠಿಸಿ ಸ್ಥಾಪಿಸಿದನೋ ಅದರಂತ ಎಂದರ್ಥವು.

**ಜೇರಂ—ಜು ಇತಿ ಸೌತ್ರೋ ಧಾತುಃ । ಶತ್ರೂಣಾಂ ವಯೋಹಾನಿಕರಂ** । ಶತ್ರುಗಳ ವಯಸ್ಸನ್ನು ಕಮ್ಮಿಮಾಡುವ, ಕ್ಷಯಿಸುವ.

ವ್ಯಾಕರಣಪ್ರಕ್ರಿಯಾ

**ಯಜ್ಞಸ್ಯ**—ಯಜ ದೇವಪೂಜಾದೌ, **ಯಜಯಾಚಯತ ವಿಚ್ಛ ಪ್ರಚ್ಛ ರಕ್ಷೋ ನಙ್** (ಪಾ. ಸೂ. ೩-೩-೯೦) ಎಂದು ನಙ್ ಪ್ರತ್ಯಯ. ಯಜ್+ನ. **ಸ್ತೋಃಶ್ಚುನಾಶ್ಚುಃ** (ಪಾ. ಸೂ ೮-೪-೪೦) ಎಂದು ನಕಾರ ಞಕಾರ, ಪ್ರತ್ಯಯಸ್ವರ ಬರುತ್ತೆ.

**ಮನುಷ್ವತ್**—ಮನ ಜ್ಞಾನೇ ಔಣಾದಿಕವಾದ ಉಸಿ ಪ್ರತ್ಯಯ. ಮನ್+ಉಸ್=ಮನುಸ್, ಮನುಷಾ ತುಲ್ಯಂ ಎಂದು ವಿಗ್ರಹ. **ತೇನ ತುಲ್ಯಂ ಕ್ರಿಯಾ ಚೇದ್ವತಿಃ** (ಪಾ. ಸೂ. ೫-೧-೧೧೫) ತೃತೀಯಾಂತದ ಮುಂದೆ ತುಲ್ಯಂ ಎಂಬ ಅರ್ಥದಲ್ಲಿ ವತ್‌ಪ್ರತ್ಯಯ ಬರುತ್ತೆ. ಆದರೆ ಯಾವುದು ತುಲ್ಯವೋ ಅದು ಕ್ರಿಯೆಯಾಗಿರಬೇಕು ಎಂದು ಸೂತ್ರದ ಅರ್ಥ. ಮನುಷಾ ತುಲ್ಯಂ ಧೀಮಹಿ ಎಂದು ತುಲ್ಯವಾದುದು ಕ್ರಿಯೆಯಾಗಿದೆ. ಆದ್ದರಿಂದ ವತಿಪ್ರತ್ಯಯ ಬಂದರೆ ಮನುಸ್+ವತ್ **ಅಯಸ್ಮಯಾದೀನಿ ಛಂದಸಿ** (ಪಾ. ಸೂ. ೧-೪-೨೦) ಎಂದು ಭಸಂಜ್ಞೆ ಬರುತ್ತೆ. ಏನಂತ ಪದಸಂಜ್ಞೆ ಇಲ್ಲದೇ ಇರುವುದರಿಂದ **ಸ ಸಜುಷೋರುಃ** ಎಂಬ ಸೂತ್ರದಿಂದ ಪದಸಂಜ್ಞಾನಿಮಿತ್ತಕವಾದ ರುತ್ವ ಬರುವುದಿಲ್ಲ. ಏನಂತ **ಹಶಿ** ಚ ಎಂದು ಉತ್ವವೂ ಬರುವುದಿಲ್ಲ.

**ದೇವ—ನನ್ದಿಗ್ರಹಿ—,** ಎಂದು ಪಚಾದಿಲಕ್ಷಣವಾದ ಅಚ್‌ಪ್ರತ್ಯಯ. ಆಮನ್ತ್ರಿತಾನುದಾತ್ತ ಬರುತ್ತೆ.

**ಧೀಮಹಿ**—ಡುಧಾಞ್ ಧಾರಣಪೋಷಣಯೋಃ, ಲಿಙ್, ಮಹಿಙ್, **ಲಿಙಸ್ಸೀಯುಟ್** ಎಂದು ಸೀಯುಟ್, **ಲಿಙಸ್ಸಲೋಪೋಽನನ್ತ್ಯಸ್ಯ** ಎಂದು ಸಕಾರಕ್ಕೆ ಲೋಪ. **ಲೋಪೋವ್ಯೋರ್ವಲಿ** ಎಂದು ಯಕಾರಕ್ಕೆ ಲೋಪ. ಶಪ್ ಶ್ಲು. **ಶ್ಲೌ** ಎಂದು ದ್ವಿತ್ವ. ಅಭ್ಯಾಸಕ್ಕೆ ಛಾಂದಸವಾಗಿ ಲೋಪ. ಧಾ+ಈಮಹಿ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಕಿತ್ ಅಥವಾ ಙಿತ್ ಆದ ಸಾರ್ವಧಾತುಕವು ಪರವಲ್ಲಿದ್ದರೆ ಶ್ನಾಪ್ರತ್ಯಯ, ಅಭ್ಯಸ್ತ ಇವುಗಳ ಆಕಾರಕ್ಕೆ ಲೋಪ ಬರುತ್ತೆ ಎಂದು ಆಕಾರಕ್ಕೆ ಲೋಪ. ಧ್+ಈಮಹಿ=ಧೀಮಹಿ ಎಂದು ಆಗುತ್ತೆ.

**ಜೀರಮ್**—ಜು ಗತೌ ವೇಗೇ ಚ. ಈ ಧಾತುವು ಧಾತುಪಾಠದಲ್ಲಿ ಇಲ್ಲ. **ಜು ಚಙ್ಕ್ರಮ್ಯ—,** (ಪಾ. ಸೂ. ೩-೨-೧೫೦) ಎಂಬ ಸೂತ್ರದಲ್ಲಿ ಪಾಣಿನ್ಯಾಚಾರ್ಯರು ಹೇಳಿರುವುದರಿಂದ ಸಿದ್ಧವಾಗುತ್ತೆ. ಹೀಗೆ ಸೂತ್ರಗಳಲ್ಲಿ ವ್ಯವಹರಿಸಿರುವುದರಿಂದ ಸಿದ್ಧವಾದವುಗಳಿಗೆ ಸೌತ್ರಧಾತು ಎನ್ನುವರು. **ಜೋರೀಚ** (ಉ ಸೂ ೨-೧೮೧) ಜು ಎಂಬ ಸೌತ್ರಧಾತು ಮುಂದೆ ರಕ್‌ಪ್ರತ್ಯಯವೂ ಧಾತುವಿನ ಕೊನೆಯ ವರ್ಣಕ್ಕೆ ಈಕಾರವೂ ಬರುತ್ತೆ ಎಂದು ಅವು ಬಂದರೆ ಜೀರ ಎಂದಾಗುತ್ತೆ. **ಜ್ಯಶ್ಚ** (ಉ. ಸೂ ೨-೧೮೧) ' ಜೋರೀಚ ' ಎಂಬುದಕ್ಕೆ ಬದಲಾಗಿ ಹೀಗೆ ಸೂತ್ರವನ್ನು ಕೆಲವರು ಪಠಿಸುವರು. ಜ್ಯಾವಯೋಹಾನೌ ಧಾತು ಮುಂದೆ ರಕ್ ಬರುತ್ತೆ ಎಂದು ಈ ಸೂತ್ರದ ಅರ್ಥ. ಜ್ಯಾ+ರ ಎಂದಿರುವಾಗ **ಗ್ರಹಿ ಜ್ಯಾವಯಿ—,** (ಪಾ. ಸೂ. ೬-೧-೧೬) ಎಂದು ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂದು ಪೂರ್ವರೂಪ. **ಹಲಃ** (ಪಾ. ಸೂ. ೬-೪-೨) ಅಂಗಾವಯವವಾದ ವ್ಯಂಜನದ ಮುಂದೆ ಇರುವ ಯಾವ ಸಂಪ್ರಸಾರಣವಿದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ದೀರ್ಘ ಬರುತ್ತೆ

ಎಂದು ದೀರ್ಘ. ಜೀರ ಎಂದು ರೂಪವಾಗುತ್ತೆ. **ನಧಾತುಲೋಪ ಆರ್ಧಧಾತುಕೇ** (ಪಾ. ಸೂ. ೧-೧-೪) ಎಂಬಲ್ಲಿ **ರಕಿಜ್ಯೋಃ ಸಂಪ್ರಸಾರಣಂ** ಎಂದು ವಾರ್ತಿಕವನ್ನು ಕಾತ್ಯಾಯನರು ಹೇಳಿರುವರು. ಏವಂಚ **ಜ್ಯಕ್ಷ್ವ** ಎಂದು ಹೇಳುವುದು ಕಾತ್ಯಾಯನಸಮ್ಮತವಾದ ಪಾಠವೆಂದು ಏರ್ಪಡುತ್ತದೆ. ॥೧೧॥

ಸಂಹಿತಾಪಾಠಃ

ಯದ್ದೇವಾನಾಂ ಮಿತ್ರಮಹಃ ಪುರೋಹಿತೋಽನ್ತರೋ ಯಾಸಿ
ದೂತ್ಯಂ ।
ಸಿಂಧೋರಿವ ಪ್ರಸ್ವನಿತಾಸ ಊರ್ಮಯೋಽಗ್ನೇರ್ಭ್ರಾಜಂತೇ
ಅರ್ಚಯಃ ॥ ೧೨ ॥

ಪದಪಾಠಃ

ಯತ್ । ದೇವಾನಾಂ । ಮಿತ್ರಽಮಹಃ । ಪುರಃಽಹಿತಃ । ಅನ್ತರಃ ।
ಯಾಸಿ । ದೂತ್ಯಂ ।
ಸಿಂಧೋಃಽಇವ । ಪ್ರಽಸ್ವನಿತಾಸಃ । ಊರ್ಮಯಃ । ಅಗ್ನೇಃ । ಭ್ರಾಜಂ-
ತೇ । ಅರ್ಚಯಃ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಮಿತ್ರಮಹೋ ಮಿತ್ರಾಣಾಂ ಪೂಜಕಾಗ್ನೇ ಯದ್ಯದಾ ಪುರೋಹಿತಸ್ತ್ವಂ ವೇದೇಃ ಪೂರ್ವ-ಸ್ಯಾಂ ದಿಶಿ ಸ್ಥಾಪಿತೋಽಂತರೋ ದೇವಯಜನಮಧ್ಯೇ ವರ್ತಮಾನಃ ಸನ್ ದೇವಾನಾಂ ದೂತ್ಯಂ ದೂತ-

ಕರ್ಮ ಯಾಸಿ ಪ್ರಾಪ್ನೋಷಿ ತದಾನೀಮಗ್ನೇಸ್ತವಾರ್ಚಯೋ ದೀಪ್ತಯೋ ಭ್ರಾಜಂತೇ। ದೀಪ್ಯಂತೇ । ತತ್ರ ದೃಷ್ಟಾಂತಃ । ಸಿಂಧೋರಿವ ಯಥಾ ಸಮುದ್ರಸ್ಯ ಪ್ರಸ್ವನಿತಾಸಃ ಪ್ರಕೃಷ್ಟಧ್ವನಿಯುಕ್ತಾ ಊರ್ಮಯಸ್ತ-ರಂಗಾ ಭ್ರಾಜಂತೇ ತದ್ವತ್ ॥ ಮಿತ್ರಮಹಃ । ಮಹ ಪೂಜಾಯಾಂ ಮಿತ್ರೈರ್ಯಜ್ವಭಿರ್ಮಹ್ಯತೇ ಪೂಜ್ಯತ ಇತಿ ಮಿತ್ರಮಹಾಃ। ಔಣಾದಿಕೋಽಸುನ್ । ಯಾಸಿ। ಯದ್ವೃತ್ತಯೋಗಾದನಿಘಾತಃ। ದೂತ್ಯಂ । ದೂತಸ್ಯ ಕರ್ಮ ದೂತ್ಯಂ । ದೂತಸ್ಯ ಭಾಗಕರ್ಮಣೀ । ಪಾ. ೪-೪-೧೨೦ । ಇತಿ ಯತ್ಪ್ರತ್ಯಯಃ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ವಚನಾದ್ಯತೋಽನಾವ ಇತ್ಯಾದ್ಯುದಾತ್ತತ್ವಾಭಾವೇ ತಿತ್ಸ್ವ-ರಿತಮಿತಿ ಸ್ವರಿತತ್ವಂ । ಪ್ರಸ್ವನಿತಾಸಃ । ಸ್ಯಮು ಸ್ವನ ಧ್ವನ ಶಬ್ದೇ । ಭಾವೇ ನಿಷ್ಠಾ । ಪ್ರಕೃಷ್ಟಂ ಸ್ವನಿತಂ ಯೇಷಾಂ ತೇ ಪ್ರಸ್ವನಿತಾಃ । ಅಸುಗಾಗಮಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಊರ್ಮ-ಯಃ । ಅರ್ತೇರೂಚ್ಚ । ಉ. ೪-೪-೪೪ । ಇತಿ ಮಿಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಮಿತ್ರಮಹಃ**— ಋತ್ವಿಕ್ಕುಗಳಿಂದ ಅಥವಾ ಮಿತ್ರಜನರಿಂದ ಪೂಜಿಸಲ್ಪಡುವ ಎಲೈ ಅಗ್ನಿಯೇ । **ಯತ್**-ಯಾವಾಗ । **ಪುರೋಹಿತಃ**— ವೇದಿಕೆಯ ಪೂರ್ವಭಾಗದಲ್ಲಿ ಪುರೋಹಿತನಾಗಿ ಸ್ಥಾಪಿಸಲ್ಪಟ್ಟು । **ಅಂತರಃ**— ಯಜ್ಞಪ್ರದೇಶದ ಮಧ್ಯಭಾಗದಲ್ಲಿದ್ದುಕೊಂಡು । **ದೇವಾನಾಂ**— ದೇವತೆಗಳ । **ದೂತ್ಯಂ**—ದೂತಕರ್ಮವನ್ನು । **ಯಾಸಿ**— ಹೊಂದುತ್ತೀಯೋ (ಆಗ) । **ಅಗ್ನೇಃ**— ಅಗ್ನಿದೇವನಾದ ನಿನ್ನ । **ಅರ್ಚಯಃ**— ಜ್ವಾಲೆಗಳು । **ಸಿಂಧೋಃ**—ಸಮುದ್ರದ । **ಪ್ರಸ್ವನಿತಾಸಃ**— ಗರ್ಜಿಸಿ ಮೊರೆಯುವ ಶಬ್ದದಿಂದ ಕೂಡಿದ । **ಊರ್ಮಯಃ**— ಅಲೆಗಳು (ಪ್ರಕಾಶಿಸುವಂತೆ) । **ಭ್ರಾಜಂತೇ**— ಪ್ರಕಾಶಿಸುತ್ತವೆ. ।

ಭಾವಾರ್ಥ

ಎಲೈ ಅಗ್ನಿದೇವನೇ, ನಿನ್ನನ್ನು ಅನೇಕ ಋತ್ವಿಕ್ಕುಗಳು ಪೂಜಿಸುವರು. ನೀನು ವೇದಿಕೆಯ ಪೂರ್ವಭಾಗದಲ್ಲಿ ಪುರೋಹಿತನಾಗಿ ಸ್ಥಾಪಿಸಲ್ಪಟ್ಟಾಗ, ಯಜ್ಞಪ್ರದೇಶದ ಮಧ್ಯಭಾಗದಲ್ಲಿದ್ದುಕೊಂಡು ದೇವತೆಗಳ ದೂತಕರ್ಮವನ್ನು ಸ್ವೀಕರಿಸುತ್ತೀಯೆ. ಆಗ ಎಲ್ಲಾ ದೇವತೆಗಳಿಗೂ ಅರ್ಪಿಸಿದ ಹವಿಸ್ಸುಗಳನ್ನು ನೀನೇ ವಹಿಸುವುದರಿಂದ ನಿನ್ನ ಜ್ವಾಲೆಗಳು ಬಹಳ ಎತ್ತರವಾಗಿ ಮೇಲಕ್ಕೇಳುತ್ತವೆ. ಆಗ ಅವು ಸಮುದ್ರದ ಅಲೆಗಳು ಗರ್ಜಿಸಿ ಮೊರೆಯುವ ಶಬ್ದದಿಂದ ಕೂಡಿ ಪ್ರಕಾಶಿಸುವಂತೆ ಶಬ್ದದಿಂದಲೂ ತೇಜಸ್ಸಿನಿಂದಲೂ ಪ್ರಕಾಶಿಸುತ್ತವೆ.

English Translation

O Agni, you are being worshipped by the friendly priests; when you are placed in front of the altar (or as a Purohita at a sacrifice) and are installed as the messenger of the gods, then your flames roar like the resounding billows of the ocean.

ವಿಶೇಷವಿಷಯಗಳು

**ಯತ್— ಯದಾ |** ಯಾವಾಗ.

**ಮಿತ್ರಮಹಃ—ಮಿತ್ರೈರ್ಯರ್ಋತ್ವಿಗ್ಭಿರ್ಮಹ್ಯತೇ ಪೂಜ್ಯತ ಇತಿ ಮಿತ್ರಮಹಾಃ ತಸ್ಯ ಸಂಬುದ್ಧಿರ್ಮಿತ್ರ ಮಹಃ |** ನಿನಗೆ ಸ್ನೇಹಿತರಂತೆ ಪ್ರೀತಿಪಾತ್ರರಾದ ಋತ್ವಿಗ್ಜನರಿಂದ ಪೂಜಿಸಲ್ಪಡುವ.

**ಪುರೋಹಿತಃ**–ಈ ಶಬ್ದದ ಅರ್ಥವಿವರಣೆಯನ್ನು ಈ ಸೂಕ್ತದ ಹತ್ತನೆಯ ಋಕ್ಕಿನಲ್ಲಿ ಹೇಳಲಾಗಿರುವುದು.

**ಸಿಂಧೋರಿವ ಊರ್ಮಯಃ**— ಸಮುದ್ರದ ಅಲೆಗಳಂತೆ.

**ಪ್ರಸ್ವನಿತಾಸಃ—ಸ್ವನ ಧ್ವನ ಶಬ್ದೇ | ಪ್ರಕೃಷ್ಟಂ ಸ್ವನಿತಂ ಯೇಷಾಂ ತೇ ಪ್ರಸ್ವನಿತಾಃ |** ಬಹಳ ಘಟ್ಟಿಯಾಗಿ ಶಬ್ದಮಾಡುತ್ತಿರುವ, ಘರ್ಜನೆಮಾಡುತ್ತಿರುವ.

**ಅರ್ಚಯಃ**— ಅಗ್ನಿಯ ಜ್ವಾಲೆಗಳು, ಯಜ್ಞದಲ್ಲಿ ಋತ್ವಿಗ್ಜನರು ಹೋಮಮಾಡುವ ಆಜ್ಯಾದಿದ್ರವ್ಯ ಗಳಿಂದ ಚೆನ್ನಾಗಿ ಧಗಧಗನೆ ಉರಿಯುತ್ತಿರುವ ಅಗ್ನಿಯ ಜ್ವಾಲೆಗಳು, ಸಮುದ್ರದ ಅಲೆಗಳು ಗಾಳಿಯ ಹೊಡೆತದಿಂದ ದಡಕ್ಕೆ ಬಂದು ಅಪ್ಪಳಿಸುತ್ತಾ ಬಹಳ ಘಟ್ಟಿಯಾಗಿ ಶಬ್ದಮಾಡುವಂತೆ ಜಾಜ್ವಲ್ಯಮಾನವಾಗಿ ಉರಿಯುತ್ತಿರುವುವು ಎಂದಭಿಪ್ರಾಯವು.

|| ವ್ಯಾಕರಣಪ್ರಕ್ರಿಯಾ ||

**ಮಿತ್ರಮಹಃ**—ಮಿತ್ರೈಃ ಮಹ್ಯತೇ ಪೂಜ್ಯತೇ ಇತಿ ಮಿತ್ರಮಹಃ ಎಂದು ವಿಗ್ರಹ. ಮಹ ಪೂಜಾಯಾಂ ಧಾತು. **ಸರ್ವಧಾತುಭ್ಯೋಽಸುನ್** ಎಂದು ಅಸುನ್ ಪ್ರತ್ಯಯ.

**ಯಾಸಿ—ಯದ್ವೃತ್ತಾನ್ನಿತ್ಯಂ** ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ.

**ದೂತ್ಯಂ**—ದೂತಸ್ಯ ಕರ್ಮ ಎಂದು ವಿಗ್ರಹ. **ದೂತಸ್ಯ ಭಾಗ ಕರ್ಮಣೀ** (ಪಾ. ಸೂ. ೪-೪-೧೨೦) ದೂತಶಬ್ದ ಪ್ರಕೃತಿಕವಾದ ಷಷ್ಠ್ಯಂತದ ಮುಂದೆ ಭಾಗ ಎಂಬ ಅರ್ಥದಲ್ಲಿಯೂ ಕರ್ಮ ಎಂಬ ಅರ್ಥದಲ್ಲಿಯೂ ಯತ್ ಪ್ರತ್ಯಯ ಬರುತ್ತೆ ಎಂದು ಕರ್ಮಾರ್ಥದಲ್ಲಿ ಯತ್ ಪ್ರತ್ಯಯ. ದೂತ+ಯ, **ಯಸ್ಯೇತಿಚ** ಎಂದು ಅಕಾರಲೋಪ. **ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ** (ಪರಿಭಾ ೩೫) ಎಂದು **ಯತೋಽನಾವಃ** ಎಂದು ಉದಾತ್ತವಿಧಿಯೂ ವಿಕಲ್ಪವಾದ್ದರಿಂದ ಇಲ್ಲಿ ಬರುವುದಿಲ್ಲ. **ತಿತ್ಸ್ವರಿತಂ** ಎಂದು ಸ್ವರಿತ ಸ್ವರಬರುತ್ತೆ **ದೂತವಣಿಗ್ಭ್ಯಾಂಚ** (ಪಾ. ಸೂ. ೫-೧-೧೨೬)ರಲ್ಲಿ ಕಾಶಿಕಾಕಾರರು ಈ ವಚನವನ್ನು ಹೇಳಿರುವರು. ಇದರಿಂದ ಯ ಪ್ರತ್ಯಯ ಬಂದರೂ **ಇಷ್ಟಸ್ವರ** ಸಿದ್ಧಿಸುವುದಿಲ್ಲ.

**ಪ್ರಸ್ವನಿತಾಸಃ**—ಸ್ವನ ೧-ಸ್ವನ-ಧ್ವನ ಶಬ್ದೇ ಧಾತು. ಭಾವಾರ್ಥದಲ್ಲಿ **ನಿಷ್ಠಾ** ಎಂಬ ಸೂತ್ರದಿಂದ ಕ್ತ ಪ್ರತ್ಯಯವು ಸ್ವನಧಾತು ಮುಂದೆ ಬರುತ್ತೆ **ಆರ್ಧಧಾತುಕಸ್ಯೇಡ್ವಲಾದೇಃ** ಎಂದು ಕ್ತಗೆ ಇಟ್ ಸ್ವನಿತ ಎಂದಾಯಿತು. ಪ್ರಕೃಷ್ಟಂ ಸ್ವನಿತಂ ಯೇಷಾಂ ತೇ ಎಂದು ಬಹುವ್ರೀಹಿ. ಉತ್ಕೃಷ್ಟವಾದ ಶಬ್ದವುಳ್ಳವರು ಎಂದು

ಅರ್ಥ. ಬಹುವ್ರೀಹಿಯಾದ್ದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತೆ. ಇವರ ಮುಂದೆ ಜಸ್. ಪ್ರಸ್ವನಿತ+ಅಸ್ **ಆಜ್ಜಸೇರಸುಕ್** ಎಂದು ಅಸುಕ್ ಆಗಮ.

**ಊರ್ಮಯಃ**— ಋ ಗತೌ. **ಅರ್ತೇರೂ ಚ್ಚ** (ಉ.ಸೂ. ೪-೪೮೪) ಋ ಧಾತು ಮುಂದೆ ಮಿ ಪ್ರತ್ಯಯವೂ ಋ ಧಾತುವಿಗೆ ಊ ಆದೇಶವೂ ಬರುತ್ತೆ ಎಂದು ಮಿಪ್ರತ್ಯಯ ಊ ಆದೇಶಗಳು ಬರುತ್ತವೆ. ಊ ಆದೇಶವು ಋಕಾರದ ಸ್ಥಾನದಲ್ಲಿ ಬರುವುದರಿಂದ ರಪರವಾಗಿ ಬರುತ್ತೆ. ಊರ್+ಮಿ=ಊರ್ಮಿ ಎಂದು ಆಗುತ್ತೆ **ಅರ್ತೇರುಚ್ಚ** ಎಂದು ಹೇಳಿದರೂ ಸಾಕಾಗುತ್ತೆ. ಉತ್ವವು ರೇಫಶಿರಸ್ಕವಾಗಿ ಬಂದರೆ **ಹಲಿಚ** ( ಪಾ. ಸೂ. ೮-೨-೭೭ ) ಎಂದು ದೀರ್ಘ ಬರುವುದರಿಂದ ಊರ್ಮಿ ಎಂದು ಸಿದ್ಧವಾಗುವುದು ಎಂದು ಕೆಲವರು ಅಭಿಪ್ರಾಯಪಡುವರು. ॥ ೧೨ ॥



ಸಂಹಿತಾಪಾಠಃ

ಶ್ರುಧಿ ಶ್ರುತ್ಕರ್ಣ ವಹ್ನಿಭಿರ್ದೇವೈರಗ್ನೇ ಸಯಾವಭಿಃ ।
ಆ ಸೀದಂತು ಬರ್ಹಿಷಿ ಮಿತ್ರೋ ಅರ್ಯಮಾ ಪ್ರಾತರ್ಯಾ-
ವಾಣೋ ಅಧ್ವರಂ ॥ ೧೩ ॥

॥ ಪದಪಾಠಃ ॥

ಶ್ರುಧಿ । ಶ್ರುತ್ಽಕರ್ಣ । ವಹ್ನಿಽಭಿಃ । ದೇವೈಃ । ಅಗ್ನೇ । ಸಯಾವಽಭಿಃ ।
ಆ । ಸೀದಂತು । ಬರ್ಹಿಷಿ । ಮಿತ್ರಃ । ಅರ್ಯಮಾ । ಪ್ರಾತಃಽಯಾವಾ-
ನಃ । ಅಧ್ವರಂ ॥ ೧೩ ॥

ಸಾಯಣಭಾಷ್ಯಂ

**ಹೇ ಶ್ರುತ್ಕರ್ಣ ಶ್ರವಣಸಮರ್ಥಾಭ್ಯಾಂ ಕರ್ಣಾಭ್ಯಾಂ ಯುಕ್ತಾಗ್ನೇ ಶ್ರುಧಿ । ಅಸ್ಮದೀಯಂ ವಚನಂ ಶೃಣು । ಯೋ ಮಿತ್ರೋ ದೇವೋ ಯಶ್ಚಾರ್ಯಮಾ ಯೇ ಚಾನ್ಯೇ ಪ್ರಾತರ್ಯಾವಾಣಃ ಪ್ರಾತಃ-**

ಕಾಲೇ ದೇವಯಜನಂ ಗಚ್ಛಂತೋ ದೇವಾಸ್ತೈಃ ಸರ್ವೈಃ ಸಯಾವಭಿರಾಹವನೀಯಾಗ್ನಿನಾ ತ್ವಯಾ ಸಮಾನಗತಿಭಿರನ್ಯೈರ್ವಹ್ನಿಭಿರ್ದೇವೈಃ ಸಹಾಧ್ವರಂ ಕ್ರತುಮುದ್ದಿಶ್ಯ ಬರ್ಹಿಷಿ ದರ್ಭ ಆ ಸೀದಂತು । ಉಪವಿಶಂತು ॥ ಶ್ರುಧಿ । ಶ್ರು ಶ್ರವಣೇ । ಶ್ರುಶೃಣ್ವಿತ್ಯಾದಿನಾ ಹೇರ್ಧಿರಾದೇಶಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಶ್ರುತ್ಕರ್ಣ । ಶೃಣೋತೀತಿ ಶ್ರುತ್ । ಕ್ವಿಪಿ ತುಗಾಗಮಃ । ಶ್ರುತೌ ಕರ್ಣೌ ಯಸ್ಯಾಸೌ ಶ್ರುತ್ಕರ್ಣಃ । ವಹ್ನಿಭಿಃ । ವಹ ಪ್ರಾಪಣೇ । ವಹಿಶ್ರಿಯುಶ್ರುಗ್ಲಾಹಾತ್ವರಿಭ್ಯೋ ನಿದಿತಿ ನಿಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಸಯಾವಭಿಃ । ಸಮಾನಂ ಯಾಂತೀತಿ ಸಯಾವಾನಃ । ಯಾ ಪ್ರಾಪಣೇ । ಆತೋ ಮನಿನ್ನಿತಿ ವನಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ । ಪ್ರಾತರ್ಯಾವಾಣಃ । ಪೂರ್ವವತ್ । ಪ್ರಾತಿಪದಿಕಾಂತನುಮ್‌ವಿಭಕ್ತಿಷು ಚ । ಪಾ. ೮-೪-೧೧ । ಇತಿ ಣತ್ವಂ ॥

ಪ್ರತಿಪದಾರ್ಥ

**ಶ್ರುತ್ಕರ್ಣ**— ಸೂಕ್ಷ್ಮವಾಗಿ ಕೇಳುವ ಕಿವಿಗಳಿಂದ ಕೂಡಿದ । **ಅಗ್ನೇ**— ಎಲೈ ಅಗ್ನಿಯೇ । **ಶ್ರುಧಿ**— (ನಮ್ಮ) ವಾಕ್ಕನ್ನು ಕೇಳು. । **ಮಿತ್ರೈಃ**— ಮಿತ್ರನೂ । **ಅರ್ಯಮಾ**— ಅರ್ಯಮನೂ । **ಪ್ರಾತರ್ಯಾವಾಣಃ**- ಪ್ರಾತಃಕಾಲದಲ್ಲಿ (ದೇವಯಜ್ಞಪ್ರದೇಶವನ್ನು ಕುರಿತು) ಹೋಗತಕ್ಕ (ಇತರ) ದೇವತೆಗಳೂ । **ಸಯಾವಭಿಃ**— ಆಹವನೀಯ ರೂಪದಲ್ಲಿ ನಿನ್ನೊಡನೆ ಸಂಚರಿಸತಕ್ಕ । **ವಹ್ನಿಭಿಃ**— ಇತರ ವಹ್ನಿದೇವತೆಗಳೊಡನೆ । **ಅಧ್ವರಂ**- ಯಜ್ಞವನ್ನುದ್ದೇಶಿಸಿ । **ಬರ್ಹಿಷಿ**— ದರ್ಭಾಸನದ ಮೇಲೆ । **ಆ ಸೀದಂತು**— ಕುಳಿತುಕೊಳ್ಳಲಿ. ।

ಭಾವಾರ್ಥ

ಎಲೈ ಅಗ್ನಿಯೇ, ನಿನ್ನ ಕಿವಿಗಳು ಬಹಳ ಸೂಕ್ಷ್ಮವಾಗಿವೆಯಾದುದರಿಂದ ನಮ್ಮ ಸ್ತೋತ್ರರೂಪವಾದ ವಾಕ್ಯಗಳನ್ನು ಚೆನ್ನಾಗಿ ಕೇಳು. ಮಿತ್ರನೂ ಅರ್ಯಮನೂ, ಪ್ರಾತಃಕಾಲದಲ್ಲಿ ಯಜ್ಞಪ್ರದೇಶವನ್ನು ಕುರಿತು ಹೋಗತಕ್ಕ ಇತರ ದೇವತೆಗಳೂ ಸಹ ಆಹವನೀಯರೂಪದಲ್ಲಿ ನಿನ್ನೊಡನೆ ಸಂಚರಿಸತಕ್ಕ ಇತರವಹ್ನಿದೇವತೆ ಗಳೊಡನೆ ಸೇರಿಕೊಂಡು ನಾವು ಮಾಡುತ್ತಿರುವ ಯಜ್ಞವನ್ನುದ್ದೇಶಿಸಿ ಇಲ್ಲಿಗೆ ಬಂದು ದರ್ಭಾಸನದ ಮೇಲೆ ಕುಳಿತುಕೊಳ್ಳಲಿ.

English Translation

O Agni, whose ears can hear, hear our invocation ; let Mitra and Aryaman and other gods that move together in the early morning with all the accompanying gods that carry oblations, sit down at the sacrifice upon the sacred kusa-grass.

ವಿಶೇಷವಿಷಯಗಳು

**ಶ್ರುತ್ಕರ್ಣ**— **ಶೃಣೋತೀತಿ ಶ್ರುತ್ । ಶ್ರುತೌ ಕರ್ಣೌ ಯಸ್ಯಾಸೌ ಶ್ರುತ್ಕರ್ಣಃ । ಶ್ರವಣಸಮ ರ್ಥಾಭ್ಯಾಂ ಕರ್ಣಾಭ್ಯಾಂ ಯುಕ್ತ ।** ಶ್ರುತ್ ಎಂದರೆ ಕೇಳುವ, ಕರ್ಣ ಎಂದರೆ ಕಿವಿ ನಮ್ಮ ಆಹ್ವಾನವನ್ನು ಕೇಳಲು ಸಮರ್ಥವಾದ ಕಿವಿಗಳುಳ್ಳ ಅಗ್ನಿಯೆಂದಭಿಪ್ರಾಯವು.

**ವಹ್ನಿಭಿಃ—ವಹ ಪ್ರಾಪಣೇ ।** ವಹನಶೀಲರಾದ ಎಂದರೆ ಹವಿಸ್ಸನ್ನು ವಹಿಸುವ

**ಸಯಾವಭಿಃ—ಯಾ ಪ್ರಾಪಣೇ । ಸಮಾನಂ ಯಾಂತೀತಿ ಸಯಾವಾನಃ । ಆಹವನೀಯಾಗ್ನಿನಾ ತ್ವಯಾ ಸಮಾನಗತಿಭಿಃ ।** (ಅಗ್ನಿಯಾದ ನಿನ್ನ) ಜತೆಯಲ್ಲಿ ಹೋಗುವ, ಒಟ್ಟಿಗೆ ಹೋಗುವ.

**ಪ್ರಾತರ್ಯಾವಾಣಃ—ಪ್ರಾತಃಕಾಲೇ ದೇವಯಜನಂ ಗಚ್ಛಂತೋ ದೇವಾಃ ।** ಪ್ರಾತಃಕಾಲದಲ್ಲಿ ಯಜ್ಞಾನುಷ್ಠಾನ ಪ್ರದೇಶಕ್ಕೆ ಹೋಗುವ ದೇವತೆಗಳು ಎಂದರ್ಥವು

**ಅಧ್ವರಂ**—ಈಗ ನಾವು ಮಾಡುತ್ತಿರುವ ಯಜ್ಞವನ್ನುದ್ದೇಶಿಸಿ ಇಲ್ಲಿಗೆ ಬಂದು

ವ್ಯಾಕರಣಪ್ರಕ್ರಿಯಾ

**ಶ್ರುಧಿ**—ಶ್ರು ಶ್ರವಣೇ. ಲೋಟ್ ಸಿಗೆ ಹಿ ಆದೇಶ. **ಶ್ರುಶೃಣು ಪೃಕೃವೃ ಭ್ಯಶ್ಛಂದಸಿ** (ಪಾ. ಸೂ ೬-೪-೧೦೨) ಎಂದು ಹಿ ಗೆ ಧಿ ಆದೇಶ. **ಬಹುಲಂ ಛಂದಸಿ** ಎಂದು ವಿಕರಣಕ್ಕೆ ಲುಕ್ ಬರುತ್ತೆ.

**ಶ್ರುತ್ಕರ್ಣ**—ಶ್ರು ಶ್ರವಣೇ. ಶ್ರುಣೋತೀತಿ ಶ್ರುತ್ **ಕ್ವಿಪ್ ಚ** ಎಂದು ಕ್ವಿಪ್. **ಹ್ರಸ್ವಸ್ಯಪಿತಿಕೃತಿತುಕ್** ಎಂದು ತುಗಾಗಮ. ಶ್ರುತೌ ಕರ್ಣೌ ಯಸ್ಯ ಸಃ ಎಂದು ಬಹುವ್ರೀಹಿ. ಕೇಳಲು ಶಕ್ತಿಯುಳ್ಳ (ಕಿವುಡಿಲ್ಲದ) ಕಿವಿಯುಳ್ಳವ ಎಂದು ಅರ್ಥ. ಆಮನ್ತ್ರಿತಾನುದಾತ್ತ ಬರುತ್ತೆ.

**ವಹ್ನಿಭಿಃ**—ವಹ ಪ್ರಾಪಣೇ. **ವಹಿ ಶ್ರಿಶ್ರುಯು ಗ್ಲಾ ಹಾ ತ್ವರಿಭ್ಯೋನಿತ್** (ಉ.ಸೂ. ೪-೪೯೧) ವಹ ಪ್ರಾಪಣೇ, ಶ್ರಿಞ್ ಸೇವಾಯಾಂ, ಯು ಮಿಶ್ರಣೇ, ಶ್ರು ಶ್ರವಣೇ, ಗ್ಲೈ ಹರ್ಷಕ್ಷಯೇ, ಓ ಹಾಕ್ ತ್ಯಾಗೇ, ಞಿತ್ವರಾ ಸಂಭ್ರಮೇ ಈ ಧಾತುಗಳ ಮುಂದೆ ನಿಪ್ರತ್ಯಯ ಬರುತ್ತೆ. ಅದು ನಿತ್ ಆಗುತ್ತೆ ಎಂದು ಸೂತ್ರಾರ್ಥ. **ವಹಿಶ್ರಿಶ್ರು-ಯುದ್ರು**—, ಇತ್ಯಾದಿ ಸೂತ್ರವು ಈಗಿನ ಉಣಾದಿಯಲ್ಲಿದೆ. ವಹ್+ನಿ=ವಹ್ನಿ ಎಂದು ಆಗುತ್ತೆ, ನಿತ್ಸ್ವರ ಆದ್ಯುದಾತ್ತ ಬರುತ್ತೆ.

**ಸಯಾವಭಿಃ**—ಸಮಾನಂ ಯಾನ್ತೀತಿ ಸಯಾವಾನಃ, ಎಂದು ವಿಗ್ರಹ. ಯಾ ಪ್ರಾಪಣೇ **ಆತೋಮ-ನಿನ್‌ಕ್ವನಿಪ್ ವನಿಪಶ್ಚ** ( ಪಾ. ಸೂ. ೩-೨-೭೪ ) ಸುಬಂತ ಅಥವಾ ಉಪಸರ್ಗ ಇವು ಉಪಪದಗಳಾಗಿದ್ದರೆ ಛಂದಸ್ಸಿನಲ್ಲಿ ಆಕಾರಾಂತ ಧಾತುಮುಂದೆ ಮನಿನ್-ಕ್ವನಿಪ್-ವನಿಪ್-ಈ ಮೂರು ಪ್ರತ್ಯಯಗಳು ಬರುವುವು ಎಂದು ಇಲ್ಲಿ ಸಮಾನ ಶಬ್ದೋಪಪದಕವಾದ ಯಾ ಧಾತುಮುಂದೆ ವನಿಪ್ ಬರುತ್ತೆ. **ಸಮಾನಸ್ಯ ಛಂದಸ್ಯ ಮೂರ್ಧಪ್ರ-ಭೃತ್ಯುದರ್ಕೇಷು** ಎಂದು ಸಮಾನ ಶಬ್ದಕ್ಕೆ ಸ ಆದೇಶ. ಸ+ಯಾ+ವನ್=ಸಯಾ ವನ್ ಎಂದಾಯಿತು. ಭಿಸ್ **ನಲೋಪಃ ಪ್ರಾತಿಪದಿಕಾಂತಸ್ಯ** ಎಂದು ನಕಾರಕ್ಕೆ ಲೋಪ. ರುತ್ವ ವಿಸರ್ಗಗಳು ಯಾವನ್ ಎಂಬ ಕೃದಂತವಾದ ಉತ್ತರ ಪದಕ್ಕೆ **ಗತಿಕಾರಕೋ**—, ಎಂಬುದರಿಂದ ಪ್ರಕೃತಿಸ್ವರ ಬರುತ್ತೆ.

**ಪ್ರಾತರ್ಯಾವಾನಃ**—ಪ್ರಾತರ್ ಶಬ್ದೋಪಪದಕವಾದ ಯಾ ಧಾತು ಮುಂದೆ ಹಿಂದೆ ಹೇಳಿದಂತೆ ವನಿಪ್. ಪ್ರಾತರ್ಯಾವನ್, ಜಸ್, **ಪ್ರಾತಿಪದಿಕಾನ್ತನುಮ್ವಿಭಕ್ತಿಷು ಚ** (ಪಾ. ಸೂ. ೮-೪-೧೧) ಪ್ರಾತಿಪದಿಕದ ಕೊನೆ-

ನುಮ್-ವಿಭಕ್ತಿ ಇವುಗಳಲ್ಲಿರುವ ನಕಾರವು ಪೂರ್ವಪದದಲ್ಲಿರುವ ರೇಫ ಅಥವಾ ಷಕಾರಕ್ಕಿಂತಲೂ ಪರದಲ್ಲಿದ್ದರೆ ಅದಕ್ಕೆ ಣಕಾರ ಬರುತ್ತೆ ಎಂದು ಪ್ರಾತಿಪದಿಕದ ಕೊನೆಯಲ್ಲಿರುವ ನ್‌ಗೆ ಣ್ ಬರುತ್ತೆ. ॥ ೧೩ ॥



॥ ಸಂಹಿತಾಪಾಠಃ ॥

ಶೃಣ್ವಂತು ಸ್ತೋಮಂ ಮರುತಃ ಸುದಾನವೋಽಗ್ನಿಜಿಹ್ವಾ ಋತಾವೃಧಃ ।
ಪಿಬತು ಸೋಮಂ ವರುಣೋ ಧೃತವ್ರತೋಽಶ್ವಿಭ್ಯಾಮುಷಸಾ ಸಜೂಃ ॥ ೧೪ ॥

॥ ಪದಪಾಠಃ ॥

ಶೃಣ್ವಂತು । ಸ್ತೋಮಂ । ಮರುತಃ । ಸುಽದಾನವಃ । ಅಗ್ನಿಽಜಿಹ್ವಾಃ । ಋತಽವೃಧಃ ।
ಪಿಬತು । ಸೋಮಂ । ವರುಣಃ । ಧೃತಽವ್ರತಃ । ಅಶ್ವಿಭ್ಯಾಂ । ಉಷಸಾ । ಸಽಜೂಃ ॥ ೧೪ ॥

ಸಾಯಣಭಾಷ್ಯಂ

ಮರುತೋ ದೇವಾಃ ಸ್ತೋಮಮಸ್ಮದೀಯಂ ಸ್ತೋತ್ರಂ ಶೃಣ್ವಂತು । ಕೀದೃಶಾಃ । ಸುದಾನವಃ ಸುಷ್ಠು ಫಲಸ್ಯ ದಾತಾರಃ ಅಗ್ನಿಜಿಹ್ವಾ ಅಗ್ನಿರ್ಜಿಹ್ವಾಸ್ಥಾನೀಯೋ ಮುಖ್ಯೋ ಯೇಷು ಮರುತ್ಸು

ತಾವೃಶಾಃ ಋತಾವೃಧಃ ಸತ್ಯಸ್ಯ ಯಜ್ಞಸ್ಯ ವಾ ವರ್ಧಕಾಃ । ತಥಾ ಧೃತವ್ರತೋ ಗೃಹೀತಕರ್ಮಾ ವರುಣೋ ದೇವೋಽಶ್ವಿಭ್ಯಾಂ ದೇವಾಭ್ಯಾಮುಷಸಾ ದೇವತಯಾ ಸಜೂಃ ಸಹ ಸೋಮಂ ಪಿಬತು ॥ ಸುದಾನವಃ । ಡುದಾಞ್ ದಾನೇ । ದಾಭಾಭ್ಯಾಂ ನುಃ । ಉ. ೩-೩೨ । ಇತಿ ಭಾವೇ ನುಪ್ರತ್ಯಯಃ । ದಾನುಶಬ್ದ ಆದ್ಯುದಾತ್ತಃ । ಶೋಭನಂ ದಾನು ಯೇಷಾಂ । ಆದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ಅಗ್ನಿಜಿಹ್ವಾಃ । ಅಗ್ನೇರ್ಜಿಹ್ವಾಯಾಮವಸ್ಥಿತಾ ಹವಿರ್ಭಾಜ ಇತ್ಯರ್ಥಃ । ತಾತ್ಸ್ಥ್ಯಾತ್ ತಾಚ್ಛಬ್ದ್ಯಂ । ಅಗ್ನಿರ್ಜಿಹ್ವಾಸ್ಥಾನೀಯೋ ಯೇಷಾಂ ತೇ । ಛಾಂದಸಮಂತೋದಾತ್ತತ್ವಂ । ಋತಾವೃಧಃ । ಋತಸ್ಯ ಸತ್ಯಸ್ಯ ಯಜ್ಞಸ್ಯ ವಾ ವರ್ಧಯಿತಾರಃ । ವೃಧೇರಂತರ್ಭಾವಿತಣ್ಯರ್ಥಾತ್ ಕ್ವಿಪ್ಚೇತಿ ಕ್ವಿಪ್ । ಅನ್ಯೇಷಾಮಪಿ ದೃಶ್ಯತ ಇತಿ ಪೂರ್ವಪದಸ್ಯ ದೀರ್ಘತ್ವಂ ॥ ೩೦ ॥

॥ ಪ್ರತಿಪದಾರ್ಥ ॥

**ಸುದಾನವಃ**—ಶ್ರೇಷ್ಠವಾದ ಫಲವನ್ನು ಕೊಡತಕ್ಕವರಾಗಿಯೂ । **ಅಗ್ನಿಜಿಹ್ವಾಃ**— ಅಗ್ನಿರೂಪವಾದ ನಾಲಿಗೆಯುಳ್ಳವರಾಗಿಯೂ । **ಋತಾವೃಧಃ**—ಸತ್ಯದ ಅಥವಾ ಯಜ್ಞದ ವರ್ಧಕರಾಗಿಯೂ ಇರುವ । **ಮರುತಃ** ಮರುದ್ದೇವತೆಗಳು । **ಸ್ತೋಮಂ**—ನಮ್ಮ ಸ್ತೋತ್ರವನ್ನು । **ಶೃಣ್ವಂತು**—ಕೇಳಲಿ । **ಧೃತವ್ರತಃ**—ಕರ್ಮ ಪಾಲಕನಾದ । **ವರುಣಃ**—ವರುಣದೇವನು । **ಅಶ್ವಿಭ್ಯಾಂ**— ಅಶ್ವಿದೇವತೆಗಳೊಡನೆಯೂ । **ಉಷಸಾ**— ಉಷೋದೇವತೆಯೊಡನೆಯೂ । **ಸಜೂಃ**—ಕೂಡಿಕೊಂಡು । **ಸೋಮಂ**-ಸೋಮರಸವನ್ನು । **ಪಿಬತು**—ಕುಡಿಯಲಿ.

॥ ಭಾವಾರ್ಥ ॥

ಮರುದ್ದೇವತೆಗಳು ಸತ್ಯದ ಮತ್ತು ಯಜ್ಞದ ವರ್ಧಕರು. ಅಗ್ನಿರೂಪವಾದ ನಾಲಿಗೆಯುಳ್ಳವರು. ಶ್ರೇಷ್ಠವಾದ ಫಲವನ್ನು ಕೊಡತಕ್ಕವರು. ಇಂತಹ ಸುರೂಪಿಗಳೂ ಮತ್ತು ಉಪಕಾರಿಗಳೂ ಆದ ಮರುತ್ತುಗಳು ನಮ್ಮ ಸ್ತೋತ್ರವನ್ನು ಕೇಳಲಿ. ಕರ್ಮಪಾಲಕನಾದ ವರುಣದೇವನು ಅಶ್ವಿದೇವತೆಗಳೊಡನೆಯೂ ಉಷೋದೇವತೆಯೊಡನೆಯೂ ಕೂಡಿಕೊಂಡು ಸೋಮರಸ ಪಾನವನ್ನು ಮಾಡಲಿ.

## English Translation

Let the liberal Maruts who drink through Agni (fire) and are encouragers of sacrifice, hear our praise ; let Varuna who fulfills the rites with Aswins and Ushas drink the Soma-juice.

॥ ವಿಶೇಷವಿಷಯಗಳು ॥

**ಸ್ತೋಮಂ**—ಸ್ತೋತ್ರವನ್ನು, ನಾವು ಮಾಡುತ್ತಿರುವ ಈ ಸ್ತೋತ್ರವನ್ನು

**ಸುದಾನವಃ— ಸುಷ್ಠು ಫಲಸ್ಯ ದಾತಾರಃ ।** ಯಜ್ಞಾದಿಕರ್ಮಗಳಿಗೆ ಒಳ್ಳೆಯ ಫಲಗಳನ್ನು ಕೊಡುವವರು ; ಅಥವಾ ಯಜ್ಞಾನುಷ್ಠಾನ ಮಾಡುವವರ ಇಷ್ಟಾರ್ಥಗಳನ್ನು ಕೊಡುವವರು.

**ಅಗ್ನಿಜಿಹ್ವಾಃ**—ಅಗ್ನಿಯೇ ನಾಲಗೆಯಾಗಿವುಳ್ಳವರು. ಎಂದರೆ ದೇವತೆಗಳನ್ನುದ್ದೇಶಿಸಿ ಅಗ್ನಿಯಲ್ಲಿ ಹೋಮ ಮಾಡುವ ಹವಿಸ್ಸನ್ನು ಸ್ವೀಕರಿಸುವುದರಿಂದ ಅಗ್ನಿಯ ನಾಲಗೆಯಿಂದ ಅಥವಾ ಅಗ್ನಿಯ ಮೂಲಕ ಹವಿಸ್ಸನ್ನು ಸ್ವೀಕರಿಸುವವರು. ಆದುದರಿಂದ ದೇವತೆಗಳಿಗೆ ಅಗ್ನಿಜಿಹ್ವಾಃ ಎಂದು ಹೇಳುವ ರೂಢಿ ಇರುವುದು. ಒಂದೆರಡು ಉದಾಹರಣೆಗಳನ್ನು ಕೊಡುವೆವು—

**ಅಗ್ನಿಜಿಹ್ವಾ ಮನವಃ ಸೂರಚಕ್ಷಸೋ ವಿಶ್ವೇ ನೋ ದೇವಾ ಅವಸಾಗಮನ್ನಿಹ ॥**
( ಋ. ಸಂ ೧-೮೯-೭ )

**ಇಮಂ ಸ್ತೋಮಂ ರೋದಸೀ ಪ್ರ ಬ್ರವೀಮ್ಯೃದೂದರಾಃ ಶೃಣವನ್ನಗ್ನಿಜಿಹ್ವಾಃ ॥**
( ಋ. ಸಂ ૩-೫೪-೧೦ )

**ಯೇ ಅಗ್ನಿಜಿಹ್ವಾ ಋತಸಾಪ ಆಸುರ್ಯೇ ಮನುಂ ಚಕ್ರುರುಪರಂ ದಸಾಯ ॥**
( ಋ ಸಂ ೬-೨೧-೧೦ )

**ದ್ವಿಜನ್ಮಾನೋ ಯ ಋತಸಾಪಃ ಸತ್ಯಾಃ ಸ್ವರ್ವಂತೋ ಯಜತಾ ಅಗ್ನಿಜಿಹ್ವಾಃ ॥**
( ಋ. ಸಂ. ೬-೫೦-೨ )

**ಯೇ ಅಗ್ನಿಜಿಹ್ವಾ ಉತ ವಾ ಯಜತ್ರಾ ಆಸದ್ಯಾಸ್ಮಿನ್ ಬರ್ಹಿಷಿ ಮಾದಯಧ್ವಂ ॥**
(ಋ. ಸಂ. ೬-೫೨-೧૩)

**ಬಹವಃ ಸೂರಚಕ್ಷಸೋಽಗ್ನಿಜಿಹ್ವಾ ಋತಾವೃಧಃ ॥**
(ಋ. ಸಂ. ೭-೬೬-೧೦)

**ದಿವಕ್ಷಸೋ ಅಗ್ನಿಜಿಹ್ವಾ ಋತಾವೃಧ ಋತಸ್ಯ ಯೋನಿಂ ವಿಮೃಶಂತ ಆಸತೇ ॥**
(ಋ ಸಂ. ೧೦-೬೫-೭)

ಯಜ್ಞದಲ್ಲಿ ನಮಗೆ ಪ್ರತ್ಯಕ್ಷನಾಗಿ ಕಾಣಿಸುತ್ತಿರುವ ದೇವತೆಯೆಂದರೆ ಅಗ್ನಿಯು. ಇತರ ದೇವತೆಗಳು ನಮಗೆ ಪ್ರತ್ಯಕ್ಷವಾಗಿ ಕಾಣಿಸುವುದಿಲ್ಲ. ಆದುದರಿಂದ ಅಗ್ನಿಯಲ್ಲದ ಇತರ ದೇವತೆಗಳನ್ನುದ್ದೇಶಿಸಿ ಹವಿಸ್ಸನ್ನರ್ಪಿಸಬೇಕಾದರೆ ಅಗ್ನಿಯ ಮೂಲಕವೇ ಎಂದರೆ ಅಗ್ನಿಯಲ್ಲಿ ಹೋಮಮಾಡುವುದರಿಂದಲೇ ಸಾಧ್ಯವು. ಈ ವಿಷಯದಲ್ಲಿ **ಪರೋಕ್ಷಂ ವಾ ಅನ್ಯೇ ದೇವಾ ಇಜ್ಯಂತೇ** ಎಂದು ಶ್ರುತಿವಾಕ್ಯವಿರುವುದು. (ತೈ. ಸಂ. ೧-೭) ಅಗ್ನಿಯಲ್ಲಿ ಹೋಮ ಮಾಡಿದ ಹವಿಸ್ಸನ್ನು ಇತರದೇವತೆಗಳು ಸ್ವೀಕರಿಸುವುದರಿಂದ ಆ ದೇವತೆಗಳಿಗೆ ಅಗ್ನಿಯೇ ನಾಲಿಗೆಯಾದಂತಾಗಿರುವುದು. ಆದುದರಿಂದ ಆ ದೇವತೆಗಳನ್ನು ಅಗ್ನಿಜಿಹ್ವಾಃ ಎಂದು ಹೇಳುವುದು ಯುಕ್ತವಾಗಿದೆ

**ಋತಾವೃಧಃ—ಸತ್ಯಸ್ಯ ಯಜ್ಞಸ್ಯ ವಾ ವರ್ಧಕಾಃ ।** ಸತ್ಯವನ್ನು ಅಥವಾ ಯಜ್ಞವನ್ನು ಅಭಿವೃದ್ಧಿ ಮಾಡುವವರು. ಯಜ್ಞನಿರ್ವಹಣೆ ಮಾಡುವವರು. ಈ ಶಬ್ದದ ಹೆಚ್ಚು ವಿವರಣೆಗಾಗಿ ಋಗ್ವೇದಸಂಹಿತಾ ಭಾಗ ೧ ಪೇಜು 707 ಮತ್ತು 647 ನೇ ಪೇಜುಗಳನ್ನು ನೋಡಿ.

**ಧೃತವ್ರತಃ—ಗೃಹೀತಕರ್ಮಾ ।** ನಾವು ಮಾಡುವ ಯಜ್ಞಾನುಷ್ಠಾನ ಕರ್ಮಗಳನ್ನು ಸ್ವೀಕರಿಸುವವನು.

**ಸಜೂಃ— ಸಹ ।** ಸಹಿತನಾಗಿ.

ವ್ಯಾಕರಣಪ್ರಕ್ರಿಯಾ

**ಸುದಾನವಃ**—ಡುದಾಞ್ ದಾನೇ **ದಾಭಾಭ್ಯಾಂನುಃ** (ಉ. ಸೂ. ೩-೩೧೨) ಡುದಾಞ್ ದಾನೇ-ಭಾದೀ ಪ್ತೌ ಈ ಧಾತುಗಳ ಮುಂದೆ ನುಪ್ರತ್ಯಯ ಬರುತ್ತೆ ಎಂದು ನುಪ್ರತ್ಯಯುವು ಭಾವಾರ್ಥದಲ್ಲಿ ಬರುತ್ತದೆ. ದಾನು ಶಬ್ದವು ಆದ್ಯುದಾತ್ತ. ಶೋಭನಂ ದಾನುಃ ಯೇಷಾಂ ತೇ ಎಂದು ಬಹುವ್ರೀಹಿ **ಆದ್ಯುದಾತ್ತಂ ದ್ವ್ಯಚ್ ಛಂದಸಿ** ಎಂದು ಉತ್ತರಪದಕ್ಕೆ ಆದ್ಯುದಾತ್ತ ಬರುತ್ತೆ.

**ಅಗ್ನಿ ಜಿಹ್ವಾಃ**—ಅಗ್ನೇಃ ಜಿಹ್ವಾಃ ಎಂದು ತತ್ಪುರುಷ. ' ಮಂಚಾಃ ಕ್ರೋಶನ್ತಿ ' ಮಂಚದಲ್ಲಿರುವವರು ಅಳುವರು ಎಂಬಲ್ಲಿ ಮಂಚಾಃ ಎಂಬುದರಿಂದ ಮಂಚದಲ್ಲಿರುವವರು ಬೋಧಿಸಲ್ಪಡುತ್ತಾರೆ. ಅದರಂತೆ ಜಿಹ್ವೆ ಯಲ್ಲಿರುವ ಮರುತ್ತುಗಳು ಜಿಹ್ವಾಪದದಿಂದ ಬೋಧಿತರಾಗುವರು. ಅಗ್ನಿಯ ಜಿಹ್ವೆಯಲ್ಲಿ ಇದ್ದ ಹವಿಸ್ಸನ್ನು ಹೊಂದ ತಕ್ಕವು ಎಂದು ಅರ್ಥ. **ಸಮಾಸಸ್ಯ** ಎಂದು ಅಂತೋದಾತ್ತ ಬರುತ್ತೆ. **ಅಥವಾ** ಅಗ್ನಿಃ ಜಿಹ್ವಾ ಯೇಷಾಂ ತೇ ಎಂದು ಬಹುವ್ರೀಹಿ. ನಾಲಿಗೆಯು ಹೇಗೆ ಮುಖ್ಯವೋ ಹಾಗೆ ಮುಖ್ಯನಾದ ಅಗ್ನಿಯುಳ್ಳವರು ಎಂದು ಅರ್ಥ. ಇಲ್ಲಿ ಬಹುವ್ರೀಹಿಯಾದ್ದರಿಂದ ಪೂರ್ವಪದಪ್ರಕೃತಿಸ್ವರವು ಬರಬೇಕು. ಆದರೂ ಛಾಂದಸವಾಗಿ ಅಂತೋದಾತ್ತ ಬರುತ್ತೆ.

**ಋತಾವೃಧಃ**—ಋತಂ=ಸತ್ಯವನ್ನು ಅಥವಾ ಯಜ್ಞವನ್ನು ವರ್ಧಯನ್ತಿ=ಹೆಚ್ಚಿಸುವರು ಎಂದು ವಿಗ್ರಹ. ವೃಧು ವರ್ಧನೇ, ಣಿಚ್ ಪ್ರತ್ಯಯದ ಅರ್ಥವನ್ನೊಳಗೊಂಡ ಈ ಧಾತು ಮುಂದೆ **ಕ್ವಿಪ್ ಚ** ಎಂದು ಕ್ವಿಪ್ ಪ್ರತ್ಯಯ. **ಅನ್ಯೇಷಾಮಪಿ ದೃಶ್ಯತೇ** ಎಂದು ಋತ ಎಂಬ ಪೂರ್ವಪದಕ್ಕೆ ದೀರ್ಘಬರುತ್ತೆ. ॥೧೪॥

ಇಲ್ಲಿಗೆ ೪೩ನೇ ಸೂಕ್ತವು ಮುಗಿದುದು.

---

# ನಲವತ್ತ್ನಾಲ್ಕನೆಯ ಸೂಕ್ತವು

---

**ತ್ವಮಗ್ನೇ ವಸೂನಿತಿ ದಶರ್ಚಂ ದ್ವಿತೀಯಂ ಸೂಕ್ತಂ । ಅತ್ರಾನುಕ್ರಮಣಿಕಾ । ತ್ವಮಗ್ನೇ ದಶಾನುಷ್ಟುಭಮರ್ಧರ್ಚೋಽನ್ತ್ಯೋ ದ್ವೈವ ಇತಿ । ಪ್ರಸ್ಕಣ್ವ ಋಷಿಃ । ಅನುಷ್ಟುಭಂ ಛಂದಃ । ಇದಂ ಸೂಕ್ತಮಗ್ನಿದೇವತಾಕಂ । ಪೂರ್ವತ್ರಾಗ್ನೇಯಂ ತ್ವಿತ್ಯುಕ್ತತ್ವಾತ್ । ಅಯಂ ಸೋಮ ಇತ್ಯರ್ಧರ್ಚೋ ದೇವದೇವತ್ಯಃ ॥ ಪ್ರಾತರನುವಾಕ ಆಗ್ನೇಯೇ ಕ್ರತಾವಾಶ್ವಿನಶಸ್ತ್ರೇ ಚೈತತ್ಸೂಕ್ತಂ । ಅಥೈತಸ್ಯಾ ರಾತ್ರೇರಿತಿ ಖಂಡೇ ಸೂತ್ರಿತಂ । ತ್ವಮಗ್ನೇ ವಸೂಂಸ್ತ್ವಂ ಹಿ ಕ್ಷೈತವತ್ । ಆ. ೪-೧೩ । ಇತಿ ॥ ತಥಾ ಗರ್ಗತ್ರಿರಾತ್ರಸ್ಯಾಂತ್ಯೇಽಹನ್ಯೇತತ್ಸೂಕ್ತಮಾಜ್ಯಶಸ್ತ್ರಂ । ಆಂಗಿರಸಂ ಸ್ವರ್ಗಕಾಮ ಇತಿ ಖಂಡೇ ಸೂತ್ರಿತಂ । ವಾರವಂತೀಯಮುತ್ತಮೇ ತ್ವಮಗ್ನೇ ವಸೂರಿತಿ ಚಾಜ್ಯಂ । ಆ. ೧೦-೨ । ಇತಿ ॥**

ಅನುವಾದವು—**ತ್ವಮಗ್ನೇ ವಸೂನ್** ಎಂಬುವುಗು ಒಂಭತ್ತನೆಯ ಅನುವಾಕಗಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ತ್ವಮಗ್ನೇ ದಶಾನುಷ್ಟುಭಮರ್ಧಚೋಂತ್ಯೋದ್ದೈವ ಇತಿ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಕಣ್ವಪುತ್ರನಾದ ಪ್ರಸ್ಕಣ್ವನು ಋಷಿಯು. ಅನುಷ್ಟುಪ್ ಛಂದಸ್ಸು. ಈ ಸೂಕ್ತವು ಅಗ್ನಿದೇವತಾಕವು ಎಂದರೆ ಈ ಸೂಕ್ತಕ್ಕೆ ದೇವತೆಯು ಅಗ್ನಿಯು. ಕೊನೆಯ ಋಕ್ಕಾದ **ಅರ್ವಾಂಚಂ** ಎಂಬ ಋಕ್ಕಿನ **ಅಯಂ ಸೋಮಃ** ಎಂಬ ಉತ್ತರಾರ್ಧಕ್ಕೆ ದೇವಾಃ ಎಂದರೆ ದೇವತೆಗಳೇ ದೇವತೆಗಳು. ಪ್ರಾತರನುವಾಕಮಂತ್ರಪಠನಕಾಲನಲ್ಲಿ ಆಗ್ನೇಯಕ್ರತು ಸಂಬಂಧವಾದ ಆಶ್ವಿನಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದು ಈ ವಿಷಯವು ಆಶ್ವಲಾಯನಶ್ರೌತಸೂತ್ರದ **ಅಥೈತಸ್ಯಾ ರಾತ್ರೇಃ** ಎಂಬ ಖಂಡದಲ್ಲಿ **ತ್ವಮಗ್ನೇ ವಸೂನ್** (ಋ. ಸಂ. ೧-೪೫-೧) **ತ್ವಂ ಹಿ ಕ್ಷೈತವತ್** (ಋ. ಸಂ. ೬-೨-೧) ಎಂಬ ಸೂತ್ರದಿಂದ ನಿರ್ದೇಶಿಸಲ್ಪಟ್ಟಿರುವುದು. (ಆ. ೪-೧೩) ಮತ್ತು ಗರ್ಗತ್ರಿರಾತ್ರವೆಂಬ ಯಾಗದ ಕೊನೆಯ ದಿವಸ ಈ ಸೂಕ್ತವನ್ನು ಆಜ್ಯಶಸ್ತ್ರಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಆಂಗಿರಸಂ ಸ್ವರ್ಗಕಾಮ** ಎಂಬ ಖಂಡದಲ್ಲಿ **ವಾರವಂತೀಯಮುತ್ತಮೇ ತ್ವಮಗ್ನೇವಸೂँರಿತಿ ಚಾಜ್ಯಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೧೦-೨)

---

॥ ಓಂ ॥

## ಸೂಕ್ತ—೪೫

॥ ಮಂಡಲ—೧ ॥ ಅನುವಾಕ—೯ ॥ ಸೂಕ್ತ—೪೫ ॥

॥ ಅಷ್ಟಕ—೧ ॥ ಅಧ್ಯಾಯ—೩ ॥ ವರ್ಗ—೩೧, ೩೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೧೦ ॥

॥ ಋಷಿಃ—ಪ್ರಸ್ಕಣ್ವಃ ಕಾಣ್ವಃ ॥

॥ ದೇವತಾ— ೧-೯, ೧೦ ರಲ್ಲಿ ಪೂರ್ವಾರ್ಧ. ಅಗ್ನಿಃ । ೧೧ ರಲ್ಲಿ ಉತ್ತರಾರ್ಧ ದೇವಾಃ ।

॥ ಛಂದಃ—ಅನುಷ್ಟುಪ್ ॥

ಸಂಹಿತಾಪಾಠಃ

ತ್ವಮ॑ಗ್ನೇ ವಸೂಁ॑ರಿ॒ಹ ರು॒ದ್ರಾಁ॑ ಆ॑ದಿ॒ತ್ಯಾಁ ಉ॒ತ ।
ಯಜಾ॑ ಸ್ವಧ್ವ॒ರಂ ಜನ॒ಂ ಮನು॑ಜಾತಂ ಘೃತ॒ಪ್ರುಷ॑ಮ್ ॥ ೧ ॥

ಪದಪಾಠಃ

ತ್ವಂ । ಅ॒ಗ್ನೇ॒ । ವಸೂ॑ನ್ । ಇ॒ಹ । ರು॒ದ್ರಾನ್ । ಆ॒ದಿ॒ತ್ಯಾನ್ । ಉ॒ತ ।
ಯಜ॑ । ಸು॒ಽಅ॒ಧ್ವ॒ರಂ । ಜನ॑ಂ । ಮನು॑ಽಜಾತಂ । ಘೃ॒ತ॒ಽಪ್ರುಷ॑ಂ ॥೧॥

ಸಾಯಣಭಾಷ್ಯಂ

**ಹೇ ಅಗ್ನೇ ತ್ವಮಿಹ ಕರ್ಮಣಿ ವಸ್ವಾದೀನ್ಯಜ । ಉತಾಪಿ ಚ ಜನಮನ್ಯಮಪಿ ದೇವತಾರೂಪಂ ಪ್ರಾಣಿನಂ ಯಜ । ಕೀದೃಶಂ ಸ್ವಧ್ವರಂ ಶೋಭನಯಾಗಯುಕ್ತಂ ಮನುಜಾತಂ ಮನುನಾ ಪ್ರಜಾಪತಿನೋತ್ಪಾದಿತಂ ಘೃತಪ್ರುಷಮುದಕಸ್ಯ ಸೇಕ್ತಾರಂ ॥ ಯಜ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘತ್ವಂ । ಸ್ವಧ್ವರಂ । ಶೋಭನೋಽಧ್ವರೋ ಯಸ್ಯಾಸೌ ಸ್ವಧ್ವರಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಮನುಜಾತಂ । ಜನೇರಂತರ್ಭಾವಿತಣ್ಯರ್ಥಾತ್ಕರ್ಮಣಿ ಕ್ತಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಘೃತಪ್ರುಷಂ । ಪ್ರುಷ ಪ್ಲುಷ ಸ್ನೇಹನ ಸೇಚನಪೂರಣೇಷು । ಘೃತೇನೋದಕೇನ ಪ್ರುಷ್ಣಾತಿ ಪೂರಯತೀತಿ ಘೃತಪ್ರುಟ್ । ಕ್ವಿಪ್ಚೇತಿ ಕ್ವಿಪ್ ॥**

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ, । **ತ್ವಂ**—ನೀನು । **ಇಹ**—ಈ ಯಜ್ಞಕರ್ಮದಲ್ಲಿ । **ವಸೂನ್**—ವಸುಗಳನ್ನು । **ರುದ್ರಾನ್**—ರುದ್ರರನ್ನು । **ಆದಿತ್ಯಾನ್**—ಆದಿತ್ಯರನ್ನು । **ಉತ**—ಮತ್ತು । **ಸ್ವಧ್ವರಂ**—ಶ್ರೇಷ್ಠವಾದ ಯಾಗ ಯುಕ್ತವಾಗಿಯೂ । **ಮನುಜಾತಂ**—ಮನುವಿನಿಂದ ಉತ್ಪನ್ನವಾದುದಾಗಿಯೂ । **ಘೃತಪ್ರುಷಂ**—ಉದಕವನ್ನು ಪ್ರೋಕ್ಷಿಸುವುದಾಗಿಯೂ ಇರುವ । **ಜನಂ**—( ದೇವತಾ ರೂಪವಾದ ) ಇತರ ಪ್ರಾಣಿವರ್ಗವನ್ನು । **ಯಜ** — ಪೂಜಿಸು.

ಭಾವಾರ್ಥ

ಎಲೈ ಅಗ್ನಿಯೇ, ನೀನು ಈ ಯಜ್ಞಕರ್ಮದಲ್ಲಿ ನಮಗೋಸ್ಕರ ವಸುಗಳನ್ನೂ, ರುದ್ರರನ್ನೂ, ಆದಿತ್ಯರನ್ನೂ ಮತ್ತು ಶ್ರೇಷ್ಠವಾದ ಯಾಗಯುಕ್ತವಾಗಿಯೂ, ಮನುವಿನಿಂದ ಉತ್ಪನ್ನವಾದುದಾಗಿಯೂ, ಉದಕವನ್ನು ಪ್ರೋಕ್ಷಿಸುವುದಾಗಿಯೂ ಇರುವ ದೇವತಾರೂಪವಾದ ಇತರ ಪ್ರಾಣಿವರ್ಗವನ್ನು ಪೂಜಿಸು.

English Translation

Agni, ( bring hither and ) worship the Vasus, the Rudras, the Adityas or any other being begotten by Manu, sacrificing well and sprinkling water ( ghee ).

ಸಿದ್ಧಾಂತನಿರ್ಣಯಗಳು

ಈ ಸೂಕ್ತದಲ್ಲಿ ಋಷಿಯು ವಸುಗಳನ್ನೂ, ರುದ್ರರನ್ನೂ, ಆದಿತ್ಯರನ್ನೂ ಕರೆದುಕೊಂಡು ಬಂದು ಅವರನ್ನು ಯಜ್ಞದಿಂದ ತೃಪ್ತಿಪಡಿಸಬೇಕೆಂದು ಪ್ರಾರ್ಥಿಸಿರುವನು. ಇಲ್ಲಿ ಸೂಚಿತವಾಗಿರುವ ವಸುಗಳು, ರುದ್ರರು, ಆದಿತ್ಯರು ಯಾರು ? ಇವರ ಸ್ಥಾನಮಾನವೇನು ಎಂಬ ವಿಷಯವನ್ನು ಇಲ್ಲಿ ಸೂಕ್ಷ್ಮವಾಗಿ ವಿಮರ್ಶಿಸುವುದು ಯುಕ್ತವಾಗಿದೆ. ಇಲ್ಲಿ ವಸುಗಳು ಎಂದರೆ ವಸುಗಣದ ದೇವತೆಗಳು, ರುದ್ರರೆಂದರೆ ರುದ್ರಗಣಕ್ಕೆ ಸೇರಿದ ದೇವತೆಗಳು, ಆದಿತ್ಯರೆಂದರೆ ಆದಿತ್ಯಗಣಕ್ಕೆ ಸೇರಿದ ದೇವತೆಗಳು ಎಂದಭಿಪ್ರಾಯವು. ಸಾಧಾರಣವಾಗಿ ವಸುರುದ್ರಾದಿತ್ಯರನ್ನು ಬಹುವಚನದಲ್ಲಿಯೇ ಹೇಳುವುದು ರೂಢಿಯಾಗಿದೆ. ವಸುಗಳು ೮, ರುದ್ರರು ೧೧, ಆದಿತ್ಯರು ೧೨ ಒಟ್ಟು ೩೩ ದೇವತೆಗಳಿರುವರೆಂದು ಈ ಸೂಕ್ತದಲ್ಲಿಯೂ ಇತರ ಕಡೆಗಳಲ್ಲಿಯು ಹೇಳಿರುವುದು. ಈ ಸೂಕ್ತದ ಎರಡನೆಯ ಋಕ್ಕಿನಲ್ಲಿ **ತ್ರಯಸ್ತ್ರಿಂಶತಮಾ-ವಹ** ಎಂದರೆ ವಸುರುದ್ರಾದಿತ್ಯರೆಂಬ ಮೂವತ್ತಮೂರು ದೇವತೆಗಳನ್ನು ಕರೆದುಕೊಂಡು ಬಾ ಎಂದು ಅಗ್ನಿಯನ್ನು ಪ್ರಾರ್ಥಿಸಲಾಗಿರುವುದು. ಋಗ್ವೇದದಲ್ಲಿ ಈ ದೇವತೆಗಳನ್ನು ಸ್ತೋತ್ರಮಾಡಿರುವ ಕೆಲವು ಉದಾಹರಣೆಗಳನ್ನು ಕೊಡುತ್ತೇವೆ--

**ಆದಿತ್ಯಾ ರುದ್ರಾ ವಸವಃ ಸುನೀಥಾ ದ್ಯಾವಾಕ್ಷಾಮಾ ಪೃಥಿವೀ ಅಂತರಿಕ್ಷಂ ।**
( ಋ. ಸಂ. ೩-೮-೮ )

**ಅಶ್ವಿನಾ ಮಿತ್ರಾವರುಣಾ ಭಗಂ ಚ ವಸೂನ್ ರುದ್ರಾँ ಆದಿತ್ಯाँ ಇಹ ಹುವೇ ॥**
( ಋ. ಸಂ. ೩-೨೦-೫ )

**ಆದಿತ್ಯಾನಾಂ ವಸೂನಾಂ ರುದ್ರಿಯಾಣಾಂ ದೇವೋ ದೇವಾನಾಂ ನ ಮಿನಾತಿ ಧಾಮ ॥**
( ಋ. ಸಂ. ೧೦-೪೮-೧೧ )

**ದೇವाँ ಆದಿತ್ಯाँ ಅವಸೇ ಹವಾಮಹೇ ವಸೂನ್ ರುದ್ರಾನ್ ಸವಿತಾರಂ ಸುದಂಸಸಂ ॥**
( ಋ. ಸಂ ೧೦-೬೬-೪ )

**ಆದಿತ್ಯಾ ರುದ್ರಾ ವಸವಃ ಸುದಾನವ ಇಮಾ ಬ್ರಹ್ಮ ಶಸ್ಯಮಾನಾನಿ ಜಿನ್ವತ ॥**
( ಋ ಸಂ ೧೦-೬೬ ೧೨ )

**ಅಹಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತ ವಿಶ್ವದೇವೈಃ ।**
( ಋ. ಸಂ. ೧೦-೧೨೫-೧ )

**ವಸವೋ ರುದ್ರಾ ಆದಿತ್ಯಾ ಉಪರಿಸ್ಪೃಶಂ ಮೋಗ್ರಂ ಚೇತ್ತಾರಮಧಿರಾಜಮಕ್ರನ್ ॥**
( ಋ. ಸಂ. ೧೦-೧೨೮-೯ )

**ಆದಿತ್ಯೈ ರುದ್ರೈರ್ವಸುಭಿರ್ನ ಆ ಗಹಿ ಮೃಳೀಕಾಯ ನ ಆ ಗಹಿ**
( ಋ. ಸಂ. ೧೦-೧೫೧-೧ )

ಇತ್ಯಾದಿ ಅನೇಕ ಉದಾಹರಣೆಗಳನ್ನು ಕೊಡಬಹುದು. ವಸುಗಣಕ್ಕೆ ಇಂದ್ರನು ಮುಖ್ಯನೆಂದೂ ರುದ್ರ ಗಣಕ್ಕೆ ರುದ್ರನೂ, ಆದಿತ್ಯರಿಗೆ ಅದಿತಿಯೂ ಮುಖ್ಯವೆಂದು ಈ ಋಕ್ಕುಗಳಲ್ಲಿ ಹೇಳಿರುವುದು.

**ಇಂದ್ರಂ ನೋ ಅಗ್ನೇ ವಸುಭಿಃ ಸಜೋಷಾ ರುದ್ರಂ ರುದ್ರೇಭಿರಾ ವಹ ಬೃಹಂತಂ ।**
**ಆದಿತ್ಯೇಭಿರದಿತಿಂ ವಿಶ್ವಜನ್ಯಾಂ ಬೃಹಸ್ಪತಿಮೃಕ್ವಭಿರ್ವಿಶ್ವವಾರಂ ॥**
( ಋ ಸಂ. ೭-೧೦-೪ )

**ಇಂದ್ರೋ ವಸುಭಿಃ ಪರಿ ಪಾತು ನೋ ಗಯಮಾದಿತ್ಯೈರ್ನೋ ಅದಿತಿಃ ಶರ್ಮ ಯಚ್ಛತು ।**
**ರುದ್ರೋ ರುದ್ರೇಭಿರ್ದೇವೋ ಮೃಳಯಾತಿ ನಸ್ತ್ವಷ್ಟಾ ನೋ ಗ್ನಾಭಿಃ ಸುವಿತಾಯ ಜಿನ್ವತು ॥**
( ಋ ಸು. ೧೦-೬೬-೩ )

ಈ ವಸು ರುದ್ರಾದಿತ್ಯರ ಹೆಸರಗಳನ್ನು ವೇದಗಲ್ಲಿ ಸೂಚಿಸಿಲ್ಲ. ಪುರಾಣಾದಿಗಳಲ್ಲಿ ಉಕ್ತನಾಗಿರುವುದು.

ಯಾಸ್ಕ ಮಹರ್ಷಿಗಳು ವಸವಃ ಎಂಬ ಶಬ್ದದ ರೂಪನಿಷ್ಪತ್ತಿ ವಿಚಾರದಲ್ಲಿ—

**ವಸವೋ ಯದ್ವಿವಸತೇ ಸರ್ವಮಗ್ನಿರ್ವಸುಭಿರ್ವಾಸವ ಇತಿ ಸಮಾಖ್ಯಾ ತಸ್ಮಾತ್ಪೃಥಿವೀ-ಸ್ಥಾನಾಃ । ಇಂದ್ರೋ ವಸುಭಿ ರ್ವಾಸವ ಇತಿ ಸಮಾಖ್ಯಾ ತಸ್ಮಾನ್ಮಧ್ಯಮಸ್ಥಾನಾಃ । ವಸವ ಆದಿತ್ಯರಶ್ಮಯೋ ವಿವಾಸನಾತ್ತಸ್ಮಾದ್ದ್ಯುಸ್ಥಾನಾಃ ॥** ( ನಿ. ೧೨-೪೨ )

ಎಂದರೆ ಈ ವಸುಗಳು ಭೂಮಿ, ಅಂತರಿಕ್ಷ ಸ್ವರ್ಗಗಳೆಂಬ ಮೂರು ಸ್ಥಾನಗಳಲ್ಲಿಯೂ ಇರುವರು ; ವಸವೋ ಯದ್ವಿ ವಸತೆ ಸರ್ವಮಗ್ನಿರ್ವಸುಭಿರ್ವಾಸವ ಇತಿ ಸಮಾಖ್ಯಾ ತಸ್ಮಾತ್ಪೃಥಿವೀಸ್ಥಾನಾಃ । ಈ ವಸುಗಳು ಸಮಸ್ತರಲ್ಲಿಯೂ ಅಗ್ನಿರೂಪದಿಂದ ವಾಸಿಸುವುದರಿಂದ ಇವರು ಪೃಥಿವೀಸ್ಥಾನದಲ್ಲಿರುವರು. ಇಂದ್ರೋ ವಸುಭಿರ್ವಾಸವ ಇತಿ ಸಮಾಖ್ಯಾ ತಸ್ಮಾನ್ಮಧ್ಯಸ್ಥಾನಾಃ । ಇಂದ್ರನು ವಸುಭಿಃ ಎಂದರೆ ಧನಾದಿಗಳಿಂದ ಕೂಡಿರುವವನಾದುದರಿಂದ ವಾಸವನೆಂದು ಹೇಳಲ್ಪಡುವನು. ಇಂದ್ರನು ವಸುಗಳಿಗೆ ಮುಖ್ಯನೂ ಆದುದರಿಂದ ವಸುಗಳು ಮಧ್ಯಸ್ಥಾನವಾದ ಅಂತರಿಕ್ಷದಲ್ಲಿದ್ದಂತಾಯಿತು. **ವಸವ ಆದಿತ್ಯರಶ್ಮಯೋ ವಿವಾಸನಾತ್ತಸ್ಮಾದ್ದ್ಯುಸ್ಥಾನಾಃ । ವಸವಃ** ಎಂಬ ಶಬ್ದಕ್ಕೆ ಸೂರ್ಯನ ರಶ್ಮಿಗಳೆಂದು ಅರ್ಥವು. ಈ ಸೂರ್ಯರಶ್ಮಿಗಳು ಎಲ್ಲಾ ಕಡೆಯಲ್ಲಿಯೂ ಮುಖ್ಯವಾಗಿ ಅಂತರಿಕ್ಷದ ಮೇಲುಭಾಗ

ದಲ್ಲಿರುವ ಸ್ವರ್ಗದಲ್ಲಿ ವ್ಯಾಪಿಸಿರುವುದರಿಂದ ದ್ಯುಸ್ಥಾನ ಎಂದರೆ ಸ್ವರ್ಗದಲ್ಲಿದ್ದಂತಾಯಿತು. ಆದುದರಿಂದ ಈ ವಸುಗಳಿಗೆ ಭೂಮ್ಯಂತರಿಕ್ಷ ಸ್ವರ್ಗಗಳಲ್ಲಿ ವ್ಯಾಪ್ತಿ ಇರುವುದೆಂದು ಯಾಸ್ಕರ ಮತವು. ವಸುಗಳನ್ನು ಪ್ರತಿಪಾದನೆಮಾಡಿರುವ ಎರಡು ಋಕ್ಕುಗಳನ್ನು ಯಾಸ್ಕರು ಉದಾಹರಣೆಯಾಗಿ ಕೊಟ್ಟಿರುವರು—

**ಸುಗಾ ವೋ ದೇವಾಃ ಸುಪಥಾ ಅಕರ್ಮ ಯ ಆಜಗ್ಮುಃ ಸವನಮಿದಂ ಜುಷಾಣಾಃ ।**
**ಜಕ್ಷಿವಾಂಸಃ ಪಪಿವಾಂಸಶ್ಚ ವಿಶ್ವೇಽಸ್ಮೇ ಧತ್ತ ವಸವೋ ವಸೂನಿ ॥**
( ವಾಜಸನೇಯ ಸಂಹಿತಾ ೮-೧೮)

**ಜ್ಮಾ ಅತ್ರ ವಸವೋ ರಂತ ದೇವಾ ಉರಾವಂತರಿಕ್ಷೇ ಮರ್ಜಯಂತ ಶುಭ್ರಾಃ ।**
**ಅರ್ವಾಕ್ಪಥ ಉರುಜ್ರಯಃ ಕೃಣುಧ್ವಂ ಶ್ರೋತಾ ದೂತಸ್ಯ ಜಗ್ಮುಷೋ ನೋ ಅಸ್ಯ ।**
( ಋ. ಸಂ. ೭-೩೯-೩ )

ರುದ್ರಾಃ ಮತ್ತು ಆದಿತ್ಯಾಃ ಎಂಬ ದೇವತೆಗಳ ವಿಷಯದಲ್ಲಿ ರುದ್ರ ಮತ್ತು ಆದಿತ್ಯ ಶಬ್ದಗಳಿಗೆ ಕೊಟ್ಟಿರುವ ರೂಪಸಿಪ್ಪ ತ್ತಿಯನ್ನೇ ಇಲ್ಲಿಯೂ ಸಮನ್ವಯಮಾಡಿಕೊಳ್ಳಬೇಕೆಂದು ಹೇಳಿರುವರು. ಈ ಶಬ್ದಗಳಿಗೆ ಅನ್ವಯಾರ್ಥವನ್ನು ನಾವು ಹಿಂದೆಯೇ ಹೇಳಿರುವೆವು.

**ಮನುಜಾತಂ**— ಮನುವಿನಿಂದ ಉತ್ಪನ್ನರಾದವರು. ಋಗ್ವೇದದಲ್ಲಿ ಮನುವಿನ ಹೆಸರು ಅನೇಕಕಡೆ ಪಠಿತವಾಗಿದ್ದರೂ ಹೆಚ್ಚು ವಿವರಣೆ ಎಲ್ಲಿಯೂ ದೊರಕುವುದಿಲ್ಲ. ಮನುವು ಮಾನವ ಕುಲಕ್ಕೆ ಮೂಲಪುರುಷನೆಂದೂ ಯಜ್ಞಯಾಗಾದಿಗಳ ಅನುಷ್ಠಾನಕ್ರಮದಲ್ಲಿ ಮಾರ್ಗದರ್ಶಕನೆಂದೂ ತಿಳಿದುಬರುವುದು. ಇವನು ತನ್ನ ಆಸ್ತಿಯನ್ನು ತನ್ನ ಮಕ್ಕಳಿಗೆ ಹಂಚಿಕೊಡುವಾಗ ಇವನ ಕಿರಿಯ ಮಗನಾದ ನಾಭಾನೇದಿಷ್ಠನೆಂಬುವನು ಗುರುಕುಲದಲ್ಲಿ ಬ್ರಹ್ಮಚರ್ಯದಿಂದ ವಿದ್ಯಾಭ್ಯಾಸವನ್ನು ಮಾಡುತ್ತಿದ್ದುದರಿಂದ ಅವನಿಗೆ ಯಾವ ದಾಯಭಾಗವೂ ದೊರಕಲಿಲ್ಲವೆಂದೂ ಅವನು ವಿದ್ಯಾಭ್ಯಾಸ ಮುಗಿಸಿಕೊಂಡು ಬಂದು ತಂದೆಯನ್ನು ತನ್ನ ದಾಯಭಾಗಕ್ಕಾಗಿ ಪ್ರಶ್ನೆಮಾಡಲು ಇವನನ್ನು—ಅಂಗಿರಾಋಷಿಗಳು ಯಜ್ಞಮಾಡುವ ಸ್ಥಳಕ್ಕೆ ಹೋಗಿ ಅವರಿಗೆ ಕೆಲವು ಮಂತ್ರಗಳನ್ನು ಉಪದೇಶಮಾಡಿದರೆ ಅವರು ಇವನಿಗೆ ಯಥೇಚ್ಛವಾಗಿ ಧನವನ್ನು ಕೊಡುವರೆಂದು ಹೇಳಿಕಳುಹಿಸಿದನು. ಈ ವೃತ್ತಾಂತವು ಐತರೇಯಬ್ರಾಹ್ಮಣದಲ್ಲಿಯೂ, ಯಜುರ್ವೇದತೈತ್ತಿರೀಯಸಂಹಿತೆಯಲ್ಲಿಯೂ ವಿವರಿಸಿರುವುದು. ಮುಖ್ಯವಾಗಿ ಈ ಮನುವು ಮಾಡಿದ ಯಜ್ಞವು ಪ್ರಸಿದ್ಧಿಯಾಗಿರುವುದರಿಂದ ಋಗ್ವೇದದಲ್ಲಿ ಮನುವು ಮಾಡಿದ ಯಜ್ಞದ ವಿಷಯವು ಅಲ್ಲಲ್ಲಿ ಪ್ರಸ್ತಾಪಿಸಲ್ಪಟ್ಟಿರುವುದು. ಈ ಮನುವಿನ ವಿಷಯವು ಋಗ್ವೇದವಲ್ಲದೆ ಅಥರ್ವವೇದ (೧೪-೨-೪೧) ತೈತ್ತಿರೀಯಸಂಹಿತಾ (೧-೫-೧-೩ ; ೭-೫-೧೫-೩ ; ೨-೫-೯-೧, ೨-೬-೭-೧ ; ೩-೩-೨-೧ ೫-೪-೧೦-೫ ; ೬-೬-೬-೧ ;) ಕಾಠಕಸಂಹಿತಾ (೮-೧೫) ಶತಪಥಬ್ರಾಹ್ಮಣ (೧-೧-೪-೧೪) ಜೈಮಿನೀಯ ಉಪನಿಷದ್ಬ್ರಾಹ್ಮಣ (೩-೧೫-೨)ಮೊದಲಾದ ಸ್ಥಳಗಳಲ್ಲಿ ಉಕ್ತವಾಗಿರುವುದು.

ಮನುವಿಗೆ ವಿವಸ್ವಾನ್ (ಋ. ಸಂ. ೮-೫೨-೧) ಎಂದೂ, ವಿವಸ್ವಂತನ (ಒಬ್ಬ ದೇವತೆ) ಮಗನಾದುದರಿಂದ ವೈವಸ್ವತನೆಂದೂ (ಅಥ. ೮-೧೦-೨೪, ಶತ. ಬ್ರಾ. ೧೩-೪-೩-೩) ಸವರ್ಣಾ ಎಂಬ ಎಂಬುವಳ ವಂಶಸ್ಥ

ನಾದುದರಿಂದ ಸಾವರ್ಣಿ ಎಂದೂ, ಸಂವರಣನ ವಂಶಸ್ಥನಾದುದರಿಂದ ಸಾಂವರಣಿ ಎಂದೂ (ಋ.ಸಂ. ೮-೫೧-೧) ಎಂದೂ ಅನೇಕ ಹೆಸರುಗಳಿವೆ

**ಘೃತಪ್ರುಷಂ**— ಉದಕದಿಂದ ಸಿಕ್ತನಾದ, ಘೃತವೆಂದರೆ ಉದಕವೆಂದು ಅರ್ಥವು. (ನಿ. ೨-೨೪)

ವ್ಯಾಕರಣಪ್ರಕ್ರಿಯಾ

**ಯಜ**— ಯಜ ದೇವಪೂಜಾದೌ **ಲೋಟ್** ಸಿಪ್, ಹಿ, ಶಪ್ **ಅತೋಹೇಃ** ಎಂದು ಹಿಗೆ ಲುಕ್. **ದ್ವ್ಯಚೋಽತಸ್ತಿಙಃ** (ಪಾ ಸೂ. ೬-೩-೧೩೫) ಸಂಹಿತಾಕಾಲದಲ್ಲಿ ಎರಡು ಅಚ್ಚುಗಳುಳ್ಳ ತಿಙಂತಕ್ಕೆ ಮಂತ್ರದಲ್ಲಿ ದೀರ್ಘ ಬರುತ್ತೆ ಎಂದು ದೀರ್ಘ ಬರುವುದು.

**ಸ್ವಧ್ವರಮ್**— ನ ವಿದ್ಯತೆ ಧ್ವರಃ ಹಿಂಸಾ ಯಸ್ಯ ಸಃ ಅಧ್ವರಃ, ಶೋಭನಃ ಅಧ್ವರಃ ಯಸ್ಯ ಸಃ ಎಂದು ಬಹುವ್ರೀಹಿಗರ್ಭಬಹುವ್ರೀಹಿ. **ನಞ್ ಸುಭ್ಯಾಂ** (ಪಾ. ಸೂ. ೬-೨-೧೭೨) ಬಹುವ್ರೀಹಿಯಲ್ಲಿ ನಞ್ ಸುಗಳ ಮುಂದೆ ಇರುವ ಉತ್ತರಪದವು ಅಂತೋದಾತ್ತವಾಗುವುದು ಎಂದು ಅಂತೋದಾತ್ತ ಬರುತ್ತೆ.

**ಮನುಜಾತಮ್**—ಮನುನಾ ಜಾತಃ, ಮನು ಎಂಬ ಪ್ರಜಾಪತಿಯಿಂದ ಹುಟ್ಟಿದವನು ಎಂದು ಅರ್ಥ. ಣಿಚ್ ಪ್ರತ್ಯಯಾರ್ಥವನ್ನೊಳಗೊಂಡ ಜನೀಪ್ರಾದುರ್ಭಾವೇ ಧಾತು ಮುಂದೆ **ನಿಷ್ಠಾ** ಎಂಬುದರಿಂದ ಕರ್ಮಾರ್ಥದಲ್ಲಿ ಕ್ತಪ್ರತ್ಯಯ. **ಜನಸನಖನಾಂ—**, ಎಂದು ನ್‌ಗೆ ಆಕಾರ ಸವರ್ಣದೀರ್ಘ. **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಕರ್ಮಾರ್ಥಕ ಕ್ತಪ್ರತ್ಯಯಾಂತವು ಪರದಲ್ಲಿದ್ದರೆ ತೃತೀಯಾಂತವು ಪ್ರಕೃತಿಸ್ವರವನ್ನು ಹೊಂದುತ್ತೆ ಎಂದು ಪೂರ್ವಪದಕ್ಕೆ ಪ್ರಕೃತಿಸ್ವರ ಬರುತ್ತೆ

**ಘೃತಪ್ರುಷಮ್**—ಪ್ರುಷ, ಪ್ಲುಷ, ಸ್ನೇಹನಸೇಚನಪೂರಣೇಷು, ಕ್ರ್ಯಾದಿ. ಘೃತೇನ=ನೀರಿನಿಂದ ಪುಷ್ಣಾತಿ=ತುಂಬುವನು ಎಂದು ವಿಗ್ರಹ **ಕ್ವಿಪ್ ಚ** ಎಂದು ಕ್ವಿಪ್ ಪ್ರತ್ಯಯ. ಘೃತಪ್ರುಟ್ ಎಂದು ಪ್ರಥಮಾ ಏಕವಚನದಲ್ಲಿ ಆಗುತ್ತೆ. ದ್ವಿತೀಯಾ ಏಕವಚನ ಘೃತಪ್ರುಷಮ್ ಎಂದು ಆಗುತ್ತೆ. ॥ ೧ ॥



ಸಂಹಿತಾಪಾಠಃ

ಶ್ರುಷ್ಟೀವಾನೋ ಹಿ ದಾಶುಷೇ ದೇವಾ ಅಗ್ನೇ ವಿಚೇತಸಃ।
ತಾನ್ರೋಹಿದಶ್ವ ಗಿರ್ವಣಸ್ತ್ರಯಸ್ತ್ರಿಂಶತಮಾ ವಹ ॥ ೨ ॥

॥ ಪದಪಾಠಃ ॥

ಶ್ರುಷ್ಟೀऽವಾನಃ । ಹಿ । ದಾಶುಷೇ । ದೇವಾಃ । ಅಗ್ನೇ । ವಿऽಚೇತಸಃ ।
ತಾನ್ । ರೋಹಿತ್ऽಅಶ್ವ । ಗಿರ್ವಣಃ । ತ್ರಯಃ ऽ ತ್ರಿಂಶತಂ । ಆ । ವಹ॥

ಸಾಯಣಭಾಷ್ಯಂ

ಹೇ ಅಗ್ನೇ ವಿಚೇತಸೋ ವಿಶಿಷ್ಟಪ್ರಜ್ಞಾನಾ ದೇವಾ ದಾಶುಷೇ ಹವಿರ್ದತ್ತವತೇ ಯಜಮಾನಾಯ ಶ್ರುಷ್ಟೀವಾನೋ ಹಿ । ಶ್ರುಷ್ಟಿಃ ಫಲಸ್ಯ ದಾನಂ । ತದ್ಭಾಜಃ ಖಲು । ಹೇ ರೋಹಿದಶ್ವ ರೋಹಿನ್ನಾಮ-ಕೈರಶ್ವೈರುಪೇತ ಗಿರ್ವಣೋ ಗೀರ್ಭಿಃ ಸ್ತುತಿಭಿರ್ವನನೀಯಾಗ್ನೇ । ಗಿರ್ವಣಾ ದೇವೋ ಭವತಿ ಗೀರ್ಭಿರೇನಂ ವನಯಂತಿ । ನಿ. ೬-೧೪ । ಇತಿ ಯಾಸ್ಕಃ । ತ್ರಯಸ್ತ್ರಿಂಶತಮನಯಾ ಸಂಖ್ಯಯಾ ಸಂಖ್ಯಾತಾಂಸ್ತಾನ್ದೇ-ವಾನಾ ವಹ । ಇಹಾನಯ ॥ ಶ್ರುಷ್ಟೀವಾನಃ । ಶ್ರುಷ್ಟಿಃ ಪ್ರೇರಣಾರ್ಥಃ । ಭಾವೇ ಕ್ತಿಚ್ । ಶ್ರುಷ್ಟಿಂ ವನಂತಿ ಸಂಭಜಂತ ಇತಿ ಶ್ರುಷ್ಟೀವಾನಃ । ಅನ್ಯೇಭ್ಯೋऽಪಿ ದೃಶ್ಯಂತ ಇತಿ ವಿಚ್ । ಛಾಂದಸಂ ದೀರ್ಘತ್ವಂ । ವಿಚೇತಸಃ । ವಿಶಿಷ್ಟಂ ಚೇತೋ ಯೇಷಾಂ ತೇ । ಬಹುವ್ರೀಹೌ ಪೂರ್ವಪದಪ್ರಕೃತಿ-ಸ್ವರತ್ವಂ । ಗಿರ್ವಣಃ । ಗೀರ್ಭಿರ್ವನನೀಯೋ ಗಿರ್ವಣಾಃ । ವನತೇರಸುನ್ । ಪೂರ್ವಪದಸ್ಯ ಹ್ರಸ್ವತ್ವಂ ಛಾಂದಸಂ । ತ್ರಯಶ್ಚ ತ್ರಿಂಶಚ್ಚ ತ್ರಯಸ್ತ್ರಿಂಶತ್ । ತ್ರೇಸ್ತ್ರಯಃ । ಪಾ. ೬-೩-೪೮ । ಇತಿ ತ್ರಿಶಬ್ದಸ್ಯ ತ್ರಯಸಾದೇಶಃ । ಸಂಖ್ಯಾ । ಪಾ. ೬-೨-೩೫ । ಇತಿ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಅಗ್ನೇ**— ಎಲೈ ಅಗ್ನಿಯೇ । **ವಿಚೇತಸಃ**— ವಿವೇಚನ ಬುದ್ಧಿಯಿಂದ ಕೂಡಿದ । **ದೇವಾಃ**— ದೇವತೆಗಳು । **ದಾಶುಷೇ**—ಹವಿರ್ದಾತನಾದ ಯಜಮಾನನಿಗೆ । **ಶ್ರುಷ್ಟೀವಾನೋ ಹಿ**—ಫಲದಾನಮಾಡುವವ ರಾಗಿರುವುದು ಸರಿಯಷ್ಟೆ । **ರೋಹಿದಶ್ವ**—ರೋಹಿತ್ತುಗಳೆಂಬ ಕುದುರೆಗಳಿಂದ ಕೂಡಿದವನಾಗಿಯೂ, । **ಗಿರ್ವಣಃ**- ಸ್ತುತಿಪ್ರಿಯನಾಗಿಯೂ ಇರುವ ಎಲೈ ಅಗ್ನಿಯೇ, । **ತ್ರಯಸ್ತ್ರಿಂಶತಂ**—ಮೂವತ್ತುಮೂರು ಸಂಖ್ಯೆಗಳುಳ್ಳ । **ತಾನ್**- ಆ ದೇವತೆಗಳನ್ನು । **ಆ ವಹ**— ಇಲ್ಲಿಗೆ ಕರೆದುಕೊಂಡು ಬಾ

ಭಾವಾರ್ಥ

ಎಲೈ ಅಗ್ನಿಯೇ, ಮಾನವನಾದ ಯಜ್ಞಕರ್ತನು ಅರ್ಪಿಸಿದ ಹವಿಸ್ಸನ್ನು ಸ್ವೀಕರಿಸಿದ ಮೇಲೆ ಅವನಿಗೆ ಪ್ರತ್ಯುಪಕಾರಮಾಡಬೇಕೆಂಬ ವಿವೇಚನಬುದ್ಧಿಯು ದೇವತೆಗಳಿಗಿರುವುದು ಸರಿಯಷ್ಟೆ. ಅವರು ಯಜಮಾನನಿಗೆ ಫಲದಾನಮಾಡಲು ಆಸಕ್ತರಾಗಿರುವರು. ಸ್ತುತಿಪ್ರಿಯನಾದ ನೀನು ರೋಹಿತ್ತುಗಳೆಂಬ ಕುದುರೆಗಳಿಂದ ಕೂಡಿದ್ದೀಯೆ. ಅವುಗಳೊಂದಿಗೆ ಹೋಗಿ ಮೂವತ್ತುಮೂರು ಸಂಖ್ಯೆಗಳುಳ್ಳ ಆ ದೇವತೆಗಳನ್ನು ಇಲ್ಲಿಗೆ ಕರೆದುಕೊಂಡು ಬಾ

## English Translation

The wise gods are givers of rewards to the offerer of oblations; O Agni with the red horses, being praised by hymns, bring hither three and thirty (thirty-three) gods.

॥ ವಿಶೇಷವಿಷಯಗಳು ॥

**ಶ್ರುಷ್ಟೀವಾನಃ— ಫಲಸ್ಯ ದಾತಾರಃ । ಪ್ರಾರ್ಥಿತಸ್ಯ ಫಲಸ್ಯ ದಾತಾರಃ ।** ಅಪೇಕ್ಷಿಸಿದ ಫಲಗಳನ್ನು ಕೊಡುವವರು.

**ವಿಚೇತಸಃ— ವಿಶಿಷ್ಟಪ್ರಜ್ಞಾನಾಃ ।** ಎಲ್ಲವನ್ನೂ ತಿಳಿದವರು, ಜ್ಞಾನಯುಕ್ತರು.

**ರೋಹಿದಶ್ವ—** ರೋಹಿತ್ ಎಂದು ಅಗ್ನಿಯ ವಾಹನ ಅಥವಾ ಕುದುರೆಗೆ ಹೆಸರು. ಯಾಸ್ಕರು ಈ ವಿಷಯದಲ್ಲಿ—**ಹರೀ ಇಂದ್ರಸ್ಯ । ರೋಹಿತೋಽಗ್ನೇಃ ।** (ನಿ. ೨-೨೮) ಎಂದು ಹೇಳಿರುವರು. ರೋಹಿತವೆಂಬ ಕುದುರೆಯುಳ್ಳ ಅಗ್ನಿಯೆಂದರ್ಥವು.

**ಗಿರ್ವಣಃ—ಗೀರ್ಭಿಃ ಸ್ತುತಿಭಿಃ ।** ಸ್ತುತಿರೂಪವಾದ ವಾಕ್ಯಗಳಿಂದ ಸ್ತುತಿಸಲ್ಪಡುವವನು. ಅಥವಾ ದೇವನು. ಯಾಸ್ಕರು—**ಗಿರ್ವಣಾ ದೇವೋ ಭವತಿ ಗೀರ್ಭಿರೇನಂ ವನಯಂತಿ** (ನಿ. ೬-೧೪) ಎಂದು ಹೇಳಿರುವರು.

**ತ್ರಯಸ್ತ್ರಿಂಶತಂ—**ಹಿಂದೆ ಹೇಳಿದ ವಸುಗಳು ೮, ರುದ್ರರು ೧೧, ಆದಿತ್ಯರು ೧೨, ಒಟ್ಟು ಮೂವತ್ತು ಮೂರು ದೇವತೆಗಳು ಅಥವಾ ಮೂವತ್ತುಮೂರು ವಿಧವಾದ (ಸಂಗಡ) ದೇವತೆಗಳು.

ವ್ಯಾಕರಣಪ್ರಕ್ರಿಯಾ

**ಶ್ರುಷ್ಟೀವಾನಃ—**ಶ್ರುಶ್ ಧಾತುವಿಗೆ ಪ್ರೇರಣೆ ಎಂದು ಅರ್ಥ. ಇದರ ಮುಂದೆ ಭಾವಾರ್ಥದಲ್ಲಿ ಕ್ತಿನ್, ಶ್ರುಶ್+ತಿ. **ತ್ರಿತುತ್ರ—,** ಎಂದು ಇಟ್ ಬರುವುದಿಲ್ಲ. **ವ್ರಶ್ಚಭ್ರಸ್ಜ—,** ಎಂದು ಶ್‌ಗೆ ಷಕಾರ. ಷ್ಟುತ್ವ, ವನ ಷಣಸಂಭಕ್ತೌ, ಶ್ರುಷ್ಟಿಂ ವನಂತಿ=ಸಂಭಜಂತೇ ಇತಿ ಶ್ರುಷ್ಟೀವಾನಃ, ಪ್ರೇರಿಸುವಿಕೆಯನ್ನು ಹೊಂದಿರುವರು ಎಂದು ಅರ್ಥ. **ಅನ್ಯೇಭ್ಯೋಽಪಿ ದೃಶ್ಯಂತೇ** ಎಂದು ವಿಚ್. **ಅನ್ಯೇಷಾಮಪಿ ದೃಶ್ಯತೇ** ಎಂದು ಪೂರ್ವಪದಕ್ಕೆ ದೀರ್ಘ. ಜಸ್, **ಸರ್ವನಾಮಸ್ಥಾನೇಚಾ—,** ಎಂದು ಉಪಧಾದೀರ್ಘ.

**ವಿಚೇತಸಃ—**ವಿಶಿಷ್ಟಂ ಚೇತಃ ಯೇಷಾಂ ತೇ ಎಂದು ಬಹುವ್ರೀಹಿ ಸಮಾಸ. ಪೂರ್ವಪದಪ್ರಕೃತಿ ಸ್ವರ ಬರುತ್ತೆ.

**ಗಿರ್ವಣಃ**—ಗೄ ಶಬ್ದೇ **ಕ್ವಿಪ್ ಚ** ಎಂದು ಕ್ವಿಪ್. **ಋತ ಇದ್ಧಾತೋಃ** ಎಂದು ಋಗೆ ಇಕಾರ. ಅದು **ಉರಣ್ರಪರಃ** ಎಂಬುದರಿಂದ ರೇಫಶಿರಸ್ಕವಾಗಿ ಬರುತ್ತೆ. ನಿರ್, ವನಸಂಭಕ್ತೌ, ಗೀರ್ಭಿಃ ವನ್ಯತೇ ಇತಿ ಗಿರ್ವನಃ **ಸರ್ವಧಾತುಭ್ಯೋಽಸುನ್** ಎಂದು ಅಸುನ್ ಪ್ರತ್ಯಯ. **ಹಲಿಚ** (ಪಾ. ಸೂ. ೮-೨-೭೭) ವ್ಯಂಜನ ಪರದಲ್ಲಿ ಇರುವಾಗ ರೇಫಾಂತ ಅಥವಾ ವಕಾರಾಂತ ಧಾತುವಿನ ಉಪಧಾಭೂತವಾದ ಇಕ್‌ಗೆ ದೀರ್ಘ ಬರುತ್ತೆ ಎಂಬುದರಿಂದ ಗಿರ್‌ನ ಇಕಾರಕ್ಕೆ ದೀರ್ಘ ಬರಬೇಕು. ಅಥವಾ ಅನ್ತರ್ವರ್ತಿವಿಭಕ್ತಿಯನ್ನು ನಿಮಿತ್ತಮಾಡಿಕೊಂಡು ಪದಸಂಜ್ಞೆ ಇರುವುದರಿಂದ **ರ್ವೋರುಪಧಾಯಾ ದೀರ್ಘ ಇಕಃ** (ಪಾ, ಸೂ. ೮-೨-೭೬) ಪದಾಂತವಿಷಯದಲ್ಲಿ ರೇಫಾಂತ ಅಥವಾ ವಕಾರಾಂತಧಾತುವಿನ ಉಪಧಾಭೂತವಾದ ಇಕ್‌ಗೆ ದೀರ್ಘ ಬರುತ್ತೆ ಎಂದಾಗಲೀ ಗಿರ್‌ನ ಇಕಾರಕ್ಕೆ ದೀರ್ಘ ಬರಬೇಕು. **ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ** ಎಂದು ಇವು ಛಂದಸ್ಸಿನಲ್ಲಿ ವಿಕಲ್ಪಗಳಾದ್ದರಿಂದ ಇಲ್ಲಿ ಬರುವುದಿಲ್ಲ

**ತ್ರಯಸ್ತ್ರಿಂಶತಂ**—ತ್ರಯಶ್ಚ ತ್ರಿಂಶಚ್ಚ ತ್ರಯಸ್ತ್ರಿಂಶತ್, ಅಥವಾ ತ್ರಿಭಿಃ ಅಧಿಕಾ ತ್ರಿಂಶತ್ ತ್ರಯಸ್ತ್ರಿಂಶತ್ ಎಂದು ವಿಗ್ರಹ. **ತ್ರೇ ಸ್ತ್ರಯಃ** (ಪಾ. ಸೂ. ೬-೩-೪೮) ಶತಕ್ಕಿಂತಲೂ **ಕಮ್ಮಿ**ಯಾದ ಸಂಖ್ಯಾ **ವಾಚಕವು** ಪರದಲ್ಲಿದ್ದರೆ ತ್ರಿಶಬ್ದಕ್ಕೆ ತ್ರಯಸ್ ಆದೇಶ ಬರುತ್ತೆ. ಆದರೆ ಬಹುವ್ರೀಹಿಸಮಾಸದಲ್ಲಿಯೂ, **ಅಶೀತಿ** ಶಬ್ದ ಪರದಲ್ಲಿದ್ದರೂ ಈ ಆದೇಶ ಬರುವುದಿಲ್ಲ ಎಂಬುದರಿಂದ ನೂರಕ್ಕಿಂತಲೂ ಕಮ್ಮಿಯಾದ ಸಂಖ್ಯೆಯನ್ನು ಬೋಧಿಸುವ ತ್ರಿಂಶತ್ ಶಬ್ದ ಪರದಲ್ಲಿರುವಾಗ ತ್ರಿಶಬ್ದಕ್ಕೆ ತ್ರಯಸ್ ಆದೇಶ. ತ್ರಯಸ್+ತ್ರಿಂಶತ್, **ಪಙ್ಕ್ತಿವಿಂಶತಿ ತ್ರಿಂಶತ್**—, (ಪಾ. ಸೂ ೫-೧-೫೯) ಎಂಬಲ್ಲಿ ತ್ರಯೋದಶತಃ ಪರಿಮಾಣಮಸ್ಯ ಎಂದು ವಿವಕ್ಷಿಸಿದಾಗ ತ್ರಿಶಬ್ದಕ್ಕೆ ತ್ರಿನ್ ಆದೇಶ. ಅಥವಾ ತ್ರಿಂ ಆದೇಶವೂ ತ್ರಿಶಬ್ದದ ಮುಂದೆ ಶತಿಪ್ರತ್ಯಯವೂ ನಿಪಾತಿಸಲ್ಪಟ್ಟಿದೆ. ತ್ರಯಸ್ತ್ರಿಂಶತಾಂ ಪೂರಣಾಃ ಎಂದು ವಿಗ್ರಹ. **ತಸ್ಯಪೂರಣೇಡಟ್** (ಪಾ. ಸೂ. ೫-೨-೪೮) ಎಂಬುದರಿಂದ ಡಟ್ ಪ್ರತ್ಯಯ. ಇದಕ್ಕೆ **ವಿಂಶತ್ಯಾದಿಭ್ಯಸ್ತಮುಡನ್ಯತರಸ್ಯಾಮ್** (ಪಾ. ಸೂ. ೫-೨-೫೬) ಎಂಬುದರಿಂದ ತಮುಟ್ ಎಂಬ ಆಗಮ ಬರುತ್ತೆ ತ್ರಯಸ್ತ್ರಿಂಶತಂ ಎಂದಾಗುತ್ತೆ. ॥ ೨ ॥



ಸಂಹಿತಾಪಾಠಃ

ಪ್ರಿಯಮೇಧವದತ್ರಿವಜ್ಜಾತವೇದೋ ವಿರೂಪವತ್ ।

ಅಂಗಿರಸ್ವನ್ಮಹಿವ್ರತ ಪ್ರಸ್ಕಣ್ವಸ್ಯ ಶ್ರುಧೀ ಹವಂ ॥ ೩ ॥

ಪದಪಾಠಃ

ಪ್ರಿಯಮೇಧಽವತ್ । ಅತ್ರಿಽವತ್ । ಜಾತಽವೇದಃ । ವಿರೂಪಽವತ್ ।
ಅಂಗಿರಸ್ವತ್ । ಮಹಿಽವ್ರತ । ಪ್ರಸ್ಕಣ್ವಸ್ಯ । ಶ್ರುಧಿ । ಹವಂ ॥ ೩ ॥

॥ ಸಾಯಣಭಾಷ್ಯಂ ॥

ಹೇ ಮಹಿವ್ರತ ಪ್ರಭೂತಕರ್ಮನ್ ಜಾತವೇದೋಽಗ್ನೇ ಪ್ರಸ್ಕಣ್ವಸ್ಯ ಕಣ್ವಪುತ್ರಸ್ಯ ಮಹರ್ಷೇರ್ಹವಮಾಹ್ವಾನಂ ಶ್ರುಧಿ । ಶೃಣು । ತತ್ರ ಚತ್ವಾರೋ ದೃಷ್ಟಾಂತಾಃ । ಪ್ರಿಯಮೇಧಾತ್ರಿವಿರೂಪಾಂಗಿರೋನಾಮಕಾ ಏತೇಷಾಮಾಹ್ವಾನಂ ಯಥಾ ಶೃಣೋಷಿ ತದ್ವತ್ । ಅತ್ರ ನಿರುಕ್ತಂ । ಪ್ರಿಯಮೇಧಃ ಪ್ರಿಯಾ ಅಸ್ಯ ಮೇಧಾ ಯಥೈತೇಷಾಮೃಷೀಣಾಮೇವಂ ಪ್ರಸ್ಕಣ್ವಸ್ಯ ಶೃಣು ಹ್ವಾನಂ । ಪ್ರಸ್ಕಣ್ವಃ ಕಣ್ವಸ್ಯ ಪುತ್ರಃ ಕಣ್ವಪ್ರಭವೋ ಯಥಾ ಪ್ರಾಗ್ರಮಿತಿ । ವಿರೂಪೋ ನಾನಾರೂಪೋ ಮಹಿವ್ರತೋ ಮಹಾವ್ರತ ಇತಿ ಚ । ನಿ. ೩-೧೭ ॥ ಪ್ರಿಯಮೇಧವತ್ । ಪ್ರಿಯಮೇಧಸ್ಯೇವ । ತತ್ರ ತಸ್ಯೇವ । ಪಾ. ೫-೧-೧೧೬ । ಇತಿ ಷಷ್ಠ್ಯರ್ಥೇ ವತಿಃ । ಏವಮತ್ರಿವದಿತ್ಯಾದಾವಪಿ । ಪ್ರಸ್ಕಣ್ವಾದಯೋ ಗತಾಃ ॥

॥ ಪ್ರತಿಪದಾರ್ಥ ॥

**ಮಹಿವ್ರತ**— ಪ್ರಭಾವಯುತವಾದ ಕರ್ಮಕಾರಿಯಾಗಿಯೂ । **ಜಾತವೇದಃ**— ಉತ್ಪನ್ನವಾದ ಸಕಲವನ್ನೂ ತಿಳಿದವನಾಗಿಯೂ ಇರುವ ಅಗ್ನಿಯೇ । **ಪ್ರಿಯಮೇಧವತ್**— ಪ್ರಿಯಮೇಧನ ಆಹ್ವಾನವನ್ನು ಆಲಿಸಿದಂತೆಯೂ । **ಅತ್ರಿವತ್**—ಅತ್ರಿಯ ಆಹ್ವಾನವನ್ನು ಆಲಿಸಿದಂತೆಯೂ । **ವಿರೂಪವತ್**—ವಿರೂಪನ ಕರೆಯನ್ನು ಕೇಳಿದಂತೆಯೂ । **ಅಂಗಿರಸ್ವತ್**— ಅಂಗಿರಸನ ಕರೆಯನ್ನು ಕೇಳಿದಂತೆಯೂ । **ಪ್ರಸ್ಕಣ್ವಸ್ಯ**—ಕಣ್ವಪುತ್ರನಾದ ಪ್ರಸ್ಕಣ್ವಮಹರ್ಷಿಯ । **ಹವಂ**—ಆಹ್ವಾನವನ್ನು । **ಶ್ರುಧಿ**— ಕೇಳು. ।

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಉತ್ಪನ್ನವಾದ ಸಕಲವನ್ನೂ ತಿಳಿಯುವವನು. ಪ್ರಿಯಮೇಧ, ಅತ್ರಿ, ವಿರೂಪ, ಮತ್ತು ಅಂಗಿರಸ್ಸು ಇವರುಗಳ ಆಹ್ವಾನವನ್ನು ಕೇಳಿರುವಂತೆ ಈಗಲೂ ಸಹ ಕಣ್ವಪುತ್ರನಾದ ಪ್ರಸ್ಕಣ್ವಮಹರ್ಷಿಯ ಆಹ್ವಾನವನ್ನು ಆಲಿಸಿ ಅವನನ್ನನುಗ್ರಹಿಸು.

## English Translation

Agni, accomplisher of great acts, you know all that are born ; hear the invocation of Praskanwa, as you have heard those of Priyamedha, of Atri, of Virupa, of Angiras.

### ವಿಶೇಷವಿಷಯಗಳು

**ಪ್ರಿಯಮೇಧವತ್**—ಪ್ರಿಯಮೇಧ ಎಂಬ ಋಷಿಯು ಆಹ್ವಾನವನ್ನು ಕೇಳಿದಂತೆ. ಋಗ್ವೇದದಲ್ಲಿ ಪ್ರಿಯಮೇಧ ಆಂಗಿರಸಃ ಎಂದರೆ ಅಂಗಿರಸ ಪುತ್ರನಾದ ಅಥವಾ ಅಂಗಿರಸವಂಶಸ್ಥನಾದ ಪ್ರಿಯಮೇಧನೆಂಬ ಋಷಿಯು. ಋ. ಸಂ. ಎಂಟನೆಯ ಮಂಡಲದ ಎರಡನೆಯ ಸೂಕ್ತದಲ್ಲಿ ೧-೪೦ ಋಕ್ಕುಗಳಿಗೆ ಮೇಧಾತಿಥಿಃ ಕಾಣ್ವಃ ಎಂಬ ಋಷಿಯೊಡನೆ ತಾನೂ ಋಷಿಯಾಗಿರುವನು ಮತ್ತು ಇದೇ ಮಂಡಲದ ೬೮ನೇ ಸೂಕ್ತದ ೧೯ ಋಕ್ಕುಗಳಿಗೂ, ೬೯ನೇ ಸೂಕ್ತದ ೧೮ ಋಕ್ಕುಗಳಿಗೂ, ೮೭ನೇ ಸೂಕ್ತದ ೬ ಋಕ್ಕುಗಳಿಗೂ. ಒಂಭತ್ತನೆಯಮಂಡಲದಲ್ಲಿ ೨೮ನೇ ಸೂಕ್ತದ ೬ ಋಕ್ಕುಗಳಿಗೂ, ಒಟ್ಟು ೮೯ ಋಕ್ಕುಗಳಿಗೆ ಋಷಿಯಾಗಿರುವನು. ಈ ಪ್ರಿಯಮೇಧನ ಹೆಸರು ಅನೇಕ ಋಕ್ಕುಗಳಲ್ಲಿ ಪಠಿತವಾಗಿದೆ—

> **ದಧ್ಯಙ್ಹ ಮೇ ಜನುಷಂ ಪೂರ್ವೋ ಅಂಗಿರಾಃ ಪ್ರಿಯಮೇಧಃ ಕಣ್ವೋ ಅತ್ರಿರ್ಮನುರ್ವಿದುಸ್ತೇ ಮೇ ಪೂರ್ವೇ ಮನುರ್ವಿದುಃ**
>
> (ಋ. ಸಂ. ೧-೧೩೯-೯)

> **ಯಥಾ ಚಿತ್ಕಣ್ವಮಾವತಂ ಪ್ರಿಯಮೇಧಮುಪ ಸ್ತುತಂ ।**
>
> (ಋ. ಸಂ. ೮-೫-೨೫)

> **ಅರ್ವಾಂಚಂ ತ್ವಾ ಪುರುಷ್ಟುತ ಪ್ರಿಯಮೇಧಸ್ತುತಾ ಹರೀ ।**
>
> (ಋ. ಸಂ. ೮-೬-೪೫.)

ಈ ಋಷಿಯು ಅಂಗಿರಸವಂಶಸ್ಥನಾದರೂ ಕಣ್ವವಂಶಸ್ಥನಾದ ಮೇಧಾತಿಥಿ ಎಂಬ ಋಷಿಯೊಡನೆ ವಿಶೇಷವಾಗಿ ಅನೇಕ ಸ್ತೋತ್ರಗಳನ್ನೂ ಯಜ್ಞಗಳನ್ನೂ ಮಾಡಿರುವುದಾಗಿ ತಿಳಿಯಬರುವುದು. ಕಣ್ವವಂಶಸ್ಥರೊಡನೆ ಪ್ರಿಯಮೇಧ ಋಷಿಯ ಮತ್ತು ಇವರ ಪುತ್ರರ ಬಳಕೆಯು ವಿಶೇಷವಾಗಿತ್ತೆಂದು ಕಂಡುಬರುವುದು- ಪ್ರಿಯಮೇಧಾಃ-ಪ್ರಿಯಮೇಧನ ಪುತ್ರರು ಅಥವಾ ಅವನ ವಂಶಸ್ಥರು ಎಂಬ ಅರ್ಥವನ್ನು ಸೂಚಿಸುವ ಶಬ್ದಗಳಿರುವ ಋಕ್ಕುಗಳು ಅನೇಕವಿವೆ—

> **ಮಹಿಕೇರವ ಊತಯೇ ಪ್ರಿಯಮೇಧಾ ಅಹೂಷತ ।**
>
> (ಋ. ಸಂ. ೧-೪೫-೪)

> **ಯಜಧ್ವೈನಂ ಪ್ರಿಯಮೇಧಾ ಇಂದ್ರಂ ಸತ್ರಾಚಾ ಮನಸಾ ।**
>
> (ಋ. ಸಂ. ೮-೨-೩೭)

> **ಇಂದ್ರಂ ಸ್ತೋಮೇಭಿರ್ಮಹಯಂತ ಆಯವಃ ಪ್ರಿಯಮೇಧಾಸೋ ಅಸ್ವರನ್ ।**
>
> (ಋ. ಸಂ. ೮-೩-೧೬)

> **ಧೀಭಿಃ ಸಾತಾನಿ ಕಾಣ್ವಸ್ಯ ವಾಜಿನಃ ಪ್ರಿಯಮೇಧೈರಭಿದ್ಯುಭಿಃ ।**
>
> (ಋ. ಸಂ. ೮-೩-೨೦)

**ಆ ವಾಂ ವಿಶ್ವಾಭಿರೂತಿಭಿಃ ಪ್ರಿಯಮೇಧಾ ಅಹೂಷತ ।**
(ಋ. ಸ. ೮-೮-೧೮)

**ಅರ್ಚತ ಪ್ರಾರ್ಚತ ಪ್ರಿಯಮೇಧಾಸೋ ಅರ್ಚತ ।**
(ಋ. ಸಂ. ೮-೬೯-೮)

**ಆ ವಾಂ ವಿಶ್ವಾಭಿರೂತಿಭಿಃ ಪ್ರಿಯಮೇಧಾ ಅಹೂಷತ ।**
(ಋ. ಸಂ. ೮-೮೭-೩.)

**ವಯಃ ಸುಪರ್ಣಾ ಉಪಸೇದುರಿಂದ್ರಂ ಪ್ರಿಯಮೇಧಾ ಋಷಯೋ ನಾಧಮಾನಾಃ ।**
(ಋ. ಸಂ. ೧೦-೭೩-೧೧)

ಆದುದರಿಂದ ಈ ಪ್ರಿಯಮೇಧಋಷಿಯು ಒಬ್ಬ ಪ್ರಸಿದ್ಧನಾದ ಋಷಿಯಾಗಿದ್ದುದಲ್ಲದೆ ಎಲ್ಲರಿಂದಲೂ ಗೌರವಿಸಲ್ಪಡುತ್ತಿದ್ದನೆಂದು ಊಹಿಸಬಹುದು.

**ಅತ್ರಿವತ್**— ಅತ್ರಿಋಷಿಯು ಬಹಳ ಪ್ರಸಿದ್ಧನಾದ ಋಷಿಯು. ಇವನೂ ಇವನ ವಂಶಸ್ಥರೂ ಋಗ್ವೇದ ಐದನೆಯ ಮಂಡಲದ ಸೂಕ್ತಗಳಿಗೆ ಋಷಿಗಳು. ಈ ಋಷಿಯ ವಂಶಸ್ಥರಿಗೂ ಪ್ರಿಯಮೇಧ, ಕಣ್ವ, ಗೋತಮ ಈ ಋಷಿಗಳ ವಂಶಸ್ಥರಿಗೂ ವಿಶೇಷ ಸಂಬಂಧ ಮತ್ತು ಬಳಕೆಯು ಇದ್ದಿತೆಂದು ಋ. ಸ. ೧-೪೫-೩; ೧-೧೩೯-೯ ೮-೫-೨೫; ಐತರೇಯಬ್ರಾಹ್ಮಣ ೮-೨೨; ಋ. ಸಂ. ೧-೧೧೮-೭; ೫-೪೧-೪; ೧೦-೧೫೦-೫; ೧-೧೮೩-೫. ಈಋಕ್ಕುಗಳಿಂದ ತಿಳಿದುಬರುವುದು. ಮತ್ತು ಋ. ಸಂ. ೫-೫೨-೯; ೫-೫೨-೧೭. ಈ ಎರಡುಋಕ್ಕುಗಳಲ್ಲಿ ಪರುಷ್ಣಿ ಮತ್ತು ಯಮುನಾ ಎಂಬ ನದಿಗಳ ಹೆಸರು ಸೂಚಿತವಾಗಿರುವುದರಿಂದ ಇವರು ಆ ನದಿಗಳಿಗಿರುವ ವಿಸ್ತಾರವಾದ ಪ್ರದೇಶದಲ್ಲಿ ನೆಲಸಿದ್ದರೆಂದು ವ್ಯಕ್ತವಾಗುವುದು.

**ವಿರೂಪವತ್**—ವಿರೂಪನೆಂಬ ಋಷಿಯು ಅಂಗಿರಾಋಷಿಯ ವಂಶಸ್ಥನು. ಈ ಋಷಿಯ ಹೆಸರ ಈ ಋಕ್ಕಿನಲ್ಲಲ್ಲದೆ—

**ತಸ್ಮೈ ನೂನಮಭಿದ್ಯವೇ ವಾಚಾ ವಿರೂಪ ನಿತ್ಯಯಾ**
(ಋ ಸಂ. ೮-೭೫-೬)

ಎಂಬ ಋಕ್ಕಿನಲ್ಲಿ ಮಾತ್ರ ಇರುವುದರಿಂದ ಈ ಋಷಿಯ ವಿಷಯದಲ್ಲಿ ನಮಗೆ ಹೆಚ್ಚು ಸಂಗತಿ ತಿಳಿದಿಲ್ಲ.

**ಅಂಗಿರಸ್ವತ್**—ಅಂಗಿರಾಋಷಿಯು ಬಹಳ ಪ್ರಸಿದ್ಧನಾದವನು ಮತ್ತು ಆಹೆಸರಿನ ಋಷಿವಂಶಕ್ಕೆ ಮೂಲ ಪುರುಷನು. ಇವನ ಹೆಸರು ಋ. ಸಂ. ೧-೪೫-೩: ೧-೧೩೯-೯; ೩-೩೧-೭ ಮುಂತಾದ ಋಕ್ಕುಗಳಲ್ಲಿ ಪಠಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಪ್ರಿಯಮೇಧವತ್**—ಪ್ರಿಯಮೇಧಸ್ಯೇವ ಎಂದು ವಿಗ್ರಹ. **ತತ್ರ ತಸ್ಯೇವ** (ಪಾ. ಸೂ. ೫-೧-೧೧೬ ತತ್ರೇವ, ತಸ್ಯೇವ ಎಂಬ ಅರ್ಥಗಳಲ್ಲಿ ಸಪ್ತಮ್ಯಂತ ಷಷ್ಠ್ಯಂತಗಳ ಮುಂದೆ ವತಿಪ್ರತ್ಯಯ ಬರುತ್ತೆ ಎಂದು ವತಿ ಪ್ರತ್ಯಯ. ಇಕಾರ ಉಚ್ಚಾರಣಾರ್ಥ. 'ತಸಿವತೀ' ಎಂದು ಪರಿಗಣಿಸಿದೆ. ಆದ್ದರಿಂದ **ತದ್ಧಿತಶ್ಚಾ ಸರ್ವವಿಭಕ್ತಿಃ** ಎಂದು ಅವ್ಯಯಸಂಜ್ಞೆ. ಇದರ ಮುಂದೆ ಬರುವ ಸುಪ್‌ಗೆ **ಅವ್ಯಯಾದಾಪ್ಸುಪಃ** ಎಂದು ಲುಕ್ ಬರುತ್ತೆ.

**ಅತ್ರಿವತ್**—ಹಿಂದಿನಂತೇ ಇಲ್ಲಿಯೂ ಪ್ರಕ್ರಿಯೆ ಹೇಳಬೇಕು.

**ಜಾತವೇದಃ**—(ಋ. ಸಂ. ೧-೪೪-೧) ರಲ್ಲಿ ವಿವರಿಸಿದೆ.

**ವಿರೂಪವತ್**—ವಿರೂಪಸ್ಯೇವ. ಷಷ್ಠ್ಯಂತದ ಮುಂದೆ ವತಿ ಪ್ರತ್ಯಯ

**ಅಙ್ಗಿರಸ್ವತ್**—ಅಙ್ಗಿರಸ ಇವ ಅಙ್ಗಿರಸ್ವತ್ **ತತ್ರ ತಸ್ಯೇವ** ಎಂದು ವತಿ ಪ್ರತ್ಯಯ.

**ಪ್ರಸ್ಕಣ್ವಸ್ಯ**—(ಋ ಸಂ. ೪೪-೬)ರಲ್ಲಿ ವಿವರಿಸಿದೆ.

**ಶ್ರುಧಿ**—**ಅನ್ಯೇಷಾಮಪಿ ದೃಶ್ಯತೇ** ಎಂದು ದೀರ್ಘ ಬರುತ್ತೆ. ಮಿಕ್ಕ ಪ್ರಕ್ರಿಯೆಯನ್ನು (ಋ ಸು. ೪೫ ೧) ರಲ್ಲಿ ಕೊಟ್ಟಿದೆ ॥ ೩ ॥

॥ ಸಂಹಿತಾಪಾಠಃ ॥

ಮಹಿಕೇರವ ಊತಯೇ ಪ್ರಿಯಮೇಧಾ ಅಹೂಷತ
ರಾಜನ್ತಮಧ್ವರಾಣಾಮಗ್ನಿಂ ಶುಕ್ರೇಣ ಶೋಚಿಷಾ ॥ ೪ ॥

ಪದಪಾಠಃ

ಮಹಿಽಕೇರವಃ । ಊತಯೇ । ಪ್ರಿಯಽಮೇಧಾಃ । ಅಹೂಷತ ।
ರಾಜನ್ತಂ । ಅಧ್ವರಾಣಾಂ । ಅಗ್ನಿಂ । ಶುಕ್ರೇಣ । ಶೋಚಿಷಾ ॥ ೪ ॥

ಸಾಯಣಭಾಷ್ಯಂ

**ಮಹಿಕೇರವಃ ಪ್ರೌಢಕರ್ಮಾಣಃ ಪ್ರಿಯಮೇಧಾಃ ಪ್ರಿಯೇಣ ಯಜ್ಞೇನೋಪೇತಾ ಋಷಯ ಊತಯೇ ರಕ್ಷಾರ್ಥಮಗ್ನಿಮಹೂಷತ । ಆಹೂತವಂತಃ । ಕೀದೃಶಂ ಅಧ್ವರಾಣಾಂ ಯಜ್ಞಾನಾಂ ಮಧ್ಯೇ ಶುಕ್ರೇಣ ಶೋಚಿಷಾ ಶುದ್ಧೇನ ಪ್ರಕಾಶೇನ ರಾಜಂತಂ ದೀಪ್ಯಮಾನಂ ॥ ಮಹಿಕೇರವಃ । ಮಹ ಪೂಜಾಯಾಂ । ಔಣಾದಿಕ ಇನ್ಪ್ರತ್ಯಯಃ । ಡುಕೃಞ್ ಕರಣೇ । ಕೃವಾಪಾಜೀತ್ಯುಣ್ । ಮಹಯೋ ಮಹಾಂತಃ ಕಾರವೋ ಯೇಷಾಂ ತೇ ತಥೋಕ್ತಾಃ । ಆಕಾರಸ್ಯೈಕಾರಾದೇಶಶ್ಛಾಂದಸಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಪ್ರಿಯಮೇಧಾಃ । ಪ್ರಿಯೋ ಮೇಧೋ ಯೇಷಾಂ ತೇ । ಅಹೂಷತ । ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ । ಲುಙಿ ಸಿಚಿ ಬಹುಲಂ ಛಂದಸೀತಿ ಸಂಪ್ರಸಾರಣಂ ಪರಪೂರ್ವತ್ವಂ । ಹಲ ಇತಿ ದೀರ್ಘತ್ವಂ ಆದೇಶಪ್ರತ್ಯಯಯೋರಿತಿ ಷತ್ವಂ ॥**

॥ ಪ್ರತಿಪದಾರ್ಥ ॥

**ಮಹಿಕೇರವಃ**—ಮಹತ್ತಾದ ಕರ್ಮಕಾರಿಗಳಾಗಿಯೂ । **ಪ್ರಿಯಮೇಧಾಃ**—ಒಲವಿನ ಯಜ್ಞದಿಂದ ಕೂಡಿದವರಾಗಿಯೂ ಇರುವ ಋಷಿಗಳು ಅಥವಾ ಪ್ರಿಯಮೇಧ ಋಷಿಯ ವಂಶಸ್ಥರು । **ಊತಯೇ**—ತಮ್ಮ ರಕ್ಷಣೆಗೋಸ್ಕರ । **ಅಧ್ವರಾಣಾಂ** ಯಜ್ಞಗಳ ನಡುವೆ । **ಶುಕ್ರೇಣ ಶೋಚಿಷಾ**—ಶುದ್ಧವಾದ ಜ್ವಾಲೆಯಿಂದ । **ಅಗ್ನಿಂ**—ಅಗ್ನಿದೇವನನ್ನು । **ರಾಜಂತಂ**—ದೇದೀಪ್ಯಮಾನನಾದ । **ಅಹೂಷತ**—ಪ್ರಾರ್ಥಿಸಿ ಕರೆದಿದ್ದಾರೆ.

ಭಾವಾರ್ಥ

ಋಷಿಗಳು ಶುದ್ಧ ಹೃದಯರು. ಶ್ರೇಷ್ಠವಾದ ಕರ್ಮಗಳನ್ನು ಮಾಡುವವರು. ಯಜ್ಞಪ್ರಿಯರು. ಇಂತಹ ಪ್ರಿಯಮೇಧ ಋಷಿಯ ವಂಶಸ್ಥರು ತಮ್ಮ ರಕ್ಷಣೆಗೂ, ಯಜ್ಞ ರಕ್ಷಣೆಗೂ ಸಹ ಅಗ್ನಿದೇವನನ್ನು ಪ್ರಾರ್ಥಿಸಿ ಕರೆದಿದ್ದಾರೆ. ಅವನು ಯಜ್ಞಗಳ ನಡುವೆ ಶುದ್ಧವಾದಜ್ವಾಲೆಯಿಂದ ಕೂಡಿಕೊಂಡು ದೇದೀಪ್ಯಮಾನನಾಗಿದ್ದಾನೆ.

English Translation

The performers of great ceremonies, the offerers of acceptable sacrifices (or the Priyamedhas) have invoked for their protection Agni, shining with brilliant splendour in the midst of sacrifices.

ವಿಶೇಷವಿಷಯಗಳು

**ಮಹಿಕೇರವಃ—ಪ್ರೌಢಕರ್ಮಾಣಃ** । ದೊಡ್ಡ ದೊಡ್ಡ ಯಜ್ಞಾದಿಗಳನ್ನು ಮಾಡುವ, performers of great sacrifices.

**ಪ್ರಿಯಮೇಧಾಃ—ಪ್ರಿಯೇಣ ಯಜ್ಞೇನೋಪೇತಾಃ ।** ದೇವತೆಗಳಿಗೆ ಅಥವಾ ಅಗ್ನಿಗೆ ಪ್ರಿಯವಾದ ಯಜ್ಞವನ್ನು ಮಾಡುವ. ಅಥವಾ ಈ ಶಬ್ದಕ್ಕೆ ಪ್ರಿಯಮೇಧಋಷಿಯ ವಂಶಸ್ಥರು ಎಂದು ಬೇಕಾದರೂ ಹೇಳಬಹುದು.

**ಅಗ್ನಿಂ ಶುಕ್ರೇಣ ಶೋಚಿಷಾ**—ಬಿಳಿ ಪ್ರಕಾಶಮಾನವಾದ ಕಾಂತಿಯಿಂದ ಬೆಳಗುತ್ತಿರುವ ಅಗ್ನಿಯನ್ನು

॥ ವ್ಯಾಕರಣಪ್ರಕ್ರಿಯಾ ॥

**ಮಹಿಕೇರವಃ**—ಮಹ ಪೂಜಾಯಾಂ. ಇನ್ ಎಂಬ ಔಣಾದಿಕ ಪ್ರತ್ಯಯ ಬರುತ್ತೆ ಮಹಿ ಎಂದಾಗುತ್ತೆ. ಡುಕೃಞ್ ಕರಣೇ. **ಕೃ ವಾ ಪಾಜಿಮಿಸ್ವದಿ ಸಾಧ್ಯಶೂಭ್ಯ ಉಣ್** (ಉ. ಸೂ. ೧-೧) ಎಂದು ಉಣ್ ಪ್ರತ್ಯಯ. **ಅಚೋಞ್ಣಿತಿ** ( ಪಾ. ಸೂ. ೭-೧-೧೧೫ ) ಞಿತ್-ವಾ ಣಿತ್ ಆದ ಪ್ರತ್ಯಯ ಪರದಲ್ಲಿದ್ದರೆ ಅಜಂತವಾದ ಅಂಗಕ್ಕೆ ವೃದ್ಧಿ ಬರುತ್ತೆ ಎಂದು ಋಗೆ ವೃದ್ಧಿ. ಆರ್ ಬರುತ್ತೆ. ಮಹಿಕಾರು ಎಂದಾಯಿತು. ಆಕಾರಕ್ಕೆ ಏಕಾರವು ಛಾಂದಸವಾಗಿ ವಾಗಿ ಬರುತ್ತೆ. ಮಹಿಕೇರು ಶಬ್ದದ ಮುಂದೆ ಜಸ್, **ಜಸಿಚ** ಎಂದು ಗುಣ. ಅವಾದೇಶ, ರುತ್ವ ವಿಸರ್ಗಗಳು; ಮಹಯಃಕಾರವಃ ಯೇಷಾಂ ತೇ ಎಂದು ಬಹುವ್ರೀಹಿ. ಪೂರ್ವಪದಪ್ರಕೃತಿ ಸ್ವರ ಬರುತ್ತೆ.

**ಪ್ರಿಯಮೇಧಾಃ**—ಪ್ರಿಯಃ ಮೇಧಃ ಯೇಷಾಂ ತೇ ಎಂದು ವಿಗ್ರಹ.

**ಅಹೂಷತ**—ಹ್ವೇಞ್ ಸ್ಪರ್ಧಾಯಾಂ ಶಬ್ದೇಚ ೧ನೇಗಣ. ಲುಙ್. **ಸ್ವರಿತ ಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ** ( ಪಾ. ಸೂ. ೧-೩-೭೨ ) ಎಂದು ಕ್ರಿಯಾಫಲವು ಕರ್ತೃಗಾಮಿಯಾದಾಗ ಆತ್ಮನೇಪದ ಬರುತ್ತೆ. ಝ ಆದೇಶ. **ಚ್ಲೇಸ್ಸಿಚ್** ಎಂದು ಚ್ಲಿಗೆ ಸಿಚ್. ಅಡಾಗಮ. ಅಹ್ವೇ+ಸ್+ಝ. **ಆತ್ಮನೇಪದೇಷ್ವನತಃ** ಎಂದು ಝಗೆ ಅತ್. **ಬಹುಲಂ ಛಂದಸಿ** ( ಪಾ. ಸೂ. ೬-೧-೩೪ ) ಛಂದಸ್ಸಿನಲ್ಲಿ ಹ್ವೇಞ್ ಧಾತುವಿಗೆ ಸಂಪ್ರಸಾರಣವು ಬಹುಲವಾಗಿ ಬರುತ್ತೆ ಎಂದು ಸಂಪ್ರಸಾರಣ. ಅಹು+ಏ+ಸ್+ಅತ. **ಸಂಪ್ರಸಾರಣಾಚ್ಚ** ( ಪಾ. ಸೂ. ೬-೧-೧೦೮) ಸಂಪ್ರಸಾರಣದ ಮುಂದೆ ಸ್ವರ ಪರದಲ್ಲಿದ್ದರೆ ಪೂರ್ವಪರಸ್ಥಾನಗಳಿಗೆ ಪೂರ್ವರೂಪ ಏಕಾದೇಶವಾಗಿ ಬರುತ್ತೆ ಎಂದು ಉ+ಏಕಾರಗಳ ಸ್ಥಾನದಲ್ಲಿ ಉ ಒಂದೇ ಆದೇಶ ಬರುತ್ತೆ. **ಹಲಃ** ( ಪಾ. ಸೂ. ೬-೪-೨ ) ಅಂಗಾವಯವವಾದ ವ್ಯಂಜನದ ಮುಂದೆ ಇರುವ ಸಂಪ್ರಸಾರಣವನ್ನು ಕೊನೆಯಲ್ಲಿ ಹೊಂದಿರುವ ಯಾವ ಅಂಗವಿದೆಯೋ ಅದರ ಕೊನೆಯ ವರ್ಣಕ್ಕೆ ದೀರ್ಘ ಬರುತ್ತೆ ಎಂದು ದೀರ್ಘವು ಉಕಾರಕ್ಕೆ ಬರುತ್ತೆ. **ಆದೇಶ ಪ್ರತ್ಯಯಯೋಃ** ಎಂದು ಸಕಾರಕ್ಕೆ ಷಕಾರ. ಅಹೂಷತ ಎಂದು ಆಗುವುದು. ॥ ೪ ॥

|| ಸಂಹಿತಾಪಾಠಃ ||

ಘೃತಾಹವನ ಸಂತ್ಯೇಮಾ ಉ ಷು ಶ್ರುಧೀ ಗಿರಃ ।
ಯಾಭಿಃ ಕಣ್ವಸ್ಯ ಸೂನವೋ ಹವಂತೇಽವಸೇ ತ್ವಾ ॥ ೫ ॥

|| ಪದಪಾಠಃ ||

ಘೃತಽಆಹವನ । ಸಂತ್ಯ । ಇಮಾಃ । ಊಂ ಇತಿ । ಸು । ಶ್ರುಧಿ । ಗಿರಃ ।
ಯಾಭಿಃ । ಕಣ್ವಸ್ಯ । ಸೂನವಃ । ಹವಂತೇ । ಅವಸೇ । ತ್ವಾ ॥ ೫ ॥

|| ಸಾಯಣಭಾಷ್ಯಂ ||

ಹೇ ಘೃತಾಹವನ ಘೃತೇನಾಹೂಯಮಾನ ಸಂತ್ಯ ಫಲಪ್ರದಾಗ್ನೇ ಇಮಾ ಉ ಗಿರೋಽಸ್ಮಾಭಿಃ ಪ್ರಯುಜ್ಯಮಾನಾ ಅಪಿ ಸ್ತೋತ್ರರೂಪಾ ವಾಚಃ ಸು ಶ್ರುಧಿ । ಸುಷ್ಠು ಶೃಣು । ಕಣ್ವಸ್ಯ ಮಹರ್ಷೇಃ ಸೂನವಃ ಪುತ್ರಾ ಯಾಭಿರ್ಗೀರ್ಭಿರವಸೇ ಸ್ವರಕ್ಷಾರ್ಥಂ ತ್ವಾ ಹವಂತೇ ತ್ವಾಮಾಹ್ವಯಂತಿ ॥ ಘೃತಾಹ-ವನ । ಘೃತೇನಾಹೂಯತೇಽಸ್ಮಿನ್ನಿತಿ ಘೃತಾಹವನಃ । ಅಧಿಕರಣೇ ಲ್ಯುಟ್ । ಆಮಂತ್ರಿತಾದ್ಯುದಾತ್ತತ್ವಂ । ಶ್ರುಧಿ । ಶ್ರುಶೃಣುಪೃಕೃವೃಭ್ಯಶ್ಛಂದಸೀತಿ ಹೇರ್ಧಿರಾದೇಶಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥ ೩೧ ॥

ಪ್ರತಿಪದಾರ್ಥ

**ಘೃತಾಹವನ**—ಘೃತರೂಪವಾದ ಹವಿಸ್ಸಿನಿಂದ ಕರೆಯಲ್ಪಡುವವನೂ । **ಸಂತ್ಯ**—ಫಲದಾತನೂ ಆದ ಅಗ್ನಿಯೇ । **ಕಣ್ವಸ್ಯ**—ಕಣ್ವಮಹರ್ಷಿಯ । **ಸೂನವಃ**—ಮಕ್ಕಳು । **ಯಾಭಿಃ**—ಯಾವ ವಾಕ್ಕುಗಳಿಂದ । **ಅವಸೇ**—ರಕ್ಷಣಾರ್ಥವಾಗಿ । **ತ್ವಾ**—ನಿನ್ನನ್ನು । **ಹವಂತೇ**—ಕರೆಯುತ್ತಾರೋ । **ಇಮಾ ಉ ಗಿರಃ**—(ನಮ್ಮಿಂದ ಪ್ರಯುಕ್ತವಾದರೂ ಸಹ) ಅದೇ ಆದ ಸ್ತೋತ್ರರೂಪವಾದ ವಾಕ್ಕುಗಳನ್ನು । **ಸು ಶ್ರುಧಿ**—ಚೆನ್ನಾಗಿ ಆಲಿಸಿ ಕೇಳು.

|| ಭಾವಾರ್ಥ ||

ಯಜ್ಞದಲ್ಲಿ ಘೃತದಿಂದ ಹೋಮಮಾಡಿ ಆಹ್ವಾನಮಾಡಲ್ಪಡುವವನೂ, ಯಜ್ಞಕರ್ತರಿಗೆ ಫಲಪ್ರದನೂ ಆದ ಎಲೈ ಅಗ್ನಿಯೇ, ಕಾಣ್ವಋಷಿಯ ಪುತ್ರರು ತಮ್ಮ ರಕ್ಷಣಾರ್ಥವಾಗಿ ನಿನ್ನನ್ನುದ್ದೇಶಿಸಿ ಮಾಡುವ ಈ ಸ್ತೋತ್ರರೂಪವಾದ ಆಹ್ವಾನವನ್ನು ಚೆನ್ನಾಗಿ ಕೇಳು.

## English Translation

O generous Agni, invoked with ghee, listen to these praises with which the sons of Kanwa invoke you for protection,

॥ ವಿಶೇಷವಿಷಯಗಳು ॥

**ಘೃತಾಹವನ**—ಅಗ್ನಿಯಲ್ಲಿ **ಘೃತ** ( **ತುಪ್ಪ** ) ವನ್ನು **ಹೋಮಮಾಡುವುದರ** ಮೂಲಕ ನಿನ್ನನ್ನು ಆಹ್ವಾನಮಾಡುವರು

**ಸಂತ್ಯ**—ಫಲಪ್ರದನು.

ವ್ಯಾಕರಣಪ್ರಕ್ರಿಯಾ

**ಘೃತಾಹವನ**—ಘೃತೇನ ಆಹೂಯತೇ ಅಸ್ಮಿನ್ ಎಂದು ವಿಗ್ರಹ. **ಕರಣಾಧಿಕರಣಯೋಶ್ಚ** (ಪಾ. ಸೂ ೩-೩-೧೧೭) ಎಂದು ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** ( ಪಾ. ಸೂ ೭-೧-೧ ) ಎಂದು ಯುಗೆ ಅವ ಆದೇಶ. ಹು ಧಾತುವಿಗೆ ಗುಣ. ಅವಾದೇಶ. **ಆಮಂತ್ರಿತಸ್ಯಚ** (ಪಾ. ಸೂ ೮-೧-೧೯) ಎಂಬುದರಿಂದ ಸರ್ವಾನುದಾತ್ತ ಬರುತ್ತೆ.

**ಶ್ರುಧಿ**—(ಋಸಂ ೧-೪೫-೧೩)ರಲ್ಲಿ ವಿವರಿಸಿದೆ. ಸಂಹಿತಾ ಕಾಲದಲ್ಲಿ **ಅನ್ಯೇಷಾಮಪಿ ದೃಶ್ಯತೇ** ಎಂದು ದೀರ್ಘ ಬರುತ್ತೆ. ॥ ೫ ॥



ಸಂಹಿತಾಪಾಠಃ

ತ್ವಾಂ ಚಿತ್ರಶ್ರವಸ್ತಮ ಹವಂತೇ ವಿಕ್ಷು ಜಂತವಃ ।
ಶೋಚಿಷ್ಕೇಶಂ ಪುರುಪ್ರಿಯಾಗ್ನೇ ಹವ್ಯಾಯ ವೋಳ್ಹವೇ ॥ ೬ ॥

॥ ಪದಪಾಠಃ ॥

ತ್ವಾಂ । ಚಿತ್ರಶ್ರವಃ ऽ ತಮ । ಹವಂತೇ । ವಿಕ್ಷು । ಜಂತವಃ ।
ಶೋಚಿಃ ऽ ಕೇಶಂ । ಪುರು ऽ ಪ್ರಿಯ । ಅಗ್ನೇ । ಹವ್ಯಾಯ । ವೋಳ್ಹವೇ ॥ ೬ ॥

ಸಾಯಣಭಾಷ್ಯಂ

**ಅಶ್ವಮೇಧೇ ಪೌಷ್ಣ್ಯಾಮಿಷ್ಟೌ ಸ್ವಿಷ್ಟಕೃತೋಽನುವಾಕ್ಯಾ ತ್ವಾಂ ಚಿತ್ರಶ್ರವಸ್ತಮೇತ್ಯೇಷಾ । ಸರ್ವಾನ್ಕಾಮಾನಾಪ್ಸ್ಯನ್ನಿತಿ ಖಂಡೇ ಸೂತ್ರಿತಂ । ತ್ವಾಂ ಚಿತ್ರಶ್ರವಸ್ತಮ ಯದ್ಧ್ಯಾಹಿಷ್ಠಂ ತದಗ್ನಯೇ । ಆ. ೧೦-೬ । ಇತಿ ॥**

**ಹೇ ಚಿತ್ರಶ್ರವಸ್ತಮಾತಿಶಯೇನ ವಿವಿಧಹವೀರೂಪಾನ್ನಯುಕ್ತ ಪುರುಪ್ರಿಯ ಬಹೂನಾಂ ಯಜಮಾನಾನಾಂ ಪ್ರೀತಿಕರಾಗ್ನೇ ತ್ವಾಂ ಹವ್ಯಾಯ ವೋಳ್ಹವೇ ಹವಿರ್ವೋಢುಂ ವಿಕ್ಷು ಜಂತವಃ ಪ್ರಜಾಸೂತ್ಪನ್ನಾ ಯಜಮಾನಾ ಹವಂತೇ । ಆಹ್ವಯಂತಿ । ಕೀದೃಶಂ । ಶೋಚಿಷ್ಕೇಶಂ ದೀಪ್ತಿರೂಪಕೇಶೋಪೇತಂ । ತಥಾ ಚ ವಾಜಸನೇಯಿನ ಆಮನಂತಿ । ಶೋಚಂತ ಇವ ಹ್ಯೇತಸ್ಯ ಸಮಿದ್ಧಸ್ಯ ರಶ್ಮಯಃ ಕೇಶಾ ಇತಿ ॥ ಚಿತ್ರಶ್ರವಸ್ತಮ । ಶ್ರವ ಇತ್ಯನ್ನನಾಮ । ಚಿತ್ರಂ ಶ್ರವೋ ಯಸ್ಯಾಸೌ ಚಿತ್ರಶ್ರವಾಃ । ಅತಿಶಯೇನ ಚಿತ್ರಶ್ರವಾಶ್ಚಿತ್ರಶ್ರವಸ್ತಮಃ । ಆಮಂತ್ರಿತಾನುದಾತ್ತತ್ವಂ । ಶೋಚಿಷ್ಕೇಶಂ । ಶುಚ ದೀಪ್ತೌ । ಅರ್ಚಿಶುಚಿಹುಸೃಪಿಛಾದಿಛರ್ದಿಭ್ಯ ಇಸಿಃ । ಉ. ೨-೧೦೯ । ಇತೀಸಿಃ । ಪ್ರತ್ಯಯಸ್ವರಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಹವ್ಯಾಯ । ಹವನಕ್ರಿಯಯಾ ಪ್ರಾಪ್ಯತ್ವಾತ್ ಕ್ರಿಯಾಗ್ರಹಣಂ ಕರ್ತವ್ಯಮಿತಿ ಸಂಪ್ರದಾನತ್ವಾಚ್ಚತುರ್ಥೀ । ವೋಳ್ಹವೇ । ವಹ ಪ್ರಾಪಣೇ । ತುಮರ್ಥೇ ಸೇಸೇನಿತಿ ತವೇನ್ಪ್ರತ್ಯಯಃ । ಢತ್ವಧತ್ವಷ್ಟುತ್ವಢಲೋಪೇಷು ಕೃತೇಷು ಸಹಿವಹೋರೋದವರ್ಣಸ್ಯ । ಪಾ. ೬-೩-೧೧೨ । ಇತ್ಯೋಕಾರಸ್ಯೌಕಾರಃ । ನಿತ್ತ್ವಾದಾದ್ಯುದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಚಿತ್ರಶ್ರವಸ್ತಮ**— ಸಮೃದ್ಧವಾಗಿಯೂ ವಿವಿಧವಾಗಿಯೂ ಇರುವ ಹವಿಸ್ಸಿನ ರೂಪದ ಅನ್ನವನ್ನು ಹೊಂದಿರುವ ಮತ್ತು । **ಪುರುಪ್ರಿಯ**—ಬಹಳ ಯಜ್ಞಕರ್ತರಿಗೆ ಪ್ರಿಯನಾದ । **ಅಗ್ನೇ**—ಅಗ್ನಿಯೇ । **ಶೋಚಿಷ್ಕೇಶಂ**—ಪ್ರಜ್ವಲಿಸುವ ಕೂದಲುಳ್ಳ । **ತ್ವಾಂ**—ನಿನ್ನನ್ನು । **ಹವ್ಯಾಯ ವೋಳ್ಹವೇ**—ಹವಿಸ್ಸನ್ನು ವಹಿಸಿಕೊಂಡು ಹೋಗಲು । **ವಿಕ್ಷು**—ಪ್ರಜೆಗಳಲ್ಲಿ । **ಜಂತವಃ**—ಉತ್ಪನ್ನರಾದ ಯಜಮಾನರು । **ಹವಂತೇ**—ಪ್ರಾರ್ಥಿಸಿ ಕರೆಯುತ್ತಾರೆ.

ಭಾವಾರ್ಥ

ಎಲೈ ಅಗ್ನಿಯೇ, ನೀನು ಯಜ್ಞಕರ್ತರಿಗೆ ಅತ್ಯಂತಪ್ರಿಯನು ಅವರು ನಿನಗೆ ಸಮೃದ್ಧವಾಗಿಯೂ ವಿವಿಧವಾಗಿಯೂ ಇರುವ ಹವಿಸ್ಸಿನ ರೂಪದ ಅನ್ನವನ್ನರ್ಪಿಸುವರು. ನೀನು ಅದರಿಂದ ವೃದ್ಧಿಹೊಂದಿ ಜ್ವಾಲಾರೂಪವಲ್ಲಿರುವ ನಿನ್ನ ಕೂದಲುಗಳಿಂದ ಬೆಳಗುತ್ತಿದ್ದೀಯೆ. ಆರೀತಿ ಪ್ರಜ್ವಲಿಸುವ ನಿನ್ನನ್ನು ದೇವತೆಗಳಿಗಾಗಿ ಹವಿಸ್ಸನ್ನು ವಹಿಸಿಕೊಂಡು ಹೋಗಲು ಪ್ರಜೆಗಳಾದ ಯಜಮಾನರು ಪ್ರಾರ್ಥಿಸಿ ಕರೆಯುತ್ತಾರೆ.

## English Translation

Agni, granter of abundant food, who are beloved by many, the sons of men (sacrificers) invoke you, flame-haired, to convey the oblations to the gods.

ವಿಶೇಷವಿಷಯ

ಅಶ್ವಮೇಧಯಾಗದಲ್ಲಿ ಪೂಷಸಂಬಂಧವಾದ ಇಷ್ಟಿಯ ಸ್ವಿಷ್ಟಕೃದ್ಧೋಮಮಾಡುವಾಗ ತ್ವಾಂ ಚಿತ್ರಶ್ರವಸ್ತಮ ಎಂಬ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂಗು ಆಶ್ವಲಾಯನ ಶ್ರೌತ ಸೂತ್ರದ ಸರ್ವಾನ್ಕಾಮಾನಾಪ್ನ್ಯನ್ ಎಂಬ ಖಂಡದಲ್ಲಿ ತ್ವಾಂ ಚಿತ್ರಶ್ರವಸ್ತಮ ( ಋ. ಸಂ. ೧-೪೫-೬ ) ಯದ್ವಾಹಿಷ್ಠಂ ತದಗ್ನಯೇ (ಋ. ಸಂ. ೫-೨೭-೭) ಎಂಬ ಸೂತ್ರದಲ್ಲಿ ನಿರೂಪಿತವಾಗಿದೆ. ( ಆ. ೧೦-೬ )

**ಚಿತ್ರಶ್ರವಃ**—ವಿಧವಿಧವಾದ ಎಂದರೆ ಘೃತ, ಹವಿಸ್ಸು ಮೊದಲಾದ ಹೋಮದ್ರವ್ಯಗಳಿಂದ ಯುಕ್ತನಾದವನು.

**ಶೋಚಿಷ್ಕೇಶಂ**—ಪ್ರಕಾಶಮಾನವಾದ ಜ್ವಾಲೆಗಳೇ ಕೂದಲುಗಳಾಗಿರುವ. ಎಂದರೆ ಮನುಷ್ಯರಿಗೆ ಕೂದಲುಗಳು ಯಾವರೀತಿ ಆಚ್ಛಾದನವಾಗಿರುವವೋ ಅದರಂತೆ ಅಗ್ನಿಯು ಪ್ರಕಾಶಮಾನವಾದ ಕಾಂತಿಯಿಂದ ಆವೃತನಾಗಿ ಬೆಳಗುತ್ತಿರುವನು ಎಂದಭಿಪ್ರಾಯವು. ಇಲ್ಲಿ ಕೇಶ ಎಂದರೆ ರಶ್ಮಿ ಎಂಬರ್ಥವನ್ನು ಹೇಳಬಹುದು **ಶೋಚಂತ ಇವ ಹ್ಯೇತಸ್ಯ ಸಮಿದ್ಧಸ್ಯ ರಶ್ಮಯಃ ಕೇಶಾಃ** ಎಂದು ವಾಜಸನೇಯ ಸಂಹಿತೆಯ ( ಶುಕ್ಲ ಯಜುರ್ವೇದ) ವಾಕ್ಯವಿರುವುದು.

**ಪುರುಪ್ರಿಯ**— ಬಹುಜನಯಜಮಾನರಿಗೆ ಪ್ರಿಯನಾದವನು **ಬಹೂನಾಂ ಯಜಮಾನಾನಾಂ ಪ್ರೀತಿಕರ ।**

**ವಿಕ್ಷು ಜಂತವಃ—ಪ್ರಜಾಸೂತ್ಪನ್ನಾ ಯಜಮಾನಾಃ ।** ಪ್ರಜೆಗಳಲ್ಲಿ ಎಂದರೆ ಮನುಷ್ಯರಲ್ಲಿ ಉತ್ಪನ್ನರಾದ ಎಂದರೆ ಮನುಷ್ಯರಾದ ಯಜಮಾನರು

॥ ವ್ಯಾಕರಣಪ್ರಕ್ರಿಯಾ ॥

**ಚಿತ್ರಶ್ರವಸ್ತಮಃ**—ಶ್ರವಃ ಎಂದು ಅನ್ನಕ್ಕೆ ಹೆಸರು. ಚಿತ್ರಂ ಶ್ರವಃ ಯಸ್ಯ ಸಃ ಎಂದು ಬಹುವ್ರೀಹಿ. ನಾನಾವಿಧವಾದ ಹವಿಸ್ಸುರೂಪಗಳಾದ ಅನ್ನವುಳ್ಳವ ಎಂದರ್ಥ. ಅತಿಶಯೇನ ಚಿತ್ರಶ್ರವಾಃ ಎಂದು ಅತಿಶಯಾರ್ಥವನ್ನು ವಿವಕ್ಷಿಸಿದರೆ **ಅತಿಶಾಯನೇತಮಬಿಷ್ಠನೌ** ಎಂದು ತಮಪ್ ಬರುತ್ತೆ ಸಂಬುದ್ಧಿ. ಆಮಸ್ತ್ರಿತಾನುದಾತ್ತ ಬರುತ್ತೆ.

**ಶೋಚಿಷ್ಕೇಶಮ್**—ಶುಚ ದೀಪ್ತೌ ಧಾತು. **ಅರ್ಚಿ ಶುಚಿ ಹು ಸೃಪಿ ಛಾದಿ ಛರ್ದಿಭ್ಯ ಇಸಿಃ** (ಉ.ಸೂ. ೨-೨೬೬) ಅರ್ಚಪೂಜಾಯಾಂ ಶುಚ ಶೋಕೇ, ೧ನೇ ಗಣ, ಈ ಧಾತುವು ದೀಪ್ತಿ ಎಂಬ ಅರ್ಥದಲ್ಲಿಯೂ ಇರುವುದು ಎಂದು ವೇದಭಾಷ್ಯಕಾರರ ಅಭಿಪ್ರಾಯ- ಹು ದಾನಾದನಯೋಃ—ಸೃಪ್ಲೃಗತೌ—ಛದ ಅಪವಾರಣೇ, ಣ್ಯಂತ—ಛರ್ದ ವಮನೇ ಈಧಾತುಗಳ ಮುಂದೆ ಇಸಿ ಪ್ರತ್ಯಯ ಬರುತ್ತೆ ಎಂದು ಶುಚ್ ಧಾತು ಮುಂದೆ ಇಸಿ ಬಂದರೆ ಶುಚ್+ ಇಸ್, **ಪುಗನ್ತಲಘೂಪಧಸ್ಯಚ** ಎಂದು ಲಘೂಪಧಗುಣ ಎಂದರೆ ಉಕಾರಕ್ಕೆ ಓಕಾರ, ಶೋಚಿಸ್ ಎಂದಾಯಿತು. ಪ್ರತ್ಯಯ ಸ್ವರದಿಂದ ಇಕಾರ ಉದಾತ್ತ ಶೋಚಿಃ ಕೇಶೋ ಯಸ್ಯ ತಂ ಎಂದು ಬಹುವ್ರೀಹಿ ದೀಪ್ತಿರೂಪ ಕೇಶವುಳ್ಳ

ಎಂದರ್ಥ. ಪೂರ್ವಪದಕ್ಕೆ ಪ್ರಕೃತಿಸ್ವರ ಬರುತ್ತೆ. ಎಂಗರೆ ಸಮಾಸ ಬಂದಮೇಲೆಯೂ ಮೊದಲು ಯಾವ ಸ್ವರವಿದ್ದಿತೋ ಅದೇ ಇರುತ್ತೆ.

**ಹವ್ಯಾಯ**—**ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಂ** (ಪಾ. ಸೂ. ೧-೪-೩೨) ಎಂಬ ಸೂತ್ರದಲ್ಲಿ **ಕ್ರಿಯಾಗ್ರಹಣಂ ಕರ್ತವ್ಯಮ್** ಎಂದು ವಾರ್ತಿಕ ಇದೆ. ಕ್ರಿಯೆಗೆ ಉದ್ದೇಶ್ಯವಾಗುದು ಸಂಪ್ರದಾನಸಂಜ್ಞೆಯನ್ನು ಹೊಂದುತ್ತೆ ಎಂದು ವಾರ್ತಿಕಾರ್ಥ. ಇದರಿಂದ ವೋಳ್ಹವೇ ಎಂಬ ಪದದಿಂದ ಬೋಧಿತವಾದ ವಹನಕ್ರಿಯೆಗೆ ಉದ್ದೇಶ್ಯವಾದ ಹವ್ಯ ಎಂಬುದಕ್ಕೆ ಸಂಪ್ರದಾನಸಂಜ್ಞೆ ಬರುತ್ತೆ. **ಚತುರ್ಥೀ ಸಂಪ್ರದಾನೇ** (ಪಾ. ಸೂ. ಎಂಬುದರಿಂದ ಚತುರ್ಥೀ ವಿಭಕ್ತಿ ಬರುತ್ತೆ.

**ವೋಳ್ಹವೇ**—ವಹ ಪ್ರಾಪಣೇ. **ತುಮರ್ಥೇ ಸೇ ಸೇನಸೇ—,** (ಪಾ. ಸೂ. ೩-೪-೯) ಎಂಬುದರಿಂದ ತವೇನ್ ಪ್ರತ್ಯಯ ಬರುತ್ತೆ. ವಹ್+ತವೇ, **ಹೋಢಃ** (ಪಾ. ಸೂ. ೮-೨-೩೧) ಝಲ್ ಪರದಲ್ಲಿದ್ದರೂ ಪದಾಂತ ವಿಷಯದಲ್ಲಿಯೂ ಹಕಾರಕ್ಕೆ ಢಕಾರ ಬರುತ್ತೆ ಎಂದು ಹ್‌ಗೆ ಢ್ ಬರುತ್ತೆ. **ಝಷಸ್ತಥೋರ್ಧೋಽಧಃ** (ಪಾ. ಸೂ. ೮-೨-೪೦) ಝಷ್ ಪ್ರತ್ಯಾಹಾರಕ್ಕೆ ಸೇರಿದ ವರ್ಣಗಳ ಮುಂದೆ ಇರುವ ತಕಾರ ಥಕಾರಗಳಿಗೆ ಧಕಾರ ಬರುತ್ತೆ ಎಂದು ತಕಾರಕ್ಕೆ ಧಕಾರ. **ಷ್ಟುನಾ ಷ್ಟುಃ** (ಪಾ. ಸೂ. ೮ ೪-೪೧) ಸಕಾರ ತವರ್ಗಗಳಿಗೆ ಷಕಾರ ಟವರ್ಗಗಳ ಯೋಗ ಇದ್ದರೆ ಕ್ರಮವಾಗಿ ಷಕಾರ ಟವರ್ಗಗಳು ಬರುವುವು ಎಂದು ತವರ್ಗದ ನಾಲ್ಕನೆಯ ವರ್ಣವಾದ ಧಕಾರಕ್ಕೆ ಟವರ್ಗದ ನಾಲ್ಕನೇ ಅಕ್ಷರ ಢ ಬರುತ್ತೆ. ವಢ್+ಢವೇ ಎಂದಾಯ್ತು. **ಢೋಢೇ ಲೋಪಃ** (ಪಾ. ಸೂ. ೮-೩-೧೩) ಢಕಾರದ ಹಿಂದೆ ಇರುವ ಢಕಾರಕ್ಕೆ ಲೋಪ ಬರುತ್ತೆ ಎಂದು ಮೊದಲನೆ ಢ್‌ಗೆ ಲೋಪ. **ಸಹಿವಹೋರೋದವರ್ಣಸ್ಯ** (ಪಾ. ಸೂ. ೬-೩-೧೧೨) ಢ್‌ಗೆ ಲೋಪ ಬಂದಿದ್ದರೆ ಸಹ್-ವಹ್ ಧಾತುಗಳ ಅಕಾರಕ್ಕೆ ಓತ್ ಬರುತ್ತೆ ಎಂದು ಧಾತುವಿನ ಅಕಾರಕ್ಕೆ ಓಕಾರ. ವೋಢವೇ ಎಂದಾಯಿತು. 'ಅಜ್ಮಧ್ಯಸ್ಥ ಢಕಾರಸ್ಯ ಳ್ಹಕಾರಂ ವೈಯಥಾ ಕ್ರಮಮ್' ಎಂಬುದರಿಂದ ಢಕಾರಕ್ಕೆ ಳ್ಹಕಾರ. ವೋಳ್ಹವೇ ಎಂದು ಆಗುತ್ತದೆ. ಪ್ರತ್ಯಯವು ನಿತ್ ಆದ್ದರಿಂದ ಪ್ರತ್ಯಯಾಂತಕ್ಕೆ ಆದ್ಯುದಾತ್ತ ಬರುತ್ತೆ. ॥೬॥

ಸಂಹಿತಾಪಾಠಃ

ನಿ ತ್ವಾ ಹೋತಾರಮೃತ್ವಿಜಂ ದಧಿರೇ ವಸುವಿತ್ತಮಂ।
ಶ್ರುತ್ಕರ್ಣಂ ಸಪ್ರಥಸ್ತಮಂ ವಿಪ್ರಾ ಅಗ್ನೇ ದಿವಿಷ್ಟಿಷು ॥೭॥

॥ ಪದಪಾಠಃ ॥

ನಿ । ತ್ವಾ । ಹೋತಾರಂ । ಋತ್ವಿಜಂ । ದಧಿರೇ । ವಸುವಿತ್ಽತಮಂ ।
ಶ್ರುತ್ಽಕರ್ಣಂ । ಸಪ್ರಥಃಽತಮಂ । ವಿಪ್ರಾಃ । ಅಗ್ನೇ । ದಿವಿಷ್ಟಿಷು ॥೭॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ವಿಪ್ರಾ ಮೇಧಾವಿನೋ ದಿವಿಷ್ಟಿಷು ಯಾಗೇಷು ತ್ವಾಂ ನಿ ದಧಿರೇ । ಸ್ಥಾಪಿತವಂತಃ । ಕೀದೃಶಂ! ಹೋತಾರಮಾಹ್ವಾತಾರಂ ಋತ್ವಿಜಮೃತುಷು ಯಜನ ಶೀಲಂ ವಸುವಿತ್ತಮಮತಿಶಯೇನ ಧನಸ್ಯ ಲಂಭಯಿತಾರಂ ಶ್ರುತ್ಕರ್ಣಂ ಶ್ರವಣಯೋಗ್ಯಕರ್ಣೋಪೇತಂ ಸಪ್ರಥಸ್ತಮಮತಿಶಯೇನ ಪ್ರಖ್ಯಾತಂ ॥ ದಧಿರೇ ॥ ಇರೇಚಶ್ಛಿತ್ತ್ವಾದಂತೋದಾತ್ತತ್ವಂ । ಪಾದಾದಿತ್ವಾನ್ನಿಘಾತಾಭಾವಃ । ದಿವಿಷ್ಟಿಷು । ಇಷ್ಟಯ ಏಷಣಾನಿ । ದಿವಃ ಸ್ವರ್ಗಸ್ಯೈಷಣಾನಿ ಯೇಷು ಯಾಗೇಷು ತೇ ದಿವಿಷ್ಟಯಃ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ ಇತಿ ವಚನಾದ್ದಿವ ಉಕ್ । ಪಾ. ೬-೧-೧೩೧ । ಇತ್ಯುತ್ವಂ ನ ಕ್ರಿಯತೇ। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥**

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ವಿಪ್ರಾಃ**—ವಿವೇಕಿಗಳು (ಮೇಧಾವಿಗಳು) । **ಹೋತಾರಂ**—(ದೇವತೆಗಳನ್ನು) ಕರೆಯುವವನಾಗಿಯೂ । **ಋತ್ವಿಜಂ**—ಋತುಕಾಲಗಳಲ್ಲಿ ಯಜ್ಞ ಮಾಡುವವನಾಗಿಯೂ । **ವಸುವಿತ್ತಮಂ**—ಪ್ರಭೂತವಾಗಿ ಧನದಾತನಾಗಿಯೂ । **ಶ್ರುತ್ಕರ್ಣಂ**—ಸೂಕ್ಷ್ಮವಾಗಿ ಕೇಳುವ ಕಿವಿಯುಳ್ಳವನಾಗಿಯೂ । **ಸಪ್ರಥಸ್ತಮಂ**—ಅತ್ಯಂತ ಪ್ರಸಿದ್ಧನಾಗಿಯೂ ಇರುವ । **ತ್ವಾ**—ನಿನ್ನನ್ನು । **ದಿವಿಷ್ಟಿಷು**—ಯಾಗಗಳಲ್ಲಿ । **ನಿ ದಧಿರೇ**—ಸ್ಥಾಪಿಸಿದ್ದಾರೆ

ಭಾವಾರ್ಥ

ಎಲೈ ಅಗ್ನಿಯೇ, ನೀನು ಯಜ್ಞಕ್ಕೆ ದೇವತೆಗಳನ್ನು ಕರೆಯುವವನು. ಋತುಕಾಲಗಳಲ್ಲಿ ಸರಿಯಾಗಿ ಯಜ್ಞಮಾಡುವವನೂ, ಪ್ರಭೂತವಾಗಿ ಧನದಾತನೂ, ಯಜಮಾನರ ಸ್ತೋತ್ರರೂಪವಾದ ವಾಕ್ಕುಗಳನ್ನು ಚೆನ್ನಾಗಿ ಕೇಳತಕ್ಕ ಸೂಕ್ಷ್ಮವಾದ ಕರ್ಣವುಳ್ಳವನೂ ಆಗಿರುವೆ. ಈ ಸಕಲ ಗುಣಗಳಿಂದ ನೀನು ಅತ್ಯಂತ ಪ್ರಸಿದ್ಧನು. ವಿವೇಕಿಗಳಾದ ಮೇಧಾವಿಗಳು ಇಂತಹ ಶ್ರೇಷ್ಠ ಗುಣಯುಕ್ತನಾದ ನಿನ್ನನ್ನು ಯಾಗಗಳಲ್ಲಿ ಸ್ಥಾಪಿಸಿದ್ದಾರೆ. (ಪ್ರತಿಷ್ಠಿಸಿದ್ದಾರೆ)

English Translation

Agni, the wise men have placed (established) you in their sacrifices as the invoker, the priest, the giver of vast wealth, the quick-hearing and well-renowned.

ವಿಶೇಷವಿಷಯಗಳು

**ವಸುವಿತ್ತಮಂ—ಅತಿಶಯೇನ ಧನಸ್ಯ ಲಂಭಯಿತಾರಂ ।** ಅತಿಶಯವಾಗಿ ಎಂದರೆ ಹೆಚ್ಚಾಗಿ ಧನವನ್ನು ಯಜಮಾನರಿಗೆ ದೊರಕಿಸಿಕೊಡುವವನು

**ಶ್ರುತ್ಕರ್ಣಂ**—ನಮ್ಮ ಆಹ್ವಾನವನ್ನು ಕೇಳುವ ಕಿವಿಗಳುಳ್ಳವನು. ಎಂದರೆ ನಮ್ಮ ಆಹ್ವಾನವನ್ನು ಬೇಗನೆ ಕೇಳುವನೆಂದರ್ಥವು.

**ಸಪ್ರಥಸ್ತಮಂ—ಅತಿಶಯೇನ ಪ್ರಖ್ಯಾತಂ ।** ಬಹಳವಾಗಿ ಪ್ರಸಿದ್ಧನಾದ

**ದಿವಿಷ್ಟಿಷು—ಇಷ್ಟಯ ಏಷಣಾನಿ । ದಿವಃ ಸ್ವರ್ಗಸ್ಯೈಷಣಾನಿ ಯೇಷು ಯಾಗೇಷು ತೇ ದಿವಿಷ್ಟ-ಯಃ ।** ಸ್ವರ್ಗಪ್ರಾಪ್ತಿಗಾಗಿ ಮಾಡುವ ಯಜ್ಞಗಳಲ್ಲಿ.

|| ವ್ಯಾಕರಣಪ್ರಕ್ರಿಯಾ ||

**ದಧಿರೇ**—ಡುಧಾಞ್ ಧಾರಣಪೋಷಣಯೋಃ ಲಿಟ್, ಝ ಆದೇಶ, **ಲಿಟಸ್ತಝಯೋರೇಶಿರೇಚ್** (ಪಾ. ಸೂ. ೩-೪-೮೧) ಲಿಟ್ ಸ್ಥಾನದಲ್ಲಿ ಬಂದ ತಗೆ ಏಶ್, ಝಗೆ ಇರೇಚ್ ಇವು ಬರುವುವು ಎಂದು ಝಗೆ ಇರೇಚ್ ಆದೇಶ, ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. **ಅಭ್ಯಾಸೇಚಚರ್** (ಪಾ. ಸೂ. ೮-೪-೫೪) ಅಭ್ಯಾಸದಲ್ಲಿರುವ ಝಲ್ ವರ್ಣಗಳಿಗೆ ಚರ್‌ವರ್ಣಗಳೂ, ಜಶ್‌ವರ್ಣಗಳೂ ಬರುವುವು ಎಂದು ಅರ್ಥ. ಝಶ್‌ವರ್ಣಗಳಿಗೆ ಜಶ್‌ವರ್ಣಗಳೂ ಖಯ್ ವರ್ಣಗಳಿಗೆ ಚರ್ ವರ್ಣಗಳೂ ಬರುವುವು ಎಂದು ತಿಳಿಯಬೇಕು. ಇದರಿಂದ ಅಭ್ಯಾಸದ ಧಕಾರಕ್ಕೆ ದಕಾರ. ದಧಾ+ಇರೇ, **ಆತೋಲೋಪ ಇಟಿಚ** ಎಂದು ಆಕಾರಕ್ಕೆ ಲೋಪ, ದಧಿರೇ ಎಂದಾಗುತ್ತೆ. ಇರೇ ಚಿತ್. ಆದ್ದರಿಂದ **ಚಿತಃ** ಎಂದು ಅಂತೋದಾತ್ತ ಬರುತ್ತೆ. ಎರಡನೇ ಪಾದದ ಆದಿಯಲ್ಲಿರುವುದರಿಂದ **ತಿಙ್ಙತಿಙಃ** ಎಂದು ಸರ್ವಾನು ದಾತ್ತ ಬರುವುದಿಲ್ಲ.

**ದಿವಿಷ್ಟಿಷು**—ಇಷ ಗತೌ, **ಸ್ತ್ರಿಯಾಂಕ್ತಿನ್** ಎಂದು ಕ್ತಿನ್, ಷ್ಟುತ್ವ. ದಿವಃ ಇಷ್ಟಿಃ ಏಷಣಂ ಯೇಷು ಯಾಗೇಷು ತೇ ದಿವಿಷ್ಟಯಃ ಎಂದು ಬಹುವ್ರೀಹಿ, ಸ್ವರ್ಗಕ್ಕೆ ಹೋಗುವಿಕೆಯು ಯಾವ ಯಾಗದಲ್ಲಿದೆಯೋ ಅಂತಹ ಯಾಗಗಳು ಎಂದು ಅರ್ಥ. **ದಿವ ಉತ್** (ಪಾ. ಸೂ. ೬-೧-೧೩೧) ಪದಾಂತವಿಷಯದಲ್ಲಿ ದಿವ್‌ನ ಕೊನೆಯ ವರ್ಣಕ್ಕೆ ಉಕಾರ ಬರುತ್ತೆ ಎಂದು ವ್‌ಗೆ ಉಕಾರವು ಪ್ರಾಪ್ತವಾದರೂ **ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ** (ಪರಿಭಾ. ೩೫) ಎಂದು ವಿಕಲ್ಪವಾದ್ದರಿಂದ ಬರುವುದಿಲ್ಲ. ಪೂರ್ವಪದಪ್ರಕೃತಿಸ್ವರ ಬರುತ್ತೆ. || ೭ ||

॥ ಸಂಹಿತಾಪಾಠಃ ॥

ಆ ತ್ವಾ ವಿಪ್ರಾ ಅಚುಚ್ಯವುಃ ಸುತಸೋಮಾ ಅಭಿ ಪ್ರಯಃ ।
ಬೃಹದ್ಭಾ ಬಿಭ್ರತೋ ಹವಿರಗ್ನೇ ಮರ್ತಾಯ ದಾಶುಷೇ ॥೮॥

ಪದಪಾಠಃ

ಆ । ತ್ವಾ । ವಿಪ್ರಾಃ । ಅಚುಚ್ಯವುಃ । ಸುತಽಸೋಮಾಃ । ಅಭಿ । ಪ್ರಯಃ ।
ಬೃಹತ್ । ಭಾಃ । ಬಿಭ್ರತಃ । ಹವಿಃ । ಅಗ್ನೇ । ಮರ್ತಾಯ । ದಾಶುಷೇ ॥

ಸಾಯಣಭಾಷ್ಯಂ

ಹೇ ಅಗ್ನೇ ಸುತಸೋಮಾ ಅಭಿಷುತಸೋಮಯುಕ್ತಾ ವಿಪ್ರಾ ಮೇಧಾವಿನ ಋತ್ವಿಜಃ ಪ್ರಯೋಽಭಿ ಹವಿರ್ಲಕ್ಷಣಮನ್ನಮಭಿಲಕ್ಷ್ಯ ತ್ವಾ ಆಚುಚ್ಯವುಃ । ತ್ವಾಮಾಗಮಯಂತಿ । ಕೀದೃಶಂ ತ್ವಾಂ । ಬೃಹನ್ಮಹಾಂತಂ ಭಾ ಭಾಸಮಾನಂ । ಕೀದೃಶಾ ವಿಪ್ರಾಃ । ದಾಶುಷೇ ಮರ್ತಾಯ ಹವಿಷ್ಪ್ರದಸ್ಯ ಯಜಮಾನಸ್ಯ ಸಂಬಂಧಿ ಹವಿರ್ಬಿಭ್ರತೋ ಧಾರಯಂತಃ ॥ ಅಚುಚ್ಯವುಃ । ಚ್ಯುಙ್ ಗತೌ । ಅಸ್ಮಾದಂತರ್ಭಾವಿತಣ್ಯರ್ಥಾತ್ ಲಙಿ ವ್ಯತ್ಯಯೇನ ಪರಸ್ಮೈಪದಂ । ಬಹುಲಂ ಛಂದಸೀತಿ ಶಪಃ ಶ್ಲುಃ । ಸಿಜಭ್ಯಸ್ತವಿದಿಭ್ಯಶ್ಚ । ಪಾ. ೩-೪-೧೦೯ । ಇತಿ ಝೇರ್ಜುಸಾದೇಶಃ । ಜುಸಿ ಚ । ಪಾ. ೭-೩-೮೩ । ಇತಿ ಗುಣಃ । ಬೃಹತ್ । ಭಾಃ । ಉಭಯತ್ರ ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ । ಬಿಭ್ರತಃ । ಡುಭೃಞ್ ಧಾರಣಪೋಷಣಯೋಃ । ಶತರಿ ನಾಭ್ಯಸ್ತಾಚ್ಛತುರಿತಿ ನುಮಾಗಮಪ್ರತಿಷೇಧಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಮರ್ತಾಯ ದಾಶುಷೇ । ಉಭಯತ್ರ ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯಾ । ಪಾ. ೨-೩-೬೨-೧ । ಇತೀ ಚತುರ್ಥೀ ॥

॥ ಪ್ರತಿಪದಾರ್ಥ ॥

**ಅಗ್ನೇ**— ಎಲೈ ಅಗ್ನಿಯೇ । **ಸುತಸೋಮಾಃ**—ಹಿಂಡಿರುವ ಸೋಮರಸಯುಕ್ತರಾಗಿಯೂ । **ದಾಶುಷೇ**—ಹವಿರ್ದಾತನಾದ । **ಮರ್ತಾಯ**— ಮಾನವನಾದ ಯಜಮಾನನಿಗೆ (ಸೇರಿದ) । **ಹವಿಃ**— ಹವಿಸ್ಸನ್ನು । **ಬಿಭ್ರತಃ**— ಹಿಡಿದುಕೊಂಡಿರುವವರಾಗಿಯೂ ಇರುವ । **ವಿಪ್ರಾಃ**—ಮೇಧಾವಿಗಳಾದ ಋತ್ವಿಕ್ಕುಗಳು । **ಬೃಹತ್**—ದೊಡ್ಡ ಆಕಾರವುಳ್ಳವನೂ । **ಭಾಃ**— ಕಾಂತಿಯುತನೂ ಆದ । **ತ್ವಾ**— ನಿನ್ನನ್ನು । **ಪ್ರಯಃ ಅಭಿ**—ಹವಿಸ್ಸಿನ ರೂಪದಲ್ಲಿರುವ ಅನ್ನಕ್ಕೆ ಅಭಿಮುಖವಾಗಿ । **ಆ ಅಚುಚ್ಯವುಃ**— ಬರಮಾಡಿದ್ದಾರೆ. ।

**ಭಾವಾರ್ಥ ॥**

ಎಲೈ ಅಗ್ನಿಯೇ, ಮೇಧಾವಿಗಳಾದ ಋತ್ವಿಕ್ಕುಗಳು ಸೋಮರಸವನ್ನು ಹಿಂಡಿ ಹವಿರ್ದಾತನಾದ ಯಜಮಾನನ ಪರವಾಗಿ ನಿನಗೆ ಅರ್ಪಿಸಲು ಹವಿಸ್ಸನ್ನು ಹಿಡಿದುಕೊಂಡಿದ್ದಾರೆ. ನೀನು ಮಹತ್ತಾದ ಆಕಾರವುಳ್ಳವನು, ಕಾಂತಿಯುತನು. ಪ್ರಭಾಯುತನಾದ ನಿನ್ನನ್ನು ಹವಿಸ್ಸಿನ ರೂಪದಲ್ಲಿರುವ ಅನ್ನಕ್ಕೆ ಅಭಿಮುಖವಾಗಿ ಬರಮಾಡಿದ್ದಾರೆ.

English Translation

O Agni, shining with great splendour, the wise priests with libations of Soma-juice and holding the oblation on behalf of the person who presents it, have summoned you to partake of the sacrifical food.

॥ ವಿಶೇಷವಿಷಯಗಳು ॥

**ಅಚುಚ್ಯವುಃ—ಚ್ಯುಙ್ ಗತೌ ।** ಬರಮಾಡಿದರು.

**ಬೃಹದ್ಭಾಃ— ಬೃಹನ್ಮಹಾಂತಂ ಭಾ ಭಾಸಮಾನಃ ।** ಬಹಳವಾದ, ಹೆಚ್ಚಾದ ಕಾಂತಿಯಿಂದ ಬೆಳಗುತ್ತಿರುವವನು..

**ಬಿಭ್ರತೋ ಹವಿಃ**— ನಿನಗೆ ಅರ್ಪಿಸುವುದಕ್ಕಾಗಿ ಹವಿಸ್ಸನ್ನು ಹಿಡಿದುಕೊಂಡು ನಿಂತಿರುವ.

**ಮರ್ತಾಯ ದಾಶುಷೇ**—ನಿನಗೆ ಹವಿಸ್ಸನ್ನು ಸಮರ್ಪಿಸುವ ಮನುಷ್ಯನ ಪರವಾಗಿ ಎಂದರೆ ಯಜಮಾನನ ಪರವಾಗಿ.

**ಪ್ರಯಃ**—ಹವಿಸ್ಸಿನ ರೂಪದಲ್ಲಿರುವ ಅನ್ನವು.

**ವ್ಯಾಕರಣಪ್ರಕ್ರಿಯಾ**

**ಅಚುಚ್ಯವುಃ**—ಚ್ಯುಙ್ ಗತೌ ೧ನೇ ಗಣ. ಣಿಚ್‌ಪ್ರತ್ಯಯದ ಅರ್ಥವನ್ನೊಳಗೊಂಡ ಈ ಧಾತು ಮುಂದೆ ಲಙ್. **ಅನುದಾತ್ತ ಙಿತ ಆತ್ಮನೇಪದಮ್** ಎಂದು ಆತ್ಮನೇಪದವು ನ್ಯಾಯವಾಗಿ ಬರಬೇಕು. ಆದರೂ **ವ್ಯತ್ಯಯೋಬಹುಲಂ** (ಪಾ. ಸೂ. ೩-೧-೮೫) ಎಂದು ಪರಸ್ಮೈಪದ ಬರುತ್ತೆ. ಅಡಾಗಮ, ಝಿಪ್ರತ್ಯಯ. ಶಪ್‌ಗೆ **ಬಹುಲಂ ಛಂದಸಿ** ಎಂದು ಶ್ಲು ಬರುತ್ತೆ **ಶ್ಲೌ** ಎಂದು ದ್ವಿತ್ವ. ಅಚ್ಯು ಚ್ಯು+ಝಿ **ಹಲಾದಿಃಶೇಷಃ** ಎಂದು ಅಭ್ಯಾಸದಲ್ಲಿರುವ ಯಕಾರಕ್ಕೆ ಲೋಪ. **ಪೂರ್ವೋಽಭ್ಯಾಸಃ** (ಪಾ. ಸೂ. ೬-೧-೪) ಎಂದು ದ್ವಿತ್ವ ಹೊಂದಿದ ಶಬ್ದ ಪೂರ್ವಖಂಡಕ್ಕೆ ಅಭ್ಯಾಸಸಂಜ್ಞೆ ವಿಹಿತವಾಗಿದೆ. **ಸಿಜಭ್ಯಸ್ತ ವಿದಿಭ್ಯಶ್ಚ** (ಪಾ. ಸೂ. ೩-೪-೧೦೯) ಸಿಚ್, ಅಭ್ಯಸ್ತ, ವಿದ್ ಇವುಗಳಿಗಿಂತಲೂ ಪರದಲ್ಲಿರುವ ಝಿಗೆ ಜುಸ್ ಆದೇಶ ಬರುತ್ತೆ ಎಂದು ಝಿಗೆ ಜುಸ್ ಆದೇಶ. **ಉಭೇ ಅಭ್ಯಸ್ತಮ್** (ಪಾ. ಸೂ. ೬-೧-೫) ಆರನೇ ಅಧ್ಯಾಯದ ಸೂತ್ರಗಳಿಂದ ದ್ವಿತ್ವವನ್ನು

ಹೊಂದಿದ ಶಬ್ದಸಮುದಾಯವು ಅಭ್ಯಸ್ತಸಂಜ್ಞೆಯನ್ನು ಹೊಂದುತ್ತೆ ಎಂದು ಅಭ್ಯಸ್ತಸಂಜ್ಞೆ ವಿಹಿತವಾಗಿದೆ. **ಜುಸಿ ಚ** (ಪಾ. ಸೂ. ೭-೩-೮೩) ಅಜಾದಿಯಾದ ಜುಸ್ ಪರದಲ್ಲಿದ್ದರೆ ಇಗಂತವಾದ ಅಂಗಕ್ಕೆ ಗುಣ ಬರುತ್ತೆ ಎಂದು ಉಕಾರಕ್ಕೆ ಓಕಾರ ಬರುತ್ತೆ. ಅಚುಚ್ಯೋ+ಉಸ್. ಅವಾದೇಶ ಅಚುಚ್ಯವುಸ್, ರುತ್ವವಿಸರ್ಗಗಳು.

**ಬೃಹತ್-ಭಾಃ**—ಎರಡು ಕಡೆಯಲ್ಲಿಯೂ **ಸುಪಾಂ ಸುಲುಕ್—**, ಎಂದು ವಿಭಕ್ತಿಗೆ ಲುಕ್ ಬರುತ್ತೆ.

**ಬಿಭ್ರತಃ**—ಡುಭೃಞ್ ಧಾರಣಪೋಷಣಯೋಃ, ಧಾತು. ಜುಹೋತ್ಯಾದಿ. ಲಟ್, **ಲಟಶ್ಶತೃ ಶಾನಚೌ—,** ಎಂದು ಶತೃ ಆದೇಶ **ನಾಭ್ಯಸ್ತಾಚ್ಛತುಃ** (ಪಾ. ಸೂ. ೭-೧-೭೮) ಅಭ್ಯಸ್ತದ ಮುಂದೆ ಇರುವ ಶತ ಪ್ರತ್ಯಯಕ್ಕೆ ನುಮ್ ಬರುವುದಿಲ್ಲ ಎಂದು ನಿಷೇಧ ಇರುವುದರಿಂದ ಜಸ್ ಪರದಲ್ಲಿರುವಾಗ **ಉಗಿದಚಾಂ ಸರ್ವ-ನಾಮಸ್ಥಾನೇಽಧಾತೋಃ** ಎಂದು ಪ್ರಾಪ್ತವಾಗುವ ನುಮ್ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ** ಎಂದು ಆದ್ಯು ದಾತ್ತ ಬರುತ್ತೆ.

**ಮರ್ತಾಯ-ದಾಶುಷೇ**—ಈ ಎರಡು ಪದಗಳಲ್ಲಿಯೂ **ಷಷ್ಠ್ಯರ್ಥೇ ಚತುರ್ಥೀ ವಚನಮ್** (ಪಾ. ಸೂ. ೨-೩-೬೨-೧) ಎಂದು ಷಷ್ಠೀ ವಿಭಕ್ತಿಯ ಅರ್ಥದ ಚತುರ್ಥೀವಿಭಕ್ತಿ ಬರುತ್ತೆ. ॥ ೮ ॥

---

ಸಂಹಿತಾಪಾಠಃ

ಪ್ರಾತರ್ಯಾವ್ಣಃ ಸಹಸ್ಕೃತ ಸೋಮಪೇಯಾಯ ಸಂತ್ಯ।
ಇಹಾದ್ಯ ದೈವ್ಯಂ ಜನಂ ಬರ್ಹಿರಾ ಸಾದಯಾ ವಸೋ ॥ ೯ ॥

॥ ಪದಪಾಠಃ ॥

ಪ್ರಾತಃऽಯಾವ್ನಃ । ಸಹಃऽಕೃತ । ಸೋಮಽಪೇಯಾಯ । ಸಂತ್ಯ ।
ಇಹ । ಅದ್ಯ । ದೈವ್ಯಂ । ಜನಂ । ಬರ್ಹಿಃ । ಆ । ಸಾದಯ ।
ವಸೋ ಇತಿ ॥

॥ ಸಾಯಣಭಾಷ್ಯಂ ॥

**ಹೇ ಸಹಸ್ಕೃತ ಬಲೇನ ಮಥಿತ ಸಂತ್ಯ ಫಲದಾತರ್ವಸೋ ನಿವಾಸಹೇತುಭೂತಾಗ್ನೇ ಇಹ ದೇವಯಜನದೇಶೇಽದ್ಯಾಸ್ಮಿನ್ದಿನೇ ಸೋಮಪೇಯಾಯ ಸೋಮಪಾನಾರ್ಥಂ ಪ್ರಾತರ್ಯಾವ್ಣಃ ಪ್ರಾತರಾಗಚ್ಛತೋ ದೇವಾನ್ ದೈವ್ಯಂ ಜನಮನ್ಯಮಪಿ ದೇವತಾಜನಂ ಬರ್ಹಿರಾ ಸಾದಯ। ಯಜ್ಞಂ ಪ್ರಾಪಯ ॥ ಪ್ರಾತರ್ಯಾವ್ಣಃ। ಶಸ್ಯಲ್ಲೋಪೋಽನ ಇತ್ಯಕಾರಲೋಪಃ। ಸಹಸ್ಕೃತ। ಸಹತೇಽಭಿಭವತ್ಯನೇನೇತಿ ಸಹೋ ಬಲಂ। ತೇನ ಕ್ರಿಯತ ಇತಿ ಸಹಸ್ಕೃತಃ। ಓಜಃಸಹೋಽಂಭಸ್ತಮಸಸ್ತೃತೀಯಾಯಾಃ। ಪಾ. ೬-೩-೩। ಇತ್ಯಲುಗಭಾವಶ್ಛಾಂದಸಃ ॥**

ಪ್ರತಿಪದಾರ್ಥ

**ಸಹಸ್ಕೃತ**—ಘರ್ಷಣ ಶಕ್ತಿಯಿಂದ ಉತ್ಪನ್ನನಾಗಿಯೂ। **ಸಂತ್ಯ**—ಫಲದಾತನಾಗಿಯೂ। **ವಸೋ**—ವಾಸಸ್ಥಾನಕ್ಕೆ ಕಾರಣಭೂತನಾಗಿಯೂ ಇರುವ ಎಲೈ ಅಗ್ನಿಯೇ! **ಇಹ**—ಈ ದೇವ ಯಜ್ಞಪ್ರದೇಶದಲ್ಲಿ। **ಅದ್ಯ**—ಇಂದು। **ಸೋಮಪೇಯಾಯ**—ಸೋಮರಸಪಾನಕ್ಕಾಗಿ। **ಪ್ರಾತರ್ಯಾವ್ಣಃ**—ಪ್ರಾತಃಕಾಲದಲ್ಲಿ ಸಂಚರಿಸತಕ್ಕ ದೇವತೆಗಳನ್ನೂ। **ದೈವ್ಯಂ ಜನಂ**—ಇತರ ದೇವತಾ ಸಂಬಂಧಿಯಾದ ಜನವನ್ನೂ। **ಬರ್ಹಿಃ**—ಯಜ್ಞಭೂಮಿಯ ದರ್ಭೆಯಮೇಲೆ। **ಆ ಸಾದಯ**—ಕರೆದುಕೊಂಡು ಬಂದು ಕೂರಿಸು।

ಭಾವಾರ್ಥ

ಘರ್ಷಣಶಕ್ತಿಯಿಂದ ಉತ್ಪನ್ನನಾದ ಎಲೈ ಅಗ್ನಿಯೇ, ನೀನು ಫಲದಾತನು, ವಾಸಸ್ಥಾನಕ್ಕೆ ಕಾರಣಭೂತನು. ಪ್ರಾತಃಕಾಲದಲ್ಲಿ ಸಂಚರಿಸತಕ್ಕ ದೇವತೆಗಳನ್ನೂ, ಇತರ ದೇವತಾ ಸಂಬಂಧಿಯಾದ ಜನವನ್ನೂ ಸೋಮಪಾನಾರ್ಥವಾಗಿ ಯಜ್ಞಭೂಮಿಯ ದರ್ಭೆಯಮೇಲೆ ಕರೆದುಕೊಂಡುಬಂದು ಕೂರಿಸು.

## English Translation

Strength-generated (or produced by friction) Agni, giver of rewards, provider of dwellings, bring and seat the gods that move in the morning and other divine beings to drink the Soma-juice in this sacrifice.

ವಿಶೇಷವಿಷಯಗಳು

**ಸಹಸ್ಕೃತ—ಬಲೇನ ಅರಣಿಭ್ಯಾಂ ಮಥಿತ।** ಅಗ್ನಿಯನ್ನು ಉತ್ಪತ್ತಿಮಾಡುವಾಗ ಅರಣಿಗಳಲ್ಲಿ ಶಕ್ತಿಯನ್ನು ಅಥವಾ ಬಲವನ್ನು ಉಪಯೋಗಿಸಿ ಕಡೆಯುವುದರಿಂದ ಶಕ್ತಿಯಿಂದ ಅಥವಾ ಬಲದಿಂದ ಮಥಿತನಾದವನು ಎಂದಭಿಪ್ರಾಯವು. ಸಹಃ ಎಂದರೆ ಬಲವು ( ನಿ. ೩-೯ ) ಯಜ್ಞದಲ್ಲಿ ಅಗ್ನಿಯನ್ನು ಅರಣಿ ಎಂಬ ಮರದ ತುಂಡುಗಳನ್ನು ಒಂದರಮೇಲೊಂದನ್ನಿಟ್ಟು ಕಡೆದು ಉತ್ಪನ್ನಮಾಡುವರು. ಹಾಗೆ ಕಡೆಯುವುದಕ್ಕೆ ಬಲವನ್ನು ಉಪಯೋಗಿಸಬೇಕಾಗುವುದು. Produced by friction which requires strength to perform effectually.

**ಪ್ರಾತರ್ಯಾವ್ಣಃ—ಪ್ರಾತರಾಗಚ್ಛತಃ ।** ಪ್ರಾತಃಕಾಲದಲ್ಲಿ ಹೋಗುವ ಅಥವಾ ಸಂಚರಿಸುವ ಎಂದರೆ ಪ್ರಾತಃಕಾಲದಲ್ಲಿ ಯಜಮಾನರು ಮಾಡುವ ಯಜ್ಞಗಳಿಗೆ ಹೋಗುವ ಎಂಬಭಿಪ್ರಾಯವು.

**ಸಂತ್ಯ**—ಫಲಪ್ರದನು

**ಇಹ**—ಈ ಯಜ್ಞದಲ್ಲಿ ; **ಅದ್ಯ**—ಈಗ, ಈದಿನ

**ದೈವ್ಯಂ ಜನಂ**—ದೇವಸಂಬಂಧಿಯಾದ ಜನ ಎಂದರೆ ದೇವತೆಗಳನ್ನು. ಇಲ್ಲಿ ದೈವ್ಯಂ ಜನಂ ಎಂದು ಯಾವ ನಿರ್ದಿಷ್ಟವಾದ ದೇವತೆಯನ್ನೂ ಹೇಳದೆ ಇರುವುದರಿಂದ ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಹೇಳಿದ ವಸು ರುದ್ರಾದಿತ್ಯರೆಂಬ ಮೂವತ್ತಮೂರು ದೇವತೆಗಳೆಂದು ಊಹಿಸಬಹುದು.

**ಆಸಾದಯ**—ಕುಳ್ಳಿರಿಸು, ಕುಳಿತುಕೊಳ್ಳುವಂತೆಮಾಡು

**ವಸೋ**—ವಾಸಸ್ಥಾನದಾಯಕನು

ವ್ಯಾಕರಣಪ್ರಕ್ರಿಯಾ

**ಪ್ರಾತರ್ಯಾವ್ಣಃ**—ಪ್ರಾತರ್ ಎಂಬುದು ರೇಫಾಂತವಾದ ಅವ್ಯಯ. ಯಾ ಪ್ರಾಪಣೇಧಾತು. ಪ್ರಾತಃ ಯಾನ್ತೀತಿ ಪ್ರಾತರ್ಯಾವ್ಣಃ. **ಆತೋ ಮನಿನ್ ಕ್ವನಿ ಬ್ವನಿಪಶ್ಚ** (ಪಾ. ಸೂ. ೩-೨-೭೪) ಎಂದು ವನಿಪ್ ಪ್ರತ್ಯಯ. ಪ್ರಾತರ್ಯಾವನ್, ಶಸ್. **ಅಲ್ಲೋಽಪೋಽನಃ** ಎಂಬುದರಿಂದ ಅನ್‌ನ ಅಕಾರಕ್ಕೆ ಲೋಪ **ಪ್ರಾತಿಪದಿಕಾನ್ತನುಮ್ವಿಭಕ್ತಿಷು ಚ** ಎಂದು ನಕಾರಕ್ಕೆ ಣಕಾರ. ಕೃದುತ್ತರಪದಪ್ರಕೃತಿಸ್ವರದಿಂದ ಧಾತುಸ್ವರವೇ ಉಳಿಯುತ್ತೆ.

**ಸಹಸ್ಕೃತ**—ಸಹತೇ ಅಭಿಭವನ್ತ್ಯನೇನ ಇತಿ ಸಹಃ ಬಲಮ್. ಷಹ ಮರ್ಷಣೇ ಧಾತು. **ಸರ್ವಧಾತುಭ್ಯೋಽಸುನ್** ಎಂದು ಅಸುನ್, ಸಹಸಾ ಕೃತಃ ಎಂದು ತೃತೀಯಾ ತತ್ಪುರುಷ. **ಓಜಸ್ಸಹೋಮ್ಭಮಸ್ತ ಸಸ್ತೃತೀಯಾಯಾಃ** (ಪಾ. ಸೂ. ೬-೩-೩) ಉತ್ತರಪದವು ಪರದಲ್ಲಿರುವಾಗ ತೃತೀಯೆಗೆ ಅಲುಕ್ ಬರುತ್ತೆ ಎಂದು ಹೇಳಿರುವುದರಿಂದ ಪ್ರಾತಿಪದಿಕಾವಯವವಾದ ತೃತೀಯಾವಿಭಕ್ತಿಗೆ **ಸುಪೋಧಾತುಪ್ರಾತಿಪದಿಕಯೋಃ** ಎಂದು ಪ್ರಾಪ್ತವಾಗುವ ಲುಕ್ ಬರುವುದಿಲ್ಲ ಎಂದು ನ್ಯಾಯವಾಗಿ ಹೇಳಬೇಕು. ಆದರೂ **ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ** ಎಂದು **ಓಜಸ್ಸಹೋಮ್ಭಃ—**, ಎಂಬುದು ವಿಕಲ್ಪವಾದ್ದರಿಂದ ಇಲ್ಲಿ ಬರುವುದಿಲ್ಲ. ಅಂದಮೇಲೆ ತೃತೀಯೆಗೆ ಲುಕ್ ಬರುತ್ತೆ, ಸಹಸ್ಕೃತ ಎಂದು ಆಗುತ್ತೆ. ॥೯॥

ಸಂಹಿತಾಪಾಠಃ

ಅರ್ವಾಞ್ಚಂ ದೈವ್ಯಂ ಜನಮಗ್ನೇ ಯಕ್ಷ್ವ ಸಹೂತಿಭಿಃ ।
ಅಯಂ ಸೋಮಃ ಸುದಾನವಸ್ತಂ ಪಾತ ತಿರೋಅಹ್ನ್ಯಂ ॥ ೧೦ ॥

ಪದಪಾಠಃ

ಅರ್ವಾಂಚಂ । ದೈವ್ಯಂ । ಜನಂ । ಅಗ್ನೇ । ಯಕ್ಷ್ವ । ಸಹೂತಿಽಭಿಃ ।
ಅಯಂ । ಸೋಮಃ । ಸುಽದಾನವಃ । ತಂ । ಪಾತ । ತಿರಃಽಅಹ್ನ್ಯಂ ॥ ೧೦ ॥

ಸಾಯಣಭಾಷ್ಯಂ

ಹೇ ಅಗ್ನೇ ಅರ್ವಾಂಚಮಭಿಮುಖಂ ದೈವ್ಯಂ ಜನಂ ದೇವತಾರೂಪಂ ಪ್ರಾಣಿನಂ ಸಹೂತಿಭಿಃ ಸಮಾನಾಹ್ವಾನೈರ್ದೇವಾಂತರೈಃ ಸಹ ಯಕ್ಷ್ವ । ಯಜ । ಹೇ ಸುದಾನವಃ ಸುಷ್ಠು ಫಲದಾತಾರೋ ದೇವಾಃ ಅಯಂ ಸೋಮೋ ಯುಷ್ಮದರ್ಥಂ ಸೋಮಃ ಪುರತೋ ವರ್ತತೇ । ತಂ ಸೋಮಂ ಪಾತ । ಪಿಬತ । ಕೀದೃಶಂ । ತಿರೋಅಹ್ನ್ಯಮೇತನ್ನಾಮಕಂ । ಪೂರ್ವಸ್ಮಿನ್ನಹನ್ಯಭಿಷುತೋ ಯಃ ಸೋಮ ಉತ್ತರೇಽಹನಿ ಹೂಯತೇ ತಸ್ಯೈತನ್ನಾಮಧೇಯಂ ॥ ದೈವ್ಯಂ । ದೇವಾದ್ಯಞಞಾವಿತಿ ಪ್ರಾಗ್ದೀವ್ಯತೀಯೋ ಯಞ್ । ಯಕ್ಷ್ವ । ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಪ್ರತ್ಯಯಸ್ವರಾಭಾವಶ್ಛಾಂದಸಃ । ಅಗ್ನ ಇತ್ಯಸ್ಯ ಪಾದಾದೌ ವರ್ತಮಾನಸ್ಯಾಮಂತ್ರಿತಂ ಪೂರ್ವಮವಿದ್ಯಮಾನವದಿತ್ಯವಿದ್ಯಮಾನವತ್ತ್ವಾತ್ ತಿಙ್ಙತಿಙ ಇತಿ ನಿಘಾತಾಭಾವಃ । ಸಹೂತಿಭಿಃ । ಸಮಾನಾಹೂತಿರಾಹ್ವಾನಂ ಯೇಷಾಂ ತೇ ಸಹೂತಯಃ । ಸಮಾನಸ್ಯ ಛಂದಸೀತಿ ಸಭಾವಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಪಾತ । ಪಾ ಪಾನೇ । ಬಹುಲಂ ಛಂದಸೀತಿ ಶಪೋ ಲುಕ್ । ತಿರೋಅಹ್ನ್ಯಂ । ಅಹನಿ ಭವಮಹ್ನ್ಯಂ । ಭವೇ ಛಂದಸೀತಿ ಯತ್ । ನಸ್ತದ್ಧಿತ ಇತಿ ಟಿಲೋಪೋ ನ ಭವತಿ ಅಹ್ನಷ್ಟಖೋರೇವ । ಪಾ. ೬-೪-೧೪೫ । ಇತಿ ನಿಯಮಾತ್ । ಭಸಂಜ್ಞಾಯಾಮಲ್ಲೋಪೋಽನ ಇತ್ಯಕಾರಲೋಪಃ । ಯೀ ಚಾಭಾವಕರ್ಮಣೋಃ । ಪಾ. ೬-೪-೧೬೮ । ಇತಿ ಪ್ರಕೃತಿಭಾವಸ್ತು ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾನ್ನ ಕ್ರಿಯತೇ । ತಿರೋಹಿತೋಽಹ್ನ್ಯಸ್ತಿರೋಅಹ್ನ್ಯಃ । ಪ್ರಕೃತ್ಯಾಂತಃಪಾದಮಿತಿ ಪ್ರಕೃತಿಭಾವಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ ॥ ೩೨ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ಅರ್ವಾಂಚಂ**—ಅಭಿಮುಖವಾಗಿರತಕ್ಕ । **ದೈವ್ಯಂ ಜನಂ**—ದೇವತಾರೂಪವಾದ ಜನನನ್ನು । **ಸಹೂತಿಭಿಃ**—ಸಂಯುಕ್ತವಾದ ಆಹ್ವಾನವುಳ್ಳ ಇತರ ದೇವತೆಗಳೊಡನೆ । **ಯಕ್ಷ್ವ**—ಪೂಜಿಸು । **ಸುದಾನವಃ**—ಶ್ರೇಷ್ಠವಾದ ಫಲದಾತೃಗಳಾದ ಎಲೈ ದೇವತೆಗಳೇ । **ಅಯಂ ಸೋಮಃ**—ಈ ಸೋಮರಸವು

(ನಿಮ್ಮ ಮುಂದೆ ಇದೆ) । **ತಿರೋಅಹ್ನ್ಯಂ**— (ಹಿಂದಿನ ದಿನ ಹಿಂಡಿದುದರಿಂದ) ತಿರೋಅಹ್ನ್ಯ ಎಂಬ ಹೆಸರುಳ್ಳ । **ತಂ**—ಈ ಸೋಮರಸವನ್ನು । **ಪಾತ**— ಕುಡಿಯಿರಿ.

ಭಾವಾರ್ಥ

ಎಲೈ ಅಗ್ನಿಯೇ, ಎದುರಿಗಿರುವ ದೇವತಾಜನವನ್ನು ಎಂದರೆ ದೇವತೆಗಳನ್ನು ಎಲ್ಲರನ್ನೂ ಒಟ್ಟಿಗೆ ಕರೆದುಕೊಂಡು ಬಂದು ಪೂಜಿಸು. ಎಲೈ ಫಲಪ್ರದರಾದ ದೇವತೆಗಳೇ, ಈ ಸೋಮರಸವು ನಿಮಗಾಗಿ ಸಿದ್ಧಪಡಿಸಲ್ಪಟ್ಟಿದೆ. ಹಿಂದಿನ ದಿನ (ನಿನ್ನೆ) ಹಿಂಡಿದ ಈ ಸೋಮರಸವನ್ನು ಪಾನಮಾಡಿರಿ.

English Translation

Agni, bring divine beings (gods) with simultaneous invocations and worship them; O generous gods, this is (here is) the soma-juice, drink it, it was expressed yesterday

॥ ವಿಶೇಷವಿಷಯಗಳು ॥

**ಅರ್ವಾಂಚಂ**— ಅಭಿಮುಖವಾಗಿ ಎದುರಿಗೆ ಯಜ್ಞದಲ್ಲಿ ದೇವತೆಗಳನ್ನು ಕರೆದುಕೊಂಡು ಬಂದು ಯಜಮಾನನ ಅಭಿಮುಖವಾಗಿ ಕುಳ್ಳಿರಿಸಬೇಕೆಂದಭಿಪ್ರಾಯವು.

**ದೈವ್ಯಂ ಜನಂ**— ದೇವತಾಜನಗಳು ಎಂದರೆ ವಸುರುದ್ರಾದಿತ್ಯರು.

**ಸಹೂತಿಭಿಃ—ಸಮಾನಾಹ್ವಾನೈಃ** । ಎಲ್ಲರನ್ನೂ ಒಟ್ಟಿಗೆ ಕರೆತರುವ ಆಹ್ವಾನಗಳಿಂದ

**ತಿರೋ ಅಹ್ನ್ಯಂ—ಪೂರ್ವಸ್ಮಿನ್ನಹ್ನ್ಯಭಿಷುತೋ ಯಃ ಸೋಮಃ ಉತ್ತರೇಽಹನಿ ಹೂಯತೇ ತಸ್ಯೈತನ್ನಾಮಧೇಯಂ** । ಹಿಂದಿನ ದಿನ ಎಂದರೆ ಕಳೆದುಹೋದ ದಿನ. ನಿನ್ನೆಯ ದಿನದಲ್ಲಿ ಹಿಂಡಿ ಸಿದ್ಧಪಡಿಸಿದ ಸೋಮರಸವನ್ನು ಈ ದಿವಸ ನಿಮಗೆ ಅರ್ಪಿಸುತ್ತೇನೆ. ಇದನ್ನು ಪಾನಮಾಡಿ ಎಂದು ಋಷಿಯು ಪ್ರಾರ್ಥಿಸಿರುವನು.

ವ್ಯಾಕರಣಪ್ರಕ್ರಿಯಾ

**ದೈವ್ಯಮ್**— ದಿವು ಕ್ರೀಡಾದೌ, ಪಚಾದ್ಯಚ್, ಲಘೂಪಧಗುಣ, **ದೇವಾದ್ಯಞಞೌ** ದೇವಶಬ್ದದ ಮುಂದೆ ಪ್ರಾಗ್ದೀವ್ಯತೀಯಾರ್ಥದಲ್ಲಿ ಯಞ್+ಅಞ್ ಎಂಬ ಪ್ರತ್ಯಯಗಳು ಬರುತ್ತವೆ ಎಂದು ಯಞ್ ಪ್ರತ್ಯಯ. **ಯಸ್ಯೇತಿ ಚ** ಎಂದು ಅಕಾರಲೋಪ. **ತದ್ಧಿತೇಷ್ವಚಾಮಾದೇಃ** ಎಂದು ಆದಿವೃದ್ಧಿ ಏಕಾರಕ್ಕೆ ಐ ಬರುತ್ತೆ-

**ಯಕ್ಷ್ವ**— ಯಜ ದೇವಪೂಜಾದೌ, ಲೋಟ್‌ಗೆ **ಥಾಸ್**, **ಥಾಸಸ್ಸೇ** ಎಂದು ಆದೇಶ. **ಸವಾಭ್ಯಾಂ ವಾಮೌ** ಎಂದು ಏಕಾರಕ್ಕೆ ವಕಾರ, ಯಜ್+ಸ್ವ. **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂದು ಶಪ್‌ಗೆ ಲುಕ್. **ವ್ರಶ್ಚಭ್ರಸ್ಜಸೃಜಮೃಜಯಜ—,** ಎಂದು ಜಕಾರಕ್ಕೆ ಷಕಾರ. **ಷಢೋಃ ಕಸ್ಸಿ** ಎಂದು ಷಕಾರಕ್ಕೆ ಕಕಾರ-ಯಕ್+ಸ್ವ. **ಆದೇಶ ಪ್ರತ್ಯಯಯೋಃ** ಎಂದು ಸಕಾರಕ್ಕೆ ಷಕಾರ. **ಅಗ್ನೇ** ಎಂಬುದು ಆಮನ್ತ್ರಿತ.

ಇದು ಪಾದದ ಆದಿಯಲ್ಲಿದೆ. **ಆಮನ್ತ್ರಿತಂ ಪೂರ್ವಮವಿದ್ಯಮಾನವತ್** (ಪಾ. ಸೂ. ೮-೧-೭೨) ಎಂದು ಅವಿದ್ಯ ಮಾನವದ್ಭಾವ ಬರುತ್ತೆ. ಆದ್ದರಿಂದ ಯಕ್ಷ್ವ ಎಂಬುಗು ಪಾದಾದಿಯಲ್ಲಿ ಇರತಕ್ಕದ್ದಾಗುತ್ತೆ. **ತಿಙ್ಙತಿಙಃ** ಎಂಬುದ ರಿಂದ ಸರ್ವಾನುದಾತ್ತ ಬರುವುದಿಲ್ಲ. ಸತಿಶಿಷ್ಟವಾದ್ದರಿಂದ ಪ್ರತ್ಯಯಸ್ವರ ಬರುವುದು ಯುಕ್ತ, ಆದರೂ ಛಾಂದಸ ನಾಗಿ ಧಾತುಸ್ವರವೇ ಬರುತ್ತೆ.

**ಸಹೂತಿಭಿಃ**—ಸಮಾನಾ ಹೂತಿಃ=ಆಹ್ವಾನಂ ಯೇಷಾಂ ತೇ ಸಹೂತಯಃ ತೈಃ ಎಂದು ವಿಗ್ರಹ. **ಸಮಾನಸ್ಯಛಂದಸ್ಯಮೂರ್ಧಪ್ರಭೃತ್ಯುದರ್ಕೇಷು** (ಪಾ. ಸೂ. ೬-೩-೮೪) ಛಂದಸ್ಸಿನಲ್ಲಿ ಉತ್ತರಪದವು ಪರ ದಲ್ಲಿದ್ದರೆ ಸಮಾನಶಬ್ದಕ್ಕೆ ಸ ಆದೇಶ ಬರುತ್ತೆ ಆದರೆ ಮೂರ್ಧಾದಿಗಳು ಪರದಲ್ಲಿದ್ದರೆ ಬರುವುದಿಲ್ಲ ಎಂಬುದರಿಂದ ಸಮಾನಶಬ್ದಕ್ಕೆ ಸ ಆದೇಶ. ಬಹುವ್ರೀಹಿಸಮಾಸ ಬಂದಿರುವುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತೆ.

**ಪಾತ**—ಪಾ ಪಾನೇ ೧ನೇ ಗಣ. ಲೋಟ್, ಥ, **ಲೋಟೋಲಙ್ವತ್** ಎಂದು ಲಙ್ವದ್ಭಾವ, **ತಸ್ಥಸ್ಥ ಮಿಪಾಂ ತಾಂತಂತಾಮಃ** (ಪಾ. ಸೂ. ೩-೪-೧೦೧) ಎಂದು ಥಗೆ ತ ಆದೇಶ. **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂದು ಶಪ್‌ಗೆ ಲುಕ್, ಪಾತ ಎಂದಾಗುತ್ತೆ ತಿಙ್ಙತಿಙಃ ಎಂದು ಸರ್ವಾನುದಾತ್ತ.

**ತಿರೋಅಹ್ನ್ಯಮ್**— ಅಹನಿ ಭವಮ್ ಅಹ್ನ್ಯಂ ಹಗಲಲ್ಲಿ ಉಂಟಾದುದು ಎಂದು ಅರ್ಥ. **ಭವೇ ಛಂದಸಿ** (ಪಾ ಸೂ. ೪-೪-೧೧೦) ಸಪ್ತಮ್ಯಂತದ ಮುಂದೆ ಭವಾರ್ಥದಲ್ಲಿ ಯತ್‌ಪ್ರತ್ಯಯವು ಛಂದಸ್ಸಿನಲ್ಲಿ ಬರುತ್ತೆ ಎಂದು ಯತ್. ಅಹನ್+ಯ. **ಅಹ್ನಷ್ಟಖೋರೇವ** (ಪಾ. ಸೂ ೬-೪-೧-೪೫) ಟ-ಖ ಈ ಪ್ರತ್ಯಯಗಳು ಪರದಲ್ಲಿರುವಾಗ ಮಾತ್ರವೇ ಅಹನ್‌ಶಬ್ದದ ಟಿಗೆ ಲೋಪ ಬರುತ್ತೆ ಎಂದು ಹೇಳಿರುವುದರಿಂದ ಬೇರೆ ಪ್ರತ್ಯಯಗಳು ಪರದಲ್ಲಿರುವಾಗ ಟಿಗೆ ಲೋಪ ಬರಲಾರದು ಏವಂಚ **ನಸ್ತದ್ಧಿತೇ** (ಪಾ. ಸೂ. ೬-೪-೧೪೪) ತದ್ಧಿತ ಪ್ರತ್ಯಯವು ಪರದಲ್ಲಿರುವಾಗ ನಕಾರಾಂತವೂ ಭಸಂಜ್ಞಿಕವೂ ಆದ ಅಂಗದ ಟಿಗೆ ಲೋಪ ಬರುತ್ತೆ ಎಂಬುದರಿಂದ ಪ್ರಾಪ್ತವಾಗುವ ಟಿಲೋಪವು ಬರುವುದಿಲ್ಲ. **ಯಚಿ ಭಂ** (ಪಾ. ಸೂ. ೧-೪-೧೮) ಯಕಾರಾದಿ ಅಥವಾ ಅಕಾರಾದಿಯಾದ ಕಪ್ರತ್ಯ ಯಾವಧಿಕಾಸರ್ವನಾಮಸ್ಥಾನ ಸ್ವಾದಿಪ್ರತ್ಯಯ ಪರದಲ್ಲಿರುವಾಗ ಪೂರ್ವಕ್ಕೆ ಭಸಂಜ್ಞೆ ಬರುತ್ತೆ ಎಂದು ಭಸಂಜ್ಞೆ ಬರುವುದು. **ಅಲ್ಲೋಪೋऽನಃ** (ಪಾ ಸೂ. ೬-೪-೧೩೪) ಕಪ್ರತ್ಯಯಾವಧಿಕಾಸರ್ವನಾಮಸ್ಥಾನಯಾದ್ಯಜಾದಿ ಸ್ವಾದಿಪ್ರತ್ಯಯಾವ್ಯವಹಿತ ಪೂರ್ವದಲ್ಲಿರುವ ಅನ್‌ನ ಅಕಾರಕ್ಕೆ ಲೋಪ ಬರುತ್ತೆ ಎಂದು ಅನ್‌ನ ಅಕಾರಕ್ಕೆ ಲೋಪ **ಯೇಚಾಭಾವಕರ್ಮಣೋಃ** (ಪಾ. ಸೂ. ೬-೪-೧೬೮) ಯಕಾರಾದಿಯಾದ ತದ್ಧಿತಪ್ರತ್ಯಯವು ಪರದಲ್ಲಿದ್ದರೆ ಅನ್‌ಗೆ ಪ್ರಕೃತಿಭಾವ ಬರುತ್ತೆ. ಆದರೆ ಭಾವಕರ್ಮಾರ್ಥಕವಾದ ಯಕಾರಾದಿತದ್ಧಿತ ಪರದಲ್ಲಿದ್ದರೆ ಈ ಪ್ರಕೃತಿಭಾವ ಬರು ವುದಿಲ್ಲ ಎಂಬುದರಿಂದ ಇಲ್ಲಿ ಭವಾರ್ಥಕಪ್ರತ್ಯಯ ಪರದಲ್ಲಿರುವುದರಿಂದ ಪ್ರಕೃತಿಭಾವವು ಯದ್ಯಪಿ ಬರಬೇಕು. ಆದರೂ **ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ** ಎಂಬುದರಿಂದ ಪ್ರಕೃತಿಭಾವ ಬರುವುದಿಲ್ಲ. ತಿರಸ್+ಅಹ್ನ್ಯಮ್ ಎಂದಿರುವಾಗ **ಸಸಜುಷೋರುಃ** ( ಪಾ ಸೂ. ೮-೨-೬೬ ) ಎಂದು ಸ್‌ಗೆ ರು ಆದೇಶ. **ಅತೋರೋರಪ್ಲುತಾದ ಪ್ಲುತೇ** (ಪಾ. ಸೂ ೬-೧-೧೧೦) ಎಂಬುದರಿಂದ ರುಗೆ ಉ ಆದೇಶ. ತಿರ+ಉ+ಅಹ್ನ್ಯಂ **ಆದ್ಗುಣಃ** (ಪಾ ಸೂ. ೬-೧-೮೭) ಎಂದುಗುಣ. ತಿರೋ+ಅಹ್ನ್ಯಮ್, **ಪ್ರಕೃತ್ಯಾನ್ತಃ ಪಾದಮವ್ಯಪರೇ** ( ಪಾ. ಸೂ. ೬-೧-೧೧೫ )

ವಕಾರಯಕಾರಗಳನ್ನು ಪರದಲ್ಲಿ ಹೊಂದಿಲ್ಲದ ಹ್ರಸ್ವಾಕಾರ ಪರದಲ್ಲಿದ್ದರೆ ಋಕ್ಪಾದದ ಮಧ್ಯೆ ಇರುವ ಏ ಓ ಗಳು ಪ್ರಕೃತಿ ಭಾವವನ್ನು ಹೊಂದುವುವು ಎಂದು ಪ್ರಕೃತಿಭಾವ ಬರುತ್ತೆ. **ತತ್ಪುರುಷೇತುಲ್ಯಾರ್ಥ—,** ಎಂಬುದರಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರಬರುತ್ತೆ. ॥ ೧೦ ॥

ಇಲ್ಲಿಗೆ ೪೫ನೆಯ ಸೂಕ್ತವು ಮುಗಿದುದು.



# ನಲವತ್ತಾರನೆಯ ಸೂಕ್ತವು



**ಏಷೋ ಉಷಾ ಇತಿ ಪಂಚದಶರ್ಚಂ ತೃತೀಯಂ ಸೂಕ್ತಂ ಪ್ರಸ್ಕಣ್ವಸ್ಯಾರ್ಷಂ । ಇದಮುತ್ತರಂ ಚಾಶ್ವಿನಂ ಗಾಯತ್ರೀಛಂದಸ್ಕಂ । ಅತ್ರಾನುಕ್ರಮಣಿಕಾ । ಏಷೋ ಪಂಚೋನಾಶ್ವಿನಂ ತು ಗಾಯತ್ರ-ಮಿತಿ ॥ ಪ್ರಾತರನುವಾಕ ಆಶ್ವಿನೇ ಕ್ರತೌ ಗಾಯತ್ರೀಛಂದಸ್ಯಾಶ್ವಿನಶಸ್ತ್ರೇ ಚೇದಂ ಸೂಕ್ತಂ । ಅಥಾಶ್ವಿನ ಏಷೋ ಉಷಾಃ । ಆ. ೪-೧೫ । ಇತಿ ಸೂತ್ರಿತಂ ॥**

ಅನುವಾದವು— **ಏಷೋ ಉಷಾ** ಎಂಬುದು ಒಂಭತ್ತನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪ್ರಸ್ಕಣ್ವನೇ ಋಷಿಯು. ಈ ಸೂಕ್ತವೂ ಮುಂದಿನ ಸೂಕ್ತವೂ ಅಶ್ವಿನೀದೇವತಾಕವು, ಈ ಸೂಕ್ತವು ಗಾಯತ್ರೀಛಂದಸ್ಕವು. ಅನುಕ್ರಮಣಿಕೆಯಲ್ಲಿ— **ಏಷೋ ಪಂಚೋನಾಶ್ವಿನಂ ತು ಗಾಯತ್ರಂ** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನ ಕ್ರತು ಸಂಬಂಧವಾದ ಗಾಯತ್ರೀಛಂದಸ್ಸಿನ ಆಶ್ವಿನಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಅಥಾಶ್ವಿನ ಏಷೋ ಉಷಾ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೫)

॥ ಓಂ ॥

## ಸೂಕ್ತ—೪೬

॥ ಮಂಡಲ—೧ ॥ ಅನುವಾಕ—೯ ॥ ಸೂಕ್ತ—೪೬ ॥

॥ ಅಷ್ಟಕ— ೧ ॥ ಅಧ್ಯಾಯ— ೩ ॥ ವರ್ಗ—೩೩, ೩೪, ೩೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ– ೧೫ ॥

॥ ಋಷಿಃ—ಪ್ರಸ್ಕಣ್ವಃ ಕಾಣ್ವಃ ॥

॥ ದೇವತಾ—ಅಶ್ವಿನೌ ॥

। ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಏಷೋ ಉಷಾ ಅಪೂರ್ವ್ಯಾ ವ್ಯುಚ್ಛತಿ ಪ್ರಿಯಾ ದಿವಃ।
ಸ್ತುಷೇ ವಾಮಶ್ವಿನಾ ಬೃಹತ್ ॥ ೧॥

॥ ಪದಪಾಠಃ ॥

ಏಷೋ ಇತಿ । ಉಷಾಃ । ಅಪೂರ್ವ್ಯಾ । ವಿ । ಉಚ್ಛತಿ । ಪ್ರಿಯಾ । ದಿವಃ ।
ಸ್ತುಷೇ । ವಾಂ । ಅಶ್ವಿನಾ । ಬೃಹತ್ ॥ ೧ ॥

ಸಾಯಣಭಾಷ್ಯಂ

ಏಷೋ ಏಷೈವಾಸ್ಮಾಭಿಃ ಪರಿದೃಶ್ಯಮಾನಾ ಪ್ರಿಯಾ ಸರ್ವೇಷಾಂ ಪ್ರೀತಿಹೇತುರಪೂರ್ವ್ಯಾ ಪೂರ್ವ್ಯೇಷು ಮಧ್ಯರಾತ್ರಾದಿಕಾಲೇಷು ವಿದ್ಯಮಾನಾ ನ ಭವತಿ ಕಿಂತ್ವಿದಾನೀಂತನ್ಯುಷಾ ಉಷೋದೇವತಾ ದಿವೋ ದ್ಯುಲೋಕಸ್ಯ ಸಕಾಶಾದಾಗತ್ಯ। ವ್ಯುಚ್ಛತಿ। ತಮೋ ವರ್ಜಯತಿ। ಹೇ ಅಶ್ವಿನೌ ವಾಂ ಯುವಾಂ ಬೃಹತ್ಪ್ರಭೂತಂ ಯಥಾ ಭವತಿ ತಥಾ ಸ್ತುಷೇ। ಸ್ತೌಮಿ॥ ಸ್ತುಷೇ। ಷ್ಟುಞ್ ಸ್ತುತೌ

**ತಿಙಾಂ ತಿಙೋ ಭವಂತೀತ್ಯುತ್ತಮೈಕವಚನಸ್ಯ ಮಧ್ಯಮೈಕವಚನಾದೇಶಃ । ಯದ್ವಾ । ಲೇಟ್ಯುತ್ತಮೈಕವಚನೇ ಸಿಬ್ಬಹುಲಂ ಲೇಟೀತಿ ಸಿಪ್ ॥**

ಪ್ರತಿಪದಾರ್ಥ

**ಪ್ರಿಯಾ**—(ಸಕಲರಿಗೂ) ಸಂತೋಷಕಾರಣಳಾದ । **ಅಪೂರ್ವ್ಯಾ**—ಇದಕ್ಕೆ ಮೊದಲು (ರಾತ್ರಿಯೆಲ್ಲಾ) ಇಲ್ಲದೆ ಈಗತಾನೇ ಆವಿರ್ಭವಿಸಿರುವ । **ಏಷೋ ಉಷಾಃ**—ನಮ್ಮ ಕಣ್ಣಿಗೆ ಕಾಣಿಸುತ್ತಿರುವ ಈ ಉಷೋದೇವತೆಯು **ದಿವಃ**— ದ್ಯುಲೋಕದಿಂದ (ಬಂದು) । **ವ್ಯುಚ್ಛತಿ**— ಕತ್ತಲನ್ನು ಚದುರಿಸುತ್ತಾಳೆ. । **ಅಶ್ವಿನಾ**— ಎಲೈ ಅಶ್ವಿದೇವತೆಗಳೇ । **ವಾಂ**— ನಿಮ್ಮನ್ನು । **ಬೃಹತ್**— ಅತ್ಯಧಿಕವಾಗಿ । **ಸ್ತುಷೇ**— ಸ್ತೋತ್ರಮಾಡುತ್ತೇನೆ. ।

॥ ಭಾವಾರ್ಥ ॥

ಅಂಧಕಾರಮಯವಾಗಿದ್ದ ರಾತ್ರಿಯು ಕಳೆದಮೇಲೆ ಈಗತಾನೇ ಉಷೋದೇವತೆಯು ಆವಿರ್ಭವಿಸಿದ್ದಾಳೆ ದ್ಯುಲೋಕದಿಂದ ಬಂದು ಕತ್ತಲನ್ನು ಚದುರಿಸಿ ಪ್ರಭೆಯನ್ನು ಬೀರಿ ಸಕಲರ ಸಂತೋಷಕ್ಕೆ ಕಾರಣಳಾಗಿದ್ದಾಳೆ. ಎಲೈ ಅಶ್ವಿನೀದೇವತೆಗಳೇ, ಸಕಲರ ಸಂತೋಷದಾಯಕಳಾದ ಉಷೋದೇವಿಯ ಆವಿರ್ಭಾವಕ್ಕೆ ಸಹಾಯಕರಾದ ನಿಮ್ಮನ್ನು ಅತ್ಯಧಿಕವಾಗಿ ಸ್ತೋತ್ರಮಾಡುತ್ತೇನೆ.

English Translation

This beloved Ushas, until now unseen, scatters the darkness from the sky; O Aswins, I greatly praise you.

ವಿಶೇಷವಿಷಯಗಳು

**ಅಪೂರ್ವ್ಯಾ— ಪೂರ್ವಮವಿದ್ಯಮಾನಾ । ನೂತನಾ ॥** ಇದುವರಿವಿಗೂ ಇಲ್ಲದಿದ್ದ ಅಥವಾ ಕಾಣಿಸದಿದ್ದ.

ಈ ಸೂಕ್ತದಲ್ಲಿ ಅಶ್ವಿನೀದೇವತೆಗಳನ್ನು ಪ್ರಾತಃಕಾಲದಲ್ಲಿ ಪ್ರಾರ್ಥಿಸಬೇಕೆಂದು ಋಷಿಯು ಉದ್ದೇಶಿಸಿ ಅದಕ್ಕೆ ಪೂರ್ವಭಾವಿಯಾಗಿ ಉಷಃಕಾಲವನ್ನು ವರ್ಣಿಸಿರುವನು.

ವ್ಯಾಕರಣಪ್ರಕ್ರಿಯಾ

**ಸ್ತುಷೇ**—ಷ್ಟುಞ್ ಸ್ತುತೌ— **ತಿಙಾಂ ತಿಙೋ ಭವನ್ತಿ** ಎಂಬುದರಿಂದ ಉತ್ತಮಪುರುಷ ಏಕವಚನ ಇಟ್‌ಗೆ ಮಧ್ಯಮಪುರುಷ ಏಕವಚನ ಥಾಸ್ ಸೇ ಆದೇಶ. ಸ್ತು+ಸೇ ಷತ್ವ. ಅಥವಾ ಲೇಟ್ ಉತ್ತಮಪುರುಷ ಏಕವಚನ ಇಟ್. **ಟಿತ ಆತ್ಮನೇಪದಾನಾಂ—,** ಎಂಬುದರಿಂದ ಏಕಾರಾದೇಶ. **ಸಿಪ್ ಬಹುಲಂ ಲೇಟಿ** (ವಾ ಸೂ. ೩-೪-೩೪) ಎಂದು ಸಿಪ್. ಸ್ತುಷೇ ಎಂದಾಗುತ್ತೆ. ॥೧॥

ಸಂಹಿತಾಪಾಠಃ

ಯಾ ದಸ್ರಾ ಸಿಂಧುಮಾತರಾ ಮನೋತರಾ ರಯೀಣಾಂ।
ಧಿಯಾ ದೇವಾ ವಸುವಿದಾ ॥ ೨ ॥

ಪದಪಾಠಃ

ಯಾ । ದಸ್ರಾ । ಸಿಂಧುऽಮಾತರಾ । ಮನೋತರಾ । ರಯೀಣಾಂ ।
ಧಿಯಾ । ದೇವಾ । ವಸುऽವಿದಾ ॥ ೨ ॥

ಸಾಯಣಭಾಷ್ಯಂ

ಯಾ ದೇವಾ ಯಾವುಭಾವಶ್ವಿನೌ ವಕ್ಷ್ಯಮಾಣಗುಣಯುಕ್ತೌ ತೌ ಸ್ತುಷ ಇತಿ ಪೂರ್ವತ್ರಾನ್ವಯಃ। ಕೀದೃಶೌ। ದಸ್ರಾ ದಸ್ರೌ ದರ್ಶನೀಯೌ ಸಿಂಧುಮಾತರಾ ಸಮುದ್ರಮಾತೃಕೌ। ಯದ್ಯಪಿ ಸೂರ್ಯಾಚಂದ್ರಮಸಾವೇವ ಸಮುದ್ರಜೌ ತಥಾಪ್ಯಶ್ವಿನೋಃ ಕೇಷಾಂಚಿನ್ಮತೇ ತದ್ರೂಪತ್ವಾತ್ತಥಾತ್ವಂ। ರಯೀಣಾಂ ಧನಾನಾಂ ಮನೋತರಾ ಮನಸಾ ತಾರಯಿತಾರೌ ಧಿಯಾ ಕರ್ಮಣಾ ವಸುವಿದಾ ನಿವಾಸಸ್ಥಾನಸ್ಯ ಲಂಭಯಿತಾರೌ ॥ ಮನೋತರಾ। ಮನಸಾ ತರತ ಇತಿ ಮನೋತರೌ। ತರತೇರಂತರ್ಭಾವಿತಣ್ಯರ್ಥಾತ್ ಋದೋರಬಿತ್ಯಪ್। ಪೂರ್ವಪದಾಂತಸ್ಯ ಸಕಾರಸ್ಯ ರುತ್ವೇ ಸತಿ ಛಾಂದಸಮುತ್ವಂ। ರಯೀಣಾಂ। ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ। ಧಿಯಾ। ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ। ವಸುವಿದಾ। ವಸೂನಿ ನಿವಾಸಸ್ಥಾನಾನಿ ವಿಂದೇತೇ ಇತಿ ವಸುವಿದೌ। ಕ್ವಿಪ್ಚೇತಿ ಕ್ವಿಪ್ ॥

ಪ್ರತಿಪದಾರ್ಥ

**ದಸ್ರಾ**— ಸುಂದರರೂಪವುಳ್ಳವರೂ। **ಸಿಂಧುಮಾತರಾ**— ಸಮುದ್ರವೇ ತಾಯಿಯಾಗಿ ಉಳ್ಳವರೂ। **ರಯೀಣಾಂ**—ಧನಗಳ(ನ್ನು)। **ಮನೋತರಾ**—ಮನಃಪೂರ್ವಕವಾಗಿ ಹಂಚುವವರೂ। **ಧಿಯಾ**—(ಅವರವರ) ಕರ್ಮಕ್ಕನುಗುಣವಾಗಿ (ಅವರ ಪ್ರತಿಫಲವಾಗಿ)। **ವಸುವಿದಾ**— ನಿವಾಸಸ್ಥಾನಗಳನ್ನೊದಗಿಸುವವರೂ ಆದ। **ಯಾ ದೇವಾಃ**— ಯಾವ ಅಶ್ವಿದೇವತೆಗಳಿರುವರೋ (ಅವರನ್ನು ಸ್ತೋತ್ರಮಾಡುತ್ತೇನೆ)।

ಭಾವಾರ್ಥ

ಅಶ್ವಿನೀದೇವತೆಗಳು ಸಮುದ್ರದ ಪುತ್ರರು. ಸುಂದರರೂಪರು. ಮನಃಪೂರ್ವಕವಾಗಿ ಧನಗಳನ್ನು ಬಹಳ ಔದಾರ್ಯದಿಂದ ಹಂಚುವವರು. ಆದರೆ ವಿವೇಚನೆ ಯಿಲ್ಲದೆ ತಮ್ಮ ಔದಾರ್ಯವನ್ನು ತೋರಿಸುವುದಿಲ್ಲ. ಪ್ರತಿಯೊಬ್ಬರಿಗೂ ಅವರವರ ಕರ್ಮಕ್ಕನುಗುಣವಾಗಿಯೂ, ಅದರ ಪ್ರತಿಫಲವಾಗಿಯೂ ನಿವಾಸಸ್ಥಾನಗಳನ್ನೊದಗಿಸುವವರು. ಅಂತಹ ಉದಾರಿಗಳೂ, ನ್ಯಾಯನಿಷ್ಠರೂ ಆದ ಅಶ್ವಿನೀದೇವತೆಗಳನ್ನು ನಾನು ಸ್ತೋತ್ರಮಾಡುತ್ತೇನೆ.

## English Translation

( I praise Aswins ) who are divine, of pleasing appearance, children of the sea, givers of wealth and granters of dwellings ( as the reward of the sacrifice)

॥ ವಿಶೇಷವಿಷಯಗಳು ॥

**ದಸ್ರಾ— ದರ್ಶನೀಯೌ ।** ಸುಂದರರಾದ ಅಥವಾ ಶತ್ರುವಿನಾಶಕರಾದ.

**ಸಿಂಧುಮಾತರಾ**—ಸಮುದ್ರವೇ ತಾಯಿಯಾಗಿವುಳ್ಳ ಎಂದರೆ ಸಮುದ್ರಪುತ್ರರಾದ. ಕೆಲವರ ಅಭಿಪ್ರಾಯದಲ್ಲಿ ಸೂರ್ಯಚಂದ್ರರು ಸಮುದ್ರದಿಂದ ಉತ್ಪನ್ನರಾದಂತೆ ಈ ಅಶ್ವಿನೀದೇವತೆಗಳೂ ಸಮುದ್ರದಿಂದ ಹುಟ್ಟಿದವರೆಂದೂ ಆದುದರಿಂದ ಇವರನ್ನು ಸಮುದ್ರಪುತ್ರರೆಂದು ಕರೆಯುವುದು ನ್ಯಾಯವೆಂದೂ ಭಾಷ್ಯಕಾರರು ಹೇಳಿರುವರು. ಸಿಂಧುವೆಂದರೆ ಸಮುದ್ರವು ಸಮುದ್ರಶಬ್ದಕ್ಕೆ ಅಂತರಿಕ್ಷವೆಂದೂ ಅರ್ಥವಿರುವುದರಿಂದ ಈ ಅಶ್ವಿನೀದೇವತೆಗಳನ್ನು ಅಂತರಿಕ್ಷದಲ್ಲಿ ಜನಿಸಿದವರೆಂದು ಹೇಳಬಹುದು.

**ಮನೋತರಾ— ಮನಸಾ ತಾರಯಿತಾರೌ । ಮನಸಾ ತರತ ಇತಿ ಮನೋತರೌ । ಧನಾನಾಂ ದಾತಾರಾವಿತ್ಯರ್ಥಃ ।** ಧನವನ್ನು ಹಂಚುವವರು ಎಂದರೆ ಕೊಡುವವರು ಎಂದರ್ಥವು

**ಧಿಯಾ— ಕರ್ಮಣಾ ।** ಕರ್ಮದಿಂದ (ನಿ. ೨-೧)

**ವಸುವಿದಾ— ವಸೂನಿ ನಿವಾಸಸ್ಥಾನಾನಿ ವಿಂದೇತೇ ಇತಿ ವಸುವಿದೌ । ನಿವಾಸಸ್ಥಾನಸ್ಯ ಲಂಭಯಿತಾರೌ ।** ಯಜ್ಞಾದಿಕರ್ಮಗಳನ್ನು ಮಾಡುವವರಿಗೆ ನಿವಾಸಸ್ಥಾನಗಳನ್ನು ದೊರಕಿಸಿಕೊಡುವವರು.

ವ್ಯಾಕರಣಪ್ರಕ್ರಿಯಾ

**ಮನೋತರಾ**—ಮನಸಾ ತರತ ಇತಿ ಮನೋತರಾ ಎಂದು ವಿಗ್ರಹ ತೃ ಪ್ಲವನಸಂತರಣಯೋಃ ಣಿಚ್ ಪ್ರತ್ಯಯದ ಅರ್ಥವನ್ನೊಳಗೊಂಡ ಈ ಧಾತು ಮುಂದೆ **ಋದೋರಪ್** (ಪಾ. ಸೂ. ೩-೩-೫೭) ಋ. ವರ್ಣಾಂತ ಅಥವಾ ಉವರ್ಣಾಂತವಾದ ಧಾತು ಮುಂದೆ ಭಾವ ಅಥವಾ ಕರ್ತೃಭಿನ್ನಕಾರಕ ಇವುಗಳಲ್ಲಿ ಅಪ್

ಪ್ರತ್ಯಯ ಬರುತ್ತೆ ಎಂದು ಅಪ್‌ಪ್ರತ್ಯಯ. ಗುಣವು ರಪರವಾಗಿ ಬರುತ್ತೆ. **ಸಸಜುಷೋರುಃ** (ಪಾ. ಸೂ. ೮-೨-೬೬) ಪದಾಂತದಲ್ಲಿರುವ ಸಕಾರಕ್ಕೂ ಸಜುಷ್ ಶಬ್ದಕ್ಕೂ ರೇಫ ಬರುತ್ತೆ ಎಂಬುದರಿಂದ ಪೂರ್ವಪದವಾದ ಮನಸ್ ಎಂಬುದರ ಕೊನೆಯಲ್ಲಿರುವ ಸಕಾರಕ್ಕೆ ರು ಆದೇಶ. ಮನರ್+ತರ. ರುಗೆ ಅಪ್ಲುತಾತಃ ಪರಕತ್ವವಿದೆ. ಆದರೂ ಇದು ತಕಾರದ ಹಿಂದೆ ಇದೆ. ಆದ್ದರಿಂದ ಅಪ್ಲುತಾತವ್ಯವಹಿತಪೂರ್ವವೃತ್ತಿತ್ವವಿಲ್ಲದುದರಿಂದ **ಅತೋರಪ್ಲುತಾತ್—**, ಎಂಬುದರಿಂದ ಉತ್ವ ಬರಲಾರದು. ಹಶ್‌ವ್ಯವಹಿತಪೂರ್ವದಲ್ಲಿಲ್ಲವಾದ್ದರಿಂದ **ಹಶಿಚ** ಎಂಬುದರಿಂದಲೂ ಉತ್ತ್ವವು ಬರಲಾರದು ಆದ್ದರಿಂದ ಛಾಂದಸವಾಗಿ ರುಗೆ ಉತ್ತ್ವ ಬರುತ್ತೆ ಎಂದು ಹೇಳಬೇಕು. ಮನ+ಉ+ತರ. **ಆದ್ಗುಣಃ** ಎಂದು ಗುಣ. ದ್ವಿತೀಯಾದ್ವಿವಚನ ಔಟ್‌ಗೆ **ಸುಪಾಂ ಸುಲುಕ್—**, ಎಂಬುದರಿಂದ ಡಾ ಆದೇಶ.

**ರಯೀಣಾಮ್—ನಾಮನ್ಯತರಸ್ಯಾಮ್** (ಪಾ. ಸೂ. ೬-೧-೧೭೭) ಮತುಪ್ ಪ್ರತ್ಯಯವನ್ನು ಹಚ್ಚಿದಾಗ ಯಾವ ಹ್ರಸ್ವ ಇದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಅಂತೋದಾತ್ತವಾದ ಶಬ್ದದ ಮುಂದೆ ಇರುವ ನಾಮ್ ಎಂಬುದು ಉದಾತ್ತವಾಗಿ ವಿಕಲ್ಪದಿಂದ ಆಗುತ್ತೆ ಎಂದು ಸೂತ್ರದ ಅರ್ಥ. 'ರಯಿ ಮಾನ್' ಎಂಬಲ್ಲಿ ಮತುಪ್ಪನ್ನು ಹಚ್ಚಿದಾಗ ಹ್ರಸ್ವವಾದ ಇಕಾರವಿದೆ. ಅದನ್ನು ಕೊನೆಯಲ್ಲಿ ಹೊಂದಿರುವ ರಯಿಶಬ್ದವು ಅಂತೋದಾತ್ತವಾಗಿದೆ. ಆದ್ದರಿಂದ ನಾಮ್ ಉದಾತ್ತವಾಗುತ್ತೆ.

**ಧಿಯಾ—ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ** (ಪಾ ಸೂ. ೬-೧-೧೬೮) ಎಂದು ತೃತೀಯಾ ವಿಭಕ್ತಿ ಉದಾತ್ತವಾಗುತ್ತೆ

**ವಸುವಿದಾ**—ವಸೂನಿ=ವಾಸಸ್ಥಾನಗಳನ್ನು, ವಿನ್ದೇತೇ=ಹೊಂದುವರು ಎಂದು ವಿಗ್ರಹ. ವಸುವಿದೌ ಎಂದಾಗುತ್ತೆ. ವಿದ್ಲೃ ಲಾಭೆ, ಧಾತು ಮುಂದೆ **ಕ್ವಿಪ್‌ಚ** ಎಂದು ಕ್ವಿಪ್ ಪ್ರತ್ಯಯ. ||೨||



ಸಂಹಿತಾಪಾಠಃ

ವಚ್ಯಂತೇ ವಾಂ ಕಕುಹಾಸೋ ಜೂರ್ಣಾಯಾಮಧಿ ವಿಷ್ಟಪಿ ।
ಯದ್ವಾಂ ರಥೋ ವಿಭಿಷ್ಪತಾತ್ ॥ ೩ ॥

ಪದಪಾಠಃ

ವಚ್ಯಂತೇ । ವಾಂ । ಕಕುಹಾಸಃ । ಜೂರ್ಣಾಯಾಂ । ಅಧಿ । ವಿಷ್ಟಪಿ ।

ಯತ್ । ವಾಂ । ರಥಃ । ವಿऽಭಿಃ । ಪತಾತ್ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಾಂ ಯುವಯೋಃ ಸಂಬಂಧೀ ರಥೋ ಜೂರ್ಣಾಯಾಂ ನಾನಾಶಾಸ್ತ್ರೈಃ ಸ್ತುತಾಯಾಮಧಿ ವಿಷ್ಟಪಿ ಸ್ವರ್ಗಲೋಕೇ ಯದ್ಯದಾ ವಿಭಿರಶ್ವೈಃ ಪತಾತ್ ಪತತಿ ಗಚ್ಛತಿ ತದಾನೀಂ ವಾಂ ಯುವಯೋಃ ಕಕುಹಾಸಃ ಸ್ತುತಯೋ ವಚ್ಯಂತೇ । ಅಸ್ಮಾಭಿರುಚ್ಯಂತೇ ॥ ವಚ್ಯಂತೇ । ಬ್ರುವೀತೇರ್ಯಕಿ ಬ್ರುವೋ ವಚಿಃ । ಪಾ. ೨-೪-೫೩ । ಇತಿ ವಚ್ಯಾದೇಶಃ । ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ । ಸಂಪ್ರಸಾರಣಾಚ್ಚೇತ್ಯತ್ರ ವಾ ಛಂದಸೀತ್ಯನುವೃತ್ತೇಃ ಪರಪೂರ್ವತ್ವಸ್ಯ ಪಾಕ್ಷಿಕತ್ವಾದ್ಯಣಾದೇಶಃ । ಪ್ರತ್ಯಯಸ್ವರಃ । ಕಕುಹಾಸಃ । ಕಕುಭಂ ಶೃಂಗೇ ವಿದುಃ ಪ್ರಧಾನೇ ಚೇತ್ಯಭಿಧಾನಾತ್ ಪ್ರಾಧಾನ್ಯಾಭಿಧಾಯಿನಾ ಕುಕುಪ್ಶಬ್ದೇನ ತತ್ಪ್ರತಿಪಾದಿಕಾಃ ಸ್ತುತಯೋ ಲಕ್ಷ್ಯಂತೇ । ಹತ್ವಂ ಛಾಂದಸಂ । ಆಜ್ಜಸೇರಸುಗಿತ್ಯಸುಕ್ । ಜೂರ್ಣಾಯಾಂ ಜ್ಯಾಷ್ ವಯೋಹಾನೌ । ಅತ್ರ ಸ್ತುತ್ಯರ್ಥೋ ಧಾತೂನಾಮನೇಕಾರ್ಥತ್ವಾತ್ । ನಿಷ್ಠಾಯಾಂ ಶ್ರ್ಯುಕಃ ಕಿತೀತೀಟ್ಪ್ರತಿಷೇಧಃ । ಬಹುಲಂ ಛಂದಸೀತ್ಯುತ್ವಂ । ಹಲಿ ಚೇತಿ ದೀರ್ಘಃ । ರದಾಭ್ಯಾಮಿತಿ ನಿಷ್ಠಾನತ್ವಂ । ಪಾ. ೮-೨-೪೨ । ಪ್ರತ್ಯಯಸ್ವರಃ । ವಿಭಿಃ ವೀ ಗತ್ಯಾದೌ । ವಿಯಂತಿ ಗಚ್ಛಂತೀತಿ ವಯೋऽಶ್ವಾಃ । ಔಣಾದಿಕೋ ಡಿಪ್ರತ್ಯಯಃ । ಪತಾತ್ । ಪತ್ಲೃ ಗತೌ । ಲೇಟ್ಯಾಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ ॥

॥ ಪ್ರತಿಪದಾರ್ಥ ॥

**ವಾಂ**— (ಎಲೈ ಅಶ್ವಿನೀದೇವತೆಗಳೇ) ನಿಮ್ಮ । **ರಥಃ**—ರಥವು । **ಜೂರ್ಣಾಯಾಂ**—(ನಾನಾ ಶಾಸ್ತ್ರಗಳಿಂದ) ಹೊಗಳಲ್ಪಟ್ಟ । **ಅಧಿ ವಿಷ್ಟಪಿ**—ಸ್ವರ್ಗಲೋಕದಲ್ಲಿ । **ಯತ್**—ಯಾವಾಗ । **ವಿಭಿಃ**— ಕುದುರೆಗಳೊಡನೆ। **ಪತಾತ್**—ಹೋಗುತ್ತದೆಯೋ (ಆಗ) । **ವಾಂ**—ನಿಮ್ಮ । **ಕಕುಹಾಸಃ**— ಸ್ತುತಿಗಳು । **ವಚ್ಯಂತೇ**—(ನಮ್ಮಿಂದ) ಪಠಿಸಲ್ಪಡುತ್ತವೆ

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಸ್ವರ್ಗಲೋಕದ ಮಹಿಮೆಯನ್ನು ನಾನಾಶಾಸ್ತ್ರಗಳು ಹೊಗಳಿವೆ. ಅಂತಹ ಮಹಿಮೆಯುಳ್ಳ ಸ್ವರ್ಗಲೋಕದಲ್ಲಿ ನಿಮ್ಮ ರಥವು ನಿಮ್ಮನ್ನು ಕುಳ್ಳಿರಿಸಿಕೊಂಡು ಕುದುರೆಗಳೊಡನೆ ಹೋಗುವಾಗ ನಿಮ್ಮ ಪ್ರಭಾವವನ್ನು ಹೊಗಳಲು ಸ್ತೋತ್ರಗಳನ್ನ ಪಠಿಸುತ್ತೇವೆ.

## English Translation

When your chariot proceeds above the glorious heaven, drawn by your horses your praises are sung by us.

॥ ವಿಶೇಷವಿಷಯಗಳು ॥

**ಕಕುಹಾಸಃ**—ಮಹತ್ ಬ್ರಧ್ನಃ ಮೊದಲಾದ ಇಪ್ಪತ್ತೈದು ಮಹನ್ನಾಮಗಳ ಮಧ್ಯದಲ್ಲಿ ಕಕುಹ ಶಬ್ದವು ಪಠಿತವಾಗಿರುವುದರಿಂದ ( ನಿ. ೩-೧೩ ) ಈ ಶಬ್ದಕ್ಕೆ ಮಹತ್ ಅಥವಾ ಶ್ರೇಷ್ಠ ಎಂದು ಹೆಸರು. ಇಲ್ಲಿ ಶ್ರೇಷ್ಠವೆಂಬ ಅರ್ಥವನ್ನು ಶ್ರೇಷ್ಠವಾದ ಸ್ತುತಿಗಳೆಂದು ವಿವರಿಸಿರುವರು ; ಸ್ತುತಿಗಳು, ಸ್ತೋತ್ರಗಳು

**ಜೂರ್ಣಾಯಾಂ**—ಸ್ತೋತ್ರಮಾಡಲ್ಪಟ್ಟ । **ಜ್ಯೂಷ್ ವಯೋಹಾನೌ । ಧಾತೂನಾಮನೇಕಾರ್ಥತ್ವಾತ್ ಅತ್ರ ಸ್ತುತ್ಯರ್ಥೋ ವಕ್ತವ್ಯಃ** । ಜ್ಯೂಷ್ ಧಾತುವಿಗೆ ಜೀರ್ಣವಾಗುವುದು, ವಯಸ್ಸತಿಕ್ರಮಿಸುವುದು ಎಂದರ್ಥ ವಿದ್ದರೂ ಧಾತುಗಳಿಗೆ ಅನೇಕಾರ್ಥವಿರುವುದೆಂಗು ವಚನವಿರುವುದರಿಂದ ಇಲ್ಲಿ ಈ ಧಾತುವಿಗೆ ಸ್ತುತ್ಯರ್ಥವನ್ನು ಹೇಳಬೇಕೆಂದು ಭಾಷ್ಯಕಾರ ಅಭಿಪ್ರಾಯವು.

ವಿಭಿಃ—**ವೀ ಗತ್ಯಾದೌ । ವಿಯಂತಿ ಗಚ್ಛಂತೀತಿ ವಯೋಽಶ್ವಾಃ** । ವೀ ಧಾತುವಿಗೆ ಗತ್ಯರ್ಥವಿರುವುದು-ವಯಃ ಎಂದರೆ ಗಮನಶೀಲವಾದ ಕುದುರೆಗಳು ಎಂದರ್ಥವು. ವಿಭಿಃ ಎಂಬುದು ಚತುರ್ಥೀಬಹುವಚನ.

**ಪತಾತ್—ಪತತಿ, ಗಚ್ಛತಿ** । ಹೋಗುವುದು, ಸಂಚರಿಸುವುದು.

ವ್ಯಾಕರಣಪ್ರಕ್ರಿಯಾ

**ವಚ್ಯನ್ತೇ**—ಬ್ರೂಞ್ ವ್ಯಕ್ತಾಯಾಂ ವಾಚಿ. ಕರ್ಮಣಿ ಲಟ್, **ಭಾವಕರ್ಮಣೋಃ** ( ಪಾ. ಸೂ. ೧-೩-೧ ) ಭಾವ ಅಥವಾ ಕರ್ಮ ಎಂಬ ಅರ್ಥದಲ್ಲಿ ಬಂದ ಲಕಾರದ ಸ್ಥಾನದಲ್ಲಿ ಆತ್ಮನೇಪದ ಬರುತ್ತೆ ಎಂದು **ಆತ್ಮನೇಪದ** ಬರುತ್ತೆ. ಝ ಅನ್ತಾದೇಶ, ಟಿಗೆ ಏತ್ವ. **ಸಾರ್ವಧಾತುಕೇಯಕ್** (ಪಾ. ಸೂ. ೩-೧-೬೭) ಭಾವ ಅಥವಾ ಕರ್ಮ ಎಂಬ ಅರ್ಥದಲ್ಲಿರುವ ಸಾರ್ವಧಾತುಕವು ಪರದಲ್ಲಿದ್ದರೆ ಧಾತು ಮುಂದೆ ಯಕ್ ಬರುತ್ತೆ ಎಂದು ಯಕ್ ಪ್ರತ್ಯಯ. ಬ್ರೂ+ಯ+ಅನ್ತೆ. **ಬ್ರೂವೋವಚಿಃ** (ಪಾ. ಸೂ. ೨-೪-೫೩) ಆರ್ಧಧಾತುಕ ವಿಷಯದಲ್ಲಿ ಬ್ರೂಞ್ ಧಾತುವಿಗೆ ವಚಿ ಆದೇಶ ಬರುತ್ತೆ ಎಂದು ವಚಿ ಆದೇಶ. ಇಲ್ಲಿ ಇಕಾರ ಉಚ್ಚಾರಣಾರ್ಥ. **ವಚಿ ಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಕಕಾರೇತ್ಸಂಜ್ಞಕವಾದ ಪ್ರತ್ಯಯವು ಪರದಲ್ಲಿದ್ದರೆ ವಚ್-ಸ್ವಪ್ ಧಾತುಗಳಿಗೂ ಯಜಾದಿಧಾತುಗಳಿಗೂ ಸಂಪ್ರಸಾರಣ ಬರುತ್ತೆ. ಸಂಪ್ರಸಾರಣ ಎಂದರೆ ವ್‌ಗೆ ಉಕಾರ **ಸಂಪ್ರಸಾರಣಾಚ್ಚ** (ಪಾ. ಸೂ. ೬-೧-೧೦೮) ಇಲ್ಲಿ **ವಾ ಛಂದಸಿ** (೬-೧-೧೦೬) ಎಂಬುದರಿಂದ ವಾ-ಛಂದಸಿ ಎಂಬ ಪದಗಳು ಅನುವೃತ್ತವಾಗುತ್ತವೆ. ಏವಂಚ ಸಂಪ್ರಸಾರಣದ ಮುಂದೆ ಸ್ವರ ಪರದಲ್ಲಿದ್ದರೆ ಪೂರ್ವಪರಸ್ಥಾನಗಳಿಗೆ ಪೂರ್ವರೂಪ ಬರುತ್ತೆ. ಆದರೆ ಇದು ಛಂದಸ್ಸಿನಲ್ಲಿ ವಿಕಲ್ಪವಾಗಿ ಬರುತ್ತೆ ಎಂದು ವಿಕಲ್ಪವಾದ್ದರಿಂದ ಇಲ್ಲಿ

ಪೂರ್ವರೂಪ ಬರುವುದಿಲ್ಲ. **ಇಕೋ ಯಣಚಿ** ಎಂಬುದರಿಂದ ಯಣಾದೇಶ ಎಂದರೆ ಉಕಾರಕ್ಕೆ ವ್ ಬರುತ್ತೆ. ವಚ್+ಯು-ಅನ್ತೇ, **ಅತೋಗುಣೇ** ಎಂದು ಪರರೂಪ. ವಚ್ಯನ್ತೇ ಎಂದಾಗುತ್ತೆ. ಪ್ರತ್ಯಯಸ್ವರ ಬರುತ್ತೆ. ಪಾದಾದಿಯಲ್ಲಿರುವುದರಿಂದ **ತಿಙ್ಙತಿಙಃ** ಎಂಬ ಸರ್ವಾನುದಾತ್ತ ಬರುವುದಿಲ್ಲ.

**ಕಕುಹಾಸಃ**—' ಕಕುಭಂ ಶೃಂಗೇ ವಿದುಃ ಪ್ರಧಾನೇಚ,' ಎಂಬ ಅಭಿಧಾನದಿಂದ ಕೊಂಬು ಅಥವಾ ಪ್ರಧಾನ ಎಂಬ ಎರಡು ಅರ್ಥಗಳು ಈ ಪದದಿಂದ ಬೋಧಿಸಲ್ಪಡುವುವು. ಇಲ್ಲಿ ಪ್ರಧಾನಾರ್ಥಕವಾದ ಕಕುಪ್ ಶಬ್ದದಿಂದ ಪ್ರಾಧಾನ್ಯವನ್ನು ಹೇಳುವ ಸ್ತುತಿಗಳು ಲಕ್ಷಣಾವೃತ್ತಿಯಿಂದ ಬೋಧಿತವಾಗುವುವು. ಕೊನೆಯ ವರ್ಣಕ್ಕೆ ಹಕಾರಾದೇಶವು ಛಾಂದಸವಾಗಿ ಬರುತ್ತೆ. ಜಸ್, ಕಕುಹ್+ಅಸ್; **ಆಜ್ಜಸೇರಸುಕ್** ಎಂದು ಜಸ್‌ಗೆ ಅಸುಕ್ ಆಗಮ ಕಕುಹಾಸಸ್. ರುತ್ವ. ವಿಸರ್ಗ.

**ಜೂರ್ಣಾಯಾಂ**—ಜ್ಯಾಷ್ ವಯೋಹಾನೌ. ಧಾತುಗಳಿಗೆ ಅನೇಕಾರ್ಥಗಳಿರುವುದರಿಂದ ಇಲ್ಲಿ ಸ್ತುತಿ ಎಂಬ ಅರ್ಥದಲ್ಲಿ ಈ ಧಾತುವು ಪ್ರಯುಕ್ತವಾಗಿದೆ. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. ಜ್ಯಾ+ತ. **ಶ್ರ್ಯುಕಃ ಕಿತಿ** (ಪಾ. ಸೂ. ೭-೨-೧೧) ಶ್ರಿಞ್ ಧಾತು, ಏಕಾಚ್ಕವೂ ಉಗಂತವೂ ಆದ ಧಾತು ಇವುಗಳ ಮುಂದೆ ಇರುವ ಗಿತ್ ವಾ ಕಿತ್ ಆದ ಪ್ರತ್ಯಯಕ್ಕೆ ಇಟ್ ಬರುವುದಿಲ್ಲ. ಎಂಬುದರಿಂದ ಇಡಾಗಮಕ್ಕೆ ನಿಷೇಧ. **ಬಹುಲಂ ಛಂದಸಿ** (ಪಾ. ಸೂ. ೭-೧-೧೦೩) ಎಂಬುದರಿಂದ ಋಗೆ ಉಕಾರವು ರಪರವಾಗಿ ಬರುತ್ತೆ ಜುರ್+ತ. **ಹಲಿಚ** ( ಪಾ. ಸೂ. ೮-೭೭ ) ವ್ಯಂಜನ ಪರದಲ್ಲಿದ್ದರೆ ರೇಫಾಂತ ಅಥವಾ ವಕಾರಾಂತವಾದ ಧಾತುವಿನ ಉಪಧಾಭೂತವಾದ ಇಕ್‌ಗೆ ದೀರ್ಘ ಬರುತ್ತೆ ಎಂದು ಉಕಾರಕ್ಕೆ ದೀರ್ಘ. **ರದಾಭ್ಯಾಂನಿಷ್ಠಾತೋ ನಃ ಪೂರ್ವಸ್ಯಚ ದಃ** (ಪಾ. ಸೂ. ೮-೨-೪೨) ರೇಫ ಅಥವಾ ದಕಾರದ ಮುಂದೆ ಇರುವ ಕ್ತ-ಕ್ತವತು ಪ್ರತ್ಯಯಗಳ ತಕಾರಕ್ಕೆ ನಕಾರ ಬರುತ್ತೆ. ಅಲ್ಲದೆ ಪೂರ್ವದಲ್ಲಿರುವ ದಕಾರಕ್ಕೆ ನಕಾರಾದೇಶವೂ ಬರುತ್ತೆ ಎಂದು ತಕಾರಕ್ಕೆ ನಕಾರ-ಜೂರ್+ನ. **ರಷಾಭ್ಯಾಂ**—, ಎಂದು ಣತ್ವ. ಪ್ರತ್ಯಯಸ್ವರ.

**ವಿಭಿ**—ವೀ ಗತ್ಯಾದೌ. ವಿಯನ್ತಿ ಗಚ್ಛಂತೀತಿ ವಯಃ, ಪಕ್ಷಿಗಳು. ವೀ ಧಾತುಮುಂದೆ ಡಿತ್ ಎಂಬ ಔಣಾದಿಕ ಪ್ರತ್ಯಯ ಬರುತ್ತೆ. ಡಿತ್ಕರಣದಿಂದ ಭ ಸಂಜ್ಞೆ ಇಲ್ಲದೇ ಇದ್ದರೂ ಟಿಗೆ ಲೋಪ.

**ಪತಾತ್**—ಪತ್ಲೃ ಗತೌ ಲೇಟ್. ತಿಪ್. ಲೇಟೋಽಡಾಟೌ ಎಂದು ಆಟ್ ಆಗಮ. **ಇತಶ್ಚಲೋಪಃ ಪರಸ್ಮೈಪದೇಷು** ಎಂಬುದರಿಂದ ಇಕಾರಕ್ಕೆ ಲೋಪ. ॥ ೩ ॥



॥ ಸಂಹಿತಾಪಾಠಃ ॥

ಹವಿಷಾ ಜಾರೋ ಅಪಾಂ ಪಿಪರ್ತಿ ಪಪುರಿರ್ನರಾ ।
ಪಿತಾ ಕುಟಸ್ಯ ಚರ್ಷಣಿಃ ॥ ೪ ॥

॥ ಪದಪಾಠಃ ॥

ಹವಿಷಾ । ಜಾರಃ । ಅಪಾಂ । ಪಿಪರ್ತಿ । ಪಪುರಿಃ । ನರಾ ।
ಪಿತಾ । ಕುಟಸ್ಯ । ಚರ್ಷಣಿಃ ॥ ೪ ॥

ಸಾಯಣಭಾಷ್ಯಂ

ಹೇ ಅಶ್ವಿನೌ ದೇವೌ ಅಪಾಂ ಜಾರಃ ಸ್ವಕೀಯೇನ ತಾಪೇನೋದಕಾನಾಂ ಜರಯಿತಾ ಸೂರ್ಯೋ ಹವಿಷಾಽಸ್ಮದ್ದತ್ತೇನ ಪಿಪರ್ತಿ । ದೇವಾನ್ಪೂರಯತಿ । ಉದಿತೇ ಸೂರ್ಯೇ ಹವಿಷ್ಪ್ರದಾನಾತ್ಸೂರ್ಯಸ್ಯ ಪೂರಕತ್ವಂ ದ್ರಷ್ಟವ್ಯಂ । ಅತಃ ಸೂರ್ಯೋದಯಕಾಲೇ ಯುವಾಭ್ಯಾಮಾಗಂತವ್ಯಮಿತ್ಯರ್ಥಃ । ಕೀದೃಶೋ ಜಾರಃ । ಪಪುರಿರುಕ್ತಕ್ರಮೇಣ ಪೂರಣಸ್ವಭಾವಃ ಪಿತಾ ಪಾಲಕಃ ಕುಟಸ್ಯ ಚರ್ಷಣಿಃ ಕರ್ಮಣೋ ದ್ರಷ್ಟಾ । ಅತ್ರ ನಿರುಕ್ತಂ । ಹವಿಷಾಽಪಾಂ ಜರಯಿತಾ ಪಿಪರ್ತಿ ಪಪುರಿರಿತಿ ಪೃಣಾತಿನಿಗಮೌ ವಾ ಪ್ರೀಣಾತಿನಿಗಮೌ ವಾ ಪಿತಾ ಕೃತಸ್ಯ ಕರ್ಮಣಶ್ಚಾಯಿತಾದಿತ್ಯಃ । ನಿ. ೫-೨೪ । ಇತಿ ॥ ಜಾರಃ । ಜರಯತೀತಿ ಜಾರ ಆದಿತ್ಯಃ । ದಾರಜಾರೌ ಕರ್ತರಿ ಣಿಲುಕ್ಚ । ಪಾ. ೩-೩-೨೦-೪ । ಇತಿ ಘಞಂತೋ ನಿಪಾತಿತಃ । ಕರ್ಷಾತ್ವತ ಇತ್ಯಂತೋದಾತ್ತತ್ವಂ । ಅಪಾಂ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಪಿಪರ್ತಿ । ಪೄ ಪಾಲನಪೂರಣಯೋಃ । ತಿಪಿ ಜುಹೋತ್ಯಾದಿತ್ವಾಚ್ಛಪಃ ಶ್ಲುಃ । ಅರ್ತಿಪಿಪರ್ತ್ಯೋಶ್ಚೇತ್ಯಭ್ಯಾಸಸ್ಯೇತ್ವಂ । ಅನುದಾತ್ತೇ ಚೇತ್ಯಭ್ಯಸ್ತಸ್ಯಾದ್ಯುದಾತ್ತತ್ವಂ । ಪಪುರಿಃ । ಆದೃಗಮಹನೇತಿ ಕಿನ್ಪ್ರತ್ಯಯಃ । ಲಿಡ್ವದ್ಭಾವಾತ್ಕಿತ್ತ್ವೇ ಸಿದ್ಧೇಽಪಿ ಪುನಃ ಕಿತ್ಕರಣಸಾಮರ್ಥ್ಯಾದೃಚ್ಛತ್ಯೄತಾಂ । ಪಾ. ೭-೪-೧೧ । ಇತಿ ಗುಣಾಭಾವಃ । ಉದೋಷ್ಠ್ಯಪೂರ್ವಸ್ಯೇತ್ಯುತ್ವಂ । ನಿತ್ತ್ವಾದಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

**ನರಾ**—ನೇತೃಗಳಾದ । ( **ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ) । **ಪಪುರಿಃ**—(ಹವಿಸ್ಸಿನಿಂದ ದೇವತೆಗಳನ್ನು) ಪುಷ್ಟೀಕರಿಸುವ ಸ್ವಭಾವವುಳ್ಳವನಾಗಿಯೂ । **ಪಿತಾ**—ಪಾಲಕನಾಗಿಯೂ । **ಕುಟಸ್ಯ ಚರ್ಷಣಿಃ**—( ಯಜ್ಞ ) ಕರ್ಮದ ವೀಕ್ಷಕನಾಗಿಯೂ ಇರುವ । **ಅಪಾಂ ಜಾರಃ**—ತನ್ನ ತಾಪದಿಂದ ನೀರನ್ನು ಇಂಗುವಂತೆ

ಮಾಡುವ ಸೂರ್ಯನು । **ಹವಿಷಾ**—ನಮ್ಮಿಂದ ಅರ್ಪಿಸಲ್ಪಟ್ಟ ಹವಿಸ್ಸಿನಿಂದ । **ಪಿಪರ್ತಿ**—ದೇವತೆಗಳನ್ನು ಪುಷ್ಟೀಕರಿಸುತ್ತಾನೆ.

ಭಾವಾರ್ಥ

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ ಸೂರ್ಯನು ಲೋಕಪಾಲಕನು-ಮತ್ತು ಲೋಕದಲ್ಲಿ ಸಕಲರ ಕರ್ಮವನ್ನೂ ವೀಕ್ಷಿಸುವನು. ತನ್ನ ತಾಪದಿಂದ ನೀರನ್ನು ಇಂಗುವಂತೆ ಮಾಡತಕ್ಕವನು. ಅದರಂತೆಯೇ ನಮ್ಮಿಂದ ಅರ್ಪಿಸಲ್ಪಟ್ಟ ಹವಿಸ್ಸಿನಿಂದ ದೇವತೆಗಳನ್ನು ಪುಷ್ಟರಾಗುವಂತೆ ಮಾಡುತ್ತಾನೆ.

## English Translation

O Guides (Aswins), the Sun the evaporator of the waters, the nourisher the protector and beholder of sacred rites nourishes the gods with our oblations.

ವಿಶೇಷವಿಷಯಗಳು

**ಜಾರಃ ಅಪಾಂ**—ನೀರನ್ನು ತನ್ನ ತಾಪದಿಂದ ಇಂಗಿಸುವವನು ಎಂದರೆ ಸೂರ್ಯನು.

**ಹವಿಷಾ ಪಿಪರ್ತಿ**— ಹವಿಸ್ಸಿನಿಂದ ದೇವತೆಗಳನ್ನು ಪುಷ್ಟಿಯುಕ್ತರನ್ನಾಗಿ ಮಾಡುತ್ತಾನೆ. ಎಂದರೆ, ಸೂರ್ಯೋದಯವಾದ ಮೇಲೆ ಯಜ್ಞಮಾಡುವವರು ದೇವತೆಗಳನ್ನುದ್ದೇಶಿಸಿ ಹವಿಸ್ಸನ್ನರ್ಪಿಸುವುದರಿಂದ ಆ ಹವಿಸ್ಸು, ದೇವತೆಗಳಿಗೆ ಪುಷ್ಟಿಯನ್ನುಂಟುಮಾಡುವುದು. ಹವಿಸ್ಸನ್ನರ್ಪಿಸಲು ಸೂರ್ಯೋದಯವಾಗಿ ಪ್ರಾತಃಕಾಲವಾಗಬೇಕಾಗಿರುವುದರಿಂದ ಸೂರ್ಯನು ಈ ಹವಿಃಪ್ರದಾನಕ್ಕೆ ಸಹಾಯಕನಾಗಿರುವುದರಿಂದ ಸೂರ್ಯನೇ ದೇವತೆಗಳಿಗೆ ಪುಷ್ಟಿಯನ್ನುಂಟುಮಾಡುವನೆಂದು ಮುಖ್ಯಾಭಿಪ್ರಾಯವನ್ನು ಋಷಿಯು ಪ್ರಕಾರಾಂತರವಾಗಿ ಹೇಳಿರುವನು.

**ಪಪುರಿಃ—ಉಕ್ತಕ್ರಮೇಣ ಪೂರಣಸ್ವಭಾವಃ ।** ಹವಿಸ್ಸನ್ನು ಪೂರಣಮಾಡುವ ಸ್ವಭಾವದವನು

ಜಾರಃ—**ಜರಯತೀತಿ ಜಾರಃ ಆದಿತ್ಯಃ ।** ತಾಪವನ್ನುಂಟುಮಾಡುವವನು ಎಂದರೆ ಆದಿತ್ಯನು.

**ಪಿತಾ**—ಪಾಲಕನು. ಮನುಷ್ಯರು ಮಾಡುವ ಕರ್ಮಗಳ ಪಾಲಕನು

**ಕುಟಸ್ಯ ಚರ್ಷಣಿಃ—ಕೃತಸ್ಯ ಕರ್ಮಣಃ ಚಾಯಿತಾ ದ್ರಷ್ಟಾ ।** ಮನುಷ್ಯರು ಮಾಡುವ ಸಮಸ್ತ ಕರ್ಮಗಳನ್ನು ನೋಡುವವನು, ಕರ್ಮ ಸಾಕ್ಷಿಯು

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿರುವರು—

**ಹವಿಷಾಪಾಂ ಜರಯಿತಾ । ಪಿಪರ್ತಿ ಪಪುರಿರಿತಿ ಪೃಣಾತಿ ನಿಗಮೌ ವಾ ಪ್ರೀಣಾತಿ ನಿಗಮೌ ವಾ ಪಿತಾ ಕೃತಸ್ಯ ಕರ್ಮಣಶ್ಚಾಯಿತಾऽऽದಿತ್ಯಃ ॥** ( ನಿ. ೫-೨೪ ).

ಎಂದರೆ ಆದಿತ್ಯನು ಉದಕವನ್ನು ಶೋಷಿಸುವನಾದರೂ ಸಕಾಲದಲ್ಲಿ ಸಮಸ್ತಜಗತ್ತನ್ನು ಹವಿಷಾ-ಎಂದರೆ ಉದಕದಿಂದ (ಹವಿಃ ಶಬ್ದವು ಉದಕ ನಾಮಗಳಲ್ಲಿ ಪಠಿತವಾಗಿದೆ. ನಿ. ೨-೨೪) ತುಂಬುತ್ತಾನೆ ಎಂದರೆ ಸಮುದ್ರ ಮೊದಲಾದ ಜಲಾಶಯಗಳಲ್ಲಿರುವ ಉದಕವನ್ನು ತನ್ನ ರಶ್ಮಿಗಳ ಮೂಲಕ ಆಕರ್ಷಿಸಿ ಆ ಉದಕವನ್ನು ಮೇಘರೂಪದಿಂದ ಭೂಮಿಯ ಮೇಲೆ ಮಳೆಯರೂಪದ ಉದಕದಿಂದ ತುಂಬುವನು ಎಂದರ್ಥವು. ಪಿಪರ್ತಿ, ಪಪುರಿಃ ಎಂಬ ಎರಡು ಶಬ್ದಗಳೂ ನಿಗಮಸ್ಥಶಬ್ದಗಳು. ಈ ಶಬ್ದಗಳಿಗೆ **ಪೂರಯತ್ಯರ್ಥೌ—ಪ್ರೀತಯತ್ಯರ್ಥೌ** ತುಂಬುವುದು ಅಥವಾ ತೃಪ್ತಿಪಡಿಸುವುದು ಎಂಬ ಅರ್ಥವಿರುವುದು ಮತ್ತು ಈ ಸೂರ್ಯನು ಸರ್ವಜಗತ್ತಿನ ಪಾಲಕನಾಗಿಯೂ, ಜನರು ಮಾಡುವ ಸಮಸ್ತಕರ್ಮಗಳಿಗೂ ಸಾಕ್ಷಿಭೂತನಾಗಿಯೂ ಎಂದರೆ ಎಲ್ಲವನ್ನೂ ನೋಡುವವನಾಗಿಯೂ ಇರುವನು. ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಜಾರಃ**—ಜ್ಯಾಷ್ ವಯೋಹಾನೌ ಧಾತು. **ಪರಿಮಾಣಾಖ್ಯಾಯಾಂ ಸರ್ವೇಭ್ಯಃ** (ಪಾ.ಸೂ. ೩-೩-೨೦) ಎಂಬ ಸೂತ್ರದಲ್ಲಿ **ದಾರ ಜಾರೌ ಣಿ ಲುಕ್‌ಚ** ಎಂದು ವಾರ್ತಿಕ ಇದೆ. ದೃ ವಿದಾರಣೇ, ಜ್ಯಾಷ್ ವಯೋಹಾನೌ ಣಿಜಂತವಾದ ಈ ಧಾತುಗಳ ಮುಂದೆ ಕರ್ತ್ರರ್ಥದಲ್ಲಿ ಘಞ್ ಬರುತ್ತೆ. ಣಿಗೆ ಲುಕ್ ಬರುತ್ತೆ ಎಂದು ವಾರ್ತಿಕದ ಅರ್ಥ, ಇದರಿಂದ ಜಾರಯತೀತಿ ಜಾರಃ ಎಂದು ವಿವಕ್ಷಿಸಿದಾಗ ಜ್ಯಾಧಾತು ಮುಂದೆ ಣಿಚ್ ಬಂದಾಗ ಘಞ್ ಬಂದು ಣಿಗೆ **ಲುಕ್** ಬಂದರೆ ಜ್ಯಾ+ಅ. ವೃದ್ಧಿಯು ರಪರವಾಗಿ ಬರುತ್ತೆ. ಜಾರ ಎಂದಾಯಿತು. ಈ ಶಬ್ದವು ಉಪಪತಿಯಲ್ಲಿ ಪ್ರಸಿದ್ಧವಾಗಿದೆ. ಇಲ್ಲಿ ಆದಿತ್ಯನನ್ನು ಬೋಧಿಸುತ್ತೆ. "ಯೋಽಸೌ ತಪನ್ನುದೇತಿ. ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯೋದೇತಿ" ಎಂಬ ಶ್ರುತಿಯಲ್ಲಿ ಸೂರ್ಯನು ಆಯುಸ್ಸನ್ನು ಅಪಹರಿಸುವನು ಎಂದು ಹೇಳಿದೆ. ಧಾತ್ವರ್ಥ ವಯೋಹಾನಿ. ಏವಂಚ ವಯಸ್ಸಿಗೆ ಹಾನಿ ಉಂಟುಮಾಡುವ ಸೂರ್ಯನನ್ನು ಈ ಪದವು ಬೋಧಿಸುವುದು ಯುಕ್ತವಾಗಿರುವುದು. **ಕರ್ಷಾತ್ವತೋಘಞಾಂತ ಉದಾತ್ತಃ** ಎಂದು ಅಂತೋದಾತ್ತ ಬರುತ್ತೆ.

**ಅಪಾಮ್**— **ಊಡಿದಂಪದಾದ್ಯಪ್ಪುಮ್ ರೈದ್ಯುಭ್ಯಃ** ಎಂದು ವಿಭಕ್ತಿಗೆ ಉದಾತ್ತ ಬರುತ್ತೆ.

**ಪಿಪರ್ತಿ**—ಪೃ ಪಾಲನಪೂರಣಯೋಃ ಧಾತು. ಜುಹೋತ್ಯಾದಿ ಲಟ್ ತಿಪ್. **ಜುಹೋತ್ಯಾದಿಭ್ಯಃ ಶ್ಲುಃ** ಎಂದು ಶಪ್‌ಗೆ ಶ್ಲು. ಶ್ಲೌ ಎಂದು ದ್ವಿತ್ವ. **ಉರತ್** ಎಂದು ಅಭ್ಯಾಸಕ್ಕೆ ಅಕಾರ. **ಅರ್ತಿಪಿಪರ್ತ್ಯೋಶ್ಚ** (ಪಾ. ಸೂ. ೭-೧-೧೦೨) ಶ್ಲು ಬಂದಿದ್ದರೆ ಋ-ಪೃಧಾತುಗಳ ಅಭ್ಯಾಸಕ್ಕೆ ಇಕಾರ ಬರುತ್ತೆ ಎಂದು ಇಕಾರ. **ಹಲಾದಿಃ ಶೇಷಃ** ಎಂದು ಅಭ್ಯಾಸದ ರೇಫಕ್ಕೆ ಲೋಪ. ಪಿಪೃ+ತಿ. ಉತ್ತರ ಖಂಡಕ್ಕೆ **ಸಾರ್ವಧಾತುಕಾ—,** ಎಂದು ಗುಣ ರಪರತ್ವ. **ಅನುದಾತ್ತೇಚ** (ಪಾ. ಸೂ. ೬-೧-೧೯೦) ಉದಾತ್ತವಿಲ್ಲದೇ ಇರುವ ಲಸ್ಥಾನಿಕ ಸಾರ್ವಧಾತುಕ ಪರದಲ್ಲಿರುವಾಗ ಅಭ್ಯಸ್ತದ ಆದಿಯು ಉದಾತ್ತವಾಗುತ್ತೆ ಎಂದು ಆದ್ಯುದಾತ್ತ ಬರುತ್ತೆ.

**ಪಪುರಿಃ**—ಪೃ ಪಾಲನಪೂರಣಯೋಃ. **ಆದೃಗಮಹನಃ ಕಿ ಕಿನೌ ಲಿಟ್‌ಚ** (ಪಾ. ಸೂ. ೩-೨-೧೭೧) ಆಕಾರಾಂತ ಧಾತು, ಋಕಾರಾಂತ ಧಾತು. ಗಮ್-ಹನ್ ಧಾತುಗಳು ಇವುಗಳ ಮುಂದೆ ಕಿ ಕಿನ್ ಎಂಬ ಪ್ರತ್ಯಯಗಳು ಬರುವುವು ಅವು ಲಿಟ್‌ನಂತೆಯೂ ಆಗುವುವು. ಎಂದು ಕಿನ್ ಪ್ರತ್ಯಯ ಬರುತ್ತೆ. ಇಲ್ಲಿ **ಆದೃಗಮ** ಎಂಬಲ್ಲಿ

ದಕಾರವನ್ನು ಗ್ರಹಿಸಬೇಕು. ತಕಾರಕ್ಕೆ ಜಶ್ತ್ವ ಬಂದಿದೆ ಎಂದು ಭಾವಿಸ ಕೂಡದು ಏಕೆಂದರೆ **ತಪರಸ್ತತ್ಕಾಲಸ್ಯ** ಎಂಬಲ್ಲಿ 'ತಾತ್ಪರಃ ತಪರಃ, ಎಂದು ಪಂಚಮೀಸಮಾಸಪಕ್ಷದಲ್ಲಿಯೂ ತಪರವಾಗುವುದಿಲ್ಲವಾದ್ದರಿಂದ ತತ್ಕಾಲಕ್ಕೆ ಗ್ರಹಣವಿಲ್ಲ. ಆದ್ದರಿಂದ ದೀರ್ಘಕ್ಕೂ ಗ್ರಹಣ ಬರುತ್ತೆ ಪ್ಯಾ+ಇ. ಲಿಙ್ವದ್ಭಾವಾತಿದೇಶ ಇರುವುದರಿಂದ **ಅಸಂಯೋಗಾಲ್ಲಿಟ್ ಕಿತ್** (ಪಾ. ಸೂ. ೧-೨-೫) ಎಂದು ಕಿತ್ತ್ವವು ಸಿದ್ಧವಾಗುತ್ತೆ. ಹೀಗಿದ್ದರೂ ಪುನಃ ಕಿ-ಕಿನ್, ಎಂದು ಕಿತ್ಕರಣವನ್ನು ಮಾಡಿರುವುದರಿಂದ **ಋಚ್ಛತ್ಯೄತಾಮ್** (ಪಾ. ಸೂ. ೭-೪-೧೧) ತುದಾದಿಯಲ್ಲಿರುವ ಋಚ್ಛಧಾತು, **ಋಕಾರಾಂತ ಧಾತು,** ಇವುಗಳಿಗೆ ಲಿಟ್ ಪರದಲ್ಲಿದ್ದರೆ ಗುಣ ಬರುತ್ತೆ ಎಂದು ಪ್ರತಿಷೇಧ ವಿಷಯದಲ್ಲಿ ಹೇಳಿರುವ ಗುಣವೂ ಬರುವುದಿಲ್ಲ. **ಉದೋಷ್ಠ್ಯಪೂರ್ವಸ್ಯ** ( ಪಾ ಸೂ. ೭-೧-೧೦೨ ) ಅಂಗಾವಯವಾದ ಓಷ್ಠ್ಯವರ್ಣ ಪೂರ್ವಕವಾದ ಯಾವ ಋಕಾರ ಇದೆಯೋ ಅದನ್ನು ಕೊನೆಯಲ್ಲಿ ಹೊಂದಿರುವ ಅಂಗದ ಕೊನೆಯ ವರ್ಣಕ್ಕೆ ಉಕಾರ ಬರುತ್ತೆ ಎಂಬುದರಿಂದ ದ್ವಿತ್ವ ಬಂದಮೇಲೆ ಉತ್ತರಖಂಡದ ಋಗೆ ಉಕಾರ. ಅದು ರೇಫಶಿರಸ್ಕವಾಗಿ ಬರುತ್ತೆ. ಪೂ+ಪುರ್+ಇ. **ಉರತ್** ಎಂದು ಅಭ್ಯಾಸಕ್ಕೆ ಅಕಾರ. ಪ್ರತ್ಯಯ ನಿತ್. **ಞ್ನಿತ್ಯಾದಿರ್ನಿತ್ಯಮ್** ಎಂದು ಆದ್ಯುದಾತ್ತ ಬರುತ್ತೆ. ॥ ೪ ॥



ಸಂಹಿತಾಪಾಠಃ

ಆದಾರೋ ವಾಂ ಮತೀನಾಂ ನಾಸತ್ಯಾ ಮತವಚಸಾ ।
ಪಾತಂ ಸೋಮಸ್ಯ ಧೃಷ್ಣುಯಾ ॥ ೫ ॥

॥ ಪದಪಾಠಃ ॥

ಆऽದಾರಃ । ವಾಂ । ಮತೀನಾಂ । ನಾಸತ್ಯಾ । ಮತऽವಚಸಾ ।
ಪಾತಂ । ಸೋಮಸ್ಯ । ಧೃಷ್ಣುऽಯಾ ॥ ೫ ॥

॥ ಸಾಯಣಭಾಷ್ಯಂ ॥

**ಹೇ ಮತವಚಸಾಭಿಮತಸ್ತೋತ್ರೌ ನಾಸತ್ಯಾಶ್ವಿನೌ ವಾಂ ಯುವಯೋರ್ಮತೀನಾಂ ಬುದ್ಧೀನಾಮಾದಾರಃ ಪ್ರೇರಕೋ ಯಃ ಸೋಮೋಽಸ್ತಿ ಸೋಮಸ್ಯ ತಂ ಸೋಮಂ ಪಾತಂ । ಯುವಾಂ ಪಿಬತಂ ।**

**ಕೇದೃಶಂ ಸೋಮಂ । ಧೃಷ್ಣುಯಾ ಧರ್ಷಣಶೀಲಂ । ಮದಕರತ್ವೇನ ತೀವ್ರಮಿತ್ಯರ್ಥಃ ॥ ಆದಾರಃ । ದೃಙ್ ಆದರೇ । ಆದಾರಯತೀತ್ಯಾದಾರಃ । ದಾರಜಾರೌ ಕರ್ತರಿ ಣಿಲುಕ್ಚೇತಿ ಘಞ್ಪ್ರತ್ಯಯಃ । ಥಾಥಾದಿನೋತ್ತರಪದಾಂತೋದಾತ್ತತ್ವಂ । ಮತೀನಾಂ । ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ । ಮತವಚಸಾ । ಮತಮಭಿಮತಂ ಸ್ತೋತ್ರರೂಪಂ ವಚೋ ಯಯೋಸ್ತೌ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಪಾತಂ । ಪಾ ಪಾನೇ । ಬಹುಲಂ ಛಂದಸೀತಿ ಶಪೋ ಲುಕಿ ಸತಿ ಪಾಘ್ರೇತ್ಯಾದಿನಾ ಪಿಬಾದೇಶೋ ನ ಭವತಿ । ಸೋಮಸ್ಯ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ । ಧೃಷ್ಣುಯಾ । ಸುಪಾಂ ಸುಲುಗಿತಿ ವಿಭಕ್ತೇರ್ಯಾಜಾದೇಶಃ ॥ ೩ ॥**

॥ ಪ್ರತಿಪದಾರ್ಥ ॥

**ಮತವಚಸಾ**— ಅಭಿಮತವಾದ ಸ್ತೋತ್ರವುಳ್ಳ । **ನಾಸತ್ಯಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮ । **ಮತೀನಾಂ**—ಬುದ್ಧಿಗಳಿಗೆ । **ಆದಾರಃ**—ಚೇತನದಾಯಕವಾಗಿಯೂ । **ಧೃಷ್ಣುಯಾ**—(ನಿಮ್ಮನ್ನು) ವೀರ್ಯಯುತರನ್ನಾಗಿ ಮಾಡುವುದಾಗಿಯೂ ಇರುವ । **ಸೋಮಸ್ಯ** — ಸೋಮರಸವನ್ನು । **ಪಾತಂ** — ಕುಡಿಯಿರಿ. ।

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನಿಮಗೆ ಸ್ತೋತ್ರವು ಅತ್ಯಭಿಮತವು. ನಿಮಗೆ ಅಭಿಮತವಾದ ಆ ಸ್ತೋತ್ರಗಳನ್ನು ಪಠಿಸುವುದರ ಜತೆಗೆ, ನಿಮ್ಮ ಬುದ್ಧಿಗಳಿಗೆ ಚೇತನದಾಯಕವಾಗಿಯೂ, ನಿಮ್ಮನ್ನು ವೀರ್ಯಯುತರನ್ನಾಗಿ ಮಾಡುವುದಾಗಿಯೂ ಇರುವ ಸೋಮರಸವನ್ನೂ ಪಾನಮಾಡಿರಿ.

English Translation

O Nasatyas, accept our praises and drink of the exhilarating Soma-juice, the animator of your mind.

ವಿಶೇಷವಿಷಯಗಳು

**ಆದಾರಃ ವಾಂ ಮತೀನಾಂ—ದೃಙ್ ಆದರೇ । ಆದಾರಯತೀತ್ಯಾದಾರಃ । ಯುವಯೋರ್ಮತೀನಾಂ ಪ್ರೇರಕಃ ಸೋಮಃ ।** ನಿಮ್ಮ ಬುದ್ಧಿಯನ್ನು ಪ್ರೇರಿಸುವ ಅಥವಾ ವಿಕಾಸಗೊಳಿಸುವ ಸೋಮರಸವು.

**ಮತವಚಸಾ-ಮತಮಭಿಮತಂ ಸ್ತೋತ್ರರೂಪಂ ವಚೋ ಯಯೋಸ್ತೌ । ಅಭಿಮತಸ್ತೋತ್ರೌ ।** ನಾವು ಮಾಡುವ ಸ್ತೋತ್ರಗಳು ನಿಮಗೆ ಅಭಿಮತವಾಗಿವೆ ಎಂದರೆ ಸಮ್ಮತವಾಗಿವೆ. ಆದುದರಿಂದ ನಮ್ಮ ಸ್ತೋತ್ರಗಳನ್ನು ಅಂಗೀಕರಿಸಿರುವ, ಮೆಚ್ಚಿರುವ ಎಂದರ್ಥವು.

**ಧೃಷ್ಣುಯಾ— ಧರ್ಷಣಶೀಲಂ ।** ಬುದ್ಧಿಯನ್ನು ಪ್ರೇರಿಸುವ, ಮದವನ್ನುಂಟುಮಾಡಿ ಬುದ್ಧಿಯನ್ನು ವಿಕಸನಗೊಳಿಸುವ, ಚುರುಕುಗೊಳಿಸುವ ಸೋಮರಸವು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಆದಾರಃ**—ದೃಙ್ ಆದರೇ ಧಾತು. ಆದಾರಯತೀತಿ ಆದಾರಃ ಎಂದು ವಿಗ್ರಹ. **ದಾರಜಾರೌ ಕರ್ತರಿ ಣಿಲುಕ್ಚ** (ಪಾ. ಸೂ. ೩-೩-೨೦-೧) ಇಲ್ಲಿ ದಾರ ಎಂಬುದರಿಂದ ದೃಙ್ ಧಾತು ಮುಂದೆ ಣಿಚ್ ಬಂದಾಗ ಕರ್ತೃರಿ ಘಞ್ ಪ್ರತ್ಯಯವೂ ಣಿಗೆ ಲುಕ್ಕೂ ಬರುವುದೂ ವಿವಕ್ಷಿತವಾಗಬಹುದು. ಈ ವಾರ್ತಿಕದ ಅರ್ಥವನ್ನು ಹಿಂದಿನ ಮಂತ್ರದಲ್ಲಿ ಹೇಳಿದೆ. ಏವಂಚ ದಾರ ಎಂಬುದರಿಂದ ಋಧಾತು ದೃ ಧಾತುಗಳೆರಡಕ್ಕೂ ಗ್ರಹಣವುಂಟು ಎಂದು ಏರ್ಪಡುತ್ತೆ. ದೄ ವಿದಾರಣೇ ಎಂಬುದಕ್ಕೆ ಗ್ರಹಣವಾದರೆ ದಾರಯಸ್ತೀತಿ ದಾರಾಃ, ಮನಸ್ಸನ್ನು ಕರಗಿಸುವರು ಎಂದು ಅರ್ಥ. ಹೆಂಡತಿ ಎಂದು ಈ ಪದಕ್ಕೆ ವಾಚ್ಯಾರ್ಥ. **ಥಾದೆ ಘ ಇಕ್ತ್ಯಾಜ ಬಿತ್ರಕಾಣಾಂ** ಎಂದು ಉತ್ತರ ಪದಕ್ಕೆ ಅಂತೋದಾತ್ತ ಬರುತ್ತೆ.

**ಮತೀನಾಮ್—ನಾಮನ್ಯತರಸ್ಯಾಂ** ಎಂಬುದರಿಂದ ನಾಮ್ ಉದಾತ್ತವಾಗುತ್ತದೆ

**ಮತವಚಸಾ**—ಮತಂ=ಅಭಿಮತವಾದ, ವಚಃ=ಸ್ತೋತ್ರರೂಪವಾದ ಮಾತುಗಳು, ಯಯೋಸ್ತೌ ಎಂದು ವಿಗ್ರಹ. ಸಂಬೋಧನ ದ್ವಿವಚನ ಪ್ರತ್ಯಯಕ್ಕೆ **ಸುಪಾಂ ಸುಲುಕ್—**, ಎಂಬುದರಿಂದ ಆಕಾರ.

**ಪಾತಮ್**—ಪಾ-ಪಾನೇ, ಲೋಟ್, ಮಧ್ಯಮಪುರುಷ, ಬಹುವಚನ, ಥಪ್ರತ್ಯಯ. **ಲೋಟೋ ಲಙ್ವತ್** ಎಂದು ಲಙ್ವದ್ಭಾವ, **ತಸ್ಥಸ್ಥಮಿಪಾಂ ತಾಂತಂ ತಾಮಃ** ಎಂದು ತಮ್ ಆದೇಶ. **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂದು ಶಪ್‌ಗೆ ಲುಕ್. ಈಗ ಶಕಾರೇತ್ಸಂಜ್ಞಕವಾದ ಪ್ರತ್ಯಯವು ಪರದಲ್ಲಿಲ್ಲ. ಆದ್ದರಿಂದ **ಪಾಘ್ರಾ—**, ಎಂಬ ಸೂತ್ರದಿಂದ ಪಿಬ ಆದೇಶ ಬರುವುದಿಲ್ಲ.

**ಸೋಮಸ್ಯ—ಕ್ರಿಯಾಗ್ರಹಣಂ ಕರ್ತವ್ಯಂ** ಎಂಬುದರಿಂದ ಸೋಮಕ್ಕೆ ಸಂಪ್ರದಾನ ಸಂಜ್ಞೆ ಇದೆ ಆದ್ದರಿಂದ ಚತುರ್ಥೀ ವಿಭಕ್ತಿಯ ಅರ್ಥದಲ್ಲಿ ಷಷ್ಠೀ ವಿಭಕ್ತಿ ಬಂದಿದೆ.

**ಧೃಷ್ಣುಯಾ—ಸುಪಾಂ ಸುಲುಕ್—**, ಎಂಬುದರಿಂದ ಷಷ್ಠೀವಿಭಕ್ತಿ ಏಕವಚನಕ್ಕೆ ಯಾಚ್ ಆದೇಶ ಬರುತ್ತೆ. ॥೫॥

---

ಸಂಹಿತಾಪಾಠಃ

ಯಾ ನಃ ಪೀಪರದಶ್ವಿನಾ ಜ್ಯೋತಿಷ್ಮತೀ ತಮಸ್ತಿರಃ ।
ತಾಮಸ್ಮೇ ರಾಸಾಥಾಮಿಷಂ ॥ ೬ ॥

ಪದಪಾಠಃ

ಯಾ । ನಃ । ಪೀಪರತ್ । ಅಶ್ವಿನಾ । ಜ್ಯೋತಿಷ್ಮತೀ । ತಮಃ । ತಿರಃ ।
ತಾಂ । ಅಸ್ಮೇ ಇತಿ । ರಾಸಾಥಾಂ । ಇಷಂ ॥ ೬ ॥

ಸಾಯಣಭಾಷ್ಯಂ

ಹೇ ಅಶ್ವಿನಾ ಜ್ಯೋತಿಷ್ಮತೀ ರಸವೀರ್ಯಾದಿರೂಪಜ್ಯೋತಿರ್ಯುಕ್ತಾ ಯೇಡನ್ನಂ ನೋಽಸ್ಮಾನ್ಪೀಪರತ್ । ಪಾರಯೇತ್ ತೃಪ್ತಿಂ ಪ್ರಾಪಯೇತ್ । ಕಿಂ ಕೃತ್ವಾ । ತಮೋ ದಾರಿದ್ರ್ಯರೂಪಮಂಧಕಾರಂ ತಿರೋಽಂತರ್ಹಿತಂ ವಿನಷ್ಟಂ ಕೃತ್ವಾ । ತಾಮಿಷಂ ತಾದೃಶಮನ್ನಮಸ್ಮೇ ಅಸ್ಮಭ್ಯಂ ರಾಸಾಥಾಂ । ಯುವಾಂ ದತ್ತಂ ॥ ಪೀಪರತ್ । ಪೄ ಪಾಲನಪೂರಣಯೋಃ । ಣ್ಯಂತಾಲ್ಲುಙಿ ಚಙಿ ಣಿಲೋಪಃ । ಉಪಧಾಹ್ರಸ್ವತ್ವದ್ವಿರ್ಭಾವಹಲಾದಿಶೇಷಸನ್ವದ್ಭಾವೇತ್ವದೀರ್ಘಾಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಚಙ್ಯನ್ಯತರಸ್ಯಾಂ । ಪಾ. ೬-೧-೨೧೮ । ಇತ್ಯುಪೋತ್ತಮಸ್ಯ ಧಾತ್ವಕಾರಸ್ಯೋದಾತ್ತತ್ವೇ ಪ್ರಾಪ್ತೇ ವ್ಯತ್ಯಯೇನಾಭ್ಯಾಸಸ್ಯೋದಾತ್ತತ್ವಂ । ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ । ಅಸ್ಮೇ । ಸುಪಾಂ ಸುಲುಗಿತಿ ಚತುರ್ಥೀಬಹುವಚನಸ್ಯ ಶೇಆದೇಶಃ । ರಾಸಾಥಾಂ । ರಾ ದಾನೇ ॥ ಛಾಂದಸೇ ಪ್ರಾರ್ಥನಾಯಾಂ ಲುಙಿ ವ್ಯತ್ಯಯೇನಾತ್ಮನೇಪದಂ । ಚ್ಲೇಃ ಸಿಚ್ । ಏಕಾಚ ಇತೀಟ್ಪ್ರತಿಷೇಧಃ । ಪೂರ್ವವದಡಭಾವಃ । ತಿಙ್ಙತಿಙ ಇತಿ ನಿಘಾತಃ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಜ್ಯೋತಿಷ್ಮತೀ—ರಸವತ್ತಾಗಿಯೂ, ವೀರ್ಯವತ್ತಾಗಿಯೂ ಇರುವ ಜ್ಯೋತಿಯಿಂದ ಕೂಡಿದ । ಯಾ (ಇಟ್)— ಯಾವ ಅನ್ನವು । ತಮಃ— ದಾರಿದ್ರ್ಯರೂಪವಾದ ಕಗ್ಗತ್ತಲೆಯನ್ನು । ತಿರಃ—ನಾಶಮಾಡಿ । ನಃ— ನಮ್ಮನ್ನು । ಪೀಪರತ್—ತೃಪ್ತಿಗೊಳಿಸುವುದೋ । ತಾಂ ಇಷಂ-ಆ ಅನ್ನವನ್ನು । ಅಸ್ಮೇ— ನಮಗೆ । ರಾಸಾಥಾಂ—ಕೊಡಿರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಜ್ಯೋತಿರ್ಯುಕ್ತವಾದ ಎಂದರೆ ರಸವತ್ತಾಗಿಯೂ, ವೀರ್ಯವತ್ತಾಗಿಯೂ, ಪುಷ್ಟಿಕರವಾಗಿಯೂ ಯಾವ ಅನ್ನವು ನಮ್ಮ ದಾರಿದ್ರ್ಯರೂಪವಾದ ಕಗ್ಗತ್ತಲೆಯನ್ನು ನಾಶಮಾಡಿ ನಮಗೆ ವೀರ್ಯ, ತೇಜಸ್ಸು ಮುಂತಾದ ಶಕ್ತಿಗಳನ್ನು ಕೊಟ್ಟು ಬೆಳಕನ್ನು ತೋರಿಸಿ ತೃಪ್ತಿಗೊಳಿಸುವುದೋ ಅಂತಹ ಅನ್ನವನ್ನು ಕೊಡಿರಿ.

## English Translation

O Aswins, grant us that invigorating food that shall place us beyond the darkness ( of poverty ) thereby satisfying us

### ವಿಶೇಷವಿಷಯಗಳು

**ಸೀಪರತ್— ಪೄ ಪಾಲನಪೂರಣಯೋಃ ।** ತುಂಬುವುದು ಅಥವಾ ತೃಪ್ತಿಪಡಿಸುವುದು ಎಂದು ಪೄ ಎಂಬ ಧಾತುವಿಗೆ ಅರ್ಥವು. ಆದ್ದರಿಂದ ಇಲ್ಲಿ **ಯಾ ನಃ ಸೀಪರತ್ ತಾಂ ಇಷಂ**—ಯಾವ ಅನ್ನವು ನಮಗೆ ತೃಪ್ತಿಯನ್ನುಂಟುಮಾಡುವುದೋ ಅಂತಹ ಅನ್ನವನ್ನು ಎಂದರ್ಥವು

**ಜ್ಯೋತಿಷ್ಮತೀ ತಮಸ್ತಿರಃ—** ಇಲ್ಲಿ ಜ್ಯೋತಿಷ್ಮತೀ ಎಂಬ ಶಬ್ದವು ಯಾ ಎಂಬ ಶಬ್ದಕ್ಕೆ ವಿಶೇಷಣ ವಾಗಿರುವುದು. ಪ್ರಕಾಶಮಾನವಾದ ಅನ್ನವು ಎಂದರೆ ಉತ್ತಮವಾದ, ಪುಷ್ಟಿಕರವಾದ, ರಸವತ್ತಾದ ಎಂದರ್ಥವು. ತಮಸ್ತಿರಃ ಕತ್ತಲೆಯನ್ನು ಹೋಗಲಾಡಿಸುವುದು ಎಂದರೆ ದಾರಿದ್ರ್ಯ ಅಥವಾ ಹಸಿವು ಎಂಬ ಕಗ್ಗತ್ತಲೆಯನ್ನು ಉತ್ತಮವಾದ ಆಹಾರವೆಂಬ ಬೆಳಕಿನಿಂದ ಹೋಗಲಾಡಿಸಬೇಕೆಂದು ಋಷಿಯು ಉಪಮಾರ್ಥವನ್ನು ಹೇಳಿರುವನು.

**ರಾಸಾಥಾಂ—ರಾ ದಾನೇ ।** ರಾಸಾಥಾಂ ಎಂದರೆ ಅಶ್ವಿನೀದೇವತೆಗಳಾದ ನೀವಿಬ್ಬರೂ ಕೊಡಿ ಎಂದರ್ಥವು

॥ ವ್ಯಾಕರಣಪ್ರಕ್ರಿಯಾ ॥

**ಸೀಪರತ್**—ಪೄ ಪಾಲನಪೂರಣಯೋಃ ಣಿಚ್, ಲುಙ್. **ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್** (ಪಾ. ಸೂ. ೩-೧-೪೮) ಎಂದು ಚ್ಲಿಗೆ ಚಙ್. **ಣೇರನಿಟಿ** (ಪಾ. ಸೂ. ೬-೪-೫೧) ಇಡಾಗಮವಿಲ್ಲದ ಅಚ್ಚನ್ನು ಆದಿಯಲ್ಲಿ ಹೊಂದಿರುವ ಆರ್ಧಧಾತುಕವು ಪರದಲ್ಲಿದ್ದರೆ ಣಿಗೆ ಲೋಪ ಬರುತ್ತೆ ಎಂದು ಣಿಗೆ ಲೋಪ. **ಅಚೋಞ್ಣಿತಿ** (ಪಾ ಸೂ ೭-೨-೧೧೫) ಞಿತ್-ವಾ-ಣಿತ್ ಆಗ ಪ್ರತ್ಯಯ ಪರದಲ್ಲಿದ್ದರೆ ಅಜಂತವಾದ ಅಂಗಕ್ಕೆ ವೃದ್ಧಿ ಬರುತ್ತೆ ಎಂದು ವೃದ್ಧಿ. ಪಾ+ಅ+ಲುಙ್ **ಣೌ ಚಙ್ಯುಪಧಾಯಾ ಹ್ರಸ್ವಃ** (ಪಾ. ಸೂ ೭-೪-೧) ಚಙ್ ಪರಕವಾದ ಣಿಚ್ ಪರದಲ್ಲಿದ್ದರೆ ಅಂಗದ ಉಪಧಾಭೂತವಾದ ಅಚ್‌ಗೆ ಹ್ರಸ್ವ ಬರುತ್ತೆ ಎಂದು ಹ್ರಸ್ವ. **ಚಙಿ** (ಪಾ. ಸೂ. ೬-೧-೧೧) ಚಙ್ ಪರದಲ್ಲಿದ್ದರೆ ಅಭ್ಯಾಸವಿಲ್ಲದ ಧಾತುವಿನ ಅವಯುವವಾದ ಮೊದಲನೆ ಏಕಾಚ್ಚಿಗೆ ದ್ವಿತ್ವ ಬರುತ್ತೆ, ಅಜಾದಿ ಧಾತುವಾಗಿದ್ದರೆ ಎರಡನೆ ಏಕಾಚ್ಚಿಗೆ ದ್ವಿತ್ವ ಬರುತ್ತೆ ಎಂದು ಮೊದಲನೇ ಏಕಾಚ್‌ಗೆ ದ್ವಿತ್ವ. ಪರ್+ಪರ್+ಅ+ ಲುಙ್. ಲುಙ್‌ಗೆ ತಪ್ರತ್ಯಯ. **ಇತಶ್ಚ** (ಪಾ. ಸೂ. ೩-೪-೧೦೦) ಙಿತ್ ಆದ ಲಕಾರದ ಸ್ಥಾನದಲ್ಲಿ ಬಂದ ಇಕಾರಾಂತವಾದ ಪದದ ಇಕಾರಕ್ಕೆ ಲೋಪ ಬರುತ್ತೆ ಎಂದು ಇಕಾರಕ್ಕೆ ಲೋಪ. **ಹಲಾದಿಃ ಶೇಷಃ** ಎಂದು ಅಭ್ಯಾಸದ ರೇಫಕ್ಕೆ ಲೋಪ. **ಸನ್ವಲ್ಲಘುನಿ ಚಙ್ ಪರೇಽನಗ್ಲೋಪೇ** (ಪಾ ಸೂ. ೭-೪-೯೩) ಚಙ್. ಪರೋ ಯಸ್ಮಾತ್ ಸಃ ಚಙ್‌ಪರಃ ಎಂದು ಬಹುವ್ರೀಹಿ. ಇದಕ್ಕೆ ಣಿ ಎಂದು ಅರ್ಥ. ಇದನ್ನೂ ಅಂಗಸ್ಯ ಎಂಬುದನ್ನೂ ಆವರ್ತಿಮಾಡಿಕೊಳ್ಳಬೇಕು. ಏವಂಚ ಣಿ ನಿಮಿತ್ತವಾಗಿ ಅಗ್ಲೋಪ ಬರದೇ ಇದ್ದರೆ ಅಂಗಸಂಜ್ಞಾ ನಿಮಿತ್ತಭೂತವಾದ ಯಾವ ಚಙ್‌ಪರಕವಿದೆಯೋ ಎಂದರೆ ಣಿಚ್ ಇದೆಯೋ ಅದನ್ನು ಪರದಲ್ಲಿ ಹೊಂದಿರುವ ಯಾವ

ಲಘುವರ್ಣ **ಇದೆಯೋ** ಅದನ್ನು ಪರದಲ್ಲಿ ಹೊಂದಿರುವ ಯಾವ ಅಂಗದ ಅಭ್ಯಾಸ ಇದೆಯೋ ಅದಕ್ಕೆ ಸನ್ ಪರದಲ್ಲಿರುವಾಗ ಕಾರ್ಯ ಬರುವಂತೆ ಕಾರ್ಯ ಬರುತ್ತೆ ಎಂದು ಒಂದು ಅರ್ಥ. ಅಥವಾ ಅನ್ವೃತ್ತಿಯನ್ನು ಅಂಗಸ ಎಂಬುದಕ್ಕೆ ಹೇಳಬೇಕಾದ್ದಿಲ್ಲ. **ಚಙ್‌ಪರೇ**=ಎಂದರೆ **ಣಿಚ್** ಪರದಲ್ಲಿರುವಾಗ ಯಾವ ಅಂಗ ಇದೆಯೋ ಅದರ ಅಭ್ಯಾಸಕ್ಕೆ ಪರದಲ್ಲಿ ಲಘು ಇದ್ದರೆ ಸನ್‌ನಲ್ಲಿ ಕಾರ್ಯ ಬರುವಂತೆ ಕಾರ್ಯ ಬರುತ್ತೆ ಎಂದು ಮತ್ತೊಂದು ಅರ್ಥ. ಇಲ್ಲಿ ಸನ್ವದ್ಭಾವ ಬಂದರೆ **ಸನ್ಯತಃ** (ಪಾ. ಸೂ. ೭-೪-೭೯) ಎಂದು ಅಭ್ಯಾಸಕ್ಕೆ ಇಕಾರಾದೇಶ. **ದೀರ್ಘೋ ಲಘೋಃ** (ಪಾ. ಸೂ. ೭-೪-೯೪) ಎಂದು ದೀರ್ಘ. ಪೀ+ಪರ್+ಅ+ತ್. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂದು ಅಡಾಗಮಕ್ಕೆ ನಿಷೇಧ. **ಚಙ್ಯನ್ಯತರಸ್ಯಾಮ್** (ಪಾ. ಸೂ. ೬-೧-೨೧೮) ಚಙಂತವಾದ ಧಾತುವಿನಲ್ಲಿ ಉಪೋತ್ತಮವಾದ ವರ್ಣವು ವಿಕಲ್ಪದಿಂದ ಉದಾತ್ತವಾಗುತ್ತೆ ಎಂದು ಧಾತುವಿನ ಅಕಾರಕ್ಕೆ ಉದಾತ್ತ ಪ್ರಾಪ್ತವಾಗುತ್ತೆ. 'ತ್ರ್ಯಾದೀನಾಮನ್ತ್ಯಮುತ್ತಮಮ್. ತತ್ಸಮೀಪಮುಪೋತ್ತಮಮ್' ಎಂದರೆ ಮೂರು ಅಥವಾ ಅದಕ್ಕಿಂತಲೂ ಹೆಚ್ಚು ವರ್ಣಗಳಿದ್ದರೆ ಅವುಗಳ ಕೊನೆಯ ವರ್ಣಕ್ಕೆ ಉತ್ತಮ ಎಂದೂ ಅದರ ಹಿಂದೆ ಇರುವುದಕ್ಕೆ ಉಪೋತ್ತಮ ಎಂದೂ ಹೆಸರು. ಆದರೂ **ವ್ಯತ್ಯಯೋ ಬಹುಲಮ್** ಎಂದು ಅಭ್ಯಾಸಕ್ಕೆ ಉದಾತ್ತ ಬರುತ್ತೆ. **ಯದ್ವೃತ್ತಾನ್ನಿತ್ಯಮ್** ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ ಬರುತ್ತೆ.

**ಅಸ್ಮೇ**—ಚತುರ್ಥೀ ಬಹುವಚನಕ್ಕೆ **ಸುಪಾಂ ಸುಲುಕ್—**, ಎಂದು ಶೇ ಆದೇಶ.

**ರಾಸಾಥಾಮ್**—ರಾ ದಾನೇ. ಛಾಂದಸವಾಗಿ ಪ್ರಾರ್ಥನೆ ಎಂಬ ಅರ್ಥದಲ್ಲಿ ಲುಙ್. ವ್ಯತ್ಯಯದಿಂದ ಆತ್ಮನೇಪದ ಬರುತ್ತೆ. ಮಧ್ಯಮಪುರುಷದ್ವಿವಚನ. ಆಥಾಮ್. **ಚ್ಲೇ ಸ್ಸಿಚ್** ಎಂದು ಸಿಚ್. **ಏಕಾಚ ಉಪದೇಶೇಽನುದಾತ್ತಾತ್** ಎಂದು ಇಟ್‌ಗೆ ಪ್ರತಿಷೇಧ. ಹಿಂದಿನಂತೆಯೇ ಅಟ್ ಆಗಮಕ್ಕೆ ನಿಷೇಧ. **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುತ್ತೆ. ॥೬॥

---

॥ ಸಂಹಿತಾಪಾಠಃ ॥

ಆ ನೋ ನಾವಾ ಮತೀನಾಂ ಯಾತಂ ಪಾರಾಯ ಗಂತವೇ ।
ಯುಂಜಾಥಾಮಶ್ವಿನಾ ರಥಂ ॥ ೭ ॥

॥ ಪದಪಾಠಃ ॥

ಆ । ನಃ । ನಾವಾ । ಮತೀನಾಂ । ಯಾತಂ । ಪಾರಾಯ । ಗಂತವೇ ।
ಯುಂಜಾಥಾಂ । ಅಶ್ವಿನಾ । ರಥಂ ॥ ೭ ॥

ಸಾಯಣಭಾಷ್ಯಂ

ಹೇ ಅಶ್ವಿನಾ ಮತೀನಾಂ ಸ್ತುತೀನಾಂ ಪಾರಾಯ ಗಂತವೇ ಪಾರಂ ಗಂತುಂ ನಾವಾ ನೌರೂಪೇಣ ಗಮನಸಾಧನೇನ ನೋಽಸ್ಮಾನ್ಪ್ರತ್ಯಾ ಯಾತಂ । ಸಮುದ್ರಮಧ್ಯಾದಾಗಚ್ಛತಂ । ಭೂಮಾವಾಗಂತುಂ ರಥಂ ಭವದೀಯಂ ಯುಂಜಾಥಾಂ । ಸಾಶ್ವಂ ಕುರುತಂ ॥ ನಾವಾ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಗಂತವೇ । ತುಮರ್ಥೇ ಸೇಸೇನಿತಿ ತವೇನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ - ಯುಂಜಾಥಾಂ । ಯುಜಿರ್ ಯೋಗೇ । ಲೋಟ್ಯಾಥಾಮಿತಿ ರುಧಾದಿತ್ವಾಚ್ಛ್ನಮ್ । ಶ್ನಸೋರಲ್ಲೋಪಃ । ಪ್ರತ್ಯಯಸ್ವರಃ ॥

॥ ಪ್ರತಿಪದಾರ್ಥ ॥

**ಅಶ್ವಿನಾ**- ಎಲೈ ಅಶ್ವಿನೀದೇವತೆಗಳೇ। **ಮತೀನಾಂ**—(ಸಮುದ್ರದಷ್ಟು ವಿಸ್ತಾರವಾಗಿರುವ) ಸ್ತೋತ್ರಗಳ । **ಪಾರಾಯ ಗಂತವೇ**— ದಡವನ್ನು ಹೋಗಿ ಸೇರುವುದಕ್ಕೆ । **ನಾವಾ**— ಹಡಗು ರೂಪದಿಂದ । **ನಃ**—ನಮ। ಅಭಿಮುಖವಾಗಿ । **ಆಯಾತಂ**—ದಯಮಾಡಿ. । **ರಥಂ**— ನಿಮ್ಮ ರಥವನ್ನು । **ಯುಂಜಾಥಾಃ**—ಕುದುರೆಗಳೊಡನೆ ಸೇರಿಸಿರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಸಾಗರದಷ್ಟು ವಿಸ್ತಾರವಾದ ಸ್ತೋತ್ರಗಳಿಂದ ಸಮುದ್ರವನ್ನು ದಾಟುವುದಕ್ಕೆ ಯೋಗ್ಯವಾದ ಹಡಗು ರೂಪದಿಂದ ನಮ್ಮ ಅಭಿಮುಖವಾಗಿ ಬನ್ನಿ. ಭೂಮಿಯ ಮೇಲಿನಿಂದ ಬರುವುದಕ್ಕಾಗಿ ನಿಮ್ಮ ಕುದುರೆಗಳನ್ನು ರಥಕ್ಕೆ ಹೂಡಿರಿ.

English Translation

O Aswins, come as a ship to bear us over the ocean of praises; harness your car.

ವಿಶೇಷವಿಷಯ

ಈ ಋಕ್ಕಿನ ಅರ್ಥವು ಸರಿಯಾಗಿ ಹೊಂದುವುದಿಲ್ಲ—ಎಲೈ ಅಶ್ವಿನೀದೇವತೆಗಳೇ, ನಾವು ಮಾಡುತ್ತಿರುವ ಸ್ತೋತ್ರಗಳೆಂಬ ಸಮುದ್ರದ ದಡವನ್ನು (ಕೊನೆಯನ್ನು) ಸೇರುವುದಕ್ಕೆ ಎಂದರೆ ನಮ್ಮ ಸ್ತೋತ್ರಗಳನ್ನು ನೀವು

ಕೇಳಿ ಅದರಿಂದ ತೃಪ್ತರಾಗಿ ನಮ್ಮ ಬಳಿಗೆ ಬರುವುದಕ್ಕಾಗಿ ನಿಮ್ಮ ರಥವನ್ನು ಸಜ್ಜುಗೊಳಿಸಿರಿ ಎಂದು ಮುಖ್ಯಾಭಿಪ್ರಾಯವಿರಬಹುದು.

ವ್ಯಾಕರಣಪ್ರಕ್ರಿಯಾ

**ನಾವಾ**—ನೌ ಶಬ್ದದ ಮುಂದೆ ತೃತೀಯಾ ಏಕವಚನ ಟಾ ಪ್ರತ್ಯಯ. **ಏಚೋಽಯವಾಯಾವಃ** ಎಂದು ಔಗೆ ಆವ್ ಆದೇಶ. **ಸಾವೇಕಾಚಃ**--, ಎಂದು ವಿಭಕ್ತಿಯು ಉದಾತ್ತ.

**ಗನ್ತವೇ**—ಗಮ್ಲೃ ಗತೌ, **ತುಮರ್ಥೇ ಸೇಸೇನಸೇ—**, ಎಂದು ತವೇನ್ ಪ್ರತ್ಯಯ. ಗಮ್+ತವೇ, **ನೆಶ್ಚಾಪದಾನ್ತಸ್ಯ ಝಲಿ** ಎಂದು ಮ್‌ಗೆ ಅನುಸ್ವಾರ. **ಅನುಸ್ವಾರಸ್ಯ ಯಯಿ**—, ಎಂದು ಪರಸವರ್ಣ. **ನಿತ್ಸ್ವರ** ಆದ್ಯುದಾತ್ತ ಬರುತ್ತೆ.

**ಯುಞ್ಜಾಥಾಮ್**—ಯುಜಿರ್ ಯೋಗೇ, ಲೋಟ್, ಆತ್ಮನೇಪದ ಮಧ್ಯಮಪುರುಷ ದ್ವಿವಚನ ಆಥಾಮ್, **ರುಧಾದಿಭ್ಯಃ ಶ್ನಮ್** ಎಂದು ಶ್ನಮ್, ಯುನಜ್+ಆಥಾಮ್. **ಶ್ನಸೋರಲ್ಲೋಪಃ** ಎಂಬುದರಿಂದ ಶ್ನಪ್ರತ್ಯಯದ ಅಕಾರಕ್ಕೆ ಲೋಪ. **ನಪದಾಂತದ್ವಿರ್ವಚನ ವರೇಯಲೋಪಸ್ವರ ಸವರ್ಣಾನುಸ್ವಾರ ದೀರ್ಘ-ಜಶ್ ಚರ್ವಿಧಿಷು** (ಪಾ. ಸೂ. ೧-೧-೫೮) ಎಂದು ಅಲ್ಲೋಪದ ಸ್ಥಾನಿವದ್ಭಾವಕ್ಕೆ ನಿಷೇಧ. ಅನುಸ್ವಾರ ಪರ ಸವರ್ಣಗಳು ಹಿಂದಿನಂತೆ. ಪಾದಾದಿಯಲ್ಲಿರುವುದರಿಂದ ಸರ್ವಾನುದಾತ್ತ ಬರುವುದಿಲ್ಲ. ಪ್ರತ್ಯಯಸ್ವರ ಬರುತ್ತೆ. ॥೭॥

---

ಸಂಹಿತಾಪಾಠಃ

ಅರಿತ್ರಂ ವಾಂ ದಿವಸ್ಪೃಥು ತೀರ್ಥೇ ಸಿಂಧೂನಾಂ ರಥಃ ।
ಧಿಯಾ ಯುಯುಜ್ರ ಇಂದವಃ ॥ ೮ ॥

ಪದಪಾಠಃ

ಅರಿತ್ರಂ । ವಾಂ । ದಿವಃ । ಪೃಥು । ತೀರ್ಥೇ । ಸಿಂಧೂನಾಂ । ರಥಃ ।
ಧಿಯಾ । ಯುಯುಜ್ರೇ । ಇಂದವಃ ॥ ೮ ॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ವಾಂ ಯುವಯೋರ್ದಿವಸ್ಪೃಥು ದ್ಯುಲೋಕಾದಪಿ ವಿಸ್ತೀರ್ಣಮರಿತ್ರಂ ಗಮನಸಾಧನಂ ನೌರೂಪಂ ಸಿಂಧೂನಾಂ ಸಮುದ್ರಾಣಾಂ ತೀರ್ಥೇಽವತರಣಪ್ರದೇಶೇ ವಿದ್ಯತ ಇತಿ ಶೇಷಃ। ರಥಶ್ಚ ಭೂಮೌ ಗಂತುಂ ವಿದ್ಯತೇ। ಇಂದವಃ ಸೋಮಾ ಧಿಯಾ ಭವದ್ವಿಷಯೇಣ ಕರ್ಮಣಾ ಯುಯುಜ್ರೇ। ಯುಕ್ತಾ ಬಭೂವುಃ॥ ಅರಿತ್ರಂ। ಋ ಗತೌ। ಅರ್ತಿಲೂಧೂಸೂಖನಸಹಚರ ಇತ್ರಃ। ಪಾ. ೩-೨-೧೮೪। ಇತಿ ಕರಣ ಇತ್ರಪ್ರತ್ಯಯಃ। ಪ್ರತ್ಯಯಸ್ವರಃ। ದಿವಃ। ಊಡಿದಮಿತಿ ವಿಭಕ್ತೇರುದಾತ್ತತ್ವಂ ತೀರ್ಥೇ। ತೄ ಪ್ಲವನತರಣಯೋಃ। ಪಾತೄತುದಿವಚಿರಿಚಿಸಿಚಿಭ್ಯಸ್ಥಕ್। ಉ. ೨-೭। ಇತಿ ಥಕ್। ಋೂತ ಇದ್ಧಾತೋರಿತೀತ್ವಂ। ಹಲಿ ಚೇತಿ ದೀರ್ಘಃ। ಯುಯುಜ್ರೇ। ಲಿಟೇರಯೋ ರೇ। ಪಾ. ೬-೪-೭೬। ಇತೀರೇಚೋ ರೇಆದೇಶಃ॥**

ಪ್ರತಿಪದಾರ್ಥ

(**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ) । **ವಾಂ**—ನಿಮ್ಮ । **ದಿವಸ್ಪೃಥು**—ದ್ಯುಲೋಕಕ್ಕಿಂತಲೂ ಹೆಚ್ಚು ವಿಸ್ತಾರವಾಗಿರುವ । **ಅರಿತ್ರಂ**—(ಸಮುದ್ರದಲ್ಲಿ ಸಂಚರಿಸಲು ಸಾಧನವಾದ) ದೋಣಿಯು । **ಸಿಂಧೂನಾಂ**-ಸಮುದ್ರಗಳ । **ತೀರ್ಥೇ**—ದಡದಲ್ಲಿ (ನಿಂತಿದೆ) । **ರಥಃ**—ರಥವು ( ಭೂಮಿಯಮೇಲೆ ನಿಂತಿದೆ ) **ಸೋಮಾಃ**—ಸೋಮರಸಗಳು । **ಧಿಯಾ**— ( ನಿಮ್ಮನ್ನುದ್ದೇಶಿಸಿ ನೆರವೇರಿದ ) ಕರ್ಮಗಳಿಂದ । **ಯುಯುಜ್ರೇ**—ಸೇರಿಸಲ್ಪಟ್ಟಿವೆ ।

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಸಮುದ್ರದ ಮೇಲೆ ಸಂಚಾರಮಾಡುವುದಕ್ಕಾಗಿ ದ್ಯುಲೋಕಕ್ಕಿಂತಲೂ ಹೆಚ್ಚು ವಿಸ್ತಾರವಾಗಿರುವ ನಿಮ್ಮ ಹಡಗು ಸಮುದ್ರಗಳ ದಡಗಳಲ್ಲಿ ನಿಂತಿದೆ. ನಿಮ್ಮ ರಥವು ಭೂಮಿಯಮೇಲೆ ನಿಂತಿದೆ. ನಿಮ್ಮನ್ನುದ್ದೇಶಿಸಿ ನೆರವೇರಿಸುವ ಯಜ್ಞಕರ್ಮಗಳಲ್ಲಿ ಸೋಮರಸವು ಸಿದ್ಧವಾಗಿದೆ. ಇಲ್ಲಿಗೆ ಬಂದು ಅದನ್ನು ಪಾನ ಮಾಡಿರಿ.

English Translation

Your vessel vaster than the sky rests on the sea-shore ; your chariot waits on the land ; the drops of Soma-juice are expressed for your worship.

ವಿಶೇಷವಿಷಯ

**ಅರಿತ್ರಂ**— **ಋ ಗತೌ** । ಹೋಗುವುದಕ್ಕೆ ಸಾಧನವಾದ ವಸ್ತುವು. ಇಲ್ಲಿ ಸಿಂಧೂನಾಂ ಎಂಬ ಸಮುದ್ರ ಶಬ್ದವಿರುವುದರಿಂದ ಸಮುದ್ರದ ಮೇಲೆ ಸಂಚರಿಸುವ ವಸ್ತುವೆಂದರೆ ಹಡಗು ಎಂದಭಿಪ್ರಾಯವು.

**ದಿವಸ್ಪೃಥು— ದ್ಯುಲೋಕಾದಪಿ ವಿಸ್ತೀರ್ಣಂ ।** ಸ್ವರ್ಗಕ್ಕಿಂತಲೂ ಅತಿವಿಸ್ತಾರವಾದ ಎಂದರೆ ಬಹು ದೊಡ್ಡದಾದ.

**ತೀರ್ಥೇ— ಅವತರಣಪ್ರದೇಶೇ ।** ದಾಟುವ ಪ್ರದೇಶ, ಸಮುದ್ರದ ದಡ.

**ಧಿಯಾ—ಕರ್ಮಣಾ,** ಕರ್ಮದಿಂದ. ಧಿಯಾ ಯುಯುಜ್ರ ಇಂದವಃ ಎಂದರೆ ಯಜ್ಞಾನುಷ್ಠಾನಾದಿ ಕರ್ಮಗಳಿಂದ ಸೋಮರಸಗಳು ಸೇರಿಸಲ್ಪಟ್ಟವೆ. ಎಂದರೆ ನಾವು ಮಾಡುತ್ತಿರುವ ಈ ಯಜ್ಞಕರ್ಮದಲ್ಲಿ ಸೋಮರಸಗಳು ನಿಮಗೆ ಸಮರ್ಪಿಸುವುದಕ್ಕಾಗಿ ಸಿದ್ಧಪಡಿಸಲ್ಪಟ್ಟವೆ ಎಂದಭಿಪ್ರಾಯವು.

ಈ ಋಕ್ಕಿನಲ್ಲಿ ವಚನವಿಭಕ್ತಿಗಳು ಸರಿಯಾಗಿಲ್ಲವಾದುದರಿಂದಲೂ ಅರ್ಥವು ಸರಿಯಾಗಿ ಹೊಂದುವುದಿಲ್ಲವಾದುದರಿಂದಲೂ ಕೆಲವು ಶಬ್ದಗಳನ್ನು ಅಧ್ಯಾಹಾರಮಾಡಿದಲ್ಲದೆ ಅರ್ಥವು ಸರಿಯಾಗಿ ಹೊಂದುವುದಿಲ್ಲ.

ವ್ಯಾಕರಣಪ್ರಕ್ರಿಯಾ

**ಅರಿತ್ರಂ**— ಋ ಗತೌ. **ಅರ್ತಿಲೂಧೂ ಸೂ ಖನ ಸಹ ಚರಇತ್ರಃ** (ಉ. ಸೂ. ೩-೨-೧೮೪ ಎಂಬುದರಿಂದ ಇತ್ರ ಪ್ರತ್ಯಯ. ಗುಣ. ಪ್ರತ್ಯಯಸ್ವರ ಬರುತ್ತೆ.

**ದಿವಃ—ಊಡಿದಂ ಪದಾದ್ಯಪ್ಪುಮ್ರೈದ್ಯುಭ್ಯಃ** ಎಂದು ವಿಭಕ್ತಿಯು ಉದಾತ್ತವಾಗುತ್ತೆ.

**ತಿರ್ಥೇ**—ತೄ ಪ್ಲವನ ತರಣಯೋಃ **ಪಾತೄ ತುದಿವಚಿ ರಿಚಿ ಸಿಚಿಭ್ಯಸ್ಥಕ್** (ಉ. ಸೂ. ೨-೧೬೪) ಎಂಬುದರಿಂದ ಥಕ್ ಪ್ರತ್ಯಯ. **ಕ್ಜಿತಿಚ** ಎಂದು ಗುಣಕ್ಕೆ ನಿಷೇಧ. **ಋತ ಇದ್ಧಾತೋಃ** ಎಂದು ಇತ್ವ-ರಪರವಾಗಿ ಬರುತ್ತೆ. **ಹಲಿಚ** ಎಂದು ದೀರ್ಘ

**ಯುಯುಜ್ರೇ**—ಯುಜಧಾತು ಮುಂದೆ ಲಿಟ್, ಝ, **ಲಿಟಸ್ತಝಯೋಃ—,** ಎಂದು ಝಗೆ ಇರೇಚ್, ದ್ವಿತ್ವ. **ಇರಯೋರೇ** (ಪಾ. ಸೂ. ೬-೪-೭೬) ಛಂದಸ್ಸಿನಲ್ಲಿ ಇರೇ ಎಂಬುದಕ್ಕೆ ರೇ ಆದೇಶವು ಬರುವುದು ಎಂಬುದರಿಂದ ರೇ ಆದೇಶ ಇರೇಚ್‌ಗೆ ಬರುತ್ತೆ. **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುತ್ತೆ. ॥ ೮ ॥

---

॥ ಸಂಹಿತಾಪಾಠಃ ॥

ದಿವಸ್ಕಣ್ವಾಸ ಇಂದವೋ ವಸು ಸಿಂಧೂನಾಂ ಪದೇ ।
ಸ್ವಂ ವವ್ರಿಂ ಕುಹ ಧಿತ್ಸಥಃ ॥ ೯ ॥

॥ ಪದಪಾಠಃ ॥

ದಿವಃ । ಕಣ್ವಾಸಃ । ಇಂದವಃ । ವಸು । ಸಿಂಧೂನಾಂ। ಪದೇ ।
ಸ್ವಂ । ವವ್ರಿಂ । ಕುಹ । ಧಿತ್ಸಥಃ ॥ ೯ ॥

ಸಾಯಣಭಾಷ್ಯಂ

ಹೇ ಕಣ್ವಾಸಃ ಕಣ್ವಪುತ್ರಾಃ । ಯದ್ವಾ । ಮೇಧಾವಿನ ಋತ್ವಿಜಃ । ಅಶ್ವಿನಾವಿತ್ಥಂ ಪೃಚ್ಛತೇತಿ ಶೇಷಃ । ಕಥಮಿತಿ ತದುಚ್ಯತೇ । ದಿವೋ ದ್ಯುಲೋಕಸಕಾಶಾದಿಂದವಃ ಸೂರ್ಯರಶ್ಮಯಃ ಪ್ರಾದುರ್ಭೂತಾಃ । ಸಿಂಧೂನಾಮಪಾಂ ವೃಷ್ಟಿರೂಪಾಣಾಂ ಸ್ಯಂದನಸ್ವಭಾವಾನಾಂ ಪದೇ ಸ್ಥಾನೇಽಂತರಿಕ್ಷೇ ವಸು ಅಸ್ಮದಾದಿನಿವಾಸಹೇತುಭೂತಮುಷಃಕಾಲೀನಂ ಜ್ಯೋತಿರಾವಿರ್ಭೂತಮಿತಿ ಶೇಷಃ । ಅಸ್ಮಿನ್ನವಸರೇ ಯುವಾಂ ಸ್ವಂ ವವ್ರಿಂ ಸ್ವಕೀಯಂ ರೂಪಂ ಕುಹ ಧಿತ್ಸಥಃ । ಕುತ್ರ ಸ್ಥಾಪಯಿತುಮಿಚ್ಛಥಃ । ಅತ್ರಾಗತ್ಯ ಪ್ರದರ್ಶನೀಯಮಿತಿ ತಾತ್ಪರ್ಯಾರ್ಥಃ ॥ ಕುಹ । ವಾ ಹ ಚ ಚ್ಛಂದಸಿ । ಪಾ. ೫-೩-೧೩ । ಇತಿ ಕಿಂಶಬ್ದಾತ್ಸಪ್ತಮ್ಯರ್ಥೇ ಹಪ್ರತ್ಯಯಃ । ಕು ತಿಹೋಃ । ಪಾ. ೭-೨-೧೦೪ । ಇತಿ ಕಿಮಃ ಕುಃ । ಧಿತ್ಸಥಃ । ಡುಧಾಞ್ ಧಾರಣಪೋಷಣಯೋಃ । ಸನಿ ಮೀಮಾಘುರಭಲಭಶಕಪತಪದಾಮಚ ಇಸ್ । ಪಾ. ೭-೪-೫೪ । ಇತ್ಯಾಕಾರಸ್ಯ ಇಸಾದೇಶಃ । ಅತ್ರ ಲೋಪೋಽಭ್ಯಾಸಸ್ಯ । ಪಾ. ೭-೪-೫೮ । ಇತ್ಯಭ್ಯಾಸಲೋಪಃ । ಸಃ ಸ್ಯಾರ್ಧಧಾತುಕೇ । ಪಾ. ೭-೪-೪೯ । ಇತಿ ಸಕಾರಸ್ಯ ತಕಾರಃ ॥

ಪ್ರತಿಪದಾರ್ಥ

**ಕಣ್ವಾಸಃ**— ಎಲೈ ಕಣ್ವಪುತ್ರರೇ ಅಥವಾ ಮೇಧಾವಿಗಳಾದ ಋತ್ವಿಕ್ಕುಗಳೇ ( ಅಶ್ವಿನೀದೇವತೆಗಳನ್ನು ಈ ವಿಧವಾಗಿ ಪ್ರಶ್ನೆಮಾಡಿ ) । **ದಿವಃ**—ದ್ಯುಲೋಕದಿಂದ । **ಇಂದವಃ** - ಸೂರ್ಯ ರಶ್ಮಿಗಳು ( ಆವಿರ್ಭೂತವಾಗಿವೆ ) **ಸಿಂಧೂನಾಂ**—ನೀರುಗಳ । **ಪದೇ**—ಸ್ಥಾನವಾದ ಅಂತರಿಕ್ಷದಲ್ಲಿ । **ವಸು**—(ನಮ್ಮ ವಾಸಸ್ಥಾನಕ್ಕೆ ಕಾರಣಭೂತವಾದ) ಉಷಃಕಾಲದ ಜ್ಯೋತಿಯು (ಆವಿರ್ಭವಿಸಿದೆ) । **ಸ್ವಂ ವವ್ರಿಂ**—(ಈ ಸನ್ನಿವೇಶದಲ್ಲಿ) ನಿಮ್ಮ ಸ್ವರೂಪವನ್ನು । **ಕುಹ**—ಎಲ್ಲಿ । **ಧಿತ್ಸಥಃ**—ಸ್ಥಾಪಿಸಲು ಇಚ್ಛಿಸಿದ್ದೀರಿ ? ( ಇಲ್ಲಿ ದಯಮಾಡಿ ನಮಗೆ ಗೋಚರವಾಗಿರಿ ಎಂದರ್ಥವು).

ಭಾವಾರ್ಥ

ಎಲೈ ಕಣ್ವವಂಶಸ್ಥರಾದ ಋಷಿಗಳೇ ( ಅಥವಾ ಮೇಧಾವಿಗಳಾದ ಋತ್ವಿಜರೇ, ) ನೀವು ಅಶ್ವಿನೀ ದೇವತೆಗಳನ್ನು ಈರೀತಿಯಾಗಿ ಪ್ರಶ್ನೆಮಾಡಿರಿ—ಸೂರ್ಯರಶ್ಮಿಗಳು ಸ್ವರ್ಗದಿಂದ ಹೇಗೆ ಉತ್ಪನ್ನವಾಗಿ ಹೊರಟಿರುವವು ? ಉಷಃಕಾಲವು ಸಮುದ್ರದಾಚೆ ಅಂತರಿಕ್ಷದಲ್ಲಿ ಹೇಗೆ ಗೋಚರವಾಗುವುದು ? ನೀವು ನಿಮ್ಮ ರೂಪವನ್ನು ಎಲ್ಲಿ ಸ್ಥಾಪಿಸಿರುವಿರಿ ಎಂದರೆ ನಿಮ್ಮನ್ನು ನಾವು ಎಲ್ಲಿ ನೋಡಬಹುದು ?

## English Translation

O Kanwas, ask this of the Aswins—How do the rays of the Sun proceed from the sky? How does the dawn rise on the waters beyond the horizon? where do you desire to make your own appearence?

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸರಿಯಾಗಿ ಹೊಂದುವುದಿಲ್ಲ. ಈ ಋಕ್ಕಿಗೆ ಒಬ್ಬೊಬ್ಬರು ಒಂದೊಂದು ವಿಧವಾಗಿ ಅರ್ಥಮಾಡುವರು. ಭಾಷ್ಯಕಾರರ ಅರ್ಥವು ಒಂದು ವಿಧವಾದ ಅಭಿಪ್ರಾಯವನ್ನು ಸೂಚಿಸುವುದು. ಋಷಿಯ ಆಶಯವೇನೆಂಬುದು ಸ್ಪಷ್ಟವಾಗಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಕುಹ—ವಾ ಹ ಚ ಛಂದಸಿ** (ಪಾ. ಸೂ. ೫-೩-೧೩) ಛಂದಸ್ಸಿನಲ್ಲಿ ಕಿಮ್ ಶಬ್ದ ಪ್ರಕೃತಿಕವಾದ ಸಪ್ತಮ್ಯಂತದ ಮುಂದೆ ಹ ಪ್ರತ್ಯಯ ಬರುತ್ತೆ ಎಂದು ಹ ಪ್ರತ್ಯಯ. **ಕೃತ್ತದ್ಧಿತಸಮಾಸಾಶ್ಚ** (ಪಾ. ಸೂ. ೧-೨-೪೬) ಕೃದಂತ-ತದ್ಧಿತಾಂತ-ಸಮಾಸ ಇವು ಪ್ರಾತಿಪದಿಕ ಸಂಜ್ಞೆಯನ್ನು ಹೊಂದುವುವು ಎಂದು ತದ್ಧಿತಾಂತಕ್ಕೆ ಪ್ರಾತಿಪದಿಕ ಸಂಜ್ಞೆ. **ಸುಪೋಧಾತು ಪ್ರಾತಿಪದಿಕಯೋಃ** (ಪಾ. ಸೂ. ೨-೪-೭೧) ಎಂದು ಸಪ್ತಮಿಗೆ ಲುಕ್. ಕಿಮ್+ಹ. **ಪ್ರಾಗ್ದಿಶೋ ವಿಭಕ್ತಿಃ** (ಪಾ. ಸೂ. ೫-೩-೧) ಇಲ್ಲಿಂದ ಆರಂಭಿಸಿ **ದಿಕ್ ಶಬ್ದೇಭ್ಯಃ—**, (ಪಾ. ಸೂ. ೫-೩-೨೭) ಎಂಬ ಸೂತ್ರಪರ್ಯಂತ ವಿಧಿಸುವ ಪ್ರತ್ಯಯಗಳು ವಿಭಕ್ತಿಸಂಜ್ಞೆಯನ್ನು ಹೊಂದುವುವು ಎಂದು ಹಗೆ ವಿಭಕ್ತಿ ಸಂಜ್ಞೆ ಇದೆ. **ಕುತಿಹೋಃ** (ಪಾ ಸೂ. ೭-೨-೧೦೪) ತಕಾರಾದಿ ಅಥವಾ ಹಕಾರಾದಿಯಾದ ವಿಭಕ್ತಿ ಪರದಲ್ಲಿದ್ದರೆ ಕಿಮ್ ಶಬ್ದಕ್ಕೆ ಕು ಆದೇಶ ಬರುತ್ತೆ ಎಂದು ಕು ಆದೇಶ. ಕುಹ ಎಂದು ಆಗುತ್ತೆ. ಹೀಗೆ ಸ್ವತಂತ್ರವಾದ ಹ ಪ್ರತ್ಯಯವನ್ನು ಹೇಳಿದರೆ ಪ್ರತ್ಯಯಸ್ವರ ಬಂದು ಅಂತೋದಾತ್ತವಾಗಬೇಕಾಗುತ್ತೆ. ಆದ್ದರಿಂದ **ಸಪ್ತಮ್ಯಾಸ್ತ್ರಲ್** (ಪಾ. ಸೂ. ೫-೩-೧೦) ಎಂಬುದರಿಂದ ತ್ರಲ್ ಪ್ರತ್ಯಯವನ್ನು ಹೇಳಿ ಅದಕ್ಕೆ ಹ ಆದೇಶ ಬರುತ್ತೆ ಎಂದು ಹೇಳಬೇಕು. **ವಾಹಚ ಛಂದಸಿ** ಎಂಬುದಕ್ಕೆ ಛಂದಸ್ಸಿನಲ್ಲಿ ಕಿಮ್ ಶಬ್ದದ ಮುಂದೆ ಇರುವ ತ್ರಲ್‌ಗೆ ಹ ಆದೇಶ ಬರುತ್ತೆ ಎಂದು ಅರ್ಥವನ್ನು ಹೇಳುವುದು ಯುಕ್ತ. ಈಗ **ಲಿತಿ** ಎಂಬುದರಿಂದ ಪ್ರತ್ಯಯದ ಹಿಂದೆ ಇರುವ ವರ್ಣ ಉದಾತ್ತ. ಶೇಷಾನುದಾತ್ತದಿಂದ ಪ್ರತ್ಯಯ ಅನುದಾತ್ತ **ಉದಾತ್ತಾದನುದಾತ್ತಸ್ಯ ಸ್ವರಿತಃ** ಎಂಬುದರಿಂದ ಪ್ರತ್ಯಯವು ಸ್ವರಿತವಾಗುತ್ತೆ.

**ಧಿತ್ಸಥಃ**—ಡುಧಾಞ್ ಧಾರಣಪೋಷಣಯೋಃ. **ಧಾತೋಃ ಕರ್ಮಣಃ ಸಮಾನಕರ್ತೃಕಾದಿಚ್ಛಾಯಾಂ ವಾ** (ಪಾ. ಸೂ. ೩-೧-೭) ಎಂದು ಸನ್. **ಸನ್ಯಙೋಃ** (ಪಾ. ಸೂ. ೬-೧-೯) ಎಂದು ದ್ವಿತ್ವ. ಧಾ+ಧಾ+ಸ **ಸನಿ ಮೀ ಮಾ ಘು ರಭ ಲಭ ಶಕ ಪತ ಪದಾಮಚ ಇಸ್** (ಪಾ. ಸೂ. ೭-೪-೫೪) ಸಕಾರಾದಿಯಾದ ಸನ್ ಪರದಲ್ಲಿದ್ದರೆ ಈ ಸೂತ್ರದಲ್ಲಿರುವ ಧಾತುಗಳ ಅಚ್ಚಿಗೆ ಇಸ್ ಆದೇಶ ಬರುತ್ತೆ ಎಂದು ಉತ್ತರ ಖಂಡದ ಆಕಾರಕ್ಕೆ ಇಸ್ ಆದೇಶ. **ಅತ್ರ ಲೋಪೋಽಭ್ಯಾಸಸ್ಯ** (ಪಾ. ಸೂ. ೭-೪-೫೮) **ಸನಿಮೀಮಾ—**, ಎಂದು ಆರಂಭಿಸಿ ಹೇಳಿರುವ ಕಾರ್ಯಗಳು ಎಲ್ಲಿ ಬಂದಿವೆಯೋ ಅಲ್ಲಿ ಅಭ್ಯಾಸಕ್ಕೆ ಲೋಪ ಬರುತ್ತೆ ಎಂದು ಪೂರ್ವ ಖಂಡಕ್ಕೆ ಲೋಪ. **ಧಿಸ್**+**ಸ**.

**ಸಃ ಸ್ಯಾರ್ಧಧಾತುಕೇ** (ಪಾ. ಸೂ. ೭-೪-೪೯) ಸಕಾರಾದಿಯಾದ ಆರ್ಧಧಾತುಕ ಪರದಲ್ಲಿದ್ದರೆ ಸಕಾರಕ್ಕೆ ತಕಾರ ಬರುತ್ತೆ ಎಂದು ಸ್‌ಗೆ ತ್ ಬರುತ್ತೆ. ಧಿತ್ಸ ಎಂದಾಯಿತು. ಲಟ್, ಮಧ್ಯಮಪುರುಷ ದ್ವಿವಚನ ಥಸ್, ಶಪ್. ಪರರೂಪ, ರುತ್ವ, ವಿಸರ್ಗ ಧಿತ್ಸಥಃ ಎಂದು ಆಗುತ್ತೆ. ||೯||



ಸಂಹಿತಾಪಾಠಃ

ಅಭೂದು ಭಾ ಉ ಅಂಶವೇ ಹಿರಣ್ಯಂ ಪ್ರತಿ ಸೂರ್ಯಃ ।
ವ್ಯಖ್ಯಜ್ಜಿಹ್ವಯಾಸಿತಃ ॥೧೦॥

ಪದಪಾಠಃ

ಅಭೂತ್ । ಊಂ ಇತಿ । ಭಾಃ । ಊಂ । ಇತಿ । ಅಂಶವೇ । ಹಿರಣ್ಯಂ ।
ಪ್ರತಿ । ಸೂರ್ಯಃ ।
ವಿ । ಅಖ್ಯತ್ । ಜಿಹ್ವಯಾ । ಅಸಿತಃ ॥ ೧೦ ॥

ಸಾಯಣಭಾಷ್ಯಂ

ಭಾ ಉ ಸೂರ್ಯಸ್ಯ ದೀಪ್ತಿಸ್ತ್ವಂಶವ ಉಷಃಕಾಲೀನರಶ್ಮಿಸಿದ್ಧ್ಯರ್ಥಮಭೂದು । ಪ್ರಾದುರ್ಭೂತೈವ । ಸೂರ್ಯಶ್ಚ ಹಿರಣ್ಯಂ ಪ್ರತಿ ಸ್ವಕೀಯೋದಯೇನ ಹಿರಣ್ಯಸದೃಶೋऽಭೂತ್ । ಅಗ್ನಿಶ್ಚಾಸಿತಃ ಸ್ವಕೀಯದೀಪ್ತೇಃ ಸೂರ್ಯಪ್ರವೇಶೇನ ಸ್ವಯಂ ಕೃಷ್ಣೋ ಭೂತ್ವಾ ಜಿಹ್ವಯಾ ಸ್ವಕೀಯಯಾ ಜ್ವಾಲಯಾ ವ್ಯಖ್ಯತ್ । ಪ್ರಕಾಶಿತವಾನ್ । ತಸ್ಮಾದಯಮಶ್ವಿನೋರ್ಯುವಯೋರಾಗಮನಕಾಲ ಇತ್ಯರ್ಥಃ ॥ ಅಭೂತ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ । ಹಿರಣ್ಯಂ ಪ್ರತಿ । ಪ್ರತಿಃ ಪ್ರತಿನಿಧಿಪ್ರತಿದಾನಯೋಃ । ಪಾ. ೧-೪-೯೨ । ಇತಿ ಪ್ರತೇಃ ಕರ್ಮಪ್ರವಚನೀಯತ್ವಂ । ಕರ್ಮಪ್ರವಚನೀಯಯುಕ್ತೇ ದ್ವಿತೀಯಾ । ಪಾ. ೨-೩-೮ । ಇತಿ ದ್ವಿತೀಯಾ । ಅಖ್ಯತ್ । ಚಕ್ಷಿಙ್‌ಇತಿ ವ್ಯಕ್ತಾಯಾಂ ವಾಚಿ । ಲುಙಿ ಚಕ್ಷಿಙಃ ಖ್ಯಾಞಿತಿ ಖ್ಯಾಞಾದೇಶಃ ॥ ೩೪ ॥

॥ ಪ್ರತಿಪದಾರ್ಥ ॥

**ಭಾ ಉ**—ಸೂರ್ಯನ ತೇಜಸ್ಸಾದರೋ । **ಅಂಶವೇ**—ಉಷಃಕಾಲವನ್ನು ಬೆಳಗುವುದಕ್ಕಾಗಿ । **ಅಭೂದು**—ಆವಿರ್ಭವಿಸಿಯೇ ಇದೆ । **ಸೂರ್ಯಃ**—ಸೂರ್ಯದೇವನು । **ಹಿರಣ್ಯಂ ಪ್ರತಿ**—(ತನ್ನ ಉದಯಕಾಲದ ಕಾಂತಿಯಿಂದ) ಸುವರ್ಣಸದೃಶನಾದನು । **ಅಸಿತಃ**— ( ಸೂರ್ಯನ ಪ್ರಕಾಶದ ಮುಂದೆ ) ಮಸುಕಾದ ಪ್ರಕಾಶವುಳ್ಳ ಅಗ್ನಿಯು । **ಜಿಹ್ವಯಾ** (ಮಂಕಾದ) ಜ್ವಾಲೆಯಿಂದ । **ವ್ಯಖ್ಯತ್**—ಪ್ರಕಾಶಿಸಿದನು. (ಇದು ನಿಮಗೆ ಸರಿಯಾದ ಆಗಮನಕಾಲವಾದ್ದರಿಂದ ಅಶ್ವಿನೀದೇವತೆಗಳೇ, ನೀವೂ ಬನ್ನಿರಿ )

ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಲೋಕರಮಣೀಯವಾದ ಉಷಃಕಾಲವನ್ನು ಬೆಳಗಿಸುವುದಕ್ಕೆ ಸೂರ್ಯನ ತೇಜಸ್ಸು ಆವಿರ್ಭವಿಸಿದೆ. ಸೂರ್ಯನು ತನ್ನ ಉದಯಕಾಲದ ಕಾಂತಿಯಿಂದ ಸುವರ್ಣಸದೃಶನಾಗಿ ರಮಣೀಯನಾಗಿದ್ದಾನೆ. ರಾತ್ರಿಯೆಲ್ಲ ಪ್ರಕಾಶಿಸಿದ ಅಗ್ನಿಯ ಜ್ವಾಲೆಯೂ ಸೂರ್ಯನ ತೇಜಸ್ಸಿನ ಮುಂದೆ ಮಸುಕಾಗಿದೆ. ಇಂತಹ ತೇಜಸ್ವಿಯಾದ ಸೂರ್ಯದೇವನ ಉದಯಕಾಲದಲ್ಲಿ ನೀವೂ ಬರುವುದು ಸಕಾಲವಾದುದರಿಂದ ದಯವಿಟ್ಟು ಬನ್ನಿರಿ.

English Translation

There was just enough light to make the dawn visible ; then the Sun rose like gold ; the fire shone with darkened flames.

ವಿಶೇಷವಿಷಯಗಳು

ಈ ಋಕ್ಕಿನ ಅರ್ಥವು ಸ್ಪಷ್ಟವಾಗಿದ್ದರೂ ಅರ್ಥವು ಸರಿಯಾಗಿ ಹೊಂದುವುದಕ್ಕಾಗಿ ಕೆಲವು ಪದಗಳನ್ನು ಅಧ್ಯಾಹಾರಮಾಡಿಕೊಳ್ಳಬೇಕಾಗಿರುವುದು.

**ಹಿರಣ್ಯಂ ಪ್ರತಿ**—ಸೂರ್ಯೋದಯಕಾಲದಲ್ಲಿ ಸೂರ್ಯನ ಪ್ರಕಾಶವು ಸ್ವಲ್ಪ ಕೆಂಪು ಛಾಯೆಯುಳ್ಳದ್ದಾಗಿರುವುದರಿಂದ ಸೂರ್ಯನ ಆ ಕಾಲದ ಕಾಂತಿಯನ್ನು ಚಿನ್ನದ ಪ್ರಕಾಶಕ್ಕೆ ಹೋಲಿಸುವುದು ವಾಡಿಕೆಯಾಗಿದೆ.

**ಜಿಹ್ವಯಾ ಅಸಿತಃ**—ಸಿತ ಎಂದರೆ ಬಿಳುಪು ಅಥವಾ ಪ್ರಕಾಶಮಾನವಾದ. ಅಸಿತಃ ಎಂದರೆ ಪ್ರಕಾಶಮಾನವಲ್ಲದ, ಮಂಕಾದ ಎಂದರ್ಥವು. ಜಿಹ್ವಯಾ—ನಾಲಿಗೆಯಿಂದ, ಅಗ್ನಿಯ ನಾಲಿಗೆಗಳೆಂದರೆ ಜ್ವಾಲೆಗಳು. ಇಲ್ಲಿ ಅಗ್ನಿಯು ಮಂಕಾದ ಜ್ವಾಲೆಗಳಿಂದ ಪ್ರಕಾಶಿಸಿತು ಎಂದರೆ ಸೂರ್ಯನ ಪ್ರಕಾಶದ ಮುಂದೆ ಅಗ್ನಿಯ ಪ್ರಕಾಶವು ಮಂಕಾಗಿದ್ದಿತು ಎಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ಅಭೂತ್**—ಭೂ ಸತ್ತಾಯಾಂ, ಲುಙ್, ಚ್ಲಿ, **ಚ್ಲೇಸ್ಸಿಚ್** ಎಂದು ಸಿಚ್, ಅಡಾಗಮ. ಅಭೂ+ಸ್+ಲುಙ್, ತಿಪ್, **ಇತಶ್ಚ** ಎಂದು ಇಕಾರಕ್ಕೆ ಲೋಪ. **ಗಾತಿಸ್ಥಾಘುಪಾಭೂಭ್ಯಃ ಸಿಚಃ ಪರಸ್ಮೈಪದೇಷು** (ಪಾ.

ಸೂ. ೨-೪-೭೭) ಎಂದು ಸಿಚ್ ಲುಕ್. **ಭೂಸುವೋಸ್ತಿಙಿ** (ಪಾ. ಸೂ. ೭-೩-೮೮) ಸಾರ್ವಧಾತುಕ ಸಂಜ್ಞೆಯುಳ್ಳ ತಿಙ್ ಪರದಲ್ಲಿದ್ದರೆ ಭೂ-ಸೂ ಇವುಗಳಿಗೆ ಗುಣ ಬರುವುದಿಲ್ಲ ಎಂದು ಗುಣಕ್ಕೆ ನಿಷೇಧ.

**ಹಿರಣ್ಯಂ ಪ್ರತಿ—ಪ್ರತಿಃ ಪ್ರತಿನಿಧಿಪ್ರತಿದಾನಯೋಃ** (ಪಾ. ಸೂ. ೧-೪-೯೨) ಪ್ರತಿನಿಧಿ ಎಂದರೆ ಸದೃಶ ಎಂದು ಅರ್ಥ. ಪ್ರತಿದಾನ ಎಂದರೆ ಕೊಟ್ಟಿದ್ದನ್ನು ಹಿಂತಿರುಗಿ ಕೊಡುವುದು ಎಂದು ಅರ್ಥ. ಪ್ರತಿನಿಧಿ-ಪ್ರತಿದಾನ ಎಂಬ ಅರ್ಥಗಳಲ್ಲಿ ಪ್ರತಿಯು ಕರ್ಮಪ್ರವಚನೀಯ ಸಂಜ್ಞೆಯನ್ನು ಹೊಂದುತ್ತೆ ಎಂದು ಕರ್ಮಪ್ರವಚನೀಯ ಸಂಜ್ಞೆ ಬರುತ್ತೆ. **ಕರ್ಮಪ್ರವಚನೀಯ ಯುಕ್ತೇ ದ್ವಿತೀಯಾ** (ಪಾ. ಸೂ. ೨-೩-೮) ಕರ್ಮಪ್ರವಚನೀಯ ಸಂಜ್ಞಾಕಶಬ್ದದ ಯೋಗ ಇದ್ದರೆ ದ್ವಿತೀಯಾವಿಭಕ್ತಿ ಬರುತ್ತೆ ಎಂಗು ದ್ವಿತೀಯಾ ವಿಭಕ್ತಿ.

**ಅಖ್ಯತ್**—ಚಕ್ಷಿಙ್ ವ್ಯಕ್ತಾಯಾಂ ವಾಚಿ, ಲುಙ್, ಚ್ಲಿ, **ಚಕ್ಷಿಙಃ ಖ್ಯಾಞ್** (ಪಾ. ಸೂ. ೨-೪-೫೪) ಆರ್ಧಧಾತುಕ ಪ್ರತ್ಯಯ ಪರದಲ್ಲಿದ್ದರೆ ಅಥವಾ ಆರ್ಧಧಾತುಕ ವಿಷಯದಲ್ಲಿ ಚಙ್ ಧಾತುವಿಗೆ ಖ್ಯಾಞ್ ಅದೇಶ ಬರುತ್ತೆ ಎಂದು ಅರ್ಥ. ಇದರಿಂದ ಖ್ಯಾಞ್ ಆದೇಶ, ಇದು ಞಿತ್. ಆದ್ದರಿಂದ **ಸ್ವರಿತ ಞಿತಃ—**, ಎಂಬುದರಿಂದ ಆತ್ಮನೇಪದ ಪರಸ್ಮೈಪದಗಳೆರಡೂ ಬರಬಹುದು. ಇಲ್ಲಿ ಪರಸ್ಮೈಪದ ತಿಪ್, ಇಕಾರಲೋಪ. ಅಟ್ ಆಗಮ, ಅಖ್ಯಾ+ಚ್ಲಿ+ತ್. **ಅಸ್ಯತಿವಕ್ತಿಖ್ಯಾತಿಭ್ಯೋಽಙ್** (ಪಾ. ಸೂ. ೩-೧-೫೨) ಎಂದು ಚ್ಲಿಗೆ ಅಙ್ ಆದೇಶ. **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಎಂದು ಆಕಾರಕ್ಕೆ ಲೋಪ. ಅಖ್ಯತ್ ಎಂದು ಆಗುತ್ತದೆ. **ತಿಙ್ಙತಿಙಃ** ಎಂದು ಸರ್ವಾನುದಾತ್ತ. ‖೧೦‖



ಸಂಹಿತಾಪಾಠಃ

ಅಭೂದು ಪಾರಮೇತವೇ ಪಂಥಾ ಋತಸ್ಯ ಸಾಧುಯಾ ।
ಅದರ್ಶಿ ವಿ ಸ್ರುತಿರ್ದಿವಃ ‖ ೧೧ ‖

‖ ಪದಪಾಠಃ ‖

ಅಭೂತ್ । ಊಂ ಇತಿ । ಪಾರಂ । ಏತವೇ । ಪಂಥಾಃ । ಋತಸ್ಯ । ಸಾ-ಧುऽಯಾ ।
ಅದರ್ಶಿ । ವಿ । ಸ್ರುತಿಃ । ದಿವಃ ‖ ೧೧ ‖

॥ ಸಾಯಣಭಾಷ್ಯಂ ॥

**ಋತಸ್ಯ ಸೂರ್ಯಸ್ಯ ಪಾರಮೇತವೇ ರಾತ್ರೇಃ ಪಾರಭೂತಮುದಯಾದ್ರಿಂ ಗಂತುಂ ಪಂಥಾ ಮಾರ್ಗಃ ಸಾಧುಯಾ ಸಮೀಚೀನೋಽಭೂದು । ನಿಷ್ಪನ್ನ ಏವ । ದಿವೋ ದ್ಯೋತನಾತ್ಮಕಸ್ಯ ಸೂರ್ಯಸ್ಯ ಸ್ರುತಿಃ ಪ್ರಸೃತಾ ದೀಪ್ತಿರ್ವ್ಯದರ್ಶಿ । ವಿಶೇಷೇಣ ದೃಷ್ಟಾ । ತಸ್ಮಾದಶ್ವಿನೌ ಯುವಾಭ್ಯಾಮಾಗಂತವ್ಯಂ ॥ ಏತವೇ । ಇಣ್ ಗತೌ । ತುಮರ್ಥೇ ಸೇಸೇನಿತಿ ತವೇನ್ಪ್ರತ್ಯಯಃ । ಸಾಧುಯಾ । ಸುಪಾಂ ಸುಲುಗಿತಿ ವಿಭಕ್ತೇರ್ಯಾಜಾದೇಶಃ । ಅದರ್ಶಿ । ಕರ್ಮಣಿ ಲುಙ್ । ಚ್ಲೇಶ್ಚಿಣಾದೇಶಃ । ಚಿಣೋ ಲುಕ್ । ಪಾ. ೬-೪-೧೦೪ । ಇತಿ ತಶಬ್ದಸ್ಯ ಲುಕ್ । ಸ್ರುತಿಃ । ಸ್ರು ಗತೌ । ಕ್ತಿಚ್‌ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ ॥**

ಪ್ರತಿಪದಾರ್ಥ

**ಋತಸ್ಯ**— ಸೂರ್ಯನಿಗೆ । **ಪಾರಂ**— ರಾತ್ರಿಯ ಅಂತವಾದ ಉದಯಾದ್ರಿಯನ್ನು । **ಏತವೇ**— ಹೋಗಿ ಸೇರಲು । **ಪಂಥಾಃ**— ಮಾರ್ಗವು । **ಸಾಧುಯಾ**— ಯೋಗ್ಯವಾಗಿ । **ಅಭೂದು**— ಮಾಡಲ್ಪಟ್ಟೀ ಇದೆ. । **ದಿವಃ**— ತೇಜೋಮಯನಾದ ಸೂರ್ಯನ । **ಸ್ರುತಿಃ**— ಪ್ರಸರಿಸುವ ಕಾಂತಿಯು । **ವಿ ಅದರ್ಶಿ**— ಚೆನ್ನಾಗಿ ಗೋಚರವಾಗಿದೆ. (ಆದ್ದರಿಂದ ಅಶ್ವಿನೀದೇವತೆಗಳೇ, ನೀವೂ ಬನ್ನಿರಿ.) ।

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಕಗ್ಗತ್ತಲಿನಿಂದ ಕೂಡಿದ ರಾತ್ರಿಯು ಕೊನೆಗೊಂಡಿತು. ಅದರ ಅಂತವಾದ ಉದಯಾದ್ರಿಯನ್ನು ಸೇರಲು ಸೂರ್ಯದೇವನ ಮಾರ್ಗವು ಯೋಗ್ಯವಾದ ರೀತಿಯಲ್ಲಿದೆ. ತೇಜೋಮಯನಾದ ಸೂರ್ಯನ ಲೋಕಪ್ರಸರಣಸ್ವರೂಪವುಳ್ಳ ಕಾಂತಿಯು ಚೆನ್ನಾಗಿ ಗೋಚರವಾಗಿದೆ. ಇದು ನಿಮ್ಮ ಆಗಮನಕ್ಕೂ ಸಕಾಲವಾದುದರಿಂದ ದಯವಿಟ್ಟು ಬನ್ನಿರಿ.

English Translation

A fit path was made for the sun to go at the end of the night ( in the morning ); the radiance of the sun became visible.

ವಿಶೇಷವಿಷಯಗಳು

**ಋತಸ್ಯ—ಸೂರ್ಯಸ್ಯ** । ಅಂತರಿಕ್ಷದಲ್ಲಿ ಸಂಚಾರಮಾಡುವವನಾದುದರಿಂದ ಋತಸ್ಯ ಎಂದರೆ ಸೂರ್ಯನ

**ಸಾಧುಯಾ**— ಯೋಗ್ಯವಾದದ್ದಾಗಿ, ಸಂಚಾರಮಾಡಲು ಅನುಕೂಲವಾದದ್ದಾಗಿ.

**ಸ್ರುತಿಃ— ಸ್ರು ಗತೌ** । ಸುತ್ತಲೂ ಪ್ರಸರಿಸುವುದರಿಂದ ಸ್ರುತಿಃ ಎಂದರೆ ದೀಪ್ತಿಯು, ಕಾಂತಿಯು, ಪ್ರಕಾಶವು.

ವ್ಯಾಕರಣಪ್ರಕ್ರಿಯಾ

**ಏತವೇ—ತುಮರ್ಥೇಸೇಸೇನಸೇ—,** ಎಂಬುದರಿಂದ ಇಣ್ ಗತೌ ಧಾತು ಮುಂದೆ ತವೇನ್ ಪ್ರತ್ಯಯ ಗುಣ, ನಿತ್ಸ್ವರ ಆದ್ಯುದಾತ್ತ ಬರುತ್ತೆ.

**ಸಾಧುಯಾ**—ಸಾಧುಶಬ್ದದ ಮುಂದೆ ಪ್ರಥಮಾ ವಿಭಕ್ತಿ ಸು ಪ್ರತ್ಯಯ, ಅದಕ್ಕೆ **ಸುಪಾಂ ಸುಲುಕ್—,** ಎಂದು ಯಾಚ್ ಆದೇಶ.

**ಅದರ್ಶಿ**—ದೃಶಿರ್ ಪ್ರೇಕ್ಷಣೇ ಕರ್ಮಣಿ ಲುಙ್, ಚ್ಲಿ, **ಭಾವಕರ್ಮಣೋಃ** (ಪಾ. ಸೂ. ೧-೩-೧೩) ಎಂದು ತ ಪ್ರತ್ಯಯ. ದೃಶ್+ಚ್ಲಿ+ತ, **ಚಿಣ್ ಭಾವಕರ್ಮಣೋಃ** (ಪಾ. ಸೂ. ೩-೧-೬೬) ಭಾವಾರ್ಥ ಅಥವಾ ಕರ್ಮಾರ್ಥ ದಲ್ಲಿ ಇರುವ ತ ಶಬ್ದವು ಪರದಲ್ಲಿದ್ದರೆ ಚ್ಲಿಗೆ ಚಿಣ್ ಬರುತ್ತೆ ಎಂದು ಚ್ಲಿಗೆ ಚಿಣ್ ಬರುತ್ತೆ. ಅಟ್ ಆಗಮ. ಅ+ ದೃಶ್+ಇ+ತ, **ಚಿಣೋಲುಕ್** (ಪಾ. ಸೂ. ೬-೪-೧೦೪) ಚಿಣ್‌ಗಿಂತಲೂ ಪರದಲ್ಲಿರುವುದಕ್ಕೆ ಲುಕ್ ಬರುತ್ತೆ ಎಂದು ತಗೆ ಲೋಪ. ಲಘೂಪಧಗುಣ.

**ಸ್ರುತಿಃ**—ಸ್ರು ಗತೌ. **ಕ್ತಿಚ್ ಕ್ತೌ ಚ ಸಂಜ್ಞಾಯಾಂ** ಎಂದು ಕ್ತಿಚ್‌ಪ್ರತ್ಯಯ. **ಕ್ತಿತಿಚ** ಎಂದು ಗುಣಕ್ಕೆ ನಿಷೇಧ. ಪ್ರತ್ಯಯ ಚಿತ್. **ಚಿತಃ** ಎಂದು ಅಂತೋದಾತ್ತ ಬರುತ್ತೆ. ||೧೧||



|| ಸಂಹಿತಾಪಾಠಃ ||

ತತ್ತದಿದಶ್ವಿನೋರವೋ ಜರಿತಾ ಪ್ರತಿ ಭೂಷತಿ ।
ಮದೇ ಸೋಮಸ್ಯ ಪಿಪ್ರತೋಃ ॥ ೧೨ ॥

ಪದಪಾಠಃ

**ತತ್ಽತತ್ । ಇತ್ । ಅಶ್ವಿನೋಃ । ಅವಃ । ಜರಿತಾ । ಪ್ರತಿ । ಭೂಷತಿ ।**
**ಮದೇ । ಸೋಮಸ್ಯ । ಪಿಪ್ರತೋಃ ॥ ೧೨ ॥**

ಸಾಯಣಭಾಷ್ಯಂ

**ಜರಿತಾ ಸ್ತೋತಾಽಶ್ವಿನೋಃ ಸಂಬಂಧಿ ತತ್ತದಿತ್ ಪುನಃಪುನಃ ಕೃತಂ ಸರ್ವಮಸ್ಯವೋಽಸ್ಮದ್ವಿಷಯಂ ರಕ್ಷಣಂ ಪ್ರತಿ ಭೂಷತಿ । ಪ್ರತ್ಯೇಕಮಲಂಕರೋತಿ । ತದಾ ತದಾ ಪ್ರಶಂಸತೀತ್ಯರ್ಥಃ । ಕೀದೃಶಯೋರಶ್ವಿನೋಃ । ಮದೇ ಹರ್ಷೇ ನಿಮಿತ್ತಭೂತೇ ಸತಿ ಸೋಮಸ್ಯ ಪಿಪ್ರತೋಃ ಸೋಮಂ ಪೂರಯತೋಃ ॥ ಭೂಷತಿ । ಭೂಷ ಅಲಂಕಾರೇ । ಭೌವಾದಿಕಃ । ಪಿಪ್ರತೋಃ । ಪ್ರಾ ಪಾಲನಪೂರಣಯೋಃ । ಪ್ರ ಇತ್ಯೇಕೇ । ಅಸ್ಮಾಲ್ಲಟಃ ಶತೃ । ಜುಹೋತ್ಯಾದಿತ್ವಾಚ್ಛಪಃ ಶ್ಲುಃ । ದ್ವಿರ್ಭಾವೋರದತ್ವಹಲಾದಿಶೇಷಾಃ । ಅರ್ತಿಪಿಪರ್ತ್ಯೋಶ್ಚೇತ್ಯಭ್ಯಾಸಸ್ಯೇತ್ವಂ । ಶತುರ್ಜಸ್ತ್ವಾದ್ಗುಣಾಭಾವೇ ಯಣಾದೇಶಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥**

ಪ್ರತಿಪದಾರ್ಥ

**ಮದೇ**—ಹರ್ಷದಾಯಕವಾಗಿರಲು । **ಸೋಮಸ್ಯ**— ಸೋಮರಸದ । **ಪಿಪ್ರತೋಃ**— ಪೂರಣದಿಂದ ತೃಪ್ತಿಹೊಂದುವ । **ಅಶ್ವಿನೋಃ**—ಅಶ್ವಿನೀದೇವತೆಗಳ । **ತತ್ತದಿತ್ ಅವಃ**—(ಅವರು) ಪದೇ ಪದೇ ಅನುಗ್ರಹಿಸುವ ಪ್ರತಿಯೊಂದು ರಕ್ಷಣೆಯನ್ನೂ । **ಜರಿತಾ**— ಸ್ತೋತ್ರಮಾಡುವ ಭಕ್ತನು । **ಪ್ರತಿ ಭೂಷತಿ**— ಪ್ರತ್ಯೇಕವಾಗಿ ಅಲಂಕರಿಸುತ್ತಾನೆ. (ಪ್ರತಿಯೊಂದು ಕಾಲಗಲ್ಲೂ ಕೃತಜ್ಞತೆಯನ್ನು ಪ್ರಶಂಸೆಮಾಡುತ್ತಾನೆ. ।

॥ ಭಾವಾರ್ಥ ॥

ಯಾವಾಗಲೂ ಹರ್ಷಯುಕ್ತರಾಗಿರುವುದಕ್ಕಾಗಿ ಸೋಮಪಾನಮಾಡುವ ಅಶ್ವಿನೀದೇವತೆಗಳು ಆಗಾಗ ಅನುಗ್ರಹಿಸುವ ರಕ್ಷಣೆಗಳನ್ನು ಸ್ತೋತ್ರಮಾಡುವ ಯಜಮಾನನು ಕೃತಜ್ಞತೆಯಿಂದ ಪದೇ ಪದೇ ಪ್ರಶಂಸೆ ಮಾಡುತ್ತಾನೆ.

English Translation

The worshipper glorifies every protection extended to him by the Aswins who are exhilirated with the drinking of Soma.

॥ ವಿಶೇಷವಿಷಯಗಳು ॥

**ಭೂಷತಿ— ಭೂಷ ಅಲಂಕರಣೇ ।** ಅಲಂಕರಿಸುತ್ತಾನೆ ಎಂದರೆ ಪ್ರಶಂಸೆಮಾಡುತ್ತಾನೆ ಕೃತಜ್ಞತೆಯಿಂದ ಸ್ಮರಿಸುತ್ತಾನೆ.

**ಮದೇ ಸೋಮಸ್ಯ ಪಿಪ್ರತೋಃ**-ಮನಸ್ಸಿಗೆ ಆಹ್ಲಾದಕರವಾಗಿರುವುದಕ್ಕಾಗಿ ಸೋಮರಸವನ್ನು ಚೆನ್ನಾಗಿ (ಪೂರ್ಣವಾಗಿ) ಪಾನಮಾಡಿರುವ ಅಶ್ವಿನೀದೇವತೆಗಳ ಎಂದಭಿಪ್ರಾಯವು.

ವ್ಯಾಕರಣಪ್ರಕ್ರಿಯಾ

**ಭೂಷತಿ**—ಭೂಷ ಅಲಂಕಾರೇ ೧ನೇ ಗಣ. ಲಟ್, ತಿಪ್, ಶಪ್, ಭೂಷತಿ ಎಂದು ಆಗುತ್ತೆ ಸರ್ವಾನುದಾತ್ತ.

**ಪಿಪ್ರತೋಃ**—ಪ್ರಾ ಪಾಲನಪೂರಣಯೋಃ. ಇಲ್ಲಿ ಪೃ ಎಂದು ಹ್ರಸ್ವಾಂತವಾಗಿ ಕೆಲವರು ಪಠಿಸುವರು. ಪಾಣಿನ್ಯಾಚಾರ್ಯರ ಮತದಲ್ಲಿ ಪ್ರಾ ಧಾತುವಿಗೆ ಛಾಂದಸವಾಗಿ ಹ್ರಸ್ವ ಬರುತ್ತೆ ಎಂದರಿಯಬೇಕು. ಲಟ್, **ಲಟಶ್ಶತೃ-ಶಾನಚೌ** ಎಂದು ಶತೃ. ಶಪ್‌ಗೆ **ಜುಹೋತ್ಯಾದಿಭ್ಯಃ ಶ್ಲುಃ** ಎಂದು ಶ್ಲು. **ಶ್ಲೌ** ಎಂಬುದರಿಂದ ದ್ವಿತ್ವ. **ಉರತ್** (ಪಾ. ಸೂ. ೭-೪-೬೬) ಅಭ್ಯಾಸದಲ್ಲಿರುವ ಋಗೆ ಅಕಾರ ಬರುತ್ತೆ ಎಂದು ಅಕಾರ. ರಪರತ್ವ. **ಹಲಾದಿಃ ಶೇಷಃ** ಎಂದು ಅಭ್ಯಾಸದ ರೇಫಕ್ಕೆ ಲೋಪ. ಪ+ಪೃ+ಅತ್. **ಅರ್ತಿಪಿಪರ್ತ್ಯೋಶ್ಚ** (ಪಾ. ಸೂ. ೭-೪-೭೭) ಶ್ಲು ಬಂದಿದ್ದರೆ ಇವುಗಳ ಅಭ್ಯಾಸದ ಕೊನೆಯ ವರ್ಣಕ್ಕೆ ಇಕಾರ ಬರುತ್ತೆ ಎಂದು ಅಭ್ಯಾಸದ ಅಕಾರಕ್ಕೆ ಇಕಾರ. ಪಿಪೃ+ಅತ್. ಪ್ರಾ ಧಾತುವಿಗೆ ಗ್ರಹಣಮಾಡಿದ್ದರೆ **ಉದೋಷ್ಠ್ಯಪೂರ್ವಸ್ಯ** (ಪಾ. ಸೂ. ೭-೧-೧೦೨) ಎಂದು ಉತ್ತರಖಂಡಕ್ಕೆ ಉಕಾರಾದೇಶವು ಬರಬೇಕಾಗುತ್ತಿತ್ತು. **ಸಾರ್ವಧಾತುಕಮಪಿತ್** ಎಂದು ಶತೃ ಙಿತ್ ಆಗುತ್ತೆ. ಆದ್ದರಿಂದ ಗುಣ ಬರುವುದಿಲ್ಲ. **ಇಕೋಯಣಚಿ** ಎಂದು ಯಣಾದೇಶ. ಎಂದರೆ ಋಗೆ ರೇಫ. ಪಿಪ್ರತ್ ಎಂದಾಯಿತು. ಷಷ್ಠೀದ್ವಿವಚನ ಓಸ್. ರುತ್ವ, ವಿಸರ್ಗ, **ಅಭ್ಯಸ್ತಾನಾಮಾದಿಃ** ಎಂಬುದರಿಂದ ಆದ್ಯುದಾತ್ತ ಬರುತ್ತೆ. ॥ ೧೨ ॥

---

ಸಂಹಿತಾಪಾಠಃ

ವಾವಸಾನಾ ವಿವಸ್ವತಿ ಸೋಮಸ್ಯ ಪೀತ್ಯಾ ಗಿರಾ ।
ಮನುಷ್ವಚ್ಛಂಭೂ ಆ ಗತಂ ॥ ೧೩ ॥

॥ ಪದಪಾಠಃ ॥

ವವಸಾನಾ । ವಿವಸ್ವತಿ । ಸೋಮಸ್ಯ । ಪೀತ್ಯಾ । ಗಿರಾ ।
ಮನುಷ್ವತ್ । ಶಂಭೂ ಇತಿ ಶಂऽಭೂ । ಆ । ಗತಂ ॥ ೧೩ ॥

ಸಾಯಣಭಾಷ್ಯಂ

ಹೇ ಶಂಭೂ ಸುಖಸ್ಯ ಭಾವಯಿತಾರಾವಶ್ವಿನೌ ಮನುಷ್ವತ್ ಮನಾವಿವ ವಿವಸ್ವತಿ ಪರಿಚರಣವತಿ ಯಜಮಾನೇ ವವಸಾನಾ ನಿವಾಸಶೀಲೌ ಯುವಾಂ ಸೋಮಸ್ಯ ಪೀತ್ಯಾ ಸೋಮಸ್ಯ ಪಾನನಿಮಿತ್ತಂ ಗಿರಾ ಸ್ತುತಿನಿಮಿತ್ತಂ ಚಾ ಗತಂ । ಆಗಚ್ಛತಂ ॥ ವವಸಾನಾ । ವಸ ನಿವಾಸೇ । ತಾಚ್ಛೀಲ್ಯವಯೋವಚನೇತಿ

**ತಾಚ್ಛೀಲಿಕಶ್ಚಾನಶ್ । ಪಾ. ೩-೨-೧೨೯ । ಬಹುಲಂ ಛಂದಸೀತಿ ಶಪಃ ಶ್ಲುಃ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಮಭ್ಯಾಸಸ್ಯ ದೀರ್ಘತ್ವಂ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಚಿತ ಇತ್ಯಂತೋದಾತ್ತತ್ವಂ । ಪೀತ್ಯೈ । ಪಾ ಪಾನೇ । ಸ್ಥಾಗಾಪಾಪಚೋ ಭಾವ ಇತಿ ಭಾವೇ ಕ್ತಿನ್ । ಘುಮಾಸ್ಥೇತೀತ್ವಂ । ವ್ಯತ್ಯಯೇನಾಂತೋದಾತ್ತತ್ವಂ । ತೃತೀಯೈಕವಚನೇ ಯಣಾದೇಶ ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ । ಮನುಷ್ವತ್ । ಮನ ಜ್ಞಾನೇ । ಮನ್ಯತೇ ಜಾನಾತೀತಿ ಮನುಃ । ಬಹುಲವಚನಾದೌಣಾದಿಕ ಉಸಿಪ್ರತ್ಯಯಃ । ತತ್ರ ತಸ್ಯೇವೇತಿ ಸಪ್ತಮ್ಯರ್ಥೇ ವತಿಃ । ಪ್ರತ್ಯಯಸ್ವರಃ । ಗತಂ । ಗಮೇರ್ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ ॥**

॥ ಪ್ರತಿಪದಾರ್ಥ ॥

**ಶಂಭೂ**— ಸುಖ ಸಂಪಾದಕರಾದ ಅಶ್ವಿನೀದೇವತೆಗಳೇ । **ಮನುಷ್ವತ್**— ಮನುವಿನ (ಜೊತೆಯಲ್ಲಿ) ಹೇಗೋ ಹಾಗೆ । **ವಿವಸ್ವತಿ**—(ನಿಮ್ಮನ್ನು) ಉಪಚಾರಮಾಡತಕ್ಕ ಯಜಮಾನನಲ್ಲಿ (ಅವನೊಂದಿಗೆ) ।**ವವಸಾನಾ**-ವಾಸಮಾಡುವ ಸ್ವಭಾವವುಳ್ಳ ನೀವು । **ಸೋಮಸ್ಯ**— ಸೋಮರಸದ । **ಪೀತ್ಯಾ**—ಪಾನನಿಮಿತ್ತವಾಗಿಯೂ । **ಗಿರಾ**— ಸ್ತುತಿನಿಮಿತ್ತವಾಗಿಯೂ । **ಆ ಗತಂ**— ದಯಮಾಡಿಬನ್ನಿರಿ. ।

ಭಾವಾರ್ಥ

ಯಜಮಾನನಿಗೆ ಸುಖವನ್ನುಂಟುಮಾಡುವ, ಮತ್ತೂ ನಿಮ್ಮನ್ನು ಉಪಚರಿಸುವ ಅವನೊಂದಿಗೆ ವಾಸ ಮಾಡಲಿಚ್ಛಿಸುವ ಎಲೈ ಅಶ್ವಿನೀದೇವತೆಗಳೇ, ಮನುವಿನ ಬಳಿಗೆ ಹೋದಂತೆ ಸೋಮಪಾನಕ್ಕಾಗಿಯೂ ನಾವು ಮಾಡುವ ಸ್ತೋತ್ರಸ್ವೀಕಾರಕ್ಕಾಗಿಯೂ ಇಲ್ಲಿಗೆ ಬನ್ನಿ.

English Translation

Beneficient Aswins, co-dwellers with your worshipper as with Manu, come hither to drink of the soma-juice and accept our praise.

ವಿಶೇಷವಿಷಯಗಳು

**ವವಸಾನಾ— ವಸ ನಿವಾಸೇ । । ನಿವಾಸಶೀಲೌ ।** ವಾಸಮಾಡುವವರಾದ ಅಥವಾ ಯಜಮಾನನ ರಕ್ಷಣೆಗಾಗಿ ಅವನ ಸಮೀಪದಲ್ಲಿಯೇ ಇರುವ.

**ವಿವಸ್ವತಿ**—ಸಪ್ತಮ್ಯೇಕವಚನ. ನಿಮ್ಮನ್ನು ಸೇವೆಮಾಡುವ ಯಜಮಾನನಲ್ಲಿ ಎಂದರೆ ಯಜಮಾನನ ಗೃಹದಲ್ಲಿ ಅಥವಾ ಅವನ ಸಮೀಪದಲ್ಲಿ

**ಗಿರಾ**— ಸ್ತುತಿರೂಪವಾದ ವಾಕ್ಯಗಳನ್ನು ಕೇಳುವುದಕ್ಕಾಗಿ.

**ಮನುಷ್ವತ್**— ಮನುವಿನಂತೆ ಎಂದರೆ ನೀವು ಮನುವಿನ ಜತೆಯಲ್ಲಿದ್ದು ಅವನ ಯಜ್ಞದಲ್ಲಿ ಸೋಮಪಾನ ಮಾಡಿ ಅವನ ಸ್ತೋತ್ರಗಳನ್ನು ಕೇಳಿದಂತೆ ಇಲ್ಲಿಗೂ ಬಂದು ಸೋಮಪಾನಮಾಡಿ ಸ್ತೋತ್ರವನ್ನು ಸ್ವೀಕರಿಸಿ ಎಂದಭಿಪ್ರಾಯವು.

॥ ಪ್ರತಿಪದಾರ್ಥ ॥

**ವಾವಸಾನಾ**—ವಸ ನಿವಾಸೇ ಧಾತು. **ತಾಚ್ಛೀಲ್ಯವಯೋವಚನ ಶಕ್ತಿಷು ಚಾನಶ್** (ಪಾ. ಸೂ ೩-೨-೧೨೯) ತಾಚ್ಛೀಲ್ಯ ಎಂದರೆ ಅದೇ ಸ್ವಭಾವವಾಗಿರುವಿಕೆ, ವಯಸ್ಸು, ಶಕ್ತಿ, ಇವು ತೋರುವಾಗ ಧಾತುಗಳ ಮುಂದೆ ಚಾನಶ್ ಪ್ರತ್ಯಯ ಬರುತ್ತೆ ಎಂದು ಚಾನಶ್. ವಸ್+ಆನ. ಶಪ್. ಇದಕ್ಕೆ **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂದು ಶ್ಲು ಬರುತ್ತೆ. **ಶ್ಲೌ** ಎಂದು ದ್ವಿತ್ವ. **ಹಲಾದಿಃಶೇಷಃ** ಎಂದು ಅಭ್ಯಾಸದಲ್ಲಿರುವ ಸಕಾರಕ್ಕೆ ಲೋಪ. ವವಸ್+ಆನ. **ಅನ್ಯೇಷಾಮಪಿ ದೃಶ್ಯತೇ** ಎಂಬುದರಿಂದ ಮೊದಲನೆ ವ ಶಬ್ದಕ್ಕೆ ದೀರ್ಘ ವಾವಸಾನ ಎಂದು ಆಯಿತು. ಸಂಬೋಧನ ಪ್ರಥಮಾ ದ್ವಿವಚನಕ್ಕೆ **ಸುಪಾಂ ಸುಲುಕ್—,** ಎಂದು ಆಕಾರಾದೇಶ. ಚಾನಶ್ ಪ್ರತ್ಯಯ ಚಿತ್ ಆದ್ದರಿಂದ **ಚಿತಃ** ಎಂಬುದರಿಂದ ಅಂತೋದಾತ್ತ ಬರುತ್ತೆ.

**ಪೀತ್ಯಾ**—ಪಾ ಪಾನೇ. **ಸ್ಥಾಗಾ ಪಾ ಪಚೋ ಭಾವೇ** (ಪಾ. ಸೂ. ೩-೩-೯೫) ಈ ಧಾತುಗಳ ಮುಂದೆ ಭಾವಾರ್ಥದಲ್ಲಿ ಕ್ತಿನ್ ಬರುತ್ತೆ ಎಂದು ಕ್ತಿನ್ ಪ್ರತ್ಯಯ. ಪಾ+ತಿ. **ಘು ಮಾ ಸ್ಥಾ ಗಾ ಪಾ ಜಹಾತಿ ಸಾಂ ಹಲಿ** (ಪಾ. ಸೂ. ೬-೪-೬೬) ಕಿತ್ ಅಥವಾ ಙಿತ್ ಆದ ಹಲಾದಿಯಾದ ಆರ್ಧಧಾತುಕ ಪರದಲ್ಲಿದ್ದರೆ ಈ ಧಾತುಗಳಿಗೆ ಈತ್ವ ಬರುತ್ತೆ ಎಂದು ಈತ್ವ. ಪಿ+ತಿ. ಪ್ರತ್ಯಯ ನಿತ್ **ಞ್ನಿತ್ಯಾದಿರ್ನಿತ್ಯಮ್** ಎಂದು ಆದ್ಯುದಾತ್ತ ಬರುವುದು ಯುಕ್ತ. ಆದರೂ ಇಲ್ಲಿ ಛಾಂದಸವಾಗಿ ಅಂತೋದಾತ್ತ ಬರುತ್ತೆ. ತೃತೀಯಾ ಏಕವಚನ ಟಾ ಪ್ರತ್ಯಯ ಪೀತಿ+ಆ. **ಇಕೋ ಯಣಚಿ** ಎಂದು ಇಕಾರಕ್ಕೆ ಯಕಾರ. **ಉದಾತ್ತಯಣೋಹಲ್ಪೂರ್ವಾತ್** (ಪಾ. ಸೂ. ೬-೧-೧೭೪) ಉದಾತ್ತದ ಸ್ಥಾನದಲ್ಲಿ ಬಂದ ಯಾವ ಯಣ್ ಇದೆಯೋ ಅದು ವ್ಯಂಜನಪೂರ್ವಕವಾಗಿದ್ದರೆ ಅದರ ಮುಂದೆ ಇರುವ ನದೀಸಂಜ್ಞಿಕವರ್ಣವೂ ಶಸಾದಿವಿಭಕ್ತಿಯೂ ಉದಾತ್ತವಾಗುವುದು ಎಂದು ವಿಭಕ್ತಿಗೆ ಉದಾತ್ತ ಬರುತ್ತೆ.

**ಮನುಷ್ವತ್**—ಮನ ಜ್ಞಾನೇ ಧಾತು. ಮನ್ಯತೇ=ಜಾನಾತಿ ಎಂದರೆ ತಿಳಿಯುವವನು ಎಂದು ವಿಗ್ರಹ ಮಾಡಿದರೆ ಮನಃ ಎಂದಾಗುತ್ತೆ. **ಉಣಾದಯೋ ಬಹುಲಂ** ಎಂದು ಬಹುಲಗ್ರಹಣವಿರುವುದರಿಂದ ಮನ್ ಧಾತು ಮುಂದೆ ಉಸಿ ಎಂಬ ಉಣಾದಿ ಪ್ರತ್ಯಯ ಬರುತ್ತೆ ಮನುಸ್ ಎಂದಾಯಿತು. **ತತ್ರ ತಸ್ಯೇವ** (ಪಾ. ಸೂ. ೫-೧-೧೧೬) ಎಂಬುದರಿಂದ ಸಪ್ತಮ್ಯಂತದ ಮುಂದೆ ವತಿ ಪ್ರತ್ಯಯ. **ಆದ್ಯುದಾತ್ತಶ್ಚ**—ಎಂದು ಪ್ರತ್ಯಯ ಆದ್ಯುದಾತ್ತ.

**ಗತಮ್**—ಗಮ್ಲೃ ಗತೌ. ಲೋಟ್. ಮಧ್ಯಮಪುರುಷ ಬಹುವಚನ ಥ ಪ್ರತ್ಯಯ ಲಪ್ಸದ್ಭಾವ. **ತಸ್ಥ-ಸ್ಥಮಿಪಾಂ—,** ಎಂದು ತ ಆದೇಶ. **ಬಹುಲಂ ಛಂದಸಿ** ಎಂದು ಶಪ್‌ಗೆ ಲುಕ್. **ಅನುದಾತ್ತೋಪದೇಶ ವನತಿ ತನೋತ್ಯಾದೀನಾಮನುನಾಸಿಕಲೋಪೋ ಝಲಿ ಕ್ಜಿತಿ** (ಪಾ. ಸೂ. ೬-೪-೩೭) ಎಂದು ಮಕಾರಕ್ಕೆ ಲೋಪ.॥೧೩॥

ಸಂಹಿತಾಪಾಠಃ

ಯುವೋರುಷಾ ಅನು ಶ್ರಿಯಂ ಪರಿಜ್ಮನೋರುಪಾಚರತ್ ।

ಋತಾ ವನಥೋ ಅಕ್ತುಭಿಃ ॥ ೧೪ ॥

ಪದಪಾಠಃ

ಯುವೋಃ । ಉಷಾಃ । ಅನು । ಶ್ರಿಯಂ । ಪರಿಽಜ್ಮನೋಃ । ಉಪಽಆ-
ಚರತ್ ।
ಋತಾ । ವನಥಃ । ಅಕ್ತುಽಭಿಃ ॥ ೧೪ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಪರಿಜ್ಮನೋಃ ಪರಿತೋ ಗಂತ್ರೋರ್ಯುವೋರ್ಯುವಯೋರುಭಯೋಃ ಶ್ರಿಯಮನು ಆಗಮನರೂಪಾಂ ಶೋಭಾಮನುಸೃತ್ಯೋಷಾ ಉಪಾಚರತ್ । ಉಷಃಕಾಲದೇವತೇಹಾಗಚ್ಛತು । ಯುವಯೋರಾಗತಯೋಃ ಸತೋಃ ಪಶ್ಚಾದಾಗತೇತ್ಯರ್ಥಃ । ಯುವಾಂ ಚಾಕ್ತುಭೀ ರಾತ್ರಿಭಿರ್ಋತಾ ಯಜ್ಞಗತಾನಿ ಹವೀಂಷಿ ವನಥಃ । ಕಾಮಯೇಥೇ । ಸಂಭಜೇಥೇ ॥ ಯುವೋಃ । ಯುಷ್ಮಚ್ಛಬ್ದಾತ್ ಷಷ್ಠೀದ್ವಿವಚನಸ್ಯ ಸುಪಾಂ ಸುಲುಗಿತಿ ಭವಂತೀತಿ ಷಷ್ಠೀದ್ವಿವಚನಾದೇಶಃ । ಅತ ಆದೇಶವಿಷಯತ್ವಾದ್ಯೋಽಚೀತಿ ಯತ್ವಾಭಾವಃ । ಶೇಷೇ ಲೋಪಃ । ಪರಿಜ್ಮನೋಃ । ಪರಿತೋಽಜತೋ ಗಚ್ಛತ ಇತಿ ಪರಿಜ್ಮಾನೌ । ಶ್ವನ್ನುಕ್ಷನ್ನಿತ್ಯಾದಿನಾಜತೇರ್ಮನಿನ್ಪ್ರತ್ಯಯಾಂತೋ ನಿಪಾತಿತಃ । ಋತಾ । ಶೇಶ್ಛಂದಸೀತಿ ಶೇರ್ಲೋಪಃ । ವನಥಃ । ವನ ಷಣ ಸಂಭಕ್ತೌ । ತಿಙ್ಙತಿಙ ಇತಿ ನಿಘಾತಃ ॥

ಪ್ರತಿಪದಾರ್ಥ

(ಅಶ್ವಿನೌ—ಎಲೈ ಅಶ್ವಿನೀದೇವತೆಗಳೇ) । **ಪರಿಜ್ಮನೋಃ**—ಸುತ್ತಲೂ ಸಂಚರಿಸತಕ್ಕ । **ಯುವೋಃ**—ನಿಮ್ಮಿಬ್ಬರ । **ಶ್ರಿಯಂ ಅನು**— (ಆಗಮನರೂಪವಾದ) ಕಾಂತಿಯನ್ನನುಸರಿಸಿ । **ಉಷಾಃ**—ಉಷಃಕಾಲ ದೇವತೆಯು । **ಉಪಾಚರತ್**— ಇಲ್ಲಿಗೆ ಬರಲಿ. (ನೀವಿಬ್ಬರೂ ಸಹ) । **ಅಕ್ತುಭಿಃ**— ರಾತ್ರಿಕಾಲಗಳಲ್ಲಿ (ಕೊಡಲ್ಪಡುವ) । **ಋತಾ**—ಯಜ್ಞಹವಿಸ್ಸುಗಳನ್ನು । **ವನಥಃ**—ಇಚ್ಛಿಸಿ ಸೇವಿಸುತ್ತೀರಿ ।

ಭಾವಾರ್ಥ

ಲೋಕವನ್ನೆಲ್ಲ ಸುತ್ತಲೂ ಸಂಚರಿಸುವ ಸ್ವಭಾವವುಳ್ಳ ಎಲೈ ಅಶ್ವಿನೀದೇವತೆಗಳೇ. ನಿಮ್ಮಿಬ್ಬರ ಆಗಮನ ರೂಪವಾದ ಕಾಂತಿಯನ್ನನುಸರಿಸಿ ಉಷಃಕಾಲದೇವತೆಯು ಇಲ್ಲಿಗೆ ಬರಲಿ. ನೀವಿಬ್ಬರೂ ರಾತ್ರಿಕಾಲಗಳಲ್ಲಿ ನಿಮಗಾಗಿ ಅರ್ಪಿಸಲ್ಪಡುವ ಯಜ್ಞಹವಿಸ್ಸನ್ನು ಸೇವಿಸುತ್ತೀರಿ.

## English Translation

O Aswins, let Ushas follow the bright appearance of you who go round the universe and may you be pleased with the oblations offered by night.

ವಿಶೇಷವಿಷಯ

ಮು ಖ್ಯಾ ಭಿ ಪ್ರಾ ಯ ವು—ಎಲೈ ಅಶ್ವಿನೀದೇವತೆಗಳೇ, ನೀವು ಎಲ್ಲ ಕಡೆಯಲ್ಲಿಯೂ ಸಂಚರಿಸುವ ಸಾಮರ್ಥ್ಯವುಳ್ಳವರು. ಉಷಃಕಾಲಕ್ಕೆ ಮುಂಚಿತವಾಗಿಯೇ ನಿಮ್ಮ ಆಗಮನವು. ನೀವು ಬಂದನಂತರ ನಿಮ್ಮನ್ನನು ಸರಿಸಿಯೇ ಉಷೋದೇವತೆಯು ಬರುವಳು ನೀವು ಬಂದಮೇಲೆ ಉಷಃಕಾಲವು ಪ್ರಾಪ್ತವಾಗುವುದು. ನೀವು ಬರುವಾಗ ಇನ್ನೂ ಉಷಃಕಾಲವಾಗದೆ ಕತ್ತಲೆಯಿಂದ ಕೂಡಿದ ರಾತ್ರಿಯೇ ಇರುವುದರಿಂದ ಅಂತಹ ರಾತ್ರಿಕಾಲ ಗಳಲ್ಲಿ ಅರ್ಪಿಸುವ ಹವಿಸ್ಸುಗಳನ್ನು ನೀವು ಸ್ವೀಕರಿಸಿ ತೃಪ್ತಿಯನ್ನು ಹೊಂದುವಿರಿ.

**ಪರಿಜ್ಮಾನೋಃ— ಪರಿತೋ ಅಜತೋ ಗಚ್ಛತ ಇತಿ ಪರಿಜ್ಮಾನೌ |** ಸುತ್ತಲೂ ಎಂದರೆ ಎಲ್ಲಾ ಕಡೆಯಲ್ಲಿಯೂ ಹೋಗುವವರಾದ.

**ಋತಾ— ಯಜ್ಞಗತಾನಿ ಹವೀಂಷಿ |** ಯಜ್ಞಗಲ್ಲಿ ಸಮರ್ಪಿಸುವ ಹವಿಸ್ಸುಗಳನ್ನು

**ವನಥಃ—ವನ ಷಣ ಸಂಭಕ್ತೌ |** ಹೊಂದುವಿರಿ, ಹೊಂದಲಿಚ್ಛಿಸುವಿರಿ.

**ಅಕ್ತುಭಿಃ**—ರಾತ್ರಿಕಾಲಗಳಲ್ಲಿ. ಅಕ್ತುಭೀ ರಾತ್ರಿಭಿಃ ಎಂದು ನಿರುಕ್ತವಚನವಿರುವುದು. (ನಿ. ೧೨-೨೩)

ವ್ಯಾಕರಣಪ್ರಕ್ರಿಯಾ

**ಯುವೋಃ**—ಯುಷ್ಮದ್ ಶಬ್ದದ ಮುಂದೆ ಷಷ್ಠೀ ದ್ವಿವಚನ ಓಸ್. 'ಸುಪಾಂ ಸುಪೋ ಭವನ್ತಿ' ಎಂದು ಓಸ್‌ಗೆ ಓಸ್ ಬರುತ್ತೆ. ಆದ್ದರಿಂದ **ಯೋಽಚಿ** (ಪಾ. ಸೂ. ೭-೨-೮೯) ಆದೇಶವನ್ನು ಹೊಂದದ ಅಜಾದಿ ವಿಭಕ್ತಿ ಪರದಲ್ಲಿದ್ದರೆ ಯುಷ್ಮದ್ ಅಸ್ಮದ್ ಶಬ್ದಗಳ ಕೊನೆಯ ವರ್ಣಕ್ಕೆ ಯಕಾರ ಬರುತ್ತೆ ಎಂದು ಯಕಾರ ಬರುವುದಿಲ್ಲ. **ಶೇಷೇ ಲೋಪಃ** (ಪಾ. ಸೂ. ೭-೨-೯೦) ವಿಭಕ್ತಿ ಪರದಲ್ಲಿರುವಾಗ ಯುಷ್ಮದಸ್ಮಚ್ಛಬ್ದಗಳ ಮಪರ್ಯಂತಕ್ಕಿಂತಲೂ ಶಿಷ್ಟವಾದುದಕ್ಕೆ ಲೋಪ ಬರುತ್ತೆ ಎಂದು ಅದ್‌ಗೆ ಲೋಪ ಯುವೋಸ್. ರುತ್ವವಿಸರ್ಗಗಳು. ಉದಾತ್ತ ನಿವೃತ್ತಿ ಸ್ವರದಿಂದ ವಿಭಕ್ತಿಯು ಉದಾತ್ತವಾಗುತ್ತೆ. **ಶೇಷೇ ಲೋಪಃ** ಎಂಬುದಕ್ಕೆ. ಆತ್ವಯತ್ವ ನಿಮಿತ್ತೇತರವಾದ ವಿಭಕ್ತಿ ಪರದಲ್ಲಿರುವಾಗ ಯುಷ್ಮದಸ್ಮಚ್ಛಬ್ದಗಳ ಕೊನೆಯ ವರ್ಣಕ್ಕೆ ಲೋಪ ಬರುತ್ತೆ ಯುವ+ಓಸ್. **ಓಸಿಚ** ಎಂಬುದರಿಂದ ಏತ್ವವು ಛಾಂದಸವಾಗಿ ಬರುವುದಿಲ್ಲ. **ಅತೋ ಗುಣೇ** ಎಂದು ಪರರೂಪ. ಏಕಾದೇಶಸ್ವರ.

**ಪರಿಜ್ಮನೋಃ—ಶ್ವನ್ನುಕ್ಷನ್ಪೂಷನ್ಪ್ಲೀಹನ್‌ಕ್ಲೇದನ್ ಸ್ನೇಹನ್ ಮೂರ್ಧನ್‌ಮಜ್ಜನ್ನ-ರ್ಯಮನ್ ವಿಶ್ವಪನ್ ಪರಿಜ್ಮನ್ ಮಾತರಿಶ್ವನ್ ಮಘವನ್ನಿತಿ** (ಉ. ಸೂ ೧-೧೫೭) ಎಂಬುದರಿಂದ ಅಜ ಧಾತು ಮುಂದೆ ಮನಿನ್ ಪ್ರತ್ಯಯ. ಅಕಾರಕ್ಕೆ ಛಾಂದಸವಾಗಿ ಲೋಪ.

**ಋತಾ—ಶೇಶ್ಛಂದಸಿ ಬಹುಲಂ** ಎಂದು ಶಿಗೆ ಲೋಪ ಬರುತ್ತದೆ.

**ವನಥಃ**—ವನ ಷಣ ಸಂಭಕ್ತೌ ಎಂದು ಪಠಿಸಿರುವ ವನಧಾತುಮುಂದೆ ಲಟ್ ಮಧ್ಯಮಪುರುಷ ದ್ವಿವಚನ ಥಸ್, ಶಪ್, ರುತ್ವ, ವಿಸರ್ಗ, **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುತ್ತದೆ || ೧೪ ||

॥ ಸಂಹಿತಾಪಾಠಃ ॥

ಉಭಾ ಪಿಬತಮಶ್ವಿನೋಭಾ ನಃ ಶರ್ಮ ಯಚ್ಛತಂ ।
ಅವಿದ್ರಿಯಾಭಿರೂತಿಭಿಃ ॥ ೧೫ ॥

॥ ಪದಪಾಠಃ ॥

ಉಭಾ । ಪಿಬತಂ । ಅಶ್ವಿನಾ । ಉಭಾ । ನಃ । ಶರ್ಮ । ಯಚ್ಛತಂ ।
ಅವಿದ್ರಿಯಾಭಿಃ । ಊತಿಽಭಿಃ ॥ ೧೫ ॥

॥ ಸಾಯಣಭಾಷ್ಯಂ ॥

ಪ್ರವರ್ಗ್ಯೇ ಪೌರ್ವಾಹ್ಣಿಕೇ ಘರ್ಮಸ್ಯ ಹವಿಷೋ ದ್ವಿತೀಯಾ ಯಾಜ್ಯೋಭಾ ಪಿಬತಮಿತ್ಯೇಷಾ । ಅಥೋತ್ತರಮಿತಿ ಖಂಡೇ ಸೂತ್ರಿತಂ । ಉಭಾ ಪಿಬತಮಶ್ವಿನೇತಿ ಚೋಭಾಭ್ಯಾಮನವಾನಂ । ಆ. ೪-೭ । ಇತಿ ॥ ಆಶ್ವಿನಶಸ್ತ್ರೇಽಪ್ಯೇಷಾ ದ್ವಿತೀಯಾ ಯಾಜ್ಯಾ । ಸೂತ್ರಿತಂ ಚ । ಪ್ರ ವಾಮಂಧಾಂಸಿ ಮದ್ಯಾನ್ಯಸ್ಥುರುಭಾ ಪಿಬತಮಶ್ವಿನೇತಿ ಯಾಜ್ಯೇ । ಆ. ೬-೫ । ಇತಿ ॥

ಹೇ ಅಶ್ವಿನಾ ಉಭಾ ಯುವಾಮುಭೌ ಪಿಬತಂ । ಸೋಮಪಾನಂ ಕುರುತಂ । ತತ ಊರ್ಧ್ವಮುಭಾ ಯುವಾಮುಭಾವವಿದ್ರಿಯಾಭಿಃ ಪ್ರಶಸ್ತಾಭಿರೂತಿಭೀ ರಕ್ಷಾಭಿರ್ನೋಽಸ್ಮಭ್ಯಂ ಶರ್ಮ ಸುಖಂ ಯಚ್ಛತಂ ॥ ಪಿಬತಂ । ಪಾ ಪಾನೇ । ಲೋಟಿ ಶಪಿ ಪಾಘ್ರೇತ್ಯಾದಿನಾ ಪಿಬಾದೇಶಃ । ಅಂಗವೃತ್ತೇ ಪುನರ್ವೃತ್ತಾವವಿಧಿರ್ನಿಷ್ಠಿತಸ್ಯೇತಿ । ಮ. ೭-೩-೭೮-೨ । ಪರಿ. ೯೨ । ವಚನಾಲ್ಲಘೂಪಧಗುಣಾಭಾವಃ । ಯದ್ವಾ । ಅದ್ಯುದಾತ್ತೋಽದಂತಃ ಪಿಬಾದೇಶಃ । ತಿಙ್ಙತಿಙ ಇತಿ ನಿಘಾತಃ । ಯಚ್ಛತಂ । ದಾಣ್ ದಾನೇ । ಲೋಟಿ ಶಪಿ ಪಾಘ್ರೇತ್ಯಾದಿನಾ ಯಚ್ಛಾದೇಶಃ । ಅವಿದ್ರಿಯಾಭಿಃ । ದ್ರಾ ಕುತ್ಸಾಯಾಂ ಗತೌ । ವಿಪೂರ್ವಾದಸ್ಮಾದ್ಧಾವ ಔಣಾದಿಕಃ ಕಿಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ವಿದ್ರಿರ್ನಿಂದಾ । ತದ್ವಿರೋಧಿನ್ಯವಿದ್ರಿಃ ಸ್ತುತಿಃ । ತಾಂ ಯಾಂತೀತ್ಯವಿದ್ರಿಯಾಃ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ವಿಚ್ । ಕೃದುತ್ತರಪದಪ್ರಕೃತಿಸ್ವರತ್ವಂ । ಊತಿಭಿಃ । ಅವತೇಃ ಕ್ತಿನಿ ಜ್ವರತ್ವರೇತ್ಯಾದಿನೋಟ್ । ಊತಿಯೂತೀತ್ಯಾದಿನಾ ಕ್ತಿನ ಉದಾತ್ತತ್ವಂ ॥ ೩೫ ॥

ಪ್ರತಿಪದಾರ್ಥ

ಅಶ್ವಿನಾ— ಎಲೈ ಅಶ್ವಿನೀದೇವತೆಗಳೇ । ಉಭಾ— ನೀವಿಬ್ಬರೂ । ಪಿಬತಂ—ಸೋಮರಸಪಾನವನ್ನು ಮಾಡಿ (ಅನಂತರ) । ಉಭಾ— ನೀವಿಬ್ಬರೂ । ಅವಿದ್ರಿಯಾಭಿಃ— ನಿಂದಾತೀತಗಳಾಗಿರುವ (ಅದ್ದರಿಂದ

ಪ್ರಶಸ್ಯಗಳಾಗಿರುವ) । **ಊತಿಭಿಃ**— ನಿಮ್ಮ ರಕ್ಷಣೆಗಳಿಂದ । **ನಃ**— ನಮಗೆ । **ಶರ್ಮ**—ಸುಖವನ್ನು । **ಯಚ್ಛತಂ**— ಕೊಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ದಯಮಾಡಿ ಸೋಮರಸಪಾನವನ್ನು ಮಾಡಿರಿ. ಅನಂತರ ನೀವಿಬ್ಬರೂ ದೋಷರಹಿತವಾಗಿಯೂ ಆದುದರಿಂದಲೇ ಪ್ರಶಸ್ಯವಾಗಿಯೂ ಇರುವ ನಿಮ್ಮ ರಕ್ಷಣೆಗಳಿಂದ ನಮಗೆ ಸುಖವನ್ನು ಕೊಡಿರಿ. (ಸುಖವನ್ನುಂಟುಮಾಡಿ)

## English Translation

O Aswins, drink you both ( the soma libation ) and bestow upon us happiness through your blameless protection

॥ ವಿಶೇಷವಿಷಯಗಳು ॥

ಪ್ರವರ್ಗ್ಯವೆಂಬ ಯಾಗದಲ್ಲಿ ಪೂರ್ವಾಹ್ಣಕಾಲದಲ್ಲಿ ಘರ್ಮವೆಂಬ ಹವಿಸ್ಸನ್ನು ಹೋಮಮಾಡುವಾಗ ಉಭಾ ಪಿಬತಂ ಎಂಬ ಈ ಋಕ್ಕನ್ನು ಎರಡನೆಯ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರಗ ಅಥೋತ್ತರಂ ಎಂಬ ಖಂಡಗಲ್ಲಿ **ಉಭಾಪಿಬತಮಶ್ವಿನೇತಿ ಚೋಭಾಭ್ಯಾಮನವಾನಂ** ಎಂಬ ಸೂತ್ರದಿಂಗ ವಿವೃತವಾಗಿರುವುದು. (ಆ. ೪-೭) ಮತ್ತು ಆಶ್ವಿನಶಸ್ತ್ರಮಂತ್ರಪಠನಕಾಲಗಲ್ಲಿಯೂ ಈ ಋಕ್ಕನ್ನು ಎರಡನೆಯ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿಯೇ **ಪ್ರ ವಾಮಂಧಾಂಸಿ ಮದ್ಯಾನ್ಯಸ್ಥು** ( ಖ. ಸಂ. ೭-೬೮-೨ ) **ರುಭಾ ಪಿಬತಮಶ್ವಿನೇತಿ ಯಾಜ್ಯೇ** ( ಋ. ಸ. ೧-೪೬-೧೫ ) ಎಂಬ ಸೂತ್ರನಲ್ಲಿ ಹೇಳಿರುವುದು

**ಅವಿದ್ರಿಯಾಭಿಃ ಊತಿಭಿಃ—ದ್ರಾ ಕುತ್ಸಾಯಾಂ ಗತೌ** । **ವಿದ್ರಿರ್ನಿಂದಾ** । **ತದ್ಭಿರೋಧಿನ್ಯವಿದ್ರಿಃ ಸ್ತುತಿಃ** । **ತಾಂ ಯಾಂತೀತ್ಯವಿದ್ರಿಯಾಃ ತಾಭಿಃ** । ವಿಪೂರ್ವಕದ್ರಾಧಾತುವಿಗೆ ನಿಂದನೆಮಾಡುವುದು ಎಂದರ್ಥವು. ವಿದ್ರಿ ಎಂದರೆ ನಿಂದೆಯು. ಅವಿದ್ರಿಯೆಂದರೆ ನಿಂದೆಯಲ್ಲದ್ದು, ಸ್ತುತಿಯೆಂದರ್ಥವು. ಅವಿದ್ರಿಯಾಭಿಃ ಎಂದರೆ ಸ್ತುತಿರೂಪವಾದ ಅಥವಾ ಪ್ರಶಸ್ಯವಾದ, ಉತ್ತಮವಾದ ರಕ್ಷಣೆಗಳಿಂದ ಎಂದಭಿಪ್ರಾಯವು

ವ್ಯಾಕರಣಪ್ರಕ್ರಿಯಾ

**ಪಿಬತಮ್**—ಪಾ ಪಾನೇ, **ಲೋಟ್**-ಥಗೆ ತಮ್ ಆದೇಶ. ಶಪ್, **ಪಾಘ್ರಾಧ್ಮಾ—,** ಎಂದು ಪಾಗೆ ಪಿಬ್ ಆದೇಶ. ಪಿಬ್+ಅ+ತಮ್. ಈಗ ಶಪ್ಪನ್ನು ನಿಮಿತ್ತಮಾಡಿಕೊಂಡು **ಪುಗಂತ** ಲಘೂಪಧಸ್ಯ ಚ ಎಂದು ಲಘೂಪಧಗುಣವು ಪ್ರಾಪ್ತವಾಗುತ್ತೆ. ಆದರೂ, **ಅಂಗವೃತ್ತೇ ಪುನರ್ವೃತ್ತಾವವಿಧಿರ್ನಿಷ್ಠಿತಸ್ಯ** ( ಪಾ. ಸೂ. ೭-೩-೭೮—ಪರಿಭಾ ೯೨ ) ಅಂಗಾಧಿಕಾರದಲ್ಲಿರುವ ಒಂದು ಶಾಸ್ತ್ರವು ಬಂದು ರೂಪವು ಪರಿನಿಷ್ಠಿತವಾದರೆ ಮತ್ತೊಂದು

ಅಂಗಾಧಿಕಾರದಲ್ಲಿರುವ ಶಾಸ್ತ್ರ ಬರುವುದಿಲ್ಲ ಎಂಬುದರಿಂದ, ಅಂಗಾಧಿಕಾರಕ್ಕೆ ಸೇರಿದ ಪಿಬ್ ಆದೇಶ ಬಂದಮೇಲೆ ರೂಪವು ಪರಿನಿಷ್ಠಿತವಾಗುವುದರಿಂದ ಪುನಃ ಅಂಗಾಧಿಕಾರಕ್ಕೆ ಸೇರಿದ **ಪುಗಂತಲಘೂಪಧಸ್ಯ ಚ** ಎಂಬುದು ಬರುವುದಿಲ್ಲ. ಅಥವಾ ಪಿಬ ಎಂಬುದು ಅಕಾರಾಂತವಾದ ಆದೇಶ. ಇದು ಆದ್ಯುದಾತ್ತವಾಗಿ ಸೂತ್ರದಲ್ಲಿ ನಿಪಾತಿಸಲ್ಪಡುತ್ತೆ. ಪಿಬ+ಅ+ತಮ್ ಈಗ ಲಘೂಪಧವಲ್ಲದುದರಿಂದ ಲಘೂಪಧಗುಣ ಬರುವುದಿಲ್ಲ. **ಅತೋ ಗುಣೇ** ಎಂದು ಪರರೂಪ ಬಂದು ಪಿಬತಮ್ ಎಂದು ಆಗುತ್ತದೆ. **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುತ್ತೆ.

**ಯಚ್ಛತಮ್**—ದಾಣ್ ದಾನೇ, ಲೋಟ್ ಥಸ್‌ಗೆ ತಮ್ ಆದೇಶ. ಶಪ್, **ಪಾಘ್ರಾಧ್ಮಾ** ಎಂದು ದಾಣ್‌ಗೆ ಯಚ್ಛ ಆದೇಶ.

**ಅವಿದ್ರಿಯಾಭಿಃ**—ದ್ರಾ ಕುತ್ಸಾಯಾಂ ಗತೌ. ವಿ ಉಪಸರ್ಗಪೂರ್ವಕವಾದ ಈ ಧಾತು ಮುಂದೆ ಭಾವಾರ್ಥದಲ್ಲಿ ಕಿ ಎಂಬ ಉಣಾದಿಯಾದ ಪ್ರತ್ಯಯ ಬರುತ್ತೆ. ವಿದ್ರಾ+ಇ. **ಆತೋ ಲೋಪ ಇಟಿಚ** ಎಂದು ಆಕಾರಕ್ಕೆ ಲೋಪ. ವಿದ್ರಿಃ-ನಿಂದೆ ಎಂದರ್ಥ. ನ ವಿದ್ರಿಃ ಅವಿದ್ರಿಃ ನಿಂದಾವಿರೋಧಿಯಾದ ಸ್ತುತಿ ಎಂದರ್ಥ. ವಿದ್ರಿಂ ಯಾಂತೀತಿ ವಿದ್ರಿಯಾಃ, ಸ್ತೋತ್ರವನ್ನು ಹೊಂದತಕ್ಕವು ಎಂದರೆ ಪ್ರಶಸ್ತವಾದವು ಎಂದು ಅರ್ಥ. ಯಾ ಪ್ರಾಪಣೇ '**ಅನ್ಯೇಭ್ಯೋಽಪಿ ದೃಶ್ಯನ್ತೇ** ಎಂಬುದರಿಂದ ವಿಚ್ ಪ್ರತ್ಯಯ. **ಗತಿಕಾರಕೋಪಪದಾತ್ಕೃತ್** ಎಂದು ಕೃದಂತವಾದ ಉತ್ತರಪದಕ್ಕೆ ಪ್ರಕೃತಿಸ್ವರ ಬರುತ್ತೆ.

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮಾರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲ-**
**ಸಾಮ್ರಾಜ್ಯಧುರಂಧರೇಣ ಸಾಯಣಾಮಾತ್ಯೇನ ವಿರಚಿತೇ ಮಾಧವೀಯೇ**
**ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪ್ರಥಮಾಷ್ಟಕೇ**
**ತೃತೀಯೋಽಧ್ಯಾಯಃ ಸಮಾಪ್ತಃ.**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಪ್ರಥಮಾಷ್ಟಕದಲ್ಲಿ
ಮೂರನೆಯ ಅಧ್ಯಾಯವು ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥